



Love & Blessings
Ramdas

By:
C. R. Kaveramma
D/ 4. 11. 76 B
8. 11. 76 F





ॐ नमो भगवते सद्गुरु श्रीरामदासाय ॥



# IN THE JOY OF ANANDASHRAM

ಆನಂದಾಶ್ರಮ ಗ್ರಂಥಮಾಲಾ ೭






# ಭಗವಂತನ ದರ್ಶನದಲ್ಲಿ

ಆನಂದಾಶ್ರಮದ ಶ್ರೀ ಸ್ವಾಮಿ ರಾಮದಾಸರ
"IN THE VISION OF GOD"
ಗ್ರಂಥದ ಭಾಷಾಂತರ



ಅನುವಾದಕ
ಸಿ. ರಾಮಚಂದ್ರರಾವ್

ದ್ವಿತೀಯ ಮುದ್ರಣ
೧೯೫೦

ಬೆಲೆ ೫-೦-೦.

## ಸಮರ್ಪಣೆ

ಈ ಭಾಷಾಂತರ ಕಾರ್ಯವನ್ನು ಕೈಕೊಳ್ಳಬೇಕೆಂಬ ಆಕಾಂಕ್ಷೆಯನ್ನು
ಮೂಡಿಸಿದುದಲ್ಲದೆ ಇದನ್ನು ಈಡೇರಿಸಲು ಬೇಕಾದ
ಅನುಗ್ರಹವನ್ನು ದಯಪಾಲಿಸಿರುವ
**ಭಗವಾನ್ ಶ್ರೀ ರಾಮದಾಸರ ಪಾದಪದ್ಮಗಳಲ್ಲಿ**
ಈ ಪುಸ್ತಕವನ್ನು ಸಮರ್ಪಿಸಲಾಗಿದೆ.



# ವಿಷಯಾನುಕ್ರಮಣಿಕೆ



## ಭೂಮಿಕೆ

## ಭಾವಚಿತ್ರಗಳು

# ಬಿನ್ನಹ

## (ಪ್ರಥಮ ಮುದ್ರಣಕ್ಕೆ)

ಈ ಪುಸ್ತಕ ಕಾಂಜನ್‌ಗಾಡ್ ಬಳಿಯ ರಾಮನಗರದ ಆನಂದಾಶ್ರಮದ ಸ್ಥಾಪಕರಾದ ಸ್ವಾಮಿ ರಾಮದಾಸರವರ "In The Vision of God" ಎಂಬ ಗ್ರಂಥದ ಭಾಷಾಂತರ. ಲೇಖಕನಿಗೆ ಈ ಮಹಾನುಭಾವರ ದರ್ಶನಲಾಭ ದೊರೆತುದಕ್ಕೆ ಕಾರಣರಾದವರು ಮೈಸೂರು ಸಂಸ್ಥಾನದ ಸ್ಯಾನಿಟರಿ ಇಲಾಖೆಯಲ್ಲಿ ಸೂಪರಿಂಟೆಂಡಿಂಗ್ ಇಂಜಿನಿಯರ್ ಅಧಿಕಾರದಲ್ಲಿದ್ದು ೨೯—೨—೧೯೪೪ ರಲ್ಲಿ ದಿವಂಗತರಾದ ಶ್ರೀಮಾನ್ ಎಂ. ಕೆ. ನರಸಿಂಹ ಐಯ್ಯರ್‌ರವರು. ಈ ಮಹನೀಯರ ಪರಿಚಯ ೧೯೩೬ನೇ ಇಸವಿಯಲ್ಲಿ ದೊರೆತು ಅನತಿಕಾಲದಲ್ಲಿಯೇ ಇವರು ಲೇಖಕನ ಪರಮಮಿತ್ರರಾದರು. ಇವರ ಪರಿಚಯದ ಫಲವಾಗಿ ಸ್ವಾಮಿ ರಾಮದಾಸರ ಕೃಪಾದೃಷ್ಟಿ ಲೇಖಕನಮೇಲೆ ಹರಿಯಿತು. ೧೯೪೧ನೆಯ ಇಸವಿಯಲ್ಲಿ ಆನಂದಾಶ್ರಮಕ್ಕೆ ಹೋಗಿದ್ದಾಗ, ಆಂಗ್ಲಭಾಷೆಯಲ್ಲಿ ಪ್ರಕಟವಾಗಿದ್ದ ಸ್ವಾಮಿಗಳ ಸಂಕ್ಷಿಪ್ತ ಜೀವನ ಚರಿತೆಯ ಒಂದು ಪ್ರತಿ ಲೇಖಕನಿಗೆ ದೊರೆಯಿತು. ಇದನ್ನು ಕನ್ನಡಕ್ಕೆ ತರ್ಜುಮೆ ಮಾಡಿಸಬೇಕೆಂಬ ಇಚ್ಛೆಯುಂಟಾಗಿ ಸ್ವಾಮಿಗಳ ಅನುಮತಿಯೂ ಲಭಿಸಿ ಅದರ ಭಾಷಾಂತರ ಪ್ರಕಟವಾಯಿತು. ಅನಂತರ "In The Vision of God" ಎಂಬ ಗ್ರಂಥವನ್ನು ಕನ್ನಡದಲ್ಲಿ ಭಾಷಾಂತರ ಮಾಡಿಸುವ ಅಭಿಲಾಷೆ ಹುಟ್ಟಿ ಸ್ವಾಮಿಗಳಲ್ಲಿ ವಿಜ್ಞಾಪಿಸಲು ಅವರು ಸಂತೋಷದಿಂದ ಅನುಮತಿಯನ್ನು ದಯಪಾಲಿಸಿದರು. ಈ ಕಾರ್ಯವನ್ನು ಪಂಡಿತರಿಂದ ಮಾಡಿಸಬೇಕೆಂದು ಪ್ರಯತ್ನಪಟ್ಟುದು ಕಾರಣಾಂತರಗಳಿಂದ ಸಫಲವಾಗಲಿಲ್ಲ.

ಕೊನೆಗೆ ೧೯೪೨ನೆಯ ಇಸವಿ ಸೆಪ್ಟಂಬರ್ ತಿಂಗಳ ಸುಮಾರಿನಲ್ಲಿ, ವಿದ್ಯಾ ಇಲಾಖೆಯಲ್ಲಿ ಶಿಕ್ಷಣ ವೃತ್ತಿಯಲ್ಲಿರುವ ಮಾನ್ಯ ಮಿತ್ರರೊಬ್ಬರು ಈ ಕೆಲಸವನ್ನು ನಿರ್ವಹಿಸುವುದಾಗಿ ಒಪ್ಪಿ ಆ ವರ್ಷದ ಅಂತ್ಯದಲ್ಲಿ ಮೂರು ಅಧ್ಯಾಯಗಳನ್ನು ಭಾಷಾಂತರ ಮಾಡಿಕೊಟ್ಟರು. ಭಾಷಾಂತರದ ಶೈಲಿ ಭಾಷಾಂತರಕಾರರ ಪಾಂಡಿತ್ಯದ ಮಟ್ಟಕ್ಕೆ ಅನುಗುಣವಾಗಿದ್ದಿತು. ಸಾಧಾರಣವಾಗಿ ಮಾತನಾಡುವ ಸಾಮಾನ್ಯ ಸರಣಿಯನ್ನನುಸರಿಸಿ ಸುಲಭಶೈಲಿಯಲ್ಲಿ ಭಾಷಾಂತರಮಾಡಿ ಆಮೂಲಕ ಸಾಧಾರಣ ಓದುಗರಿಗೂ ಅರ್ಥವಾಗುವಂತೆ ಮಾಡಿಸಬೇಕೆಂದು ಪೂಜ್ಯ ಮಿತ್ರ ಶ್ರೀ ಎಂ. ಕೆ. ನರಸಿಂಹ ಐಯ್ಯರ್ ಸಲಹೆ ಕೊಟ್ಟರು. ಜನಸಾಮಾನ್ಯರಲ್ಲಿ ಇವರಿಗಿದ್ದ ವಾತ್ಸಲ್ಯವನ್ನು ವಿಶದಪಡಿಸಲು ಸ್ವಾಮಿರಾಮದಾಸರು ೫–೩–೧೯೪೪ರಲ್ಲಿ ಅಪ್ಪಣೆ ಕೊಡಿಸಿರುವ ವಾಕ್ಯಗಳೇ ಸಾಕು :

"... Narasimha Iyer is a rare spiritual flower always shedding its fragrance on all who come in contact with him. So many friends were looking on him with great love and reverence. Let them all cherish his sweet memory in their hearts. He is now one with the Eternal like the drop of water that slips into the ocean ..."

"ನರಸಿಂಹ ಐಯ್ಯರು ತಮ್ಮ ಸಂಪರ್ಕ ಹೊಂದಿದವರೆಲ್ಲರಮೇಲೂ ಸದಾ ಸುವಾಸನೆಯನ್ನು ಬೀರುವ ಅಪೂರ್ವ ಆಧ್ಯಾತ್ಮಿಕ ಕುಸುಮ. ಎಷ್ಟೋ ಜನ ಮಿತ್ರರು ಅವರನ್ನು ವಿಶೇಷ ಪ್ರೀತಿಗೌರವಗಳಿಂದ ಕಾಣುತ್ತಿದ್ದರು. ಅವರ ಸವಿ ನೆನಪನ್ನು ಇವರೆಲ್ಲರೂ ತಮ್ಮ ಹೃದಯದಲ್ಲಿ ಪೆಂಪುಮಾಡಿಕೊಳ್ಳಲಿ. ಸಮುದ್ರಕ್ಕೆ ಜಾರುವ ಜಲಬಿಂದುವಿನಂತೆ ನರಸಿಂಹ ಐಯ್ಯರು ಈಗ ಅನಂತದಲ್ಲಿ ಐಕ್ಯವಾಗಿದ್ದಾರೆ"

ಲೇಖಕನಲ್ಲಿ ಭಾಷಾಂತರ ಶಕ್ತಿ ಇದೆಯೆಂದು ಊಹಿಸಿದ ಸ್ನೇಹಿತರ ಉತ್ತೇಜಕ ವಾಕ್ಯಗಳಿಂದ ಧೈರ್ಯಹೊಂದಿ ಲೇಖಕನು ಕೆಲವು ಅಧ್ಯಾಯಗಳನ್ನು ಭಾಷಾಂತರಿಸಿ ಸ್ವಾಮಿಗಳ ಸಮ್ಮುಖದಲ್ಲಿ ಪಠಿಸಿದಾಗ ಲೇಖಕನೇ ಭಾಷಾಂತರವನ್ನು ಮುಂದುವರಿಸಬೇಕೆಂದು ಅಪ್ಪಣೆಯಾಯಿತು. ಅನಂತರ ಭಾಷಾಂತರ ಕಾರ್ಯ ನಿಧಾನವಾಗಿ ಒಂದು ವರ್ಷ ಮುಂದುವರಿದುದರಲ್ಲಿ ಸುಮಾರು ಕಾಲು ಭಾಗ ಮಾತ್ರ ಆಯಿತು. ೧೯೪೩ನೆಯ ಇಸವಿ ಡಿಸೆಂಬರ್ ರಜದಲ್ಲಿ ಸ್ವಾಮಿಗಳ ಸಂದರ್ಶನಕ್ಕೆ ಹೋಗಬೇಕೆಂಬ ಪ್ರಯತ್ನ ವಿಫಲವಾಗಿ, ಅನಂತರ ಭಾಷಾಂತರ ಕಾರ್ಯಕ್ಕೆ ಹೆಚ್ಚು ಗಮನ ಕೊಡುವಂತಾಯಿತು. ೧೯೪೪ನೆಯ ಇಸವಿ ಏಪ್ರಿಲ್ ೮ನೇ ತಾರೀಖಿನ ದಿನ ಸ್ವಾಮಿಗಳಿಗೆ ಅರವತ್ತು ವರ್ಷ ತುಂಬಿ ಅರವತ್ತೊಂದನೆ ವರ್ಷ ಪ್ರಾರಂಭವಾಗುವುದರಿಂದ ಆ ಕಾಲಕ್ಕೆ ಈ ಪುಸ್ತಕದ ಹಸ್ತಪ್ರತಿಯನ್ನು ಹುಟ್ಟಿದ ಹಬ್ಬದ ಕಾಣಿಕೆಯಾಗಿ ಅರ್ಪಿಸಬೇಕೆಂಬ ಆಕಾಂಕ್ಷೆ ಜನಿಸಿ, ಕೇವಲ ಮೂರು ತಿಂಗಳ ಕಾಲದಲ್ಲಿಯೇ ಭಾಷಾಂತರ ಕಾರ್ಯವನ್ನು ಪೂರ್ತಿಗೊಳಿಸುವಂತೆ ಅನುಗ್ರಹಿಸಬೇಕೆಂದು ಬಿನ್ನೈಸಲಾಗಿ ಸ್ವಾಮಿಗಳು ತಮ್ಮ ಆಶೀರ್ವಾದವನ್ನು ದಯಪಾಲಿಸಿದರು. ಮುಕ್ಕಾಲುಪಾಲು ಕೆಲಸ ಇಷ್ಟು ಅಲ್ಪಕಾಲದಲ್ಲಿಯೇ ಪೂರ್ಣವಾದುದರಲ್ಲಿ ಲೇಖಕನ ಸಾಮರ್ಥ್ಯವೇನೂ ಇಲ್ಲ; ಅದಕ್ಕೆ ಸ್ವಾಮಿಗಳ ಅನುಗ್ರಹವೇ ಕಾರಣ. ಈ ಅನುಗ್ರಹ ಎಷ್ಟು ಬಲವತ್ತರವಾದುದೆಂಬುದು ಲೇಖಕನಿಗೆ ಅನುಭವಸಿದ್ಧವಾಗಿದೆ. ಸ್ವಾಮಿ ರಾಮದಾಸರ ಮಾಹಾತ್ಮ್ಯವನ್ನು ವಿವರಿಸಲು ಲೇಖಕನು ಅಸಮರ್ಥನು. (ಈ ಮಹಾನುಭಾವರು ದೈವ ಸಾಕ್ಷಾತ್ಕಾರವನ್ನು ಪಡೆದಿರುವುದೇ ಇವರ ಮಹತ್ವಕ್ಕೆ ಸಾಕ್ಷಿ.)

ಇನ್ನೊಂದು ಮಾತು. ಈ ಭಾಷಾಂತರ ಒಂದು ಸಾಹಿತ್ಯಕೃತಿಯಲ್ಲ. ಅಂಥ ಕೃತಿಯನ್ನು ರಚಿಸುವ ಶಕ್ತಿ ಲೇಖಕನಿಗಿಲ್ಲವೇಇಲ್ಲ. ಇವನು ಈ ಕಾರ್ಯದಲ್ಲಿ

ಎಂದೂ ತೊಡಗಿದವನೂ ಅಲ್ಲ. ಪರೀಕ್ಷಾವೇಳೆಯಲ್ಲಿ ಅತಿ ಸಾಮಾನ್ಯ ವಿದ್ಯಾರ್ಥಿ ಎಷ್ಟರಮಟ್ಟಿಗೆ ಭಾಷಾಂತರ ಮಾಡಬಲ್ಲನೋ ಅಷ್ಟೇ ಸಾಧ್ಯವಾಗಿದೆ. ಆದುದರಿಂದ ವ್ಯಾಕರಣ, ಭಾಷಾಶೈಲಿ, ಮೊದಲಾದುವಕ್ಕೆ ಹೆಚ್ಚು ಗಮನ ಕೊಡದೆ, ಸ್ವಾಮಿಗಳ ಆಧ್ಯಾತ್ಮ ಜೀವನದ ಕಥೆಯನ್ನು ಸಾಧ್ಯವಾದಷ್ಟು ಸರಳರೀತಿಯಲ್ಲಿ ವಿವರಿಸಲಾಗಿದೆ. ಗ್ರಂಥದ ಶೈಲಿ ನೀರಸವಾಗಿ ಕಾಣಬಹುದು; ಆದರೆ ಅದರಲ್ಲಿ ಕಾಣಬರುವ ತತ್ವಗಳನ್ನೇ ಗಮನಿಸಿದಲ್ಲಿ ಸಾರ್ಥಕವಾದೀತು.

ಹಸ್ತಪ್ರತಿ ಮತ್ತು ಮುದ್ರಣಪ್ರತಿ ಇವನ್ನು ಪರಿಷ್ಕರಿಸುವ ಕಾರ್ಯದಲ್ಲಿ ಬಹಳ ಸಹಾಯ ಮಾಡಿರುವ ಮೈಸೂರು ಸರ್ಕಾರದ ಕನ್ನಡ ಭಾಷಾಂತರಕಾರರಾದ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರಿಗೂ, ನಾಗಮಂಗಲದ ಮಿಡ್ಲ್ ಸ್ಕೂಲು ಮುಖ್ಯೋಪಾಧ್ಯಾಯರಾದ ಶ್ರೀಮಾನ್ ಸಿ. ಲಕ್ಷ್ಮೀನರಸಿಂಹಯ್ಯನವರಿಗೂ, ಮೈಸೂರು ಸರಬರಾಜು ಮಂತ್ರಿಗಳ ಪರ್ಸನಲ್ ಅಸಿಸ್ಟೆಂಟ್ ಕೆಲಸದಲ್ಲಿರುವ ಶ್ರೀಮಾನ್ ಎಸ್. ಜಿ. ನರಸಿಂಹಯ್ಯನವರಿಗೂ ಲೇಖಕನ ಕೃತಜ್ಞತಾಪೂರ್ವಕ ವಂದನೆಗಳನ್ನು ಅರ್ಪಿಸಲಾಗಿದೆ.

ಇದು ಯುದ್ಧಕಾಲ. ಪದಾರ್ಥಗಳ ಬೆಲೆ ಮಿತಿಮೀರಿದೆ; ಅವು ದೊರೆಯುವುದೂ ಸುಲಭವಲ್ಲ. ಈ ಕಾರಣಗಳಿಂದ ಈ ಪುಸ್ತಕವನ್ನು ನಿರೀಕ್ಷಿತ ರೀತಿಯಲ್ಲಿ ಅಂದವಾಗಿ ಮುದ್ರಿಸಲು ಸಾಧ್ಯವಾಗಲಿಲ್ಲ. ಇದು ಯುದ್ಧಕಾಲದ ಪ್ರಕಟಣೆಯಂತಾಗಿದೆ. ಪುಸ್ತಕದ ಮುದ್ರಣ ಕಾರ್ಯವನ್ನು ಕೇವಲ ಅಲ್ಪಕಾಲದಲ್ಲಿಯೇ ಪೂರೈಸಿದ ಮೆ|| ವಿ. ಬಿ. ಸುಬ್ಬಯ್ಯ ಅಂಡ್ ಸನ್ಸ್ ಮತ್ತು ಮೋದಿ ಪವರ್ ಪ್ರೆಸ್ ಈ ಮುದ್ರಣಕಾರರಿಗೂ, ಭಾವಚಿತ್ರಗಳನ್ನು ಮುದ್ರಿಸಿಕೊಟ್ಟ ರಾಜಗೋಪಾಲ್ ಫೋಟೋ ಜಿಂಕೋ ಪವರ್ ಪ್ರಿಂಟಿಂಗ್ ವರ್ಕ್ಸ್ ಮಾಲೀಕರಿಗೂ ಮತ್ತು ಈ ಉದ್ಯಮ ಕಾರ್ಯತಃ ಸಾಧ್ಯವಾಗುವಂತೆ ಅನೇಕ ವಿಧಗಳಲ್ಲಿ ಉದಾರ ಸಹಾಯವನ್ನಿತ್ತ ಭಕ್ತಮಹಾಶಯರಿಗೂ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸಿ ಈ ಬಿನ್ನಹವನ್ನು ಸಮಾಪ್ತಿ ಮಾಡಲಾಗಿದೆ.

ಮುಂದೆ ಅನುಕೂಲ ಕಾಲ ಒದಗಿದಾಗ ಮೂಲಗ್ರಂಥದ ಭಾವನೆಗಳನ್ನು ಇನ್ನೂ ಉತ್ತಮರೀತಿಯಲ್ಲಿ ಪ್ರತಿಪಾದಿಸಿ, ಪುಸ್ತಕವನ್ನು ಕನ್ನಡದಲ್ಲೇ ಆಗಲಿ ಇತರ ದೇಶಭಾಷೆಗಳಲ್ಲೇ ಆಗಲಿ ಇನ್ನೂ ಅಂದವಾಗಿ ಮುದ್ರಿಸಿ ಪ್ರಚುರಪಡಿಸುವ ಪುಣ್ಯ ಭಕ್ತವೃಂದಕ್ಕೆ ಲಭಿಸಬೇಕೆಂದು ಲೇಖಕನು ಪ್ರಾರ್ಥಿಸುತ್ತಾನೆ.

ಬೆಂಗಳೂರು,
ತಾ|| ೨೦—೧೨—೧೯೪೪

ಸಿ ರಾಮಚಂದ್ರರಾವ್
ಅನುವಾದಕ

## ( ದ್ವಿತೀಯ ಮುದ್ರಣಕ್ಕೆ )

ಈ ಪುಸ್ತಕದ ಪ್ರಥಮ ಮುದ್ರಣದ ಪ್ರತಿಗಳು ಸುಮಾರು ಒಂದೂವರೆ ವರ್ಷಕಾಲದಲ್ಲೆ ಮುಗಿದುಹೋದಾಗ್ಯೂ ದ್ವಿತೀಯ ಮುದ್ರಣ ಇದಕ್ಕೆ ಮುಂಚಿತವಾಗಿ ಆಗಲು ನಾನಾ ಕಾರಣಗಳಿಂದ ಸಾಧ್ಯವಾಗಲಿಲ್ಲ. "ಜೀವನ"ದ ಮಾಸ ಪ್ರತಿಕೆಯಲ್ಲಿ ಈ ಪುಸ್ತಕದ ವಿಮರ್ಶೆಯನ್ನು ನೋಡಿ ಸ್ವಾಮಿ ರಾಮದಾಸರು, ದ್ವಿತೀಯ ಮುದ್ರಣಕಾರ್ಯಕ್ಕೆ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಸಲಹೆಯನ್ನು ಪಡೆಯಬೇಕೆಂದು ಅಪ್ಪಣೆ ಮಾಡಿದರು. ಅದರಂತೆ ಪರಿಷ್ಕರಣ ಕಾರ್ಯ ಶ್ರೀಮಾನ್ ಮಾಸ್ತಿಯವರ ಸಹಾಯದಿಂದ ನಡೆದಿದೆ. ಇದಕ್ಕಾಗಿ ನಾನು ಅವರಿಗೆ ಚಿರ ಕೃತಜ್ಞನು. ಪರಿಷ್ಕರಣದ ಹಸ್ತಪ್ರತಿಯ ಸ್ವಲ್ಪ ಭಾಗವನ್ನು ಶ್ರೀಮಾನ್ ತಿ. ನಂ. ಶ್ರೀಕಂಠಯ್ಯನವರು ಪರಿಶೀಲಿಸಿ ಸಲಹೆಗಳನ್ನಿತ್ತರು. ಇದಕ್ಕಾಗಿ ಇವರನ್ನು ವಂದಿಸುತ್ತೇನೆ.

ಮುದ್ರಣಕಾರ್ಯ ಮುಗಿಯುತ್ತ ಬಂದಾಗ, ಮೂಲಗ್ರಂಥ ಮೂರನೆಬಾರಿ ಛಾಪಿತವಾದದ್ದು ದೊರೆಯಿತು. ಇದರಲ್ಲಿ ಎರಡು ಕಡೆ ಹೊಸದಾಗಿ ಸೇರಿಸಿರುವ ಭಾಗಗಳಿವೆ. ಇವುಗಳಲ್ಲಿ ಒಂದು ೩೮೧ನೆ ಪುಟದ ೨೬ನೆ ಪಂಕ್ತಿಯಲ್ಲಿ "ಒಪ್ಪಿಕೊಂಡನು" ಎಂಬುದರ ಮುಂದಕ್ಕೆ ಪ್ರತ್ಯೇಕ ವಾಕ್ಯವೃಂದವಾಗಿರಬೇಕಾದದ್ದು. ಈ ಪುಟ ಮುಂಚಿತವಾಗಿ ಮುದ್ರಣವಾಗಿದ್ದುದರಿಂದ ಕೆಳಗೆ ಕೊಟ್ಟಿರುವ ಆ ವಾಕ್ಯವೃಂದವನ್ನು ಅಲ್ಲಿಗೆ ಸೇರಿಸಿಕೊಳ್ಳಬೇಕಾಗಿ ಕೋರಿದೆ.

ತಾ|| ೨೧—೧೨—೧೯೫೦ **ಸಿ. ರಾಮಚಂದ್ರರಾವ್.**

ಬೆಂಗಳೂರು

### ೩೮೧ನೆ ಪುಟದಲ್ಲಿ ಸೇರಬೇಕಾದುದು

ಇಲ್ಲಿ ರಾಮಚರಣದಾಸನನ್ನು ಕುರಿತ ಒಂದು ಮಾತು ಯುಕ್ತವಾಗುತ್ತದೆ. ರಾಮದಾಸನು ಅವನನ್ನು ಕಾಶ್ಮೀರದಲ್ಲಿ ಬಿಟ್ಟು ಬಂದ ಮೇಲೆ ಕೆಲವು ತಿಂಗಳ ಮೇಲೆ ಅವನ ಒಂದು ಕಾಗದ ಬಂದಿತು. ಅದು ಹೃಷಿಕೇಶದಿಂದ ಕಾಸರಗೋಡು ಆನಂದಾಶ್ರಮದ ವಿಳಾಸಕ್ಕೆ ಬರೆದದ್ದು. ಆ ಹೊತ್ತಿನಿಂದ ಇದುವರೆಗೂ ಅವನಿಂದ ರಾಮದಾಸನಿಗೆ ಯಾವ ವರ್ತಮಾನವೂ ಬಂದಿಲ್ಲ. ಅವನಿಗೆ ಕೊಟ್ಟ ಕೊನೆಯದಾದ ಬುದ್ಧಿವಾದ ರಾಮದಾಸನ ನೆನಪಿನಲ್ಲಿದೆ; ಅದು ಹೀಗಿದ್ದಿತು: "ಬ್ರಹ್ಮಜ್ಞಾನ ಮತ್ತು ಆನಂದದಿಂದ ವರ್ಚಸ್ವಿಯಾಗುವವರೆಗೂ ನೀನು ಮತ್ತೆ ರಾಮದಾಸನನ್ನು ನೋಡಲು ಬರಕೂಡದು". "ಆದರೆ ನೀನು ಆ ಪರಮೋತ್ಕೃಷ್ಟಪದವನ್ನು ಗಳಿಸಿದಾಗ ನಿನಗೆ ರಾಮದಾಸನನ್ನು ಸಂಧಿಸುವ ಅವಶ್ಯಕತೆ ತೋರುತ್ತದೆಯೆ ಎಂಬುದೆ ಅನುಮಾನ" ಎಂದು ರಾಮದಾಸನು ಸೇರಿಸಿದನು. ಇದು ಹೇಗೇ ಇರಲಿ, ಅವನ ಸಹವಾಸ ಮತ್ತು ರಾಮದಾಸನ ಅಲೆತದ ಜೀವನದಲ್ಲಿ ಅವನು ಮಾಡಿದ ಪ್ರೀತಿಯುಕ್ತವಾದ ಸೇವೆಯ ಅನೇಕ ಕಾರ್ಯಗಳ ಸವಿನೆನಪು ರಾಮದಾಸನ

ಮನದಲ್ಲಿ ಎಂದೂ ಅಚ್ಚಳಿಯದೆ ಇರುತ್ತದೆ. ಅವನಲ್ಲಿ ತೋರಿದ ಲೋಪಗಳೆಂತೆಂಬುವು ಯಾವ್ಯಾವುವೇ ಆದರೂ, ರಾಮದಾಸನು ಅವನಲ್ಲಿ ಅಪೂರ್ವವಾಗಿ, ದುರ್ದಮ ಉತ್ಸಾಹದ, ಆಗಾಗ ಉಜ್ವಲ ತ್ಯಾಗದ ಅಲೆಯ ತುಟ್ಟತುದಿಯಲ್ಲಿ ಆರೂಢವಾಗಿರುವ, ಮತ್ತು ಅಹಂಭಾವದ ಒತ್ತಡದಿಂದ ತೀರ ಅಬಾಧಿತನಾದ ಸಾಧಕನನ್ನು ಕಂಡನು. ಅವನ ನಂಬಿಕೆಯ ಮುಖ್ಯ ಆಶ್ರಯ, ಆಧ್ಯಾತ್ಮಿಕ ಜೀವನಕ್ಕೆ ಗುರು ಮತ್ತು ಸಂತರನ್ನು ಕುರಿತ ಭಕ್ತಿಪೂರಿತವಾದ ಸೇವೆ ಅನಿವಾರ್ಯ ಲಕ್ಷಣ ಎಂಬುವುದು.

———

## ಪ್ರಾಸ್ತಾವಿಕ ಟಿಪ್ಪಣಿ

ಮಹಾತ್ಮಾ ರಾಮದಾಸರು ತಾವು ರಚಿಸಿರುವ "In The Vision of God" ಎಂಬ ಗ್ರಂಥದಲ್ಲಿ ಒಟ್ಟುಗೂಡಿಸಿರುವ ತಮ್ಮ ಅನುಭವಗಳಿಗೆ ಒಂದು ಸಣ್ಣ ಪ್ರಾಸ್ತಾವಿಕ ಟಿಪ್ಪಣಿಯನ್ನು ಬರೆಯಬೇಕೆಂದು ನನ್ನನ್ನು ಕೇಳಿರುವುದು ನನಗೆ ಒಂದು ದೊಡ್ಡ ಗೌರವ ಮಾತ್ರವಲ್ಲದೆ ಅಪೂರ್ವಭಾಗ್ಯವೆಂದು ನಾನು ಭಾವಿಸುತ್ತೇನೆ. ನನಗೆ ರಾಮದಾಸರ ಪರಿಚಯವಾದದ್ದು, ಅವರಿಂದ ರಚಿತವಾದ "In quest of God" "ಪರಮಾತ್ಮನ ಶೋಧನೆಯಲ್ಲಿ" ಎಂಬ ಗ್ರಂಥದ ಅವಲೋಕನದಿಂದ. ಆದರೆ ಆ ಗ್ರಂಥವನ್ನು ಓದಿದ ಸುಮಾರು ಒಂದು ವರ್ಷದ ನಂತರವೇ ನನಗೆ ಅವರನ್ನು ಸಂದರ್ಶಿಸುವ ಸುಯೋಗ ದೊರೆತುದು. ಅದು ಮೊದಲುಗೊಂಡು (೧೯೩೬ನೇ ಇಸವಿ ಅಕ್ಟೋಬರ್) ಅವರ ಪ್ರವಾಸಗಳೂ (ಅವುಗಳಲ್ಲಿ ಕೆಲವು ಈ ಗ್ರಂಥದಲ್ಲಿ ಉಕ್ತವಾಗಿವೆ) ನನ್ನ ಪ್ರಾಪಂಚಿಕ ವ್ಯವಹಾರಗಳೂ ಅವಕಾಶ ಕೊಟ್ಟ ಕಾಲದಲ್ಲಿ ಅವರ ಸಹವಾಸದಲ್ಲಿರುವುದು ನನಗೆ ಮಹದಾನಂದವನ್ನು ಕೊಟ್ಟಿದೆ. ನಾನು ಕೇಂಬ್ರಿಡ್ಜಿನಲ್ಲಿ ಇದ್ದಾಗಣ ಹಲವು ತಿಂಗಳ ಕಾಲಕ್ಕಿಂತ ಇವರ ದಿವ್ಯ ಸಂಸರ್ಗದಲ್ಲಿ ಇರುವ ಒಂದೊಂದು ದಿನ ತತ್ತ್ವತಃ ನನಗೆ ಹೆಚ್ಚು ಲಾಭಕರವಾಯಿತೆಂದು ಅವರ ಸಂಗದಲ್ಲಿದ್ದ ಪ್ರತಿಯೊಂದು ಸಲವೂ ನನಗೆ ಮನವರಿಕೆಯಾಗಿದೆ. ಗ್ರಂಥಾವಲೋಕನ ಪಾಂಡಿತ್ಯವನ್ನು ಕೊಡಬಲ್ಲದು. ಪ್ರಖ್ಯಾತ ಅಧ್ಯಾಪಕರ ಸಂಸರ್ಗ ಶಾಸ್ತ್ರ ಪರಿಶೋಧನೆಯಲ್ಲಿ ಉತ್ಸಾಹದ ಕುತೂಹಲವನ್ನು ಕೊಡಬಲ್ಲದು. ಆದರೆ ಇವುಗಳಲ್ಲಿ ಯಾವುದೂ ಮಹಾತ್ಮಾ ರಾಮದಾಸರ ಮುಖದಿಂದ ಹೊರಹೊಮ್ಮುತ್ತಿರುವ ಅವರ ಶಿಶುಸಮಾನ ಭಗವದಿಚ್ಛಾಧೀನತೆಲಾಂಛನವಾದ ಸದಾಮನೋಹರವಾದ ಆನಂದ ಸೂಚಕವಾದ ಮಂದಸ್ಮಿತದ ಗುಟ್ಟನ್ನು ಕೊಡಲಾರದು.

ಇವರ "ಪರಮಾತ್ಮನ ಶೋಧನೆಯಲ್ಲಿ" ಎಂಬ ಗ್ರಂಥವನ್ನು ಓದುವವರು ಪ್ರಾರಂಭದ ದಿನಗಳಲ್ಲಿ, ("ಅನ್ಯರನ್ನು ಚಿಂತನೆ ಮಾಡದೆ ಯಾರು ನನ್ನನ್ನೇ ಆರಾಧಿಸುತ್ತಾರೋ ಅಂತಹ ನಿತ್ಯಯುಕ್ತರ ಯೋಗಕ್ಷೇಮವನ್ನು ನಾನು ನೋಡಿಕೊಳ್ಳುತ್ತೇನೆ") ಎಂಬ ಗೀತೆಯ ೯ನೆಯ ಅಧ್ಯಾಯದ ೨೨ನೇ ಶ್ಲೋಕದ ಶ್ರೀ ಕೃಷ್ಣನ ಅಭಯ ಹೇಗೆ ಇವರ ದಿನ ದಿನದ ಸಣ್ಣ ವಿವರಗಳಲ್ಲೂ ಅನುಭವಸಿದ್ಧವಾಯಿತೆಂಬುದನ್ನು ಕಾಣಬಲ್ಲರು. ಈ ಗ್ರಂಥದಲ್ಲೂ ಅಂತಹ ಅನೇಕ ಸನ್ನಿವೇಶಗಳು ಸುಲಭವಾಗಿ ಗೋಚರವಾಗುತ್ತವೆ. ನಾನು ಓದುಗರ ಗಮನವನ್ನು ಮುಖ್ಯವಾಗಿ ರಾಮಚರಣದಾಸನಿಗೆ ಗೀತೆಯ ಆ ದಿವ್ಯಶ್ಲೋಕದ ಅಪಾರ ಶಕ್ತಿಯಲ್ಲಿ ನಂಬಿಕೆ ಹುಟ್ಟಿದ ಸುಸ್ಪಷ್ಟ ವಿಧಾನದ ಕಡೆಗೆ ಸೆಳೆಯಲಿಚ್ಛಿಸುತ್ತೇನೆ. ಆದರೆ ರಾಮದಾಸರ ಜೀವನ ಮತ್ತು ಬೋಧೆ ಇವನ್ನು,

("ಸರ್ವಧರ್ಮಗಳನ್ನು ತ್ಯಜಿಸಿ ನನ್ನನ್ನೇ ಶರಣವಾಗಿ ನೀನು ಪಡೆದುಕೊ, ದುಃಖಿಸಬೇಡ, ನಾನು ನಿನ್ನನ್ನು ಸರ್ವಪಾಪಗಳಿಂದಲೂ ಮುಕ್ತನನ್ನಾಗಿ ಮಾಡು

ತ್ತೇನೆ")ಎಂಬ ಗೀತೆಯ ೧೮ನೆಯ ಅಧ್ಯಾಯದ ೬೬ನೆಯ ಮಹಾಶ್ಲೋಕವೂ "ನಿಜವಾಗಿ ಇದೆಲ್ಲ ಬ್ರಹ್ಮನೇ" ಎಂಬ ಉಪನಿಷತ್ತಿನ ಮಹಾವಾಕ್ಯವೂ ಹಾಗೆಯೇ ಅಳಿವೆ.

ಯಾವಾಗಲೇ ಆಗಲಿ ಒಬ್ಬ ಮನುಷ್ಯ ಗ್ರಂಥಪಠನದಿಂದ ತನಗೆ ದೊರೆತ ಪಾಂಡಿತ್ಯವನ್ನು ಪ್ರದರ್ಶಿಸುವ ಉದ್ದೇಶದಿಂದ ಬಂದ ಸಂದರ್ಭದಲ್ಲಿ ರಾಮದಾಸರು " ಓ **ರಾಮ** ! ನೀನು ಇಷ್ಟಪಟ್ಟು ಹೇಳಿಕೊಟ್ಟಷ್ಟನ್ನು ಬಿಟ್ಟು ಈ ದಾಸ ಇನ್ನೇನನ್ನೂ ಕಾಣನು. ನೀನು ಈಗ ಲೀಲೆಯಲ್ಲಿ ಏನೂ ತಿಳಿಯದವನದಂತೆ ನಟಿಸುತ್ತಾ ರಾಮದಾಸನು ಪಾಠವನ್ನು ಸರಿಯಾಗಿ ಕಲಿತಿದ್ದಾನೆಯೇ ಎಂದು ಅವನನ್ನು ಪರೀಕ್ಷಿಸಲು ಬಂದಿದ್ದೀಯೆ" ಎಂದು ಕೊಡುವ ಉತ್ತರ ವಿನೋದ ವಾಗಿರುತ್ತದೆ. ನಾನು ಅವರು ಉಪಯೋಗಿಸುವ ಶಬ್ದಗಳನ್ನು ಹೇಳುತ್ತಿಲ್ಲ. ಆದರೆ ಜ್ಞಾನಿಯೆಂಬ ಆ ಬೇರೆಯವನನ್ನು ರಾಮದಾಸರು ಎದುರಿಸುವ ರೀತಿಯ ಮನೋಧರ್ಮವನ್ನು ಮಾತ್ರ ತಿಳಿಸುತ್ತಿದ್ದೇನೆ. ಆದರೆ ಇವರ ಬಳಿಗೆ ಕಲಿಯ ಬೇಕೆಂಬ ನಿಜವಾದ ಆಶೆಯಿಂದ ವಿನೀತಭಾವದಿಂದ ಯಾವನಾದರೂ ಬಂದರೆ ಭಗವಂತನ ಪಾದಾರವಿಂದಗಳಿಗೆ ಕರದೊಯ್ಯುವ ದಾರಿಯನ್ನು ಕುರಿತ ಭಾಸ್ವರ ತತ್ತ್ವಗಳು ಅವನಿಗೆ ದೊರೆಯುತ್ತವೆ.

ರಾಮದಾಸರ ಸಂಸರ್ಗದ ಫಲವಾಗಿ ಭಗವದ್ಭಾವ ಹೆಚ್ಚು ಹೆಚ್ಚು ಜನರಲ್ಲಿ ತುಂಬಲೆಂಬುದು ಅವರ ಈ ವಿನೀತ ಅನುರಕ್ತನ ಹೃತ್ಪೂರ್ವಕವಾದ ಪ್ರಾರ್ಥನೆ.

**ಶಂಕರರಾವ್. ಯು. ಸವೂರ್.**

# ಭೂಮಿಕೆ

ಸರ್ವಸ್ವತಂತ್ರನಾದ ಭಗವಂತನ ಆಜ್ಞಾನುಸಾರ ಅವನ ಶಿಶು ರಾಮುದಾಸನು ತನ್ನ "ಪರಮಾತ್ಮನ ಶೋಧನೆಯಲ್ಲಿ" (In Quest of God) ಎಂಬ ಮೊದಲನೆಯ ಗ್ರಂಥದ ಕೊನೆಯಲ್ಲಿ ಪರಿಸಮಾಪ್ತಿ ಮಾಡಿದ ಕಾಲ ಮತ್ತು ಸನ್ನಿವೇಶದಿಂದೀಚಿನ ತನ್ನ ಅನುಭವಗಳ ಕಥೆಯನ್ನು ಮುಂದರಿಸಲು ಉದ್ಯುಕ್ತನಾಗಿದ್ದಾನೆ. "ಪರಮಾತ್ಮನ ಶೋಧನೆಯಲ್ಲಿ'' ಎಂಬ ಗ್ರಂಥದ ಕಥೆ ರಾಮುದಾಸನ ಜೀವನದಲ್ಲಿ ಒದಗಿದ ಮಹಾಪರಿವರ್ತನಾನಂತರದ ಒಂದುವರ್ಷದ ಬದುಕನ್ನು ಒಳಗೊಂಡಿದೆ. ಈ ಗ್ರಂಥದ ಉದ್ದೇಶ ಅದೇ ಕಥೆಯ ಸರಣಿಯನ್ನು ಮುಂದುವರಿಸಿ ಈಚೆಗೆ ಕಳೆದಿರುವ ಒಂಬತ್ತು ವರ್ಷಗಳಲ್ಲಿ ಒದಗಿದ ಹೊಸ ಅನುಭವಗಳನ್ನು ತಿಳಿಸತಕ್ಕದಾಗಿದೆ. ಕಥೆಯನ್ನು ಮುಂದುವರಿಸುವ ಮೊದಲು ಅವನು ಪಾಠಕರ ಮುಂದೆ ಮುಖ್ಯವಾಗಿ ಆ ಮೊದಲ ವರ್ಷದ ಆಧ್ಯಾತ್ಮಿಕ ಪ್ರಯತ್ನ ಮತ್ತು ಬೆಳವಣಿಗೆ ಇವಕ್ಕೆ ಸಂಬಂಧಪಟ್ಟ ಅನುಭವಗಳ ಸಂಗ್ರಹವಾದ ಸಾರವನ್ನು ಇರಿಸುವುದು ಆವಶ್ಯಕ. ಇದರಿಂದ ಈ ಗ್ರಂಥದಲ್ಲಿ ಉಕ್ತವಾಗುವ ಅನುಭವಗಳ ವಿಚಾರ ತಕ್ಕರೀತಿಯಲ್ಲಿ ದೃಗ್ಗೋಚರವಾಗುವುದು.

ದಯಾಮಯನಾದ ಲೋಕನಾಥನು ರಾಮುದಾಸನ ಹೃದಯದಲ್ಲಿ ತನ್ನನ್ನು ಸಾಕ್ಷಾತ್ಕಾರಮಾಡಿಕೊಳ್ಳಬೇಕೆಂಬ ಉತ್ಕಟೇಚ್ಛೆಯನ್ನು ಮೊದಲು ಪ್ರಜ್ವಲಿಸುವಂತೆ ಮಾಡಿದುದು ೧೯೨೨ ನೆಯ ಇಸವಿಯಲ್ಲಿ, ಮಂಗಳೂರಿನಲ್ಲಿ. ಆಗಿನಿಂದ ರಾಮುದಾಸನ ಜೀವನದಲ್ಲಿ ಆಶ್ಚರ್ಯಕರವಾದ ಮಾರ್ಪಾಡು ಆಗತೊಡಗಿತು. ಭಗವಂತನೊಬ್ಬನಿಗಾಗಿಯೇ ಬದುಕಿರುವುದು ರಾಮುದಾಸನ ಏಕಮಾತ್ರ ಮತ್ತು ದುರ್ದಮ್ಯವಾದ ಆಕಾಂಕ್ಷೆಯೂ ಗುರಿಯೂ ಆಯಿತು. ಭಗವಂತನ ಶಕ್ತಿಪೂರ್ಣವಾದ ನಾಮ ರಾಮುದಾಸನ ನಾಲಗೆಯಮೇಲೆ ಅಳಿಸಿಹೋಗದ ರೀತಿಯಲ್ಲಿ ಮುದ್ರಿತವಾಯಿತು. ಆಗ ಅವನು ತನ್ನೊಳಗೆ ಒಂದು ದೈವೀಶಕ್ತಿ ಗುಪ್ತವಾಗಿ ಆದರೂ ಅನಿರೋಧನೀಯವಾಗಿ ಕೆಲಸಮಾಡುತ್ತಾ ಸ್ವಲ್ಪ ಸ್ವಲ್ಪವಾಗಿ ಅವನನ್ನು ವಶಪಡಿಸಿಕೊಂಡು ಆಕ್ರಮಿಸಿದ್ದನ್ನು ಗ್ರಹಿಸುತಲಿದ್ದನು. ತನ್ನ ಸತ್ವದ ಹೃದಯದ ಹೃದಯದಲ್ಲೇ ಒಂದು ಜಾಗ್ರತಿಯಾದುದು ರಾಮುದಾಸನಿಗೆ ಅನುಭವವಾಯಿತು. ಆಗ ಅವನು ಸ್ಥಿರವಾದ ಹೆಜ್ಜೆಗಳಿಂದ ಅಕುಂಠಿತವಾದ ಶ್ರದ್ಧೆಯಿಂದ ಕಠಿಣವಾದ ಆತ್ಮನಿಗ್ರಹದ ಪಥದಲ್ಲಿ ಪದಾರ್ಪಣಮಾಡಿದನು. ಈ ಮಾರ್ಗದಲ್ಲಿ ಅಡ್ಡಿಯಾಗಿ ಬಂದ ಎಡರುತೊಡರುಗಳು ಅವನನ್ನು ಧೈರ್ಯಗೆಡಿಸಲಿಲ್ಲ. ಮೇಲೆ ಮೇಲೆ ಒದಗಿದ ಪ್ರಾರ್ಥನೆಗಳೂ ಅನುನಯಗಳೂ ನಿಷ್ಠುರಗಳೂ ಅವನನ್ನು ತನ್ನ ದಾರಿಯಿಂದ ಸ್ವಲ್ಪವೂ ಸರಿಸಲಾರದೆ ಹೋದವು. ಅವನು

ಶಾಂತನಾಗಿಯೂ ಶ್ರದ್ಧಾಳುವಾಗಿಯೂ ಸ್ಥಿರಮನಸ್ಕನಾಗಿಯೂ ಇದ್ದನು. ಹೊತ್ತೆಲ್ಲ ಸ್ತೋತ್ರ, ಉಪವಾಸ, ಭಗವನ್ನಾಮಸ್ಮರಣೆಗಳಲ್ಲಿಯೇ ಕಳೆದಂತೆ ದೈವೀಶಕ್ತಿಯ ಆಕ್ರಮಣ ಮತ್ತು ಮಾರ್ಗದರ್ಶನದ ಅರಿವು ಬಹಳ ಪ್ರಬಲವಾಗಿ ಕೊನೆಗೆ ಒಳಗಣ ದೈವವಾಣಿ ಅವನನ್ನು ಮಂಗಳೂರಿಂದ ಹೊರಡಿಸಿ ವಿಸ್ತಾರವಾದ ಪ್ರಪಂಚದಲ್ಲಿ ತಂದು ಬಿಟ್ಟಿತು.

ಇಂತಹ ಮಹತ್ಸಮಯದಲ್ಲಿ ರಾಮದಾಸನ ಸ್ಥಿತಿ ಹೇಗಿದ್ದಿತು? ಅವನು ಸರ್ವಶಕ್ತ ಸತ್ವ ಒಂದರ ಹಿಡಿತದಲ್ಲಿ ಸಿಕ್ಕಿಕೊಂಡು ವಿಹ್ವಲವಾದ ಅಸಹಾಯ ಪ್ರಾಣಿಯಾಗಿದ್ದನು. ಅವನಿಗೆ ತಾನೇನು ಮಾಡುತ್ತಿದ್ದೇನೆಂಬ ಅರಿವಿರಲಿಲ್ಲ. ಅವನು ಸರ್ವನಾಯಕಶಕ್ತಿ ಒಂದರ ಪೂರ್ಣ ಅಧೀನದಲ್ಲಿ ತಾಯ ಕೈಯಲ್ಲಿರುವ ಒಂದು ಮಗುವಿನಂತೆ ಪ್ರತಿಭಟಿಸುವ ಪ್ರಯತ್ನದ ಲೇಶವೂ ಇಲ್ಲದೆ ಇದ್ದನು. ಸತ್ಯವಾಗಿ ಭಗವಂತನೇ ಅವನನ್ನು ಕೈಯಲ್ಲಿ ಹಿಡಿದಿದ್ದನು. ಅವನು ಏಕ ಕಾಲದಲ್ಲಿ ದಿವ್ಯಮಾತೆಯೂ ನಾಯಕನೂ ಆಗಿರುವನು. ಅವನು ಶ್ರೀರಾಸತ್ಯ, ಶ್ರೀರಾವತ್ಸಲ, ಶ್ರೀರಾಕೃಪಾವಿಷ್ಟ, ಶ್ರೀರಾಶುಭಂಕರ. ಭಗವಂತನು ರಾಮದಾಸ ನನ್ನು ಸಂಪೂರ್ಣವಾಗಿ ತನ್ನವನಾಗಿ ಮಾಡಿಕೊಂಡ ದಿನ ಸುದಿನವೇ ಸರಿ. ಓ ದಿವ್ಯಮಾತೆ, ಸ್ವಾಮಿ, ಅನಂತಕೀರ್ತಿ ನಿನ್ನದಾಗಲಿ! ಹೊಸದಾಗಿ ಜನ್ಮ ವೆತ್ತಿದ ಈ ಹಸುಳೆಯನ್ನು ಹಿಂದೂದೇಶದ ಪ್ರಥಮವರ್ಷ ಪ್ರವಾಸಕಾಲದಲ್ಲಿ ಭಗವಂತನು ಎಷ್ಟು ವಾತ್ಸಲ್ಯದಿಂದ ಪಾಲಿಸಿ ನಡೆಸಿದನೆಂಬುದು "ಪರಮಾತ್ಮನ ಶೋಧನೆಯಲ್ಲಿ" ಎಂಬ ಗ್ರಂಥದ ವಿಷಯ.

ಆ ಕಾಲದಲ್ಲಿ ರಾಮದಾಸನ ಮನಸ್ಸಿನ ಸ್ಥಿತಿ ಜೀವನದ ರೀತಿ ಮತ್ತು ಪ್ರಪಂಚವನ್ನು ಕುರಿತ ದೃಷ್ಟಿ ಹೇಗಿದ್ದುವು? ಮನಸ್ಸು ಒಂದು ಅಸದೃಶ ಶಾಂತಿಯ ಸ್ತಬ್ಧತೆಯಲ್ಲಿ ಲೀನವಾಗಿದ್ದಿತು. ಅವನ ಜೀವನ ನಿಶ್ಶೇಷವಾದ ಆತ್ಮ ಸಮರ್ಪಣೆಯಾಗಿದ್ದಿತು. ಪ್ರಪಂಚದ ವಿಚಾರದಲ್ಲಾದರೋ ಒಂದು ಅರ್ಥದಲ್ಲಿ ಅವನಪಾಲಿಗೆ ಪ್ರಪಂಚ ಇರಲೇ ಇಲ್ಲ; ಎಂದರೆ ಅವನು ಪ್ರಪಂಚದ ವಿಚಾರಕ್ಕೆ ಸತ್ತಿದ್ದಂತೆಯೇ. ತನ್ನ ಶರೀರವೂ ಸುತ್ತಣ ವಿಷಯಗಳೂ ಬೇಕಿಲ್ಲ ದವನಂತೆ, ಅಷ್ಟೇ ಅಲ್ಲ ಅವುಗಳಿವೆ ಎಂಬ ಅರಿವಿಲ್ಲದವನಂತೆ, ಅವನು ಕನಸಿ ನಲ್ಲೋ ಎಂಬ ರೀತಿ ಸ್ಥಳದಿಂದ ಸ್ಥಳಕ್ಕೆ ಕೀಲುಬೊಂಬೆಯಂತೆ ಪ್ರಯಾಣ ಮಾಡುತ್ತಿದ್ದನು. ಈ ಪ್ರಯಾಣದಲ್ಲೆಲ್ಲಾ ಅವನು ತನ್ನ ಜೀವಿತವನ್ನು ಯಾರಿಗೆ ಒಪ್ಪಿಸಿಕೊಟ್ಟಿದ್ದನೋ ಆ ಭಗವಂತನು ರಾಮದಾಸನ ಚಲನವಲನಗಳನ್ನು ವಿಚಿತ್ರರೀತಿಯಲ್ಲಿ ಪ್ರೇರಿಸುತ್ತ ಅವನನ್ನು ಸರ್ವವಿಧದಲ್ಲಿಯೂ ಸಂರಕ್ಷಿಸುತ್ತಿದ್ದನು. ನಿಜವಾಗಿ ಅದು ಒಂದುಕಡೆಯಿಂದ ಆತ್ಮಾರ್ಪಣೆ, ಮತ್ತೊಂದುಕಡೆಯಿಂದ ಅತಂದ್ರಿತಕೃಪಾಮಯ ಅನುಗ್ರಹ.

(ರಾಮದಾಸನಿಗೆ ತಾನು ಮತ್ತು ತನ್ನ ಸರ್ವಸ್ವವಾದ ತನ್ನ ಯಜಮಾನ **ರಾಮ,** ಇಬ್ಬರ ಹೊರತು ಮತ್ತಾರೂ ಇಲ್ಲವೆಂದು ತೋರಿದ ಒಂದು ಹೊಸ ಪ್ರಪಂಚದಲ್ಲಿ ಬದುಕಿ ಬಾಳುತ್ತಿರುವಂತೆ ಅನುಭವವಾಯಿತು. ಅನಿರ್ವಚನೀಯ ವಾದ ಆನಂದಪಾರವಶ್ಯ ಮತ್ತು ಶಾಂತಿಗಳ ವಿಚಿತ್ರ ದರ್ಶನದಲ್ಲಿ ಸದಾ ಇರಲು ಅವನು ಯತ್ನಿಸಿದನು) ಈ ಉನ್ನತಾನುಭವ ಪೂರ್ಣಶೂನ್ಯ ಅಥವಾ ನಿರ್ಭರದ ಲಕ್ಷಣವನ್ನು ಪಡೆದಿರುತ್ತ ಶಾಂತಿ ಮೌನ ವಿಶ್ರಾಂತಿಗಳ ಅವರ್ಣನೀಯ ಆನಂದ ದಿಂದ ತುಂಬಿದ್ದಿತು. (ಸುಖ ದುಃಖ ಒಳ್ಳೆಯದು ಕೆಟ್ಟದ್ದು ಶೀತ ಉಷ್ಣ ಮುಂತಾದ ಶಾರೀರಕ ದ್ವಂದ್ವಗಳು ಅವನನ್ನು ಸೋಕಲಿಲ್ಲ.) ಏಕೆಂದರೆ ಈ ಭಾವಗಳನ್ನು ಗಣನೆಗೆ ತೆಗೆದುಕೊಳ್ಳಲು ಅವನ ಮನಸ್ಸು ಅಲ್ಲಿರಲಿಲ್ಲ; ಅದು ಸದಾ ಸ್ತಬ್ಧತೆ ಮತ್ತು ಶಾಂತಿಯ ಅಖಂಡ ಭಾವದೊಂದಿಗೆ ಶ್ರುತಿಗೂಡಿದ್ದಿತು. ಕೆಲವುಸಂದರ್ಭಗಳಲ್ಲಿ ಮನಸ್ಸು ಒಂದು ಎಳೆತದಿಂದಲೋ ಎಂಬಂತೆ ಹಿಂದಣ ಪ್ರಪಂಚಕ್ಕೂ ಅದರ ವಾಸನೆಗಳಿಗೂ ಜಾರಿ ಕೆಳಕ್ಕೆ ಬಿದ್ದಿದ್ದ ಸನ್ನಿವೇಶ ಹಲವು ಉಂಟು. ಆದರೆ ಒಡನೆಯೇ ಅಂತರ್ಯಾಮಿಯಾದ ಆ ಮೌನ ಅತಂದ್ರ ಶಕ್ತಿ ಅವನನ್ನು ಮೇಲಕ್ಕೆ ಎತ್ತುತಿದ್ದಿತು.

ಆದಿನಗಳಲ್ಲಿ ರಾಮದಾಸನ ಆವಾಸಗಳೆಂದರೆ, ಗುಹೆಗಳು, ಕಾಡುಗಳು, ಪಾಳುಗಳು, ನದಿಯತೀರಗಳು, ಗೋರಿಗಳು, ಬೆಟ್ಟಗಳು, ರುದ್ರಭೂಮಿಗಳು. ಈ ಸ್ಥಳಗಳು ರಾಮದಾಸನಲ್ಲಿ ಅಸಾಧಾರಣವಾದ ಕೌತುಕವನ್ನು ಉದ್ರೇಕಿಸು ತ್ತಿದ್ದುದು ಕಂಡಿತು. ಸಹಜಪ್ರವೃತ್ತಿಯಿಂದ ಅವನು ಪಟ್ಟಣಗಳ ಗದ್ದಲ ಮತ್ತು ಓಡಾಟಗಳನ್ನು ತಪ್ಪಿಸಿಕೊಳ್ಳುತ್ತಾ ತನಗೆ ಅರಿವೇ ಇಲ್ಲದೆ ಅವುಗಳಿಂದ ದೂರ ವಾಗಿ ಭಯಾನಕ ನಿರ್ಜನ ಪ್ರದೇಶಗಳಿಗೆ ಹೋಗುತ್ತಿದ್ದನು. (ಭೀತಿಯ ಭಾವ ಅವನಿಂದ ಸಂಪೂರ್ಣವಾಗಿ ತೊಲಗಿ ಹೋಗಿದ್ದಿತು.) ಅಪಾಯವೂ ಮರಣವೂ ಅವನ ವಿಷಯಕ್ಕೆ ತಮ್ಮ ಭೀಕರತೆಯನ್ನು ಕಳೆದುಕೊಂಡಿದ್ದವು. ಸಂಪೂರ್ಣ ವಾದ ಸ್ಥೈರ್ಯ ನಿರ್ಭಯ ರಕ್ಷೆಯ ನಂಬಿಕೆಯೊಂದು ಅವನಿಗೆ ನಿರಂತರ ವಾಗಿದ್ದಿತು. (ಶಕ್ತಿಯುತವಾದ ರಾಮಮಂತ್ರ ಅವನ ನಾಲಗೆಯಿಂದ ಅಗಲಲಿಲ್ಲ.) ಅವನು ಅದನ್ನು ಯಂತ್ರವಂತೆ ಜಪಿಸುತ್ತಿದ್ದನು. ಅನೇಕ ಘೋರ ಸನ್ನಿವೇಶ ಗಳಿಂದ ಅವನು ಯಕ್ಷಿಣಿಯಿಂದಲೋ ಎಂಬಂತೆ ಪಾರಾದ ವಿಚಾರ "ಪರಮಾತ್ಮನ ಶೋಧನೆಯಲ್ಲಿ" ("In Quest of God") ಎಂಬ ಗ್ರಂಥದಲ್ಲಿ ಪ್ರಕಟವಾಗಿದೆ. ಭಗವಂತನು ರಾಮದಾಸನನ್ನು ತನ್ನ ಪ್ರಯೋಗಗಳಿಗಾಗಿ ತನ್ನ ಇಷ್ಟಬಂದಂತೆ ಎರೆದು ರೂಪಾಂತರಗೊಳಿಸಿ ಆಡಿಸಲು ತನ್ನ ಕೈಗೆ ತೆಗೆದು ಕೊಂಡಿದ್ದಂತೆ ಕಂಡಿತು. ಅವನು ಭಗವಂತನ ಕುಶಲಹಸ್ತಗಳಲ್ಲಿ ಒಂದು ಮೇಣದ ಮುದ್ದೆಯಾಗಿದ್ದನು.

ಪ್ರಥಮವರ್ಷದ ಪ್ರವಾಸದಲ್ಲಿ ರಾಮದಾಸನ ಪರಿವ್ರಾಜಕಜೀವನದಲ್ಲಿ ಇವನನ್ನು ಸಂಧಿಸಿದ್ದ, ಉತ್ತರ ಹಿಂದೂಸ್ಥಾನದ ಕೆಲವರು ಮಿತ್ರರು, ರಾಮದಾಸನು ಸಂಪೂರ್ಣವಿರಕ್ತಿಯಿಂದ ಗ್ರಸ್ತನಾಗಿದ್ದನೆಂದು ಹೇಳಿದರು. ತನ್ನ ದೇಹ ಬಾಹ್ಯಪ್ರಪಂಚ ಎರಡರ ವಿಚಾರದಲ್ಲೂ ಏಕಪ್ರಕಾರ ಅನಾಸಕ್ತಿಯಿಂದ ಅವನು ಸದಾ ರಾಮಸ್ಮರಣೆಯಲ್ಲಿ ಎಂದರೆ ಭಗವದ್ಧ್ಯಾನದಲ್ಲಿ ಮಗ್ನನಾಗಿರುತ್ತಿದ್ದುದು ಕಾಣುತ್ತಿದ್ದಿತು. ಅಲ್ಲದೆ ಒಂದು ಮಗುವಿನಂತೆ ಪ್ರವೃತ್ತಿ ವಿಹೀನನಾಗಿ ವಿಧೇಯನಾಗಿ ವಿಧೇಯನಾಗಿ ಇರುವುದು ಕಂಡುಬಂದಿತು. ಇತರರು ಅವನಿಗೆ ಸ್ನಾನವಮಾಡಿಸಿ ಬಟ್ಟೆಉಡಿಸಿ ಊಟವಮಾಡಿಸಿ ಎಲ್ಲಾ ವಿಚಾರದಲ್ಲೂ ನಡೆಯಿಸಿಕೊಂಡು ಹೋಗುತ್ತಿದ್ದರು. ನಿಜವಾಗಿ ರಾಮದಾಸನಿಗೆ ಪ್ರಪಂಚದ ವಿಷಯದಲ್ಲಿ ರಾಗವಾಗಲಿ ದ್ವೇಷವಾಗಲಿ ಇರಲಿಲ್ಲ. ಅದರ ವಿಚಾರದಲ್ಲಿ ಅವನ ಭಾವನೆಯನ್ನು ತಿಳಿಸಲು ಅಸಾಧ್ಯ. ಏಕೆಂದರೆ ಅವನಿಗೆ ನಿಜವಾಗಿ ಪ್ರಪಂಚದಲ್ಲಿ ಆಸಕ್ತಿ ಉಂಟುಮಾಡುವ ವಸ್ತುವೇ ಇರಲಿಲ್ಲ; ಅಲ್ಲದೆ ಕುತೂಹಲವೆನ್ನುವುದೇ ಅವನಿಗಿರಲಿಲ್ಲ. ಅದು ತೀರಾ ಆಶ್ಚರ್ಯಕರವಾದ ಸ್ಥಿತಿ. ಬುದ್ಧಿ ಮನಸ್ಸುಗಳು ಕೂಡ ನಿಷ್ಕ್ರಿಯವಾಗಿ ನಿಂತಂತೆ ಕಂಡವು. ನಿಜವಾಗಿ ಭಗವಂತನು ತನ್ನ ಶಕ್ತಿಯ ಮೂಲಕ ರಾಮದಾಸನ ಹೃದಯದಿಂದ ಮಿಥ್ಯವಾದ ಮತ್ತು ಔದ್ಧತ್ಯಯುಕ್ತವಾದ ಅಹಂಭಾವವನ್ನು ಸಂಪೂರ್ಣವಾಗಿ ಕಿತ್ತೊಗೆದು ಅದರ ಸ್ಥಳದಲ್ಲಿ ಸಂಭೂತಿಯ ಪ್ರಪಂಚದ ಒಳಗಿನ ಮತ್ತು ಹೊರಗಿನ ಚಲನಗಳಿಗೆ ಕಾರಣಭೂತವಾದ ಮಹಚ್ಛಕ್ತಿಯಾದ ತಾನೇ ನಿಂತು ಕೆಲಸಮಾಡುತ್ತಿದ್ದನು.

ಈಕಾಲದಲ್ಲಿ ರಾಮದಾಸನು ಮಾತನಾಡಿದ್ದೇ ಅಪೂರ್ವ. ಅವನು ತೀರಾ ನಿರ್ಭಯನಾಗಿದ್ದನು. ಪ್ರೀತಿ ದ್ವೇಷ ಇಷ್ಟ ಅನಿಷ್ಟ ಎಂಬವು ಇವನ ಪಾಲಿಗಿರಲಿಲ್ಲ. ಸಂಕ್ಷೇಪವಾಗಿ ಹೇಳುವುದಾದರೆ ಅವನನ್ನು ದೈವೇಚ್ಛೆಯ ಗಾಳಿ ತಾನು ಬಯಸಿದಂತೆ ಎಲ್ಲಿಗೆಂದರೆ ಅಲ್ಲಿಗೆ ತೂರುತ್ತಿದ್ದ ತರಗೆಲೆಗೆ ಹೋಲಿಸಬಹುದು. ಭಗವಂತನು ರಾಮದಾಸನನ್ನು ಒಂದುವರ್ಷದ ಪರ್ಯಟನೆಯ ನಂತರ ಮಂಗಳೂರಿಗೆ ಕರೆತಂದುಬಿಟ್ಟದ್ದು ಈಸ್ಥಿತಿಯಲ್ಲಿ.



# ಅಧ್ಯಾಯ ೧

## ಪಂಚಪಾಂಡವರ ಗುಹೆ

### (i) ಮತಗಳ ಸಾಮರಸ್ಯ

ಪಂಚಪಾಂಡವರ ಗುಹೆ ಮಂಗಳೂರಿಗೆ ಎರಡು ಮೈಲಿಗಳ ದೂರದಲ್ಲಿರುವ ಕದರಿಬೆಟ್ಟದ ಮೇಲಿದೆ. ಬೆಟ್ಟದಮೇಲಿರುವ ಆರು ಗುಹೆಗಳಲ್ಲಿ ರಾಮಧಾಸನು ವಾಸವಾಗಿದ್ದ ಗುಹೆಯೇ ಬಹು ವಿಶಾಲವಾದುದು. ಗುಹೆ ಇರುವ ಸ್ಥಳ ಎಂಥದೆಂದರೆ ಉದಯದ ವೇಳೆ ಸೂರ್ಯಕಿರಣಗಳು ಅದರೊಳಗಿನ ಕತ್ತಲಲ್ಲಿ ನೇರವಾಗಿ ತೂರಿ ಅದನ್ನು ತಮ್ಮ ಸ್ವರ್ಣಪ್ರಭೆಯಿಂದ ತುಂಬಿ ಬೆಳಗುವುವು. ರಾಮದಾಸನು ಈ ಗುಹೆಯಲ್ಲಿ ಮೂರು ತಿಂಗಳಕಾಲವಿದ್ದನು. ಆಕಾಲದಲ್ಲಿ ಒಂದು ಒರಟಾದ ಖಾದಿ ಬಟ್ಟೆ ರಾಮದಾಸನ ಉಡಿಗೆಯಾಗಿದ್ದಿತು. ಕುಳಿತುಕೊಳ್ಳುವುದಕ್ಕೂ ಮಲಗುವುದಕ್ಕೂ ಒಂದು ಕೃಷ್ಣಾಜಿನ ಮಾತ್ರವಿದ್ದಿತು. ಅರಳೆಯ ಬತ್ತಿ ತೆಂಗಿನೆಣ್ಣೆಯ ಒಂದು ಸಣ್ಣ ಮಣ್ಣು ಹಣತೆ ಅವನಿಗೆ ದೀಪ. ಜೊತೆಗೆ ಒಂದು ತಾಮ್ರದ ತಂಬಿಗೆ. ಇವು ಗುಹೆಯ ಏಕಾಂತವಾಸದಲ್ಲಿ ರಾಮದಾಸನ ಸರ್ವಸ್ವವಾಗಿದ್ದುವು. ಅವನ ಆಹಾರವೆಂದರೆ ದಿನಕ್ಕೆ ಎರಡುಬಾರಿ ಬಾಳೆಯ ಹಣ್ಣು, ಹಾಲು.

ಹಗಲಲ್ಲಿ ಮಂಗಳೂರಿನಿಂದಲೂ ಆ ಜಿಲ್ಲೆಯ ನಾನಾಸ್ಥಳಗಳಿಂದಲೂ ಅನೇಕ ಪ್ರೇಕ್ಷಕರು ಸಂತತವಾಗಿ ಬರುತ್ತಿದ್ದರು; ರಾಮದಾಸನ ಒಂದುವರ್ಷದ ಸಂಚಾರಕಾಲದಲ್ಲಿ ನಡೆದ ಕಥೆಯನ್ನೂ ಮತ್ತು ದೊರೆತ ಅನುಭವಗಳನ್ನೂ ಕೇಳಿ ನಿಷ್ಕಪಟವಾಗಿ ಸಂತೋಷಪಡುತ್ತಿದ್ದರು. ಇವರು ನಾನಾಮತ, ನಾನಾಜಾತಿಗಳಿಗೂ ಸೇರಿದವರಾಗಿದ್ದರು. ಹಿಂದೂಗಳು ಕ್ರೈಸ್ತರು ಮುಸಲ್ಮಾನರು ಆದಿಯಾಗಿ ಸರ್ವರೂ ನಾವು ಮುಂದು ತಾವು ಮುಂದೆಂಬಂತೆ ರಾಮದಾಸನಿಗೆ ತಮ್ಮ ಸಹವಾಸದ ಸಂತೋಷವನ್ನು ನೀಡುತ್ತಿದ್ದರು. ಪರಿವ್ರಾಜಕರಾದ ಸಾಧು ಸಂನ್ಯಾಸಿಗಳೂ ತಮ್ಮ ದರ್ಶನದಿಂದ ರಾಮದಾಸನನ್ನು ಹರಸುತ್ತಿದ್ದರು.

ರಾಮದಾಸನು ಹಿಂದೂಗಳೊಡನೆ ಮಾತನಾಡುವಾಗ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಭೂತನಾದವನು ಪರಬ್ರಹ್ಮನೇ ಎಂದು ಹೇಳುವನು. ಈ ಮಹಾಸತ್ವವೇ ಹಿಂದೂದೇಶದಲ್ಲಿಯೂ, ಪ್ರಪಂಚದ ನಾನಾಭಾಗಗಳಲ್ಲಿಯೂ ದುಷ್ಟತನವನ್ನು ನಾಶಗೊಳಿಸಿ, ಪ್ರೀತಿ ಧರ್ಮಗಳ ಪ್ರಭುತ್ವವನ್ನು ಸ್ಥಾಪಿಸುವುದಕ್ಕೆ ಆಗಿಂದಾಗ್ಗೆ ಅವತಾರಮಾಡಿದೆ. ರಾಮ, ಕೃಷ್ಣ, ಬುದ್ಧ ಮುಂತಾದ ಅವತಾರಪುರುಷರೂ ಮಹರ್ಷಿಗಳೂ ಮಹಾತ್ಮರೂ ಸಾಧುಗಳೂ ಸಹ ಮಾನವನ ಮುಖ್ಯವಾದ ಧ್ಯೇಯ ಒಂದೇ ಎಂದೂ, ಆ ಧ್ಯೇಯ ಮುಕ್ತಿ ಮತ್ತು ದೇವರಲ್ಲಿ ಐಕ್ಯವಾಗುವುದು ಎಂದೂ ತೋರಿಸಿಕೊಟ್ಟಿದ್ದಾರೆ. ಈ ದಿವ್ಯಪದವಿಯನ್ನು ಹೊಂದುವುದೇ ಮಾನವಜನ್ಮಧಾರಣೆಯ ಉದ್ದೇಶ. ಪರಮಾತ್ಮನು ಎಲ್ಲಾ ಜೀವಜಂತುಗಳ ಹೃದಯದಲ್ಲಿಯೂ ಪ್ರತಿಷ್ಠಿತನಾಗಿದ್ದಾನೆ. ಅವನು ಕೇವಲ ಸಚ್ಚಿದಾನಂದಸ್ವರೂಪಿ. ಅನನ್ಯಭಕ್ತಿಯಿಂದಲೂ ಪೂರ್ಣವಾದ ಆತ್ಮಸಮರ್ಪಣೆಯಿಂದಲೂ ಆತನ ಸ್ವರೂಪವನ್ನು ಅನುಭವಕ್ಕೆ ತಂದುಕೊಳ್ಳಬಹುದು. ಇದಕ್ಕೆ ಪಾರಿಶುದ್ಧ್ಯವೂ ಮನೋನಿಗ್ರಹವೂ ಪ್ರಥಮಸೋಪಾನಗಳು. ಮನೋನಿಗ್ರಹ ತದೇಕಧ್ಯಾನದಿಂದ ಲಭಿಸುತ್ತದೆ. ಈ ಧ್ಯಾನಾಭ್ಯಾಸಕ್ಕೆ ಭಗವನ್ನಾಮದ ನಿರಂತರ ಜಪ ಮತ್ತು ಭಗವದರ್ಪಣಬುದ್ಧಿಯಿಂದ ಮಾಡುವ ನಿಷ್ಕಾಮಕರ್ಮ ಸುಲಭ ಸಾಧನೋಪಾಯಗಳು. ದೇವರನ್ನು ರಾಮ, ಕೃಷ್ಣ, ಶಿವ, ಅಥವ ನಿಮಗೆ ಪ್ರಿಯವಾದ ಇತರ ಯಾವ ಹೆಸರಿನಿಂದಾಗಲಿ ಕರೆಯಬಹುದು. ಆ ನಾಮವೇ ಬ್ರಹ್ಮ. ನಾಮವನ್ನು ಜಪಿಸುವಾಗ ಭಗವಂತನ ಗುಣಾತಿಶಯಗಳನ್ನು ಧ್ಯಾನಿಸುತ್ತಿದ್ದರೆ ಮನಸ್ಸು ನಿರ್ಮಲವಾಗುವುದು. ಇದಕ್ಕೆ ಪ್ರಾರ್ಥನೆ, ಭಜನೆ, ಉಪವಾಸವ್ರತಗಳು ಅವಶ್ಯ ಸಾಧನಗಳು. ದೈವೀಸ್ವಭಾವಗಳಾದ ಕನಿಕರ ಶಾಂತಿ ಕ್ಷಮೆ ಎಂಬ ಗುಣಗಳನ್ನು ಅಭ್ಯಾಸಮಾಡಬೇಕು. ಯಾರಲ್ಲಿ ಈ ಸದ್ಗುಣಗಳು ಇರುವುವೋ ಅವರ ಹೃದಯದಲ್ಲಿ ದೇವರು ತಾನಾಗಿ ಪ್ರತ್ಯಕ್ಷನಾಗುತ್ತಾನೆ. ಅಂತರಂಗದಲ್ಲಿ ಹೊಳೆಯುತ್ತಿರುವ ದಿವ್ಯ ತೇಜಸ್ಸು ಆಗ “ನಾನು” ಎಂಬ ಭಾವನೆಯನ್ನು ಅಡಗಿಸುತ್ತದೆ. ಆಗ ಭಗವತ್ತತ್ವವೇ ನಾವು ಎಂಬುದು ಅನುಭವಕ್ಕೆ ಬರುವುದು. ಆ ಅನುಭವವು ಅಮರತೆಯ ಜ್ಞಾನವನ್ನು ಕೊಡುವುದು. ಅನಂತರ ಮಾನವನು ಯಾವಾಗಲೂ ದೈವಾನುಭವದಲ್ಲಿ ನಿಲ್ಲುವನು. ಅಂತಹ ಬಾಹ್ಯಾನುಭವ ಸಾರ್ವತ್ರಿಕವಾಗಿ ಅವನಿಗೆ ಅತ್ಯಂತ ಶಾಂತಿಯನ್ನೂ ಆನಂದಪಾರವಶ್ಯವನ್ನೂ ಕೊಡುವುದು. ಅದಾಗುತ್ತಲೇ, ಈ ಪ್ರಪಂಚವೆಲ್ಲವೂ ನಿಮ್ಮ ಹೃದಯದೊಳಗೆ ಕಾಣಿಸಿಕೊಂಡಿರುವ ಪರಮಾತ್ಮನ ವ್ಯಕ್ತಸ್ವರೂಪವೆಂದು ಗೊತ್ತಾಗುತ್ತದೆ. ಆಮೇಲೆ ಮನುಜನಪಾಲಿಗೆ ದೇವರು ಎಲ್ಲೆಲ್ಲಿಯೂ ಎಲ್ಲ ಜೀವಗಳಲ್ಲಿಯೂ ಎಲ್ಲ ವಸ್ತುಗಳಲ್ಲಿಯೂ ಇದ್ದಾನೆಂದು ಕಂಡುಬರುವುದು. ಆ ದಿವ್ಯಾನುಭೂತಿ ಹೃದಯದಲ್ಲಿನ ಅನಂತಪ್ರೇಮದ ಬುಗ್ಗೆಯನ್ನು ಹೊರಹೊಮ್ಮಿ

ಸುತ್ತದೆ.) ಈ ಪ್ರೇಮ ಅಖಂಡಸೃಷ್ಟಿಯನ್ನು ತುಂಬುತ್ತದೆ, ಒಳಕೊಳ್ಳುತ್ತದೆ. ಈ ಅನುಭೂತಿಯ ಸಮತಾದೃಷ್ಟಿಯಲ್ಲಿ ಎಲ್ಲ ಭೇದಭಾವಗಳೂ ನಾಶವಾಗುತ್ತವೆ. (ಆ ಪರಮಾನಂದದ ಉನ್ನತಾವಸ್ಥೆ ಮುಕ್ತಿಯನ್ನೂ ಅಮರ ಆನಂದವನ್ನೂ ನೀಡು ವುದು.) ಯೇಸುಕ್ರೀಸ್ತ, ಮಹಮ್ಮದ, ಜರತುಷ್ಟ್ರ ಮತ್ತು ಇತರ ಅವತಾರಪುರುಷ ಮತಸ್ಥಾಪಕರು ಈ ಒಂದೇ ಮಹಾಸತ್ವದ ಅವತಾರಗಳೆಂಬುದನ್ನು ಗ್ರಹಿಸಿರಿ. ಬೇರೆಬೇರೆ ಎಂದು ಕಾಣುವ ಸರ್ವಮತಗಳೂ ನಿಜದಲ್ಲಿ ಪ್ರಪಂಚಕ್ಕೆಲ್ಲಾ ಒಬ್ಬನೇ ಒಡೆಯನಾದ ಭಗವಂತನನ್ನು ಸೇರಲು ಒಯ್ಯುವ ಬೇರೆಬೇರೆ ದಾರಿಗಳಾಗಿವೆ.

ರಾಮದಾಸನು ಮುಸಲ್ಮಾನರೊಂದಿಗೆ 'ಅಲ್ಲಾ' ಮತ್ತು ಮಹಮ್ಮದರ ವಿಚಾರವಾಗಿ ಮಾತನಾಡುತ್ತಿದ್ದನು. 'ಅಲ್ಲಾ' ಎಂದರೆ ಸರ್ವಶಕ್ತ ಎಂದರ್ಥ. 'ಇಸ್ಲಾಂ' ಎಂಬುದು ಶಾಂತಿಯಮಾರ್ಗ. ದೇವರು ಸರ್ವಶಕ್ತನು; ಶಾಂತಿ ಸ್ವರೂಪನು. ಅರಬ್ಬಿದೇಶದಲ್ಲಿ ಅಜ್ಞಾನದಿಂದ ತುಂಬಿ ಯಾವಾಗಲೂ ಕಾದಾ ಡುತ್ತಿದ್ದ ಜನರಲ್ಲಿ ಶಾಂತಿ, ಪ್ರೀತಿ, ಸಹೋದರಭಾವ ಇವುಗಳನ್ನುಂಟು ಮಾಡಲು ಪ್ರವಾದಿ ಮಹಮ್ಮದನು 'ಇಸ್ಲಾಂ' ಮತವನ್ನು ಸ್ಥಾಪಿಸಿದನು. ಅವನು ಸರ್ವಶಕ್ತನಾದ 'ಅಲ್ಲಾ' ನನ್ನು ಸೇರುವ ಮಾರ್ಗವನ್ನು ಬೋಧಿಸಿ ದನು. 'ಅಲ್ಲಾ' ನನ್ನು ಹೇಗೆ ಹೊಂದುವುದು? ಅವನು ಹೀಗೆ ಹೇಳಿದ್ದಾನೆ: "ನಿಮ್ಮ ಸಂಕಲ್ಪವನ್ನು 'ಅಲ್ಲಾ'ನ ಸಂಕಲ್ಪಕ್ಕೆ ಅಧೀನಮಾಡಿ; ಅವನ ಸರ್ವ ಶಕ್ತಿತ್ವದಲ್ಲಿ ಪೂರ್ಣ ನಂಬಿಕೆ ಇಡಿ; ಮತ್ತು (ಎಲ್ಲವೂ ಅವನ ಇಚ್ಛೆಯಂತೆ ನಡೆಯುತ್ತದೆ) ಎಂಬುದನ್ನು ತಿಳಿದುಕೊಳ್ಳಿ." ಆತ್ಮಸಮರ್ಪಣೆಯೇ ಮಹ ಮ್ಮದನು ತೋರಿಸಿಕೊಟ್ಟ ದಾರಿ. ಪ್ರಾರ್ಥನೆ ಉಪವಾಸಗಳಿಂದ ಮನಸ್ಸನ್ನು ಪೂರ್ಣವಾಗಿ ಅಂಕೆಯಲ್ಲಿಟ್ಟುಕೊಂಡರೆ ಮಾತ್ರ ಆತ್ಮಸಮರ್ಪಣೆ ಸಾಧ್ಯವೆಂದು ಆತನು ಒತ್ತಿಹೇಳಿದ್ದಾನೆ. ದಿನ ಒಂದಕ್ಕೆ ಐದುಸಲವಾದರೂ ನಮಾಜು ಅಥವ ಪ್ರಾರ್ಥನೆ ಮಾಡಬೇಕೆಂದು ತನ್ನ ಮತದವರಿಗೆ ಆಜ್ಞಾಪಿಸಿದ್ದಾನೆ. ಈ ಅನು ಷ್ಠಾನ ಅವರ ಮನಸ್ಸಿನಲ್ಲಿ ಸರ್ವದಾ ದೇವರ ಧ್ಯಾನಮಾಡುವುದನ್ನು ಸ್ಥಿರಪಡಿಸಿ ಪರಿಶುದ್ಧವಾದ ಮತ್ತು ಶಾಂತಿಮಯವಾದ ಜೀವನವನ್ನು ನಡೆಸಲು ಭದ್ರವಾದ ತಳ ಹದಿಯಾಗುತ್ತದೆ. ಇದನ್ನು ಹೊಂದಲು ಎಲ್ಲಾ ಜನಗಳ ವಿಚಾರದಲ್ಲೂ ಪ್ರೀತಿ, ಕನಿಕರ, ದಯ, ಇವುಗಳಿಂದ ವರ್ತಿಸುವುದನ್ನು ಅಭ್ಯಾಸಮಾಡಬೇಕು. ಪರಮತ ಗಳು ಕೂಡ ದೇವರನ್ನು ಸೇರಲು ಸಹಕಾರಿಗಳಾದುದರಿಂದ ಪರಮತೀಯರ ವಿಚಾರದಲ್ಲಿ ಸಹಾನುಭೂತಿಯನ್ನು ತೋರಿಸಬೇಕೆಂದು ಆತ ಹೇಳಿದ್ದಾನೆ. ಬಲಾತ್ಕಾರದಿಂದ ಮತಸ್ವೀಕಾರ ಮಾಡಿಸಬಾರದು; ಇದೇ ಅವನ ತತ್ವ. ದಾನ ನಿಷ್ಕಾಪಟ್ಯ, ಸತ್ಯಸಂಧತೆ, ಸಹವಾಸಿಗಳಲ್ಲಿ ಕನಿಕರ, ಇವು ಅವಶ್ಯಕವೆಂದು ಒತ್ತಿ ಹೇಳಿದ್ದಾನೆ. ಸ್ವಾರ್ಥತ್ಯಾಗ ಮತ್ತು ಪರಸ್ಪರ ಪ್ರೀತಿ ಇವುಗಳಿಂದ ಉಂಟಾಗುವ

ಏಕೀಭಾವ ಮಾತ್ರವೇ ದೇವರು ಒಬ್ಬನೇ ಮತ್ತು ಆತನೇ ಸರ್ವಶಕ್ತ ಎಂಬುದನ್ನು ಅನುಭವಮಾಡಿ ಕೊಡಬಲ್ಲದು ಎಂದು ಸಾರಿದ್ದಾನೆ. ಮನುಜಕುಲವೆಲ್ಲ ಒಂದು ಎಂಬುದರ ಅನುಭೂತಿಯೇ ಏಕಮಾತ್ರವಾದ ದೈವದಲ್ಲಿ ಬಾಳುವ ಕ್ರಮ. ಇದ ರಿಂದ ಅನಂತ ಶಕ್ತಿ ಅನಂತ ಶಾಂತಿಗಳ ಭವ್ಯಮಂದಿರದ ನಿವಾಸ ಲಭಿಸುತ್ತದೆ ಮೃತ್ಯುರಹಿತವಾದ ಜೀವನ ದೊರೆಕೊಳ್ಳುತ್ತದೆ.

ಕ್ರೈಸ್ತರಿಗೆ ರಾಮದಾಸನು ಹೀಗೆ ಹೇಳುತ್ತಿದ್ದನು. ಕ್ರೀಸ್ತನಲ್ಲಿ ನಂಬಿಕೆ ಇಡುವುದು ಎಂದರೆ ಅವನನ್ನು ನಿಮ್ಮ ಆದರ್ಶವನ್ನಾಗಿ ಭಾವಿಸುವುದು. ಕ್ರೀಸ್ತನ ಧ್ಯೇಯದಂತೆ ನಡೆಯುತ್ತಾ ಆತನ ಪರಿಶುದ್ಧವಾದ ಮತ್ತು ಸ್ವಾರ್ಥರಹಿತ ವಾದ ಜೀವನದ ಮೇಲ್ಪಂಕ್ತಿಯನ್ನು ಅನುಸರಿಸುವುದೇ ನಿಮ್ಮ ಗುರಿಯಾಗಿರಬೇಕು. ಕ್ರೀಸ್ತನ ಧ್ಯೇಯವೇ ನಿಮ್ಮನಿಮ್ಮ ದಿನಚರಿಯ ಕಲಾಪಗಳಿಗೆ ಸ್ಫೂರ್ತಿಯನ್ನು ನೀಡಲಿ. ಕ್ರೀಸ್ತನು ದೈವಿಕಪ್ರೇಮದ ಮೂರ್ತಿಸ್ವರೂಪ. ಅವನು ದೇವರೆಂದರೆ ಪ್ರೇಮ ಎಂದು ಹೇಳಿದ್ದಾನೆ. ಇದನ್ನು ತೋರಿಸಿಕೊಡಲೋಸುಗವೇ ಅವನು ಜನ್ಮ ವೆತ್ತಿದನು. ಆತನು ಹೇಳುವ ಪ್ರೇಮದ ಸ್ವರೂಪವೇನು? ಅದು ಸೌಜನ್ಯ ಶೌಚ ಕಾರುಣ್ಯ ಇವುಗಳಿಂದ ಮಿಳಿತವಾದ ಒಂದು ಪರಿಮಳ. ಪ್ರೀತಿ ಎಂಬ ಸುವಾಸನೆ ಯಿಂದ ತುಂಬಿರುವವನೇ ಧನ್ಯನು. ಅವನು ಭಗವಂತನ ನಿಜವಾದ ಮತ್ತು ಮೆಚ್ಚಿಕೆಯ ಶಿಶುವಾಗಿರುತ್ತಾನೆ. ದೇವರ ಪ್ರೀತಿ ಅವನಲ್ಲಿ ವ್ಯಕ್ತವಾಗಿರುತ್ತದೆ. "ಒಬ್ಬರನ್ನೊಬ್ಬರು ಪ್ರೀತಿಸಿರಿ; ದೇವರು ನಿಮ್ಮಲ್ಲಿಯೇ ಇರುವನು" ಎನ್ನುವುದೇ ಅವನ ಉಪದೇಶ. ಅತ್ಯುತ್ತಮವಾದ ಈ ಪ್ರೇಮವೇ ನಿಮ್ಮನ್ನು ದೇವರ ಪ್ರತೀಕ ವನ್ನಾಗಿಮಾಡುವುದು. ಈ ಅಸದೃಶ ಪ್ರೇಮ ಶಾಶ್ವತವಾದ ಆನಂದ ಸಾಮ್ರಾ ಜ್ಯವನ್ನು ಪ್ರವೇಶಿಸಲು ನಿಮಗೆ ಅಧಿಕಾರವನ್ನು ಕೊಡುತ್ತದೆ. ಸ್ವರ್ಗ ಸಾಮ್ರಾ ಜ್ಯವೆಂಬುದು ಅಮರ ಜೀವನದ ಪೂರ್ಣಾನುಭವದ ಆನಂದವಲ್ಲದೆ ಬೇರೆಯಲ್ಲ. ಕ್ರೀಸ್ತನು, ಸ್ವರ್ಗ ಸಾಮ್ರಾಜ್ಯ ನಿನ್ನಲ್ಲಿಯೇ ಇದೆ, ಎಂದು ಹೇಳಿ ಈ ಸಾಮ್ರಾಜ್ಯದ ಒಳಗುಟ್ಟನ್ನು ತೋರಿಸಿಕೊಟ್ಟಿದ್ದಾನೆ. ತಂದೆಯೂ ಮಗನೂ ಒಂದೇ ಆಗಿರು ವರು. ಮಗನೊಂದಿಗೆ ಐಕ್ಯವಾದರೆ ತಂದೆಯೊಂದಿಗೆ ಐಕ್ಯವಾದಂತೆ. ಶಾಶ್ವತ ಶಾಂತಿಸಾಗರನಾದ ತಂದೆಯೇ ಪ್ರೇಮಸಾಗರನಾದ ಮಗನಾಗಿ ಮೂರ್ತೀಭವಿ ಸಿದ್ದಾನೆ. ಆದುದರಿಂದ ನಿಮ್ಮ ಜೀನವೆಲ್ಲವೂ ಕ್ರೀಸ್ತನಿಗೆ ಎಂದರೆ ಪ್ರೀತಿಗೆ ಜೀತವಾಗಬೇಕು. ಆಗ ಆತನು ನಿಮ್ಮನ್ನು ತಂದೆಯ ರಾಜ್ಯಕ್ಕೆ, ಎಂದರೆ ಶಾಶ್ವತ ವಾದ ಶಾಂತಿಗೆ, ಕರೆದೊಯ್ಯುತ್ತಾನೆ. ಮುಕ್ತಿಗೆ ಕ್ರೀಸ್ತನೊಬ್ಬನೇ ಮಾರ್ಗದರ್ಶಕ ನೆಂದು ತಿಳಿಯಬೇಡಿ. ಆತನು ಹುಟ್ಟುವುದಕ್ಕೆ ಎಷ್ಟೋ ಮುಂಚೆ ಅನೇಕ ಮಹಾತ್ಮರು ಈ ಪ್ರಪಂಚದಲ್ಲಿ ದೈವಜ್ಞಾನದ ಬೆಳಕನ್ನು ಹರಡಲು ಪಂಜುಗಳನ್ನು ಎತ್ತಿ ಹಿಡಿದದ್ದುಂಟು. ನೈಚ್ಯ ಅತ್ಯುತ್ತಮ ಗುಣ; ಸರ್ವರಲ್ಲಿಯೂ ಪ್ರೀತಿ

ಮತ್ತು ಸಹಾನುಭೂತಿ ನಡತೆಯ ಸೂತ್ರಗಳು: ಸ್ವರ್ಗ ಸಾಮ್ರಾಜ್ಯವನ್ನು ಎಂದರೆ ಅಮರತ್ವ ಮತ್ತು ಶಾಂತಿಯನ್ನು ಹೊಂದಲು ಭಗವದಿಚ್ಛಾಧೀನ ರಾಗಿರುವುದೇ ದಾರಿ! ಇದು ಕ್ರೀಸ್ತನ ಮತ.

ರಾಮದಾಸನು ಯಾವ ಒಂದು ಮತಕ್ಕೂ ಸೇರಿದವನಲ್ಲ. ಎಲ್ಲ ಧರ್ಮಗಳೂ ಎಲ್ಲ ಸಂಪ್ರದಾಯಗಳೂ ಎಲ್ಲ ಮತಗಳೂ ಕೊನೆಗೆ ಒಂದೇ ಗುರಿಯುಳ್ಳ ಬರುಬರುತ್ತ ಒಂದಕ್ಕೊಂದು ಸಮಿಾಪವಾಗುವ ಪ್ರತ್ಯೇಕ ಪ್ರತ್ಯೇಕ ಮಾರ್ಗಗಳೆಂಬುದು ರಾಮದಾಸನ ಖಚಿತವಾದ ನಂಬಿಕೆ. ಅವನಿಗೆ, ಒಬ್ಬ ಮಹಮ್ಮದೀಯನನ್ನು ಕಂಡೊಡನೆ ಮಹಮ್ಮದನ ಜ್ಞಾಪಕಬರುವುದು; ಕ್ರೈಸ್ತ ಮತಸ್ಥನನ್ನು ಕಂಡೊಡನೆ ಯೇಸುಕ್ರೀಸ್ತನ ಜ್ಞಾಪಕಬರುವುದು; ಹಿಂದೂವನ್ನು ಕಂಡೊಡನೆ ರಾಮ ಕೃಷ್ಣ ಶಿವ ಇವರ ಜ್ಞಾಪಕಬರುವುದು; ಬೌದ್ಧಮತೀಯನನ್ನು ಕಂಡೊಡನೆ ಬುದ್ಧನ ಜ್ಞಾಪಕಬರುವುದು; ಪಾರಸೀಕನನ್ನು ಕಂಡೊಡನೆ ಜರತುಷ್ಟ್ರನ ಜ್ಞಾಪಕಬರುವುದು. ಈ ಪ್ರಪಂಚದ ಬೋಧಕರೆಲ್ಲರೂ ವಿಶ್ವಸೃಷ್ಟಿಗೆ ಮೂಲಕಾರಣನಾದ ಒಬ್ಬನೇ ದೇವರಿಂದ ಬಂದವರು. ಗೀತೆ, ಬೈಬಲ್, ಖುರಾನ್, ಜೆಂಡ್ ಅವೆಸ್ತಾ, ಯಾವುದನ್ನು ನೋಡಿದರೂ ಅದರಲ್ಲಿ ಆತ್ಮ ಸಮರ್ಪಣೆಯೇ ಮೋಕ್ಷ ಅಥವ ಉದ್ಧಾರಕ್ಕೆ ಅತ್ಯುತ್ತಮಮಾರ್ಗ ಎಂಬ ಒಂದೇ ಸಿದ್ಧಾಂತದ ಒತ್ತಾಯದ ಘೋಷಣ ಕೇಳಿಬರುವುದು.

## (ii) ದೇವರ ಸೇವೆ.

ಗುಹೆಯಲ್ಲಿ ವಾಸಿಸುತ್ತಿದ್ದ ಕಾಲದ ಜೀವನವನ್ನು ಈಗ ವರ್ಣಿಸಲಾಗುತ್ತದೆ. ರಾಮದಾಸನು ಪ್ರತಿದಿನವೂ ಮುಂಜಾನೆ ಮೂರು ಗಂಟೆಗೆ ಎದ್ದು ನೇರವಾಗಿ ಕೆರೆಯಸ್ನಾನಕ್ಕೆ ಹೋಗುತ್ತಿದ್ದನು. ದಾರಿ ಕಠಿಣವಾಗಿ ಎಷ್ಟೇ ಅಪಾಯಕರವಾಗಿದ್ದರೂ, ಎಂತಹ ಕಗ್ಗತ್ತಲಕಾಲವಾಗಿದ್ದರೂ, ಅವನು ಪ್ರಾತಃಸ್ನಾನವನ್ನ, ಬಿಡುತ್ತಿರಲಿಲ್ಲ. ಸ್ನಾನಾನಂತರ ಆಸನ ಹಾಕಿಕೊಂಡು ಬೆಳಗಾಗುವವರೆಗೂ ಧ್ಯಾನಾಸಕ್ತನಾಗಿರುತ್ತಿದ್ದನು. (ಕೆಲವು ದಿನಗಳವರೆಗೆ ರಾಮತಾರಕಮಂತ್ರವನ್ನು ಮನಸಾ ಜಪಿಸುವುದೇ ಆತನ ಧ್ಯಾನವಿಧಿಯಾಗಿದ್ದಿತು. ಅನಂತರ ಮಂತ್ರಜಪ ತಾನಾಗಿ ನಿಂತುಹೋಗಿ ಆತನ ಅಂತರ್‌ದೃಷ್ಟಿಯಲ್ಲಿ ಒಂದು ವರ್ತುಳಾಕಾರದ ಸಣ್ಣ ಬೆಳಕು ಕಾಣಿಸಿತು. ಇದರಿಂದ ರೋಮಾಂಚಕ ಸಂತೋಷ ದೊರೆಯಿತು.) ಈ ಅನುಭವ ಕೆಲವು ದಿವಸಗಳವರೆಗೂ ಆಯಿತು. ಅನಂತರ ಕಣ್ಣನ್ನು ಕೋರೈಸುವ ಮಿಂಚಿನಂತೆ ಒಂದು ದೊಡ್ಡ ಬೆಳಕು ಕಂಡುಬಂದು ಒಳಗೆಲ್ಲಾ ಪ್ರವಹಿಸಿ, ರಾಮದಾಸನನ್ನು ಸಂಪೂರ್ಣವಾಗಿ ಒಳಕೊಂಡಿತು. ಆಗ ರಾಮದಾಸನ ಶರೀರಾದ್ಯಂತ ಪ್ರತಿ ರೋಮಕೂಪದಲ್ಲೂ ಅವರ್ಣನೀಯವಾದ ಆನಂದ ತುಂಬಿತು.

ಆ ಆನಂದಾನುಭವಕಾಲದಲ್ಲಿ ರಾಮದಾಸನಿಗೆ ಮೊದಲು ಕೈಕಾಲುಗಳ, ಅನಂತರ ಶರೀರಾದ್ಯಂತದ, ಸ್ಮರಣೆ ತಪ್ಪುತ್ತಿದ್ದಿತು. ಈ ಪಾರವಶ್ಯದಲ್ಲಿ ವಿಸ್ಮೃತನಾಗಿ ರಾಮದಾಸನು ಎರಡು ಮೂರು ಗಂಟೆಗಳಕಾಲ ಕುಳಿತಿರುತ್ತಿದ್ದನು. ಇಂತಹ ಕಾಲಗಳಲ್ಲೂ ಬಾಹ್ಯಪ್ರಪಂಚದ ಅರಿವು ಸೂಕ್ಷ್ಮವಾಗಿ ಇರುತ್ತಿದ್ದಿತು.

ಮುಂಜಾನೆ ರಾಮದಾಸನು ಇಂತಹ ಸ್ಥಿತಿಯಲ್ಲಿರುತ್ತಿದ್ದಾಗ, ಕೆಲವು ಮಿತ್ರರು ಅವನನ್ನು ನೋಡುವುದಕ್ಕಾಗಿ ಬರುತ್ತಿದ್ದರು. ಆಗ ರಾಮದಾಸನಿಗೆ ಅವರು ಅಲ್ಲಿರುವರೆಂಬ ವಿಷಯ ಅಸ್ಪಷ್ಟವಾಗಿ ಭಾಸವಾಗುತ್ತಿದ್ದಿತು. ಅವರು ಮಾತನಾಡುತ್ತಿದ್ದರೆ ಶಬ್ದ ಮಾತ್ರ ಕೇಳಿಬರುವುದು. ಆದರೆ ಅರ್ಥವಾಗಲಿ ಅಭಿಪ್ರಾಯವಾಗಲಿ ಮನಸ್ಸಿಗೆ ಬರುತ್ತಿರಲಿಲ್ಲ. ಈ ಅಂತರ್ಧ್ಯಾನಸ್ಥಿತಿ ರಾಮದಾಸನಮೇಲೆ ಎಷ್ಟು ಹಿಡಿತ ಇಟ್ಟದ್ದಿತೆಂದರೆ, ಈ ಸ್ಥಿತಿಯಿಂದ ದೇಹಬುದ್ಧಿಯಸ್ಥಿತಿಗೆ ಇಳಿಯಲು ರಾಮದಾಸನಿಗೆ ಸುಲಭಸಾಧ್ಯವಾಗುತ್ತಿರಲಿಲ್ಲ. ಈ ಸ್ಥಿತಿ ಯಾವಾಗಲೂ ಮೂರು ಗಂಟೆಗಳ ಕಾಲವನ್ನು ಮೀರಿ ಇರುತ್ತಿರಲಿಲ್ಲ. ಎಚ್ಚರವಾಗಿ ಶರೀರಸ್ಮರಣೆ ಬಂದಮೇಲೆ ರಾಮದಾಸನು ದೇವರ ಸ್ತೋತ್ರಗಳನ್ನು ಹಾಡಿಕೊಳ್ಳುವುದರಲ್ಲಿ ರಾಮಮಂತ್ರವನ್ನು ಗಟ್ಟಿಯಾಗಿ ಉಚ್ಚರಿಸುವುದರಲ್ಲಿ ಪ್ರವೃತ್ತನಾಗುವನು. ನಿಜವಾಗಿ ತಾನು ಮಾತನಾಡುತ್ತಿದ್ದ, ಓದುತ್ತಿದ್ದ, ಬರೆಯುತ್ತಿದ್ದ, ಕಾಲಗಳನ್ನು ಬಿಟ್ಟು ಉಳಿದ ಕಾಲದಲ್ಲೆಲ್ಲಾ ಅವನು ಮಂತ್ರವನ್ನು ಎಡೆಬಿಡದೆ ಜಪಿಸುತ್ತಿದ್ದನು.

ಈ ಸಮಾಧಿ ಅನುಭವದಿಂದ ಇನ್ನೊಂದು ಮಾರ್ಪಾಡು ಉಂಟಾಯಿತು. ನಿದ್ದೆ ಎಂಬುದು ಶುದ್ಧ ಆನಂದಭರಿತವಾದ ಅರೆ ಅರಿವು ಅಥವ ಎಚ್ಚರದ ಸ್ಥಿತಿಯಾಯಿತು. ಕೆಲವು ಸಲ ನಡುರಾತ್ರಿಯಲ್ಲಿ ಅನಿರೀಕ್ಷಿತವಾಗಿ ಯಾರಾದರೂ ಸ್ನೇಹಿತರು ಬರುತ್ತಿದ್ದರು. ರಾಮದಾಸನು ಸಮಾಧಿಸ್ಥಿತಿಯಲ್ಲಿದ್ದರೂ ಅವನಿಗೆ ಸ್ನೇಹಿತನು ಗುಹೆಯಿಂದ ಒಂದು ಫರ್ಲಾಂಗ್ ದೂರದಲ್ಲಿರುವಾಗಲೇ ಆತನ ಆಗಮನ ಗೊತ್ತಾಗುತ್ತಿದ್ದಿತು. ಭಗವಂತನ ಸಂಕಲ್ಪದಂತೆ "ಪರಮಾತ್ಮನ ಶೋಧನೆಯಲ್ಲಿ" ("In quest of God") ಎಂಬ ಗ್ರಂಥವನ್ನು ಬರೆಯುವ ಕೆಲಸದಲ್ಲಿ ಅರ್ಧರಾತ್ರಿಯನಂತರ ಎರಡು ಗಂಟೆಗಳ ಹೊತ್ತನ್ನು ರಾಮದಾಸನು ವಿನಿಯೋಗಿಸಿದ್ದು ಆ ಕಾಲದಲ್ಲಿಯೇ. ಗವಿಯ ವಾಸದ ಕೊನೆಕೊನೆಯ ದಿವಸಗಳಲ್ಲಿ, ಯಾರೂ ಪ್ರೇಕ್ಷಕರಿಲ್ಲದಿದ್ದಾಗ, ಹಗಲು ಹೊತ್ತುಕೂಡ ಈ ಸಮಾಧಿ ಸ್ಥಿತಿ ಬರುವಂತಾಗಿದ್ದಿತು. ಮಂತ್ರಜಪ ಹಠಾತ್ತಾಗಿ ನಿಂತುಹೋಗಿ ಇವನು ಕೂಡಲೇ ದೇಹಪರಿತ್ಯಾಗವನ್ನು ಮೀರುತ್ತಿದ್ದನು. ಈ ಕಾಲದಲ್ಲಿ ಒದಗಿದ ಒಂದು ಅಪೂರ್ವ ಅನುಭವ ಗಮನಾರ್ಹವಾಗಿದೆ. (ಒಂದು ದಿನ ಪ್ರಾತಃಕಾಲ ರಾಮದಾಸನು ಗವಿಯ ಒಳಗೆ ನಿಂತು, ಉದಯವಾಗುತ್ತಿದ್ದ ಸೂರ್ಯನ ಹೇಮ ಮಂಡಲವನ್ನು ಎವೆ ಇಕ್ಕದೆ ನೋಡುತ್ತಿದ್ದಾಗ ಸಮಾಧಿಸ್ಥಿತಿಯ ಸೂಚನೆಯುಂಟಾ

ಯಿತು.) ಬೇಗನೆ ಅವನು ಅದರಲ್ಲಿ ಮಗ್ನನಾದನು. ಕೊಂಚ ಕಾಲ ಕಳೆದು ಪ್ರಜ್ಞೆ ದೇಹವನ್ನು ಕುರಿತಾಗ ಕೆಳಗೆ ನೋಡಲು ಅವನ ಬಲಗಾಲಿಗೆ ಒಂದು ಹಾವು ಸುತ್ತಿಕೊಂಡು ತನ್ನ ಸೀಳುನಾಲಿಗೆಯಿಂದ ಉಂಗುಷ್ಟವನ್ನು ಚುರುಕಾಗಿ ನೆಕ್ಕುತಿದ್ದುದು ಕಂಡುಬಂದಿತು. ರಾಮದಾಸನಿಗೆ ಇದನ್ನು ಕಂಡು ಉದ್ವೇಗ ಆಗಲಿಲ್ಲ. ನಿಂತಂತೆಯೇ ನಿಂತು ಸ್ವಲ್ಪವೂ ಅಲುಗಾಡದೆ ಅವನು ಹಾವಿನ ಪ್ರೀತ್ಯುಪಚಾರವನ್ನು ಗಮನಿಸುತ್ತಿದ್ದನು. ಒಂದೆರಡು ನಿಮಿಷಗಳ ತರುವಾಯ ಸರ್ಪ ನಿದಾನವಾಗಿ ಕಾಲಿಂದ ಮೆಲ್ಲನೆ ಬಿಚ್ಚಿಕೊಂಡು ಗವಿಯ ಹೊರಗಡೆಗೆ ಹರಿದುಹೋಯಿತು. ಆಗ ರಾಮದಾಸನು ಹಾವನ್ನು ಸಂಬೋಧಿಸಿ, "ಓ ಅತ್ಯಂತ ಪ್ರಿಯ ರಾಮ! ಏಕೆ ಇಷ್ಟು ಅವಸರದಿಂದ ಹೋಗುತ್ತಿದ್ದೀಯೆ?" ಎಂದು ಕೇಳಿದ ಜ್ಞಾಪಕವಿದೆ. ಪರಮಾತ್ಮನ ಲೀಲೆ ನಿಜವಾಗಿಯೂ ಆಶ್ಚರ್ಯಕರ ವಾದುದು. ಎಲ್ಲ ರೂಪಗಳೂ ಅವನವೇ. ಅವನೇ ನಾನಾರೂಪಗಳಲ್ಲಿ ಲೀಲೆ ಯಾಡುತ್ತಾನೆ. ಸರ್ಪರೂಪಿ ಸ್ನೇಹಿತನಿಗೆ ರಾಮದಾಸನ ಮೇಲೆ ತುಂಬಾ ಪ್ರೀತಿ ಯುಂಟಾಗಿ ಅದು ಕ್ರಮವಾಗಿ ಮೂರು ದಿವಸ ಪ್ರಾತಃಕಾಲದಲ್ಲಿ ಬಂದಿತು. ಅನಂತರ ಅದು ಬರುವುದು ನಿಂತುಹೋಯಿತು.

ಅಂತರ್ಯಾಮಿಯಿಂದ ಬಂದ ಸ್ಪಷ್ಟವಾದ ಆಜ್ಞೆಯಮೇರೆ ರಾಮದಾಸನು ಏಳು ದಿವಸ ಮೌನವ್ರತವನ್ನಾಚರಿಸಿದನು. ಮಿತ್ರರು ಎಷ್ಟು ಒತ್ತಾಯಪಡಿ ಸಿದರೂ ಆ ಅವಧಿ ಪೂರೈಸುವವರೆಗೆ ಮೌನವ್ರತವನ್ನು ನಿಲ್ಲಿಸಲು ಆಗಲಿಲ್ಲ. ಏಕೆಂದರೆ ರಾಮದಾಸನು ಈ ವಿಚಾರದಲ್ಲಿ ತಾನು ಅಸ್ವತಂತ್ರನೆನ್ನುವುದನ್ನು ಕಂಡನು. ನಿಜವಾಗಿಯೂ ಭಗವಂತನು ಈ ದಾಸನನ್ನು ಸಂಪೂರ್ಣವಾಗಿ ತನ್ನ ಅಧೀನಮಾಡಿಕೊಂಡಿದ್ದನು.

ಮಂಗಳೂರಿನ ಮೈದಾನದಲ್ಲಿರುವ ಆಲದಮರಗಳ ಕೆಳಗೆ ಕೆಲವರು ಕುಷ್ಟ ರೋಗಿಗಳು ವಾಸಿಸುತ್ತಿದ್ದುದನ್ನು ರಾಮದಾಸನು ನೋಡಿದ್ದನು. ಅವರಲ್ಲಿ ಒಬ್ಬ ನಿಗೆ ರೋಗ ಮಿತಿಮೀರಿ ಹೋಗಿದ್ದಿತು. ಒಬ್ಬ ಸ್ಥೂಲಕಾಯದ ಹುಡುಗನು ಅವನನ್ನು ಒಂದು ಸಣ್ಣದಾದ ತಳ್ಳುವ ಕೈಗಾಡಿಯಲ್ಲಿ ಕುಳ್ಳಿರಿಸಿಕೊಂಡು ಭಿಕ್ಷಕ್ಕಾಗಿ ಮನೆಮನೆಗೂ ತಳ್ಳಿಕೊಂಡು ಹೋಗುತ್ತಿದ್ದನು. ಈ ಕೆಟ್ಟ ರೋಗದ ಪ್ರಾಬಲ್ಯ ದಿಂದ ರೋಗಿಯ ಮುಖವೆಲ್ಲವೂ ವಿಕಾರವಾಗಿ ಮುಖಮುದ್ರೆ ಕಾಣಿಸದಂತಾ ಗಿದ್ದಿತು. ಮುಖವೆಲ್ಲವೂ ಕೆಂಪಾಗಿ ಕೀವು ಸೋರುತ್ತಿದ್ದ ಒಂದು ವ್ರಣದ ಮುದ್ದೆ ಯಾಗಿದ್ದಿತು; ಕಣ್ಣು ರೆಪ್ಪೆಗಳೂ ಮೂಗೂ ತುಟಿಗಳೂ ಪೂರ್ತಿಯಾಗಿ ನಶಿಸಿ ಹೋಗಿದ್ದುವು.

ಭಗವಂತನ ಪ್ರೇರಣೆಯಂತೆ ರಾಮದಾಸನು ಈ ಕುಷ್ಟರೋಗಿಗಳಿಗೆ ಮಧ್ಯಾಹ್ನದ ಹೊತ್ತು ಅನ್ನ ತಿನ್ನಿಸುವ ಕಾರ್ಯವನ್ನು ಕೈಕೊಂಡನು.

ಗುಹೆಗೆ ಬರುತ್ತಿದ್ದ ದಯಾಶಾಲಿಗಳು ಅವರಿಗೆ ಆಹಾರವನ್ನು ಒದಗಿಸಲು ಒಪ್ಪಿ ಕೃಪೆಮಾಡಿದರು. ಪ್ರತಿ ದಿನವೂ ಮೂರು ಮನೆಗಳಿಂದ ದೊರೆತ ಆಹಾರ ವನ್ನು ಅವನು ತೆಗೆದುಕೊಂಡು ಹೋಗಿ ಮಧ್ಯಾಹ್ನ ಒಂದು ಗಂಟೆಯಹೊತ್ತಿಗೆ ಮೈದಾನವನ್ನು ಸೇರಿ ರೋಗಿಗಳಿಗೆ ತಿನ್ನಿಸುತ್ತಿದ್ದನು. ಅತಿಯಾಗಿ ನರಳು ತ್ತಿದ್ದವನ ಸೇವೆಯೇ ಮೊಟ್ಟಮೊದಲು ನಡೆಯುತ್ತಿದ್ದಿತು. ಅವನ ಕೈಕಾಲು ಬೆರಳುಗಳೆಲ್ಲಾ ರೋಗಕ್ಕೆ ಆಹುತಿಯಾಗಿದ್ದವು. ತುತ್ತನ್ನು ಬಾಯ ಹತ್ತಿರಕ್ಕೆ ತೆಗೆದುಕೊಳ್ಳುವುದೇ ಅವನಿಗೆ ಪ್ರಯಾಸವಾಗಿದ್ದಿತು. ಅವನು ಊಟಮಾಡು ತ್ತಿದ್ದಾಗ ಅವನ ಮುಖಕ್ಕೆ ಮುತ್ತುತ್ತಿದ್ದ ನೊಣಗಳನ್ನು ರಾಮದಾಸನು ಓಡಿಸು ತ್ತಿದ್ದನು. ಉಳಿದ ಕಾಲದಲ್ಲಿ ರೋಗಿ ಮುಖದ ಮೇಲೆ ಒಂದು ಬಟ್ಟೆಯನ್ನು ಹಾಕಿಕೊಂಡಿರುತ್ತಿದ್ದನು. ಈ ಹುಣ್ಣಿನಿಂದ ಹೊರಟು ಕೆನ್ನೆಯ ಮೇಲೆ ಹರಿದು ಬಾಯಿಗೆ ಸೇರುತ್ತಿದ್ದ ಕೀವನ್ನು ರಾಮದಾಸನು ಮೆತ್ತಗೆ ಒರೆಸಬೇಕಾಗುತ್ತಿದ್ದಿತು. ಇವನ ಭೋಜನಾನಂತರ ಉಳಿದ ಆಹಾರವನ್ನು ರಾಮದಾಸನು ಆ ಹುಡುಗನಿಗೂ ಇತರ ರೋಗಿಗಳಿಗೂ ಹಂಚುತ್ತಿದ್ದನು. ಭಗವಂತನು ರಾಮದಾಸನನ್ನು ಈ ಸೇವೆಯಲ್ಲಿ ಎರಡು ತಿಂಗಳ ಕಾಲ ಇಟ್ಟಿದ್ದನು. ಅಷ್ಟು ಕಾಲವೂ ರಾಮ ದಾಸನು ಬೇಸರವಾಗಲಿ ಅಸಹ್ಯವಾಗಲಿ ಪಡದೆ ಈ ಕೆಲಸವನ್ನು ಅವ್ಯಾಜವಾದ ಆನಂದಾತಿಶಯದಿಂದಲೂ ಉತ್ಸಾಹದಿಂದಲೂ ಮಾಡಿದನು. ಗುಹೆಯನ್ನು ಬಿಡುವ ಕೆಲವು ದಿನಗಳ ಮೊದಲು, ದೇವರ ಇಚ್ಛೆಯಂತೆ, ಈ ಊಟಮಾಡಿಸುವ ಕೆಲಸ ಹಠಾತ್ತಾಗಿ ನಿಂತುಹೋಯಿತು. ಹೇ ಸ್ವಾಮಿ! ನಿನ್ನಿಂದ ಸೃಷ್ಟಿಸಲ್ಪಟ್ಟ ಎಲ್ಲ ಪ್ರಾಣಿಗಳಿಗೂ ತಿಳಿಯಲಸದಳವಾದರೀತಿಯಲ್ಲಿ ಆಹಾರವನ್ನು ನೀನೇ ನೀಡುತ್ತಿರುವೆ. ಸರ್ವಶಕ್ತವಾದ ನಿನ್ನ ಕೈಯಲ್ಲಿ ರಾಮದಾಸನು ನಿಮಿತ್ತಮಾತ್ರ.

ಕುಷ್ಟರೋಗಿಗಳಿಗೆ ಊಟಮಾಡಿಸುವ ಕೆಲಸ ನಿಂತಕೂಡಲೇ ಒಬ್ಬ ಮಲ ಬಾರಿ ರಾಮದಾಸನೊಂದಿಗೆ ಕೆಲವು ದಿನ ವಾಸವಾಗಿರಲು ಗುಹೆಗೆ ಬಂದನು. ಅವನ ದೇಹವೆಲ್ಲಾ ಸವೆದು ಮೈಯೆಲ್ಲಾ ಬರಿಯ ಅಸ್ಥಿಪಂಜರವಾಗಿದ್ದಿತು. ಇವನ ರೂಪದಲ್ಲಿ ತನ್ನ ಸೇವೆಮಾಡುವ ಮತ್ತೊಂದು ಅವಕಾಶವನ್ನು ಕೊಟ್ಟದ್ದಕ್ಕಾಗಿ ಭಗವಂತನಿಗೆ ರಾಮದಾಸನು ಅನಂತವಾಗಿ ವಂದನೆ ಒಪ್ಪಿಸಿದನು. ಈ ಮಲ ಯಾಳಿಗೆ ಸಾಮಾನ್ಯವಾಗಿ ಮಾತನಾಡಲು ಮನಸ್ಸೇ ಬರುತ್ತಿರಲಿಲ್ಲ. ಇವನ ಬಾಯಿಂದ "ಕೃಷ್ಣ, ಶರಣು ಶರಣು" ಎಂಬ ಶಬ್ದಗಳು ಮಾತ್ರ ಸಣ್ಣ ಧ್ವನಿ ಯಲ್ಲಿ ಪದೇ ಪದೇ ಹೊರಬೀಳುತ್ತಿದ್ದುವು. ರಾಮದಾಸನು ಮಧ್ಯಾಹ್ನ ಮತ್ತು ಸಾಯಂಕಾಲ ಊರೊಳಕ್ಕೆ ಓಡಿಹೋಗಿ ಈ ಅಚ್ಚುಮೆಚ್ಚಿನ ಅತಿಥಿಗಾಗಿ ಆಹಾರವನ್ನು ಬೇಡಿ ತರುತ್ತಿದ್ದನು. ಹೇ ಸ್ವಾಮಿ! ನಿನ್ನ ರೂಪಗಳು ಅದ್ಭುತ ವಾದವು. ರಾಮದಾಸನಿಂದ ಸೇವೆ ತೆಗೆದುಕೊಂಡ ಕುಷ್ಟರೋಗಿಗಳು ಮತ್ತು

ಮುಲಬಾರಿ ಆ ರೂಪುಗಳನ್ನು ಧರಿಸಿದ ನೀನೇ. (ಈ ಪ್ರಪಂಚವೆಲ್ಲ ನಿನ್ನ ಆತ್ಮ ವ್ಯಂಜನ.) ನೀನೇ ನಾನಾವಿಧವಾದ ಮುಸುಕುಗಳನ್ನು ಹಾಕಿಕೊಂಡು ನಾನಾ ವಿಧವಾಗಿ ತೋರ್ಪಡಿಸಿಕೊಳ್ಳುತ್ತಿದ್ದೀಯೆ. (ನೀನು ಜನನಮರಣರಹಿತನಾದ ಏಕಶುದ್ಧಸತ್ವ.) (ನೀನು ಸಚ್ಚಿದಾನಂದನು) ಶಾಶ್ವತನು.

ಪ್ರತಿ ದಿನವೂ ಬಂದು ರಾಮದಾಸನಿಗೆ ದರ್ಶನಕೊಡುತ್ತಿದ್ದ ಅತಿಥಿಗಳಲ್ಲಿ ಒಂದು ಹೋತ ಮತ್ತು ಹಸು ಇದ್ದುದನ್ನು ಇಲ್ಲಿ ಹೇಳಬೇಕು. ಇವೆರಡೂ ತಮ್ಮ ಭಾಗದ ಬಾಳೆಹಣ್ಣಿಗಾಗಿ ತಪ್ಪದೆ ಗವಿಯ ಬಾಗಿಲಿಗೆ ಬರುತ್ತಿದ್ದವು. ಹೋತನು ಬಹಳ ಸಲಿಗೆಯಿಂದ ರಾಮದಾಸನೊಡನೆ ಆಟವಾಡುತ್ತಿದ್ದಿತು; ರಾಮದಾಸನ ಪೀಠದ ಮೇಲೆ ಕುಣಿಯುತ್ತಿದ್ದಿತು. ಅವನ ಹೆಗಲಮೇಲೂ ಕೆಲವು ಸಲ ಹತ್ತುತ್ತಿದ್ದಿತು. ಹಸುವಾದರೋ ಗುಹೆಯ ಬಾಗಿಲಿಗೆ ಬಂದು, ಕತ್ತನ್ನು ನೀಡಿ, ತನಗೆ ಕೊಟ್ಟ ಬಾಳೆಯಹಣ್ಣನ್ನು ತೆಗೆದುಕೊಂಡು ಹೊರಟು ಹೋಗುತ್ತಿದ್ದಿತು.

## (iii) ಯುವಕ ಸಾಧಕರು

ಆ ದಯಾಳುಮಾತೆ, ರಾಮದಾಸನ ಪೂರ್ವಾಶ್ರಮದ ಪತ್ನಿ, ರಾಮದಾಸನ ಜೊತೆಗೆ ಹುಬ್ಬಳ್ಳಿಯಿಂದ ಮಂಗಳೂರಿಗೆ ಹಡಗಿನಲ್ಲಿ ಪ್ರಯಾಣಮಾಡಿದ ಆಯಾಸ ದಿಂದ ಕೆಲವುದಿವಸ ಜ್ವರಪೀಡಿತಳಾದಳು. ಆಕೆಗೆ ವಾಸಿಯಾಗುವವರೆಗೂ ರಾಮದಾಸನು ಎರಡು ಮೂರು ದಿವಸಗಳಿಗೊಮ್ಮೆ ಹೋಗಿ ಅವಳನ್ನು ನೋಡಿ ಕೊಂಡು ಬರುತ್ತಿದ್ದನು. ಹೀಗೆ ಹೋಗಿ ಬರುತ್ತಿದ್ದಕಾಲದಲ್ಲಿ, ಒಂದುದಿವಸ ಪುತ್ತೂರಿನ ಪ್ರಸಿದ್ಧ ಸಾಧು ಶ್ರೀ ಕೃಷ್ಣರಾಯರು, ಮನೆಯಲ್ಲಿದ್ದವರು, ರಾಮ ದಾಸನು ಕಾಯಲೆಯಿಂದ ನರಳುತ್ತಿದ್ದ ಮಾತೆಯ ಸಮೀಪದಲ್ಲಿ ಕುಳಿತಿದ್ದ ಕಡೆಗೆ ಬಂದರು. ಅವರನ್ನು ಕಂಡು ರಾಮದಾಸನು ಸಾಷ್ಟಾಂಗ ಪ್ರಣಾಮ ಮಾಡಿದನು. ಅವರು ಕುಳಿತುಕೊಂಡರು.

"ನೀವು ಸಂಸಾರವನ್ನು ಪೂರ್ತಿಯಾಗಿ ತ್ಯಜಿಸಿ ಸಂನ್ಯಾಸದೀಕ್ಷೆಯನ್ನು ತೆಗೆದುಕೊಳ್ಳಬೇಕಾದ ಅವಶ್ಯಕತೆ ಇದ್ದಿತೆ?" ಎಂದು ಸಾಧು ಕೇಳಿದರು.

"ರಾಮನ ಇಚ್ಛೆ ಹಾಗಿದ್ದಿತು. ಅದನ್ನು ಮೀರಲು ರಾಮದಾಸನಿಗೆ ಸಾಧ್ಯವಿಲ್ಲ" ಎಂದು ರಾಮದಾಸನು ಉತ್ತರಕೊಟ್ಟನು.

"ಹಾಗಾದರೆ ನಿಮ್ಮ ರಾಮ ವಿಚಿತ್ರನಾಗಿರಬೇಕು. ಆತನೆಲ್ಲಿರುವನೋ ನನಗೆ ತಿಳಿಸುವಿರಾ?" ಎಂದರು ಸಾಧು.

"(ಅವನು ನಮ್ಮೆಲ್ಲರ ಹೃದಯದಲ್ಲೂ ವಾಸಿಸುತ್ತ ಇದ್ದಾನೆ. ಅವನು ಸರ್ವಾಂತರ್ಯಾಮಿ") ಎಂದನು ರಾಮದಾಸ.

"ಆತನು ನನಗೆ ಕಾಣುವುದಿಲ್ಲ. ನಮ್ಮಲ್ಲಿ ಕಾರ್ಯಮಾಡಿಸುವುದು ಆತನ ಸಂಕಲ್ಪವೇ ಎಂದು ನಾವು ಹೇಗೆ ತಿಳಿಯಬಹುದು" ಎಂದರು ಸಾಧು ಮತ್ತೆ.

ರಾಮದಾಸ: "ಸಾಮಾನ್ಯ ದೃಷ್ಟಿಗೆ ಅವನು ಕಾಣುವುದಿಲ್ಲ. ಆದರೆ ಪರಿಶುದ್ಧವಾದ ದೃಷ್ಟಿಯಿಂದ ಅವನನ್ನು ಕಾಣಬಹುದು. ನೀವು ಆತನನ್ನು ಕಂಡಾಗ ಮಾತ್ರ, ನೀವು ಮಾಡುವ ಎಲ್ಲ ಕೆಲಸ ಆತನ ಸಂಕಲ್ಪದಿಂದಲೇ ನಡೆಯುವುದೆಂದು ನಿಮಗೆ ಮನದಟ್ಟಾಗುವುದು. ಸಂಗದಿಂದ ವಿಮೋಚನೆ ಹೊಂದಿ ಆತನಲ್ಲಿ ಸಂಪೂರ್ಣವಾಗಿ ಆತ್ಮ ಸಮರ್ಪಣೆ ಮಾಡಿದರೆಯೇ ಈ ಮಹದ್ದರ್ಶನ ಪ್ರಾಪ್ತಿಯಾಗುವುದು."

ಕೃಷ್ಣರಾಯರು ಸುಮ್ಮನಾಗದೆ: "ನೀವು ಹೇಳುವುದು ನನಗೆ ಪೂರ್ತಿಯಾಗಿ ಅರ್ಥವಾಗುತ್ತಿಲ್ಲ. ದೇವರ ಅನುಭವ ಮಾಡಿಕೊಳ್ಳುವುದಕ್ಕೆ ಪ್ರಾಪಂಚಿಕ ವ್ಯವಹಾರವನ್ನು ಬಿಡಬೇಕಾದ ಅವಶ್ಯಕತೆ ಇಲ್ಲವೆಂದು ನನ್ನ ತಿಳಿವಳಿಕೆ" ಎಂದು ಹೇಳಿದರು.

ರಾಮದಾಸ: "ಅದು ನಿಜ. ರಾಮದಾಸನು ಈಗಲೂ ಈ ಪ್ರಪಂಚಕ್ಕೆ ಸಂಬಂಧಿಸಿಕೊಂಡಿದ್ದಾನೆ. ಅದರ ಸ್ವಲ್ಪಕ್ಕಲ್ಲ, ಪೂರ್ತಿಗೆ. ಆತನ ಪ್ರಿಯ ವಸ್ತು, ಯಾರೋ ಕೆಲವು ಮನುಷ್ಯಮಾತ್ರದಲ್ಲಿ ಅಲ್ಲದೆ, ಎಲ್ಲಾ ಪ್ರಾಣಿಗಳಲ್ಲಿಯೂ, ಸೃಷ್ಟಿಯ ಎಲ್ಲಾ ಚೇತನಾಚೇತನ ವಸ್ತುಗಳಲ್ಲಿಯೂ, ತನ್ನ ಸಂಪೂರ್ಣವಾದ ಶಕ್ತಿಯಿಂದಲೂ, ತೇಜಸ್ಸಿನಿಂದಲೂ, ಬೆಳಗುತ್ತಿರುವುದು ರಾಮದಾಸನಿಗೆ ಕಂಡುಬಂದಿದೆ."

ಇಲ್ಲಿಗೆ ಸಂಭಾಷಣೆ ಮುಗಿಯಿತು. ರಾಮದಾಸನು ಮನೆಯನ್ನು ಬಿಟ್ಟು ಗವಿಗೆ ಹಿಂದಿರುಗಿದನು.

ಒಂದುದಿನ ಸಾಯಂಕಾಲ ಸುಮಾರು ಐದು ಗಂಟೆಯ ಸಮಯದಲ್ಲಿ, ಆಗಾಗ್ಗೆ ಬರುತ್ತಿದ್ದ ಹದಿನಾಲ್ಕು ವರ್ಷ ವಯಸ್ಸಿನ ಒಬ್ಬ ಸಾರಸ್ವತ ಹುಡುಗನು ಬಂದು, ಕಣ್ಣೀರನ್ನು ಸುರಿಸುತ್ತಾ ದುಃಖೋದ್ರೇಕದಿಂದ, "ರಾಮ ಇನ್ನು ಮುಂದೆ ನಾನು ಯಾವಾಗಲೂ ನಿಮ್ಮ ಜೊತೆಯಲ್ಲಿಯೇ ಇರುವೆನು. ನಿಮ್ಮನ್ನು ಎಂದೆಂದಿಗೂ ಬಿಡುವುದಿಲ್ಲ. ನನ್ನ ಜೀವಿತವನ್ನೆಲ್ಲಾ ರಾಮನಾಮದ ಸ್ಮರಣೆಗಾಗಿಯೇ ಅರ್ಪಿಸಬೇಕೆಂದಿರುವೆನು" ಎಂದು ಹೇಳಿದನು.

ರಾಮದಾಸನು "ರಾಮ, ನೀನು ಇಲ್ಲಿ ಇರಲಾಗದು. ನಿನ್ನ ಮಾತಾಪಿತೃಗಳು ನಿನ್ನ ವಿಚಾರದಲ್ಲಿ ಬಹಳ ಕಳವಳಪಡುವರು. ಅವರೆಡೆಗೆ ತೆರಳು" ಎಂದನು.

“ನನಗೂ, ತಂದೆತಾಯಿಗಳಿಗೂ, ಮನೆಮಠಕ್ಕೂ, ಈ ಪ್ರಪಂಚಕ್ಕೂ ಏನೇನೂ ಸಂಬಂಧವಿಲ್ಲ. ನೀವೇ ನನ್ನ ಸರ್ವಸ್ವ. ನಿಮ್ಮ ಸಹವಾಸದಲ್ಲಿದ್ದು ಕೊಂಡು ಪವಿತ್ರವಾದ ನಾಮದ ಉಚ್ಚಾರಣೆಯಲ್ಲಿ ಕಾಲವನ್ನು ಕಳೆಯುವೆನು” ಎಂದನು ತರಳ.

“ಇದನ್ನು ನೀನು ನಿಮ್ಮ ಮನೆಯಲ್ಲಿಯೇ ಮಾಡಬಹುದು. ನಾಮೋಚ್ಚಾರಣೆಗಾಗಿ ನೀನು ರಾಮದಾಸನೊಂದಿಗೆ ನಿಲ್ಲಬೇಕಾದುದು ಅನಾವಶ್ಯಕ” ಎಂದು ರಾಮದಾಸನು ಸೂಚಿಸಿದನು.

“ಹಾಗಲ್ಲ. ನಾನು ಮನೆಯಲ್ಲಿ ನಾಮೋಚ್ಚಾರಣೆಯನ್ನು ಮಾಡಲಾಗುವುದಿಲ್ಲ. ಪಾಠಶಾಲೆಗೆ ಹೋಗಬೇಕೆಂದು ಮನೆಯಲ್ಲಿ ಬಲಾತ್ಕರಿಸುತ್ತಾರೆ. ಪಾಠಶಾಲೆಗೆ ಹೋಗುವುದೆಂದರೆ ನನಗೆ ಬಹಳ ಬೇಸರ” ಎಂದನು ಹುಡುಗ.

ರಾಮದಾಸನು “ಪಾಠಶಾಲೆಗೆ ಹೋಗುವುದರಲ್ಲಿ ಕೆಡಕೇನು?” ಎಂದು ಕೇಳಿದನು.

ಹುಡುಗ: “ಅಯ್ಯೋ! ನನಗೆ ಶಾಲೆ ಸಾಕಾಗಿದೆ. ಯಾವಾಗಲೂ ಪುಂಡು ಮಾತನಾಡುವ ಹುಡುಗರ ಸಹವಾಸದಲ್ಲಿ ಬಿದ್ದು ನನ್ನ ಮನಸ್ಸು ಬಹಳ ಕೆಟ್ಟುಹೋಗಿದೆ. ನಾನು ಇನ್ನೆಂದಿಗೂ ಪಾಠಶಾಲೆಯೊಳಗೆ ಹೆಜ್ಜೆ ಇಡುವುದಿಲ್ಲ.”

ರಾಮದಾಸ: “ಹಾಗಾದರೆ ನೀನು ಪಾಠಶಾಲೆಗೆ ಹೋಗದೆ ಮನೆಯಲ್ಲಿ ಇದ್ದುಕೊಂಡೇ ಭಕ್ತಿಮಾರ್ಗವನ್ನನುಸರಿಸಿ ಪರಿಶುದ್ಧನಾಗಿರಬಹುದು. ನಿನ್ನ ತಂದೆ ತಾಯಿಗಳೊಡನೆ ಆಲೋಚಿಸದೆ, ಪ್ರಪಂಚವನ್ನು ಬಿಡಬೇಕೆಂದು ನಿರ್ಧರಿಸುವುದಕ್ಕೆ ನಿನಗೆ ಸಾಕಾದಷ್ಟು ವಯಸ್ಸಾಗಿಲ್ಲ. ಅವರು ಹೇಳಿದಂತೆ ನಡೆದುಕೊ. ಅವರು ಯಾವಾಗಲೂ ನಿನ್ನ ಹಿತಚಿಂತಕರು. (ಪವಿತ್ರನಾಮೋಚ್ಚಾರಣೆಯನ್ನು ಮಾತ್ರ ಬಿಡಬೇಡ. ನೀನು ಯಾರ ನಾಮವನ್ನು ಉಚ್ಚರಿಸುವೆಯೋ ಅವನಲ್ಲಿ ನಂಬಿಕೆ ಇಡು.) ನಿನ್ನ ಮನಸ್ಸನ್ನು ಕೆಡಿಸುವ ಹುಡುಗರ ಸಹವಾಸವನ್ನು ತ್ಯಜಿಸು.”

“ಹಿಂದಿರುಗಿ ಹೋಗೆಂದು ನನಗೆ ಹೇಳಬೇಡಿ. ನನ್ನ ತಂದೆ, ತಾಯಿ, ಗುರು ಸರ್ವವೂ ನೀವೇ!”

ಹೀಗೆ ಹೇಳಿ ಆ ಹುಡುಗನು ಗುಹೆಯಲ್ಲಿ ಕತ್ತಲಾದ ಒಂದು ಮೂಲೆಯಲ್ಲಿ ಕುಳಿತು ರಾಮನಾಮಜಪವನ್ನು ಮಾಡತೊಡಗಿದನು. ರಾಮದಾಸನು ಅವನ ಬಳಿಗೆ ಹೋಗಿ ಮತ್ತೊಮ್ಮೆ, ಕತ್ತಲಾಗುತ್ತಿದೆ ಮನೆಗೆ ಹೋಗು ಎಂದು ಹೇಳಿದನು. ಕೊಂಚಕಾಲ ಗಟ್ಟಿ ಮನಸ್ಸುಮಾಡಿ ಹುಡುಗನು ಊರಿಗೆ ಹೋಗಲು ಒಪ್ಪಲಿಲ್ಲ. ಕೊನೆಗೆ ತನ್ನ ತಂದೆತಾಯಿಗಳ ಬಳಿಗೆ ಹೋಗಲು ಒಪ್ಪಿಕೊಂಡನು. ಇಷ್ಟು

ಹೊತ್ತಿಗೆ ರಾತ್ರಿಯಾಗಿ ಬಹಳಕತ್ತಲೆಯಾಗಿದ್ದಿತು. ಆದುದರಿಂದ ಅವನನ್ನು ಊರೊಳಗೆ ಒಂದು ದೇವಾಲಯದ ಆವರಣದಲ್ಲಿರುವ ಅವನ ಮನೆಗೆ ತನ್ನ ಜೊತೆ ಯಲ್ಲಿ ಕರೆದುಕೊಂಡುಹೋಗಿಬಿಡುವುದಾಗಿ ರಾಮದಾಸನು ಹೇಳಿದನು.

ಹುಡುಗನಸಂಗಡ ಬೆಟ್ಟವನ್ನು ಇಳಿಯುತ್ತಿದ್ದಾಗ, ರಾಮದಾಸನ ಸ್ನೇಹಿತ ನೊಬ್ಬನು ತನ್ನ ಯಜಮಾನನ ಮನೆಯಲ್ಲಿ ನಡೆಯುವ ಕೀರ್ತನೆಗೆ ರಾಮದಾಸ ನನ್ನು ಕರೆದುಕೊಂಡು ಹೋಗಲು, ಲಾಂದ್ರವನ್ನು ತರುತ್ತ ಎದುರಾದನು. ರಾಮ ದಾಸನು ಹುಡುಗನನ್ನು ಆತನ ವಶಕ್ಕೆ ಒಪ್ಪಿಸಿ ಅವನನ್ನು ಮನೆಗೆ ಮುಟ್ಟಿಸಬೇ ಕೆಂದು ಹೇಳಿ ತಾನು ಕೀರ್ತನೆ ಕೇಳಲು ಹೋದನು.

ಮತ್ತೆ ಕೆಲವು ದಿನಗಳ ನಂತರ ಸುಮಾರು ಇಪ್ಪತ್ತುವರ್ಷದ ಇನ್ನೊಬ್ಬ ಕರ್ಣಾಟಕ ಬ್ರಾಹ್ಮಣ ಯುವಕನು ಸಂಜೆ ಮುಸುಕಿನಲ್ಲಿ ರಾಮದಾಸನಲ್ಲಿಗೆ ಬಂದು ತಾನು ತನ್ನ ಜೀವಮಾನವನ್ನು ರಾಮದಾಸನೊಂದಿಗೆ ಕಳೆಯುವುದಾಗಿ ತಿಳಿಸಿ ದನು. ಇವನೂ ಪಾಠಶಾಲೆಯಲ್ಲಿ ದುಸ್ಸಹವಾಸದಿಂದ ಬೇಸತ್ತು ಮನೆ, ಮಠ, ಬಂಧಗಳು, ಸ್ನೇಹಿತರು, ಎಲ್ಲರನ್ನೂ ತೊರೆದು ಬಂದಿದ್ದನು. ರಾಮದಾಸನು ಎಷ್ಟು ಪ್ರಯತ್ನಪಟ್ಟರೂ ಈ ಯುವಕನು ಹಠಹಿಡಿದು ತನ್ನ ಸ್ನೇಹಿತರಲ್ಲಿಗೆ ಹೋಗಲು ಒಪ್ಪಲಿಲ್ಲ. ಆ ರಾತ್ರಿಯನ್ನು ಗವಿಯಲ್ಲಿ ಕಳೆದನು. ಹಗಲುಹೊತ್ತಿ ನಲ್ಲೆಲ್ಲಾ ಬೆಟ್ಟದಮೇಲೆ ಸುಮ್ಮನೆ ಅಲೆದಾಡುತ್ತಿದ್ದು ರಾತ್ರಿಯಹೊತ್ತಿಗೆ ಗವಿಗೆ ಬರುತ್ತಿದ್ದನು. ಅವನು ಆಹಾರಕ್ಕಾಗಿ ಯಾವಪ್ರಯತ್ನವನ್ನೂ ಮಾಡುತ್ತಿರಲಿಲ್ಲ. ತನಗೆ ದೊರೆಯುತ್ತಿದ್ದ ಸ್ವಲ್ಪ ಹಾಲು ಮತ್ತು ಕೆಲವು ಬಾಳೆಹಣ್ಣುಗಳಲ್ಲಿ ರಾಮ ದಾಸನು ಅವನಿಗೆ ಒಂದು ಭಾಗವನ್ನು ಕೊಡುತ್ತಿದ್ದನು. ಈ ಉದಾಸೀನ ವಿರಕ್ತ ಜೀವನವನ್ನು ಈ ಯುವಕನು ಒಂದು ವಾರದವರೆಗೂ ಅನುಸರಿಸಿದನು. ಅವನು ಅಲ್ಲಿದ್ದ ಕೊನೆಯದಿನದ ರಾತ್ರಿ ಗವಿಗೆ ಬರಲಿಲ್ಲ. ಮಾರನೆಯ ಪ್ರಾತಃಕಾಲ ಬಂದಾಗ ಅವನ ಬಟ್ಟೆಗಳೆಲ್ಲಾ ಮಣ್ಣಿನ ಕಲೆಗಳಿಂದ ಮಾಸಿದ್ದುವು. ಅವನು ಆ ರಾತ್ರಿಯನ್ನು ಬೆಟ್ಟದಲ್ಲಿ ಬರಿಯ ನೆಲದಮೇಲೆ ಮಲಗಿ ಕಳೆದೆನೆಂದು ಹೇಳಿದನು. ಮಧ್ಯಾಹ್ನದ ಹೊತ್ತಿಗೆ ಗವಿಗೆ ನಾಲ್ಕುಜನ ಬಂದರು. ಇವರು ಆ ಯುವಕನ ಸ್ನೇಹಿತರು. ಇವನ ತಂದೆ ತಾಯಿಗಳು ಒಂದು ಹಳ್ಳಿಯಲ್ಲಿ ವಾಸಮಾಡುತ್ತ, ಯುವಕನನ್ನು ವಿದ್ಯಾಭ್ಯಾಸಕ್ಕಾಗಿ ಮಂಗಳೂರಿನಲ್ಲಿ ಬಿಟ್ಟಿದ್ದರು. ಅವನ ಸ್ನೇಹಿ ತರು ತಮ್ಮೊಡನೆ ಬರಬೇಕೆಂದು ಯುವಕನನ್ನು ಕೇಳಿಕೊಂಡರು. ಅವನು ಬರುವು ದಿಲ್ಲವೆಂದು ಕಟ್ಟುನಿಟ್ಟಾಗಿ ತಿರಸ್ಕರಿಸಿದನು. ಆಗ ಅವನಿಗೆ ಬುದ್ಧಿವಾದ ಹೇಳ ಬೇಕೆಂದು ಅವರು ರಾಮದಾಸನನ್ನು ಕೇಳಿಕೊಂಡರು. ತನ್ನ ಕೈಯಲ್ಲಾದಮ ಟ್ಟಿಗೂ ಅವನಿಗೆ ಬುದ್ಧಿವಾದವನ್ನು ಹೇಳಿದ್ದಾಯಿತೆಂದೂ, ಮನೆಗೆ ಹಿಂದಿರುಗು ವಂತೆ ಮಾಡಿದ ಪ್ರಯತ್ನವೆಲ್ಲವೂ ವಿಫಲವಾಯಿತೆಂದೂ ರಾಮದಾಸನು ಅವರಿಗೆ

ತಿಳಿಸಿದನು. ಆದರೂ ಆ ಯುವಕನನ್ನು ಹತ್ತಿರಕ್ಕೆ ಕರೆದು, ಅವನ ಭುಜಗಳ ಮೇಲೆ ಕೈಯನ್ನಿಟ್ಟು "ರಾಮು, ನಿನ್ನ ತಂದೆ ತಾಯಿಗಳಿಗೆ ಇನ್ನು ಹೆಚ್ಚು ಸಂಕಟ ಕೊಡಬೇಡ ದಯವಿಟ್ಟು ಮನೆಗೆ ಹೋಗು" ಎಂದು ಹೇಳಿದನು. ಕೂಡಲೆ, ಅದೇನು ಆಶ್ಚರ್ಯವೋ ಯುವಕನು ಸಮ್ಮತಿಸಿ ಹುಡುಕಿಕೊಂಡು ಬಂದಿದ್ದ ಸ್ನೇಹಿತರೊಂದಿಗೆ ಹೊರಟು ಹೋದನು.

## (iv) ನಿಜವಾದ ಸಾಕ್ಷಾತ್ಕಾರ - ಸಮದರ್ಶನ

ತನ್ನ ಜೀವನದ ಗಂಭೀರ ಪರಿವರ್ತನಾನಂತರ ಎರಡು ವರ್ಷಕಾಲದಲ್ಲಿ ರಾಮದಾಸನು ಹೃದಯಾಂತರಾಳಕ್ಕೆ ಹೊಕ್ಕು ಅವ್ಯಯನೂ ಶಾಂತಸ್ವರೂಪನೂ ಶಾಶ್ವತನೂ ಆದ ದೇವರ ಸಾಕ್ಷಾತ್ಕಾರಕ್ಕೆ ಹದವಾಗಿದ್ದನು. ಇನ್ನು ನಾಮ, ರೂಪ, ಬುದ್ಧಿ, ಸಂಕಲ್ಪ, ಇಂಥ ಹೃದಯದ ಭಾವನೆಗಳು, ಮನೋವ್ಯಾಪಾರ, ಇವೆಲ್ಲಕ್ಕೂ ಅತೀತನಾಗಬೇಕಾಗಿದ್ದಿತು. ಪ್ರಪಂಚವು ಮಸಕುಮಸಕಾದ ನೆರಳಿನಂತೆ, ಕನಸಿನಲ್ಲಿ ಕಂಡ ಶೂನ್ಯದಂತೆ ಭಾಸವಾಗುತ್ತಿದ್ದಿತು. ಆ ದಿವ್ಯದರ್ಶನ ಆಗ ಬಹುಮಟ್ಟಿಗೆ ಮನಸ್ಸಿನ ಕ್ಷೇತ್ರದ್ದು. ಇದು ಆದದ್ದು ಸರ್ವವ್ಯಾಪಿ ಸರ್ವಾಂತರ್ಯಾಮಿಯಾದ ಸ್ಥಿರ ಅನುರನಾದ ಪರಂಜ್ಯೋತಿಯಾದ ಸಹಜ ಪರಿಶುದ್ಧ ಶಾಂತಿಮಯ ಆನಂದಮಯ ಆತ್ಮನ ಮಹಿಮೆಗಾಗಿ ಹೊರತು ಬೇರೆ ಅಲ್ಲ.

ಪ್ರಾರಂಭದಲ್ಲಿ ಈ ಸಾಕ್ಷಾತ್ಕಾರ ದೃಶ್ಯ ಆಗಾಗ ಅದೃಶ್ಯವಾಗಿ, ಇಷ್ಟಅನಿಷ್ಟ, ಸುಖದುಃಖ, ಈ ಭೇದಭಾವಗಳಿಂದ ಕೂಡಿದ ಪ್ರಾಪಂಚಿಕ ಅನುಭವದ ವಿಷಯಗಳು ರಾಮದಾಸನನ್ನು ಕೆಳಕ್ಕೆ ಎಳೆಯುತ್ತಿದ್ದವು. ಆದರೆ ಅವನು ಆತ್ಮದ ನೀರವ ಶಾಂತಿಮಯಸ್ಥಿತಿಗೆ ಮರಳಿ ಸೆಳೆಯಲ್ಪಡುತ್ತಿದ್ದನು. ಕೊಂಚಕಾಲದಲ್ಲಿಯೇ ಪ್ರಾಪಂಚಿಕ ವಿಷಯಕ್ಕೆ ಮತ್ತೆ ಇಳಿಯದೆ ಸರ್ವದಾ ಆತ್ಮಾನುಸಂಧಾನದಲ್ಲಿ ಇರುವುದು ಸ್ಥಿರವಾಗಿ ನಿಂತಿತು. ಈ ಸಂದರ್ಭದಲ್ಲಿ ಇನ್ನೂ ಉತ್ತಮವಾದ ಒಂದು ಅವಸ್ಥೆ ಏರ್ಪಟ್ಟಿತು. ಇದುವರೆಗೂ ಅಂತರಂಗದಲ್ಲಿ ಕಾಣಿಸುತ್ತಿದ್ದ ಸಾಕ್ಷಾತ್ಕಾರ ದೃಶ್ಯ ಬಹಿರ್ಮುಖವಾಯಿತು. ಈ ಹೊಸ ದೃಶ್ಯ ಪ್ರಾರಂಭದಲ್ಲಿ ಆಗಾಗ್ಗೆ ಒಂದೊಂದುಸಲ ಭಾಸವಾಗಿ ಮುಗ್ಧಗೊಳಿಸುತ್ತಿದ್ದಿತು. ಇದೆಲ್ಲಾ ಪರಮಾತ್ಮನ ದಿವ್ಯಪ್ರೇಮದ ಪ್ರಭಾವ. ತನ್ನ ಆತ್ಮವೇ ಒಂದು ಹೂವು ಅರಳುವ ರೀತಿಯಲ್ಲಿ ವಿಕಾಸವಾಗಿ ಒಂದು ಮಿಂಚಿನಲ್ಲಿ ಎಂಬಂತೆ ವಿಶ್ವವನ್ನೆಲ್ಲ ಆವರಿಸಿ ವಸ್ತುಜಾತವನ್ನು ಪ್ರೇಮ ಮತ್ತು ಜ್ಯೋತಿಗಳ ಒಂದು ಸೂಕ್ಷ್ಮ ಪ್ರಭಾವಳಿಯಿಂದ ಅಪ್ಪಿದಂದೆ ರಾಮದಾಸನಿಗೆ ತೋರಿತು. ಈ ಅನುಭವ ಹಿಂದಿನಸ್ಥಿತಿಯ ಆನಂದವನ್ನು ಕೂಡ ಅತ್ಯಂತವಾಗಿ ಮೀರಿದ ಒಂದು ಆನಂದವನ್ನು ಕೊಡುತ್ತಿದ್ದಿತು. ಈ ಸ್ಥಿತಿಯಲ್ಲೀಗ ರಾಮದಾಸನು "ಸರ್ವವೂ ರಾಮನೇ; ರಾಮನೇ

ಪ್ರಪಂಚದ ಎಲ್ಲಜೀವ ಎಲ್ಲವಸ್ತುಗಳಂತೆ ಕಾಣಿಸಿಕೊಳ್ಳುತ್ತಿದ್ದಾನೆ)'' ಎಂದು ಸಂತೋಷಾತಿಶಯದಿಂದ ಕೂಗಲಾರಂಭಿಸಿದನು. ಈ ಸ್ಥಿತಿ ಕೆಲವು ತಿಂಗಳಕಾಲ ಬಂದು ಹೋಗುತ್ತಿದ್ದಿತು. ಇದು ಅದೃಶ್ಯವಾದಕೂಡಲೆ ರಾಮದಾಸನು ಸ್ವತ ಏವ ನಿರ್ಜನಪ್ರದೇಶಕ್ಕೆ ಓಡುತ್ತಿದ್ದನು. ಇದು ಇದ್ದಾಗ ರಾಮ ದಾಸನು ಸರ್ವರಲ್ಲಿಯೂ ಬೆರೆತು ದಿವ್ಯಪ್ರೇಮ ಆನಂದಗಳ ಮಹಿಮೆಯನ್ನು ಬೋಧಿಸುತ್ತಿದ್ದನು. ಭಗವಂತನ ಸಾಕ್ಷಾತ್ಕಾರದ ಅನುಭವ ಬಹಿರ್ಮುಖ ವಾದ ಮೇಲೆ ರಾಮದಾಸನ ಜೀವನಕರ್ತವ್ಯ ಪ್ರಾರಂಭವಾಯಿತು. ಈ ಸಾಕ್ಷಾ ತ್ಕಾರದ ಮಹತ್ವವೂ ಪೂರ್ಣತೆಯೂ ಕದರಿ ಗವಿಯಲ್ಲಿದ್ದಾಗ ಅವನಿಗೆ ಸ್ಪಷ್ಟ ವಾಯಿತು. ಈಗ ಈ ಅನುಭವ ಹೆಚ್ಚು ಸ್ಥಿರವೂ ಅವಿಚ್ಛಿನ್ನವೂ ಆಯಿತು. (ಭಗವಂತನ ರೂಪ ರಾಮದಾಸನ ಕಣ್ಣಿನಲ್ಲಿ ಬೆಳಗತೊಡಗಿತು. ಸರ್ವ ವಸ್ತು ಗಳಲ್ಲಿಯೂ ಬೇರೆ ಏನೂ ಇಲ್ಲದೆ ಭಗವಂತನ ರೂಪವೇ ಕಾಣಿಸುತ್ತಿದ್ದಿತು. ರಾಮದಾಸನಲ್ಲಿ ಆಗ ಆನಂದ ಅಲೆ ಅಲೆಯಾಗಿ ಏರತೊಡಗಿತು. ತಾನೂ ಸಹ, ಪ್ರಕಾಶ, ಶಕ್ತಿ, ಆನಂದಮಯವಾದ ಸ್ಥಿತಿಗೆ ಏರಿದುದು ಅವನಿಗೆ ವೇದ್ಯ ವಾಯಿತು.)

ರಾಮದಾಸನು ಗವಿಯನ್ನು ಬಿಟ್ಟು ಪುನಃ ಸಂಚಾರ ಹೊರಟನು. ತನ್ನ ಬಳಿ ಬಂದವರಿಗೆಲ್ಲಾ ತಾನು ಅನುಭವಿಸುತ್ತಿದ್ದ ಅನಿರ್ವಚನೀಯವಾದ ಆನಂದಸುಖ ವನ್ನು ಸೋಕಿಸುತ್ತಿದ್ದನು. ಇವನು ಹೋದೆಡೆಯಲ್ಲೆಲ್ಲಾ ಜನರು ತಂಡೋಪ ತಂಡವಾಗಿ ಬಂದು ಮುತ್ತುತ್ತಿದ್ದರು. ಈ ಜನಸಂದಣಿಯನ್ನು ನೋಡಿದಕೂಡಲೇ ರಾಮದಾಸನ ಶರೀರಾದ್ಯಂತವೂ ಭಗವಂತನ ಪ್ರೇಮದಿಂದ ಪುಳಕಿತವಾಗು ತ್ತಿದ್ದಿತು. ಇಂತಹ ಆನಂದಮಯ ಸ್ಥಿತಿಯಲ್ಲಿ ರಾಮದಾಸನು ಪ್ರೇಮಾನಂದ ಪೂರಿತವಾದ ಧ್ವನಿಯಲ್ಲಿ ಉಪನ್ಯಾಸ ಮಾಡುತ್ತಿದ್ದನು. ✓

---

## ಅಧ್ಯಾಯ ೨

### ಕೊಲ್ಲೂರು ; ಕಾಸರಗೋಡು.

### (i) ನಿಜವಾದ ತೃಪ್ತಿ.

ಕುಂದಾಪುರ ದಕ್ಷಿಣ ಕನ್ನಡ ಜಿಲ್ಲೆಯ ಉತ್ತರ ಭಾಗದಲ್ಲಿ ಒಂದು ಸಣ್ಣ ಊರು. ಪರಿಶುದ್ಧ ನಿಸ್ಸ್ವಾರ್ಥಜೀವರಾದ ಉಮಾನಾಥರಾಯರು ರಾಮದಾಸ ನನ್ನು ಕರೆದುಕೊಂಡು ಹೋಗಲು ಭಗವದ್ಭಕ್ತಳಾದ ತಮ್ಮ ಪತ್ನಿಯೊಡನೆ ಅಲ್ಲಿಂದ ಕದರಿ ಗವಿಗೆ ಬಂದರು. ರಾಮದಾಸನು ಕದರಿ ಗವಿಯನ್ನು ಬಿಟ್ಟು ಪ್ರಯಾಣ

ಮಾಡಿದನು. ಕೊಲ್ಲೂರಿನ ಪ್ರಸಿದ್ಧವಾದ ಮೂಕಾಂಬಿಕಾ ದೇವಾಲಯದಲ್ಲಿ ವಾಸಿಸುತ್ತಿದ್ದ ಒಬ್ಬ ಪೂಜ್ಯ ಸಾಧುವಿನ ದರ್ಶನವನ್ನು ರಾಮದಾಸನಿಗೆ ಮಾಡಿಸಿ ಕೊಡುವುದೇ ಉಮಾನಾಥರಾಯರ ಇಷ್ಟವಾಗಿದ್ದಿತು. ಗವಿಯನ್ನು ಬಿಟ್ಟು ಬಸ್ಸಿನಲ್ಲಿ ಪ್ರಯಾಣಮಾಡಿ ಸಾಯಂಕಾಲಕ್ಕೆ ಕುಂದಾಪುರವನ್ನು ಮುಟ್ಟಿದುದಾಯಿತು. ಉಮಾನಾಥರಾಯರು ತಮ್ಮ ಮನೆಯ ಎದುರಿನ ಕಟ್ಟಡದ ಮಹಡಿಯಲ್ಲಿ ಒಂದು ಪ್ರತ್ಯೇಕ ಕೊಟಡಿಯನ್ನು ರಾಮದಾಸನಿಗೆ ಒದಗಿಸಿಕೊಟ್ಟರು.

ರಾಮದಾಸನು ಉಮಾನಾಥರಾಯರ ಸುಖದಾಯಕ ಸಹವಾಸದಲ್ಲಿ ಒಂದೂವರೆ ತಿಂಗಳ ಕಾಲವನ್ನು ಆನಂದವಾಗಿ ಕಳೆದನು. ಉಮಾನಾಥರಾಯರು ನಿಜವಾಗಿ ತತ್ವಜ್ಞಾನಿ; ಡಂಭಾಚಾರವಿಲ್ಲದ ಸರಳಜೀವಿ; ಸ್ವಾರ್ಥತ್ಯಾಗದಿಂದ ಜನಸೇವೆಯನ್ನು ನಡೆಸುತ್ತಿದ್ದರು. ವೈದ್ಯವೃತ್ತಿಯಲ್ಲಿ ಬ್ರಿಟಿಷ್ ವಿಶ್ವವಿದ್ಯಾನಿಲಯದ ಪದವೀಧರರಾಗಿದ್ದರು. ತ್ಯಾಗಬುದ್ಧಿಯಿಂದ ಸರ್ಕಾರಿ ಅಧಿಕಾರವನ್ನು ಬಿಟ್ಟು ಒಂದು ಖಾಸಗಿ ಚಿಕಿತ್ಸಾಲಯದಲ್ಲಿ ಕೆಲಸಮಾಡುತ್ತಿದ್ದರು. ಹಗಲಿರುಳೆಂಬ ಭೇದವಿಲ್ಲದೆ ಯಾವ ಸಮಯದಲ್ಲಾದರೂ ಇವರಿಂದ ಚಿಕಿತ್ಸೆ ದೊರೆಯುತ್ತಿದ್ದುದರಿಂದ ಕುಂದಾಪುರದ ಜನರೆಲ್ಲರೂ ಇವರಲ್ಲಿ ಪ್ರೀತಿಗೌರವಗಳನ್ನಿಟ್ಟಿದ್ದರು. ಹಣಗಾರರು, ಬಡವರು, ಮುದುಕರು, ಹುಡುಗರು, ದೊಡ್ಡವರು, ಚಿಕ್ಕವರು, ಎನ್ನುವ ಭೇದವಿಲ್ಲದೆ ಎಲ್ಲರನ್ನೂ ಉಮಾನಾಥರಾಯರು ಒಂದೇ ಸಮನಾದ ದಯೆಯಿಂದಲೂ ಕರುಣೆಯಿಂದಲೂ ಕಾಣುತ್ತಿದ್ದರು. ತಾವು ಮಾಡಿದ ಚಿಕಿತ್ಸೆಗಾಗಿ ಬಡವರಿಂದ ಒಂದು ಕಾಸನ್ನೂ ಮುಟ್ಟುತ್ತಿರಲಿಲ್ಲ. ಧನಿಕರಿಂದಲೂ ಕೂಡ ತಮಗೆ ಆವಶ್ಯಕತೆ ಇದ್ದಹೊರತು ಹಣವನ್ನು ತೆಗೆದುಕೊಳ್ಳುತ್ತಿರಲಿಲ್ಲ. ಕೋಪ, ಮೋಸ, ದ್ವೇಷ ಮುಂತಾದ ದುರ್ಗುಣಗಳು ಅವರಲ್ಲಿರಲೇ ಇಲ್ಲ. ಅವರು ತುಂಬಾ ಉದಾರಿಗಳಾಗಿದ್ದರು. (ಪ್ರಪಂಚವೆಲ್ಲವೂ ಪರಮಾತ್ಮನ ಲೀಲೆಯೆಂದೂ, ಮನಸ್ಸಿಗೆ ಯಾವ ವಿಚಾರವನ್ನೂ ಹಚ್ಚಿಕೊಳ್ಳದೆ ಈ ಆಟವನ್ನು ನೋಡುತ್ತಿರುವುದೇ ಉತ್ತಮ ಜೀವನವೆಂದೂ ಅನೇಕಾವರ್ತಿ ಹೇಳುತ್ತಿದ್ದರು.) (ದೈವೀಪ್ರೇಮದ ಬೆಳಕು ಅವರ ಹೃದಯದಲ್ಲಿ ಯಾವಾಗಲೂ ಬೆಳಗುತ್ತಿದ್ದಿತು.) ಸಂದರ್ಭ ಒದಗಿದಾಗ ಪರರ ಕಷ್ಟಗಳನ್ನು ಪರಿಹರಿಸುವುದಕ್ಕೆ ಇವರು ಎಂತಹ ಕೀಳುತರದ ಸೇವೆಯನ್ನಾದರೂ ಮಾಡುತ್ತಿದ್ದರು. ಅವರಲ್ಲಿ ಮನೋರಂಜಕ ಸ್ವಭಾವವಿದ್ದಿತು. ಅವರು ಬಹಳ ಚಮತ್ಕಾರವಾಗಿಯೂ, ಹಾಸ್ಯವಾಗಿಯೂ, ಮಾತನಾಡುತ್ತಿದ್ದರು. ನಿಜವಾಗಿಯೂ ಪರಿಶುದ್ಧರಾದ ಉದಾತ್ತ ಧ್ಯೇಯಯುಕ್ತರಾದ ಭಗವದ್ಭಕ್ತರಾಗಿದ್ದರು.

ಒಂದು ತಿಂಗಳು ಕಳೆಯಿತು. ರಾಮದಾಸನು ಉಮಾನಾಥರಾಯರಿಗೆ ಕೊಲ್ಲೂರಿನ ಪ್ರಯಾಣದ ನೆನಪನ್ನು ಕೊಟ್ಟನು. ಪ್ರಯಾಣಕ್ಕೆ ಎಲ್ಲ ಸಿದ್ಧತೆಗಳೂ

ಏರ್ಪಾಡಾದುವು. ರಾಮದಾಸನೂ ಉಮಾನಾಥರಾಯರೂ ಮತ್ತೊಬ್ಬ ಸ್ನೇಹಿತರೂ ದೋಣಿಯಲ್ಲಿ ಕುಳಿತು ಕೊಲ್ಲೂರಿಗೆ ಹೋಗುವ ದಾರಿಗೆ ಬಂದರು. ಇಲ್ಲಿಂದ ದಟ್ಟವಾದ ಅರಣ್ಯಮಾರ್ಗದಲ್ಲಿ ಹೋಗಬೇಕಾಗಿದ್ದಿತು. ಇವರು ಒಂದು ಎತ್ತಿನ ಬಂಡಿಯನ್ನು ಹತ್ತಿದರು. ಕೊಲ್ಲೂರಿನವರೆಗೂ ವಿಶಾಲವಾದ ಅರಣ್ಯದಲ್ಲಿ ಎಡವು ತೊಡವುಗಳಿಂದ ಕೂಡಿದ ಒಂದು ಇಕ್ಕಟ್ಟಾದ ದಾರಿಯಲ್ಲಿ ಪ್ರಯಾಣಬೆಳಸಿದರು. ಅರಣ್ಯ ದುಷ್ಟಮೃಗಗಳಿಂದ ತುಂಬಿದ್ದಿತು. ದಾರಿಯಲ್ಲಿ ಯಾವ ತೊಂದರೆಯೂ ಇಲ್ಲದೆ ಇವರು ಕೊಲ್ಲೂರನ್ನು ಸೇರಿದರು.

ಕೊಲ್ಲೂರು ಕೊಡಚಾದ್ರಿ ಬೆಟ್ಟಗಳು ಎಂಬ ಹೆಸರಿನ ಎತ್ತರವಾದ ಪರ್ವತಗಳಿಂದ ಮೂರು ಕಡೆ ಆವೃತವಾಗಿರುವ ಪ್ರಸ್ಥಭೂಮಿಯಲ್ಲಿ ಒಂದು ಸಣ್ಣ ಗ್ರಾಮ. ಉನ್ನತ ಉದಗ್ರ ಶೈಲಗಳ ಮೇಲೆ ಬೆಳೆದಿರುವ ದೊಡ್ಡ ಮರಗಳ ದಟ್ಟವಾದ ಕಾಡು ಈ ಗ್ರಾಮಕ್ಕೆ ಒಂದು ವಿಧವಾದ ಗಾಂಭೀರ್ಯವನ್ನೂ ಸೊಬಗನ್ನೂ ಕೊಟ್ಟಿದೆ. ಊರಿನ ಮಧ್ಯದಲ್ಲಿ ಲೋಕಮಾತೆ ಮೂಕಾಂಬಿಕಾದೇವಿಯ ಆಲಯವಿದೆ. ಉಮಾನಾಥರಾಯರು ರಾಮದಾಸನನ್ನು ಸಾಧು ವಾಸವಾಗಿದ್ದ ಪ್ರಾಕಾರಕ್ಕೆ ನೇರವಾಗಿ ಕರೆದುಕೊಂಡುಹೋದರು. ರಾಮದಾಸನು ಸಾಧುವಿಗೆ ತಲೆಬಾಗಿ ನಮಸ್ಕರಿಸಿದನು. ಈ ಸಾಧುವಿಗೆ ಸುಮಾರು ಎಪ್ಪತ್ತು ವರ್ಷಕ್ಕೆ ಮೇಲ್ಪಟ್ಟು ವಯಸ್ಸಾಗಿದ್ದಿತು. ಕಣ್ಣುಗಳು ವಿಶಾಲವಾಗಿಯೂ ಸ್ವಲ್ಪ ಹಸುರು ಬಣ್ಣವಾಗಿಯೂ ಇದ್ದವು. ಇವುಗಳಲ್ಲಿ ಎಲ್ಲೋ ದೂರವಾದ ದೃಷ್ಟಿ ಇರುವಂತೆ ತೋರುತ್ತಿದ್ದಿತು. ಆದರೆ ಕನಿಕರಯುತವಾದ, ಸಂತೋಷಮಯವಾದ, ಹೊಳಪು ಕಾಣುತ್ತಿದ್ದಿತು. ಆತನ ಉದ್ದವಾದ ಬಿಳಿಯ ಗಡ್ಡವು ಆ ತೇಜಃಪುಂಜವಾದ ಮುಖಕ್ಕೆ ಪವಿತ್ರತೆಯನ್ನೂ ಜ್ಞಾನದ ಬೆಳಕನ್ನೂ ಕೊಡುವಂತಿದ್ದಿತು. ಆತನು ಒಂದು ಕೌಪೀನವನ್ನು ಮಾತ್ರ ಧರಿಸಿ ನೆಲದ ಮೇಲೆ ಪದ್ಮಾಸನದಲ್ಲಿ ಕುಳಿತಿದ್ದನು. ನಮ್ಮ ಯೋಗಕ್ಷೇಮವನ್ನು ವಿಚಾರಿಸಿ ಕೂಡಲೇ ಧರ್ಮವಿಚಾರವಾಗಿ ಮಾತನಾಡಲು ಪ್ರಾರಂಭಿಸಿದನು.

ಆತನು ಶ್ರೀಮದ್ಭಾಗವತ ಮತ್ತು ಇತರ ಗ್ರಂಥಗಳಿಂದ ಅನೇಕ ಕಥೆಗಳನ್ನು ಹೇಳಿದನು. ದೇವರ ಭಕ್ತಿ ಅಥವಾ ಪ್ರೇಮದ ವಿಚಾರದಲ್ಲಿ ಧಾರಾಳವಾಗಿ ಉಪನ್ಯಾಸ ಮಾಡಿದನು. ಈ ವಿಚಾರವನ್ನು ಹೇಳುವ ಉತ್ಸಾಹದಲ್ಲಿ ಆತನ ದೇಹ ಆಧ್ಯಾತ್ಮಿಕ ಆನಂದದಿಂದ ಕಂಪಿಸುತ್ತಿದ್ದಿತು. ಮಧ್ಯೆ ಮಧ್ಯೆ ಆತನು ಒಂದೆರಡು ನಿಮಿಷ ಕಣ್ಣನ್ನು ಮುಚ್ಚಿ ಮೌನವಾಗಿರುತ್ತಿದ್ದನು. ಆಗ ಆತನ ಮುಖದಮೇಲೆ ಅಪೂರ್ವವಾದ ದಿವ್ಯಪ್ರಭೆ ಕಾಣುತ್ತಿದ್ದಿತು. ಆತನು ತನ್ನ ಶರೀರವನ್ನು ನಾನಾ ಚೇಷ್ಟೆಮಾಡುವ ಕಪಿಯೆಂದು ವರ್ಣಿಸಿದನು.

ಆತನು ತನ್ನ ಶರೀರವನ್ನು ತೋರಿಸಿ "ಇಲ್ಲಿ ನೋಡಿ, ಈ ಕಪಿ ಅನೇಕಾವರ್ತಿ ತನ್ನ ಮನಸ್ಸು ಬಂದಂತೆ ಚೇಷ್ಟೆ ಮಾಡುತ್ತದೆ. ಈ ಅವಯವಗಳು ವಾತ ರೋಗದಿಂದ ಸೆಳೆದುಕೊಂಡು ಅಲುಗಾಡದಂತೆ ಆಗುವುವು" ಎಂದು ಹೇಳುತ್ತಾ, ಅನಂತರ ನಗುತ್ತಾ, "ಈ ಕಪಿ ಯಾವಾಗಲೂ ಬಹಳ ಚೇಷ್ಟೆ ಮಾಡುತ್ತದೆ" ಎನ್ನುವನು. ಆತನ ಕಾಲುಗಳು ಬಹಳ ಬಲಹೀನವಾಗಿದ್ದುವು. ಇತರರ ಸಹಾಯ ವಿಲ್ಲದೆ ನಡೆಯುವುದೇ ಕಷ್ಟವಾಗಿದ್ದಿತು. ಆತನು ಏಕಾಕಿ ಆದರೂ ಸದಾ ಸಂತೋಷದಿಂದಲೂ ತೃಪ್ತಿಯಿಂದಲೂ ಇದ್ದನು. ಪ್ರಪಂಚ ಜೀವನದ ವಿಚಾರ ದಲ್ಲಿ ಬಹಳ ಕಟುತರವಾಗಿ ಟೀಕೆ ಮಾಡುತ್ತಿದ್ದನು. ರಾತ್ರಿ ಬಹಳ ಹೊತ್ತಿನ ವರೆಗೂ ಗಹನ ವಿಷಯಗಳ ಮೇಲೆ ಮಾತನಾಡುತ್ತ ಎಲ್ಲರನ್ನೂ ನಿಲ್ಲಿಸಿಕೊಳ್ಳು ತ್ತಿದ್ದನು. ದೇವರ ಮಹಿಮೆಯ, ದೇವರ, ವಿಚಾರವಾಗಿ ಎಷ್ಟು ಮಾತನಾಡಿದರೂ ಆತನಿಗೆ ದಣಿವೇ ಆಗುತ್ತಿರಲಿಲ್ಲ. ಆತನು ಒಬ್ಬನೇ ಇದ್ದ ಎಲ್ಲ ಹೊತ್ತೂ ಸೀಸದ ಕಡ್ಡಿಯಿಂದ ರಾಮನಾಮವನ್ನು ಬರೆಯುತ್ತಿದ್ದನು. ಎಷ್ಟೋ ಪುಸ್ತಕಗಳು ಈ ರಾಮನಾಮದಿಂದ ತುಂಬಿದ್ದವು. ಈ ಸಾಧುವಿನ ಸಂಗಡ ಇದ್ದುದು ಒಟ್ಟನಲ್ಲಿ ಮೂರುದಿವಸ ಮಾತ್ರವೇ. ಎರಡನೆಯ ದಿವಸ ಕುರುಡನಾದ ಒಬ್ಬ ಯುವಕ ಸಾಧು ಬಂದನು. ಅವನನ್ನು ಒಬ್ಬ ವಯಸ್ಸಾದ ವಿಧವೆ ಕರೆದುಕೊಂಡುಬಂದಳು. ಈ ಸಾಧುವಿಗೆ ಸುಮಾರು ಇಪ್ಪತ್ತು ಇಪ್ಪತ್ತೆರಡು ವರ್ಷ ವಯಸ್ಸಿದ್ದಿರಬಹುದು. ಆತನ ಕಣ್ಣುಗುಡ್ಡೆಗಳಮೇಲೆ ಪರೆಗಳು ಬಂದು ಎರಡು ಕಣ್ಣೂ ಪೂರ್ತಿ ಕುರು ಡಾಗಿದ್ದುವು. ಡಾಕ್ಟರ್ ಉಮಾನಾಥರಾಯರು ಅವನ ಬಳಿ ಹೋಗಿ ಕಣ್ಣು ಗಳನ್ನು ಪರೀಕ್ಷಿಸಿ ಒಂದು ಸಾಧಾರಣ ಶಸ್ತ್ರ ಚಿಕಿತ್ಸೆಯಿಂದ ದೃಷ್ಟಿಬರುವುದೆಂದೂ ತಾವು ಅಷ್ಟನ್ನು ಮಾಡಲು ಸಿದ್ಧರಾಗಿರುವೆನೆಂದೂ ತಿಳಿಸಿದರು. ಸಾಧು ಅವರ ಕಡೆಗೆ ತಿರುಗಿ "ಸ್ವಾಮಿ, ನೀವು ಹೇಳುವುದೊಂದೂ ನನಗೆ ಬೇಡ. ದೇವರು ನನಗೆ ಕೊಟ್ಟಿರುವ ಭಾಗ್ಯದಿಂದ ಸಂಪೂರ್ಣ ತೃಪ್ತನಾಗಿದ್ದೇನೆ. ಅಂತರಂಗದೃಷ್ಟಿ ದೊರೆ ತಿರುವಾಗ ನಶ್ವರವಾದ ಬಾಹ್ಯದೃಷ್ಟಿಯಿಂದ ನನಗೇನಾಗಬೇಕು ? ಬಾಹ್ಯದೃಷ್ಟಿ ಒಂದು ಬಲೆ. (ದೇವರು ನನ್ನ ಮೇಲೆ ಸಂಪೂರ್ಣ ಕೃಪೆಯನ್ನಿಟ್ಟು, ನನ್ನ ಅಂತರಂಗ ದೃಷ್ಟಿ ಶುದ್ಧವಾಗಿಯೂ ಆನಂದದಾಯಕವಾಗಿಯೂ ಇರುವುದಕ್ಕಾಗಿಯೇ ನನ್ನ ಬಾಹ್ಯದೃಷ್ಟಿಯನ್ನು ಹೋಗಲಾಡಿಸಿದ್ದಾನೆ.) (ಸರ್ವರ ಹೃದಯದಲ್ಲೂ ವಾಸಿಸುವ ದೇವರಧ್ಯಾನದಲ್ಲಿ ನಾನು ಸಂತೋಷವಾಗಿಯೂ ಸುಖವಾಗಿಯೂ ಇದ್ದೇನೆ. ಅವನು ನನ್ನನ್ನು ಯಾವಾಗಲೂ ಅವನ ಇಚ್ಛಾನುಸಾರಿಯಾಗಿ ಇರಿಸಿರಲಿ)" ಎಂದನು.

ಆತನು ಹೀಗೆ ಹೇಳುತ್ತಿದ್ದಾಗ ದೃಷ್ಟಿ ಶೂನ್ಯವಾಗಿದ್ದ ಆತನ ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬಿ, ಆತನ ಮುಖ ಅದ್ಭುತವಾದ ಪ್ರಭೆಯಿಂದ ಹೊಳೆಯುತ್ತಿದ್ದಿತು.

ಈ ಸಾಧುಗಳ ಸಹವಾಸದಲ್ಲಿ ಮೂರು ದಿನ ಆನಂದಮಯವಾಗಿ ಕಳೆದು ಹೋದವು. ಕೊಲ್ಲೂರು ಗ್ರಾಮದಿಂದ ಹೊರಡುವುದಕ್ಕೆ ಮುಂಚೆ ರಾಮದಾಸನು ತನ್ನ ಸಂಗಡಿಗರೊಡನೆ ಶ್ರೀ ಮೂಕಾಂಬಿಕಾ ದೇವಾಲಯಕ್ಕೆ ಹೋಗಿದ್ದು ನಂತರ ಕುಂದಾಪುರಕ್ಕೆ ಹಿಂದಿರುಗಿದನು. ಉಮಾನಾಥರಾಯರ ಸಂಗಡ ಒಂದು ಪಕ್ಷ ಕಾಲ ಇದ್ದು, ರಾಮದಾಸನು ಮಂಗಳೂರಿಗೆ ಪ್ರಯಾಣಮಾಡಿದನು. ದಾರಿಯಲ್ಲಿ ಅವನು ಎರಡು ದಿನ ಉಡುಪಿಯಲ್ಲಿ ತಂಗಿದನು. ಪರಿಶುದ್ಧಜೀವಿಯಾದ ಆನಂದ ರಾಯರೆಂಬವರನ್ನು ಸಂಧಿಸಿದನು. ಇವರು ಕೆಲಸದಿಂದ ನಿವೃತ್ತರಾದಮೇಲೆ ತಪಶ್ಚರ್ಯದಲ್ಲಿ ನಿರತರಾಗಿ ಸಾತ್ವಿಕರಾಗಿದ್ದರು. ಇವರ ಸಹವಾಸದಲ್ಲಿ ರಾಮ ದಾಸನಿಗೆ ಅತ್ಯಂತ ಆನಂದ. ಇವರು ತಾವು ಮನನಮಾಡಿದ್ದ ವೇದಾಂತ ಗ್ರಂಥಗಳಿಂದ ಉತ್ತಮವಾದ ಭಾಗಗಳನ್ನು ಆರಿಸಿ ಓದಿಹೇಳಿದರು. ಮುಖ್ಯ ವಾಗಿ ಅವರು ರಾಮದಾಸನಿಗೆ ವೇದಾಂತದ ಸಾರವನ್ನೆಲ್ಲಾ ಅರೆದು ಹೊಯ್ದರು. ಅವರು ಪೂರ್ಣ ಪ್ರೇಮಕರುಣಾಮಯರಾಗಿದ್ದರು. ಈ ಸಂದರ್ಭದಲ್ಲಿ ರಾಮ ದಾಸನ ಪೂರ್ವಾಶ್ರಮದ ಕುಟುಂಬದವರೂ ಮತ್ತು ಬಂಧುಗಳೂ ಹಾಗೆಯೇ ಇತರರೂ ಅವನಲ್ಲಿ ಒಂದೇಸಮನಾಗಿ ತೋರಿಸಿದ ಪ್ರೀತಿ, ವಿಶ್ವಾಸ, ಆದರ, ಇವುಗಳ ವಿಚಾರವನ್ನು ಅವನು ಸ್ಮರಿಸದೆ ಇರಲಾರನು.

ಉಡುಪಿಯಲ್ಲಿ ರಾಮದಾಸನು ಸ್ನೇಹಿತರೊಂದಿಗೆ ದೂರದಲ್ಲಿದ್ದ ಒಂದು ನೀರಿನ ಚಿಲುಮೆಗೆ ಹೋಗಿ ಸ್ನಾನಮಾಡಿದ್ದಲ್ಲದೆ ದಕ್ಷಿಣ ಹಿಂದೂಸ್ಥಾನದ ಪ್ರಸಿದ್ಧ ಮತಾಚಾರ್ಯರಾದ ಶ್ರೀ ಮಧ್ವಾಚಾರ್ಯರಿಂದ ಪ್ರತಿಷ್ಠಿತವಾದ ಶ್ರೀಕೃಷ್ಣ ದೇವಾಲಯಕ್ಕೆ ಹೋಗಿ ದೇವರ ದರ್ಶನವನ್ನು ಪಡೆದನು.

## (ii) ಭಗವನ್ನಾಮದ ಶಕ್ತಿ

ಉಡುಪಿಯಲ್ಲಿ ಎರಡು ದಿವಸ ಇದ್ದು ರಾಮದಾಸನು ಮಂಗಳೂರಿಗೆ ಪ್ರಯಾಣಮಾಡಿದನು. ಅವನು ಇಲ್ಲಿ ಇದ್ದುದು ಕೂಡ ಬಹಳ ಸ್ವಲ್ಪಕಾಲವೇ. ರಾಮದಾಸನ ಪೂರ್ವಾಶ್ರಮದ ಅಣ್ಣ ಪಿ. ಆನಂದರಾಯರು ಮಂಗಳೂರಿಗೆ ದಕ್ಷಿಣದಿಕ್ಕಿನಲ್ಲಿರುವ ತಮ್ಮ ವಾಸದ ಊರು ಕಾಸರಗೋಡಿಗೆ ಬರಬೇಕೆಂದು ರಾಮದಾಸನನ್ನು ಆದರದಿಂದ ಕರೆದರು. ರಾಮದಾಸನ ಇಷ್ಟದಂತೆ ಆತನ ವಾಸ ಕ್ಕಾಗಿ, ಮೂರು ದೇವಸ್ಥಾನಗಳ ಮಧ್ಯದಲ್ಲಿ ಹೊಸದಾಗಿ ಸಿದ್ಧವಾಗಿದ್ದ ಧರ್ಮ ಶಾಲೆಯಲ್ಲಿ ಒಂದು ಕೊಟಡಿಯನ್ನು ಬಿಡಿಸಿಕೊಟ್ಟರು. ಈ ದೇವಸ್ಥಾನಗಳ ಸಮೀಪದಲ್ಲಿ ಎರಡು ಕೆರೆ ಇವೆ. ರಾಮದಾಸನು ಇವುಗಳಲ್ಲಿ ಪ್ರಾತಃಸ್ನಾನ ಮಾಡುತ್ತಿದ್ದನು. ಆನಂದರಾಯರು ದಯಾಶಾಲಿಗಳು; ಪ್ರೇಮಪೂರಿತರು. ರಾಮದಾಸನಿಗೆ ಅನುಕೂಲಗಳನ್ನು ಒದಗಿಸಿಕೊಡುವುದರಲ್ಲಿ ತುಂಬ ಆಸಕ್ತಿ ವಹಿ

ಸುತ್ತಿದ್ದರು. ರಾಮದಾಸನಿಗೆ ಆವಶ್ಯವಾದ ಕೆಲಪಾತ್ರೆ ಪದಾರ್ಥಗಳನ್ನೂ ಅವರು ಈ ಕೊಟಡಿಯಲ್ಲಿ ತಂದು ಇಟ್ಟಿದ್ದರು. ಅವು, ಒಂದು ಮೃದುವಾದ ಚಾಪೆ, ಇದರ ಮೇಲೆ ಮೃದುವಾದ ಒಂದು ಕೃಷ್ಣಾಜಿನ, ಎರಡು ಕಾವಿಬಣ್ಣದ ಖಾದಿ ಬಟ್ಟೆಗಳು, ಬಂದವರು ಕುಳಿತುಕೊಳ್ಳಲು ಎರಡು ಚಾಪೆಗಳು, ಒಂದು ಲಾಂದ್ರ, ತಾಳೆಗರಿಯ ಒಂದು ಕೊಡೆ, ಒಂದು ತಾಮ್ರದ ತಂಬಿಗೆ ಮತ್ತು ಕೆಲವು ಮತ ಗ್ರಂಥಗಳು. ರಾಮಮಂತ್ರವನ್ನು ಕನ್ನಡದಲ್ಲಿ ದಪ್ಪನೆಯ ಅಕ್ಷರಗಳಲ್ಲಿ ಬರೆದಿದ್ದ ಒಂದು ರಟ್ಟನ್ನು ಬೇರೆ ರಾಮದಾಸನು ಕುಳಿತುಕೊಳ್ಳುವ ಸ್ಥಳದಮೇಲುಗಡೆ ಗೋಡೆಗೆ ಹೊಡೆದಿದ್ದಿತು. ಈ ವಸ್ತುಗಳಿಗೆ ಸಂಬಂಧಪಟ್ಟಂತೆ ಒಂದು ಅಪೂರ್ವ ಘಟನೆ ನಡೆದದ್ದರಿಂದ ಈ ವಿವರಗಳನ್ನು ಕೊಟ್ಟಿರುವುದಾಗಿದೆ. ಹಾಲು, ಹಣ್ಣು, ಬರಿಯ ಅನ್ನ, ಇಷ್ಟುಮಾತ್ರ ರಾಮದಾಸನ ಆಹಾರವಾಗಿದ್ದುವು.

ಮೊದಲ ಕೆಲವು ದಿವಸ ರಾಮದಾಸನನ್ನು ನೋಡುವುದಕ್ಕಾಗಿ ಜನಗಳು ಗುಂಪು ಗುಂಪಾಗಿ ಬಂದು ಸೇರುತ್ತಿದ್ದರು. ಇವರಲ್ಲಿ ಹೆಚ್ಚು ಮಂದಿ ವಿದ್ಯಾರ್ಥಿಗಳು. ಶ್ರದ್ಧಾಳುಗಳಾದ ಅನೇಕ ಭಗವದ್ಭಕ್ತರೂ ರಾಮದಾಸನನ್ನು ನೋಡುವುದಕ್ಕಾಗಿ ಬರುತ್ತಿದ್ದರು; ರಾತ್ರಿ ರಾಮದಾಸನನ್ನು ಕೀರ್ತನಕೂಟಗಳಿಗೆ ಕರೆದುಕೊಂಡು ಹೋಗುತ್ತಿದ್ದರು. ಇವುಗಳಲ್ಲಿ ಹಿಂದೂಸ್ಥಾನದ ಮಹಾತ್ಮರು ರಚಿಸಿದ ಭಕ್ತಿರಸಪ್ರಧಾನವಾದ ಕೃತಿಗಳನ್ನು ಹಾಡುತ್ತಿದ್ದರು. ಆ ಕೃತಿಗಳಲ್ಲಿ ಉದಾತ್ತ ವೇದಾಂತದ ಸಾರವೇ ತುಂಬಿರುತ್ತಿದ್ದಿತು; ಅವು ಭಕ್ತಿ, ಜ್ಞಾನ, ವೈರಾಗ್ಯವನ್ನು ವಿವರಿಸುವುವು. ಅವು ನೇರವಾಗಿ ಹೃದಯವನ್ನು ಮುಟ್ಟುವ ರೀತಿಯಿಂದ, ಮನಸ್ಸು ಉಚ್ಚಸ್ಥಿತಿಗೇರಿ ದೈವಭಕ್ತಿಯಿಂದ ತುಂಬಿಹೋಗುತ್ತಿದ್ದಿತು. ಕಬೀರ್, ತುಕಾರಾಂ ಮಹಾರಾಜ್, ಇವರಿಂದ ರಚಿಸಲ್ಪಟ್ಟ ಕೃತಿಗಳು ಅತ್ಯಂತ ಜನಪ್ರಿಯವಾಗಿದ್ದವು. ಇವು ಸುಬದ್ಧವಾದ ಛಂದಸ್ಸು, ಉದಾತ್ತಧ್ಯೇಯ, ಮತ್ತು ಪರಿಶುದ್ಧ ಭಾವಗಳಿಂದ ಮಿಳಿತವಾಗಿರುವ ಆತ್ಮ ವಿಜ್ಞಾನದ ಅಪೂರ್ವ ರತ್ನಗಳಾಗಿವೆ.

ಮಧ್ಯಾಹ್ನಕಾಲದಲ್ಲಿ ರಾಮದಾಸನು ಆಂಗ್ಲಭಾಷೆಗೆ ಭಾಷಾಂತರಿಸಿರುವ ತುಲಸೀದಾಸ ರಾಮಾಯಣವನ್ನು ಆ ಕೊಠಡಿಯಲ್ಲಿ ತುಂಬಿ ಕಿಕ್ಕಿರಿದಿದ್ದ ಭಕ್ತರಿಗೆ ಸ್ಥಳೀಯಭಾಷೆಗೆ ತರ್ಜುಮೆ ಮಾಡಿ ಹೇಳುತ್ತಿದ್ದನು. ತುಲಸೀದಾಸರು ಈ ಪುಸ್ತಕದಲ್ಲಿ ತುಂಬಿದ್ದ ಅಮೃತಸಾರವನ್ನು ಆ ಜನರು ಆದರದಿಂದ ಸವಿದು ತೃಪ್ತರಾಗುತ್ತಿದ್ದರು.

ತನ್ನ ಜೀವನದಲ್ಲಿ ಆಶಾಭಂಗದಿಂದ ಬೇಸರಪಟ್ಟಿದ್ದ ಒಬ್ಬ ಯುವಕನು ಒಂದು ದಿವಸ ಬಂದು ತನ್ನ ತಾಪತ್ರಯವನ್ನೆಲ್ಲಾ ರಾಮದಾಸನಿಗೆ ತಿಳಿಸಿದನು. (ರಾಮಮಂತ್ರವನ್ನು ಜಪಿಸು, ಎಲ್ಲ ಸರಿಹೋಗುತ್ತದೆ) ಎಂದು ರಾಮದಾಸನು ಅವನಿಗೆ ಬುದ್ಧಿವಾದ ಹೇಳಿದನು. ಅಲ್ಲಿಂದಾಚೆಗೆ ಈ ಸ್ನೇಹಿತನು ಪ್ರತಿ ದಿವಸವೂ

ಬರುವನು. ಅವನು ರಾಮನಾಮ ಜಪದಲ್ಲಿ ಮಗ್ನನಾಗಿರುವುದು ಕಾಣುತ್ತಿದ್ದಿತು. ಕೆಲವು ದಿವಸಗಳ ನಂತರ ಈ ಸ್ನೇಹಿತನು ಹಸನ್ಮುಖಿಯಾಗಿ ಬಂದು ತನಗೆ ಒದಗಿದ್ದ ಆಪತ್ತು ಯಾವ ಕೆಡಕನ್ನೂ ಮಾಡದೆ ಪರಿಹಾರವಾಯಿತೆಂದು ತಿಳಿಸಿದನು. ಸರ್ವಶಕ್ತಿಪೂರಿತವಾದ ಆ ನಾಮಕ್ಕೆ ಜಯವಿರಲಿ! (ಅಜ್ಞಾನ, ನೋವು, ದುಃಖಗಳನ್ನು ಕಳೆಯುವ ಶಕ್ತಿ ಭಗವನ್ನಾಮಕ್ಕೆ ನಿಸ್ಸಂದೇಹವಾಗಿಯೂ ಇದೆ.) ಆದುದರಿಂದಲೇ ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ಸಾಧುಗಳು ಎಂದಿಗೂ ಬೇಸರಪಡದೆ ಭಗವನ್ನಾಮ ಮಹಿಮೆಯನ್ನು ಕೊಂಡಾಡುತ್ತಿರುವುದು.

ಕೆಲಸದಿಂದ ನಿವೃತ್ತರಾಗಿದ್ದ ಇಬ್ಬರು ಮುದುಕರು ಒಂದು ದಿವಸ ಮುಂಜಾನೆ ರಾಮದಾಸನನ್ನು ನೋಡಲು ಬಂದರು. ಅವರು ತಮ್ಮ ಗೃಹಕೃತ್ಯದ ತಾಪತ್ರಯದ ವಿಚಾರವಾಗಿ ತಮ್ಮ ತಮ್ಮಲ್ಲಿಯೇ ಮೆಲ್ಲನೆ ಮಾತನಾಡತೊಡಗಿದರು.

"ಮನೆಗೆ ಹುಲ್ಲುಹೊದಿಸುವ ಕಾಲಬಂದಿದೆ. ಅದಕ್ಕಾಗಿ ಹುಲ್ಲಿನ ಹೊರೆಗಳಿಗಾಗಿ ಎಷ್ಟು ಪ್ರಯತ್ನ ಪಡುತ್ತಿದ್ದರೂ ಹುಲ್ಲುಮಾರುವವರೇ ಕಾಣಿಸುತ್ತಿಲ್ಲ. ಹುಲ್ಲು ದೊರೆಯಲಿಲ್ಲ; ನನಗೆ ಬಹಳ ತೊಂದರೆಯಾಗಿದೆ" ಎಂದು ಒಬ್ಬನು ಹೇಳಿದನು.

"ಇದೇನು ಮಹಾ! ನನ್ನ ತೊಂದರೆ ಇನ್ನೂ ಹೆಚ್ಚು. ನಮ್ಮ ಮನೆಯ ಮುಂದಣ ಗೇಟು ರಿಪೇರಿಯಾಗಬೇಕು. ಪೋಲಿ ಎಮ್ಮೆಗಳು ಒಳಕ್ಕೆ ನುಗ್ಗಿ, ನಾನು ನೆಟ್ಟಿರುವ ಎಲ್ಲಗಿಡಗಳನ್ನೂ ನಾಶಮಾಡುತ್ತವೆ. ಬಡಗಿಯವರಿಗೆ ಗೊತ್ತು ಮಾಡಿದೆ. ಅವರು ಕೈಯಿಂದ ನುಣುಚಿಕೊಂಡು ತಪ್ಪಿಸಿಕೊಂಡರು. ರಾತ್ರಿಯೆಲ್ಲಾ ಇದೇ ಯೋಚನೆಯಿಂದ ನಿದ್ದೆ ಬರುತ್ತಿಲ್ಲ'' ಎಂದು ಮತ್ತೊಬ್ಬನು ಹೇಳಿದನು.

ಹೀಗೆ ಕೊನೆಮೊದಲಿಲ್ಲದೆ ತಾಪತ್ರಯಗಳ ಮಾತು. ರಾಮದಾಸನು ಕೊಂಚಕಾಲ ಅವರ ತಾಪತ್ರಯವನ್ನು ಕುರಿತ ಈ ನಿಸ್ಸಂಕೋಚ ಸಂಭಾಷಣೆಯನ್ನು ಕೇಳುತ್ತಿದ್ದು, ಅವರ ಸಂಭಾಷಣೆಗೆ ಸಂಬಂಧ ಪಡದ ತಾನು ಇಲ್ಲದಿದ್ದರೆ ಅವುಗಳ ವಿಷಯವಾಗಿ ಮಾತನಾಡಲು ಅವರಿಗೆ ಅನುಕೂಲವೆಂದು ಗ್ರಹಿಸಿ, ಅವರನ್ನೇ ಬಿಟ್ಟು, ಕೊಟಡಿಯಿಂದ ಹೊರಗೆ ಮೆಲ್ಲಗೆ ಪಾರಾಗಿ, ಊರ ಹೊರಗಿರುವ ಒಂದು ಬೆಟ್ಟದಮೇಲಕ್ಕೆ ಜಾಗ್ರತೆಯಾಗಿ ಹೆಜ್ಜೆಹಾಕುತ್ತ ಹೊರಟುಹೋದನು. ಒಂದು ಗಂಟೆಯಕಾಲ ಅಲ್ಲಿ ಇಲ್ಲಿ ತಿರುಗಿ ತನ್ನ ಕೊಟಡಿಗೆ ಮರಳಿ ಬಂದನು. ಆಗ ಆ ಇಬ್ಬರು ವ್ಯಕ್ತಿಗಳೂ ಇರಲಿಲ್ಲ; ಹೊರಟುಹೋಗಿದ್ದರು. ಅದೇ ದಿವಸ ಸಾಯಂಕಾಲ ಅವರಿಬ್ಬರೂ ಮತ್ತೆ ಬಂದು ತಮ್ಮ ಗೃಹಕೃತ್ಯಗಳ ತೊಂದರೆಯ ವಿಷಯವಾಗಿ ಅಲ್ಲಿ ರಾಮದಾಸನ ಎದುರಲ್ಲಿ ಪ್ರಸ್ತಾಪಿಸಿದ ಅಚಾತುರ್ಯಕ್ಕಾಗಿ ಕ್ಷಮೆ ಬೇಡಿದರು.

ರಾಮುದಾಸನು ತನ್ನಿಂದ ಆದಷ್ಟು ಸವಿಯಾದ ರೀತಿಯಲ್ಲಿ " ಈ ಕೊಟಡಿ ಯೊಳಕ್ಕೆ ಸರ್ವರೂ ಬರಬಹುದು. ಗೃಹಕೃತ್ಯಗಳ ತೊಂದರೆಯಿಂದ ನರಳುತ್ತಿರುವವರೂ ಸಹ ಧಾರಾಳವಾಗಿ ಬಂದು ದೇವರ ಧ್ಯಾನದಿಂದ ಶಾಂತಿ ಸಮಾಧಾನಗಳನ್ನು ಹೊಂದಬಹುದು. ಅದಕ್ಕೆ ಪ್ರತಿಯಾಗಿ ತಮ್ಮ ಗೃಹಕೃತ್ಯದ ತೊಂದರೆಗಳ ಮೂಟೆಯನ್ನು ತಂದು ಅದನ್ನು ಬಿಚ್ಚಿ ಹರಡಿ ಕಾಲಕಳೆದರೆ, ಅವರು ತಮಗೆ ಬೇಕಾಗಿರುವ ಮತ್ತು ಈ ಕೊಟಡಿಯಲ್ಲಿ ದೊರೆಯಬಹುದಾದ ಶಾಂತಿಯನ್ನು ಕಳೆದುಕೊಂಡಂತೆ ಆಗುತ್ತದೆ" ಎಂದು ತಿಳಿಸಿದನು. ರಾಮುದಾಸನು ಹೇಳಿದ್ದನ್ನು ಅವರಿಬ್ಬರೂ ಏಕಕಂಠದಿಂದ ಒಪ್ಪಿ ಮುಂದೆ ಈರೀತಿ ಅಚಾತುರ್ಯಕ್ಕೆ ಆಸ್ಪದಕೊಡುವುದಿಲ್ಲವೆಂದು ಮಾತುಕೊಟ್ಟರು.

## (iii) (ದೇವರು ಎಲ್ಲ ರೂಪಗಳನ್ನೂ ಧರಿಸುತ್ತಾನೆ)

ಇನ್ನೊಂದು ಆತ್ಯಾಶ್ಚರ್ಯಕರವಾದ ಅಪೂರ್ವಘಟನೆ ರಾಮುದಾಸನಿಗೆ ಒದಗಿತು. ಅದು ವಿವರವಾಗಿ ತಿಳಿಸಲು ಅರ್ಹವಾದದ್ದು. ಒಂದು ಮಳೆಯ ದಿನ ರಾತ್ರಿ ಸುಮಾರು ಹತ್ತು 1ಗಂಟೆಸಮಯದಲ್ಲಿ ನೋಡುವುದಕ್ಕೆ ವಿಚಿತ್ರನಾಗಿದ್ದ ಒಬ್ಬ ವ್ಯಕ್ತಿ ಕೊಟಡಿಯೊಳಕ್ಕೆ ಬಂದನು. ಅವನು ಧರಿಸಿದ್ದ ವಸ್ತ್ರಗಳೆಲ್ಲಾ ಚಿಂದಿಚಿಂದಿಯಾಗಿದ್ದವು. ಆತನ ಕೂದಲು ಕೆದರಿದ್ದವು. ಒಂದು ಒರಟಾದ ತೆಂಗಿನಮಟ್ಟೆಯ ದಬ್ಬೆಯಿಂದ ನೇತಾಡುತ್ತಿದ್ದ ಒಂದು ಸಣ್ಣ ಗಂಟು ಅವನಲ್ಲಿದ್ದಿತು. ಅವನು ಬುದ್ಧಿಕೆಟ್ಟವನಂತೆ ಕಾಣುತ್ತಿದ್ದನು; ಒಳಗೆ ಬಂದು ರಾಮುದಾಸನ ಹತ್ತಿರ ಕುಳಿತುಕೊಂಡನು.

" ಈ ರಾತ್ರಿಯನ್ನು ನಾನು ಇಲ್ಲಿ ಕಳೆಯಬಹುದೆ ? " ಎಂದು ವಿಲಕ್ಷಣವಾದ ರಾಗವಾದ ಧ್ವನಿಯಲ್ಲಿ ಕೇಳಿದನು. ಅಗತ್ಯವಾಗಿ ಆಗಬಹುದೆಂದು ರಾಮುದಾಸನು ಉತ್ತರಕೊಟ್ಟನು.

ಆತನು ಚಾಪೆಯಮೇಲೆ ಕುಳಿತುಕೊಂಡು ತನ್ನಲ್ಲಿದ್ದ ಗಂಟನ್ನು ಬಿಚ್ಚಿದನು. ಅದರಲ್ಲಿ ನಾನಾಬಣ್ಣದ ಚಿಂದಿ ಚೂರುಗಳಿದ್ದವು. ಅವುಗಳನ್ನು ನೋಡಿದರೆ ವಿಸ್ಮಯವಾಗುವಂತಿದ್ದಿತು. ಅವನು ಅವನ್ನೆಲ್ಲಾ ನೆಲದಮೇಲೆ ಹರಡಿ ರಾಮುದಾಸನ ಕಡೆ ನೋಡುತ್ತಾ ವಿನೋದವಾಗಿ ನಕ್ಕನು.

" ಓ ಸ್ವಾಮಿ ! ನೀನು ವಿಚಿತ್ರ ವೇಷಗಳಲ್ಲಿ ಕಾಣಿಸಿಕೊಳ್ಳುತ್ತೀಯೆ " ಎಂದು ರಾಮುದಾಸನು ಮನಸ್ಸಿನಲ್ಲಿ ಯೋಚಿಸಿದನು. ಆ ವಿಚಿತ್ರ ಅತಿಥಿಯು ಸ್ವಲ್ಪ ಹೊತ್ತಾದ ನಂತರ ಆ ಚೂರುಗಳನ್ನೆಲ್ಲಾ ಸೇರಿಸಿ ಮತ್ತೆ ಗಂಟು ಕಟ್ಟಿದನು. ನಂತರ ರಾಮುದಾಸನ ಬಳಿಗೆ ಬಂದು "ನೀನೇ ದಯಾಳು ನಿರ್ಮಲಚಿತ್ತ ಗೋವಿಂದ ನಿಗಮಗೋಚರ ಮುಕುಂದ" ಎಂಬ ಜನಪ್ರಿಯವಾದ ಕನ್ನಡ

ಕೀರ್ತನೆಯನ್ನು ತನ್ನದೇ ಆದ ಆವೇಶಪೂರಿತವಾದ ಕರುಣಾಜನಕ ಧಾಟಿಯಲ್ಲಿ ಹಾಡಿದನು. ಕನ್ನಡದಲ್ಲಿಯೇ ಮಾತನ್ನಾಡುತ್ತಿದ್ದ ಆತನು ಹಾಡನ್ನು ಹಠಾತ್ತಾಗಿ ನಿಲ್ಲಿಸಿ ರಾಮದಾಸನ ಮುಖವನ್ನು ನೇರವಾಗಿ ನೋಡುತ್ತ "ನೋಡು, ನನ್ನ ಬಟ್ಟೆ ಎಲ್ಲಾ ಹಳೆಯವು; ಚಿಂದಿಯಾಗಿವೆ. ನೀನು ಧರಿಸಿರುವ ಬಟ್ಟೆಯನ್ನು ನನಗೆ ಕೊಡಲಾರೆಯಾ?" ಎಂದನು.

ರಾಮದಾಸನು ಕೂಡಲೆ ಬಟ್ಟೆಯನ್ನು ಬಿಚ್ಚಿ ಅದನ್ನು ಆತನಿಗೆ ಕೊಟ್ಟನು. ಆತನು ಬಟ್ಟೆಯನ್ನು ಜೋಪಾನವಾಗಿ ಮಡಿಸಿ ಪಕ್ಕದಲ್ಲಿ ಇಟ್ಟುಕೊಂಡನು.

ಅನಂತರ ಅವನು ಅಧಿಕಾರವಾಣಿಯಿಂದ ಹೀಗೆ ಹೇಳಿದನು:—"ಈಗ ನಿದ್ದೆ ಮಾಡೋಣ. ದೀಪವನ್ನು ಸಣ್ಣಗೆ ಮಾಡು. ಎಚ್ಚರಿಕೆ! ಅದನ್ನು ಆರಿಸಬೇಡ." ರಾಮದಾಸನು ಈ ಅಪ್ಪಣೆಯಂತೆ ವಿಧೇಯತೆಯಿಂದ ನಡೆದುಕೊಂಡನು. ಆತನು ನಿದ್ದೆ ಮಾಡುವವನಂತೆಯೇ ಮಲಗಿಕೊಂಡನು. ರಾಮದಾಸನೂ ಹಾಗೆ ಮಾಡಿದನು. ಇನ್ನೂ ಐದುನಿಮಿಷ ಸಹ ಆಗಿರಲಿಲ್ಲ. ಆಗ ಆ ವ್ಯಕ್ತಿ ತಾನು ಎದ್ದು ಕುಳಿತುಕೊಂಡು, ರಾಮದಾಸನಿಗೂ ಎದ್ದು ಕುಳಿತುಕೊಳ್ಳುವಂತೆ ಹೇಳಿದನು. ರಾಮದಾಸನು ಅವನ ಆಜ್ಞೆಯಂತೆ ಎದ್ದು ಕುಳಿತನು. ದೀಪವನ್ನು ದೊಡ್ಡದುಮಾಡಿದನು.

ಆ ವ್ಯಕ್ತಿ "ಇನ್ನೂ ಕೆಲವು ಪದಾರ್ಥಗಳನ್ನು ಕೇಳಬೇಕಾಗಿದೆ" ಎಂದನು.

ರಾಮದಾಸನು "ಈ ಕೊಟಡಿಯಲ್ಲಿರುವ ಪ್ರತಿಯೊಂದು ಸಾಮಾನೂ ರಾಮನದೇ. ನೀನು ಅವನಾದ್ದರಿಂದ ನಿನಗೆ ಹಕ್ಕಿದೆ. ಧಾರಾಳವಾಗಿ ಕೇಳಬಹುದು, ತೆಗೆದುಕೊಳ್ಳಬಹುದು," ಎಂದನು.

ಈ ಮಧ್ಯೆ ರಾಮದಾಸನು ತನ್ನಲ್ಲಿ ಉಳಿದಿದ್ದ ಬಟ್ಟೆಯನ್ನು ಹೊದ್ದುಕೊಂಡಿದ್ದನು.

"ನೀನು ಈಗ ಹೊದ್ದುಕೊಂಡ ಬಟ್ಟೆ ನನಗೆ ಬೇಕಾಗಿದೆ" ಎಂದು ಹೇಳುತ್ತಾ ಅವನು ತನ್ನ ಕೈಯನ್ನು ಚಾಚಿದನು. ರಾಮದಾಸನು ಮರುಮಾತಾಡದೆ ಈ ವಸ್ತ್ರವನ್ನು ಕೊಟ್ಟುಬಿಟ್ಟನು.

ಕೆಲವು ನಿಮಿಷಗಳು ಕಳೆದುವು. ನಂತರ ಅವನು ಮೂಲೆಯಲ್ಲಿಟ್ಟಿದ್ದ ನೀರಿನ ತಂಬಿಗೆಯಮೇಲೆ ಕಣ್ಣುಹಾಕಿ, "ನನಗೆ ಒಂದು ತಂಬಿಗೆ ಬೇಕು. ನಿನಗೇನೂ ತೊಂದರೆ ಇಲ್ಲದಿದ್ದಲ್ಲಿ ಅಲ್ಲಿರುವುದನ್ನು ನನಗೆ ಕೊಡಬಹುದು" ಎಂದನು. ರಾಮದಾಸನು ಆ ತಂಬಿಗೆಯಲ್ಲಿದ್ದ ನೀರನ್ನು ಚೆಲ್ಲಿ ಅದನ್ನು ಕೊಟ್ಟನು. ಈ ವ್ಯಕ್ತಿಯ ಇಷ್ಟದಂತೆ ರಾಮದಾಸನು ಎಲ್ಲವನ್ನು ಸೇರಿಸಿ ಒಂದು ಗಂಟನ್ನು ಕಟ್ಟಿದನು. ನಂತರ ಆ ವ್ಯಕ್ತಿಯು ಚಾಪೆ, ಕೃಷ್ಣಾಜಿನ, ಲಾಂದ್ರ,

ಕೊಡೆ, ಹೆಚ್ಚಿನ ಕೌಪೀನ ಇವುಗಳನ್ನೆಲ್ಲಾ ಒಂದೊಂದಾಗಿ ಅಷ್ಟಷ್ಟು ಹೊತ್ತು ಬಿಟ್ಟು ಕೇಳಿ ತೆಗೆದುಕೊಂಡನು.

ರಾಮುದಾಸನಲ್ಲಿ ತನ್ನದು ಎಂಬ ಅಭಿಮಾನ ಇನ್ನೂ ಉಳಿದಿದೆಯೆ ಎಂಬುದನ್ನು ದೇವರು ಪರೀಕ್ಷಿಸುತ್ತಿದ್ದಾನೆಂಬುದು ರಾಮುದಾಸನಿಗೆ ಹೊಳೆಯಿತು. ದೇವರ ಸೇವೆಗೆಂದೇ ತನ್ನ ಜೀವನ ಅರ್ಪಿತವಾಗಿದ್ದುದರಿಂದ ರಾಮುದಾಸನಿಗೆ ಪ್ರಾಪಂಚಿಕ ವಸ್ತುಗಳಮೇಲೆ ವ್ಯಾಮೋಹವಿರಲು ಕಾರಣ ಇರಲಿಲ್ಲ. ಈ ವಿಚಿತ್ರ ಸ್ನೇಹಿತನು ಕೇಳಿದ ಪ್ರತಿಯೊಂದು ಪದಾರ್ಥವನ್ನೂ, ಕೇಳಿದಕೂಡಲೆ, ರಾಮುದಾಸನು ಸಂತೋಷದಿಂದ ಕೊಟ್ಟನು. ಉಕ್ಕಿಬರುವ ಸಂತೋಷದಿಂದ ಆ ವ್ಯಕ್ತಿಗೆ ಹೀಗೆ ಹೇಳಿದನು : " ಹೇ ಪ್ರಭು ! ನೀನು ಮಾಡುತ್ತಿರುವ ಪರೀಕ್ಷೆಗಳು ಆಶ್ಚರ್ಯಕರವಾಗಿವೆ. ಎಲ್ಲವೂ ನಿನ್ನದೇ ; ನಿನ್ನೊಬ್ಬನದೇ." ಇದನ್ನು ಕೇಳಿ ಆ ವ್ಯಕ್ತಿ ತನ್ನ ಆ ನಿಶ್ಶಂಕವಾದ ನಗೆಯನ್ನು ನಕ್ಕನು. ಆ ಕೊಟಡಿಯಲ್ಲಿದ್ದ ಕೆಲವು ಮತಗ್ರಂಥಗಳನ್ನು ಕೇಳಿ ತೆಗೆದುಕೊಂಡನು. ಎಲ್ಲವನ್ನೂ ಒಂದು ಬಟ್ಟೆಯಲ್ಲಿ ಕಟ್ಟದರೆ ಸುಮಾರಾಗಿ ಒಂದು ದೊಡ್ಡ ಗಂಟೇ ಆಯಿತು.

ನಂತರ ಆವನು ರಾಮುದಾಸನಿಗೆ ಎಚ್ಚರಿಕೆ ಕೊಡುವ ಧ್ವನಿಯಲ್ಲಿ " ಇಲ್ಲಿ ನೋಡು, ಬೆಲೆಯುಳ್ಳ ಅನೇಕ ಪದಾರ್ಥಗಳನ್ನು ಕೊಟ್ಟುಬಿಟ್ಟೆ. ಅವುಗಳನ್ನು ನಾನು ತೆಗೆದುಕೊಂಡು ಹೋದಮೇಲೆ ನೀನು ನಿನ್ನ ಹುಚ್ಚುತನಕ್ಕಾಗಿ ವಿಷಾದಿಸಬಹುದು. ಏನು ಹೇಳುತ್ತೀ ?" ಎಂದನು.

" ಇಲ್ಲ. ಖಂಡಿತವಾಗಿಯೂ ಇಲ್ಲ. ನಿನಗೇ ಸೇರಿದ ಪದಾರ್ಥಗಳನ್ನು ನೀನು ತೆಗೆದುಕೊಂಡುಹೋಗುತ್ತಿರುವುದರಿಂದ ವಿಷಾದಪಡಲು ಕಾರಣವೇ ಇಲ್ಲ" ಎಂದು ರಾಮುದಾಸನು ಒಡನೆಯೇ ಉತ್ತರಕೊಟ್ಟನು.

ಆ ವ್ಯಕ್ತಿ, " ಹಾಗಾದರೆ ಗೋಡೆಯಮೇಲಿರುವ ಆ ರಟ್ಟನ್ನು ಕೊಡು" ಎಂದನು.

ಅದೂ ಗಂಟನೊಳಕ್ಕೆ ಸೇರಿತು. ಕೊಟಡಿ ಹತ್ತಿರಹತ್ತಿರ ಬರಿದಾಯಿತು. ಆಗ ಮಳೆಗಾಲವಾದುದರಿಂದ ಮಳೆ ಬಲವಾಗಿ ಹೊಯ್ಯಲು ಪ್ರಾರಂಭಿಸಿತು. ರಾತ್ರಿ ಕಳೆದು ಬೆಳಗಿನ ಝಾಮುದ ಮೂರುಗಂಟೆ ಸುಮಾರಾಗಿದ್ದಿತು. ರಾಮುದಾಸನಿಗೆ ಕೌಪೀನಹೊರತು ಇನ್ನುಯಾವಬಟ್ಟೆಯೂ ಉಳಿದಿರಲಿಲ್ಲ.

" ಇನ್ನೊಂದು ಪದಾರ್ಥ ಬೇಕು. ನೀನು ಹಾಕಿಕೊಂಡಿರುವ ಕನ್ನಡಕ ನನಗೆ ಬೇಕಾಗಬಹುದು" ಎಂದು ಆ ವ್ಯಕ್ತಿ ಕೇಳಿದನು. ಅದೇಪ್ರಕಾರ ಕನ್ನಡಕವನ್ನು ಕೊಟ್ಟದ್ದಾಯಿತು. ಅವನು ಅದನ್ನು ಹಾಕಿಕೊಂಡು ಅದು ತನಗೆ ಸರಿಹೋಗುತ್ತದೆಂದು ಹೇಳಿದನು.

ಅವನು "ಮತ್ತೆ ಇನ್ನೊಂದು ಪದಾರ್ಥ ಬೇಕು" ಎಂದನು.

"ನೀನು ಏನನ್ನು ಬೇಕಾದರೂ ಕೇಳಬಹುದು. ರಾಮದಾಸನು ತನ್ನ ಜೀವಿತವನ್ನೇ ನಿನಗೆ ಅರ್ಪಿಸಿದ್ದಾನೆ" ಎಂದು ರಾಮದಾಸನು ಉತ್ತರವಿತ್ತನು.

"ನೀನು ಧರಿಸಿರುವ ಕೌಪೀನವನ್ನು ಇತ್ತ ತಾ" ಎಂದು ಅವನು ಶಾಂತವಾಗಿ ಹೇಳಿದನು.

ಈಗ ದೇವರೇ ಉತ್ಕಟಪರೀಕ್ಷೆ ಮಾಡುತ್ತಿದ್ದಾನೆಂಬುದು ರಾಮದಾಸನಿಗೆ ನಿಸ್ಸಂದೇಹವಾಗಿ ಗೊತ್ತಾಯಿತು. ಆಗ ರಾಮದಾಸನು ಸಂಪೂರ್ಣ ಆತ್ಮ ಸಮರ್ಪಣೆಯಿಂದ ಉಂಟಾದ ಸಮಾಧಾನಭಾವದಿಂದ, ಕೌಪೀನಹೊರತು ದಿಗಂಬರ ವಾಗಿದ್ದ ತನ್ನ ದೇಹದಿಂದ, ಆತನಿಗೆ ಕೊಡಲು ಅದನ್ನು ಸಡಲಿಸಿದನು. ಆದರೆ ಅದನ್ನು ಸಂಪೂರ್ಣವಾಗಿ ತೆಗೆಯುವುದಕ್ಕೆ ಮುಂಚೆ ಈ ವಿಚಿತ್ರ ಸ್ನೇಹಿತನು, "ಬೇಡ ಬೇಡ. ಅದನ್ನು ನೀನೇ ಇಟ್ಟುಕೊಳ್ಳಬಹುದು; ನನಗೆ ಬೇಕಿಲ್ಲ" ಎಂದು ಹೇಳಿ ತನ್ನ ಕೈಯಿಂದ ತಡೆದನು.

ಆಮೇಲೆ ಅವನು "ನನ್ನ ಹಿಂದೆ ಬರಬಲ್ಲೆಯಾ?" ಎಂದು ಕುತೂಹಲ ದಿಂದ ಕೇಳಿದನು.

ರಾಮದಾಸನು ಕ್ಷಣ ಹಿಂತೆಗೆಯದೆ "ಅಗತ್ಯವಾಗಿ ಆಗಲಿ" ಎಂದು ಉತ್ತರಕೊಟ್ಟನು.

ಅವನು "ಈಗ ಬೇಡ. ಬೇರೆ ಸಮಯದಲ್ಲಾಗಲಿ" ಎಂದು ಹೇಳಿ ಹೊರಡಲು ಸಿದ್ಧನಾದನು. ಮಳೆ ಬಹಳ ಬಲವಾಗಿ ಸುರಿಯುತ್ತಿದ್ದಿತು. ಆತನು ಒಂದು ಕೈಯಲ್ಲಿ ಲಾಂದ್ರವನ್ನು ಇನ್ನೊಂದು ಕೈಯಲ್ಲಿ ಕೊಡೆಯನ್ನು ಹಿಡಿದಿದ್ದನು; ಭುಜದಮೇಲೆ ಗಂಟುತಗಲಹಾಕಿದ್ದ ತೆಂಗಿನಮಟ್ಟೆಯ ಕೋಲು ಇದ್ದಿತು. ಕೊಟಡಿಯಿಂದ ಇಳಿಯುವ ಮೆಟ್ಟಲಮೇಲೆ ನಿಂತುಕೊಂಡು ಅವನು ತನ್ನ ಕೊನೆಯ ಬಾಣವನ್ನು ಬೀರಿದನು. "ನನ್ನನ್ನು ಏನೆಂದು ತಿಳಿದುಕೊಂಡಿದ್ದೀ! ನಾನು ಹುಚ್ಚನಲ್ಲ, ಅಲ್ಲ" ಎಂದು ಒತ್ತಿ ಹೇಳಿದನು.

"ನೀನು ಅವನೇ, ನೀನು ಅವನೇ" ಎಂದು ರಾಮದಾಸನು ಭಾವ ಪೂರಿತ ಗದ್ಗದಕಂಠದಲ್ಲಿ ಉತ್ತರವಿತ್ತನು.

ಸ್ನೇಹಿತನು ಮೆಟ್ಟಲಿಳಿದು ಹೊರಟುಹೋದನು. ರಾಮದಾಸನು ಕೊಟಡಿ ಯೊಳಗೆ ಬಂದು ನೆಲದ ಮೇಲೆ ಕುಳಿತುಕೊಂಡ ಕೂಡಲೆ ಅಗಾಧವಾದ ಸಮಾಧಿ ಯಲ್ಲಿ ಮಗ್ನನಾದನು. ಅವನಿಗೆ ಎಚ್ಚರವಾದಾಗ ಪೂರ್ತಿ ಬೆಳಗಾಗಿದ್ದಿತು. ಕೊಟಡಿಯ ಬಾಗಿಲ ಬಳಿ ದೊಡ್ಡ ಗುಂಪು ಮುತ್ತಿಕೊಂಡಿದ್ದಿತು. ಅದರಲ್ಲಿ ಆನಂದರಾಯರೂ ಇದ್ದರು. ಪ್ರತಿದಿನವೂ ಪ್ರಾತಃಕಾಲದಲ್ಲಿ ಹಾಲು ಹಣ್ಣನ್ನು

ತರುತ್ತಿದ್ದ ಸೇವಕನಿಂದ ಈ ವಿಷಯ ಹರಡಿದ್ದಿತು. ಯಾವನೋ ಕಳ್ಳನು ಕೊಠಡಿಯಲ್ಲಿದ್ದ ಪದಾರ್ಥಗಳನ್ನು ಅಪಹರಿಸಿಕೊಂಡು ಹೋಗಿರಬೇಕೆಂದು ಜನರು ಭಾವಿಸಿದರು. ಏನು ಹೇಗೆ ನಡೆಯಿತು ಎಂದು ಅವರು ರಾಮದಾಸನನ್ನು ಪ್ರಶ್ನೆಮಾಡಿದರು.

ರಾಮದಾಸನು ಇಷ್ಟೆ ಉತ್ತರವಿತ್ತನು : "ಭಗವಂತ ರಾಮ ಒಂದು ರೂಪದಲ್ಲಿ ಒದಗಿಸುತ್ತಾನೆ, ಮತ್ತೊಂದು ರೂಪದಲ್ಲಿ ತೆಗೆದುಕೊಳ್ಳುತ್ತಾನೆ."

ಈ ಸಂಕ್ಷೇಪವಾದ ಒಗಟಿಯ ಉತ್ತರದಿಂದ ಅವರು ತೃಪ್ತರಾಗಲಿಲ್ಲ. ಇದು ಸಹಜವೇ. ಆದುದರಿಂದ ರಾಮದಾಸನು ರಾತ್ರಿ ನಡೆದ ಘಟನೆಯನ್ನು ವಿಸ್ತಾರವಾಗಿ ತಿಳಿಯಪಡಿಸಬೇಕಾಯಿತು. ಎಲ್ಲರೂ ಈ ಕಥೆಯನ್ನು ಉಸಿರಾಡದೆ ಕುತೂಹಲದಿಂದ ಕೇಳಿದರು. ಅವರಲ್ಲಿ ಒಬ್ಬನು ಕಳ್ಳನನ್ನು ಹುಡುಕಿ ಹಿಡಿಯಬೇಕೆಂದನು.

"ಯಾವ ತಪ್ಪಿತಕ್ಕಾಗಿ ? ಅವನು ತನ್ನ ಪದಾರ್ಥಗಳನ್ನೇ ತೆಗೆದುಕೊಂಡು ಹೋಗಿದ್ದಾನೆ. ಇದಕ್ಕಾಗಿ ಅವನನ್ನು ಶಿಕ್ಷಿಸುವುದಕ್ಕೆ ಪ್ರಪಂಚದಲ್ಲಿ ಯಾವ ಕಾನೂನೂ ಇಲ್ಲ. ಅವನೇನು ಕಳ್ಳನಲ್ಲ ; ಅವನು ಸಾಕ್ಷಾತ್ ದೇವರೇ" ಎಂದು ರಾಮದಾಸನು ಹೇಳಿದನು.

ಇದನ್ನು ಕೇಳಿದ ಎಲ್ಲರ ಮುಖದಮೇಲೂ ತಡೆಯಲಾರದಷ್ಟು ನಗು ಕಾಣಿಸಿತು. ಅವರು ರಾಮದಾಸನ ವಿವರಣೆಯಿಂದ ತೃಪ್ತರಾದಂತೆ ಕಂಡರು ; ಮೆಲ್ಲನೆ ಒಬ್ಬೊಬ್ಬರಾಗಿ ತೆರಳಿದರು. ದಯಾವಂತ ಪ್ರೇಮಮೂರ್ತಿ ಆನಂದರಾಯರು ಆ ದಿವಸ ಮಧ್ಯಾಹ್ನಕ್ಕೆ ಪೂರ್ವವೇ ಹೊಸಸಾಮಾನುಗಳನ್ನು ಒದಗಿಸಿದುದರಿಂದ ಆ ಕೊಟಡಿಯಿಂದ ಯಾವ ಪದಾರ್ಥವೂ ಹೋದಂತೆ ಕಾಣಿಸುತ್ತಿರಲಿಲ್ಲ. ಮತ್ತೆ ಕೆಲವು ದಿವಸಗಳೊಳಗಾಗಿ ಹೊಸ ತಂಬಿಗೆಯನ್ನೂ ರಾಮದಾಸನು ಒಂದು ತಂಬಿಗೆ ತೀರಾಬೇಕಾಗಿದ್ದ ಒಬ್ಬ ಸಂನ್ಯಾಸಿನಿಗೆ ಕೊಟ್ಟುಬಿಟ್ಟದ್ದರಿಂದ ಬೇರೆ ಒಂದು ತಂಬಿಗೆಯನ್ನು ತಂದಿಡಬೇಕಾಯಿತು.

ಆನಂದರಾಯರು ಹೊಸ ಕನ್ನಡಕವನ್ನೂ ತೆಗೆದುಕೊಡಲು ಪ್ರಯತ್ನಿಸಿದಾಗ ರಾಮದಾಸನು, "ಇನ್ನು ಮುಂದೆ ಕನ್ನಡಕದ ಆವಶ್ಯಕತೆಯೇ ಉಂಟಾಗದಿರಲಿ ಎಂದು ಭಗವಂತನು ಕನ್ನಡಕವನ್ನು ಕಸಿದುಕೊಂಡಿದ್ದಾನೆ. ಅವನ ಇಚ್ಛೆ ಇದ್ದಂತಾಗಲಿ" ಎಂದು ಹೇಳಿದನು.

ಅಲ್ಲಿಂದಾಚೆಗೆ ರಾಮದಾಸನ ದೃಷ್ಟಿ ಸಂಪೂರ್ಣವಾಗಿ ಸರಿಹೋದುದರಿಂದ ಕನ್ನಡಕವನ್ನು ಉಪಯೋಗಿಸಬೇಕಾಗಲಿಲ್ಲ.

ಒಂದು ದಿನ ಸಾಯಂಕಾಲ ಸ್ವಾಮಿ ವಿವೇಕಾನಂದರ "ರಾಜಯೋಗ" ವೆಂಬ ಪುಸ್ತಕವನ್ನು ಓದುತ್ತಿದ್ದಾಗ ರಾಮದಾಸನಿಗೆ ಪ್ರಾಣಾಯಾಮವನ್ನು ಅಭ್ಯಾಸಮಾಡಬೇಕೆಂಬ ಇಚ್ಛೆಯುಂಟಾಯಿತು. ಮನಸ್ಸಿನಲ್ಲಿ ಈ ಭಾವನೆ ಹೊಳೆಯಿತೋ ಇಲ್ಲವೋ ಆಗಲೇ ಒಬ್ಬ ಯುವಕ ರಾಜಯೋಗಿ ಕೊಟಡಿಯೊಳಕ್ಕೆ ಬಂದು ರಾಮದಾಸನ ಬಳಿ ಕುಳಿತುಕೊಂಡನು. ರಾಜಯೋಗ ಅಭ್ಯಾಸವನ್ನು ಹೇಳಿಕೊಡಲು ಈ ಯೋಗಿಯನ್ನು ಭಗವಂತನೇ ಕಳುಹಿಸಿದ್ದಾನೆಂದು ರಾಮದಾಸನು ತಿಳಿದನು.

ಆ ರಾತ್ರಿಯೇ ಆ ರಾಜಯೋಗಿ ರಾಮದಾಸನಿಗೆ ರಾಜಯೋಗ ಅಥವಾ ರಾಜವಿದ್ಯೆಯ ಅನುಭವಗಳನ್ನು ಮನದಟ್ಟುಮಾಡಿಕೊಟ್ಟನು. ಅಲ್ಲಿಂದಾಚೆಗೆ ರಾಮದಾಸನು ಆಸನ ಪ್ರಾಣಾಯಾಮಗಳ ಅಭ್ಯಾಸದಲ್ಲಿ ಉದ್ಯುಕ್ತನಾದನು. ಇದನ್ನು ಅಭ್ಯಾಸಮಾಡುತ್ತ ಹೋದಹಾಗೆಲ್ಲ ಅವನನ್ನು ಅಗಾಧ ನಿಶ್ಚಲ ಶಾಂತಿ ಆವರಿಸಿಕೊಂಡದ್ದು ಅನುಭವಕ್ಕೆ ಬಂದಿತು. ಆದರಿಂದ ಓದುವ ಮತ್ತು ಮಾತನಾಡುವ ಇಚ್ಛೆ ನಿಂತಿತು; ರಾಮದಾಸನು ಮಾತನಾಡದೆ ಮೌನವಾಗಿರುತ್ತಿದ್ದನು. ಈ ಮಾರ್ಪಾಡನ್ನು ಕಂಡು ವಾಡಿಕೆಯ ಅತಿಥಿಗಳು ಆದರ ವಿಷಯ ಪ್ರಸ್ತಾಪಿಸತೊಡಗಿದರು. ಇದುವರೆಗೂ ಅಡಗಿದ್ದ ಹಸಿವು ಹೆಚ್ಚಾಗಿ, ರಾಮದಾಸನು ಮಿತವಾದ ಸಾತ್ವಿಕಾಹಾರದ ನಿಯಮವನ್ನು ತೊರೆದು ಹೆಚ್ಚು ಹೆಚ್ಚಾಗಿ ಆಹಾರವನ್ನು ತೆಗೆದುಕೊಳ್ಳಬೇಕಾಯಿತು. ಸದಾ ಪ್ರಾಣಾಯಾಮ ಮಾಡುತ್ತಿದ್ದುದರಿಂದ ದೇಹದಲ್ಲಿ ಬಹಳ ನಿಶ್ಶಕ್ತಿಯುಂಟಾಯಿತು. ಈ ಅನುಭವದ ಕಾಲದಲ್ಲಿ, ಯಾರಿಂದಲೂ ಅಡಚಣೆಯಿಲ್ಲದಿರಲು ನಿರ್ಜನಪ್ರದೇಶಕ್ಕೆ ಹೋಗಬೇಕೆಂಬ ಅಭಿಲಾಷೆ ಉಂಟಾಯಿತು. ತನ್ನ ಅಭಿಪ್ರಾಯವನ್ನು ಆನಂದರಾಯರಿಗೆ ತಿಳಿಸಲು ಅವರು ರಾಮದಾಸನನ್ನು ಕೂಡಲೆ ಕಾಸರಗೋಡಿನಿಂದ ಎರಡು ಮೈಲಿ ದೂರವಿರುವ ಒಂದು ಸ್ಥಳಕ್ಕೆ ಕಳುಹಿಸಿಕೊಟ್ಟರು.

---

## ಅಧ್ಯಾಯ ೩

### ಕೂಡ್ಲು, ಕದರಿಬೆಟ್ಟ.

#### (i) ಪ್ರಾಣಾಯಾಮ.

ಕೂಡ್ಲು ಕಾಸರಗೋಡಿನ ಉತ್ತರಕ್ಕೆ ಎರಡು ಮೈಲಿ ದೂರದಲ್ಲಿ ಒಂದು ಗ್ರಾಮ. ರಾಮದಾಸನು ವಾಸಕ್ಕೆ ನಿಂತ ಮನೆ ಮೂರು ಕೊಟಡಿಯ ಒಂದು ಹೆಂಚಿನ ಮನೆ. ಅದು ಒಂದು ಕಿಬ್ಬರಿಯ ಇಳಿಜಾರಿನಲ್ಲಿದ್ದಿತು. ಅದರ ಮೇಲಕ್ಕೆ

ಹಸುರಾದ ಸಣ್ಣ ಕುರುಚಲ ಗಿಡಗಳಿಂದ ಕೂಡಿದ ವಿಶಾಲವಾದ ಸಮಭೂಮಿ. ಇಲ್ಲಿ ಯಾರೂ ವಾಸವಾಗಿರಲಿಲ್ಲ. ಮನೆಯ ಕೆಳಭಾಗದಲ್ಲಿದ್ದ ಸಣ್ಣ ಹಳ್ಳದ ಒಂದು ಪಾರ್ಶ್ವದಿಂದ, ಮರೆಯ ಒಂದು ಚಿಲುಮೆಯಿಂದ ಹೊಳೆಯುವ ತಿಳಿ ನೀರಿನ ತೆಳುವಾದ ಬುಗ್ಗೆಯೊಂದು ಹರಿದುಬರುತ್ತಿದ್ದಿತು. ಕಿಬ್ಬರಿಯನ್ನು ಗಭೀರವಾದ ನೀರವತೆ ಆಳುತ್ತಿದ್ದಿತು. (ನಿರುಪಾಧಿಕವಾಗಿ ಧ್ಯಾನಮಾಡುವುದಕ್ಕೆ ಅದು ದಿವ್ಯವಾದ ಸ್ಥಳವಾಗಿದ್ದಿತು.) ರಾಮದಾಸನು ಇಂತಹ ಸ್ಥಳದಲ್ಲಿ ವಾಸ ಮಾಡಬೇಕೆಂಬುದು ದೈವೇಚ್ಛೆಯಾಗಿದ್ದಿತು.

ರಾಮದಾಸನು ಶ್ರದ್ಧೆಯಿಂದ ಗಂಟೆ ಗಂಟೆಗಳ ಕಾಲ ಪ್ರಾಣಾಯಾಮ ಮಾಡಲು ಪ್ರಾರಂಭಿಸಿದನು. ಅವನು ಆಹಾರ ವಿಚಾರದಲ್ಲಿ ತೀರ ಕ್ರಮವಿಲ್ಲದವನಾದನು. ಆನಂದರಾಯರು ಪ್ರತಿದಿವಸವೂ ಬಂದು ವಿಚಾರಿಸುತ್ತಾ ಆಹಾರವನ್ನು ಒದಗಿಸುತ್ತಿದ್ದರು. ರಾಮದಾಸನ ಅಸಂಖ್ಯಾತ ಇಷ್ಟಾನಿಷ್ಟಗಳೆಲ್ಲವನ್ನೂ ಅವರು ಸಂಪೂರ್ಣ ಪ್ರೀತಿಯಿಂದ ಗೌರವಿಸುತ್ತಿದ್ದರು. ರಾಮದಾಸನು ಒಂದೊಂದು ದಿನ ಒಂದೊಂದು ವಿಧವಾದ ಆಹಾರವನ್ನು ಸೇವಿಸುತ್ತಿದ್ದನು. ಆನಂತರ ಕೆಲವು ದಿನಗಳವರೆಗೆ ಜಲಾಹಾರವನ್ನು ಮಾತ್ರ ತೆಗೆದುಕೊಳ್ಳುತ್ತಿದ್ದನು. ಪುನಃ ಮೊದಲಿನ ಊಟವನ್ನೇ ಪ್ರಾರಂಭಿಸಿದನು.

ಸದಾ ಪ್ರಾಣಾಯಾಮ ಮಾಡುತ್ತಿದ್ದುದರಿಂದಲೂ ಆಹಾರವನ್ನು ಪದೇ ಪದೇ ವ್ಯತ್ಯಾಸಮಾಡುತ್ತಿದ್ದುದರಿಂದಲೂ ರಾಮದಾಸನ ದೇಹ ಕುಂದಿ ಬಲಹೀನವಾಯಿತು. ಮನಸ್ಸು ಅತ್ಯಂತ ಉದಾಸೀನ ಮತ್ತು ಜಡ ಆದ ಒಂದು ಸ್ಥಿತಿಗೆ ಬಿದ್ದಿತು. ಅವರ್ಣನೀಯ ನಿಶ್ಚಲತೆ ಮತ್ತು ಮೌನದ ಅತಲ ಕೂಪಕ್ಕೆ ಇಳಿದಿರುವಂತೆ ಕಂಡಿತು. ಆದರೂ ಪ್ರಾಣಾಯಾಮ ಸಾಧನೆಯೇನೋ ನಡೆಯುತ್ತಲೇ ಇದ್ದಿತು. ಮಂತ್ರವನ್ನು ಜಪಿಸುವುದು ಸಂಪೂರ್ಣವಾಗಿ ನಿಂತುಹೋಯಿತು. ಹಗಲಿರುಳೂ ಎಡೆಬಿಡದೆ ಶ್ವಾಸನಿರೋಧ ನಡೆಯುತ್ತಿದ್ದಿತು. ರಾಮದಾಸನ ಶೀರ್ಣದೇಹ ಕೆಲವು ಸಲ ನಿಶ್ಯಕ್ತವಾಗಿ ನಿಶ್ಚೇಷ್ಟವಾಗಿ ಬಿದ್ದುಬಿಡುತ್ತಿದ್ದಿತು. ಒಂದು ಸಲ ಅವನ ಉಪದೇಶಕನಾದ ರಾಜಯೋಗಿ ಅವನನ್ನು ನೋಡಲು ಬಂದನು. ರಾಮದಾಸನ ಅತಿ ಪ್ರಯಾಸವನ್ನು ನೋಡಿ ಪ್ರಾಣಾಯಾಮವನ್ನು ಮುಂದುವರಿಸಲು ಉತ್ತೇಜನಕೊಟ್ಟನು. ದೇಹಧಾರಣೆಗೆ ಸಾಕಾದಷ್ಟು ಆಹಾರವನ್ನು ತೆಗೆದುಕೊಳ್ಳಬೇಕೆಂದು ತಿಳಿಸಿದನು. ಒಂದು ವಿಷಯಮಾತ್ರ ರಾಮದಾಸನಿಗೆ ಸ್ಪಷ್ಟವಾಯಿತು. ಈ ಅಭ್ಯಾಸದಿಂದ ಜ್ಞಾಪಕಶಕ್ತಿ, ವಿವೇಚನೆ, ಹೃದಯದ ಮೃದುಭಾವಗಳು ಉಡುಗಿಹೋಗಿದ್ದವು. ಮನಸ್ಸು ಬರಿದೂ ಶುಷ್ಕವೂ ಆಯಿತು. ಜಡತೆ ಮೌನ ಇವು ಮಾತ್ರ ಉಳಿದುವು.

ಪತಂಜಲಿಮಹರ್ಷಿಯಿಂದ ನಿರ್ದಿಷ್ಟವಾದ ಪ್ರಾಣಾಯಾಮದ, ಎಂದರೆ ಮನಸ್ಸನ್ನು ಅಂಕೆಯಲ್ಲಿಟ್ಟುಕೊಳ್ಳುವ ಕ್ರಮದ, ಅನುಭವ ರಾಮದಾಸನಿಗೆ ಉಂಟಾಗಬೇಕೆಂಬುದು ಭಗವಂತನ ಇಚ್ಛೆಯಾಗಿದ್ದಿತು. ಈ ಅಭ್ಯಾಸ ಆ ಋಷಿ ಉಪದೇಶಿಸಿದ ಅಷ್ಟಾಂಗಯೋಗದ ಒಂದು ಭಾಗ. ಆಸನ, ಪ್ರಾಣಾಯಾಮಗಳು ಅಷ್ಟಾಂಗದ ಎರಡು ನಿಯಮಗಳು. ಯಾರು ಅಷ್ಟಾಂಗಗಳನ್ನು ಅಭ್ಯಾಸ ಮಾಡುತ್ತಾರೋ ಅವರು ಈ ಯೋಗದ ಎರಡು ನಿಯಮಗಳನ್ನು ಒಟ್ಟಿಗೇ ಅನುಸರಿಸಬೇಕಾದುದು ಆವಶ್ಯಕ. ಬ್ರಹ್ಮಚರ್ಯದ ಪಾಲನೆಯೂ, ಇದರೊಂದಿಗೆ ಅನುಭವಸ್ಥನಾದ ಒಬ್ಬ ಗುರುವಿನ ಪರಾಂಬರಿಕೆಯೂ, ಅವಶ್ಯಕವೆಂದು ಉಕ್ತ ವಾಗಿವೆ. ಈ ಪ್ರಾಣಾಯಾಮ ಅಭ್ಯಾಸ ಸರ್ವರಿಗೂ ಉದ್ದಿಷ್ಟವಾದುದಲ್ಲ. ಲೌಕಿಕ ವ್ಯವಹಾರದಲ್ಲಿ ತೊಡಗಿರುವ ಗೃಹಸ್ಥರು ಇದನ್ನು ಅಭ್ಯಾಸ ಮಾಡದಿರುವುದು ಒಳ್ಳೆಯದು. ಏಕೆಂದರೆ, ಮೇಲೆ ಹೇಳಿದ ನಿಯಮಗಳನ್ನು ಅನುಸರಿಸದೆ ಪ್ರಾಣಾ ಯಾಮವನ್ನು ಮಾತ್ರ ಮಾಡಿದರೆ ಬುದ್ಧಿ ವಿಕಲ್ಪವಾಗುವುದು; ಅಲ್ಲದೆ ಇತರ ವ್ಯಾಧಿಗಳೂ ಉಂಟಾಗುವ ಸಂಭವವಿದೆ. ಗೃಹಸ್ಥನ ಮನೋನಿಗ್ರಹಕ್ಕೆ ಭಗವ ನ್ನಾಮಜಪ ಮತ್ತು ಸಂಕೀರ್ತನೆಗಳಿಂದ ಕೂಡಿದ ಭಕ್ತಿಮಾರ್ಗವೇ ಅತ್ಯಂತ ಯುಕ್ತ ಸಾಧನ. ರಾಮದಾಸನು ಪ್ರಾಣಾಯಾಮ ಅಭ್ಯಾಸವನ್ನು ಒಂದೇ ಸಮನೆ ಒಂದು ತಿಂಗಳಕಾಲ ನಡೆಸಿ ಅದನ್ನು ನಿಲ್ಲಿಸಿಬಿಟ್ಟನು. ಅನಂತರ ಭಗವನ್ನಾಮ ಜಪ ತಾನಾಗಿಯೇ ಪ್ರಾರಂಭವಾಯಿತು. ಹಿಂದೆ ಇದ್ದ ಚಟುವಟಿಕೆ ಮತ್ತೆ ಪ್ರಾರಂಭವಾಗಿ ರಾಮದಾಸನು ಬೆಳಿಗ್ಗೆ ಮತ್ತು ಸಾಯಂಕಾಲ ಆ ಮೈದಾನದಲ್ಲಿ ಸುತ್ತಾಡಿಕೊಂಡು ಬರುತ್ತಿದ್ದನು. ಅವನು ನಿರ್ದಿಷ್ಟವಾದ ಯಾವ ಉದ್ದೇಶವೂ ಇಲ್ಲದೆ ಸುಮ್ಮನೆ ತಿರುಗುತ್ತಿದ್ದನು. ಸುತ್ತಲೂ ಇದ್ದ ವಿಸ್ತಾರವಾದ ಹಸುರಿನ ನೋಟದಲ್ಲಿ ಅವನ ಮನಸ್ಸು ಲೀನವಾಯಿತು. ಮನಸ್ಸು ಅಚಲವಾದ ಶಾಂತಿ ಸಾಗರದಲ್ಲಿ ತೇಲುತ್ತಿರುವುದೂ, ತಾನು ಏಕಾಂಗಿಯಾಗಿರುವುದೂ ಅವನಿಗೆ ಕಂಡು ಬಂದಿತು. ಆ ಸುತ್ತು ಮುತ್ತಿನ ಪ್ರದೇಶವೆಲ್ಲವೂ ಒಂದು ದೊಡ್ಡ ಪರದೆಯಮೇಲೆ ಕಲಾಕೋವಿದನೊಬ್ಬನು ನಾನಾಬಣ್ಣಗಳಿಂದ ಚಿತ್ರಿಸಿದಂತೆ ಕಾಣುತ್ತಿದ್ದಿತು. ಕೆಳಗಿನ ಪಚ್ಚೆಯ ಮೈದಾನವೂ ಮೇಲಿನ ನೀಲಾಕಾಶವೂ ಸೂರ್ಯನ ಭಾಸ್ವರ ಪ್ರಭೆಯಲ್ಲಿ ಮುಳುಗಿದ್ದವು.

ರಾಮದಾಸನು ಹೀಗೆ ಸಂಚರಿಸುತ್ತಿದ್ದಾಗ ಒಬ್ಬ ಮುಸಲ್ಮಾನನು, "ನೀವು ನಮ್ಮ ಮನೆಗಳ ಹತ್ತಿರ ಏಕೆ ಬರುತ್ತೀರಿ? ನನ್ನ ಮಕ್ಕಳು ನಿಮ್ಮನ್ನು ನೋಡಿ ಹೆದರಿಕೊಳ್ಳುತ್ತಾರೆ ನೀವು ನಿಮ್ಮ ನಿರ್ಜನ ಪ್ರದೇಶದಲ್ಲಿಯೇ ಇರುವುದು ಉತ್ತಮ ವಲ್ಲವೆ?" ಎಂದು ಪ್ರಶ್ನಿಸಿದನು.

ರಾಮದಾಸನು ಈ ಮಾತನ್ನು ಕೇಳಿ ಮುಂದೆ ಹೋದನು.

ಇನ್ನೊಂದುಸಲ ರಾಮದಾಸನು ತನಗೆ ಅರಿವೇ ಇಲ್ಲದೆ ತನ್ನ ವಾಸಸ್ಥಳ ದಿಂದ ಒಂದೂವರೆ ಮೈಲಿ ದೂರದಲ್ಲಿದ್ದ ಸಮುದ್ರತೀರಕ್ಕೆ ಹೋದನು. ಆ ದಾರಿಯಲ್ಲಿ ಮುಸಲ್ಮಾನರು ವಾಸವಾಗಿದ್ದ ಒಂದು ಹಳ್ಳಿಯೊಳಗೆ ನುಗ್ಗಿ ಹೋಗಬೇಕಾಯಿತು. ಆ ಹಳ್ಳಿಯ ಒಂದು ಬೀದಿಯಲ್ಲಿ ಹೋಗುತ್ತಿದ್ದಾಗ ಮುಸಲ್ಮಾನರ ಹುಡುಗರು ರಾಮದಾಸನನ್ನು ಸುತ್ತಿಕೊಂಡು ಅವನನ್ನು ಮುಂದೆ ಹೋಗದಂತೆ ತಡೆದರು. ತಲೆಯಮೇಲೆ ತಟ್ಟುವುದು, ಕಿವಿ ಮೂಗು ಎಳೆಯುವುದು, ಅಣಕಿಸುವುದು, ಸುತ್ತಲೂ ಕುಣಿಯುವುದು, ಈ ಚೇಷ್ಟೆಗಳಿಗೆ ಪ್ರಾರಂಭಿಸಿದರು. ಈ ಚೇಷ್ಟೆ ಅವನಿಗೆ ಆನಂದದಾಯಕವಾಗಿದ್ದಿತು. ರಾಮದಾಸನು ಸಂತೋಷಭರದಿಂದ ತಾನೂ ಅವರ ಸಂಗಡ ಕುಣಿದಾಡಿದನು. ಕೆಲವು ಮುಸಲ್ಮಾನ ಮಾತೆಯರು ದೂರದಲ್ಲಿ ಒಂದುಮೂಲೆಯಲ್ಲಿ ನಿಂತು ಇದನ್ನು ನೋಡುತ್ತಿದ್ದರು. ರಾಮದಾಸನಿಗೆ ತೊಂದರೆ ಕೊಡುತ್ತಿದ್ದಾರೆಂದು ಯೋಚಿಸಿ ಅವರು ಓಡಿ ಬಂದು ಹುಡುಗರನ್ನು ಅಟ್ಟಿದರು.

ರಾಮದಾಸನು ನಡೆಯನ್ನು ಮುಂದರಿಸಿ ಸಮುದ್ರತೀರಕ್ಕೆ ಹೋಗಿ ಮರಳ ಮೇಲೆ ಕುಳಿತುಕೊಂಡನು. ದೊಡ್ಡದಾದ ಅಲೆಗಳು ಶಬ್ದಮಾಡಿಕೊಂಡು ಹೊರಳುತ್ತ ಬಂದು ದಡದ ಬಂಡೆಗಳಮೇಲೆ ಅಪ್ಪಳಿಸುತ್ತಿದ್ದುದನ್ನು ನೋಡುತ್ತಾ ಇದ್ದನು. ಸೀಮಾಂತ ಕಾಣದ ನೀಲವರ್ಣದ ನೀರಿನ ವಿಸ್ತಾರವನ್ನು ದೃಷ್ಟಿಸುತ್ತಿದ್ದ ಹಾಗೆಯೇ ಸ್ವಲ್ಪ ಹೊತ್ತು ತೀರಾ ಮೈಮರೆತನು. ಆಮೇಲೆ ತನ್ನ ನಿವಾಸಕ್ಕೆ ಹಿಂದಿರುಗಿದನು.

### (ii) ಪಂಚಭೂತಗಳ ಯುದ್ಧ

ನಿರ್ಜನವಾದ ಶಾಂತಿಮಯವಾದ ಈ ಮನೆಯಲ್ಲಿ ಪಕ್ಷಿಗಳೂ ಕ್ರಿಮಿಕೀಟಗಳೂ ರಾಮದಾಸನ ಸಹವಾಸಿಗಳಾಗಿ ಅವನಿಗೆ ಸಂತೋಷವನ್ನುಂಟುಮಾಡುತ್ತಿದ್ದುವು. ಅವು ಹೆದರಿಕೆಯೇ ಇಲ್ಲದೆ ಒಳಕ್ಕೆ ಬಂದು ಸುತ್ತುಮುತ್ತಲೂ ಆಡುತ್ತಿದ್ದುವು. ರಾಮದಾಸನು ತಮ್ಮ ಸ್ನೇಹಿತನೆಂದು ಅವು ಸಹಜವಾಗಿ ತಿಳಿದುಕೊಂಡಂತೆ ಕಾಣುತ್ತಿದ್ದಿತು. ಅದೂ ಸರಿ. ಅವುಗಳು ರಾಮದಾಸನಿಗೆ ತಾನು ಪ್ರೀತಿಸಿ ಆರಾಧಿಸುತ್ತಿದ್ದ ಮಹಾಸತ್ವದ ಸ್ವರೂಪಗಳು. ಅವನು ತನ್ನ ತಿಂಡಿಯಲ್ಲಿ ಒಂದು ಭಾಗವನ್ನು ಅವುಗಳಿಗೆ ಕೊಡುತ್ತಿದ್ದನು.

ಅಲ್ಲಿದ್ದಾಗ ರಾಮದಾಸನು ಭಗವಂತನಿಂದ ಪ್ರೇರಿತನಾಗಿ ಕೆಲವು ಪದ್ಯ ಸ್ತೋತ್ರ ಪ್ರಬಂಧಗಳನ್ನು ರಚಿಸಿದನು. ಇವು 'ದೇವನ ಪದತಲದಲ್ಲಿ' ('At the Feet of God')ಎಂಬ ಪುಸ್ತಕದಲ್ಲಿ ಪ್ರಕಟವಾಗಿವೆ.

ಮಳೆಗಾಲವಾದುದರಿಂದ ರಾತ್ರಿಯೆಲ್ಲಾ ಮಳೆ ಹೆಚ್ಚಾಗಿ ಸುರಿಯುತ್ತಿದ್ದಿತು. ಒಂದು ರಾತ್ರಿಯನ್ನು ಮರೆಯಲಾಗದು. ಬಹಳ ಅಗಾಧವಾಗಿ ಮಳೆ ಹುಯ್ಯುತ್ತಿದ್ದಿತು. ಮಿಂಚು ಹೊಳೆದು ಗುಡುಗು ಕಿವಿ ಮುಚ್ಚುವಂತೆ ಆರ್ಭಟಿಸುತ್ತಿದ್ದಿತು. ಮಳೆ ಗಾಳಿ ಎರಡೂ ಕೆರಳಿದ್ದುವು. ಹಿರಿದಾಗಿ ನುಗ್ಗಿದ ನೀರಿನ ಪ್ರವಾಹವು ಮನೆಯ ಗೋಡೆಗೆ ಅಪ್ಪಳಿಸುತ್ತಿದ್ದಿತು. ಗುಡುಗಿನ ಒಂದೊಂದು ಆರ್ಭಟವೂ ಮನೆಯ ತಳಹದಿಯನ್ನೇ ಅಲ್ಲಾಡಿಸುತ್ತಿದ್ದಿತು. ಕಿಟಕಿಗಳಿಗೆ ಬಾಗಿಲುಗಳಿರಲಿಲ್ಲ. ಸಿಳ್ಳುಹಾಕುವ ಹುಚ್ಚುಗಾಳಿ ಬೀಸುಮಳೆಯ ನೀರನ್ನು ಕಂಬಿಗಳ ಮಧ್ಯೆ ಒಳಕ್ಕೆ ಬಡಿಯುತ್ತಿದ್ದಿತು. ರಾಮದಾಸನು ಪಂಚಭೂತಗಳ ಅಬ್ಬರವನ್ನು ಈಕ್ಷಿಸುತ್ತ ಸಂಪೂರ್ಣ ಭಾವೋನ್ನತಿಯಿಂದ ಸಮಾಧಾನಸ್ಥಿತಿಯಲ್ಲಿ ಕುಳಿತಿದ್ದನು. ಭಯ ಮತ್ತು ಅಪಾಯದ ಪ್ರತಿಯೊಂದು ಪರಿಸ್ಥಿತಿಯೂ ರಾಮದಾಸನ ಸ್ಥೈರ್ಯವನ್ನು ಹೆಚ್ಚಿಸುತ್ತಿದ್ದಿತು. ಈ ಅದ್ಭುತ ಲೀಲೆಯಿಂದ ರಾಮದಾಸನಿಗೆ ಸ್ವಲ್ಪವೂ ಹೆದರಿಕೆಯಾಗಲಿಲ್ಲ. ಸತ್ಯ (ರಾಮದಾಸನೊಳಗಿರುವ ದೈವ) ನುಡಿಯಿತು:

"ನಾನು ಝುಂಝಾ ವಾತದಲ್ಲಿ ಬಿರುಗಾಳಿಯಲ್ಲಿ ಮಳೆಯಲ್ಲಿ ಇದ್ದೇನೆ. ನಾನು ಗುಡುಗಿನಲ್ಲಿ ಸಿಡಿಲಿನಲ್ಲಿ ಇದ್ದೇನೆ. ನಾನು ಸೃಷ್ಟಿಕರ್ತ, ದಯಾಳು ಸಂರಕ್ಷಕ, ಮತ್ತು ನಿರ್ಘೃಣ ನಾಶಕರ್ತ. ನಾನು ಎಲ್ಲದರಲ್ಲಿಯೂ ಎಲ್ಲವೂ ಆಗಿರುವೆನು. ನಾನೇ ಎಲ್ಲ."

ಮಳೆ ಗಾಳಿ ಬೀಸುತ್ತಲೇ ಇದ್ದಿತು. ರಾಮದಾಸನು ಕುಳಿತಿದ್ದ ಸ್ಥಳಕ್ಕೆ ಎರಡು ಗಜ ದೂರದಲ್ಲಿ ಧೊಪ್ಪೆಂದು ಏನೋ ಬಿದ್ದ ಶಬ್ದ ಕೇಳಿಸಿತು. ಶಬ್ದ ಕೇಳಿಬಂದ ಕಡೆ ರಾಮದಾಸನು ತಿರುಗಿ ನೋಡಿದನು. ಅಚ್ಚಕಪ್ಪಿನ ಒಂದು ದೊಡ್ಡ ಕಾಡುಬೆಕ್ಕು ರಾಮದಾಸನನ್ನು ದುರುಗುಟ್ಟಿಕೊಂಡು ನೋಡುತ್ತಿದ್ದಿತು. ಅದು ಗೋಡೆಯ ಮೇಲಿಂದ ಧುಮಿಕಿದ್ದಿತು. ಆ ಕತ್ತಲೆಯಲ್ಲಿ ಒಂದು ಮೂಲೆಯಲ್ಲಿ ಅದರ ಕಣ್ಣುಗಳು ಹೊಳೆಯುತ್ತಿದ್ದುವು. ರಾಮದಾಸನು ಕೂಡಲೆ ಎದ್ದು ಲಾಂದ್ರವನ್ನು ತೆಗೆದುಕೊಂಡು ಅದರ ಕಡೆಗೆ ಹೋದನು. ಅದು ಸಾಧಾರಣ ಬೆಕ್ಕಿನ ಎರಡರಷ್ಟು ದೊಡ್ಡದಾಗಿಯೂ ಎತ್ತರವಾಗಿಯೂ ಕ್ರೂರ ಸ್ವಭಾವದ್ದಾಗಿಯೂ ಕಾಣಿಸಿತು. ರಾಮದಾಸನು ಹತ್ತಿರ ಹೋಗುವುದರೊಳಗೆ ಅದು ಕಿಟಕಿಗೆ ಹಾರಿ ಕಂಬಿಗಳ ಮಧ್ಯೆ ನುಸಿದು ಮಳೆ ಕತ್ತಲೆಯಲ್ಲಿ ಅದೃಶ್ಯವಾಯಿತು. ಬೆಳಗಾಗುವವರೆಗೂ ರಾಮದಾಸನು ಭೂತಗಳ ಯುದ್ಧದ ವೈಭವವನ್ನು ನೋಡುತ್ತ ಸಂತೋಷವಾಗಿದ್ದನು.

ಒಂದು ದಿವಸ ಸಾಯಂಕಾಲ, ಒಬ್ಬ ಭಕ್ತನು ಕಾಸರಗೋಡಿನಿಂದ ಬಂದು ರಾಮದಾಸನನ್ನು ನಗರ ಭಜನೆ ಒಂದಕ್ಕೆ ಕರೆದುಕೊಂಡುಹೋದನು. ಬಂಗಾಲದ

ಶ್ರೀ ಕೃಷ್ಣ ಚೈತನ್ಯರ ಪಂಥಕ್ಕೆ ಸೇರಿದ ಒಬ್ಬ ಸಾಧು ಮತ್ತು ಇತರ ಭಕ್ತರೊಂದಿಗೆ ರಾಮುದಾಸನು ಬೀದಿಯಲ್ಲಿ ಭಜನೆ ಗೋಷ್ಠಿಯಲ್ಲಿ ನಾಮಸಂಕೀರ್ತನೆ ಮಾಡುತ್ತಾ ನರ್ತನ ಮಾಡಿದನು. ಅಲ್ಲಿಂದಾಚೆಗೆ ರಾಮುದಾಸನು ಊರೊಳಕ್ಕೆ ಅನೇಕ ಬಾರಿ ಹೋಗಿದ್ದನು. ಅಂತಹ ಒಂದು ಸಂದರ್ಭದಲ್ಲಿ, ತನಗೆ ಪ್ರಾಣಾಯಾಮವನ್ನು ಹೇಳಿಕೊಟ್ಟ ರಾಜಯೋಗಿಯ ಗುರುವಾದ ಸ್ವಾಮಿ ಶಿವಾನಂದರ ದರ್ಶನ ಲಾಭವನ್ನು ಪಡೆದನು.

ಕಾಸರಗೋಡಿಗೆ ಬಂದಮೇಲೆ ರಾಮುದಾಸನು ಒಬ್ಬ ವೃದ್ಧಳಾದ ಭಕ್ತೆಯ ಮನೆಯಲ್ಲಿ ಉಳಿದುಕೊಂಡಿದ್ದು ಮೂರು ದಿವಸ ಜಲಾಹಾರವ್ರತವನ್ನಾಚರಿಸಿದನು. ವ್ರತ ಪೂರೈಸಿದ ಒಡನೆ ಮಂಗಳೂರಿಗೆ ಹಿಂದಿರುಗಿ ಕೆಲವು ಕಾಲ ಕದರಿಬೆಟ್ಟದ ಮೇಲೆ ವಾಸಿಸಿದನು.

## (iii) ರಾಮುಚರಣದಾಸನ ಪ್ರವೇಶ

ರಾಮುದಾಸನು ಸಾಯಂಕಾಲದ ರೈಲಿನಲ್ಲಿ ಮಂಗಳೂರನ್ನು ಸೇರಿ ನೆಟ್ಟಗೆ ಕದರಿಬೆಟ್ಟಕ್ಕೆ ಹೋಗಿ ಅಲ್ಲಿಯ ಪ್ರಸಿದ್ಧವಾದ ಏಳು ಕೆರೆಗಳ ಬಳಿ ಇರುವ ಧರ್ಮ ಶಾಲೆಗೆ ಹೋದನು. ಛತ್ರದ ವಿಚಾರಣಾಕರ್ತನಾಗಿದ್ದ ಮಾಧವನೆಂಬ ಯುವ ಕನು, ನಿಷ್ಕಪಟವಾದ ಆನಂದದಿಂದ ರಾಮುದಾಸನನ್ನು ಬರಮಾಡಿಕೊಂಡು, ಎತ್ತರವಾದ ಜಗುಲಿಯಮೇಲೆ ಕೃಷ್ಣಾಜಿನವನ್ನು ಹಾಸಿದನು. ರಾಮುದಾಸನು ಅದರಮೇಲೆ ಕುಳಿತನು. ಮಾಧವನು ದೃಢಾಂಗನಾದ ಆರೋಗ್ಯಶಾಲಿ ಯುವಕ. ಅವನಿಗೆ ರಾಮುದಾಸನಮೇಲೆ ಅಪೂರ್ವವಾದ ಸ್ಥಿರವಾದ ಪ್ರೀತಿ ಗೌರವ ಹುಟ್ಟಿ ದುವು. ಅವನು ರಾಮುದಾಸನನ್ನು ಸಂಪೂರ್ಣವಾಗಿ ನಂಬಿದ್ದರಿಂದ ತನ್ನ ಜೀವನದ ಕಥೆಯನ್ನು ರಾಮುದಾಸನಿಗೆ ಹೇಳಲು ಮನಸ್ಸು ಮಾಡಿದನು. ಅವನು ಚಿಕ್ಕ ಮಗುವಾಗಿದ್ದಾಗಲೇ ತಾಯಿಯನ್ನು ಕಳೆದುಕೊಂಡ ಒಬ್ಬ ತಬ್ಬಲಿ. ಹಳ್ಳಿ ಹಳ್ಳಿಗಳಲ್ಲಿ ತನ್ನ ಬಂಧುಗಳ ಪೋಷಣೆಯಲ್ಲೇ ಕಾಲಕಳೆದನು. ಆದುದರಿಂದ ಅವನಿಗೆ ಹೆಚ್ಚಿನ ವಿದ್ಯಾಭ್ಯಾಸ ದೊರೆಯಲಿಲ್ಲ. ಅವನ ಅಣ್ಣನೂ ಕೂಡ ಬಹಳ ಹಿಂದೆ ತಪ್ಪಿಸಿಕೊಂಡುಹೋಗಿದ್ದನು. ಅವನಿರುವ ಸ್ಥಳವೇ ಗೊತ್ತಿರಲಿಲ್ಲ. ಅವನ ತಂದೆ ಯಾವದೋ ಒಂದು ಕಛೇರಿಯಲ್ಲಿ ಗುಮಾಸ್ತನಾಗಿ ಅಧಿಕಾರಿಗಳ ಜೊತೆ ಯಲ್ಲಿ ತಿರುಗುತ್ತಿದ್ದನು. ಆದುದರಿಂದ ಹುಡುಗನಿಗೆ ಮನೆ ಇರಲಿಲ್ಲ. ಅವನಿಗೆ ಚಿಕ್ಕಂದಿನಿಂದಲೂ ಮತವಿಚಾರಗಳಲ್ಲಿ ಮನಸ್ಸು ನೆಲೆಸಿದ್ದಿತು. ಅವನು ಕೀರ್ತನೆ ಕೂಟಗಳಿಗೆ ಹೋಗುತ್ತ ಸಾಧುಗಳ ಸಂಗವನ್ನು ಅಪೇಕ್ಷಿಸುತ್ತಿದ್ದನು. ವೈರಾಗ್ಯ ಮತ್ತು ಶಾಂತಿಜೀವನದಲ್ಲೇ ಕಾಲಕಳೆಯಬೇಕೆಂಬ ಅವನ ಇಚ್ಛೆ ಹೀಗೆ ವೃದ್ಧಿ ಹೊಂದಿತು. ತನ್ನ ಜೀವಮಾನವನ್ನೆಲ್ಲಾ ಭಕ್ತಿಯಿಂದ ಕಳೆಯಲು ಅನುಕೂಲಿ ಸುವ ಕೆಲಸವನ್ನು ದೊರಕಿಸಬೇಕೆಂದು ಅವನು ದೇವರಲ್ಲಿ ಮೊರೆ ಇಟ್ಟನು.

ಈ ಹುಡುಗನ ಸ್ವಭಾವ ಪರಿಶುದ್ಧವಾದುದೆಂದೂ ಪ್ರೇಮ ಯೋಗ್ಯವೆಂದೂ ರಾಮುದಾಸನಿಗೆ ಕಂಡುಬಂದಿತು. ಆ ಊರಿನ ಒಬ್ಬ ವರ್ತಕನು ಈ ಹುಡುಗನನ್ನು ಛತ್ರದ ವಿಚಾರಣೆಗಾಗಿ ನೇಮಿಸಿ ಅವನ ದೇಹಪೋಷಣೆಗಾಗಿ ತಕ್ಕಷ್ಟನ್ನು ಮಾತ್ರ ಕೊಡುತ್ತಿದ್ದನು. ಬೇಕಾದಷ್ಟು ವಿರಾಮವಿರುತ್ತಿದ್ದುದರಿಂದ ತರುಣನು ಅದನ್ನು ಧ್ಯಾನದಲ್ಲಿ ಕಳೆಯುತ್ತ ನಿಜವಾದ ಸತ್ಯಾನ್ವೇಷಿಯಾಗಿದ್ದನು. ಅವನು ನಿಷ್ಕಪಟ ಸರಳಜೀವಿಯಾಗಿದ್ದನು. ಅವನನ್ನು ನೋಡಿದ ಕೂಡಲೇ ರಾಮುದಾಸನ ಮನಸ್ಸು ಅವನ ಕಡೆಗೆ ಅಪೂರ್ವ ರೀತಿಯಲ್ಲಿ ಸೆಳೆಯಲ್ಪಟ್ಟಿತು. ಅವನು ರಾಮುದಾಸನನ್ನು ಚಂಚಲವಾದ ಮನಸ್ಸನ್ನು ಹೇಗೆ ಅಂಕೆಗೆ ತರಬಹುದೆಂದು ಪ್ರಶ್ನಿಸಿದನು. ರಾಮುದಾಸನು ಅವನಿಗೆ ರಾಮಮಂತ್ರವನ್ನು ಉಪದೇಶಿಸಿದನು. ಅನಂತರ ಅವನು ಯಾವಾಗಲೂ ರಾಮಮಂತ್ರವನ್ನು ಜಪಿಸುತ್ತಿದ್ದನು.

ತೀರ ಏಕಾಂತವಾಸದಲ್ಲಿರಬೇಕೆಂಬ ತನ್ನ ಅಭಿಲಾಷೆಯನ್ನು ರಾಮುದಾಸನು ಮಾಧವನಿಗೆ ತಿಳಿಸಲು ಅವನು ಧರ್ಮಶಾಲೆಗೆ ಹತ್ತಿರದಲ್ಲಿಯೇ ಇದ್ದ ಗವಿಗೆ ಹೋಗಬಹುದೆಂದು ಸೂಚಿಸಿದನು. ಮಣ್ಣಿನ ಗೋಡೆಗಳನ್ನು ಹಾಕಿ ಗವಿಯನ್ನು ಮತ್ತೆ ಹೊಸದಾಗಿ ಕಟ್ಟಿದ್ದಿತು. ರಾಮುದಾಸನು ಎದ್ದು ತನ್ನನ್ನು ಗವಿಗೆ ಕರೆದುಕೊಂಡು ಹೋಗೆಂದನು. ಗವಿ ಇಕ್ಕಟ್ಟಾಗಿ ತಗ್ಗಾಗಿ ಒಬ್ಬ ಮನುಷ್ಯನು ಮಲಗುವಷ್ಟು ಮಾತ್ರ ಅಗಲವಾಗಿ ಇದ್ದಿತು. ಗೋಡೆಗಳು ಒಣಗಿರಲಿಲ್ಲ; ನೆಲವೂ ಒದ್ದೆಯಾಗಿದ್ದಿತು. ಗವಿಗೆ ಕದಗಳಿರುವ ಒಂದು ಸಣ್ಣ ಬಾಗಿಲು ಇದ್ದಿತು. ರಾಮುದಾಸನು ಅದರೊಳಕ್ಕೆ ಪ್ರವೇಶಿಸಿ ಆ ರಾತ್ರಿಯನ್ನು ಮತ್ತು ಇನ್ನು ಕೆಲವು ದಿವಸಗಳನ್ನು ಅಲ್ಲಿಯೇ ಕಳೆಯಬೇಕೆಂದು ನಿಷ್ಕರ್ಷೆಮಾಡಿರುವುದಾಗಿ ತಿಳಿಸಿದನು. ನೆಲದಮೇಲೆ ಕೃಷ್ಣಾಜಿನವನ್ನು ಹಾಸಿ ಮಾಧವನು ಧರ್ಮಶಾಲೆಗೆ ಹಿಂದಿರುಗಿದನು. ಮಾಧವನು ರಾಮುದಾಸನಿಗೆ ಪ್ರೇಮದ ಮೂರ್ತಿಯೇ ಆಗಿ ಎಲ್ಲ ಸಾಧ್ಯ ರೀತಿಯಿಂದ ಅವನ ಸೇವೆಯನ್ನು ಮಾಡಿದನು. ಅವನಿಗೆ ಏನೋ ಯೋಚನೆ ಇದ್ದಿತು. ಅದರಿಂದ ಅವನು ಚಿಂತಾಕುಲನಾಗಿ ಕಂಡನು. ಇದೇನೆಂದರೆ, ಕೆಲವು ರೂಪಾಯಿ ಸಾಲ. ರಾಮುದಾಸನು ಇದನ್ನು ಕೇಳಿ ತಿಳಿದುಕೊಂಡನು. ದೇವರ ದಯದಿಂದ ಆ ಸಾಲ ಬೇಗನೆ ತೀರಿಹೋಗಿ ಮಾಧವನ ಮನಸ್ಸು ನಿರಾಳವಾಯಿತು. ರಾಮುದಾಸನು ಗವಿಯಲ್ಲಿದ್ದ ಕಾಲದ ಒಂದು ವಿಶೇಷ, ಅನೇಕ ಸಲ ಉಪವಾಸಗಳನ್ನು ಮಾಡಿದುದು. ಉಪವಾಸದಿಂದ ಕೇವಲ ನಿತ್ರಾಣವಾಯಿತು; ಆದರೂ ರಾಮುದಾಸನು ಹರ್ಷಚಿತ್ತನಾಗಿಯೇ ಇದ್ದನು. ಇಲ್ಲಿ ಒಂದು ಸಂಗತಿಯನ್ನು ಹೇಳಬೇಕು. ಬಹಳ ಹಸಿವೆನಿಸಿದವನಿಗೆ ಮೃಷ್ಟಾನ್ನ ದೊರೆತರೆ ಎಷ್ಟು ಸಂತೋಷವಾಗುತ್ತದೆಯೋ, ಅಷ್ಟು ಸಂತೋಷ ಭಗವಂತನು ಉಪವಾಸವನ್ನು ಕೈಗೊಳ್ಳಬೇಕೆಂದು ಪ್ರೇರೇಪಣೆಮಾಡಿದಾಗ ರಾಮುದಾಸನಿಗೆ ಆಗುತ್ತಿದ್ದಿತು.

ಗವಿಯಲ್ಲಿ ಸುಮಾರು ಒಂದೂವರೆ ತಿಂಗಳು ಕಳೆಯಿತು. ಊರಿನಿಂದ ಅನೇಕ ಭಕ್ತರು ಬಂದು ಹೋಗುತ್ತಿದ್ದರು. ರಾಮದಾಸನು ಆಗಾಗ್ಗೆ ಸಂಜೆಯಲ್ಲಿ ಭಜನೆ ಕೂಟಗಳಲ್ಲಿ ಭಾಗಿಯಾಗಲು ಊರೊಳಕ್ಕೆ ಹೋಗುತ್ತಿದ್ದನು. ಒಂದು ಸಲ ರಾಮದಾಸನನ್ನು ಒಂದು ಮದುವೆಗೆ ಕರೆದರು. ಆ ಮನೆಯಲ್ಲಿ ಒಂದು ಹುಡುಗಿಗೆ ರೋಗ ಪ್ರಬಲವಾಗಿ ಅವಳು ಹಾಸಿಗೆ ಹಿಡಿದು ಮಲಗಿದ್ದಳು. ರಾಮದಾಸನು ರೋಗಿಯನ್ನು ನೋಡಿ, ರೋಗ ನಿವಾರಣೆಗಾಗಿ ಬಡಬಗ್ಗರಿಗೆ ಒಂದು ಊಟವನ್ನು ಹಾಕಿಸಬೇಕೆಂದು ಅವಳ ತಂದೆಯನ್ನು ಬೇಡಿಕೊಂಡನು. ಆ ಧಾರಾಳಿ ಅದಕ್ಕೆ ಒಪ್ಪಿಕೊಂಡನು ; ಆ ಮೊದಲೇ ಇದನ್ನು ಯೋಚಿಸಿದ್ದೆನೆಂದು ಹೇಳಿದನು. ಭೋಜನಕ್ಕೆ ಏರ್ಪಾಡು ಆಯಿತು. ರಾಮದಾಸನು ಮುಂಚಿತವಾಗಿಯೇ ಹೊರಟುಹೋದುದರಿಂದ ಸಂತರ್ಪಣೆ ಸಮಯದಲ್ಲಿ ಆ ಮನೆಯಲ್ಲಿರಲಿಲ್ಲ. ಆದರೆ ಸಂತರ್ಪಣೆ ನಡೆದ ಸ್ವಲ್ಪ ಕಾಲದಲ್ಲಿ ಆ ಹುಡುಗಿಗೆ ವಾಸಿಯಾಯಿತೆಂದು ಒಂದು ವರ್ಷದಮೇಲೆ ಅವನಿಗೆ ತಿಳಿಯಿತು. ದೇವರನ್ನು ನಂಬಿದರೆ ಪ್ರತಿಫಲ ದೊರೆತೇ ದೊರೆಯುವುದು.

ಈ ಮಧ್ಯೆ ಮಾಧವನಿಗೆ ರಾಮದಾಸನಮೇಲೆ ಪ್ರೇಮ ಹೆಚ್ಚಾಯಿತು. ಒಂದು ದಿವಸ ರಾಮದಾಸನು ಪುನಃ ಸಂಚಾರ ಹೊರಡಲು ದೇವರ ಆಜ್ಞೆಯಾಗಿದೆಯೆಂದು ಮಾಧವನಿಗೆ ತಿಳಿಸಿದನು. ಆಗ ಆ ಹುಡುಗ ತನ್ನನ್ನೂ ಕರೆದುಕೊಂಡು ಹೋಗಬೇಕೆಂದು ಬಹಳ ದೈನ್ಯದಿಂದ ಬೇಡಿಕೊಂಡನು. ರಾಮದಾಸನನ್ನು ಬಿಟ್ಟಿರುವುದು ಬಹಳ ದುಃಖಕರವೆಂದು ಹೇಳಿದನು. ಆಗ ರಾಮದಾಸನು ಹುಡುಗನಿಗೆ ಹೀಗೆ ಎಚ್ಚರ ಹೇಳಿದನು.

" ನೋಡು ರಾಮು, ರಾಮದಾಸನು ಅನುಸರಿಸುತ್ತಿರುವ ಮಾರ್ಗ ಕಠಿಣವಾದುದು. ರಾಮದಾಸನಿಗೆ ಅಪಾಯ ಮತ್ತು ಸಾವಿನ ಹೆದರಿಕೆಗಳು ಇಲ್ಲ. ಅವನು ನಿರ್ಲಕ್ಷ್ಯವಾಗಿ ಮನಸ್ಸು ಬಂದಂತೆ ತಿರುಗುವ ಕಷ್ಟಜೀವಿ ಎನ್ನುವುದನ್ನು ನೀನು ತಿಳಿದುಕೊಳ್ಳಬೇಕು. ಅವನು ಕಷ್ಟಪಡುವುದರಲ್ಲಿ ಒಂದು ಸಂತೋಷವನ್ನು ಕಂಡಿದಾನೆ. ಅವನು ಮನಃಪೂರ್ವಕವಾಗಿ ಕಷ್ಟವನ್ನು ಅರಸುತ್ತಾನೆ. ನಿನ್ನ ವಿಚಾರ ಬೇರೆ. ಆದುದರಿಂದ ಬುದ್ಧಿವಾದವನ್ನು ಕೇಳು. ಅವನ ಸಂಗಡ ಹೋಗಲು ಆಶೆಪಡಬೇಡ."

ಈ ಒತ್ತಾಯಕ್ಕೆ ಮಾಧವನು ಸೋಲಲಿಲ್ಲ. ಎಷ್ಟೇ ಕಷ್ಟ ಒದಗಿದರೂ ರಾಮದಾಸನೊಡನಿದ್ದು ಅವುಗಳನ್ನು ಅನುಭವಿಸಬಲ್ಲೆನೆಂದು ಧೈರ್ಯ ಹೇಳಿ ಅವನನ್ನು ಎಂದಿಗೂ ಬಿಡುವುದಿಲ್ಲವೆಂದು ಅವನು ಹಟಹಿಡಿದನು. ಆದುದರಿಂದ ರಾಮದಾಸನು ಸಮ್ಮತಿಸಬೇಕಾಯಿತು.

ರಾಮದಾಸನು ಕಾಲುನಡೆಯಿಂದ ಉತ್ತರ ಹಿಂದೂಸ್ಥಾನದ ದೂರ ಯಾತ್ರೆಯನ್ನು ಮಾಡಬೇಕೆಂದೂ, ದಾರಿಯಲ್ಲಿ ಪಡುಗಡಲ ಕರೆಯ ಒಂದು ಮುಖ್ಯ ಪವಿತ್ರ ಕ್ಷೇತ್ರವಾದ ಗೋಕರ್ಣಕ್ಕೆ ಹೋಗಬೇಕೆಂದೂ ನಿರ್ಧರಿಸಿ ಮಾಧವನಿಗೆ ತಿಳಿಸಿದನು. ಮಾಧವನು ಪ್ರಯಾಣದ ಸಿದ್ಧತೆಗಳನ್ನು ಮಾಡಿದನು. ಅಡಿಗೆ ಸಾಮಾನು ಮತ್ತು ಪಾತ್ರೆಗಳನ್ನು ದೊರಕಿಸಿಕೊಂಡು ಒಂದು ಚೀಲದಲ್ಲಿ ಗಂಟು ಕಟ್ಟಿದನು. ಈ ಸನ್ನಿವೇಶದಲ್ಲಿ ಅವನು ರಾಮದಾಸನ ಮುಂದೆ ಒಂದು ಬೇಡಿಕೆಯನ್ನು ಇಟ್ಟನು. ತನ್ನ ಹೆಸರನ್ನು ಮಾರ್ಪಡಿಸಬೇಕೆಂದೂ, ಅದಕ್ಕಾಗಿ ಒಂದು ಹೆಸರನ್ನು ಇಟ್ಟುಕೊಡಬೇಕೆಂದೂ ಅವನ ಅಪೇಕ್ಷೆ. ರಾಮದಾಸನು ಅವನಿಗೆ ರಾಮಚರಣದಾಸನೆಂದು ನಾಮಕರಣಮಾಡಿದನು. ಅಲ್ಲಿಂದ ಮುಂದೆ ಅವನು ಇದೇ ಹೆಸರನ್ನಿಟ್ಟುಕೊಂಡನು. ಇನ್ನುಮುಂದೆ ಅವನನ್ನು ರಾಮಚರಣದಾಸನೆಂದೇ ನಿರ್ದೇಶಿಸಲಾಗುವುದು.

---

## ಅಧ್ಯಾಯ ೪

### ಗೋಕರ್ಣದ ಕಡೆಗೆ : ಗೋಕರ್ಣ

#### (i) ಸಂಸ್ಥೆ ಒಂದು ಬಂಧನ

ಬೆಳದಿಂಗಳಕಾಲದ ಒಂದು ರಾತ್ರಿ ಸುಮಾರು ಮೂರು ಗಂಟೆಯಲ್ಲಿ ರಾಮದಾಸನೂ ರಾಮಚರಣದಾಸನೂ ಮಂಗಳೂರಿನಿಂದ ಪ್ರಯಾಣಮಾಡಿದರು. ರಾಮದಾಸನು ವೇಗವಾಗಿ ನಡೆಯುತ್ತಿದ್ದನು. ರಾಮಚರಣದಾಸನು ಹಿಂದೆಯೇ ಬರುತ್ತಿದ್ದನು. ಅವರು ಅನೇಕ ಹಳ್ಳಿಗಳನ್ನು ಹಾಯ್ದುಹೋಗಿ ಮಧ್ಯಾಹ್ನದ ಹೊತ್ತಿಗೆ ಒಂದು ತೆಂಗಿನ ತೋಟದ ಮಗ್ಗುಲಲ್ಲಿದ್ದ ಕೆಲವು ಗರಿ ಗುಡಿಸಲುಗಳ ಸಮೀಪಕ್ಕೆ ಬಂದು ತಂಗಿದರು. ಹತ್ತಿರದಲ್ಲಿಯೇ ಒಂದು ಬಾವಿ ಇದ್ದಿತು. ರಾಮಚರಣದಾಸನು ಸ್ವಲ್ಪ ಹುಗ್ಗಿಯನ್ನು ಮಾಡಿದನು. ಊಟವಾದಮೇಲೆ ಎರಡು ಗಂಟೆಗಳ ಕಾಲ ಮರಗಳ ಕೆಳಗೆ ತಂಪಾದ ನೆರಳಲ್ಲಿ ವಿಶ್ರಮಿಸಿಕೊಂಡು ನಂತರ ಅವರು ಪ್ರಯಾಣ ಬೆಳಸಿದರು. ಸಾಯಂಕಾಲದ ಹೊತ್ತಿಗೆ ಮುಲ್ಕಿ ಎಂಬ ಊರಿಗೆ ಬರಲು, ರಾಮಚರಣದಾಸನು ರಾಮದಾಸನನ್ನು ಈ ಊರಿನಲ್ಲಿದ್ದ ತನ್ನ ನಂಟರೊಬ್ಬರ ಮನೆಗೆ ಒಯ್ದನು. ಇವರು ರಾತ್ರಿ ಈ ಸ್ನೇಹಿತರ ಮನೆಯಲ್ಲೇ ತಂಗಿದರು. ನಂಟರು ಇವರನ್ನು ಬಹಳ ಆದರದಿಂದ ಸತ್ಕರಿಸಿದರು. ಈ ಮನೆಯಲ್ಲಿ ರಾಮಚರಣದಾಸನ ಚಿಕ್ಕಮ್ಮ ರಾಮಚರಣದಾಸನನ್ನು ರಾಮ

ದಾಸನೊಂದಿಗೆ ಯಾತ್ರೆ ಹೋಗದಹಾಗೆ ಮಾಡಲು ಪ್ರಯತ್ನಪಟ್ಟರು. ಸಾಧುವಿನ ಜೀವನ ನಡೆಸುವುದು ಬಹಳ ಕಷ್ಟವೆಂದೂ ದೇಹಕ್ಕೆ ಶ್ರಮವೆಂದೂ ಅವರು ಬಣ್ಣಿಸಿ ವಿವರಿಸಿದರು. ರಾಮಚರಣದಾಸನ ಸಂಕಲ್ಪವನ್ನು ಮಾರ್ಪಡಿಸಲು ಅವರಿಗೆ ಸಾಧ್ಯವಾಗಲಿಲ್ಲ. ಮಾರನೆ ದಿನ ಅರುಣೋದಯಕ್ಕೆ ಎದ್ದು ಸಾಧುಗಳು ಪ್ರಯಾಣವನ್ನು ಮುಂದುವರಿಸಿದರು. ಉಡುಪಿಯನ್ನು ಸೇರಿ ಆ ರಾತ್ರಿ ರಾಮದಾಸನ ಪೂರ್ವಾಶ್ರಮದ ತಮ್ಮನಾದ ಶ್ರೀನಿವಾಸರಾಯರ ಮನೆಯಲ್ಲಿ ಇಳಿದುಕೊಂಡರು. ಆ ಮಾರನೆ ದಿನ ಉಡುಪಿಯನ್ನು ಬಿಟ್ಟು ಮಧ್ಯಾಹ್ನಕ್ಕೆ ಕಲ್ಯಾಣಪುರಕ್ಕೆ ಬಂದರು. ಇಲ್ಲಿ ಒಬ್ಬ ಭಕ್ತನು ಇಬ್ಬರನ್ನೂ ತುಂಬ ಆದರದಿಂದ ಸತ್ಕರಿಸಿದನು. ಮುಂದಕ್ಕೆ ಪ್ರಯಾಣ ಸಾಗಿತು. ಪ್ರತಿದಿನವೂ ಅರುಣೋದಯದಿಂದ ಹನ್ನೊಂದು ಗಂಟೆಯವರೆಗೂ ಮತ್ತೆ ಮಧ್ಯಾಹ್ನ ಮೂರುಗಂಟೆಯಿಂದ ಹೊತ್ತು ಮುಳುಗುವವರೆಗೂ ನಡೆದು ಇವರು ಮುಂದರಿದರು. ಕುಂದಾಪುರದಲ್ಲಿ ಉಮಾನಾಥರಾಯರ ಸ್ನೇಹಿತರಾದ ರಾಮಭಟಜಿಯವರ ಆಸ್ಪತ್ರೆಯಲ್ಲಿ ಇಳಿದುಕೊಂಡರು. ಉಮಾನಾಥರಾಯರು ಈ ಹೊತ್ತಿಗೆ ಕೆಲವು ತಿಂಗಳ ಹಿಂದೆ ತಮ್ಮ ಪಾರ್ಥಿವ ಶರೀರವನ್ನು ಬಿಟ್ಟಿದ್ದರು.

ಗಂಗೊಳ್ಳಿ ನದಿಯನ್ನು ದೋಣಿಯ ಮೇಲೆ ದಾಟಿ ಮಧ್ಯಾಹ್ನದ ಹೊತ್ತಿಗೆ ಇವರು ಕಿರಿಮಂಜೇಶ್ವರವೆಂಬ ಸಣ್ಣ ಹಳ್ಳಿಯನ್ನು ಮುಟ್ಟಿ ಅಲ್ಲಿರುವ ಒಂದು ಶಿವಾಲಯದ ಬಳಿ ನಿಂತರು. ಆ ಬಳಿ ಇದ್ದ ವಿಶಾಲವಾದ ಕೆರೆಯಲ್ಲಿ ಸ್ನಾನ ಮಾಡಿದರು. ರಾಮಚರಣದಾಸನು ಅಡಿಗೆ ಮಾಡಿದನು. ಇಬ್ಬರೂ ಊಟಮಾಡಿ ಕೆರೆ ಏರಿಯಮೇಲೆ ವಿಶ್ರಮಿಸಿಕೊಂಡರು. ಈ ಸ್ಥಳದ ದೃಶ್ಯ ಬಹು ಮನೋಹರವಾಗಿದ್ದಿತು. ಈ ಸ್ಥಳ ಸಮುದ್ರಕ್ಕೆ ಬಹಳ ಹತ್ತಿರದಲ್ಲಿದೆ. ಸಮುದ್ರದ ಏರಿಳಿಯುವ ಅಲೆಗಳ ಅಬ್ಬರ ಕೊಂಚವೇ ದೂರದಲ್ಲಿ ಕೇಳಿಸುತ್ತಿದ್ದಿತು. ಸುತ್ತಲೂ ವಿಶಾಲವಾದ ಕಾಡು, ಅದರ ಹಿಂದೆ ಸಣ್ಣ ಬೆಟ್ಟ. ಪೂರ್ವಕಾಲದಲ್ಲಿ ಇಲ್ಲಿ ಅಗಸ್ತ್ಯ ಋಷಿಗಳು ತಪಸ್ಸುಮಾಡಿದರೆಂತಲೂ, ಅದರಿಂದ ಈ ಪ್ರಾಂತ್ಯ ಪಾವನವಾದುದೆಂತಲೂ ಪ್ರತೀತಿ ಇದೆ. ಆದುದರಿಂದಲೇ ಹಳ್ಳಿಯ ಈ ಭಾಗಕ್ಕೆ ಅಗಸ್ತ್ಯಮುನಿ ಆಶ್ರಮವೆಂದು ಹೆಸರಾಗಿದೆ. ಕೆರೆಯ ನೀರಿನಲ್ಲಿ ಆಶ್ಚರ್ಯಕರ ಗುಣಗಳಿರುವುದಾಗಿ ದೇವಸ್ಥಾನದ ಅರ್ಚಕರು ತಿಳಿಸಿದರು. ಈ ಕೆರೆಯ ನೀರನ್ನು ಹಳ್ಳಿಯವರು ಸ್ನಾನಕ್ಕೂ ಬಟ್ಟೆ ಒಗೆಯುವುದಕ್ಕೂ ಉಪಯೋಗಿಸುತ್ತಿದ್ದರೂ ನೀರು ನಿಜವಾಗಿಯೂ ಸ್ವಚ್ಛವಾಗಿ ಸಿಹಿಯಾಗಿ ಇದ್ದಿತು. ಈ ಸ್ಥಳದ ವಿಜಾತೀಯವಾದ ಆಕರ್ಷಣದಿಂದ ರಾಮದಾಸನು ಮುಗ್ಧನಾದನು. ಸ್ವಲ್ಪಕಾಲ ವಿಶ್ರಮಿಸಿಕೊಂಡನಂತರ ಇವರು ಪ್ರಯಾಣ ಬೆಳಸಿ ಬೈಯನ್ದೂರು, ಭಟ್ಕಳ ಗ್ರಾಮಗಳನ್ನು ಹೊಕ್ಕು ಶಿರಾಳಿಯನ್ನು ಮುಟ್ಟಿದರು. ಇಲ್ಲಿ ಪ್ರಸಿದ್ಧ

ವಾಗಿರುವ ಚಿತ್ರಾಪುರದ ಸಾರಸ್ವತ ಮಠವನ್ನು ನೋಡೋಣವೆಂದು ರಾಮಚರಣ ದಾಸನು ಸೂಚಿಸಿದನು. ರಾಮಚರಣದಾಸನು ಮಠದೊಳಕ್ಕೆ ಹೋಗಿಬರುವವರೆಗೂ ರಾಮದಾಸನು ಮಠದ ಹೊರಗಿನ ವನದಲ್ಲಿ ಕಾದಿರುವುದು ದೇವರ ಸಂಕಲ್ಪ ವಾಗಿದ್ದಿತು. ರಾಮಚರಣದಾಸನು ಕೊಂಚ ಹೊತ್ತಿನಲ್ಲಿ ಮಠದಿಂದ ಭಿಕ್ಷವನ್ನು ತೆಗೆದುಕೊಂಡು ಬಂದನು.

ಚಿತ್ರಾಪುರ ಮಠ, ರಾಮದಾಸನು ಜನ್ಮವೆತ್ತಿದ, ಬುದ್ಧಿಯಲ್ಲಿ ಚುರುಕಾದ, ಕಾರ್ಯನಿರ್ವಹಣೆಯಲ್ಲಿ ದಕ್ಷತೆಗೆ ಹೆಸರುವಾಸಿಯಾದ, ಸಾರಸ್ವತ ಪಂಗಡಕ್ಕೆ ಸಂಬಂಧಪಟ್ಟುದು. ಮಠಾಧಿಪತಿ ಅಂದರೆ ಗುರುಗಳು ಇರುವುದು ಚಿತ್ರಾಪುರದಲ್ಲಿ. ಈಗಿನ ಸ್ವಾಮಿಗಳು ತುಂಬಾ ಪರಿಶುದ್ಧರೂ, ಸದಾಚಾರಸಂಪನ್ನರೂ ಮತ್ತು ಉತ್ಸಾಹಿಗಳೂ ಆದ ತರುಣರು. ರಾಮದಾಸನಿಗೆ ಕಾಸರಗೋಡು ಆಶ್ರಮದಲ್ಲಿ ಇವರ ದರ್ಶನಲಾಭ ದೊರೆತಿದ್ದಿತು. ಇವರ ಹಿಂದೆ ಇದ್ದ ಮಠಾಧಿಪತಿಗಳು ಪೂರ್ವಾಚಾರ ನಿಷ್ಠರಾಗಿದ್ದು ತಮ್ಮ ಮಠೀಯರನ್ನು ಕಠಿಣ ನೇಮದಿಂದ ಆಳು ತ್ತಿದ್ದರು. ಆದರೆ ಅವರು ಮಹಾತಪಸ್ವಿಯಾಗಿದ್ದರು. ಈಗಿನ ಸ್ವಾಮಿಗಳಿಗೆ ವಿಶಾಲ ದೃಷ್ಟಿ ಇದೆ. ಇವರು ಹಿಂದಣ ಆಳ್ವಿಕೆಯ ಕಠಿಣ ನಿಯಮಗಳನ್ನು ಸುಧಾರಿಸಿದ್ದಾರೆ.

ಪರಿವರ್ತನೆಗಳಾಗುತ್ತಿರುವ ಈಗಿನ ಕಾಲದಲ್ಲಿ ಅವುಗಳಿಗನುಸಾರವಾಗಿ ಮುಂದುವರಿಯದೆ ಇದ್ದಲ್ಲಿ ಯಾವ ಧಾರ್ಮಿಕ ಸಂಸ್ಥೆಯೂ ತನ್ನ ಸಾರ್ಥಕ್ಯವನ್ನು ಸಾಧಿಸುವಂತಿಲ್ಲ. ವಿಕಾಸ ಜೀವನದ ನಿಯಮ; ಮಾರ್ಪಾಡು ಅದರ ಜೀವಸ್ವರ.

ನಿಂತಲ್ಲಿ ನಿಲ್ಲುವುದು ಕ್ಷೀಣತೆ ಮತ್ತು ದುಃಖಗಳ ಕಾರಣ; ಮುಂಬರಿವು ಎಂದರೆ ಸ್ವಾತಂತ್ರ್ಯ ಮತ್ತು ಸಂತೋಷ. ಮೊದಲನೆಯದು, ವೈಮನಸ್ಯಕ್ಕೆ ಮತ್ತು ಪ್ರಳಯಕ್ಕೆ ಮೂಲ. ಎರಡನೆಯದು, ಹೊಂದಿಕೆ ಮತ್ತು ಶಾಂತಿಯ ದಾರಿ. ಧರ್ಮ ದೈವಸಾಕ್ಷಾತ್ಕಾರವನ್ನು, ಎಂದರೆ ಅಮರತ್ವದಿಂದ ಫಲಿಸುವ ಅತ್ಯುತ್ತಮ ಮುಕ್ತಿ ಮತ್ತು ಆನಂದವನ್ನು, ತೋರಿಸಿಕೊಡತಕ್ಕುದಾಗಿದೆ. ಈ ದರ್ಶನ ಎಲ್ಲ ಬಂಧನಗಳನ್ನೂ ಅತಿಕ್ರಮಿಸಿರುವುದರಿಂದ ಪೂರ್ವಾಚಾರ ಶಿಷ್ಟಾಚಾರಗಳ ನಿರ್ಬಂಧಕ್ಕೆ ಒಳಪಟ್ಟುದಲ್ಲ. ಜೀವನದ ನಿಯಮಗಳು, ಆತ್ಮನ ಬಯಕೆ ತೀಕ್ಷ್ಣ ವಾಗಿ {ಮುಕ್ತಿ (ಎಂದರೆ ಸಂಪೂರ್ಣ ಬಂಧವಿಮೋಚನೆ)}ಯನ್ನು ಪಡೆಯ ಬೇಕೆಂದಾಗ ಅತಿಕ್ರಮಿಸಲು ಸಾಧ್ಯವಾಗುವಂತೆ ನಿವಿಷ್ಟವಾಗಿರಬೇಕು ಮತ್ತು ಪರಸ್ಪರ ಹೊಂದಿರಬೇಕು. ಈ ತತ್ವವನ್ನು ಮರೆತಲ್ಲಿ, ಜೀವನ ಒಂದು ಕ್ಲಿಷ್ಟವಾದ ತೊಡಕಾಗಿ, ಆತ್ಮ ಅದರಲ್ಲಿ ಬಂದಿಯಾಗಿ ನಿಸ್ಸಹಾಯವಾಗಿ ತಾನು ನೆಯ್ದುಕೊಂಡ ಬಲೆಯಿಂದ ಬಿಡಿಸಿಕೊಳ್ಳಲು ವ್ಯರ್ಥವಾಗಿ ಒದ್ದಾಡುತ್ತಲೇ ಇರಬೇಕಾಗುವುದು.

ಬೀಜ ಮೊಳಕೆಯಾಗಿ ಬೆಳೆಯಬೇಕಾದರೆ, ಅದು ಭೇದಿಸಿಕೊಂಡು ಬರಲು ಅನುಕೂಲಿಸುವಂತೆ ಭೂಮಿ ಹದವಾಗಿರಬೇಕು. ಅಲ್ಲದೆ ಬೀಜ ಮೊಳಕೆಯಾದ ಮೇಲೂ ಸಹ, ಮೊದಲು ಸಸಿಯಾಗಿ ನಂತರ ಗಿಡವಾಗಿ ಅನಂತರ ಹೂವನ್ನು ಬಿಟ್ಟು, ಕೊನೆಗೆ ಹಣ್ಣನ್ನು ಕೊಡಬೇಕಾದರೆ ಅದೆಲ್ಲಕ್ಕೂ ಆವಶ್ಯಕವಾದ ಅನುಕೂಲಗಳನ್ನು ಒದಗಿಸಬೇಕು. ಬೀಜ ಸಾರ್ಥಕವಾಗುವುದು ಹಣ್ಣು ಆದಾಗ ಎಂಬುದನ್ನು ಮರೆಯಬಾರದು. ಯಾವುದೇ ಧರ್ಮ ಸಂಸ್ಥೆ ಒಂದು ತೋಟ. ಈ ತೋಟದಲ್ಲಿ ಜೀವನು ಮೊಳೆತು ಗಿಡವಾಗಿ ಫಲಿಸುವ ಬಗ್ಗೆ ಮುಂದರಿಯಲು ಎಲ್ಲ ಅನುಕೂಲತೆಗಳನ್ನೂ ಒದಗಿಸಬೇಕು. ತೋಟದಲ್ಲಿ ಬೆಳೆದ ಗಿಡಗಳು ಹೇಗೆ ತಮ್ಮ ಸುತ್ತಲಿರುವ ಬೇಲಿಯನ್ನು ಅತಿಕ್ರಮಿಸಿ ಆಕಾಶದಲ್ಲಿ ತಮ್ಮ ರೆಂಬೆಗಳನ್ನು ಹರಡುತ್ತವೆಯೋ, ಅಥವಾ ವಿದ್ಯಾರ್ಥಿಯಾದವನು ಕಾಲಕ್ರಮದಲ್ಲಿ ತನ್ನ ವಿದ್ಯಾರ್ಥಿ ಜೀವನವನ್ನು ಹೇಗೆ ಅತಿಕ್ರಮಿಸಿ ಅದಕ್ಕಿಂತ ವಿಶಾಲವಾದ ಪ್ರಪಂಚ ಜೀವನದಲ್ಲಿ ಬೆಳಗುತ್ತಾನೆಯೋ, ಹಾಗೆಯೇ ಧರ್ಮ ಸಂಸ್ಥೆ ಎಂಬ ತೋಟದಲ್ಲಿ ಬೆಳೆದ ಜೀವನು ಧರ್ಮ ಸಂಸ್ಥೆಯನ್ನೇ ದಾಟಿ ಉತ್ತಮತರವಾದ ಜೀವನದ ಪೂರ್ಣ ದರ್ಶನವನ್ನು ಹೊಂದಬೇಕು. ಇಲ್ಲವಾದರೆ ಸಂಸ್ಥೆ ಎಂಬುದು ಮಾನವನ ಧ್ಯೇಯವಾದ ಬಂಧವಿಮೋಚನೆ ಮತ್ತು ಶಾಶ್ವತ ಆನಂದಾನುಭವಗಳಿಗೆ ಅಡ್ಡಿ ಮಾಡಿ, ಆತ್ಮ ವಿಕಾಸಕ್ರಮವನ್ನೇ ಕೊಂಕುಮಾಡಿ, ಜೀವನವನ್ನು ಹಾಳು ಮಾಡುವಂತಹ ಸೆರೆಮನೆಯಾಗಿ ಪರಿಣಮಿಸುವುದು.

ರಾಮಚರಣದಾಸನೂ ರಾಮದಾಸನೂ ಪ್ರಯಾಣ ಬೆಳಸುತ್ತಾ ಹೋದರು. ಅವರಿಬ್ಬರೂ ಮಾತನಾಡುವುದು ಬಹಳ ಅಪೂರ್ವವಾಯಿತು. (ರಾಮಮಂತ್ರ ವನ್ನು ಸದಾ ಉಚ್ಚರಿಸುತ್ತಿರಬೇಕೆಂದು ರಾಮದಾಸನು ರಾಮಚರಣದಾಸನಿಗೆ ಪ್ರೋತ್ಸಾಹಿಸುತ್ತಿದ್ದನು.) ದಾರಿಯಲ್ಲಿ ಕೆಲವು ಸ್ಥಳಗಳಲ್ಲಿ ತಂಗಿದ್ದು, ಇವರು ಕೊನೆಗೆ ಗೋಕರ್ಣವನ್ನು ಸೇರಿದರು.

## (ii) ಗುರುವೂ ಚೇಲನೂ

ಗೋಕರ್ಣ ಅದರಲ್ಲಿರುವ ಪ್ರಸಿದ್ಧವಾದ ಮಹದೇವನ ದೇವಸ್ಥಾನದಿಂದ ಒಂದು ಯಾತ್ರಾಸ್ಥಳವಾಗಿದೆ. ಗ್ರಾಮ ಸಮುದ್ರತೀರದಲ್ಲಿದೆ. ದೇವಾಲಯ ಸಮುದ್ರತೀರದಿಂದ ಸುಮಾರು ಒಂದು ಫರ್ಲಾಂಗ್ ದೂರದಲ್ಲಿದೆ. ದೇವಸ್ಥಾನದ ಕಟ್ಟಡ ವಿಶಾಲವಾದುದು, ಪುರಾತನವಾದುದು. ಅದರ ಅತಿಮುಖ್ಯವಾದ ವಾರ್ಷಿಕೋತ್ಸವ ಶಿವರಾತ್ರಿ. ರಾಮದಾಸನು ಇಲ್ಲಿಗೆ ಬಂದಾಗ ಜಾತ್ರೆಗೆ ಇನ್ನೂ ಹದಿನೈದು ದಿವಸಗಳಿದ್ದುವು. ಈ ದೊಡ್ಡ ಉತ್ಸವವನ್ನು ನೋಡಲು ಯಾತ್ರಿಕರು ಅನೇಕ ಕಡೆಗಳಿಂದ ಬಂದು ತುಂಬುತ್ತಿದ್ದರು. ರಾಮಚರಣದಾಸನೂ ರಾಮ

ದಾಸನೂ ಇಲ್ಲಿಗೆ ಮಧ್ಯಾಹ್ನದ ಹೊತ್ತಿಗೆ ಬಂದರು. ಈ ಊರಿನ ಒಬ್ಬ ಪ್ರಮುಖ ವ್ಯಾಪಾರಿ ಇವರನ್ನು ತನ್ನ ಮನೆಗೆ ಭೋಜನಕ್ಕೆ ಕರೆದು ಬಹಳ ಆದರದಿಂದಲೂ ಪ್ರೀತಿಯಿಂದಲೂ ಕಂಡನು. ಅನಂತರ ಇವರು ದೇವಸ್ಥಾನಕ್ಕೆ ಹೋದರು. ಹೊರಗಣ ಅಂಗಳದ ಮಹಾದ್ವಾರದ ಬಳಿ ಯಾತ್ರಿಕರ ಒಂದು ದೊಡ್ಡ ಗುಂಪು ಇದ್ದಿತು. ಮಹಾದ್ವಾರದ ಉಭಯಪಾರ್ಶ್ವಗಳಲ್ಲಿಯೂ ಯಾತ್ರಿಕ ಸಾಧುಗಳು ಸ್ಥಳಕ್ಕಾಗಿ ಪರದಾಡುತ್ತಿದ್ದರು. ಏಕೆಂದರೆ, ನಿವೇದನಗಳನ್ನು ತಂದ ಯಾತ್ರಿಕರಿಂದ ಇವರಿಗೆ ಹೆಚ್ಚು ಗಮನ ದೊರೆಯುತ್ತಿದ್ದುದು ಈ ಸ್ಥಳದಲ್ಲಿ.

"ಸ್ವಾಮಿಜಿ, ನಾವು ಇಲ್ಲಿಯೇ ಕುಳಿತುಕೊಳ್ಳೋಣ, ಇಲ್ಲಿ ಸ್ಥಳ ತೆರಪಾಗಿದೆ" ಎಂದು ರಾಮಚರಣದಾಸನು ಸೂಚಿಸಿದನು.

"ರಾಮು, ಹೊರಚ್ಚಾಗಿ ಜನಸಂದಣಿ ಇಲ್ಲದ ಸ್ಥಳವನ್ನು ನಾವು ಏಕೆ ಆರಿಸಬಾರದು? ಹಾಗೆ ಮಾಡುವುದೇ ಸರಿ ಎಂದು ಕಾಣುತ್ತದೆ'' ಎಂದು ರಾಮದಾಸನು ಉತ್ತರಕೊಟ್ಟನು. ಮಾತು ಪೂರೈಸುವಷ್ಟರಲ್ಲಿಯೇ "ಇಲ್ಲ ಸ್ವಾಮಿಜಿ, ನಮಗೆ ಈ ಸ್ಥಳವೇ ಪ್ರಶಸ್ತ. ಏಕೆಂದರೆ, ಇಲ್ಲಿಯೇ ಕುಳಿತುಕೊಂಡರೆ ಮಹದೇವನ ಸಾಮೀಪ್ಯ, ಸಾಧುಗಳ ಸಂಗ ಎರಡೂ ದೊರೆಯುತ್ತವೆ" ಎಂದು ರಾಮಚರಣದಾಸನು ಉಸುರಿದನು.

ರಾಮಚರಣದಾಸನು ಕೊಟ್ಟ ಕಾರಣಗಳಿಗೆ ಪ್ರತಿಹೇಳುವಂತಿರಲಿಲ್ಲವಾದುದರಿಂದ ರಾಮದಾಸನು ಒಪ್ಪಿಕೊಂಡನು. ರಾಮಚರಣದಾಸನು ಅಲ್ಲಿ ಒಂದು ಕಡೆ ನೆಲದ ಮೇಲಣ ನೊರಜುಗಲ್ಲನ್ನೂ ಮಣ್ಣನ್ನೂ ಗುಡಿಸಿ ಈ ಸ್ಥಳ ತಮಗೆ ಮೀಸಲಾಗಿಟ್ಟಿದೆ ಎಂದು ತೋರಿಸಲು ನೆಲದಮೇಲೆ ಒಂದು ಬಟ್ಟೆಯನ್ನು ಹಾಸಿದನು. ರಾತ್ರಿಯಾಯಿತು. ಆಸೆಪಟ್ಟ ಆ ಸ್ಥಳದ ಮೇಲೆ ಇಬ್ಬರೂ ಕುಳಿತುಕೊಂಡರು. ಮಹಾದ್ವಾರದ ಬಲಗಡೆ ಪಂಕ್ತಿಯಲ್ಲಿ ಎರಡನೇ ಸ್ಥಳ ಸಿಕ್ಕಿತು. ಇಂತಹ ಅಪೇಕ್ಷಣೀಯವಾದ ಸ್ಥಳ ದೊರೆತುದಕ್ಕಾಗಿ ರಾಮಚರಣದಾಸನಿಗೆ ಹೆಮ್ಮೆ ಉಂಟಾಯಿತು. ಇವರ ಎಡ ಪಾರ್ಶ್ವಕ್ಕೆ ಮೊದಲನೇ ಸ್ಥಳದಲ್ಲಿ ಇಬ್ಬರು ಸಾಧುಗಳು ಕುಳಿತಿದ್ದರು. ಒಬ್ಬನು ವಯಸ್ಸಾದವನು, ಇನ್ನೊಬ್ಬನು ತರುಣನು. ಕತ್ತಲಾಗುವುದಕ್ಕೆ ಮುಂಚೆಯೇ ಮಹಾದ್ವಾರದ ಉಭಯ ಪಾರ್ಶ್ವಗಳೂ ಗೋಡೆಯವರೆಗೂ ಸಾಧುಗಳಿಂದ ತುಂಬಿಹೋದವು. ಎಡ ಪಾರ್ಶ್ವದಲ್ಲಿನ ಸಾಧುಗಳಲ್ಲಿ ವಯಸ್ಸಾದವನು ಗುರು, ಯುವಕನು ಚೇಲ.

"ರಾಮಗಿರಿ, ಚಿಲುಮೆ ಸಿದ್ಧಮಾಡು" ಎಂದು ಕರ್ಕಶ ಧ್ವನಿಯಲ್ಲಿ ಸಾಧುಗುರು ಆಜ್ಞೆಮಾಡಿದನು.

"ಅಪ್ಪಣೆ ಮಹರಾಜ್" ಎಂದು ಚೇಲನು ವಿನಯವಾಗಿ ಉತ್ತರ ಕೊಟ್ಟನು. ಶಿಷ್ಯನು ತನ್ನ ಹೆಗಲಮೇಲಣ ಚೀಲದಿಂದ ಎರಡು ಸಣ್ಣ ಚೀಲ ಗಳನ್ನೂ, ಮಣ್ಣಿನ ಚಿಲುಮೆಯನ್ನೂ, ತೆಂಗಿನನಾರಿನ ಸಂಚಿಯನ್ನೂ ಮತ್ತು ಬೆಂಕಿ ಪೊಟ್ಟಣವನ್ನೂ ತೆಗೆದನು. ಅಮುಕಿ ಗಟ್ಟಿಮಾಡಲ್ಪಟ್ಟಿದ್ದ ಒಂದು ಗಾಂಜಾ ಉಂಡೆ ಯನ್ನು ಒಂದು ಸಣ್ಣ ಚೀಲದಿಂದ ತೆಗೆದು ತನ್ನ ಎಡ ಅಂಗೈಮೇಲೆ ಪ್ರೀತಿಯಿಂದ ಇಟ್ಟುಕೊಂಡು ಲೋಟದಲ್ಲಿನ ನೀರನ್ನು ಹಾಕಿ ನೆನಸಿದನು. ಅದರಲ್ಲಿದ್ದ ಬೀಜ ಗಳನ್ನು ಆರಿಸಿ ತೆಗೆದು ನೀರನ್ನೆಲ್ಲಾ ಹಿಂಡಿದಮೇಲೆ ಇನ್ನೊಂದು ಸಣ್ಣ ಚೀಲದಲ್ಲಿ ಬೆಟ್ಟನ್ನು ಹಾಕಿ ಒಂದು ದೊಡ್ಡ ಚಿಟಿಕೆಯಷ್ಟು ಒಣಗಿದ ಹಳದೀ ಬಣ್ಣದ ತಂಬಾ ಕನ್ನು ತೆಗೆದು ಅದನ್ನು ಎಡ ಅಂಗೈಯಲ್ಲಿದ್ದ ಗಾಂಜಾಕ್ಕೆ ಸೇರಿಸಿ ಮರ್ದಿಸಿದನು.

ಈ ಪುಡಿಯನ್ನು ಒಂದು ರೊಟ್ಟಿಯ ಹಾಗೆ ಮಾಡಿ ತನ್ನ ತೊಡೆಯಮೇಲೆ ಇಟ್ಟುಕೊಂಡು ಅನಂತರ ಗುಂಜಿನ ಸಿಂಬೆಯ ಒಂದು ಚೂರನ್ನು ಕತ್ತರಿಸಿ ಅದನ್ನು ವರ್ತುಳಾಕಾರವನ್ನಾಗಿ ಮಾಡಿ ಅದಕ್ಕೆ ಬೆಂಕಿ ಹಚ್ಚಿದನು. ಅದು ಉರಿಯುತ್ತಿರು ವಾಗ ಚಿಲುಮೆಗೆ ಗಾಂಜಾ ಮತ್ತು ತಂಬಾಕನ್ನು ತುಂಬಿದನು. ಗುಂಜಿನ ಸಿಂಬೆ ಉರಿದು ಕೆಂಪಗೆ ಕೆಂಡವಾಯಿತು. ಇದನ್ನು ತನ್ನ ಬೆಟ್ಟುಗಳಿಂದ ಕೌಶಲ್ಯದಿಂದ ತೆಗೆದು ಚಿಲುಮೆಯ ಬಾಯಮೇಲಿಟ್ಟು ಅವನು 'ಮಹರಾಜ್‌ಜಿ' ಎಂದು ಕೂಗಿದನು. ಗಾಂಜಾ ಸೇವನೆಗೆ ಅಣಿಮಾಡುತ್ತಿದ್ದುದನ್ನು ನೋಡಿ, ಎದುರು ಸಾಲಿನಲ್ಲಿದ್ದ ಒಬ್ಬ ಸಾಧು ಇವನ ಗುರುವಿನ ಬಳಿಗೆ ಬಂದಿದ್ದನು. ಈ ಗುರು ಸಾಧು ಅವನೊಂದಿಗೆ ಆಗ ಮಾತನಾಡುತ್ತಿದ್ದನು. ಚೇಲನು ಚಿಲುಮೆಯನ್ನು ಗುರುವಿಗೆ ಕೊಡಲು ಹೋದಾಗ ಗುರು ಸಿಟ್ಟಿನಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು "ಎಲಾ ದಡ್ಡ, ನನ್ನ 'ಸಾಫಿ' ಎಲ್ಲಿ?" ಎಂದು ಶಿಷ್ಯನಮೇಲೆ ರೇಗಿದನು. (ಸಾಫಿ ಎಂದರೆ ಚಿಲು ಮೆಯ ಕೆಳಭಾಗದಲ್ಲಿ ಸುತ್ತುವ ಬಟ್ಟೆ). "ಸಾಫಿಯಿಲ್ಲದೆ ಚಿಲುಮೆಯನ್ನು ಕೊಡಲು ನಿನಗೆಷ್ಟು ಧೈರ್ಯ? ಮುಟ್ಠಾಳ!" ಎಂದು ಗುರು ಕಿರಿಚಿದನು. ಅವನು ಸಿಟ್ಟಿನಿಂದ ರೇಗುತ್ತಿರುವಾಗ ಶಿಷ್ಯ ಗಾಬರಿಪಟ್ಟ ಮೃಗದಂತೆ ಬಟ್ಟೆಯನ್ನು ಹುಡುಕಲಾರಂಭಿಸಿದನು; ಅಂತು ಅದು ಕೊನೆಗೆ ಸಿಕ್ಕಿತು. ಅದನ್ನು ಒದ್ದೆ ಮಾಡಿದ ಕೂಡಲೆ ಗುರು ಅದನ್ನು ಅವನ ಕೈಯಿಂದ ಕಿತ್ತುಕೊಂಡು ಚಿಲುಮೆಯ ಕೆಳತುದಿಗೆ ಸುತ್ತಿದನು. ಅದನ್ನು ಬಾಯುಹತ್ತಿರ ತೆಗೆದುಕೊಳ್ಳುವುದಕ್ಕೆ ಮುಂಚೆ ಪದ್ಧತಿ ಪ್ರಕಾರ, ಕೈಲಾಸಾಧಿಪತಿ ಶಂಕರನನ್ನು "ಭೋಂ-ಭೋಂ-ಮಹದೇವ-ಕೈಲಾಸಪತಿ-ಭೋಲಾನಾಥ-ಶಂಕರ!" ಎಂದು ಕಿರಿಚಲು ಧ್ವನಿಯಲ್ಲಿ ಸ್ಮರಿಸಿ ದನು. ಅನಂತರ ಚಿಲುಮೆಯನ್ನು ಬಾಯಲ್ಲಿಟ್ಟುಕೊಂಡು ದೀರ್ಘವಾಗಿ ಉಸಿರು ಎಳೆದು ಶಬ್ದಮಾಡಿದನು. ಚಿಲುಮೆಯನ್ನು ತೆಗೆದು, ರೈಲು ಎಂಜನ್ ಹೊಗೆಯ ಮೋಡಪೊಂದನ್ನು ಉಗುಳುವಂತೆ ಬಾಯಿಂದ ಹೊಗೆಯನ್ನು ಬಿಟ್ಟನು.

ಅನಂತರ ಚಿಲುಮೆ ಗಿಡಗನಂತೆ ಕಣ್ಣುಹಾಕಿ ಕಾಯುತ್ತಿದ್ದ ಇನ್ನೊಬ್ಬ ಸಾಧುವಿನ ಕೈಗೆ ಸಾಗಿ ಆತನು ಅದನ್ನು ಸರಿಪಡಿಸಿಕೊಳ್ಳುತ್ತಿದ್ದಾಗ ಗುರು ಹೀಗೆ ಹೇಳಿದನು :

"ರಾಮುಗಿರಿ ಶುದ್ಧ ಕತ್ತೆ. ಅವನು ಬುದ್ಧಿಯಿಲ್ಲದ, ಉಪಯೋಗವಿಲ್ಲದ ಪ್ರಾಣಿ. ಇನ್ನೂ ಕೇಡಾಗಿದ್ದನು, ನನ್ನನ್ನು ಸೇರಿದಮೇಲೆ ಸ್ವಲ್ಪ ವಾಸಿ."

ಗುರುವಿನ ಈ ಮಾತು ಶಿಷ್ಯನ ಹೃದಯಕ್ಕೆ ಶೂಲದಂತೆ ನಾಟಿದಹಾಗೆ ಕಂಡಿತು. ಅವು ಒಳಹೊಕ್ಕು ಅವನ ದೇಹವನ್ನೆಲ್ಲಾ ಬೆಂಕಿ ಮಾಡಿರಬೇಕು. ಅವನ ಮುಖ ಕೆಂಪೇರಿತು. ಅವನು ತುಟಿಗಳನ್ನು ಕಚ್ಚಿಕೊಂಡಿರುವುದನ್ನು ನೋಡಿದರೆ ತನ್ನ ಭಾವಗಳನ್ನು ಅದುಮಿ ಅಂಕೆಯಲ್ಲಿಟ್ಟುಕೊಳ್ಳಲು ಕಷ್ಟಪಡುತ್ತಿರುವಂತೆ ಕಾಣಿಸಿತು. ಚಿಲುಮೆ ಅವನ ಪಾಲಿಗೆ ಬಂದಿತು. ಆದರೆ, ಗುರು ತನ್ನ ಸಾಫಿಯನ್ನು ಇತರರು ಉಪಯೋಗಿಸುವುದು ತನ್ನ ಗೌರವಕ್ಕೆ ಕಡಮೆ ಎಂದು ತಿಳಿದಿದ್ದನು. ಈ ಕಾರಣದಿಂದ ಶಿಷ್ಯನು ಚಿಲುಮೆಯನ್ನು ಅಭ್ಯಾಗತ ಸಾಧುವಿನಿಂದ ತೆಗೆದುಕೊಂಡು, ತನ್ನದೇ ಆದ ಬೇರೆ ಬಟ್ಟೆಯನ್ನು ಒದ್ದೆಮಾಡಿ ಗಾಂಜಾವನ್ನು ಸೇದಿದನು. ಗುರುವಿನ ಸರದಿ ಮತ್ತೆ ಬಂದುದರಿಂದ ಚಿಲುಮೆಯನ್ನು ಆತನು ತೆಗೆದುಕೊಂಡನು. ಹೀಗೆ ಕೆಲವು ನಿಮಿಷ ಕಳೆದುವು. ಗಾಂಜಾ ಸೇದುತ್ತಿದ್ದವರ ಮೆದುಳಿನಮೇಲೆ ಅದು ತನ್ನ ಪ್ರಭಾವವನ್ನು ಬೀರುತ್ತಿದ್ದಿತು. ಅದರ ಅಮಲು ಗುರುವಿನ ಮನಸ್ಸಿನಲ್ಲಿ ಸ್ತಬ್ಧತೆಯನ್ನು ಉಂಟುಮಾಡಿದರೂ, ಶಿಷ್ಯನ ಮನಸ್ಸಿನಲ್ಲಿ ಪ್ರತಿಭಟನೆಯ ಪ್ರವೃತ್ತಿಯನ್ನು ಎಬ್ಬಿಸಿತು. ಸದಾ ಗುರುವಿನ ಬೈಗಳಿಂದ ಮತ್ತು ಹೊಡೆತದಿಂದ ಉತ್ಪನ್ನವಾಗಿ ಬಹುಕಾಲ ಕಷ್ಟದಿಂದ ಅಮುಕಿ ಇಟ್ಟಿದ್ದ ಆ ಶಿಷ್ಯನ ರೋಷ ಈಗ ರಭಸದಿಂದ ಪ್ರಕಟವಾಯಿತು. ಶಿಷ್ಯನು ಗುರುವಿನ ಕಡೆ ತಿರುಗಿ, ಕಟುವಾದ ಧಿಕ್ಕಾರದ ದೃಷ್ಟಿಯಿಂದಲೂ ಹೀಯಾಳಿಸುವ ಹುಸಿನಗೆಯಿಂದಲೂ ಹೀಗೆ ಹೇಳಿದನು :

"ಹೇ ಪಶು! ನಿನ್ನ ಸಹವಾಸ ನನಗೆ ಸಾಕಾಗಿದೆ. ಹನ್ನೆರಡು ವರ್ಷ ಕಾಲದಿಂದಲೂ ನೀನು ನನ್ನಮೇಲೆ ಸುರಿದ ಬೈಗಳ ಮಳೆಯನ್ನು ಸಹಿಸಿದೆನು. ನೀನು ಕ್ರೂರಿ. ನಿನ್ನಲ್ಲಿ ದಯೆಯೆಂಬುದೇ ಇಲ್ಲ. ನೀನು ನನ್ನನ್ನು ನಾಯಿಗಿಂತ ಕಡೆಯಾಗಿ ಕಂಡೆ. ಆದರೆ ನಾನು ಯಾವಾಗಲೂ ವಿನೀತನಾಗಿ ನೀನು ಹೇಳಿದಂತೆ ಕೇಳುತ್ತಾ, ನನ್ನಿಂದ ಆದಷ್ಟು ನಿಷ್ಕಪಟವಾಗಿ ನಿನ್ನ ಸೇವೆ ಮಾಡಿದೆ. ಮೊದಮೊದಲು ನಿನ್ನ ಸೇವೆ ಮಾಡುತ್ತಿದ್ದಾಗ ನೀನು ಭಕ್ತಿ ಮತ್ತು ಜ್ಞಾನದ ಮಾರ್ಗಗಳನ್ನು ತೋರಿಸುತ್ತೀಯೆ ಎಂದು ನಂಬಿದ್ದೆ. ನಾನು ಭಗವತ್ಸಾಕ್ಷಾತ್ಕಾರವನ್ನೂ ಬಂಧವಿಮೋಚನೆಯನ್ನೂ ಹಾರೈಸಿದೆ. ಆದರೆ ನೀನು ಕಪಟಿ, ಮೋಸಗಾರ,

ಅಯೋಗ್ಯ, ಅಧಮ, ಅಜ್ಞಾನಿ, ದುರಹಂಕಾರಿ ಎಂಬುದು ಈಗ ಗೊತ್ತಾಯಿತು. ಆದರೆ ಈಗ ಕೈಮೀರಿಹೋಯಿತು. ನೀನು ಕಲಿಸಿಕೊಟ್ಟ ಗಾಂಜಾ ಸೇವನೆ ನನ್ನನ್ನು ನಿನಗೆ ದಾಸನನ್ನಾಗಿ ಮಾಡಿ ತುಚ್ಛನಾದ ನಿನ್ನೊಡನೆ ನನ್ನನ್ನು ಬಂಧಿಸಿತು. ನಿನ್ನಿಂದ ಪಾರಾಗಲು ನಾನು ಎಷ್ಟೋಸಲ ಶ್ರಮಪಟ್ಟೆ ; ಆಗಲಿಲ್ಲ. ಈ ದುರ್ವ್ಯಸನದಲ್ಲಿ ಬಿಡಿಸಿಕೊಳ್ಳಲಾಗದಂತೆ ಸಿಕ್ಕಿಬಿದ್ದಿದ್ದೇನೆ. ಪಾಪಿ! ನೀನು ನಿನ್ನ ಸ್ವಾರ್ಥಕ್ಕಾಗಿ ನನ್ನನ್ನು ಹಾಳುಮಾಡಿದೆ. ವಿನಾಶಕರವಾದ ಈ ಗಾಂಜಾ ಅಮಲು ನನ್ನ ಬುದ್ಧಿಯನ್ನು ಮಸಕುಮಾಡಿ, ಜ್ಞಾಪಕಶಕ್ತಿಯನ್ನೂ ಯುಕ್ತಾಯುಕ್ತ ವಿವೇಚನೆಯನ್ನೂ ಹಾಳುಮಾಡಿತು. ಅದರ ಅಮಲಿನಲ್ಲಿ ನಾನು ಹುಚ್ಚನಂತೆ ಅಸಂಬದ್ಧವಾಗಿ ಮಾತನಾಡಲು ಪ್ರಾರಂಭಿಸಿದೆ. ನಿನ್ನ ಕ್ರೌರ್ಯದಿಂದ ಸೆಳೆಯಲ್ಪಟ್ಟ ನಾನು, ಅಗಾಧವಾದ, ತಳವಿಲ್ಲದ, ನರಕಕೂಪಕ್ಕೆ ಇಳಿದಿಳಿದು ಹೋಗುತ್ತಿದ್ದೇನೆಂದು ನನಗೆ ತಿಳಿಯಿತು. 'ಓ ದೇವರೇ, ರಕ್ಷಿಸು ರಕ್ಷಿಸು!' ಎಂದು ಎಷ್ಟೋಸಲ ನಾನು ಮೊರೆಯಿಟ್ಟೆ. ನನ್ನಲ್ಲಿ ಎಷ್ಟೇ ತಿದ್ದುಪಾಡು ಆಗದಿದ್ದರೂ ನಾನು ದೇವರನ್ನು ನಂಬಿದೆ. **ಅವನು** ನನ್ನನ್ನು ರಕ್ಷಿಸುವನೆಂಬ ಭರವಸೆ ನನಗೆ ಇದ್ದಿತು. ಈಗ ಕಾಲ ಒದಗಿದೆ. ನಿನ್ನನ್ನು ಖಂಡಿತವಾಗಿಯೂ ಬಿಟ್ಟು ಬಿಡುತ್ತೇನೆ. ಬಿಟ್ಟು ಹೊರಟುಬಾ ಎಂದು ಕೊನೆಗೆ ದೇವರು ನನ್ನನ್ನು ಕರೆದಿದ್ದಾನೆ. ಹೇ ಸ್ವಾಮಿ! ನಿನಗೆ ನಮಸ್ಕಾರ."

ಆಗ ಅವನ ಕಣ್ಣುಗಳಲ್ಲಿ ನೀರು ತುಂಬಿದ್ದಿತು. ಅವನು ಗಾಳಿಗೆ ಸಿಕ್ಕಿದ ಒಣ ಎಲೆಯಹಾಗೆ ಕಂಪಿಸುತ್ತಿದ್ದನು. ಅವನು ಎದ್ದು ನೆಟ್ಟಗೆ ಹೊರಬಾಗಿಲಿಗೆ ಹೋಗಿ ಕತ್ತಲಲ್ಲಿ ಅದೃಶ್ಯನಾದನು.

ಸಾಧುಗಳೆಲ್ಲರೂ ಈ ದೃಶ್ಯವನ್ನು ತವಕದಿಂದ ಈಕ್ಷಿಸುತ್ತಿದ್ದರು. ರಾಮದಾಸನು ರಾಮಚರಣದಾಸನ ಕಡೆಗೆ ತಿರುಗಿ, "ರಾಮ, ನಿನಗೆ ಇದು ಹೇಗೆ ಕಾಣಿಸುತ್ತದೆ?" ಎಂದು ಕೇಳಿದನು.

"ಈ ಗಲಾಟೆಯಾಗುತ್ತದೆಂದು ನಾನು ತಿಳಿದಿರಲಿಲ್ಲ" ಎಂದು ರಾಮಚರಣದಾಸನು ಉತ್ತರಕೊಟ್ಟನು.

"ರಾಮದಾಸನಿಗೇನೋ ಇದು ಸಂತೋಷಕರವಾಗಿದ್ದಿತು. ಇಂತಹ ನಾಟಕ ನೋಡಲು ಅರ್ಹವಾದುದೇ. ಅದು ಹೇಗಾದರೂ ಇರಲಿ, ನಾಳೆ ಹೊರಡುವ ವಿಚಾರದಲ್ಲಿ ಏನು ಹೇಳುತ್ತೀ?"

"ಯಾಕೆ ಕೂಡದು? ಅಗತ್ಯವಾಗಿ ಆಗಲಿ" ಎಂದು ರಾಮಚರಣದಾಸನು ತಕ್ಷಣ ಹೇಳಿದನು.

ಈ ಮಧ್ಯೆ ರಾಮಗಿರಿಯ ನಿಷ್ಠುರೋಕ್ತಿಗಳನ್ನು ಕೇಳಿ, ಸಾಧು ಗುರು ಕ್ರುದ್ಧನಾಗುತ್ತಿದ್ದಾಗ, ಅಭ್ಯಾಗತ ಸಾಧು ಅಲ್ಲಿಂದ ಮೆಲ್ಲಗೆ ಜಾರಿದನು. ಈತನು ರಾಮಗಿರಿಯ ಗುರುವಿನ ಬಳಿ ಇದ್ದಾಗ, ಈತನ ಸ್ಥಳವನ್ನು ಮತ್ತೊಬ್ಬ ಸಾಧು ಆಕ್ರಮಿಸಿಕೊಂಡದ್ದರಿಂದ ಇವರಿಬ್ಬರಿಗೂ ವ್ಯಾಜ್ಯ ಪ್ರಾರಂಭವಾಯಿತು. ಇಬ್ಬರೂ ಸೇರಿ ವಿಪರೀತ ಗದ್ದಲವನ್ನಾರಂಭಿಸಿದರು. ರಾತ್ರಿಯೆಲ್ಲಾ ಗದ್ದಲದಲ್ಲೇ ಕಳೆಯಿತು. ಬೆಳಗಾಗುತ್ತಲೇ ರಾಮದಾಸನೂ ರಾಮಚರಣದಾಸನೂ ತಾವಿದ್ದ ಸ್ಥಳವನ್ನು ಬಿಟ್ಟು ಹೊರಗೆ ಬಂದರು. ಪ್ರೀತಿವಂತ ಆದರವಂತನಾದ ಇನ್ನೊಬ್ಬ ಭಕ್ತನ ಮನೆಯಲ್ಲಿ ಮಧ್ಯಾಹ್ನದ ಊಟವನ್ನು ಮುಗಿಸಿ ಅನಂತರ ಇವರು ಸಮುದ್ರ ತೀರದ ಕಡೆಗೆ ಹೋದರು. ಸಮುದ್ರತೀರದಲ್ಲಿ ವಿಶಾಲವಾದ ಆವರಣ ಒಂದೂ ಅದರಲ್ಲಿ ಕೆಲವು ಕಟ್ಟಡಗಳೂ ಕಾಣಿಸಿದುವು. ವಿಚಾರ ಮಾಡಿದ್ದರಲ್ಲಿ ಅದು ಒಂದು ಬ್ರಹ್ಮಚಾರಿ ಆಶ್ರಮ ಎಂದು ತಿಳಿಯಿತು. ರಾಮದಾಸನಿಗೆ ಆಶ್ರಮವನ್ನು ನೋಡಬೇಕೆಂಬ ಕುತೂಹಲ ಉಂಟಾಯಿತು. ಇಬ್ಬರೂ ದೊಡ್ಡ ಬಾಗಿಲಿಂದ ಒಳಕ್ಕೆ ಹೋಗಿ, ಹಿಂಭಾಗದ ತೆರೆದಿದ್ದ ಒಂದು ಕಟ್ಟಡವನ್ನು ಪ್ರವೇಶಿಸಿ, ಅಲ್ಲಿ ಎತ್ತರವಿಲ್ಲದ ಒಂದು ಬೆಂಚಿನಮೇಲೆ ಕುಳಿತರು. ಸ್ವಲ್ಪ ಹೊತ್ತಿನೊಳಗಾಗಿ ಕಾವಿ ಬಣ್ಣದ ನಿಲುವಂಗಿಯನ್ನು ಧರಿಸಿದ್ದ ಇಬ್ಬರು ತರುಣರು ಬಂದು ನಮಸ್ಕಾರ ಮಾಡಿದರು.

ಆರೋಗ್ಯವಂತರೂ ದೃಢಕಾಯರೂ ಆಗಿದ್ದ ಅವರನ್ನುನೋಡಿ ರಾಮದಾಸನಿಗೆ ತುಂಬಾ ಸಂತೋಷವಾಯಿತು. ಬ್ರಹ್ಮಚರ್ಯದ ವರ್ಚಸ್ಸು ಅವರ ಮುಖದ ಮೇಲೆ ಹೊಳೆಯುತ್ತಿದ್ದಿತು. ಈ ವಿಷಯವನ್ನು ರಾಮದಾಸನು ಅವರಿಗೆ ತಿಳಿಸಿ ಅವರ ಗುರುವಿನ ವಿಚಾರವನ್ನು ಪ್ರಸ್ತಾಪಿಸಿದನು. ಆಶ್ರಮದ ವೆಚ್ಚಕ್ಕಾಗಿ ಧನವನ್ನು ಸಂಗ್ರಹಮಾಡಲು, ಗುರು ಗೋಕರ್ಣವನ್ನು ಬಿಟ್ಟು ಸಂಚಾರದಲ್ಲಿರುವುದಾಗಿ ಅವರಲ್ಲೊಬ್ಬನು ಉತ್ತರ ಹೇಳಿದನು. ಅವನು “ಇಲ್ಲಿ ಒಂದು ಗೋಶಾಲೆ ಇದೆ; ಗೋವುಗಳನ್ನು ಸಾಕುವುದರಲ್ಲಿ ನಾವು ನಿರತರಾಗಿದ್ದೇವೆ; ಅಲ್ಲದೆ ಆಶ್ರಮಿಗಳ ಉಪಯೋಗಕ್ಕಾಗಿ ತರಕಾರಿಯನ್ನು ನಾವೇ ಬೆಳೆಯುವುದರಿಂದ ತೋಟದಲ್ಲಿಯೂ ನಾವೇ ಕೆಲಸಮಾಡಬೇಕಾಗಿದೆ” ಎಂದು ಹೇಳಿದನು.

ಹೀಗೆ ಹೇಳುತ್ತಿದ್ದವನು ಮಾಡಿದ ಸಂಜ್ಞೆಯನ್ನು ಅರಿತು ಇನ್ನೊಬ್ಬ ಬ್ರಹ್ಮಚಾರಿ ಹೊರಟುಹೋಗಿ ಕೆಲವು ನಿಮಿಷದಲ್ಲಿ ಎರಡು ಅಲ್ಯುಮಿನಿಯಮ್ ಬಟ್ಟಲುಗಳ ತುಂಬ ಮಜ್ಜಿಗೆಯನ್ನು ತೆಗೆದುಕೊಂಡುಬಂದನು.

“ಇದನ್ನು ದಯವಿಟ್ಟು ಸ್ವೀಕರಿಸಿ, ಇದು ಆಶ್ರಮದ ಹಸುಗಳು ಕೊಡುವ ಹಾಲಿನಿಂದ ಮಾಡಿದ್ದು” ಎಂದು ಇಬ್ಬರೂ ಕೇಳಿಕೊಂಡರು.

ರಾಮುದಾಸನೂ ರಾಮುಚರಣದಾಸನೂ ಬಹಳ ಸಂತೋಷದಿಂದ ಅದನ್ನು ಕುಡಿದರು. ಅದು ಅಮೃತದಂತೆ ರುಚಿಯಾಗಿದ್ದಿತು. ಆಮೇಲೆ ಇಬ್ಬರು ಬ್ರಹ್ಮ ಚಾರಿಗಳಿಗೂ ವಂದನೆಮಾಡಿ ಇವರು ಆಶ್ರಮದಿಂದ ಹೊರಟರು.

## (iii) ಆಹ, ಒಳ್ಳೆ ಹಾಸ್ಯ !

ಇಷ್ಟು ಹೊತ್ತಿಗೆ ಸಾಯಂಕಾಲ ನಾಲ್ಕು ಗಂಟೆಯಾಗಿದ್ದಿತು. ಉದ್ಘೋಷಿಸುವ ಸಮುದ್ರವನ್ನು ನೋಡುತ್ತಾ ಇಬ್ಬರೂ ಮರಳಮೇಲೆ ನಿಂತಿದ್ದರು. ರಾಮುದಾಸನು ಸುತ್ತ ನೋಡಿದ್ದರಲ್ಲಿ ಅವನ ದೃಷ್ಟಿ ಹತ್ತಿರದಲ್ಲಿಯೇ ಸಮುದ್ರದೊಳಕ್ಕೆ ಚಾಚಿಕೊಂಡಿದ್ದ ಒಂದು ಬೆಟ್ಟದಮೇಲೆ ಬಿದ್ದಿತು.

ರಾಮುಚರಣದಾಸನ ಕಡೆಗೆ ತಿರುಗಿ ರಾಮುದಾಸನು "ರಾಮು, ಆ ಬೆಟ್ಟದ ಮೇಲೆ ಹತ್ತಿ ಹೋಗಿ ರಾತ್ರಿಯನ್ನು ಕಳೆಯುವುದಕ್ಕೆ ಅಲ್ಲಿ ಒಂದು ಸ್ಥಳವೇನಾದರೂ ಸಿಕ್ಕುತ್ತದೆಯೇ ನೋಡೋಣ. ಬೆಟ್ಟದಮೇಲಿನಿಂದ ಸಮುದ್ರ ಮತ್ತು ಭೂಮಿಯ ಸೊಗಸಾದ ನೋಟ ಒಂದನ್ನು ಕಾಣಬಹುದು" ಎಂದು ಹೇಳಿದನು.

ರಾಮುಚರಣದಾಸನು ಸಮ್ಮತಿಸಿದನು. ಇಬ್ಬರೂ ಬೆಟ್ಟದ ಕಡೆಗೆ ನಡೆದರು. ಕರೆಯಲ್ಲಿ ಅಲೆಗಳ ಮಧ್ಯೆ ನಡೆದುಕೊಂಡು ಹೋಗಬೇಕಾಗಿದ್ದಿತು. ನೀರು ಆಳವಾಗಿರಲಿಲ್ಲ. ನೀರನ್ನು ದಾಟಿ ಬೆಟ್ಟದ ತಪ್ಪಲನ್ನು ಸೇರಿ ಒಂದು ದಿಣ್ಣೆಯನ್ನು ಹತ್ತಿದಮೇಲೆ ಒಂದು ಸಣ್ಣ ತಟಾಕ ಕಾಣಿಸಿತು. ಅಶೋಷಿತವಾದ ಒಂದು ಬುಗ್ಗೆಯಿಂದ ಈ ತಟಾಕದಲ್ಲಿ ನೀರು ಯಾವಾಗಲೂ ಒಂದೇ ಮಟ್ಟದಲ್ಲಿ ನಿಂತಿದ್ದಿತು. ಈ ಬುಗ್ಗೆಯ ತಣ್ಣಗಿರುವ ಸಿಹಿಯಾದ ನೀರನ್ನು ಕುಡಿದು ಇವರು ಇನ್ನೂ ಮೇಲಕ್ಕೆ ಹತ್ತಿದರು. ಅಲ್ಲಿ ದೇವಿಯ ಒಂದು ಚಿಕ್ಕದಾದ ದೇವಾಲಯವಿದ್ದಿತು. ಈ ಕೊಳಕ್ಕೂ ಬುಗ್ಗೆಗೂ ರಾಮತೀರ್ಥವೆಂದು ಹೆಸರಿರುವುದಾಗಿ ಪೂಜಾರಿ ಹೇಳಿದನು. ರಾಮುದಾಸನೇ ದಾರಿಯನ್ನು ತೋರಿಸಿಕೊಂಡು ಇವರು ಇನ್ನೂ ಮೇಲಕ್ಕೆ ಹೋದರು. ಕೆಲವು ಗಜ ಹೋದಮೇಲೆ ಬೆಟ್ಟದ ತುದಿ ಸಿಕ್ಕಿತು. ಅದು ವಿಶಾಲವಾದ ಉಬ್ಬು ತಗ್ಗುಗಳಿಂದ ಕೂಡಿದ ಮೈದಾನವಾಗಿದ್ದಿತು. ತಾವು ನಿಂತಿದ್ದ ಸ್ಥಳದಿಂದ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಎತ್ತರದಲ್ಲಿ ಇವರಿಗೆ ಚೌಕವಾದ ಒಂದು ಕಲ್ಲಿನ ಕಟ್ಟಡ ಕಾಣಿಸಿತು. ರಾಮುದಾಸನು ಮೌನವಾಗಿ ಆ ಕಟ್ಟಡದ ಕಡೆಗೆ ನಡೆದನು. ಹಿಂದೆಯೇ ರಾಮುಚರಣದಾಸನೂ ಬಂದನು.

ಕಟ್ಟಡವನ್ನು ಮುಟ್ಟಿದಾಗ ಅದು ಒಂದೇ ಶಿಲೆಯಲ್ಲಿ ಕೊರೆದಿದ್ದ ಮಂಟಪವಾಗಿ ಕಂಡುಬಂದಿತು. ಕಟ್ಟಡದ ಛಾವಣಿ ಎತ್ತರವಿಲ್ಲದ ಒಂದು ಗುಮ್ಮಟ;

ಅದನ್ನು ದಪ್ಪನಾದ ಅದರ ಗೋಡೆಗಳನ್ನು ಕೊರೆದಿದ್ದ ಅದೇ ಅರೆಯಲ್ಲಿ ಕೊರೆದಿದ್ದಿತು. ಈ ಕಲ್ಲು ಕೋಣೆ ಹತ್ತು ಅಡಿ ಚದರ ವಿಸ್ತಾರವಾಗಿಯೂ ಅಷ್ಟೇ ಅಡಿ ಎತ್ತರವಾಗಿಯೂ ಇದ್ದಿತು. ಗುಮ್ಮಟದ ಒಳಭಾಗ ಒಂದು ಬಟ್ಟಲೋಪಾದಿಯಲ್ಲಿದೆ. ಈ ಕಟ್ಟಡದೊಳಕ್ಕೆ ಪ್ರವೇಶಿಸಲು ಎದುರುಬದರಿನ ಗೋಡೆಗಳಲ್ಲಿ ಸಾಧಾರಣ ಎತ್ತರದ ಅಗಲ ಕಿರಿದಾದ ಎರಡು ಕಮಾನು ದಾರಿಗಳಿವೆ. "ರಾಮು, ನಾವು ಗೋಕರ್ಣದಲ್ಲಿರುವಷ್ಟು ದಿವಸವೂ ರಾತ್ರಿಯ ಹೊತ್ತು ಈ ಸ್ಥಳದಲ್ಲಿರೋಣ" ಎಂದು ರಾಮುದಾಸನು ರಾಮುಚರಣದಾಸನಿಗೆ ಹೇಳಿದನು.

ರಾಮುಚರಣದಾಸನು ಸುತ್ತಲೂ ತಿರುಗಿ ನೋಡಿದನು. ರಾತ್ರಿಯ ಹೊತ್ತು ಅಲ್ಲಿರುವುದೆಂಬುದು ಅವನ ಮನಸ್ಸಿಗೆ ರುಚಿಸಲಿಲ್ಲ. ಸಮುದ್ರದ ಕಡೆಯಿಂದ ಈ ಸ್ಥಳದಮೇಲೆ ಚಳಿ ಗಾಳಿ ಬೀಸುತ್ತಿದ್ದಿತು. "ಇಲ್ಲಿ ರಾತ್ರಿ ಬಹಳ ಚಳಿಯಾಗುತ್ತದೆ" ಎಂದು ಅವನು ನುಡಿದನು.

"ಎಲ್ಲಾ ಕಷ್ಟಗಳನ್ನೂ ದೇವರ ಹೆಸರಿನಲ್ಲಿ ಸಹಿಸುವುದಕ್ಕಾಗಿಯೇ ನಾವು ಹೊರಟದ್ದೇವೆ. ರಾಮುದಾಸನಿಗೇನೋ ಅದೇ ಜೀವನ ರಹಸ್ಯ. (ಭಗವಂತನು ತನ್ನ ಇಷ್ಟದಿಂದ ನಮ್ಮನ್ನು ಯಾವ ಸ್ಥಿತಿಯಲ್ಲಿಟ್ಟರೂ ಅದನ್ನು ಸಂತೋಷದಿಂದ ಸ್ವೀಕರಿಸೋಣ)" ಎಂದು ರಾಮುದಾಸನು ಹೇಳಿದನು.

ರಾಮುಚರಣದಾಸನು ಮೌನವಾಗಿದ್ದನು. ಮೌನವೆಂದರೆ ಅರ್ಧ ಸಮ್ಮತಿ. ಸ್ವಲ್ಪ ಹೊತ್ತಾಗುತ್ತಲೇ ರಾಮುಚರಣದಾಸನು, "ಸ್ವಾಮಿಜಿ, ಚಳಿಯ ಹೊಡೆತವನ್ನು ತಡೆಯುವುದಕ್ಕೆ ಬೆಂಕಿಯನ್ನಾದರೂ ಮಾಡೋಣ. ಇಲ್ಲಿಗೆ ಸ್ವಲ್ಪ ದೂರದಲ್ಲಿ ಇಳಿಜಾರಿನ ಮೈದಾನದಲ್ಲಿ ಮರಗಳ ಗುಂಪು ಇದೆ. ಅವುಗಳ ಕೆಳಗೆ ಬಿದ್ದಿರುವ ಒಣಗಿದ ಕಡ್ಡಿ ರಾತ್ರಿಗೆ ನಮಗೆ ಸಾಕಾಗುವಷ್ಟನ್ನು ಶೇಖರಮಾಡಬಹುದು" ಎಂದು ಸೂಚಿಸಿದನು.

ರಾಮುದಾಸನು ಒಪ್ಪಿ ಇಬ್ಬರೂ ಮರಗಳೆಡೆ ಸೋಗಿ ತಮ್ಮ ಬಟ್ಟೆಗಳಲ್ಲಿ ಬೇಕಾದಷ್ಟು ಪುರಲೆಗಳನ್ನು ಕಟ್ಟಿಕೊಂಡು ಕಲ್ಲಿನ ಮಂಟಪಕ್ಕೆ ಬಂದರು.

ಆಗ ಸೂರ್ಯನು ದೂರದ ದಿಗಂತದಲ್ಲಿ ಅಸ್ತಂಗತನಾಗುತ್ತಿದ್ದನು. ಬೆಟ್ಟ ಮತ್ತು ಅದರ ಸುತ್ತಣ ಪ್ರದೇಶ ಅವನ ಹೊಂಬಣ್ಣದಿಂದ ಬೆಳಗುತ್ತಿದ್ದವು. ರಾಮುದಾಸನು ಸಮುದ್ರದ ಕಡೆಯೇ ನೋಡುತ್ತ ನಿಶ್ಚಲನಾಗಿ ನಿಂತನು. ಅದು ಆಗಾಧವಾದ ಬಣ್ಣದ ಹೊಳಪಿನ ದೃಶ್ಯವಾಗಿದ್ದಿತು. ರಾಮುದಾಸನನ್ನು ದೇವರ ಸರ್ವವ್ಯಾಪ್ತಿತ್ವದ ಆನಂದದಲ್ಲಿ ಮುಳುಗಿಸಿದಂಥ ಆ ಅಪರಿಮಿತ ವೈಭವ ಮತ್ತು

ಸೌಂದರ್ಯಗಳ ಸಲುವಾಗಿ ಅವುಗಳ ಒಡೆಯನಾದ ಆ ಲೋಕಸ್ವಾಮಿಯ ಸಿಂಹಾಸನಕ್ಕೆ ರಾಮುದಾಸನಿಂದ ಒಂದು ಮಾನಸಿಕಪ್ರಾರ್ಥನೆ ಸಾರಿತು. ನಿಶೆ ಮೆಲ್ಲಮೆಲ್ಲನೆ ತನ್ನ ಕಪ್ಪುಹೊದಿಕೆಯನ್ನು ಭೂಮಿ ಸಮುದ್ರಗಳ ಮೇಲೆ ಹರಡಿದಳು. ರಾಮುದಾಸನು ಕಲ್ಲುಕೋಣೆಯ ಕಡೆಗೆ ತಿರುಗಿದನು. ಗಾಳಿ ಅಷ್ಟು ಹೊತ್ತಿಗೆ ರಭಸ ವಾಗಿ ಬೀಸುತ್ತಿದ್ದಿತು. ರಾಮುಚರಣದಾಸನು ಬೆಂಕಿಯನ್ನು ಹೊತ್ತಿಸಲು ಪ್ರಯತ್ನ ಪಡುತ್ತಿದ್ದನು. ರಾಮುದಾಸನು ಕೋಣೆಯೊಳಗೆ ಇಣಿಕಿನೋಡಲಾಗಿ, ಬೆಂಕಿಯನ್ನು ಹೊತ್ತಿಸುವ ಆತುರದಲ್ಲಿ ರಾಮುಚರಣದಾಸನು ಆರು ಬೆಂಕಿಕಡ್ಡಿಗಳನ್ನು ಗೀಚಿ ಹಾಕಿ ವಿಫಲನಾಗಿದ್ದುದು ಕಂಡಿತು. ಮಂಟಪದೊಳಕ್ಕೆ ನುಗ್ಗುತ್ತಿದ್ದ ಬಿರುಗಾಳಿ ಬೆಂಕಿಯನ್ನು ಹೊತ್ತಿಸಲು ಅವಕಾಶಕೊಡಲಿಲ್ಲ. ಈ ಗಾಳಿಯಿಂದ ಪುರಲೆಗಳು ಕೂಡ ಹಾರಿಹೋದವು. ಚಳಿಯೂ ಹೆಚ್ಚಾಗಿದ್ದಿತು. ರಾಮುಚರಣದಾಸನು ಅಷ್ಟಕ್ಕೆಲ್ಲ ಸೋಲುವನಲ್ಲ. ಒಣ ಪುರಲೆಗಳನ್ನು ಹಾರಿಹೋಗದಂತೆ ಒಟ್ಟುಗೂಡಿ ಸುತ್ತಾ ಬೆಂಕಿಕಡ್ಡಿಗಳನ್ನು ಗೀಚುತ್ತಲೇ ಇದ್ದನು. ಯಾವುದೂ ಸಾರ್ಥಕವಾಗಲಿಲ್ಲ. ಬೆಂಕಿಕಡ್ಡಿಗಳೆಲ್ಲ ಮುಗಿದುಹೋದುದರಿಂದ ಬೇಸರವಾಗಿ ಅವನು ಬರಿದಾದ ಪೆಟ್ಟಿಗೆಯನ್ನು ಬೀಸಿ ಎಸೆದು ರಾಮುದಾಸನ ಕಡೆಗೆ ತನ್ನ ಪೆಚ್ಚು ಮುಖವನ್ನು ತಿರುಗಿಸಿ, "ಸ್ವಾಮಿಜಿ, ರಾತ್ರಿಗೆ ಬೆಂಕಿ ಇಲ್ಲ!" ಎಂದು ಗಟ್ಟಿಯಾಗಿ ಕಿರಿಚಿದನು.

ಇಷ್ಟುಹೊತ್ತಿಗೆ ಗಾಳಿ ಹುಚ್ಚುಗಾಳಿಯಾಗಿ ಪರಿವರ್ತನೆಯಾಗಿದ್ದಿತು. ಮೈ ಮೇಲಿನ ಬಟ್ಟೆಯನ್ನು ಸಹ ನಿಲ್ಲಿಸಿಕೊಳ್ಳುವಂತಿರಲಿಲ್ಲ. ಗಾಳಿಯೋ ಮಂಜು ಗಡ್ಡೆಯಂತೆ ಕೊರೆಯುತ್ತಿದ್ದಿತು. ಇಬ್ಬರೂ ಮಂಟಪದ ಒಂದು ಮೂಲೆಯಲ್ಲಿ ಹೋಗಿ ಅಡಗಿಕೊಂಡರು. ಅಲ್ಲಿಯೂ ಗಾಳಿ ಬಹು ರಭಸದಿಂದ ಬೀಸುತ್ತಿದ್ದಿತು.

ಮೈಮೇಲಿನ ಬಟ್ಟೆಯನ್ನು ಬಿಗಿಯಾಗಿ ಎಳೆದುಕೊಳ್ಳುತ್ತಾ ರಾಮುಚರಣ ದಾಸನು "ಒಳ್ಳೆ ತಂಟೆಗೆ ಸಿಕ್ಕಿದೆವು" ಎಂದು ಗೊಣಗುಟ್ಟಿದನು. ಉಳಿದೆಲ್ಲಕ್ಕಿಂತ ಹೆಚ್ಚಾಗಿ ಸನ್ನಿವೇಶದ ನಗೆಪಾಡು ಮನಸ್ಸಿಗೆ ಮುಟ್ಟಿ ರಾಮುದಾಸನು ತಡೆಯ ಲಾರದೆ ಚನ್ನಾಗಿ ನಕ್ಕನು.

"ರಾಮು, ಇದೆಲ್ಲ ದೇವರಇಚ್ಛೆ. ಅವನು ಯಾವಾಗಲೂ ಒಳ್ಳೆಯದನ್ನೇ ಮಾಡುತ್ತಾನೆ" ಎಂದು ರಾಮುದಾಸನು ಸಮಾಧಾನಪಡಿಸಿದನು.

ರಾತ್ರಿ ಕಗ್ಗತ್ತಲೆಯಾಗಿದ್ದಿತು. ಆ ಸ್ಥಳದಿಂದ ತಪ್ಪಿಸಿಕೊಂಡುಹೋಗುವ ಮಾತೇ ಸಾಧ್ಯವಾಗಿರಲಿಲ್ಲ. ರಾಮುಚರಣದಾಸನು ದೀರ್ಘವಾಗಿ ಉಸಿರು ತೆಗೆದು ಕೊಳ್ಳುತ್ತ ರಾಮುದಾಸನ ಮಗ್ಗುಲಲ್ಲಿ, ಹಸುಗೂಸು ಮೊಲದ ಮಾಟದಲ್ಲಿ ಬಂದು ಅಂಟಿಕೊಂಡನು.

" ರಾಮ, ಇದೇನು ಚೇಷ್ಟೆ ? " ಎಂದು ರಾಮದಾಸನು ಪ್ರಶ್ನಿಸಿದನು. "ಆಹ, ಒಳ್ಳೆಯ ಹಾಸ್ಯ ! ಗೋಕರ್ಣದಲ್ಲಿ ನಾವಿರುವಷ್ಟು ದಿವಸವೂ ರಾತ್ರಿಯನ್ನು ಇಲ್ಲಿ ಕಳೆಯುವುದಕ್ಕೆ ಪ್ರತಿಯಾಗಿ ಅರುಣೋದಯವಾಗುತ್ತಲೇ ಕಾಲಿಗೆ ಬುದ್ಧಿಹೇಳುವುದು ಮೇಲು" ಎಂದು ರಾಮಚರಣದಾಸನು ಗೊಣಗಿದನು.

ಇದನ್ನು ಕೇಳಿ ರಾಮದಾಸನಿಗೆ ತಡೆಯಲಾರದಷ್ಟು ನಗು ಬಂದು, ಅವನು ಬಿದ್ದು ಬಿದ್ದು ಹೊರಳಿದನು. ಆಗ್ಗೆ ಈ ಹಾಸ್ಯದಲ್ಲಿ ಭಾಗಿಯಾಗುವ ಸಾಮರ್ಥ್ಯ ರಾಮಚರಣದಾಸನಿಗೂ ದೊರೆಯಿತು.

" ನಾಳೆಯ ಮಾತು ನಾಳೆಗೆ, ಈಗಿನ ವಿಷಯ ಈಗ. ರಾಮಮಂತ್ರವನ್ನು ಜಪಿಸುತ್ತಾ ಇರು. ನಿದ್ರೆಯಿಂದ ಜಪಕ್ಕೆ ಭಂಗವಾಗುವ ಪ್ರಮೇಯವಿಲ್ಲ. ಹೊತ್ತನ್ನೆಲ್ಲ ದೇವರಧ್ಯಾನದಿಂದ ತುಂಬೋಣ " ಎಂದು ರಾಮದಾಸನು ಹೇಳಿದನು. ಚಳಿಯಿಂದ ತುಟಿಗಳು ಅದುರುತ್ತಿದ್ದುವು. ಆದರೂ ಜಪ ಭರದಿಂದ ಸಾಗಿತು. ಏನೇ ಆಗಲಿ, ದೇವರು ನಮ್ಮನ್ನು ಎಂತೆಂತಹ ಸನ್ನಿವೇಶದಲ್ಲಿ ಸಿಲುಕಿಸಿದರೂ, ಅದನ್ನು ಸರಿಯಾಗಿ ಗಮನಿಸಿದರೆ ಅದರಲ್ಲಿ ಸಾರ್ಥಕ್ಯವಿದೆ ಎಂಬುದು ಗೊತ್ತಾಗುತ್ತದೆ. ಬೆಳಗಾಯಿತು; ಉದಯಿಸುತ್ತಿರುವ ಸೂರ್ಯನ ಕಿರಣಗಳು ಮಂಟಪದ ಕತ್ತಲನ್ನು ಹೋಗಲಾಡಿಸುತ್ತಿದ್ದಾಗ, ರಾಮಚರಣದಾಸನ ಹೊದ್ದಿಕೆಯಿಂದ ಒಂದು ಧ್ವನಿ ಹೊರಟಿತು. ಅವನು ಬಟ್ಟೆಯ ಕೊನೆಗಳನ್ನು ಭದ್ರವಾಗಿ ಹಿಡಿದು ಸುತ್ತಿಕೊಂಡಿದ್ದನು.

" ಸ್ವಾಮಿಜಿ, ಮುಂದೆ ನಾವೇನು ಮಾಡಬೇಕೆಂಬುದು ರಾಮನ ಇಷ್ಟ ? ನಾನು ಸೂಚಿಸಬಹುದಾಗಿದ್ದರೆ...."

ಅವನು ಏನು ಹೇಳಬೇಕೆಂದಿದ್ದಾನೆಂಬುದನ್ನು ಅರಿತವನಾಗಿ, ರಾಮದಾಸನು " ಸರಿ, ರಾಮು ! ಗೋಕರ್ಣವನ್ನು ಬಿಟ್ಟು ಇನ್ನೂ ಉತ್ತರಕ್ಕೆ ಹೋಗೋಣ, ಏಳು, ಪ್ರಯಾಣ ಮಾಡೋಣ" ಎಂದು ಉತ್ತರವನ್ನಿತ್ತನು.

ಈ ಶಬ್ದವನ್ನು ಕೇಳಿ ರಾಮಚರಣದಾಸನು ತಾನು ಅವಿತುಕೊಂಡಿದ್ದ ಮೂಲೆಯಿಂದ ಛಂಗನೆ ಹಾರಿದನು. ನಿಮಿಷಾರ್ಧದಲ್ಲಿ ಹೆಗಲಿಗೆ ಚೀಲವನ್ನು ಏರಿಸಿ ನೀರಿನ ಲೋಟವನ್ನು ಹಿಡಿದುಕೊಂಡು ಪ್ರಯಾಣಕ್ಕೆ ಸಿದ್ಧನಾದನು. ಬೆಟ್ಟದಿಂದ ಇಳಿದು ಇವರು ಮಾರ್ಗಕ್ಕೆ ಬಂದರು. ಹತ್ತು ಮೈಲಿ ನಡೆದಮೇಲೆ ಒಂದು ಅರಣ್ಯದ ಮಧ್ಯದಲ್ಲಿ ಒಂದು ಕೆರೆ ಮತ್ತು ಚಿಲುಮೆ ಸಿಕ್ಕಿದುವು. ಇವರು ಅಲ್ಲಿ ನಿಂತರು. ರಾಮಚರಣದಾಸನು ತಾನು ತಂದಿದ್ದ ಪದಾರ್ಥಗಳಿಂದ ರೊಟ್ಟಿಯನ್ನೂ ಬೇಳೆ ತೊವ್ವೆಯನ್ನೂ ಮಾಡಿದನು. ಕೆರೆಯಲ್ಲಿ ಸ್ನಾನಮಾಡಿ ಈ ಭೋಜನ ಮಾಡಿದಮೇಲೆ ಆಯಾಸ ನಿವಾರಣೆಯಾಯಿತು. ಅನಂತರ ಅವರು ಬಿಸಿಲಿನ ತಾಪ ಕಡಮೆಯಾಗುವವರೆಗೂ ಮರಗಳ ನೆರಳಲ್ಲಿ ವಿಶ್ರಮಿಸಿಕೊಂಡರು.

# ಅಧ್ಯಾಯ ೫

## ಗೋವಾ ಗಡಿ; ಸೂ[illegible]

### ಕಾವಿ ಉಡುಪು ಕಳ್ಳರ ಲಕ್ಷಣ ಆಗುತ್ತದೆ

ರಾಮದಾಸನೂ ರಾಮಚರಣದಾಸನೂ ಪ್ರಯಾಣಮಾಡಿ ಕಾರ್ವಾರವನ್ನು ಸೇರಿ ಒಂದು ಧರ್ಮಶಾಲೆಯಲ್ಲಿ ಇಳಿದುಕೊಂಡರು. ಮರುದಿನ ಪ್ರಾತಃಕಾಲ ಮತ್ತೆ ಮುಂದೆ ಸಾಗಿದರು. ಸಾಯಂಕಾಲ ನಾಲ್ಕು ಗಂಟೆ ಹೊತ್ತಿಗೆ ಒಂದು ನದಿ ಕಂಡಿತು. ಆ ನದಿಯನ್ನು ದಾಟಬೇಕಾಗಿದ್ದಿತು. ಅಲ್ಲಿ ಒಂದು ಆಶ್ಚರ್ಯಕರ ವಾದ ನೋಟ ಕಾಣಿಸಿತು. ಗಂಡಸರು, ಹೆಂಗಸರು, ಮಕ್ಕಳು, ಸಾವಿರಾರು ಮಂದಿ ಎರಡು ದಡಗಳಲ್ಲಿಯೂ ತುಂಬಿದ್ದರು; ಮತ್ತು ಬೇರೆ ಬೇರೆ ದಿಕ್ಕುಗಳಿಂದ ಅನೇಕರು ಬಂದು ಸೇರುತ್ತಿದ್ದರು. ವಿಚಾರ ಮಾಡಿದ್ದರಲ್ಲಿ, ನದಿಯ ಮಧ್ಯದಲ್ಲಿ ಆರು ತೆಪ್ಪಗಳಿರುವುದಾಗಿಯೂ, ಅವುಗಳಲ್ಲಿ ಒಂದರಲ್ಲಿ ಪ್ರಸಿದ್ಧರಾದ ಸಚ್ಚಿದಾನಂದ ರೆಂಬ ಸಾಧು ಇರುವುದಾಗಿಯೂ, ದಡದಲ್ಲಿದ್ದ ಜನಗಳೆಲ್ಲರೂ ಅವರ ದರ್ಶನಕ್ಕೆ ಬಂದಿರುವುದಾಗಿಯೂ ತಿಳಿಯಿತು.

ಪ್ರತಿಯೊಬ್ಬ ಗಂಡಸೂ ಹೆಂಗಸೂ ಸಾಧುವಿಗೆ ಕಾಣಿಕೆಯಾಗಿ ಒಂದು ತೆಂಗಿನ ಕಾಯಿ, ಊದುಬತ್ತಿ, ಕರ್ಪೂರವನ್ನು ತಂದಿದ್ದರು. ಹಳ್ಳಿಗಾಡಿನ ಈ ಸರಳ ಜನರ ಭಕ್ತಿ ನಿಜವಾಗಿ ಆಶ್ಚರ್ಯಕರವಾಗಿದ್ದಿತು. ಸತ್ಯವಾಗಿ ನೋಡಿದರೆ ಶ್ರದ್ಧೆ ನವನಾಗರಿಕರೆಂದು ಕರೆಯಲ್ಪಡುವ ಪಟ್ಟಣವಾಸಿಗಳಿಗಿಂತಲೂ ನಾಗರಿಕತೆ ಯನ್ನು ಅರಿಯದ ಹಳ್ಳಿಗಾಡಿನ ನಿವಾಸಿಗಳ ಮನಸ್ಸಿನಲ್ಲಿ ಭದ್ರವಾದ ಬೇರನ್ನು ಸುಲಭವಾಗಿ ಊರುತ್ತದೆ.

ರಾಮದಾಸನೂ ರಾಮಚರಣದಾಸನೂ ನದಿಯನ್ನು ದಾಟಿ ಸಾಯಂಕಾಲದ ಹೊತ್ತಿಗೆ ಒಂದು ಹಳ್ಳಿಯನ್ನು ಮುಟ್ಟಿ ಒಂದು ದೇವಸ್ಥಾನದಲ್ಲಿಳಿದುಕೊಂಡರು. ಅವರು ಆಗ ಪೋರ್ಚುಗೀಸರ ಆಡಳಿತಕ್ಕೆ ಸೇರಿದ ಗೋವಾ ಸೀಮೆಯ ಹತ್ತಿರಕ್ಕೆ ಬಂದಿದ್ದರು. ಗಡಿ ಇನ್ನು ಕೆಲವು ಮೈಲಿ ದೂರದಲ್ಲಿದ್ದಿತು. ಮಾರನೆದಿನ ಮಧ್ಯಾಹ್ನದ ಹೊತ್ತಿಗೆ ಇವರು ಗಡಿಯ ಬಳಿಗೆ ಬಂದರು. ಗಡಿಯ ಬಾಗಿಲನ್ನು ದಾಟುವ ಸಮಯಕ್ಕೆ ಸರಿಯಾಗಿ ಒಂದು ದೊಡ್ಡ ನಾಯಿ ದಾರಿಯಲ್ಲಿ ನಿಂತು ಘೋರವಾಗಿ ಬಗುಳುವುದಕ್ಕೆ ಪ್ರಾರಂಭಿಸಿದುದರಿಂದ ಇವರು ಅಲ್ಲಿಯೇ ನಿಲ್ಲಬೇಕಾಯಿತು. ಬಲಗಡೆ ಕೆಲವು ಗಜಗಳ ದೂರದಲ್ಲಿದ್ದ ಗುಡಿಸಲಿನಿಂದ ಒಬ್ಬನು, “ನಿಮ್ಮ ವಿಚಾರ ವನ್ನೆಲ್ಲಾ ಇಲ್ಲಿ ತಿಳಿಸಿದ ಹೊರತು ನೀವು ದಾಟಲಾಗುವುದಿಲ್ಲ. ಇಬ್ಬರೂ ಇಲ್ಲಿ

ಬನ್ನಿ" ಎಂದು ಕೂಗಿದನು. ಅಂತೆಯೇ ಇಬ್ಬರೂ ಗುಡಿಸಿಲಿಗೆ ಹೋದರು. ಆ ಗಡಿಯನ್ನು ಕಾಯುತ್ತಿದ್ದವನು ರೋಮನ್ ಕ್ಯಾಥೊಲಿಕ್ ಪಂಗಡದ ಒಬ್ಬ ಮನುಷ್ಯ. ಕಾವಿ ಬಣ್ಣದ ಉಡುಪನ್ನು ನೋಡಿ ಅವನು, ಸಾಧುಗಳು ಯಾರನ್ನೂ ತಮ್ಮ ಸೀಮೆಗೆ ಬಿಡಕೂಡದೆಂದು ಗೋವಾ ಸರ್ಕಾರದವರು ಆಜ್ಞೆ ಹೊರಡಿಸಿದ್ದಾರೆ, ಎಂದು ತಿಳಿಸಿದನು.

"ಸಾಧುಗಳ ಮೇಲೆ ಏಕೆ ಇಷ್ಟು ಕಾಠಿಣ್ಯ?" ಎಂದು ರಾಮಚರಣ ದಾಸನು ಕೇಳಿದನು.

"ಸಾಧುಗಳು! ಎಂಥ ಒಳ್ಳೇಜನ!" ಎಂದು ಹಂಗಿಸಿ ನುಡಿದು ಅವನು "ಈಗ್ಗೆ ಸ್ವಲ್ಪ ಹಿಂದೆ ಗೋವಾದಲ್ಲಿ ಒಬ್ಬ ಶ್ರೀಮಂತನ ಮನೆಯಲ್ಲಿ ದಾರಿಹೋಕ ಸಾಧುವೊಬ್ಬನು ಕಳವುಮಾಡಿದನು. ಪೋಲೀಸಿನವರು ಅವನನ್ನು ಇನ್ನೂ ಹುಡುಕುತ್ತ ಇದ್ದಾರೆ. ಆದುದರಿಂದಲೇ ಅಂತಹವರನ್ನು ಒಳಕ್ಕೆ ಬಿಡಬಾರದೆಂಬ ಆಜ್ಞೆ ಹೊರಟಿದೆ. ನೀವು ಬಂದ ದಾರಿ ಹಿಡಿದುಕೊಂಡುಹೋಗಿ" ಎಂದು ಹೇಳಿದನು.

ರಾಮಚರಣದಾಸನು "ಅಣ್ಣಾ! ನಮ್ಮನ್ನು ಅಂತಹ ಸಾಧುಗಳೆಂದು ತಿಳಿಯುತ್ತೀಯಾ? ನಾವು ಯಾರಿಗೂ ತೊಂದರೆ ಮಾಡುವವರಲ್ಲವೆಂದು ಖಂಡಿತ ವಾಗಿ ಹೇಳಬಲ್ಲೆವು" ಎಂದನು.

"ಸತ್ಯವಂತ ಸಾಧು, ಕಪಟ ಸಾಧು ಎಂದು ತೀರ್ಮಾನಿಸುವುದು ನನ್ನ ಕೆಲಸವಲ್ಲ. ಅಪ್ಪಣೆಯಂತೆ ನಡೆಯುವುದೆಷ್ಟೋ ಅಷ್ಟೇ ನನ್ನ ಕೆಲಸ. ನೀವು ಒಳಗೆ ಹೋಗಕೂಡದು" ಎಂದು ಅವನು ಖಂಡಿತವಾಗಿ ಹೇಳಿದನು.

ಇಡೀ ದಕ್ಷಿಣ ಮತ್ತು ಪಶ್ಚಿಮ ಹಿಂದೂಸ್ಥಾನದ ಸಾರಸ್ವತ ಜನಗಳಿಂದ ಪೂಜೆಗೊಂಡ ಮೂಲದೈವ ಗೋವೆಯ ಕುಲದೇವಿಯ ಮಂದಿರಕ್ಕೆ ಯಾವಾಗ ಹೋದೇನೆಂದು ರಾಮಚರಣದಾಸನು ತವಕಪಡುತ್ತಿದ್ದನು. ಆದುದರಿಂದ ಅವನು ಕಾವಲುಗಾರನಲ್ಲಿ ತನ್ನ ವಾಗ್ಝರಿಯನ್ನೆಲ್ಲಾ ಸಂಪೂರ್ಣವಾಗಿ ಉಪ ಯೋಗಿಸಿದನು. ಇದು ಯಾವುದೂ ಸಾರ್ಥಕವಾಗಲಿಲ್ಲ. ಹಲವು ಬಾರಿ ಬೇಡಿ ಕೊಂಡ ಮೇಲೆ ಕಾವಲುಗಾರನು "ಒಂದು ಒಪ್ಪಂದದಮೇಲೆ ನಿಮ್ಮನ್ನು ಒಳಹೋಗಲು ಬಿಡಬಲ್ಲೆ. ಅದೇನೆಂದರೆ, ನಿಮ್ಮಬಟ್ಟೆಗಳನ್ನು ಬದಲಾಯಿಸಬೇಕು; ಎಂದರೆ ಕಾವಿ ಬಟ್ಟೆಗಳನ್ನು ತೆಗೆದುಹಾಕಿ ಸಾಧಾರಣ ಬಿಳಿಯ ಬಟ್ಟೆಗಳನ್ನು ಧರಿಸಬೇಕು. ಅಲ್ಲದೆ ಸಾಧುಗಳಂತೆ ತೋರ್ಪಡಿಸಿಕೊಳ್ಳದೆ ಸಾಮಾನ್ಯ ಪ್ರಯಾಣಿಕ ರಂತೆ ನಟಿಸಬೇಕು" ಎಂದು ಹೇಳಿದನು.

ರಾಮದಾಸನು ಎಲ್ಲವನ್ನೂ ನೋಡುತ್ತಾ ನಿಂತಿದ್ದನು. ಏನುಮಾಡ ಬೇಕೆಂದು ಕೇಳುವ ನೋಟದಿಂದ ರಾಮಚರಣದಾಸನು ಅವನಕಡೆಗೆ ತಿರುಗಿದನು. "ರಾಮ, ನಾವು ಗೋವಾಸೀಮೆಯೊಳಗೆ ಕಾಲಿಡಕೂಡದೆಂಬುದು ದೇವರ ಇಚ್ಛೆ ಯಾಗಿರುವಂತೆ ತೋರುತ್ತದೆ. ಬಟ್ಟೆಗಳನ್ನು ಬೇರೆಮಾಡಿಕೊಳ್ಳುವುದಕ್ಕೆ ರಾಮದಾ ಸನು ಎಂದೆಂದಿಗೂ ಒಪ್ಪುವುದಿಲ್ಲ. ಹೃದಯಾಂತರ್ಯಾಮಿಯ ಇಚ್ಛೆಗೆ ವಿರೋಧ ವಾಗಿ ನಡೆಯುವುದಕ್ಕಿಂತ ಹಿಂತಿರುಗುವುದೇ ಮೇಲು. ನಾವು ಹಾಗೆ ಮಾಡಬೇ ಕೆಂಬುದೇ ಅವನ ಇಷ್ಟ" ಎಂದು ರಾಮದಾಸನು ಉತ್ತರಕೊಟ್ಟನು.

ಇಬ್ಬರೂ ಅಲ್ಲಿಂದ ಹಿಂದಿರುಗಿ ಕತ್ತಲಾಗುವುದರೊಳಗಾಗಿ ಹಿಂದಣ ಹಳ್ಳಿ ಯನ್ನು ಸೇರಿ ರಾತ್ರಿಯನ್ನು ಧರ್ಮಶಾಲೆಯ ಒಂದು ಸಣ್ಣ ಕೊಟಡಿಯಲ್ಲಿ ಕಳೆದರು. ರಾಮಚರಣದಾಸನಿಗೆ ಬಹಳ ಅಸಮಾಧಾನವಾಯಿತು. ಇವರು ಮಾರನೆ ಬೆಳಗ್ಗೆ ಅಂಗಡಿ ಬೀದಿಗೆ ಹೋದರು. ಒಬ್ಬ ದಯಾಳು ಕ್ಯಾಥೊಲಿಕ್ ವ್ಯಾಪಾರಿ, ದೋಣಿಯಮೇಲೆ ಕದ್ರಕ್ಕೆಹೋಗಿ ಅಲ್ಲಿಂದ ಉತ್ತರಕ್ಕೆ ಪ್ರಯಾಣಮಾಡಬಹು ದೆಂದು ಸಲಹೆಮಾಡಿ, ಇವರಿಗೆ ರೊಟ್ಟಿ ಬಿಸ್ಕತ್ತುಗಳನ್ನು ಕೊಟ್ಟು ಸತ್ಕರಿಸಿದನು. ಅನಂತರ ಇವರು ನದಿಯ ಕಡೆಗೆ ಹೋಗಿ ಕದ್ರಕ್ಕೆ ಹೋಗುವ ದೋಣಿಯನ್ನು ಏರಿದರು. ಒಬ್ಬೊಬ್ಬರಿಗಾಗಿ ಒಂದೊಂದಾಣೆ ವರಿಯನ್ನು ಕೊಡಬೇಕಾಗಿ ಬಂದಿತು. ಅದನ್ನು ರಾಮಚರಣದಾಸನು ತನ್ನಲ್ಲಿದ್ದ ಕೆಲವು ಆಣೆಗಳಿಂದ ಕೊಟ್ಟನು.

ದೋಣಿಯಲ್ಲಿ ಸರಕುಗಳನ್ನು ಸಾಗಿಸುತ್ತಿದ್ದುದರಿಂದ ಅದು ಅಲ್ಲಲ್ಲಿಯೇ ನಿಂತು ನಿದಾನವಾಗಿ ಮುಂದೆ ಹೋಯಿತು. ಆದರೂ ಕತ್ತಲಾಗುವ ಹೊತ್ತಿಗೆ ಇವರು ಕದ್ರವನ್ನು ಸೇರಿದರು. ರಾತ್ರಿಯಾಗುತ್ತ ಬಂದಹಾಗೆ ಚಳಿ ಬಹಳ ಹೆಚ್ಚಾ ಯಿತು. ಆ ಊರಿನ ಧರ್ಮಶಾಲೆಯಲ್ಲಿ ಸ್ಥಳ ದೊರೆಯದೇ ಹೋದುದರಿಂದ, ಇವರು ನದಿಗೆ ಎದುರಾಗಿದ್ದ ಗ್ರಾಮಾಧಿಕಾರಿಯ ಕಛೇರಿಯ ಕೈಸಾಲೆಯ ಬಯಲಿ ನಲ್ಲಿ ಇಳಿದುಕೊಂಡರು. ಇಷ್ಟು ಹೊತ್ತಿಗೆ ನದಿಯಕಡೆಯಿಂದ ಚಳಿಗಾಳಿ ಬೀಸಲು ಪ್ರಾರಂಭವಾಯಿತು. ರಾಮತೀರ್ಥಬೆಟ್ಟದಮೇಲೆ ಕಲ್ಲುಮಂಟಪದಲ್ಲಿ ಕೆಲದಿನದ ಹಿಂದೆ ಒಂದುರಾತ್ರಿ ಆದಂತೆಯೇ ಇಲ್ಲಿಯೂ ಜಾಗರಣೆಯಾಯಿತು.

ಅರುಣೋದಯವಾಗುತ್ತಲೇ ಇವರು ಅಲ್ಲಿಂದ ಹೊರಟರು. ಮುಂದೆ ದಟ್ಟ ವಾದ ಕಾಡಿನ ಮಧ್ಯೆ ಬೆಟ್ಟದ ಮಾರ್ಗವನ್ನು ಏರಿಹೋಗಬೇಕಾಗಿದ್ದಿತು. ಉದ್ದ ವಾದ ದೊಣ್ಣೆಗಳ ಕೊನೆಗೆ ಭರ್ಜಿಯನ್ನು ಏರಿಸಿಕೊಂಡು ಎದುರಿಗೆ ಬರುತ್ತಿದ್ದ ಕೆಲವು ಪ್ರಯಾಣಿಕರು, ಕಾಡಿನಲ್ಲಿ ಕರಡಿಗಳು ಇರುವುದರಿಂದ ಜೋಪಾನವಾಗಿ ಪ್ರಯಾಣ ಮಾಡಬೇಕೆಂದು ಇವರಿಗೆ ಎಚ್ಚರಹೇಳಿದರು. ಭಗವನ್ನಾಮೋಚ್ಚಾರಣೆ ಮಾಡುತ್ತಿದ್ದರೆ ಹೆದರಿಕೆ ಎಲ್ಲಿದ್ದೀತು? ರಾಮದಾಸನು ಎಂದಿನಂತೆ ಚುರುಕಾಗಿ ನಡೆದನು; ರಾಮಚರಣದಾಸನೂ ಅವನ ಸಮವಾಗಿಯೇ ಹಿಂಬಾಲಿಸಿದನು.

ಮಧ್ಯಾಹ್ನದ ಹೊತ್ತಿಗೆ ಇವರು ಒಂದು ಹಳ್ಳಿಯನ್ನು ಸೇರಿ ಅಲ್ಲಿ ನಿಂತು, ಸ್ನಾನಮಾಡಿ ಕೆಲವು ಉರುಳಗೆಡ್ಡೆಗಳನ್ನು ಬೇಯಿಸಿ ತಿಂದು ಒಂದು ಗಂಟೆ ವಿಶ್ರಮಿಸಿಕೊಂಡು ಮತ್ತೆ ಮುಂದೆ ಹೊರಟರು. ಕಾಡು ಇನ್ನೂ ಉದ್ದಕ್ಕೂ ಇದ್ದಿತು. ಸಮನೆಲವಾದುದರಿಂದ ಜಾಗ್ರತೆ ನಡೆದು ಸೂರ್ಯನು ಮುಳುಗುವ ಹೊತ್ತಿಗೆ ಇವರು ಕುಮಾರವಾಡಿ ಹಳ್ಳಿಯನ್ನು ಮುಟ್ಟಿದರು. ಕದ್ರದಿಂದ ಕುಮಾರವಾಡಿ ಮೂವತ್ತಾರು ಮೈಲಿ ದೂರದಲ್ಲಿದೆ. ಇಷ್ಟುದಾರಿಯನ್ನು ಇವರು ಆ ದಿವಸ ಅರುಣೋದಯದಿಂದ ಸೂರ್ಯಾಸ್ತಮಯದೊಳಗೆ ನಡೆದಿದ್ದರು.

## (ii) ಗೋಮಾತೆ.

ಕುಮಾರವಾಡಿಯಲ್ಲಿ ಇವರಿಗೆ ವಿಶಾಲವಾದ ಒಂದು ಧರ್ಮಶಾಲೆಯಲ್ಲಿ ಸ್ಥಳ ದೊರೆಯಿತು. ಸಾಧುಗಳನ್ನು ನೋಡುವುದಕ್ಕೆ ಒಂದು ದೊಡ್ಡಗುಂಪೇ ಸೇರಿತು. ಅವರ ಗ್ರಾಮಕ್ಕೆ ಸಾಧುಗಳು ಬಂದದ್ದು ಅವರಿಗೆ ತುಂಬಾ ಸಂತೋಷವಾಗಿದ್ದಿತು. ಅವರು ಬಹಳ ಆದರವಂತರು, ಸತ್ಕಾರಪರರು. ಅದರಲ್ಲೂ ಒಬ್ಬ ಉಪಾಧ್ಯಾಯನು ತುಂಬಾ ಆದರಿಸಿ ಹಾಲು ಮುಂತಾದ ಪದಾರ್ಥಗಳನ್ನು ಒದಗಿಸುತ್ತಿದ್ದುದಲ್ಲದೆ ರಾತ್ರಿ ಬೆಚ್ಚಗಿರಲು ಕೊಟಡಿಯಲ್ಲಿ ಬೆಂಕಿ ಕಾಸಿಕೊಳ್ಳುವುದಕ್ಕೂ ಏರ್ಪಾಡು ಮಾಡಿದನು. ರಾತ್ರಿಯೆಲ್ಲಾ ದಪ್ಪನಾದ ಒಣಗಿದ ಕೊರಡುಗಳು ಉರಿಯುತ್ತಿದ್ದುವು. ಚಳಿ ಅಸಾಧ್ಯವಾಗಿದ್ದಿತು. ಆ ಸ್ನೇಹಿತನೇ ಹಾಲನ್ನೂ ಅಲ್ಲದೆ ಜೊತೆಗೆ ಬೇಯಿಸಿದ ಗೆಡ್ಡೆಯನ್ನೂ ಒದಗಿಸಿದನು. ಗೆಡ್ಡೆಗಳು ಬಹಳ ರುಚಿಯಾಗಿದ್ದುವು. ಕದ್ರದಿಂದ ಲೋಂಡ ರೈಲ್ವೆ ಸ್ಟೇಷನ್ನಿನ ವರೆಗೂ ಇರುವ ಎಪ್ಪತ್ತು ಮೈಲಿ ವಿಸ್ತಾರವಾದಕಾಡಿಗೆ ದಂಡಕಾರಣ್ಯವೆಂದು ಹೆಸರಿರುವುದಾಗಿ ಆತನು ತಿಳಿಸಿದನು. ಶ್ರೀರಾಮಚಂದ್ರನು ಲಂಕೆಗೆ ಹೋಗುತ್ತ ಈ ಮಾರ್ಗವಾಗಿಯೇ ಪ್ರಯಾಣ ಮಾಡಿದನು. ಇದು ತಪೋಭೂಮಿ. (ಕಾರ್ವಾರ್ ಹತ್ತಿರ ನೋಡಿದ ಸಾಧು ಸಚ್ಚಿದಾನಂದರು ಈ ಹಳ್ಳಿಯ ಮಗ್ಗುಲ ಕಾಡಿನಲ್ಲೇ ದಿವ್ಯ ಜ್ಞಾನ ಪಡೆದಿದ್ದರು.)

ಹಳ್ಳಿಯ ಹಿಂಭಾಗದಲ್ಲಿ ಒಬ್ಬ ಸಾಧುವಿನ ಸಮಾಧಿಯಮೇಲೆ ಆತನು ಶೇಖರಿಸಿದ್ದ ಹಣದಿಂದ ಒಂದು ಸಣ್ಣ ಆಶ್ರಮ ನಿರ್ಮಾಣವಾಗುತ್ತಿದ್ದಿತು. ಮರುದಿನ ಈ ಪವಿತ್ರಸ್ಥಳಕ್ಕೆ ಇವರನ್ನು ಕರೆದುಕೊಂಡು ಹೋಗುವುದಾಗಿ ಉಪಾಧ್ಯಾಯನು ಹೇಳಿದನು.

ರಾತ್ರಿ ನಿಷ್ಕರ್ಷೆಮಾಡಿದ್ದಂತೆ ಮಾರನೆಯದಿನ ಉಪಾಧ್ಯಾಯನು ಇಬ್ಬರನ್ನೂ ಆ ಆಶ್ರಮಕ್ಕೆ ಕರೆದುಕೊಂಡುಹೋದನು. ಅದು ಹಳ್ಳಿಗೆ ಸಮೀಪದಲ್ಲಿಯೇ ಇದ್ದಿತು. ಆಶ್ರಮ ಸಿದ್ಧವಾಗುತ್ತಿದ್ದಿತು. ಹತ್ತಿರದಲ್ಲೇ ಒಂದು ಝರಿ ಹರಿಯು

ತ್ತಿದ್ದಿತು. ಇವರು ಅದರಲ್ಲಿ ಸ್ನಾನಮಾಡಿದರು. ಉಪಾಧ್ಯಾಯನ ಮನೆಯಲ್ಲಿ ಭೋಜನ ತೀರಿಸಿಕೊಂಡು ಧರ್ಮಶಾಲೆಗೆ ಹಿಂದಿರುಗಿ ಬಂದರು. ಉಪಾಧ್ಯಾಯನು ರಾಮಚರಣದಾಸನಿಗೆ ಸ್ವಲ್ಪ ಹಣ ಕೊಡಲು ಇವನು ಸ್ವೀಕರಿಸಿದನು. ಹಳ್ಳಿಯಿಂದ ನೂರಾರು ಜನ ಬಂದು ಇವರಮೇಲೆ ತಮ್ಮ ಪರಿಶುದ್ಧ ಸರಳ ಪ್ರೇಮವನ್ನು ಸೂಸಿದರು.

ಇವರು ಬೆಳಗಾಗ ಅಲ್ಲಿಂದ ಹೊರಡಬೇಕೆಂದು ಯೋಚಿಸಿದರು. ಕುಮಾರವಾಡಿಯಿಂದ ಹದಿನೈದು ಮೈಲಿ ದೂರದಲ್ಲಿ ಸೂಪವೆಂಬ ಹಳ್ಳಿ ಇದೆ. ಇದೇ ಮುಂದಣ ಮಜಲೆಂದು ನಿಷ್ಕರ್ಷೆಯಾಯಿತು. ಇವರ ಆಗಮನವನ್ನು ತಿಳಿಸಲೋಸುಗ ಉಪಾಧ್ಯಾಯನು ಮೊದಲೇ ಒಬ್ಬ ಆಳನ್ನು ಆ ಹಳ್ಳಿಗೆ ಕಳುಹಿಸಿಕೊಟ್ಟನು. ಸಾಯಂಕಾಲ ಐದುಗಂಟೆಯ ಸಮಯಕ್ಕೆ ಇವರು ಸೂಪವನ್ನು ಸೇರಿದರು. ಸಾಧುಗಳನ್ನು ಎದುರುಗೊಳ್ಳಲು ನೂರಾರು ಜನ ಹಳ್ಳಿಯ ಈಚೆ ಕಾದಿದ್ದರು. ಅವರು ಸಾಧುಗಳನ್ನು ಸೂಪ ನದಿಯ ದಡದಮೇಲಿದ್ದ ಮಾರುತಿ ದೇವಾಲಯಕ್ಕೆ ಮೆರವಣಿಗೆಯಲ್ಲಿ ಕರೆದುಕೊಂಡು ಹೋಗಿ ದೇವಸ್ಥಾನದ ಹೊರಗಿನ ಕೊಟಡಿಯಲ್ಲಿ ಇಳಿಸಿದರು. ಕೊಟಡಿಯಲ್ಲಿ ಬೆಚ್ಚಗಿರಲು ಬೆಂಕಿಯನ್ನು ಹೊತ್ತಿಸುವ ಏರ್ಪಾಡು ಮಾಡಿದರು. ಸಾಧುಗಳ ದರ್ಶನಕ್ಕಾಗಿ ತಂಡೋಪತಂಡವಾಗಿ ಜನ ಬರುತ್ತಿದ್ದುದರಿಂದ ರಾಮದಾಸನು ಹಗಲೂ ರಾತ್ರಿ ಕುಳಿತಿದ್ದಕಡೆಯೇ ಜಾಗರಣೆ ಮಾಡಬೇಕಾಯಿತು. ಆದುದರಿಂದ ರಾಮದಾಸನು ಹಾಲನ್ನು ಮಾತ್ರ ಆಹಾರವಾಗಿ ತೆಗೆದುಕೊಳ್ಳುತ್ತಿದ್ದನು.

ಮಾರನೆಯ ದಿನ ಶಿವರಾತ್ರಿ. ನದಿಯ ಮಧ್ಯದಲ್ಲಿ ಎತ್ತರವಾದ ಪಾಣಿಮೆಟ್ಟಲಿನಮೇಲೆ ಶಿವಲಿಂಗವಿದ್ದಿತು. ಅಲ್ಲಿಗೆ ದೋಣಿಯಲ್ಲಿಹೋಗಲು ಮಾತ್ರ ಸಾಧ್ಯವಿದ್ದಿತು. ಊರಿನ ಪಟೇಲನು ಸಾಧುಗಳ ಆತಿಥ್ಯಕ್ಕೆ ಏರ್ಪಾಡು ಮಾಡಿದನು. ಶಿವಲಿಂಗ ದರ್ಶನವನ್ನೂ ಮತ್ತು ಅಲ್ಲಿ ಪ್ರಸಿದ್ಧವಾದ ಶ್ರೀರಾಮಚಂದ್ರ ದೇವರ ದರ್ಶನವನ್ನೂ ಮಾಡಿಸಿದನು. ಮಾರುತಿ ಮಂದಿರಕ್ಕೆ ಹಿಂದಿರುಗಿ ಬಂದಾಗ ನೂರಾರು ಜನ ಇವರ ಆಗಮನವನ್ನು ನಿರೀಕ್ಷಿಸುತ್ತಾ ಕಾಣಿಕೆಯನ್ನು ಅರ್ಪಿಸಲು ಕಾದಿದ್ದರು.

ಇಲ್ಲಿಂದಾಚೆಗೆ ದರ್ಶನಕ್ಕಾಗಿ ಜನ ಎಡೆಬಿಡದೆ ಬರಲು ಪ್ರಾರಂಭಿಸಿದರು. ಸುತ್ತಮುತ್ತಲ ಹಳ್ಳಿಗಳಿಂದ ಸಾವಿರಾರು ಜನ ಯಾತ್ರಿಕರು ಸಾಧುಗಳನ್ನು ನೋಡುವುದಕ್ಕಾಗಿಯೂ ಶಿವರಾತ್ರಿಯ ಉತ್ಸವಕ್ಕಾಗಿಯೂ ಬಂದು ಸೇರಿದ್ದರು. ಹೀಗೆ ಜನ ರಾತ್ರಿಯೆಲ್ಲಾ ಬರುತ್ತಲೇ ಇದ್ದರು. ಮಾರನೆಯದಿನ ಪ್ರಯಾಣಮಾಡಬೇಕೆಂದು ರಾಮದಾಸನು ಸೂಚಿಸಿದ್ದಕ್ಕೆ ದಯಾಳುವಾದ ಪಟೇಲನು ಇನ್ನೊಂದು ದಿವಸ ಇರಬೇಕೆಂದು ಕೇಳಿಕೊಂಡನು. ರಾಮದಾಸನು ಸಮ್ಮತಿಸಿದನು. ಅಲ್ಲಿದ್ದ

ಕೊನೆಯ ದಿವಸ ಪ್ರಾತಃಕಾಲ ಒಬ್ಬ ಕುಂಟ ಹೆಂಗಸು ತನ್ನ ಗಂಡನೊಂದಿಗೆ ಒಂದು ಬಟ್ಟಲು ನೊರೆಹಾಲನ್ನು ತೆಗೆದುಕೊಂಡು ಬಂದಳು. ಆ ದಂಪತಿಗಳು ರಾಮದಾಸನ ಮಗ್ಗುಲಲ್ಲಿ ಕುಳಿತು ಅವನಿಗೆ ಹಾಲನ್ನು ಕುಡಿಸಿದರು. ಗಂಡನು ಓವರ್‌ಸಿಯರ ಗುಮಾಸ್ತೆ. ಆತನು ಹಾಲಿನ ಕಥೆಯನ್ನು ಹೀಗೆ ಹೇಳಿದನು.

“ ಮಹರಾಜ್, ಒಂದು ವರ್ಷದ ಹಿಂದೆ ಒಂದು ದಿವಸ ನಮ್ಮ ಮನೆಯ ಬಾಗಿಲಲ್ಲಿ, ಬರಿಯ ಅಸ್ಥಿಪಂಜರವಾಗಿದ್ದ ಒಂದು ಹಸು ನಿಂತಿದ್ದಿತು. ಮೇವಿಲ್ಲದೆ ಬಹಳ ಬಡವಾಗಿದ್ದುದರಿಂದ ಅದಕ್ಕೆ ನಡೆಯುವುದೇ ಪ್ರಯಾಸವಾಗಿದ್ದಿತು. ಅದು ಬಹಳ ಕಷ್ಟದಿಂದ ಕಾಲನ್ನು ಎಳೆದು ಹಾಕುತ್ತಿದ್ದಿತು. ಅದರ ಸ್ಥಿತಿಯನ್ನು ನೋಡಿ ಕನಿಕರಪಟ್ಟು ನನ್ನ ಹೆಂಡತಿ ಅದಕ್ಕೆ ಸ್ಥಳಕೊಟ್ಟು ಕಾಪಾಡೋಣವೆಂದು ಸೂಚಿಸಿದಳು. ನಾನು ಒಪ್ಪಿಕೊಂಡೆ. ಹಸುವಿನ ಯಜಮಾನ ಅದನ್ನು ಹೊರ ಹಾಕಿದ್ದಂತೆ ಕಂಡಿತು. ನನ್ನ ಹೆಂಡತಿ ಹಸುವನ್ನು ಒಳಕ್ಕೆ ಕರೆದುಕೊಂಡು ಹೋಗಿ, ಅದಕ್ಕೆ ನಾವು ಮಲಗುವ ಕೋಣೆಯಲ್ಲೇ ಒಂದು ಸ್ಥಳವನ್ನು ಸಿದ್ಧ ಪಡಿಸಿದಳು. ಬಹಳ ಪ್ರೀತಿಯಿಂದ ಶುಶ್ರೂಷೆಮಾಡಿ ಅದನ್ನು ಸಾಕಿದಳು. ಹಸುವಿಗೆ ದಿನದಿನಕ್ಕೆ ಶಕ್ತಿಬಂದಿತು. ನಾವು ಅದನ್ನು ನಮ್ಮಂತೆಭಾವಿಸಿ ಕಾಪಾಡಿದೆವು. ಅದು ಮನೆಯಲ್ಲೆಲ್ಲಾ ಆತಂಕವಿಲ್ಲದೆ ಓಡಾಡಲಾರಂಭಿಸಿತು. ಹಸುವನ್ನು ಕೃಷ್ಣಾ ಬಾಯಿ ಎಂದು ಕರೆದೆವು. ಅದು ಮಲಗುವಸ್ಥಳವನ್ನು ಬಹಳ ಚೊಕ್ಕಟವಾಗಿ ಟ್ಟೆವು. ನಾವಿದ್ದುದು ಬಾಡಿಗೆ ಮನೆ. ಮಹರಾಜ್, ನಾವು ಬಡವರು ಹೌದು. ಆದರೆ ಪ್ರಾಮಾಣಿಕರಾದ ಬಡವರು ದೇವರಿಗೆ ಬಹಳ ಸಮೀಪದಲ್ಲಿರುತ್ತಾರೆಂದು ನಮಗೆ ಗೊತ್ತು. ಆದುದರಿಂದ ನಾವು ಸಂತೋಷವಾಗಿದ್ದೆವು. ಮನೆಯಲ್ಲಿ ಹಸುವಿಗೆ ಸ್ಥಳ ಮಾಡಿದ್ದೇವೆನ್ನುವುದು ಮನೆಯ ಮಾಲೀಕನಿಗೆ ಗೊತ್ತಾಯಿತು. ಮನೆ ಯಲ್ಲಿ ಕಟ್ಟಕೂಡದೆಂದು ಅಡ್ಡಿಮಾಡಿ, ಪ್ರತ್ಯೇಕ ಗುಡಿಸಿಲಿನಲ್ಲಿ ಕಟ್ಟದಿದ್ದಲ್ಲಿ ಮನೆ ಯನ್ನು ಬಿಡಬೇಕೆಂದು ಅವನು ಎಚ್ಚರಿಕೆ ಕೊಟ್ಟನು. ಇದರಿಂದ ನನ್ನ ಹೆಂಡತಿಗೆ ಬಹಳ ಖೇದವಾಯಿತು. ಆದರೆ ಅವಳು ಹಸುವನ್ನು ಬಿಡಲು ಒಪ್ಪಲಿಲ್ಲ. ಹಸು ವನ್ನು ಬೇರೆ ಗುಡಿಸಿಲಿನಲ್ಲಿ ಕಟ್ಟುವುದೂ ಅವಳಿಗೆ ಒಪ್ಪಿಗೆಯಾಗಲಿಲ್ಲ. ಬೇರೆ ಮನೆಯನ್ನು ಹುಡುಕಲು ಹೇಳಿದಳು. ದೇವರ ದಯೆಯಿಂದ ಹೆಚ್ಚು ಶ್ರಮವಿಲ್ಲದೆ ನಮಗೆ ಬೇರೆ ಮನೆ ಸಿಕ್ಕಿತು. ಈ ಮನೆಯಲ್ಲಿ ಹಸುವನ್ನು ಕಟ್ಟಲು ಮನೆಯ ಮಾಲೀಕನು ಅಡ್ಡಿ ಮಾಡಲಿಲ್ಲ.

ಈಗ್ಗೆ ಸುಮಾರು ಆರು ತಿಂಗಳಿಂದ ನಾವು ಈ ಹೊಸ ಮನೆಯಲ್ಲಿ ವಾಸ ಮಾಡುತ್ತಿದ್ದೇವೆ. ಈ ಮಧ್ಯೆ ಈ ಹಸು ನಮ್ಮ ಸೇವೆಯ ಪ್ರತಿಫಲವಾಗಿಯೋ ಎಂಬಂತೆ ಒಂದು ಹೆಣ್ಣು ಕರುವನ್ನು ನಿನ್ನೆತಾನೆ ಈದಿತು. ಈಗ ನಾವು ತಂದಿರು

ವುದು ಕೃಷ್ಣಾಬಾಯಿ ಕೊಟ್ಟಿರುವ ಮೊಟ್ಟಮೊದಲಿನ ಹಾಲು. ಪ್ರಥಮ ಫಲವನ್ನು ದೇವರಿಗೆ ಅರ್ಪಿಸಿದಂತೆ ನಾವು ತಿಳಿಯುತ್ತೇವೆ."

ಆಹಾ! ಇದೆಷ್ಟು ಪ್ರೀತಿ, ಎಷ್ಟು ಭಕ್ತಿ!

## (iii) ಪ್ರೀತಿಯ ವಿಜಯ

ಮಧ್ಯಾಹ್ನವಾದಹಾಗೆ ಪ್ರೇಕ್ಷಕರ ಗುಂಪು ಬೆಳೆಯಿತು. ಕಾಣಿಕೆ ಯಥೇಷ್ಟವಾಗಿ ಸುರಿಯಲಾರಂಭಿಸಿತು. ಕಾಣಿಕೆಯಾಗಿ ಅರ್ಪಿಸಿದ ತೆಂಗಿನಕಾಯಿ ಒಂದು ದೊಡ್ಡ ರಾಶಿಯಾದವು. ದ್ರಾಕ್ಷಿ, ಖರ್ಜೂರ, ಕಲ್ಲುಸಕ್ಕರೆ, ಬೇಕಾದಹಾಗೆ ಬಂದು ಸುರಿದುವು. ಇವುಗಳನ್ನು ಅಲ್ಲಿಯ ಅಸಂಖ್ಯಾತ ಮಕ್ಕಳಿಗೆ ರಾಮದಾಸನು ಧಾರಾಳವಾಗಿ ಹಂಚಿದನು. ರಾಮಚರಣದಾಸನು ಸಂತೋಷದಿಂದ ಈ ಕೆಲಸದಲ್ಲಿ ನೆರವಾದನು. ಇಷ್ಟು ಹೊತ್ತಿಗೆ ಕೊಟಡಿಯ ಒಳಗೂ ಹೊರಗೂ ಜನ ಒತ್ತಾಗಿ ಕಿಕ್ಕಿರಿದು ತುಂಬಿದ್ದರು.

ಬೆಳಗಿನ ಹತ್ತುಗಂಟೆ ಸುಮಾರಿನಲ್ಲಿ ಇಬ್ಬರು ಮುಸಲ್ಮಾನ್ ಪೋಲೀಸಿನವರು ದೇವಸ್ಥಾನಕ್ಕೆ ಬಂದರು.. ಜನಗಳಗುಂಪಿನಲ್ಲಿ ನುಸಿದು ಸ್ಥಳಮಾಡಿಕೊಂಡು ಬಂದು, ಬಾಗಿಲಲ್ಲಿ ನಿಂತಿದ್ದವರನ್ನು ಒರಟಾಗಿ ಎಳೆದುಹಾಕಿ ಕೊಟಡಿಯೊಳಕ್ಕೆ ಹೊಕ್ಕರು. ಅವರ ಒರಟಾದ ಗಡ್ಡಗಳೂ ತಿರುಗುತ್ತಿರುವ ಕಣ್ಣಾಲಿಗಳೂ ಅವರು ಯಾವುದೋ ಒಂದು ನಿರ್ದಯವಾದ ಕೆಲಸವನ್ನು ಮಾಡಲು ಕಂಕಣಬದ್ಧರಾಗಿದ್ದುದನ್ನು ತೋರುತ್ತಿದ್ದುವು. ಅವರು ತಮ್ಮ ಪಾದರಕ್ಷೆಗಳನ್ನು ನೆಲಕ್ಕೆ ರಭಸದಿಂದ ಹೊಡೆಯುತ್ತಾ ಘಟ್ಟಿಯಾಗಿ ಶಬ್ದಮಾಡುತ್ತಾ ಸಾಧುಗಳಕಡೆ ದುರುಗುಟ್ಟಿ ನೋಡಿದರು. ಅವರಲ್ಲಿ ಒಬ್ಬನು ಒಂದು ಪುಸ್ತಕವನ್ನೂ ಒಂದು ಸೀಸದಕಡ್ಡಿಯನ್ನೂ ಜೇಬಿನಿಂದ ತೆಗೆದು ಘಟ್ಟಿಯಾಗಿ ಅಧಿಕಾರವಾಣಿಯಿಂದ, "ಇವರೇನೋ ಸಾಧುಗಳು? ಒಳ್ಳೇದು ನಿಮ್ಮ ವಿಳಾಸಗಳನ್ನು ಕೊಡಿ, ಜಾಗ್ರತೆ! ನಮಗೆ ಬಹಳ ಕೆಲಸವಿದೆ" ಎಂದನು. ರಾಮಚರಣದಾಸನ ಕಡೆಗೆ ತಿರುಗಿ, "ಇಲ್ಲಿಬಾ; ನಿನ್ನ ಊರು ಯಾವುದು?" ಎಂದು ಕೇಳಿದನು.

ರಾಮಚರಣದಾಸನಿಗೆ ಏನೂ ತೋಚಲಿಲ್ಲ. ಏನು ಹೇಳಬೇಕೆಂಬ ಸಲಹೆಗಾಗಿ ಅವನು ರಾಮದಾಸನ ಕಡೆಗೆ ತಿರುಗಿದನು.

"ರಾಮು, ಅನುಮಾನಪಡಬೇಡ. ನಿನ್ನ ಹೆಸರನ್ನು ಹೇಳು, ಮಂಗಳೂರು ವಾಸಸ್ಥನೆಂದು ತಿಳಿಸು" ಎಂದು ರಾಮದಾಸನು ಸಲಹೆಕೊಟ್ಟನು. ಈತನ ಹೆಸರು ಮತ್ತು ವಾಸಸ್ಥಳವನ್ನು ಬರೆದುಕೊಂಡನಂತರ ಪೋಲೀಸಿನವನ ದೃಷ್ಟಿ ರಾಮದಾಸನಕಡೆಗೆ ಹರಿಯಿತು.

ಪೋಲೀಸಿನವನು "ನಿನ್ನ ಹೆಸರು?" ಎಂದು ಕಿರಿಚಿದನು.

ರಾಮದಾಸನು "ರಾಮದಾಸ" ಎಂದನು.

ಪೋಲೀಸಿನವನು "ವಾಸಸ್ಥಳ?" ಎಂದು ಕೂಗಿದನು.

ರಾಮದಾಸನು "ವಿಶ್ವಪ್ರಪಂಚ" ಎಂದು ಉತ್ತರ ಹೇಳಿದನು.

ಈ ಉತ್ತರವನ್ನು ಕೇಳಿ ಪೋಲೀಸಿನವನು ರೇಗಿ ಕಣ್ಣುಗುಡ್ಡೆಗಳನ್ನು ತಿರುಗಿಸುತ್ತಾ ಅತಿಕೋಪವನ್ನು ಪ್ರದರ್ಶಿಸುತ್ತಾ, "ಎಚ್ಚರಿಕೆ! ನನ್ನಲ್ಲಿ ನಿನ್ನ ಹುಡಗಾಟಿಕೆ ಬೇಡ. ನಾನು ಯಾರೆಂಬುದು ನಿನಗೆ ಕಾಣಲಿಲ್ಲವೊ? ನಿನ್ನ ಸ್ಥಳಯಾವುದು?" ಎಂದು ಮತ್ತೆ ಕೂಗಿದನು.

"ಇಡೀ ಪ್ರಪಂಚ" ಎಂದು ರಾಮದಾಸನು ಪುನಃ ಉತ್ತರಕೊಟ್ಟನು. ರಾಮದಾಸನು ಸಮಾಧಾನವಾಗಿದ್ದನು. ನಗುತ್ತಾ ಇದ್ದನು. ರಾಮದಾಸನ ಪುನರುಕ್ತಿಯಿಂದ ಪೋಲೀಸಿನವನಿಗೆ ಬಹಳ ಕೋಪ ಬಂದಿತು. ಬಲಗಾಲಿನಿಂದ ನೆಲವನ್ನು ಅಪ್ಪಳಿಸಿ ಅವನು, "ನನ್ನಲ್ಲಿ ಹುಡುಗಾಟ ಮಾಡಬೇಡ! ನೀನು ಸಮಂಜಸವಾಗಿ ಉತ್ತರ ಕೊಡದಿದ್ದರೆ ನಿನ್ನನ್ನು ದಸ್ತಗಿರಿಮಾಡಿ ಲಾಕಪ್ಪಿನಲ್ಲಿ ಇಡಿಸುತ್ತೇನೆ, ತಿಳಿಯಿತೋ?"ಎಂದು ಭಯಪಡಿಸುವ ಧ್ವನಿಯಲ್ಲಿ ಆರ್ಭಟಿಸಿದನು.

ರಾಮದಾಸನು "ನೀವು ಈ ದಾಸನನ್ನು ಕರೆದುಕೊಂಡುಹೋಗುವ ದಯೆ ತೋರುವುದಾದರೆ ದಾಸನು ಧನ್ಯನು. ಈ ದಾಸನಿಗೆ ದೇವರ ಧ್ಯಾನ ಮಾಡಲ್ಲ ಇಂತಹಸ್ಥಳವೇ ಬೇಕೆಂಬ ನಿಯಮವಿಲ್ಲ. ದೇವರ ಧ್ಯಾನಮಾಡಲು ಇತರ ಸ್ಥಳಗಳಂತೆ ಕಾರಾಗೃಹವೂ ಆಗಬಹುದು'' ಎಂದನು, ಮತ್ತು ನಗುಮುಖದಿಂದ "ಹೇ ಸ್ವಾಮಿ! ನಿನ್ನಲೀಲೆ ಆಶ್ಚರ್ಯಕರ. ಈ ರೂಪದಲ್ಲಿ ಬಂದಿರುವವನು ನೀನಲ್ಲದೆ ಬೇರೆಯಲ್ಲ. ಮಗುವಿನ ಹಟಮಾರಿತನವನ್ನು ಬಿಡಿಸಲು, ತಾಯಿ ಬೆದರಿಸುವ ಮುಸುಕು ಹಾಕಿಕೊಂಡು ತಾನು ದೆವ್ವವೆಂದು ನಟಿಸುತ್ತಾಳೆ. ಗುಬರಿನ ಒಳಗೆ ಇರುವುದು ತಾಯಿಯೆಂದು ಎಲ್ಲಿಯವರೆಗೆ ಮಗುವಿಗೆ ಗೊತ್ತಿಲ್ಲವೋ ಅಲ್ಲಿಯವರೆಗೂ ಮಗು ಹೆದರುತ್ತದೆ. ಮುಸುಕು ಹಾಕಿಕೊಂಡು ಹೆದರಿಸುತ್ತಿರುವುದು ತಾಯಿಯೆಂದು ಮಗುವಿಗೆ ಯಾವಾಗ ತಿಳಿಯುತ್ತದೊ, ಆಗ ಹೆದರದೆ ಮುಸುಕನ್ನು ಎಳೆದು ಹಾಕಿ ತನ್ನ ತಾಯ ನಿಜಸ್ವರೂಪವನ್ನು ಹೊರಗೆಡುಹುತ್ತದೆ. ನೀನೂ ಹೀಗೆಯೇ. ನೀನೇ ರಾಮದಾಸನ ಪ್ರಿಯನಾದ ದೇವರು. ನೀನು ಯಾವ ವೇಷವನ್ನಾದರೂ ಧರಿಸಬಹುದು. ಆದರೂ ನಿನ್ನವೇಷವನ್ನು ಭೇದಿಸಿ ರಾಮದಾಸನು ನಿನ್ನನ್ನು ನೋಡಬಲ್ಲನು. ನಿನ್ನನ್ನು ಕಂಡರೆ ಅವನಿಗೆ ಏನೂ ಹೆದರಿಕೆ ಇಲ್ಲ. ನೀನು ಕಲಿಸಿಕೊಟ್ಟಿರುವ ಮಾತುಗಳಿಂದಲೇ, ರಾಮದಾಸನು ಉತ್ತರ ಕೊಡುತ್ತಿದ್ದಾನೆ'' ಎಂದು ಹೇಳಿದನು.

ಪೋಲೀಸಿನವನು ಇದನ್ನು ಸಾವಧಾನದಿಂದ ಕೇಳುತ್ತಿದ್ದನು. ರಾಮದಾಸನು ಎಂದಿನಂತೆ ಸಮಾಧಾನವಾದ ಸಂತೋಷಚಿತ್ತದಿಂದ ಇದ್ದನು. ಪೋಲೀಸಿನವನಮೇಲೆ ತಕ್ಷಣವೇ ಒಂದು ಪರಿಣಾಮ ಉಂಟಾಯಿತು. ಕಣ್ಣಿನಲ್ಲಿ ಕಾಣಿಸುತ್ತಿದ್ದ ಕ್ರೌರ್ಯದನೋಟ ಹೋಗಿ ಸಮಾಧಾನದ ನೋಟಕ್ಕೆ ಮಾರ್ಪಟ್ಟಿತು. ಕೋಪದಿಂದ ಕೆಂಪೇರಿದ್ದ ಅವನ ಮುಖ ಮೊದಲಿನ ಸೌಮ್ಯಭಾವವನ್ನು, ವರ್ಣವನ್ನು, ತಳೆಯಿತು.

ಕಣ್ಣಿನ ನೋಟವನ್ನು ತಗ್ಗಿಸಿ ಎರಡುಕೈಗಳನ್ನೂ ಜೋಡಿಸಿ ಅವನು "ಮಹರಾಜ್! ನನ್ನ ಹುಚ್ಚುತನಕ್ಕಾಗಿ ಸಾವಿರಸಲ ಕ್ಷಮೆ ಬೇಡುತ್ತೇನೆ. ಯಾರೆಂದು ತಿಳಿಯದೆ ನಿಮ್ಮನ್ನು ಕಠಿಣಶಬ್ದಗಳಿಂದ ದೂಷಿಸಿ ತೊಂದರೆಮಾಡಿದೆನು. ನನ್ನನ್ನು ಸೋಲಿಸಿದುದು, ನಾನು ನಿಮ್ಮಮೇಲೆ ಕೋಪಿಸಿಕೊಂಡು ಬಯ್ಯುತ್ತಿರುವಾಗಲೂ ನಸುನಗೆಯನ್ನು ಬೀರುತ್ತಿದ್ದ ನಿಮ್ಮ ಮುಖ. ನಾನು ಪಶುವಿನಂತೆ ವರ್ತಿಸಿದೆ. ನಿಮ್ಮ ಕ್ಷಮೆಯನ್ನು ಬೇಡುತ್ತೇನೆ, ಮನ್ನಿಸಿ'' ಎಂದು ಅಂಗಲಾಚಿದನು.

ಹೀಗೆಂದು ಅವನು ಪುಸ್ತಕವನ್ನು ನಿಶ್ಶಬ್ದವಾಗಿ ಜೇಬಿಗೆ ಸೇರಿಸಿ, ತನ್ನ ಸ್ನೇಹಿತನೊಂದಿಗೆ ಹೊರಡಲು ಸಿದ್ಧನಾದನು. ರಾಮದಾಸನು ಅವರಿಬ್ಬರಿಗೂ ಒಂದೊಂದು ತೆಂಗಿನಕಾಯಿ ಹೋಳನ್ನೂ ಖರ್ಜೂರವನ್ನೂ ಪ್ರಸಾದವಾಗಿ ಕೊಟ್ಟನು. ಅವನ್ನು ತೀರ ನಮ್ರತೆಯಿಂದ ಸ್ವೀಕರಿಸಿ ಅವರು ಹೊರಟುಹೋದರು. (ದ್ವೇಷ ಮತ್ತು ಕಾಠಿಣ್ಯವನ್ನು ಪ್ರೀತಿ ಸೋಲಿಸಿತು.)

ಪೋಲೀಸಿನವರ ಈ ಕಠಿಣ ವರ್ತನೆಯ ಕಾರಣ ರಾಮದಾಸನಿಗೆ ಅನಂತರ ಗೊತ್ತಾಯಿತು. ಸಾಧುಗಳ ಹೆಸರು ವಾಸಸ್ಥಳವನ್ನು ತಿಳಿಯಲು, ಠಾಣೆಯ ಪೋಲೀಸ್ ಆಫೀಸರು ಇಬ್ಬರು ಹಿಂದೂ ಪೋಲೀಸಿನವರನ್ನು ಕಳುಹಿಸಿದ್ದರಂತೆ. ಮಂದಿರದ ಗುಂಪು ತುಂಬಿದ ಬಾಗಿಲಬಳಿ ಇದ್ದವರು ಅವರಿಗೆ ಸಾಧುಗಳಿಗೆ ತೊಂದರೆ ಮಾಡಬಾರದೆಂದೂ, ಅವರು ಸಾಮಾನ್ಯರಲ್ಲ ಅವರ ಕುಲಗೋತ್ರಗಳನ್ನು ಕೇಳುವುದು ಅವರಿಗೆ ಅವಮಾನ ಮಾಡಿದಂತಾಗುವುದು ಎಂದೂ, ಸಮಾಧಾನಪಡಿಸಿ ಹಿಂದಕ್ಕೆ ಕಳುಹಿಸಿದ್ದರು. ಇದನ್ನು ಕೇಳಿ ತಾವು ಹಿಂದುಗಳು ಆದುದರಿಂದ ಆ ಪೋಲೀಸಿನವರು ಸುಮ್ಮನಾಗಿ, ತಾವು ತರಬೇಕಾಗಿದ್ದ ವಿವರಗಳನ್ನು ತಿಳಿದುಕೊಳ್ಳದೆ ಹಿಂದಿರುಗಿದ್ದರು. ಇದರಿಂದ ಪೋಲೀಸ್ ಅಧಿಕಾರಿಗೆ ಕೋಪಬಂದು ಅವನು ತನ್ನ ಆಜ್ಞೆಯನ್ನು ನೆರವೇರಿಸಲು ಇಬ್ಬರು ಮುಸಲ್ಮಾನ ಪೋಲೀಸರವರನ್ನು ಕಳುಹಿಸಿದನಂತೆ. ಆ ಕಾರಣದಿಂದ ಇವರು ಹೀಗೆ ವರ್ತಿಸಿದ್ದರು.

ದಯಾಳುವಾದ ಪಟೇಲನು ರಾಮದಾಸನಿಗೆ ಚಳಿಯಾಗಬಾರದೆಂದು ದಪ್ಪನಾದ ಹತ್ತಿಯ ಬಟ್ಟೆಯ ನಿಲುವಂಗಿಯೊಂದನ್ನು ದಾನಮಾಡಿದನು.

# ಅಧ್ಯಾಯ ೬

## ದಾರಿ ; ನರಸೋಬವಾಡಿ

### (i) ಮುಸಲ್ಮಾನ ಸ್ನೇಹಿತರು

ಮಾರನೆಯ ದಿವಸ ರಾಮದಾಸನೂ ರಾಮಚರಣದಾಸನೂ ಸೂಪಗ್ರಾಮ ದಿಂದ ಪ್ರಯಾಣ ಮಾಡಿ ಲೋಂಡಾಮಾರ್ಗವಾಗಿ ಕ್ಯಾಸಲ್‌ರಾಕ್ ಸೇರಿ ರೈಲು ಹತ್ತಿ ಬೆಳಗಾಂವನ್ನು ಮುಟ್ಟಿದರು. ಇಲ್ಲಿಂದ ಕಾಲುನಡೆಯಲ್ಲಿ ಪ್ರಯಾಣ ಬೆಳೆಸಿ ಷಹಪುರವೆಂಬ ಪಟ್ಟಣವನ್ನು ಸೇರಿದರು. ಇಲ್ಲಿ ರಾಮಚರಣದಾಸನ ಪಾಕ ನೈಪುಣ್ಯಕೆಲಸಕ್ಕೆ ಬಾರದಾಯಿತು. ಅವನು ರಾಮದಾಸನಿಗೆ ಅರೆವಾಸಿ ಬೇಯಿಸಿದ ತರಕಾರಿಯನ್ನು ಬಡಿಸಿದನು. ಅದನ್ನು ಅಗಿದು ಗಂಟಲಲ್ಲಿ ಇಳಿಸುವುದು ರಾಮದಾಸನಿಗೆ ಶುದ್ಧಾಂಗ ಪ್ರಯಾಸವಾಯಿತು. ಒಂದು ರಾತ್ರಿ ಇಲ್ಲಿ ತಂಗಿದ್ದು ಇವರು ಮುಂದೆ ಪ್ರಯಾಣ ಮಾಡಿದರು. ಫಲ ಪಚ್ಚೆಗಳಿಂದ ನಿಬಿಡವಾದ ಈ ಪ್ರಾಂತದಲ್ಲಿ ಪ್ರಯಾಣಮಾಡುತ್ತಾ ಇವರು ಕಬ್ಬಿನ ತೋಟಗಳಬಳಿ ಬಂದರು. ರೈತಾಪಿಜನ ಪ್ರಯಾಣಿಕ ಸಾಧುಗಳನ್ನು ಆದರದಿಂದ ಕರೆದು ಅವರಿಗೆ ತಂಪಾಗಿರುವ ಕಬ್ಬಿನಹಾಲನ್ನೂ ಬೆಲ್ಲವನ್ನೂ ಕೊಟ್ಟರು.

ಇಲ್ಲಿಂದ ಮುಂದೆ ವಿಸ್ತಾರವಾದ ಬೆಟ್ಟ ಗುಡ್ಡಗಳ ಪ್ರಾಂತದಲ್ಲಿ ಪ್ರಯಾಣ ಮಾಡಬೇಕಾಯಿತು. ಇಲ್ಲಿ ಇವರ ಅಂಗಾಲುಗಳ ವಿಚಾರವಾಗಿ ಒಂದು ಮಾತನ್ನು ಹೇಳಬೇಕಾಗಿದೆ. ದಿನಗಟ್ಟಲೆ ಒರಟಾದ ನೊರಜುಗಲ್ಲಿನ ನೆಲದಮೇಲೆ ಬರಿಯ ಕಾಲಿನಲ್ಲಿ ಪ್ರಯಾಣ ಮಾಡುತ್ತಿದ್ದುದರ ಫಲವಾಗಿ ಅಂಗಾಲುಗಳು ಸವೆದು ಚರ್ಮ ಬಹಳವಾಗಿ ಕಿತ್ತುಹೋಗಿದ್ದುದೂ ಅಲ್ಲದೆ ಬೊಬ್ಬೆಗಳೆದ್ದು ಹುಣ್ಣುಗಳೂ ದೊಡ್ಡ ಗಾಯಗಳೂ ಆಗಿದ್ದುವು. ಇವುಗಳನ್ನು ಗಮನಿಸದೆ ರಾಮದಾಸನು ಎಂದಿನಂತೆ ವೇಗವಾಗಿ ನಡೆದು ಹೋಗುತ್ತಿದ್ದನು. ಆದರೆ ರಾಮಚರಣದಾಸನು ಗೊಣಗುಟ್ಟಿಕೊಂಡು ಕುಂಟುತ್ತಾ ಹಿಂದೆ ಬರುತ್ತಿದ್ದನು. ಮಧ್ಯಾಹ್ನದ ಹೊತ್ತಿಗೆ ಇವರು ಎತ್ತರವಾದ ಸಮಭೂಮಿಯ ಮಧ್ಯೆ ಇದ್ದ ಒಂದುಪಟ್ಟಣವನ್ನು ಸೇರಿದರು. ಈ ಸ್ಥಳದ ಸುತ್ತಲೂ ಹಲವು ಮೈಲಿಗಳವರೆಗೂ ಜನವಾಸವೆನ್ನುವುದು ಇರಲಿಲ್ಲ.

ಈ ಪಟ್ಟಣವನ್ನು ಪ್ರವೇಶಿಸಿದ ಮೇಲೆ ಇವರು ಅಲ್ಲಿನ ದೇವಾಲಯಗಳಿಂದ ಸದಾವರ್ತ ಎಂದರೆ ಭಿಕ್ಷವನ್ನು ಬೇಡಿತಂದರು. ರಸ್ತೆಯ ಮಗ್ಗುಲಲ್ಲಿದ್ದ ಒಂದು ಧರ್ಮಶಾಲೆಯ ಚಿಕ್ಕ ಕೊಟಡಿಯಲ್ಲಿ ಅಡಿಗೆ ಮಾಡಲು ಪ್ರಾರಂಭವಾಯಿತು.

ರಾಮಚರಣದಾಸನು ಅಡಿಗೆ ಮಾಡುತ್ತಿದ್ದಾಗ ರಾಮದಾಸನು ಕೈಸಾಲೆಯಲ್ಲಿ ಕುಳಿತಿದ್ದನು. ಅಡಿಗೆಯಲ್ಲಿ ಸಹಾಯಮಾಡಲು ರಾಮಚರಣದಾಸನು ರಾಮದಾಸನಿಗೆ ಎಂದಿಗೂ ಅವಕಾಶ ಕೊಡುತ್ತಿರಲಿಲ್ಲ. ಸ್ವಲ್ಪ ಹೊತ್ತಿನೊಳಗಾಗಿ ಒಬ್ಬ ಮುಸಲ್ಮಾನ ವ್ಯಾಪಾರಿ ಬಂದು ಕೈಸಾಲೆಯ ಕೊನೆಯಲ್ಲಿ ರಾಮದಾಸನಿಗೆ ಎದುರಾಗಿ ಕುಳಿತುಕೊಂಡು, ಸ್ವಾರಸ್ಯವಾಗಿ ಮಾತನಾಡತೊಡಗಿ ಈ ಪ್ರವಾಸಿಗಳ ವಿಚಾರವಾಗಿ ಅನೇಕ ವಿಷಯಗಳನ್ನು ಸಂಗ್ರಹಿಸಿದನು. ಇಬ್ಬರ ಅಂಗಾಲುಗಳೂ ಕ್ಷತವಾಗಿರುವುದನ್ನು ನೋಡಿ ಮರುಗಿದನು. ಮೃದುವಾದ ಅವನ ಹೃದಯದಲ್ಲಿ, ಪ್ರೀತಿ ಉಕ್ಕಿಬಂದಿತು.

“ ನಾನು ಕೊಡುವ ಪದಾರ್ಥಗಳನ್ನೇ ತೆಗೆದುಕೊಂಡು ನೀವು ಅಡಿಗೆಮಾಡಿ ಊಟ ಮಾಡಬೇಕೆಂದು, ನನಗೆ ಬಹಳ ಆಶೆಯಾಗಿದೆ ” ಎಂದು ಹೇಳಿ ಅವನು ರಾಮಚರಣದಾಸನನ್ನು ಪೇಟೆಗೆ ಕರೆದು ಕೊಂಡು ಹೋಗಿ ಒಂದು ರೂಪಾಯಿ ವೆಚ್ಚಮಾಡಿ ಹಸನಾದ ಸುವಾಸನೆಯ ಅಕ್ಕಿ ಬೇಳೆಗಳನ್ನೂ ಮತ್ತು ತುಪ್ಪವನ್ನೂ ಕೊಡಿಸಿ ಜೊತೆಗೆ ಬಂದನು. ಅಡಿಗೆ ಸಿದ್ಧವಾಗುತ್ತಿದ್ದಾಗ: “ ನಿಮಗಾಗಿ ಐದು ರೂಪಾಯಿ ವೆಚ್ಚಮಾಡಬೇಕೆಂಬ ಇಷ್ಟವಿದೆ. ಇನ್ನು ಉಳಿದಿರುವ ಮೂರು ಚಿಲ್ಲರೆ ರೂಪಾಯಿಗಳನ್ನು ಇಲ್ಲಿಂದ ಕೊಲ್ಲಾಪುರಕ್ಕೆ ಬಸ್ಸಿನಲ್ಲಿ ಪ್ರಯಾಣಮಾಡಲು ಉಪಯೋಗಿಸಿಕೊಳ್ಳಿರಿ. ಬಸ್ಸು ಇನ್ನೊಂದು ಗಂಟೆಗೆ ಹೊರಡುತ್ತದೆ. ನಿಮ್ಮ ಕಾಲುಗಳಸ್ಥಿತಿ ಬಹಳ ಶೋಚನೀಯವಾಗಿದೆ. ಆದುದರಿಂದ ನೀವು ಇಲ್ಲಿಂದ ಮೂವತ್ತು ಮೈಲಿಯನ್ನಾದರೂ ಬಸ್ಸಿನಲ್ಲಿ ಪ್ರಯಾಣ ಮಾಡಬೇಕೆಂದು ನನ್ನ ಅಭಿಲಾಷೆ ” ಎಂದು ಹೇಳಿದನು.

(ದೇವರು ನಿಜವಾಗಿಯೂ ಪ್ರೇಮಮಯನು ಮತ್ತು ಕರುಣಾಮಯನು.) ದಯಾಳುವಾದ ಮುಲ್ಮಾನ ಸ್ನೇಹಿತನು ಇವರನ್ನು ಸೌಖ್ಯವಾಗಿ ಬಸ್ಸಿನಲ್ಲಿ ಕುಳ್ಳಿರಿಸಿ ಹೊರಟುಹೋದನು. ಇವರು ಸಾಯಂಕಾಲ ಐದುಗಂಟೆಯ ಹೊತ್ತಿಗೆ ಕೊಲ್ಲಾಪುರದ ರೈಲ್ವೇ ಸ್ಟೇಷನ್ನನ್ನು ಮುಟ್ಟಿದರು.

ಬಸ್ಸಿನಿಂದ ಇಳಿದ ಮೇಲೆ ರಾಮದಾಸನು ನರಸೋಬವಾಡಿದಾರಿಯಲ್ಲಿ ಹತ್ತಿರದ ಮಜಲಾದ ಷಿರಾಯ್ ಸ್ಟೇಷನ್ನಿಗೆ ಛಾರ್ಜ್ ಎಷ್ಟೆಂದು ಬಸ್ಸಿನ ಸಾರಥಿಯನ್ನು ಪ್ರಶ್ನಿಸಿದನು. ಸುಮಾರು ಒಂದು ರೂಪಾಯಿ ಆಗುವುದಾಗಿ ತಿಳಿಯಿತು. ರಾಮದಾಸನು ವಿಚಾರಿಸಿದುದರಲ್ಲಿ ರಾಮಚರಣದಾಸನ ಬಳಿ ಒಂದು ರೂಪಾಯಿ ಮತ್ತು ಸ್ವಲ್ಪ ಚಿಲ್ಲರೆ ದುಡ್ಡು ಮಾತ್ರ ಇದ್ದವು. ರೈಲಿನಲ್ಲಿ ಪ್ರಯಾಣ ಮಾಡಲು ಸಾಕಾದಷ್ಟು ದುಡ್ಡು ಇಲ್ಲದಿದ್ದರೆ ಕಾಲು ನಡೆಯಲ್ಲೇ ಹೋಗಲು ರಾಮದಾಸನು ಸಿದ್ಧನಾಗಿದ್ದನು. ಬಸ್ಸಿನ ಸಾರಥಿ ಇಬ್ಬರನ್ನೂ ಕುತೂಹಲದಿಂದ

ನೋಡುತ್ತಿದ್ದನು. ಇಬ್ಬರಿಗೂ ರೈಲು ಪ್ರಯಾಣಕ್ಕೆ ಸಾಕಾಗುವಷ್ಟು ದುಡ್ಡಿಲ್ಲ ವೆಂಬುದನ್ನು ಅರಿತವನಾಗಿ ರಾಮಚರಣದಾಸನ ಕೈಯಲ್ಲಿ ಒಂದು ರೂಪಾಯನ್ನು ಇಟ್ಟು "ಈಗ ನಿಮ್ಮಿಬ್ಬರಿಗೂ ಸಾಕಾಗುತ್ತದೆ. ನೀವು ರೈಲಿನಲ್ಲೇ ಹೋಗಬಹುದು" ಎಂದನು.

ಈ ಸ್ವತಏವ ಸಹಾಯದ ಹೊಳೆ ಎಲ್ಲಿಂದ ಹರಿಯಿತು ? ಖಂಡಿತವಾಗಿಯೂ ಕಷ್ಟ ಸುಖಗಳನ್ನು ಅರಿತ ಪ್ರೀತಿ ಮಯವಾದ ದೇವರ ಹೃದಯದಿಂದಲೇ!

ಷಿರಾಯ್ ಸ್ಟೇಷನ್ನನ್ನು ಸೇರಿದಾಗ ಪೂರ್ತಿ ಕತ್ತಲಾಗಿದ್ದಿತು. ರೈಲ್ವೆ ಸ್ಟೇಷನ್ನಿನಿಂದ ನರಸೋಬವಾಡಿ ಇನ್ನೂ ಒಂಬತ್ತುಮೈಲಿ ದೂರಇದ್ದಿತು. ಕತ್ತಲಲ್ಲಿ ವಿಶ್ರಾಂತಿಗಾಗಿ ಒಂದು ಸ್ಥಳವನ್ನು ಹುಡುಕಾಡಿ ಇವರು ಒಂದು ಮಾರುತಿ ದೇವಾಲಯವನ್ನು ಸೇರಿದರು. ರಾತ್ರಿಯನ್ನು ಅಲ್ಲಿ ಕಳೆದು ಪ್ರಾತಃಕಾಲ ಮುಂಚಿತ ವಾಗಿಯೇ ಪ್ರಯಾಣ ಮಾಡಿ ಮಧ್ಯಾಹ್ನಕ್ಕೆ ಮುಂಚೆ ನರಸೋಬವಾಡಿಯನ್ನು ಮುಟ್ಟಿದರು.

## (ii) ತನ್ನದೆಂಬಮಮತೆ—ಒಂದು ಅಡಚಣೆ

ನರಸೋಬವಾಡಿ ಮಹಾರಾಷ್ಟ್ರದಲ್ಲಿ ಅತಿಮುಖ್ಯವಾದ ದೇವಸ್ಥಾನಗಳಲ್ಲಿ ಒಂದು. ಇದು ಕೃಷ್ಣಾನದಿಯ ದಡದಮೇಲಿದೆ. ದಡದಮೇಲೆ ಇನ್ನೂಸ್ವಲ್ಪ ಎತ್ತರ ದಲ್ಲಿ ದತ್ತಾತ್ರೇಯ ದೇವಸ್ಥಾನವಿದೆ. ದತ್ತಾತ್ರೇಯರು ದೊಡ್ಡ ಅವಧೂತರು. ಇವರ ಜೀವನವೂ ಸಂದೇಶವೂ ಅತಿಗಹನವಾದ ಅಧ್ಯಾತ್ಮಿಕ ವಿಚಾರಕ್ಕೆ ಸಂಬಂಧ ಪಟ್ಟವು. (ನಿಸ್ಸಂದೇಹವಾಗಿಯೂ ಅವರು ಭಗವಂತನ ಒಂದು ಅವತಾರ.) ಸಾಧುಗಳು ಬಟ್ಟೆಗಳನ್ನು ಒಗೆದುಕೊಂಡು ತಣ್ಣಗಿರುವ ನದಿಯ ನೀರಿನಲ್ಲಿ ಸ್ನಾನ ಮಾಡಿದರು. ಆ ಮೇಲೆ ದೇವಸ್ಥಾನಕ್ಕೆ ಹೋಗಿ ವಜ್ರಾಭರಣಗಳಿಂದಲೂ, ಕಿರೀಟ ದಿಂದಲೂ ಅಲಂಕರಿಸಲ್ಪಟ್ಟಿದ್ದ, ಶ್ವೇತಶಿಲಾನಿರ್ಮಿತವಾದ ದತ್ತಾತ್ರೇಯ ಮೂರ್ತಿಯ ದರ್ಶನ ಮಾಡಿ ಹೊರಗಣ ಜಗುಲಿಯ ಮೇಲೆ ಕುಳಿತುಕೊಂಡರು.

ಇಲ್ಲಿ ಸಾಧುಗಳೂ ಮತ್ತು ಬಡವರಾದ ಭಕ್ತರೂ 'ಮಧುಕರಿ' ಎಂದರೆ ನಾಲ್ಕು ಅಥವ ಹೆಚ್ಚು ಮನೆಗಳಿಗೆ ಹೋಗಿ ಪಕ್ವವಾದ ಅನ್ನವನ್ನು ಭಿಕ್ಷಬೇಡುವ ಮೂಲಕ ದೊರೆಕಿಸಿಕೊಳ್ಳುವುದು ಪದ್ಧತಿಯಾಗಿದೆ. ಮಧ್ಯಾಹ್ನದ ಹೊತ್ತಿನಲ್ಲಿ ರಾಮ ದಾಸನೂ ರಾಮಚರಣದಾಸನೂ ಮಧುಕರಿಗಾಗಿ ಹೊರಟು ನಾಲ್ಕು ಮನೆಗಳಿಂದ ಎಂಟು ಅನ್ನದ ಉಂಡೆಗಳನ್ನು ತೊವ್ವೆಯನ್ನು ಭಿಕ್ಷಬೇಡಿ ತಂದರು. ಒಂದು ದೊಡ್ಡ ಮರದ ನೆರಳಿನಲ್ಲಿ ಚೊಕ್ಕಟವಾದ ಸ್ಥಳದಲ್ಲಿ ಕುಳಿತುಕೊಂಡು ರಾಮಚರಣದಾಸನ ಬಳಿ ಇದ್ದ ಅಲ್ಯೂಮಿನಿಯಂ ತಟ್ಟೆಯಲ್ಲಿ ಅನ್ನವನ್ನು ತೊವ್ವೆಯನ್ನು ಸೇರಿಸಿಕಲಸಿ

ಇವರಿಬ್ಬರೇ ಇದ್ದಾಗ ಅನೇಕವೇಳೆ ಮಾಡುತ್ತಿದ್ದಂತೆ, ಅದೇ ತಟ್ಟೆಯಲ್ಲೇ ಇಬ್ಬರೂ ಒಟ್ಟಿಗೆ ಊಟಮಾಡಲು ಪ್ರಾರಂಭಿಸಿದರು. ಎರಡು ಮೂರು ತುತ್ತುಗಳನ್ನು ತೆಗೆದುಕೊಳ್ಳುವಷ್ಟರಲ್ಲಿಯೇ, ಒಂದು ಗಿಡಗ ಹಾರಿಬಂದು ಕಲಿಸಿದ ಎರಡು ದೊಡ್ಡ ಅನ್ನದ ಉಂಡೆಗಳನ್ನು ತನ್ನ ಕಾಲುಗಳಿಂದ ಎತ್ತಿಕೊಂಡು ಹಾರಿ ಹೋಯಿತು.

"ಇದು ಬಹು ಚನ್ನ. ಅಮೂಲ್ಯವಾದ ಊಟದಲ್ಲಿ ಭಾಗಿಯಾಗಿ, ಗಿಡಗನು ಎಷ್ಟು ಪ್ರೀತಿತೋರಿತು" ಎಂದು ರಾಮುದಾಸನು ಸಂತೋಷಪಟ್ಟನು. ಊಟವಾಯಿತು.

ಅಸಾಧಾರಣವಾದ ಭಾವನೆಯೊಂದನ್ನು ಸ್ಪಷ್ಟಪಡಿಸಿದ ಒಂದು ಸಣ್ಣ ವಿಷಯವನ್ನು ಇಲ್ಲಿ ವಿವರಿಸುವುದು ಉಚಿತವಾಗಿದೆ. ಇಬ್ಬರು ಸಾಧುಗಳೂ ಮನೆ ಮನೆಗೆ ಹೋಗಿ ಭಿಕ್ಷೆಬೇಡುತ್ತಿರುವಾಗ, ಪರಾಮರ್ಶಕ ದೃಷ್ಟಿಯ ಭಕ್ತನೊಬ್ಬನು 'ಆಹಾ! ಗುರು ಶಿಷ್ಯರಿಬ್ಬರೂ ಹೋಗುತ್ತಿದ್ದಾರೆ, ಒಳ್ಳೆಜೋಡಿ' ಎಂದು ಉಸಿರಿದನು. ತಕ್ಷಣವೇ ರಾಮುದಾಸನು ತಾವಿಬ್ಬರೂ ಗುರು ಮತ್ತು ಶಿಷ್ಯರಲ್ಲ, ಸ್ವಾಮಿ ಮತ್ತು ಭೃತ್ಯರು, ತಾನು ಭೃತ್ಯನೆಂದೂ ಇನ್ನೊಬ್ಬನು ಸ್ವಾಮಿಯಾದ ಶ್ರೀರಾಮನೆಂದೂ ಅರಿಕೆ ಮಾಡಿದನು. ಊಟಮಾಡಿದ ನಂತರ ಇವರು ನರಸೋಬವಾಡಿಯನ್ನು ಬಿಟ್ಟು ಸಾಂಗ್ಲಿ ಮತ್ತು ಮಿರಜ್ ಮುಖಾಂತರ ಪಂಢರಪುರದ ಕಡೆ ಪ್ರಯಾಣ ಮಾಡಿದರು. ಅಂಗಾಲುಗಳ ಸ್ಥಿತಿ ಬರುಬರುತ್ತಾ ಇನ್ನೂ ಕೀಳಾಯಿತು. ಆದರೂ ರಾತ್ರಿ ಮಾತ್ರ ವಿಶ್ರಮಿಸಿಕೊಳ್ಳುತ್ತಾ ಇವರು ನಡೆದೇ ನಡೆದರು. ಮಹಾರಾಷ್ಟ್ರಸೀಮೆಯ ಈ ಪ್ರಾಂತದಲ್ಲಿ ಮುಳ್ಳುಗಿಡ ಮತ್ತು ಪೊದೆಗಳು ಬಹಳವಾಗಿವೆ. ರಸ್ತೆಯ ಬದಿಯ ಸಾಲುಮರಗಳು ಕೂಡ ಮುಳ್ಳಿನಿಂದ ತುಂಬಿದ್ದವು. ಮುಳ್ಳು ಗೊಂಚಲುಗಳು ರಸ್ತೆಯಮೇಲೆ ಬಿದ್ದಿದ್ದವು. ಅಂಗಾಲುಗಳಲ್ಲಿದ್ದ ಹುಣ್ಣುಗಳ ಮತ್ತು ಬೊಬ್ಬೆಗಳ ಜೊತೆಗೆ ಈಗ ಮೊನುಚಾದ ಮುಳ್ಳುಗಳೂ ನಾಟಿಕೊಂಡವು; ಮುಳ್ಳು ಚುಚ್ಚಿದ ಪ್ರತಿಯೊಂದು ಸಲವೂ ರಾಮುಚರಣದಾಸನು ನೋವಿನಿಂದ ಕಿರಿಚಿಕೊಳ್ಳುತ್ತಿದ್ದನು. ಪ್ರತಿಯೊಂದು ಸಲವೂ ರಾಮುದಾಸನು ಒಂದೇ ಪರಿಹಾರವನ್ನು ಹೇಳುತ್ತಿದ್ದನು. ಅದೇನಂದರೆ, (ಭಗವನ್ನಾಮೋಚ್ಚಾರಣೆಯಿಂದ ದೇವರನ್ನು ಎಡೆಬಿಡದೆ ಧ್ಯಾನಮಾಡುವುದು. ಇದರಿಂದ ಶರೀರ ಮತ್ತು ಅನುಭವಿಸುವ ನೋವು, ಇವೆರಡೂ ಮರೆಯುವುವು.) ಮುಂದೆ ಹೋಗುತ್ತಿರುವಾಗ ದೇವರಲ್ಲಿ ಅನನ್ಯಶರಣಭಾವವನ್ನು ಹೊಂದುವ ವಿಚಾರವನ್ನು ರಾಮುದಾಸನು ಈ ರೀತಿ ವಿಶದೀಕರಿಸಿದನು:

"ರಾಮು, ನೀನು ಅಡಿಗೆ ಪಾತ್ರೆ ಮತ್ತು ಪದಾರ್ಥದ ಚೀಲವನ್ನು ಹೊರುತ್ತಿದ್ದೀಯೆ. ಅಡಿಗೆ ಮಾಡಬೇಕಾದರೆ ಪದಾರ್ಥ ಸೌದೆ ಮುಂತಾದುವಕ್ಕೆ

ಭಿಕ್ಷ ಬೇಡಬೇಕಾಗುತ್ತದೆ. ನಾವು ನಡೆಸಬೇಕಾದದು ಈ ಭಾರಗಳಿಂದ ತೊಡಕಾಗದ ಬಂಧನರಹಿತ ಜೀವನ. ಅಂತರಿಕ್ಷದಲ್ಲಿ ಹಾರಾಡುವ ಪಕ್ಷಿಗಳಿಗೂ ಕಾಡಿನಲ್ಲಿ ರುವ ಮೃಗಗಳಿಗೂ ದೇವರು ಆಹಾರವನ್ನು ಒದಗಿಸುತ್ತಾನೆ. ಹೀಗಿರುವಾಗ ಸಂಪೂರ್ಣವಾಗಿ ಆತನ ಅಧೀನವಾಗಿರುವ ನಮಗೂ ಆಹಾರವನ್ನು ಒದಗಿಸದೆ ಇರುತ್ತಾನೆಯೆ? (ದೇವರಧ್ಯಾನವೇ ನಮ್ಮ ಯೋಚನೆಯಾಗಿರಬೇಕು.) ಇನ್ನೊಂದೂ ನಮ್ಮ ಮನಸ್ಸಿಗೆ ಬರಬಾರದು. ಇದು ನಮ್ಮ ಕರ್ತವ್ಯ. ಆದ್ದರಿಂದ ಚೀಲವನ್ನು ವರ್ಜ್ಯಮಾಡಬೇಕು, ಅಲ್ಲದೆ ಭಿಕ್ಷಬೇಡುವುದನ್ನು ನಿಲ್ಲಿಸಿ ಬಿಡಬೇಕು, ಎನ್ನುವುದು ರಾಮದಾಸನ ಸಲಹೆ. ಅನಂತರ ನಮ್ಮನ್ನು ದೇವರು ಎಷ್ಟು ಆಶ್ಚರ್ಯಕರವಾಗಿ ನೋಡಿ ಕೊಳ್ಳುತ್ತಾನೆಂಬುದು ನಿನಗೆ ತಿಳಿಯ ಬರುತ್ತದೆ.''

"ಚೀಲವನ್ನೂ ಅದರೊಳಗಿನ ಪದಾರ್ಥಗಳನ್ನು ಏನುಮಾಡೋಣ?" ಎಂದು ರಾಮಚರಣದಾಸನು ಪ್ರಶ್ನಿಸಿದನು.

''ಸ್ವಲ್ಪ ನಿದಾನಿಸು. ಭಗವಂತನು ದಾರಿತೋರಿಸುತ್ತಾನೆ" ಎಂದು ರಾಮ ದಾಸನು ಉತ್ತರ ಕೊಟ್ಟನು.

ಈ ಸಂಭಾಷಣೆ ಮುಗಿದ ಸ್ವಲ್ಪ ಹೊತ್ತಿಗೆ ಮಧ್ಯಾಹ್ನದ ಕಾಲಕ್ಕೆ ಇವರು ರಸ್ತೆ ಮಗ್ಗುಲ ಒಂದು ಹುಲ್ಲು ಗುಡಿಸಲನ್ನು ಮುಟ್ಟಿದರು. ಇದರಲ್ಲಿ ಒಬ್ಬ ಸಾಧು ವಾಸವಾಗಿದ್ದನು. ಇಲ್ಲಿ ಮಗ್ಗುಲಲ್ಲಿದ್ದ ಬಾವಿಯಲ್ಲಿ ನೀರು ಕುಡಿದು, ಬಾಯಾರಿಕೆ ಯನ್ನು ಅಡಗಿಸಲು ಇವರು ನಿಂತರು. ಯಾವುದೋ ಒಂದು ನೇತ್ರ ರೋಗದಿಂದ ಈ ಸಾಧುವಿನ ದೃಷ್ಟಿ ಮಂದವಾಗಿದ್ದಿತು. ಈತನು ಬಹಳ ದಯಾವಂತನು; ಆದರವಾದ ಅತಿಥಿ ಸತ್ಕಾರವನ್ನು ನೀಡಿದನು. ಈತನು ಮಧ್ಯಾಹ್ನದ ಊಟಕ್ಕೆ ತನ್ನೊಂದಿಗೆ ನಿಲ್ಲಬೇಕೆಂದು ಕೇಳಿಕೊಂಡನು. ಇವರು ಒಪ್ಪಿದರು. ರಾಮಚರಣ ದಾಸನ ಸಹಾಯದಿಂದ ವೃದ್ಧ ಸಾಧು ಅಡಿಗೆ ಮಾಡಿದನು. ಸಾಧುವಿನ ಬಳಿಇದ್ದ ಅಡಿಗೆಯ ಪಾತ್ರೆಗಳು ಬರಿಮಣ್ಣಿನವೆಂದು ಆಗ ಕಂಡು ಬಂದಿತು. ಅಡಿಗೆಯಾ ಗುತ್ತಲೇ ಸಾಧು ಶಾಸ್ತ್ರೋಕ್ತವಾಗಿ ಅತಿಥಿಗಳನ್ನು ಪೂಜಿಸಿ ಮೊದಲು ಅವರಿಗೆ ಭೋಜನಮಾಡಿಸಿ, ಅನಂತರ ಅವರು ಉಂಡು ಉಳಿದ ಪದಾರ್ಥವನ್ನು ಭುಂಜಿ ಸಿದನು. ಸ್ವಲ್ಪ ವಿಶ್ರಮಿಸಿಕೊಂಡನಂತರ ಇವರು ಹೊರಡಲು ಅನುವಾದರು.

ರಾಮದಾಸನು ರಾಮಚರಣದಾಸನಕಡೆಗೆ ತಿರುಗಿ "ರಾಮ, ಅಡಿಗೆ ಪಾತ್ರೆ ಗಳನ್ನೂ ಚೀಲವನ್ನೂ ದಾನಮಾಡುವ ಸುಯೋಗವನ್ನು ಕಲ್ಪಿಸುವುದರಲ್ಲಿ ದೇವರು ನಿಧಾನಮಾಡಿಲ್ಲ. ಇಲ್ಲಿರುವ ಸಾಧುವಿಗೆ ಅವುಗಳನ್ನು ನಾವು ಕೊಡಬೇಕೆಂಬುದು ಅವನ ಇಚ್ಛೆ. ಈ ಸಾಧುವಿಗೆ ಲೋಹದ ಪಾತ್ರೆಗಳ ಆವಶ್ಯಕತೆ ಇದೆ. ಆದುದ ರಿಂದ ಪಾತ್ರೆಗಳನ್ನೂ ಉಳಿದ ದುಡ್ಡನ್ನೂ ಸಾಧುವಿಗೆ ಕೊಡು'' ಎಂದು ಹೇಳಿದನು.

ರಾಮುಚರಣದಾಸನು ಪರಿಶುದ್ಧ ಚೇತನನು. ಅವನು ಸಂತೋಷದಿಂದ ಚೀಲವನ್ನು ಸಾಧುವಿಗೆ ಕೊಟ್ಟನು. ಈಗ ಅವನಲ್ಲಿ ಉಳಿದುದು ರಾಮುದಾಸನು ಉಪಯೋಗಿಸುತ್ತಿದ್ದ ಕಪ್ಪು ಕೃಷ್ಣಾಜಿನವಿದ್ದ ಒಂದು ಚೀಲ ಮತ್ತು ಅವನು ಕೈಯಲ್ಲಿ ಹಿಡಿದಿದ್ದ ಒಂದು ಹಿತ್ತಾಳೆ ಲೋಟ. ಇದನ್ನು ಕೊಡಲು ಅವನಿಗೆ ಮನಸ್ಸಾಗಲಿಲ್ಲ. ರಾಮುದಾಸನಲ್ಲಾದರೆ ಹೊದೆದಿದ್ದ ಪಂಚೆಯಲ್ಲದೆ ಸೂಪದಲ್ಲಿ ದಾನವಾಗಿ ಬಂದ ನಿಲುವಂಗಿ ಹೆಗಲಮೇಲಿದ್ದಿತು.

ಬಿಸಿಲು ಇನ್ನೂ ತೀಕ್ಷ್ಣವಾಗಿದ್ದಿತು. ಇವರು ಪ್ರಯಾಣವನ್ನು ಮುಂದರಿಸಿದರು. ಒಂದು ಮೈಲಿಗೆ ಹೆಚ್ಚು ನಡೆದಮೇಲೆ ಇವರು ವಿಶ್ರಮಿಸಿಕೊಳ್ಳಲು ಒಂದು ಬೇವಿನ ಮರದ ಕೆಳಗೆ ನಿಂತರು. ರಾಮುಚರಣದಾಸನು ತನ್ನ ಹೆಗಲ ಮೇಲಿದ್ದ ಚೀಲವನ್ನು ತೆಗೆದು ಹುಲ್ಲಿನ ನೆಲದಮೇಲೆ ಹಾಕಿದನು. ಲೋಟವೇನೋ ಇನ್ನೂ ಕೈಯಲ್ಲೇ ಇದ್ದಿತು. ರಾಮುದಾಸನು ತನ್ನ ಅಂಗಿಯನ್ನು ನೆಲದಮೇಲೆ ಹಾಸಿ ಅದರಮೇಲೆ ಕುಳಿತು ಆತ್ಮಸಮರ್ಪಣೆಯ ಗುಣಗಳನ್ನು ವಿವರಿಸುತ್ತ ಹೋದನು.

"ಮಮಕಾರ ಭಗವತ್ಸಾಕ್ಷಾತ್ಕಾರಕ್ಕೆ ಪ್ರಬಲವಾದ ಒಂದು ಪ್ರತಿಬಂಧಕ. ದೇವರೊಂದಿಗೆ ಐಕ್ಯವಾಗಿ ಪೂರ್ಣವಾದ ಬಿಡುಗಡೆಯನ್ನೂ ಶಾಂತಿಯನ್ನೂ ಪಡೆಯುವ ಮುನ್ನ ಸಾಧಕನಲ್ಲಿ 'ನಾನು' 'ನನ್ನದು' ಎಂಬ ಭಾವನೆ ಸಂಪೂರ್ಣವಾಗಿ ಅಳಿಯಬೇಕು. ನಿಜವಾಗಿಯೂ ಎಲ್ಲ ಪದಾರ್ಥ ಎಲ್ಲ ಜೀವ ನಿರ್ಜೀವಗಳ ಹೃದಯಾಂತರ್ಯಾಮಿಯಾದ ದೇವರೊಬ್ಬನಿಗೇ ಸೇರಿದೆ. ಯಾವುದೇ ಬಾಹ್ಯ ವಸ್ತುವಿಗೆ ಅಂಟಿಕೊಂಡಿರುವ ವಾಸನೆ ನಮ್ಮ ದೃಷ್ಟಿಯನ್ನು ಸಂಕುಚಿತಮಾಡಿ ಅಹಂಭಾವನೆಯನ್ನು ಸೃಷ್ಟಿಸಿ ದೇವನಿಂದ ಎಂದರೆ ವಿಶ್ವಚೇತನ ವಿಶ್ವಾತ್ಮದಿಂದ ನಾವು ಪ್ರತ್ಯೇಕ ಎಂಬ ತಪ್ಪುಭಾವನೆಯನ್ನು ಉಂಟುಮಾಡುತ್ತದೆ. ಆದುದರಿಂದ ನಮ್ಮ ಗುರಿಯನ್ನು ಮುಟ್ಟಲು, ಎಂದರೆ ಶಾಶ್ವತವಾದ ಬಂಧವಿಮೋಚನೆ ಮತ್ತು ಆನಂದವನ್ನು ಹೊಂದಲು, ನಾವು ಅಹಂಭಾವವನ್ನು ಬಿಟ್ಟುಕೊಡಬೇಕು. ನಮಗೆ ಕಂಡುಬರುವ ಎಲ್ಲ ಜೀವರಾಶಿಗಳೂ ಮತ್ತು ಆಕಾರಗಳೂ ಅವಿನಾಶಿ, ವಿರಾಡ್ರೂಪಿಯಾದ ಸರ್ವಾಂತರ್ಯಾಮಿ ಸರ್ವಾಧಾರ ಸತ್ಯವಸ್ತುವಿನ ವ್ಯಕ್ತರೂಪಗಳೆಂದು ತಿಳಿಯಬೇಕು."

ರಾಮುದಾಸನು ಹೇಳುತ್ತಿದ್ದುದನ್ನು ರಾಮುಚರಣದಾಸನು ಏಕಾಗ್ರತೆಯಿಂದ ಕೇಳುತ್ತಿದ್ದನು. ರಾಮುದಾಸನು ತಾನು ವಿಶದಪಡಿಸುತ್ತಿದ್ದ ವಿಷಯದ ಸತ್ಯಾರ್ಥದಲ್ಲಿ ಸಂಪೂರ್ಣವಾಗಿ ಮೈಮರೆತನು. ಅನಂತರ ಇವರು ಮುಂದೆ ನಡೆದರು. ಒಂದೂವರೆ ಮೈಲಿಯಷ್ಟು ನಡೆದಮೇಲೆ ರಾಮುಚರಣದಾಸನು ಸಣ್ಣ ಚೀಲವನ್ನು ತೆಗೆದುಕೊಂಡು ಬರುತ್ತಿಲ್ಲವೆಂಬುದು ವ್ಯಕ್ತವಾಯಿತು.

“ ರಾಮು, ನಿನ್ನ ಚೀಲವೇನಾಯಿತು ? ” ಎಂದು ರಾಮುದಾಸನು ಪ್ರಶ್ನಿಸಿದನು.

ರಾಮುಚರಣದಾಸನು ಚಕಿತನಾಗಿ “ ನಿಮ್ಮ ಅಂಗಿ ಏನಾಯಿತು ಸ್ವಾಮಿಜಿ ? ” ಎಂದು ಪ್ರತಿಯಾಗಿ ಕೇಳಿದನು.

ಆಗಿದ್ದೇನೆಂದರೆ, ಇಬ್ಬರೂ ಆ ಮರದಡಿ ವಿಶ್ರಮಿಸಿಕೊಂಡ ಸ್ಥಳದಲ್ಲಿ ಅವುಗಳನ್ನು ಮರೆತು ಬಂದಿದ್ದರು.

“ ಸ್ವಾಮಿಜಿ, ಇಲ್ಲಿಯೇ ಕಾದಿರಿ, ಆ ಸ್ಥಳ ಇಲ್ಲಿಂದ ಅಷ್ಟೇನೂ ದೂರವಲ್ಲ. ಅಲ್ಲಿಗೆ ಹೋಗಿ ತೆಗೆದುಕೊಂಡು ಬರುತ್ತೇನೆ ” ಎಂದು ರಾಮುಚರಣದಾಸನು ಹೇಳಿದನು.

“ ಅದೊಂದೂ ಬೇಡ. ಆ ಪದಾರ್ಥಗಳೂ ಸಹ ನಮಗೆ ಅನಾವಶ್ಯಕ ವೆಂದು ಭಾವಿಸಿ ದೇವರು ಅವುಗಳ ಸಂಬಂಧವನ್ನು ತಪ್ಪಿಸಿದ್ದಾನೆ. ಪುನಃ ಅವು ಗಳಿಗೋಸ್ಕರ ಏಕೆ ಹೋಗಬೇಕು ? ” ಎಂದು ರಾಮುದಾಸನು ಉತ್ತರವಿತ್ತನು.

ಭಗವಂತನ ಸಂಕಲ್ಪ ಸಾಧನೆ ಎಷ್ಟು ಅಸ್ಖಲಿತ ! ಭಗವಂತನು ಇವರನ್ನು ಸಂಪೂರ್ಣವಾಗಿ ತನ್ನವರನ್ನಾಗಿ ಮಾಡಿಕೊಳ್ಳಬೇಕೆಂದಿದ್ದುದು ಸ್ಪಷ್ಟವಾಯಿತು. ನಾವು ದೇವರಲ್ಲಿ ಸಮಗ್ರ ಐಕ್ಯತೆಯನ್ನು ಸಾಧಿಸಲೋಸುಗ, ಎಲ್ಲ ಅಜ್ಞಾನಕ್ಕೆ ಮೂಲವಾದ ‘ ನಾನು ’ ಎಂಬ ಭಾವನೆಯನ್ನು ಹೋಗಲಾಡಿಸಲು ದೇವರು ಭಕ್ತರಮೇಲೆ ತನ್ನ ಕೃಪೆಯನ್ನು ಸುರಿಸುತ್ತಾನೆ.

### (iii) ದೇವರು ಆಹಾರ ಒದಗಿಸುವ ರೀತಿ

ಸಾಧುಗಳು ಪ್ರಯಾಣಮಾಡಿ ಒಂದು ಹಳ್ಳಿಯನ್ನು ಮುಟ್ಟಿ ಮಾರುತಿಯ ದೇವಾಲಯ ಒಂದರಲ್ಲಿ ಇಳಿದುಕೊಂಡರು. ದಿವಸಕ್ಕೆ ಒಂದು ಊಟದಿಂದ ತೃಪ್ತ ರಾಗುವುದು ಅವರ ಸಾಧಾರಣವಾದ ನಿಯಮವಾಗಿದ್ದಿತು. ರಾತ್ರಿಯ ಹೊತ್ತು ಏನಾದರೂ ಲಘುವಾದ ಆಹಾರ ದೊರೆತಾಗ ರಾಮುಚರಣದಾಸನು ತೆಗೆದು ಕೊಳ್ಳುತ್ತಿದ್ದನು. ಮಹಾರಾಷ್ಟ್ರ ದೇಶದಲ್ಲಿ, ಏಕೆ, ಇಡೀ ಹಿಂದೂಸ್ಥಾನದಲ್ಲಿಯೇ ಪ್ರತಿ ಒಂದು ಹಳ್ಳಿಯಲ್ಲಿಯೂ ಒಂದು ದೇವಸ್ಥಾನ ಅದರ ಮಗ್ಗುಲಲ್ಲೇ ಒಂದು ಧರ್ಮಶಾಲೆ ಇರುತ್ತವೆ. ಇವರ ಸಂಚಾರದಲ್ಲಿ ಇವರು ಒಂದು ದೇವ ಸ್ಥಾನದಲ್ಲಾಗಲೀ ಧರ್ಮಶಾಲೆಯಲ್ಲಾಗಲೀ ರಾತ್ರಿಯನ್ನು ಕಳೆಯುತ್ತಿದ್ದರು; ಪ್ರಾತಃಕಾಲಕ್ಕೆ ಮುಂಚೆಯೇ ಮುಂದಕ್ಕೆ ಹೊರಡುತ್ತಿದ್ದರು. ಮಾರನೆಯ ದಿನ ಮಧ್ಯಾಹ್ನಕ್ಕೆ ಸರಿಯಾಗಿ ಒಂದು ಹಳ್ಳಿಯ ಸಮೀಪಕ್ಕೆ ಬರುತ್ತಿದ್ದರು. ಆ ಮಧ್ಯಾಹ್ನ ಅಲ್ಲಿ ತಂಗಬೇಕಾಗಿದ್ದಿತು.

“ ರಾಮು, ನಾವು ಭಿಕ್ಷೆ ಬೇಡಬಾರದೆಂಬುದನ್ನು ಜ್ಞಾಪಕದಲ್ಲಿಡು. ಆ ಪ್ರಸ್ತಾಪವನ್ನು ಸಂಪೂರ್ಣವಾಗಿ ದೇವರಿಗೆ ಬಿಡು. ನಾವು ಒಂದು ದೇವ

ಸ್ಥಾನಕ್ಕೆ ಹೋಗಿ ಸುಮ್ಮನೆ ದೇವರನಾಮೋಚ್ಚಾರಣೆ ಮಾಡುತ್ತಾ ಇರೋಣ'' ಎಂದು ರಾಮುದಾಸನು ಸೂಚಿಸಿದನು.

ಹಳ್ಳಿಯನ್ನುಮುಟ್ಟಿ ಇವರು ವಿಠಲನ ದೇವಸ್ಥಾನವನ್ನು ಹೊಕ್ಕು ಕೈಸಾಲೆಯಲ್ಲಿ ಕುಳಿತರು. ಆಗ ಸುಮಾರು ಹನ್ನೆರಡುಗಂಟೆಯಸಮಯ. ದೇವಸ್ಥಾನಕ್ಕೆಬಂದಿದ್ದ ಒಬ್ಬನು ಸಾಧುಗಳನ್ನು, ನೋಡಿ ''ಯಾಕೆ ಇಲ್ಲಿ ಸುಮ್ಮನೆ ಕುಳಿತಿದ್ದೀರಿ? ಮಧ್ಯಾಹ್ನಊಟದ ಹೊತ್ತಾಗಿದೆ. ಬ್ರಾಹ್ಮಣರ ಕೇರಿಗೆ ಹೋಗಿ ಭಿಕ್ಷವನ್ನು ಬೇಡಿ" ಎಂದನು.

ರಾಮುದಾಸನು ಉತ್ತರಕೊಡಲಿಲ್ಲ. ರಾಮುಚರಣದಾಸನೂ ಮೌನದಿಂದಿದ್ದನು. ಆ ಮನುಷ್ಯನು ಹೊರಟುಹೋದನು. ಅರ್ಧ ಗಂಟೆ ಕಳೆಯಿತು. ರಾಮುಚರಣದಾಸನಿಗೆ ಸಂದೇಹ ಮೂಡುತ್ತಿರುವುದು ಅವನ ಮುಖದಲ್ಲಿ ಕಾಣಬಂದಿತು. ಸೂಮಾರು ಹತ್ತು ನಿಮಿಷಗಳ ನಂತರ ಇನ್ನೊಬ್ಬ ಮನುಷ್ಯನು ಬಂದು, "ನಿಮಗೆ ಊಟವಾಗಿದೆಯೇ?" ಎಂದು ಕೇಳಿದನು. ರಾಮುದಾಸನು ಇಲ್ಲವೆಂದು ಉತ್ತರಕೊಟ್ಟನು. ಆತನು "ಊಟಕ್ಕೆ ಏನುಮಾಡುತ್ತೀರಿ?" ಎಂಬ ಪ್ರಶ್ನೆಯನ್ನು ಹಾಕಿದನು.

"ಆ ವಿಷಯವನ್ನು ಭಗವಂತನು ನೋಡಿಕೊಳ್ಳುತ್ತಾನೆ" ಎಂದು ರಾಮುದಾಸನು ಸಮಾಧಾನವಾಗಿ ಉತ್ತರಕೊಟ್ಟನು. ಈ ಉತ್ತರವು ಆತನ ಮನಸ್ಸಿನಲ್ಲಿ ನಾಟಿದಂತೆ ಕಂಡಿತು.

"ನೀವು ಹೇಳುವ ಭಗವಂತನು ನಿಮ್ಮನ್ನು ನನ್ನ ಮನೆಗೆ ಊಟಕ್ಕೆ ಕರೆದುಕೊಂಡು ಹೋಗಬೇಕೆಂದು ಆಜ್ಞೆಮಾಡಿದ್ದಾನೆ. ಆದರೆ ಒಂದು ತೊಂದರೆ ಇದೆ. ನಾನು ಸಿಂಪಿ ಜಾತಿಯವನು. ನೀವು ನಮ್ಮ ಅಡಿಗೆಯನ್ನು ಭೋಜನ ಮಾಡಲು ಸಮ್ಮತಿಸುತ್ತೀರೋ ಇಲ್ಲವೋ ನನಗೆ ತಿಳಿಯದು" ಎಂದನು.

''ಸಾಧುಗಳ ಪಾಲಿಗೆ ನೀನು ಆ ಭಗವಂತನೆ. ಆದುದರಿಂದ ಆಕ್ಷೇಪಣೆ ಇರಲಾರದು'' ಎಂದು ರಾಮುದಾಸನು ಹೇಳಿದನು.

"ಇಕೋ ಬಂದೆ" ಎಂದು ಹೇಳಿ ಅವನು ಹೊರಟುಹೋಗಿ ಜಾಗ್ರತೆಯಾಗಿ ಒಂದು ಹಗ್ಗವನ್ನೂ ಒಂದು ಕೊಡಪಾನೆಯನ್ನೂ ತೆಗೆದುಕೊಂಡು ಬಂದನು. ಸಾಧುಗಳನ್ನು ಬಾವಿಯ ಬಳಿಗೆ ಕರೆದುಕೊಂಡುಹೋಗಿ ಅವರಿಗೆ ಸ್ನಾನಮಾಡಿಸಿದನು. ನಂತರ ಇವರನ್ನು ದೇವಸ್ಥಾನದ ಹತ್ತಿರವೇ ಇದ್ದ ತನ್ನ ಮನೆಗೆ ಕರೆದುಕೊಂಡುಹೋದನು. ಆ ಸಿಂಪಿಯವನ ಹೆಂಡತಿಯೂ ಮಕ್ಕಳೂ ಬಹಳ ಸಂತೋಷದಿಂದ ಸಾಧುಗಳನ್ನು ಸ್ವಾಗತಿಸಿದರು. ಬಹಳ ಆದರದಿಂದ ಇಬ್ಬರಿಗೂ ಪುಷ್ಕಳವಾಗಿ ಭೋಜನ ಮಾಡಿಸಿದರು. ಇವರು ದೇವಸ್ಥಾನಕ್ಕೆ ಹಿಂದಿರುಗಿ ಕೊಂಚ ಕಾಲ ವಿಶ್ರಮಿಸಿಕೊಂಡು ಮತ್ತೆ ಪ್ರಯಾಣಮಾಡಿದರು.

ದಾರಿಯಲ್ಲಿ ಹೋಗುತ್ತಿರುವಾಗ ರಾಮದಾಸನು "ಇಷ್ಟು ಪ್ರೀತಿಯಿಂದ ನಮಗೆ ಭೋಜನ ಮಾಡಿಸಿದ್ದು ದೇವರೇ ಎಂದು ನೀನು ನಂಬುವುದಿಲ್ಲವೇ?" ಎಂದು ರಾಮಚರಣದಾಸನನ್ನು ಕೇಳಿದನು.

ರಾಮಚರಣದಾಸನು ಮಾತನಾಡುವ ಇಷ್ಟವನ್ನು ತೋರಿಸಲಿಲ್ಲ, ಮೌನ ವಾಗಿದ್ದನು. ಆ ದಿನ ಕಳೆಯಿತು; ಮತ್ತೊಂದು ದಿವಸವೂ ಬಂದಿತು. ಮಧ್ಯಾಹ್ನದ ಹೊತ್ತಿಗೆ ಇವರು ಇನ್ನೊಂದು ಹಳ್ಳಿಯನ್ನು ಸೇರಿದರು. ಇಲ್ಲಿಯೂ ಆ ಹಳ್ಳಿಯ ವಿಠೋಬ ದೇವಸ್ಥಾನದಲ್ಲಿ ನಿಂತರು. ಮಧ್ಯಾಹ್ನ ಮೀರಿದ್ದಿತು. ಹೊತ್ತು ಜಾಗ್ರತೆ ಕಳೆಯುತ್ತಿದ್ದಿತು. ಒಂದು ಗಂಟೆ ಸಮಯವಾಯಿತು. ಆದರೂ ಭೋಜನದ ಸುಳಿವೇ ಇಲ್ಲ. ಬರು ಬರುತ್ತಾ ರಾಮಚರಣದಾಸನಿಗೆ ತವಕ ಹೆಚ್ಚಾಗಿ ಅವನು ನಿಂತಲ್ಲಿ ನಿಲ್ಲಲಾರದೆ ಹೋದನು.

"ಸ್ವಾಮಿಜಿ, ಈಸಲ ವಿಠೋಬನು ಬಹಳ ನಿದಾನ ಮಾಡುತ್ತಿದ್ದಾನೆ. ನಮ್ಮನ್ನು ಪೂರ್ತಿಯಾಗಿಯೂ ಮರೆತುಬಿಟ್ಟನೆಂದು ನನಗೆ ಹೆದರಿಕೆಯಾಗುತ್ತಿದೆ."

"ಊಟದ ಯೋಚನೆಯನ್ನು ಬಿಟ್ಟುಬಿಡು, ರಾಮು. ಸುಮ್ಮನೆ ದೇವರ ಧ್ಯಾನಮಾಡು. ಅವನ ಇಚ್ಛೆಗೆ ಅಧೀನರಾಗಿರೋಣ" ಎಂದು ರಾಮದಾಸನು ಉತ್ತೇಜನ ಕೊಟ್ಟನು.

ಇನ್ನೂ ಕೆಲವು ಕಾಲ ಕಾದದ್ದಾಯಿತು. ಆಹಾರದ ಸುಳಿವೇ ಕಾಣಲಿಲ್ಲ. ತಾನು ನಿದ್ದೆಮಾಡುವುದಾಗಿ ರಾಮಚರಣದಾಸನು ಬಿದ್ದುಕೊಂಡನು. ಹಸಿವು ಅವನ ಹೊಟ್ಟೆಯನ್ನು ಚುರುಕಾಗಿ ಕೊರೆಯುತ್ತಿರುವಾಗ ಅವನಿಗೆ ನಿದ್ರೆ ಎಲ್ಲಿಂದ ಬಂದೀತು? ಆಗಾಗ್ಗ ಕಣ್ಣಿಂದ ಹೊದ್ದಿಕೆಯನ್ನು ಎತ್ತಿ ಬೀದಿಯ ಕಡೆ ಇಣಿಕಿ ನೋಡುತ್ತಿದ್ದನು. ಭೋಜನದ ಆಗಮನವನ್ನು ಪ್ರತಿ ಕ್ಷಣದಲ್ಲಿಯೂ ನಿರೀಕ್ಷಿಸು ತ್ತಿದ್ದನು. ಎರಡು ಗಂಟೆ ಹೊತ್ತಿರಬಹುದು. ಆಗ ಅವನು ಎದ್ದು ಕುಳಿತು ಕೊಂಡು,

"ಸ್ವಾಮಿಜಿ! ಸ್ವಾಮಿಜಿ!! ಕೊನೆಗೆ ವಿಠೋಬ ಬರುತ್ತಿದ್ದಾನೆ. ಅಲ್ಲಿ ನೋಡಿ. ಬೀದಿಯಲ್ಲಿ ನಮ್ಮ ಕಡೆಯೇ ಓಡಿಬರುತ್ತಿದ್ದಾನೆ" ಎಂದು ಕೂಗಿ ಕೊಂಡನು.

ಹೌದು. ಕಪ್ಪನೆಯ ಒಬ್ಬ ಮನುಷ್ಯನು ದೇವಸ್ಥಾನದ ಕಡೆಗೆ ತ್ವರೆಯಿಂದ ಬರುತ್ತಿದ್ದನು. ನೆಟ್ಟಗೆ ಸಾಧುಗಳಿದ್ದ ಸ್ಥಳಕ್ಕೆ ಬಂದು, ತನಗೇನೂ ಗೊತ್ತಿಲ್ಲದೆ ಇರುವವನಂತೆ, "ಊಟವಾಯಿತೆ?" ಎಂದು ವಿಚಾರಿಸಿದನು. ಇಲ್ಲವೆಂಬ ಉತ್ತರ ವನ್ನು ಕೇಳಿ ಹೊರಟುಹೋಗಿ, ಕೆಲವು ನಿಮಿಷಗಳೊಳಗಾಗಿ ಎರಡು ತಟ್ಟೆಗಳಲ್ಲಿ ಆಹಾರವನ್ನು ತಂದು ಸಾಧುಗಳ ಮುಂದಿಟ್ಟು ಊಟಮಾಡಬೇಕೆಂದು ಒತ್ತಾಯಪಡಿಸಿದನು. ಒತ್ತಾಯ ಮಾಡಬೇಕಾದ ಅವಶ್ಯಕತೆಯೇ ಇರಲಿಲ್ಲ.

ಒಡನೆಯೇ ಇವರು ಊಟಕ್ಕೆ ಪ್ರಾರಂಭಿಸಿದರು. ಅದೇ ಸಮಯದಲ್ಲೇ ತಾಳ, ಮೃದಂಗ, ವೀಣೆ ಸಮೇತ ಹತ್ತು ಜನ ಕೀರ್ತನ ಗೋಷ್ಠಿಯವರು ದೇವಸ್ಥಾನ ದೊಳಗೆ ಬಂದರು. ಭೋಜನ ಸಮಯದಲ್ಲಿ ಅವರು ತುಕಾರಾಮ್ ಮಹರಾಜರ ಉತ್ತಮವಾದ ಅಭಂಗಗಳನ್ನು ಹಾಡುತ್ತ ನರ್ತನ ಮಾಡಿದರು. ಇದೆಲ್ಲ ಏನನ್ನು ತೋರಿಸಿತು? ಭಗವಂತನು ಸಾಧುಗಳಿಗೆ ಉದರಪೋಷಣೆಗಾಗಿ ಆಹಾರವನ್ನು ಒದಗಿಸುವಷ್ಟಕ್ಕೆ ತೃಪ್ತನಾಗದೆ ಆತ್ಮದ ಪೋಷಣೆಗೂ ಏರ್ಪಾಡು ಮಾಡಿದ್ದನು. ಭಗವಂತನ ಕಾರುಣ್ಯಪೂರ್ಣ ವರ್ತನೆಗಳೇ ಹೀಗೆ!

---

## ಅಧ್ಯಾಯ ೭

### ಪಂಢರಪುರ; ಷೆಟ್ಪೈಳ್

### (i) (ದೇವರನ್ನು ನಂಬುವುದೇ ಬಂಧವಿಮೋಚನೆ)

ಕೊನೆಗೆ ಇವರು ಪ್ರಸಿದ್ಧವಾದ ವಿಠೋಬ ದೇವಾಲಯವಿರುವ ಪಂಢರಪುರ ವನ್ನು ಸೇರಿದರು. ಇದು ರಾಮದಾಸನಿಗೆ ಈಸ್ಥಳಕ್ಕೆ ಎರಡನೆಯಯಾತ್ರೆ. ಕತ್ತಲಾದ ಮೇಲೆ ಇವರು ಊರುಸೇರಿದರು. ಒಂದು ಧರ್ಮಶಾಲೆಯನ್ನು ಹುಡುಕುತ್ತಾ ಬೀದಿಗಳಲ್ಲಿ ಅಲೆದರು. ಕೊನೆಗೆ ಏನೂ ತಿಳಿಯದ ಒಬ್ಬ ಭಕ್ತಳಾದ ಮುದುಕಿಯನ್ನು ಕಂಡರು.

" ತಾಯಿ, ಧರ್ಮಶಾಲೆಗೆ ಹೋಗುವ ದಾರಿಯನ್ನು ದಯವಿಟ್ಟು ತೋರಿಸು ತ್ತೀಯಾ? " ಎಂದು ರಾಮದಾಸನು ಅವಳನ್ನು ಕೇಳಿದನು.

" ಅಗತ್ಯವಾಗಿಯೂ ಆಗಲಮ್ಮ; ಕರೆದುಕೊಂಡು ಹೋಗುತ್ತೇನೆ, ಬಾ, ತಾಯಿ! " ಎಂದಳು ಮುದುಕಿ.

ಸಾಧುಗಳು ಆಕೆಯ ಹಿಂದೆಯೇ ಹೋಗುತ್ತಿದ್ದಾಗ ಆಕೆ " ನಮ್ಮ ತಾಯಿ ರುಕ್ಮಿಣಿ ಎಷ್ಟು ಶಕ್ತಿವಂತಳು! ಎಷ್ಟು ಕೃಪಾಳು! ಅವಳು ಎಲ್ಲ ರೂಪಗಳನ್ನೂ ಧರಿಸಿದ್ದಾಳೆ. ಎಲ್ಲೆಲ್ಲಿಯೂ ನನಗೆ ಅವಳೇ ಕಾಣುತ್ತಾಳೆ. ಮನುಷ್ಯ, ಪಶು, ಪಕ್ಷಿ, ಕಲ್ಲು, ಗಿಡ, ನಕ್ಷತ್ರ, ಚಂದ್ರ, ಸೂರ್ಯ ಎಲ್ಲವೂ ಅವಳೇ! ಅಹಹ! ನಮ್ಮಮ್ಮನೇ ಎಲ್ಲವೂ ಆಗಿದ್ದಾಳೆ! ಅವಳ ಪ್ರಭಾವವೆಂಥದು! (ಅವಳು ಸರ್ವದಾ ಕರುಣಿ ಕೃಪಾಮಯಿ)! " ಎಂದು ಹೇಳಿಕೊಳ್ಳುತ್ತಿದ್ದಳು.

ಇದು ಈ ಮುದುಕಿಯ ದರ್ಶನ. ಅವಳು ಎಲ್ಲೆಡೆಯಲ್ಲೂ ತನ್ನ ದಿವ್ಯ ಮಾತೆ ವ್ಯಕ್ತವಾಗಿರುವುದನ್ನು ಕಂಡಳು. ಇವರು ರುಕ್ಮಿಣೀ ದೇವಾಲಯದ ಮಹಾದ್ವಾರಕ್ಕೆ ಬಂದರು.

ಮುದುಕಿ ಬಾಗಿಲೆದುರಾಗಿ ಸಾಷ್ಟಾಂಗ ಪ್ರಣಾಮಮಾಡಿದಳು. ಸುಮಾರು ಐದು ನಿಮಿಷ ಕಾಲ ಆನಂದಾತಿಶಯದಲ್ಲಿ ನೆಲದಮೇಲೆ ಕೆಡೆದಿದ್ದಳು. ಆಮೇಲೆ ಎದ್ದು ರಾಮದಾಸನ ಕಡೆ ತಿರುಗಿ " ತಾಯಿ, ಈಗ ಬಾರಮ್ಮ, ಹೋಗೋಣ! " ಎಂದು ಕರೆದಳು.

ಎಷ್ಟೋ ಸಂದಿಗೊಂದಿಗಳನ್ನು ಹಾಯ್ದುಮೇಲೆ ಇವರು ಒಂದು ಧರ್ಮಶಾಲೆಯನ್ನು ಸೇರಿದರು. ಅಲ್ಲಿ ರಾತ್ರಿಗೆ ತಂಗಿದರು. ರಾಮಚರಣದಾಸನಿಗೆ ಬಹಳ ಹಸಿವಾಗಿದ್ದಿರಬೇಕು. ಅವನು ಪೇಟೆಗೆ ಹೋಗಿ ಏನಾದರೂ ಆಹಾರ ತರುವುದಾಗಿ ಹೇಳಿ ಒಡನೆ ಹೊರಟು ಸುಮಾರು ಎರಡು ಗಂಟೆಗಳನಂತರ ಬಂದನು.

ಬೆಳಗು ಮುಂಜಾನೆ ಇವರು ಚಂದ್ರಭಾಗಾ ನದಿಯನ್ನು ಕುರಿತು ನಡೆದರು. ಇಲ್ಲಿ ರಾಮಚರಣದಾಸನು ಅನಿರೀಕ್ಷಿತವಾಗಿ " ಸ್ವಾಮಿಜಿ, ನನಗೆ ವಿಧಿವತ್ತಾಗಿ ಸಂನ್ಯಾಸ ಕೊಡಿ. ದೀಕ್ಷೆಯನ್ನು ತೆಗೆಸಿ, ಬಟ್ಟೆಗಳನ್ನು ಕಾವಿಯಲ್ಲಿ ಅದ್ದಿ, ಅನಂತರ ಈ ಪಾವನವಾದ ನದಿಯಲ್ಲಿ ಸ್ನಾನಮಾಡುತ್ತೇನೆ " ಎಂದು ಬೇಡಿದನು.

ಈ ಅನಿರೀಕ್ಷಿತ ಪ್ರತಿಜ್ಞೆಯನ್ನು ಕೇಳಿ ರಾಮದಾಸನಿಗೆ ಅತ್ಯಾಶ್ಚರ್ಯವಾಯಿತು.

ಅವನು " ರಾಮ, ನಿನ್ನ ಸೂಚನೆ ಅತ್ಯಾಶ್ಚರ್ಯಕರವಾಗಿದೆ. ತಿಳಿದುಕೊ, ಸಂನ್ಯಾಸವೆನ್ನುವುದು ನಿನ್ನಮೇಲೆ ಇನ್ನೊಬ್ಬರು ಹೊರಿಸತಕ್ಕದ್ದಲ್ಲ ಮತ್ತು ದೀಕ್ಷೆಯಾಗಿ ಕೊಡತಕ್ಕದ್ದೂ ಅಲ್ಲ. ಸಂನ್ಯಾಸವೆಂದರೆ ಮುಂಡನಮಾಡಿಸಿಕೊಳ್ಳುವುದು, ಕಾವಿಬಟ್ಟೆಯನ್ನು ಧಾರಣೆಮಾಡುವುದು, ಎಂದಲ್ಲ. (ಸಂನ್ಯಾಸಕ್ಕೆ ಅರ್ಥ, ಈ ಪ್ರಪಂಚದಲ್ಲಿನ ನಶ್ವರವಾದ ಪದಾರ್ಥಗಳಮೇಲೆ ವ್ಯಾಮೋಹವನ್ನು ಆಂತರ್ಯದಲ್ಲಿ ತ್ಯಜಿಸುವುದು.) ಮನಸ್ಸು ಹೃದಯ ಎರಡರಲ್ಲೂ ಭಗವಂತನಿಗೆ ನಿನ್ನನ್ನು ಅರ್ಪಿಸಿಕೊಳ್ಳದೆ ಬರಿ ರೂಪ ಮತ್ತು ಉಡುಗೆಯಲ್ಲಿ ಮಾರ್ಪಡಿಸುವುದು ಕಾಪಟ್ಯ. ಇಂದ್ರಿಯ ವ್ಯಾಪಾರದಲ್ಲಿ ನಿನಗೆ ಮನಸಾ ನಿಜವಾದ ಜುಗುಪ್ಸೆ ಹುಟ್ಟಿ ನಿನ್ನಲ್ಲಿಯೇ ಅಲ್ಲದೆ ಪ್ರಪಂಚದಲ್ಲಿ ಎಲ್ಲೆಲ್ಲಿಯೂ ವ್ಯಾಪ್ತನಾದ ಭಗವಂತನ ಸ್ಮರಣೆಯಲ್ಲಿ ನಿನಗೆ ಆನಂದಾನುಭವ ಉಂಟಾಗಿದ್ದು ಅಂಥ ಮಾರ್ಪಾಡಿನಿಂದ ನಿನ್ನ ಆಧ್ಯಾತ್ಮಿಕ ಬೆಳವಣಿಗೆ ಅಭಿವೃದ್ಧಿಯಾಗಿ ನಿನ್ನ ಮನಸ್ಸಿನ ತಿಳಿವಳಿಕೆ ಮತ್ತು ನಂಬಿಕೆ ಇನ್ನೂ ದೃಢವಾಗುವವೆಂದು ನಿನಗೆ ಧೈರ್ಯವಿರುವ ಪಕ್ಷ ನಿನ್ನ ಇಷ್ಟಬಂದ ರೀತಿಯಲ್ಲಿ ರೂಪ ಮತ್ತು ಉಡುಪನ್ನು ಮಾರ್ಪಡಿಸಿಕೊಳ್ಳಲು ಏನೇನೂ ಅಡ್ಡಿ ಇರುವುದಿಲ್ಲ. (ದೇವರ ಸಾಕ್ಷಾತ್ಕಾರವನ್ನು ಪಡೆಯುವುದೇ ನಿನ್ನ ಗುರಿ) ಎಂಬುದನ್ನು ಮಾತ್ರ ಮರೆಯಬೇಡ. (ನಿನ್ನ ಸಮಸ್ಯೆ ನಿನ್ನಿಂದಲೇ ತೀರ್ಮಾನವಾಗತಕ್ಕುದಾಗಿದೆ.) ಬೇರೊಬ್ಬರು ಅದನ್ನು ಬಗೆಹರಿಸಲಾರರು. ರಾಮದಾಸನು ತನ್ನ ಅನುಭವಗಳನ್ನು ನಿನ್ನ ಮುಂದೆ ಮರೆಮಾಚದೆ ಹೇಳಬಲ್ಲ, ಅಷ್ಟೆ. ತಾನು ಕಾವಿಬಟ್ಟೆಯನ್ನು ಧಾರಣೆ

ಮಾಡಿರುವುದೇಕೆಂದರೆ, ಆ ಬಟ್ಟೆಯನ್ನು ನೋಡಿದಾಗಲೆಲ್ಲಾ ಅದು ಅವನು ತನ್ನ ಜೀವಮಾನವನ್ನು ಸಂಪೂರ್ಣವಾಗಿ ಭಗವತ್ಸೇವೆಯಲ್ಲಿ ಕಳೆಯಲು ಮಾಡಿರುವ ಸಂಕಲ್ಪವನ್ನು ಜ್ಞಾಪಕಕೊಡುತ್ತಿದೆ. (ರಾಮದಾಸನು ಅನಂತ ಪ್ರೇಮಾನಂದ ಮಯನಾದ ಭಗವಂತನ ವಿನಾ ಮತ್ತೊಬ್ಬರಿಗೂ ಸೇರಿದವನಲ್ಲ.) ಆದುದರಿಂದ ನಿನ್ನ ಹೃದಯಾಂತರ್ಯಾಮಿಯ ಸಲಹೆಗೆ ಕಿವಿಗೊಡು. ಅದರಂತೆ ವರ್ತಿಸು." ಎಂದು ಉತ್ತರಕೊಟ್ಟನು.

ರಾಮಚರಣದಾಸನು ಈ ಮಾತನ್ನು ಸಾವಧಾನವಾಗಿ ಕೇಳಿದನು. ಪುನಃ ಈ ವಿಚಾರವಾಗಿ ಒತ್ತಾಯಪಡಿಸಲಿಲ್ಲ. ಇವರು ನದಿಯಲ್ಲಿ ಸ್ನಾನಮಾಡಿ ಕೊಂಚ ಕಾಲ ಮರಳಿನಮೇಲೆ ಕುಳಿತುಕೊಂಡರು.

ರಾಮಚರಣದಾಸನು "ಸ್ವಾಮಿಜಿ, ಈ ಊರನ್ನು ನಾಲ್ಕು ಐದು ದಿವಸಗಳ ವರೆಗೂ ಬಿಡಕೂಡದು. ನಮ್ಮ ಕಾಲಿನ ಸ್ಥಿತಿ ತೀರಾ ಕೆಟ್ಟುಹೋಗಿದೆ. ಕೂಡಲೆ ಪ್ರಯಾಣಮಾಡಲು ಅವುಗಳಿಂದಾಗದು" ಎಂದು ಸೂಚಿಸಿದನು.

ಸ್ವಲ್ಪಕಾಲದಿಂದಲೂ ರಾಮಚರಣದಾಸನಿಗೆ ಒಂದು ವಿಚಾರವಾಗಿ ತಿಳಿವಳಿಕೆ ಕೊಡಬೇಕೆಂದು ರಾಮನ ಪ್ರೇರಣೆಯಾಗುತ್ತಿದ್ದಿತು. ಈಗ ರಾಮದಾಸನು ಈ ವಿಚಾರವಾಗಿ ದೀರ್ಘಕಾಲ ಪ್ರಸ್ತಾಪಿಸಬೇಕಾಯಿತು.

"ರಾಮದಾಸನು ಹೇಳುವುದನ್ನು ತಪ್ಪು ತಿಳಿಯಬೇಡ. ಮೊಟ್ಟಮೊದಲಿಗೆ ಅವನು ನಿನ್ನ ಅತ್ಯಂತ ಹಿತಾಕಾಂಕ್ಷಿ ಎನ್ನುವುದನ್ನು ತಿಳಿದುಕೊ. ಅವನ ಸಂಗಡ ಸೇರಿದಂದಿನಿಂದ ನೀನು ಅವನಿಗೆ ಬಹಳ ದಯೆ ತೋರಿಸಿ ಪ್ರೀತಿಯಿಂದ ನಡೆದಿದ್ದೀಯೆ; ಎಷ್ಟೋ ತೊಂದರೆಪಟ್ಟಿದ್ದೀಯೆ. ಅವನ ಸಹಭಾಗಿಯಾಗುವುದು ಕಠಿಣ ಜೀವನವಾಗುವುದೆಂದು ರಾಮದಾಸನು ನಿನಗೆ ಎಚ್ಚರಿಕೆ ಕೊಟ್ಟಿದ್ದನು. ಹೇಗಾದರೂ ಆಗಲಿ, ಮಂಗಳೂರಿಂದ ಪಂಢರಪುರದವರೆಗೆ ದೊಡ್ಡ ಪ್ರವಾಸದಲ್ಲಿ ರಾಮದಾಸನೊಂದಿಗೆ ಕಷ್ಟನಿಷ್ಠುರಗಳಲ್ಲಿ ಭಾಗಿಯಾಗಿದ್ದುದು ಒಳ್ಳೆಯದೇ ಆಯಿತು. (ಅನುಭವ ಮಹದ್ಗುರು.) ಅಂಗಾಲಿನ ಗಾಯಗಳು ಗುಣವಾಗುವುದಕ್ಕೋಸ್ಕರ ರಾಮದಾಸನು ಕೆಲವು ದಿನ ಇಲ್ಲಿಯೇ ಇರಬೇಕೆಂದು ಅಪೇಕ್ಷಿಸುತ್ತೀಯೆ. ಆದರೆ ರಾಮದಾಸನ ಅಂತರ್ಯಾಮಿ ಈ ದಿನ ಸಂಜೆಯೇ ಹೊರಡಬೇಕೆಂದು ಪ್ರೇರೇಪಿಸಿದ್ದಾನೆ. ರಾಮದಾಸನು ಆ ಆಜ್ಞೆಯನ್ನು ಪಾಲಿಸಬೇಕು. ಇನ್ನಷ್ಟು ಕಷ್ಟಕ್ಕೆ ನೀನು ಸಿದ್ಧವಾಗಿಲ್ಲವೆಂಬುದು ವ್ಯಕ್ತವಾಗಿದೆ. ಹೀಗಿರುತ್ತ ರಾಮದಾಸನು ನಿನ್ನನ್ನು ಅದಕ್ಕೆ ಒಡ್ಡುವುದಿಲ್ಲ. ಅಲ್ಲದೆ ನೀನೊಬ್ಬನೇ ಪ್ರಯಾಣ ಮಾಡಿದರೆ ನಿನಗೆ ಬಹಳ ಒಳ್ಳೆಯದಾಗುತ್ತದೆ. (ನೀನು ಒಂಟಿಗನಾದರೆ ನಿನಗೆ ದೇವರಲ್ಲಿ ಹೆಚ್ಚು ನಂಬಿಕೆ ಉಂಟಾಗುವುದು.) (ಸರ್ವದಾ ಅವನ ಸ್ಮರಣೆ ನಿನ್ನಲ್ಲಿ ಶಕ್ತಿಯನ್ನೂ ಸ್ಥೈರ್ಯವನ್ನೂ ಹೆಚ್ಚುಮಾಡುವುದು.) ದೇವರನ್ನು ಕುರಿತ ಅನನ್ಯ

ಖಾವ ಹೀಗೆ ನಿನ್ನನ್ನು ತೀರ ನಿರ್ಭೀತನಾಗಿ ಮಾಡುತ್ತದೆ. ರಾಮದಾಸನನ್ನು ಅನುಸರಿಸುವ ದಾಸ್ಯವನ್ನು ತೊರೆ. (ಒಬ್ಬನೇ ಸಂಚರಿಸು. ದೇವರು ನಿನ್ನಲ್ಲಿ ದ್ದಾನೆ. ಅವನು ಸರ್ವದಾ ನಿನ್ನ ಸಂಗಡ ಇರುವುದನ್ನು ಅರಿ.)"

ರಾಮದಾಸನ ಮೇಲೆ ರಾಮಚರಣದಾಸನ ಪ್ರೀತಿವಿಶ್ವಾಸ ಯಾವ ಸ್ಥಿತಿಗೆ ಏರಿದ್ದಿತೆಂದರೆ ರಾಮದಾಸನನ್ನು ಬಿಟ್ಟುಹೋಗುವುದು ಅವನಿಗೆ ಈಗ ಅಸಾಧಾರಣ ಕ್ಲೇಶವಾಗಿದ್ದಿತು. ಆದುದರಿಂದ ರಾಮದಾಸನ ಉಪದೇಶ ಅವನ ಭಾಗಕ್ಕೆ ವ್ಯರ್ಥವಾಯಿತು.

"ಸ್ವಾಮಿಜಿ, ನಿಮ್ಮನ್ನು ತೊರೆಯುವ ಯೋಚನೆಯನ್ನು ಸಹಿಸಲಾರೆ. ನನಗೆ ನಿಮ್ಮನ್ನು ಬಿಡುವುದು ತೀರಾ ಅಸಾಧ್ಯ" ಎಂದು ಅವನು ಪ್ರತಿ ನುಡಿದನು.

ಅವನ ಸಂಕಲ್ಪ ದೃಢವಾಗಿದ್ದಿತು; ಮಾರ್ಪಡುವಂತಿರಲಿಲ್ಲ. ಕೊಂಚ ಹೊತ್ತು ಕಳೆಯಿತು. ರಾಮದಾಸನ ಮನಸ್ಸು ಬೇಸರದ ಸ್ಥಿತಿಗೆ ಬಂದಿತು. ಹೊತ್ತು ಏರಿದ್ದಿತು. ರಾಮಚರಣದಾಸನು ಮೌನವನ್ನು ಭೇದಿಸಿದನು.

"ಸ್ವಾಮಿಜಿ, ಯಾವುದಾದರೂ ಅನ್ನಕ್ಷೇತ್ರಕ್ಕೆ ಹೋಗೋಣವೆ? ಹೊತ್ತಾಗುತ್ತ ಬಂದಿದೆ!"

## (ii) ಈ ಪ್ರಲಾಪವೇಕೆ?

ಇಬ್ಬರೂ ಊರಕಡೆ ಹೊರಟರು. ಇವರು ಬೀದಿಗಳಲ್ಲಿ ತಿರುಗಿ, ರಾಮದಾಸನು ಹಿಂದೆ ಬಂದಿದ್ದಾಗ್ಗೆ ಊಟಮಾಡಿದ್ದ ಒಂದು ಹೆಸರುವಾಸಿಯಾದ ಅನ್ನಕ್ಷೇತ್ರಕ್ಕೆ ಹೋದರು. ಇಲ್ಲಿ ಪ್ರತಿದಿನವೂ ಆರು ಜನ ಸಾಧುಗಳಿಗೆ ಮೃಷ್ಟಾನ್ನ ಹಾಕುತ್ತಿದ್ದರು. ಅನ್ನಕ್ಷೇತ್ರದ ಬಾಗಿಲಲ್ಲಿ ಏಳು ಜನ ಸಾಧುಗಳು ಕಾದಿದ್ದರು. ಇವರಲ್ಲಿ ಆರು ಜನರನ್ನು ವ್ಯವಸ್ಥಾಪಕನು ಆರಿಸಬೇಕಾಗಿದ್ದಿತು. ಚುನಾವಣೆಗೆ ತಾನೂ ಒಬ್ಬ ಪೋಟಿದಾರನಾಗಿ ನಿಲ್ಲಲು ರಾಮದಾಸನಿಗೆ ಇಷ್ಟ ಬರಲಿಲ್ಲ; ಆದುದರಿಂದ ಅಲ್ಲಿಂದ ಹೊರಟುಹೋಗಬೇಕೆಂದೆನಿಸಿತು. ಅದೇ ಊರಿನ ಇನ್ನೊಂದು ಕ್ಷೇತ್ರದಲ್ಲೂ ಹಿಂದೊಂದುಸಲ ಇಂತಹ ಸಂದರ್ಭ ಒದಗಿದ್ದಾಗ ರಾಮದಾಸನು ಹೀಗೆ ಮಾಡಿದ್ದನು. ಆದರೆ ಈಸಲ ಜೊತೆಯಲ್ಲಿ ರಾಮಚರಣದಾಸನು ಇದ್ದನು. ಇವನು ರಾಮದಾಸನನ್ನು ಬಿಟ್ಟು ಊಟಮಾಡಲು ಒಪ್ಪುತ್ತಿರಲಿಲ್ಲ. ಅಂತೂ ರಾಮದಾಸನು ಅಲ್ಲಿಯೇ ನಿಂತನು.

ಕ್ಲಿಪ್ತ ಸಮಯಕ್ಕೆ ವ್ಯವಸ್ಥಾಪಕನು ಸಾಧುಗಳ ಹೆಸರನ್ನು ಬರೆದುಕೊಳ್ಳಲು ಒಂದು ಪುಸ್ತಕವನ್ನೂ, ಒಂದು ಸೀಸದ ಕಡ್ಡಿಯನ್ನೂ ತೆಗೆದುಕೊಂಡು ಬಂದನು. ರಾಮದಾಸ ರಾಮಚರಣದಾಸರನ್ನೂ ಸೇರಿಸಿ ಆರು ಜನರನ್ನು ಆರಿಸಿದನು. ಉಳಿದ ಸಾಧುಗಳು ಹೊರಟುಹೋದರು. ಒಬ್ಬನು ಮಾತ್ರ ನಿಂತು ತನಗೂ ಆಹಾರಕೊಡಬೇಕೆಂದು ಅಂಗಲಾಚಿದನು. ಆರು ಜನಗಳಿಗೆ ಮಾತ್ರ ಆಹಾರ

ಒದಗಿಸುವ ನಿಯಮವಿದ್ದುದರಿಂದ ಆತನನ್ನು ತೆಗೆದುಕೊಳ್ಳಲು ಆಗಲಾರದೆಂದೂ ಅಲ್ಲದೆ ಹಿಂದಣ ದಿವಸವೂ ಆತನು ಅಲ್ಲಿಯೇ ಆಹಾರ ತೆಗೆದುಕೊಂಡಿದ್ದನೆಂದೂ ವ್ಯವಸ್ಥಾಪಕನು ಉತ್ತರಕೊಟ್ಟನು. ಸಾಧು ಒದ್ದಾಡುತ್ತಿದ್ದುದು ಈ ಕ್ಷೇತ್ರ ದಲ್ಲಿ ಕೊಡುವ ಪುಷ್ಕಳ ಭೋಜನದ ಸಲುವಾಗಿ ಎಂದು ರಾಮುದಾಸನಿಗೆ ಗೊತ್ತಾ ಯಿತು. ತಾನೇ ಮಾಡಿದ ಬೇಡಿಕೆ ವ್ಯರ್ಥವಾದುದನ್ನು ನೋಡಿ, ಸಾಧು ತನ್ನ ಪರವಾಗಿ ಬೇಡಬೇಕೆಂದು ರಾಮುದಾಸನನ್ನು ಕೇಳಿಕೊಂಡನು.

ರಾಮುದಾಸನು ವ್ಯವಸ್ಥಾಪಕನಿಗೆ ಕೈಮುಗಿದು "ರಾಮಜಿ, ಅವನನ್ನು ಸೇರಿಸಿಕೊಳ್ಳಿ. ಇಷ್ಟು ಜನ ಊಟಮಾಡುವ ಕಡೆ ಒಬ್ಬ ಹೆಚ್ಚಿಗೆ ಮನುಷ್ಯನಿಗೂ ಆಹಾರವನ್ನು ಕೊಡಬಹುದು" ಎಂದು ಬೇಡಿದನು.

ವ್ಯವಸ್ಥಾಪಕನು ಕೆಲವು ಕಠಿನ ಶಬ್ದಗಳಿಂದ "ನಿನಗೇಕೆ ಈ ಮಾತು" ಎಂಬಂತೆ ರಾಮುದಾಸನ ವಾದವನ್ನು ನಿಲ್ಲಿಸಿದನು.

ಊಟದ ಪುಣ್ಯವನ್ನು ಪಡೆದ ಆರು ಜನರನ್ನು ಒಳಕ್ಕೆ ಬರಹೇಳಿದರು. ರಾಮುದಾಸನು ಇತರರಂತೆ ಒಳಗೆ ಹೋದನು. ಆದರೆ ಅವನು ಮುಂಕುಬಡಿದು ಖಿನ್ನ ನಾಗಿದ್ದನು. ಏಳನೆಯ ಸಾಧು ಹೊರಗೇ ನಿಂತನು. ಆರು ಜನಕ್ಕೆ ಊಟ ಬಡಿ ಸಿದರು. ಹೊರಗೆ ನಿಂತಿದ್ದ ಸಾಧುವಿನ ವಿಚಾರ ರಾಮುದಾಸನನ್ನು ವ್ಯಥೆಪಡಿಸು ತ್ತಿದ್ದಿತು. ಊಟ ನಡೆಯಿತು. ರಾಮುದಾಸನಿಗೆ ಏನನ್ನಾದರು ತಿನ್ನುವುದೇ ಕಷ್ಟ ವಾಗಿದ್ದಿತು. ಲಾಡು ರೊಟ್ಟಿಯ ಅಡಿಗೆ. ಊಟ ಮುಗಿದಮೇಲೆ ಈಚೆಗೆ ಬಂದು ನೋಡಿದಾಗ ರಾಮುದಾಸನಿಗೆ ಕಾಣಿಸಿದುದೇನು? ಸಾಧು ಇನ್ನೂ ಮೆಟ್ಟಲ ಮೇಲೆಯೇ ಕುಳಿತಿದ್ದನು. ಅವನನ್ನು ಕಂಡೊಡನೆ ರಾಮುದಾಸನಿಗೆ ತನ್ನ ಮೇಲೆ ಕೊರೆಯುವ ನೀರಿನ ಸುರಿಮಳೆಯನ್ನು ಸುರಿಸಿದಂತಾಯಿತು. ಕೂದಲು ಎದ್ದು ನಿಂತವು. ಚೂರಿಯಿಂದ ಇರಿದಂತೆ ಹೃದಯದಲ್ಲಿ ಅಗಾಧ ವೇದನೆಯುಂಟಾಯಿತು. ಅವನು ರಾಮಚರಣದಾಸನನ್ನು ಬೇಗನೆ ಹತ್ತಿರ ಕರೆದು, "ಏನಾದರೂ ತಿಂಡಿ ಇದೆಯೆ?" ಎಂದು ಕೇಳಿದನು.

ರಾಮಚರಣದಾಸನು "ಇದೆ; ಅರ್ಧ ಸೇರು ಹುರಿದ ಹುರುಳಿ ಇದೆ; ಪಂಚೆಯಲ್ಲಿ ಕಟ್ಟಿದ್ದೇನೆ" ಎಂದನು.

"ಅದನ್ನೂ ನಿನ್ನಲ್ಲಿರಬಹುದಾದ ದುಡ್ಡನ್ನೂ ಒಡನೆಯೆ ಸಾಧುವಿಗೆ ಕೊಟ್ಟು ಬಿಡು" ಎಂದು ರಾಮುದಾಸನು ಹೇಳಿದನು. ಸಾಧುವಿಗೆ ಹುರುಳಿಯನ್ನೂ ಕೆಲವು ಆಣೆಗಳನ್ನೂ ಕೊಟ್ಟದ್ದಾಯಿತು. ಆದರೂ ರಾಮುದಾಸನ ಹೃದಯ ವೇದನೆ ನಿಲ್ಲಲಿಲ್ಲ.

"ರಾಮ! ರಾಮುದಾಸನು ಈ ಕ್ಷಣ ಈ ಸ್ಥಳವನ್ನು ಬಿಟ್ಟು ಹೋಗಬೇಕೆಂದು ರಾಮನ ಇಚ್ಛೆ" ಎಂದು ರಾಮುದಾಸನು ಹೇಳಿದನು.

ರಾಮದಾಸನು ವೇಗವಾಗಿ ಅಲ್ಲಿಂದ ನಡೆದನು. ರಾಮಚರಣದಾಸನು ಹಿಂಬಾಲಿಸಿದನು. ತಡೆಯಲಸಾಧ್ಯವಾದ ಒಂದು ಉದ್ವೇಗದಿಂದ ರಾಮದಾಸನ ಹೃದಯ ತಲ್ಲಣಿಸಿತು. ಕಣ್ಣಿಂದ ನೀರು ಕೆನ್ನೆಯಮೇಲೆ ಧಾರೆಯಾಗಿ ಹರಿಯಿತು. ರಾಮದಾಸನು ಮಗುವಿನಂತೆ ಸುಮ್ಮನೆ ಅತ್ತನು. ಇವನು ಏಕೆ ಅಳುತ್ತಾನೆ ಎಂದು ರಾಮಚರಣದಾಸನು ರಾಮದಾಸನ ಕಡೆ ನೋಡಿದನು. ರೈಲುಮಾರ್ಗ ಸಿಕ್ಕುವವರೆಗೂ ರಾಮದಾಸನು ಓಡುತ್ತಿದ್ದನು. ಅಲ್ಲಿ ಓಟ ನಿಂತು ಸಾಧಾರಣ ನಡಗೆಗೆ ಇಳಿಯಿತು. ಆದರೆ ಅಳು ನಿಲ್ಲಲಿಲ್ಲ. ಅತ್ಯಂತ ದುಃಖದಿಂದ ರಾಮದಾಸನು ಹೀಗೆ ಪ್ರಲಾಪಿಸಿದನು:

" ಹೇ ಸ್ವಾಮಿ, ದಾಸನಿಂದ ಹೀಗೇಕೆ ಮಾಡಿಸಿದೆ? ಅನ್ನಕ್ಷೇತ್ರದಲ್ಲಿ ಊಟವಿಲ್ಲದೆ ಹೊರಗಡೆ ಒಬ್ಬನಿರುವಾಗ, ಒಳಗೆ ಇವನು ಮಾತ್ರ ಊಟಮಾಡುವಂತೆ ಏಕೆ ಪ್ರೇರೇಪಿಸಿದೆ? ತೀರ ಅಯೋಗ್ಯವಾದ ಕ್ರೂರ ಕಾರ್ಯವನ್ನು ನೀನೆ ಹೇಳಿ ಮಾಡಿಸಿದೆ." ಮತ್ತೆ ಉಕ್ಕಿ ಬಂದ ದುಃಖಾಶ್ರುವು ಅವನನ್ನು ಸೋಲಿಸಿತು. ಅವನು ಗೋಳಿಟ್ಟು ಅತ್ತು, ಮತ್ತೆ ಹೀಗೆಂದನು:

" ಹೇ ಸ್ವಾಮಿ! ತನ್ನ ಊಟದ ಸರತಿಯನ್ನು ಆ ಸಾಧುವಿಗೆ ಬಿಟ್ಟುಕೊಟ್ಟು, ಇಲ್ಲನೆ, ಬಡಿಸಿದಮೇಲಾದರೂ ಬಡಿಸಿದ ಎಲೆಯನ್ನು ಸಾಧುವಿಗೆ ಕೊಟ್ಟು, ಆ ಸ್ಥಳದಿಂದ ಹೊರಟುಹೋಗುವಂತೆ ಸಕಾಲದಲ್ಲಿ ಏಕೆ ಬುದ್ಧಿಯನ್ನು ಕೊಡಲಿಲ್ಲ? ಸ್ವಾಮಿ! ನೀನು ಎಲ್ಲ ವಿಷಯಗಳಲ್ಲೂ ಇವನ ಏಕಮಾತ್ರ ಮಾರ್ಗದರ್ಶಕನಾಗಿದ್ದೀಯೆ. ಆದರೂ ಈಗ ಇವನನ್ನು ಏನನ್ನಾಗಿ ಮಾಡಿದೆ? ಒಬ್ಬ ತೀರ ಸ್ವಾರ್ಥಿಯಾದ ಪ್ರಾಣಿಯಾಗಿ ಮಾಡಿದೆ. ಈ ರೀತಿ ನಡೆದುದು ಇವನಲ್ಲಿ ಎಷ್ಟು ಕ್ರೂರ" ಹೀಗೆಂದು ಅವನು ಅತ್ತು ಅತ್ತು ಅತ್ತನು.

ರಾಮಚರಣದಾಸನು " ಸ್ವಾಮಿಜಿ! ನಿಮ್ಮ ತಿಳಿವಳಿಕೆ ಮತ್ತು ಜೀವನದ ವಿಚಾರದಲ್ಲಿ ನಿಮ್ಮ ನಿಲುವು. ಇದನ್ನು ವಿಮರ್ಶೆ ಮಾಡಿದರೆ ನೀವು ದುಃಖಪಡುತ್ತಿರುವುದು ತೀರ ಅಕಾರಣ. ಮೊದಲಿಂದ ನೀವು, 'ಎಲ್ಲವೂ ದೈವೇಚ್ಛೆಯಂತೆ ನಡೆಯುತ್ತದೆ. ಯಾವಾಗಲೂ ಅವನ ಆಶಯ ಒಳ್ಳೆಯದು' ಎಂಬ ನಿಜವಾದ ತತ್ತ್ವವನ್ನು ನನ್ನ ತಲೆಗೆ ಹತ್ತುವಂತೆ ಹೇಳುತ್ತಿದ್ದೀರಿ. ಆದುದರಿಂದ ಅವನು ಈಸಲ ನಿಮ್ಮನ್ನು ಈರೀತಿ ವರ್ತಿಸುವಂತೆ ಮಾಡಿರುವುದು ಒಳ್ಳೆಯದಕ್ಕೇ ಅಲ್ಲದೆ ಮತ್ತೇನೂ ಇರಲಾರದು. ಹಾಗಿರುವಲ್ಲಿ ಈ ಪ್ರಲಾಪವೇಕೆ?" ಎಂದನು.

" ರಾಮ, ನೀನು ಹೇಳುವುದು ನಿಜವಾಗಿ ಸರಿ. (ದೇವರು ಮಾಡುವುದೆಲ್ಲಾ ಒಳ್ಳೆಯದಕ್ಕೇ.) ಈ ರೀತಿ ವರ್ತಿಸುವಂತೆ ಪ್ರೇರೇಪಿಸಿದವನೂ ಅವನೇ. ಈ ಕೃತ್ಯಕ್ಕೆ ಪಶ್ಚಾತ್ತಾಪಪಟ್ಟು, ದೂರಿ, ಅಳುವಂತೆ ಮಾಡುತ್ತಿರುವವನೂ ಅವನೇ" ಎಂದು ರಾಮದಾಸನು ಒಪ್ಪಿದನು.

ರಾಮುಚರಣದಾಸನು ಸುಮ್ಮನಾದನು. ರಾಮುದಾಸನು ರೈಲು ಮಾರ್ಗದ ಪಾರ್ಶ್ವದ ಸೊರಜುಗಲ್ಲುಗಳಮೇಲೆ ಮೈಮೇಲೆ ಪ್ರಜ್ಞೆಯಿಲ್ಲದೆ ನಡೆಯುತ್ತಿದ್ದನು. ಮೂರು ಮೈಲಿ ಅತಿಕ್ರಮಿಸಿದಾಗ ಹಿಂದುಗಡೆಯಿಂದ ಒಂದು ಗೋಳಿನ ಶಬ್ದ ಕೇಳಿಬಂದಿತು. ರಾಮುದಾಸನು ನಿಂತನು. ಹಿಂದಿರುಗಿ ನೋಡಿದರೆ ರಾಮುಚರಣ ದಾಸನು ಕೆಲವು ಗಜಗಳ ಹಿಂದೆ ರೈಲು ಕಂಬಿಯ ಕೆಳಗೆ ಹಾಕಿರುವ ಮರದ ತುಂಡಿನಮೇಲೆ ಕುಳಿತಿದ್ದುದು ಕಾಣಿಸಿತು.

" ಅವನು ಸ್ವಾಮಿಜಿ, ಕಾಲು ಘೋರವಾಗಿ ನೋಯುತ್ತಿದೆ. ನಾನು ನಡೆಯ ಲಾರೆ! ಮೊನಚಾದ ಕಲ್ಲು ನನ್ನ ಪ್ರಾಣವನ್ನು ತೆಗೆಯುತ್ತಿವೆ ! " ಎಂದನು.

ರಾಮುದಾಸನು ಕಲ್ಲುಗಳ ಮೇಲೆ ನಡೆಯುವುದನ್ನು ಬಿಟ್ಟು ಮಗ್ಗುಲ ಕಾಲ ದಾರಿಗೆ ಚಿಗಿದು ರಾಮುಚರಣದಾಸನನ್ನು ಹಾಗೆ ಬಾ ಎಂದು ಹೇಳಿದನು. ಇಬ್ಬರೂ ನಿದಾನವಾಗಿ ನಡೆದು ಹೋದರು.

" ರಾಮು, ಮುಂದುಗಡೆ ಸ್ವಲ್ಪ ದೂರದಲ್ಲಿ ಒಂದು ಸಣ್ಣ ರೈಲ್ವೇ ಸ್ಟೇಷನ್ ಕಾಣುವುದಲ್ಲವೆ? ಅಲ್ಲಿಗೆ ಹೋಗು. ಕುರ್ದುವಾಡಿ ಕಡೆಗೆ ಹೋಗುವ ಯಾವು ದಾದರೂ ಗಾಡಿಯನ್ನು ಹತ್ತು. ರಾಮುದಾಸನು ಒಬ್ಬನೇ ತನ್ನ ದಾರಿ ಹಿಡಿಯು ತ್ತಾನೆ. ಏಕೆ ಒಬ್ಬನೇ ? ಅವನು ಒಬ್ಬಂಟಿಗನಾಗಿಲ್ಲ. ಅವನಿಗೆ ಜೊತೆಗಾರ ನಾಗಿ ಮಾತನಾಡುತ್ತ ಸಂಗಡ ಬರಲು ರಾಮನು ಈಗ ಒದಗಿರುವ ದುಃಖರೂಪ ದಲ್ಲಿದ್ದಾನೆ. ರಾಮುದಾಸನು ಆ ದುಃಖವನ್ನು ಹೆಚ್ಚು ಅನುಭವ ಮಾಡಿಕೊಳ್ಳುತ್ತಾ ಅದರ ಸಾಂಗತ್ಯ ಸುಖವನ್ನು ಅನುಭವಿಸುತ್ತಾನೆ. ಹೋಗು, ಧೈರ್ಯವಾಗಿರು. ದೇವರು ನಿನ್ನ ಸಂಗಡ ಇದ್ದಾನೆ. ಉತ್ತರ ದಿಕ್ಕಿಗೆ ಪ್ರಯಾಣಮಾಡು ; ಸ್ಥಳ ಗಳನ್ನು ನೋಡು ; ಅನುಭವವನ್ನು ಪಡೆ. ಆದರೆ ಒಂದು ವಿಷಯ : ದೇವರ ಸ್ಮರಣೆಯನ್ನು ಮಾತ್ರ ಮರೆಯಬೇಡ. ಅವನ ನಾಮದ ಉಚ್ಚಾರಣೆ ಆತನು ಯಾವಾಗಲೂ ನಿನ್ನೊಡನೆ ಇದ್ದಾನೆ ಎಂಬ ತಿಳಿವನ್ನು ಕೊಡುತ್ತದೆ. ''

ಹೀಗೆ ರಾಮುಚರಣದಾಸನಿಗೆ ರಾಮುದಾಸನು ತಿಳಿವಳಿಕೆ ಹೇಳುತ್ತಿದ್ದಹಾಗೆ ಪಂಢರಪುರದ ಕಡೆಯಿಂದ ಒಂದು ಹೊಗೆಬಂಡಿ ಬರುತ್ತಿರುವುದು ಕಾಣಿಸಿತು.

" ನೋಡು, ರೈಲುಗಾಡಿ ಸಮಿಾಪಿಸುತ್ತಿದೆ. ನಿದಾನಮಾಡದೆ ಓಡಿಹೋಗಿ ಸಕಾಲದಲ್ಲಿ ಸ್ಟೇಷನ್ ಸೇರಿ ಗಾಡಿ ಹತ್ತು " ಎಂದು ರಾಮುದಾಸನು ಹೇಳಿದನು.

ಆವಶ್ಯಕತೆಯ ಕಾರಣದಿಂದ ಈಗ ರಾಮುನ ಇಚ್ಛೆ ನಡೆದೇ ನಡೆಯಿತು. ಮನಸ್ಸಿಲ್ಲದಿದ್ದರೂ ಯತ್ನವಿಲ್ಲದೆ ರಾಮುಚರಣದಾಸನು ರಾಮುದಾಸನಿಂದ ಬೀಳ್ಕೊಂಡು ಸಾಧ್ಯವಾದಷ್ಟು ವೇಗವಾಗಿ ಸ್ಟೇಷನ್ ಕಡೆಗೆ ಹೋದನು.

## (iii) ದೇವರು ಪರಿಹಾರಕೊಡುತ್ತಾನೆ

ರಾಮಚರಣದಾಸನು ರೈಲುಗಾಡಿಯನ್ನು ಹತ್ತಿದುದು ಕಾಣಿಸಿತು. ಇಲ್ಲಿಂದ ಮುಂದೆ ರಾಮದಾಸನು ಯಾವ ನಿರ್ದೇಶವೂ ಇಲ್ಲದೆ ಅಲೆದನು. ಅಂದಿನ ಊಟದ ವಿಷಯ ಜ್ಞಾಪಕ ಬಂದೊಡನೆಯೇ ಅನೇಕಸಲ ರೋದಿಸಿದನು. ದುಃಖದ ವೇಗ ದಿಂದ ಬುದ್ಧಿ ಮಂದವಾಗಿ ಬೇಸರದ ಸ್ಥಿತಿಗೆ ಇಳಿಯಿತು. (ಪ್ರಾಪಂಚಿಕ ವಿಷಯ ಗಳನ್ನೆಲ್ಲಾ ಮರೆತು ಸಮಾಧಿಗೆ ಇಳಿದಾಗ ಮಾತ್ರ ಶಾಂತಿ ದೊರೆತಿತು) ಅವನು ರಾತ್ರಿಯನ್ನು ದಾರಿಯ ಮಗ್ಗುಲಲ್ಲಿದ್ದ ಒಂದುಗುಡಿಸಿಲಿನ ಕೈಸಾಲೆಯಲ್ಲಿ ಕಳೆದನು. ಹಳ್ಳಿಯವನೊಬ್ಬನು ಸ್ವಲ್ಪಆಹಾರವನ್ನು ಕೊಡಬಂದನು. ರಾಮದಾಸನು ಅದನ್ನು ಮುಟ್ಟಲಿಲ್ಲ. ಅವನಿಗೆ ಏನನ್ನೂ ತಿನ್ನುವ ಮನಸ್ಸಿರಲಿಲ್ಲ.

ಹೀಗೆ ಎರಡು ದಿನ ಅವನು ಹಳ್ಳಿಯಿಂದ ಹಳ್ಳಿಗೆ ಅಲೆದನು. ಅವನಿಗೆ ಆಹಾರ ಬೇಕೆನ್ನಿಸಲಿಲ್ಲ. ಯಾರಾದರೂ ತಂದು ಎದುರಿಗಿಟ್ಟರೂ ಅವನು ಅದನ್ನು ಮುಟ್ಟಲಿಲ್ಲ. ಅವನಿಗೆ ಆಗ ಹೃದಯ ಸುಟ್ಟು ಕರುಕಾದಂತೆ ಭಾವನೆ ಕಂಡು ಬಂದಿತು. ಮುಳ್ಳು ಚುಚ್ಚುವುದರಿಂದಲೂ ಬೊಬ್ಬೆಗಳು ಇದ್ದುದರಿಂದಲೂ ಕಾಲು ಬಾತುಕೊಂಡವು. ಈ ಸ್ಥಿತಿಯಲ್ಲಿ ಇವನು ಮೂರನೆಯ ದಿನ ಷೆಟ್ಫಳ್ ಎಂಬ ಹಳ್ಳಿಗೆ ಬಂದನು. ಒಂದು ಮಾರುತಿಮಂದಿರಕ್ಕೆ ಹೋಗಿ ಗಟ್ಟಿಯಾಗಿದ್ದ ಕಲ್ಲು ನೆಲದಮೇಲೆ ಆಯಾಸದಿಂದ ಬಿದ್ದುಕೊಂಡು ತನ್ನಲ್ಲಿದ್ದ ಒಂದೇ ಒಂದು ವಸ್ತ್ರ ವನ್ನು ಹೊದೆದುಕೊಂಡು ವಿಶ್ರಮಿಸಿಕೊಂಡನು. ಆಗ ಮಧ್ಯಾಹ್ನವಾಗಿದ್ದಿತು. ಇನ್ನೂ ಅರ್ಧ ಗಂಟೆ ಕಾಲ ಸಹ ವಿಶ್ರಾಂತಿಪಡೆದಿರಲಿಲ್ಲ. ದೇವಾಲಯದೊಳಕ್ಕೆ ಯಾರೋ ಬಂದ ಹೆಜ್ಜೆಯ ಶಬ್ದ ಕೇಳಿಸಿತು. ರಾಮದಾಸನು ತಲೆಯಮೇಲೆ ಹೊದೆದುಕೊಂಡು ಮುಖವನ್ನು ಮುಚ್ಚಿಕೊಂಡಿದ್ದನು. ಬಂದಿದ್ದ ವ್ಯಕ್ತಿ ಸುಮಾರು ಐದು ನಿಮಿಷ ಮಾರುತಿಯ ಪೂಜೆಯನ್ನು ಮಾಡಿ ರಾಮದಾಸನ ಹತ್ತಿರಕ್ಕೆ ಬಂದು, "ಯಾರದು ?" ಎಂದು ಕೇಳಿದನು.

ರಾಮದಾಸನು ಮೌನವಾಗಿದ್ದನು. ಬಂದವನು ರಾಮದಾಸನ ಮುಖದ ಮೇಲಣ ಬಟ್ಟೆಯನ್ನು ಎಳೆದುಹಾಕಿ "ಏಕೆ ಹೀಗೆ ಮಲಗಿಕೊಂಡಿದ್ದೀರಿ ? ಊಟ ಮಾಡಿದಿರಾ?" ಎಂದು ಪ್ರಶ್ನಿಸಿದನು.

ರಾಮದಾಸನು "ಆಹಾರವನ್ನು ತೆಗೆದುಕೊಳ್ಳಕೂಡದೆಂಬುದೇ **ರಾಮನ ಇಚ್ಛೆ**" ಎಂದಷ್ಟು ಮಾತ್ರ ಹೇಳಿ ಪುನಃ ಹೊದೆದುಕೊಳ್ಳಲು ಪ್ರಯತ್ನಮಾಡಿದನು. ಇದಕ್ಕೆ ಅವಕಾಶಕೊಡದೆ ಆ ವ್ಯಕ್ತಿ ರಾಮದಾಸನ ರಟ್ಟೆಯನ್ನು ಹಿಡಿದೆಳೆದು, ಎದ್ದುನಿಂತುಕೊಳ್ಳುವಂತೆ ಮಾಡಿದನು. ಅವನು ಬಲಿಷ್ಠನಾದ ಎತ್ತರವಾದ ಆಳು. ರಾಮದಾಸನನ್ನು ಬಲವಂತದಿಂದ ಸೆಳೆದುಕೊಂಡು ಹೋಗುತ್ತಾ "**ರಾಮನ**

ಇಚ್ಛೆ ನೀವು ನಮ್ಮ ಮನೆಯಲ್ಲಿ ಊಟಮಾಡಬೇಕೆಂದು. ಬನ್ನಿ, ನಿಮ್ಮನ್ನು ಉಪವಾಸಮಾಡಲು ಬಿಡೆನು'' ಎಂದು ಹೇಳಿದನು.

ರಾಮುದಾಸನು ಅವನು ಹೇಳಿದಂತೆ ನಡೆಯಬೇಕಾಯಿತು. ಈತನ ಮನೆ ಬೀದಿಗೆ ಎದುರಾಗಿದ್ದ, ಉದ್ದವಾಗಿದ್ದ, ಅಗಲ ಕಿರಿದಾದ, ಒಂದು ಕೊಟಡಿ. ಅದರ ಮುಂಭಾಗ ಚಿಲ್ಲರೆ ಅಂಗಡಿಯಾಗಿ, ಹಿಂಭಾಗ ವಾಸದ ಗೃಹವಾಗಿದ್ದಿತು. ಅವನು ರಾಮುದಾಸನನ್ನು ನೆಟ್ಟಗೆ ಒಳಕ್ಕೆ ಕರೆದುಕೊಂಡುಹೋದನು. ಚಿಕ್ಕ ಹುಡುಗಿ ಒಬ್ಬಳು ಅಡಿಗೆಮಾಡುತ್ತಿದ್ದಳು.

ಅವನು ಮಗಳಿಗೆ—ಅವಳು ಆತನ ಮಗಳು—"ಮಗು, ಈ ಸಾಧುಗಳಿಗೆ ಮೊದಲು ಬಡಿಸು. ಇವರಿಗೆ ಹಲ್ಲಿಲ್ಲ. ಮೃದುವಾಗಿ ಕೆಲವು ರೊಟ್ಟಿಗಳನ್ನು ಮಾಡು." ಎಂದು ಹೇಳಿದನು.

ಅವನು ಒಂದು ಗೋಣಿಯಚೀಲವನ್ನು ನೆಲದಮೇಲೆಹಾಸಿ ರಾಮುದಾಸನನ್ನು ಅದರ ಮೇಲೆ ಕುಳ್ಳಿರುವಂತೆ ಮಾಡಿದನು.

ಆಮೇಲೆ ಹೇಳಿದನು: "ಮಹರಾಜ್, ನಾನು ಒಬ್ಬ ಬಡಪಾಯಿ. ಚಿಲ್ಲರೆ ಅಂಗಡಿಕಾರ.'' ಹುಡುಗಿಯ ಕಡೆ ತೋರಿಸಿ "ಈ ಮಗು ನನ್ನ ಒಬ್ಬಳೇ ಮಗಳು. ನನಗೆ ಹೆಂಡತಿ ಇಲ್ಲ. ಮಗುವಿಗೆ ಮದುವೆಯಾಗಿಲ್ಲ. ಇವಳು ಮಾಡಿದ ಅಡಿಗೆಯನ್ನು ಭೋಜನಮಾಡಲು ನಿಮಗೇನೂ ಆಕ್ಷೇಪಣೆ ಇರಲಾರದು ?" ಎಂದನು.

ಇವನ ಮಾತುಗಳಿಂದ, ಮದುವೆಯಾಗಿರುವ ಹೆಂಗಸರು ಮಾಡಿದ ಅಡಿಗೆಯನ್ನು ಊಟಮಾಡಲು ಒಪ್ಪದೇ ಇರುವ ಸಾಧುವರ್ಗ ಒಂದು ಇದೆಯೆನ್ನುವುದು ಸ್ಪಷ್ಟವಾಗಿದ್ದಿತು. ಆದರೆ ರಾಮುದಾಸನು ಆ ತರಗತಿಗೆ ಸೇರಿದವನಲ್ಲ. ಅಲ್ಲದೆ ಈ ವಿಚಾರದಲ್ಲಿ ಅವರ ಅಭಿಪ್ರಾಯವನ್ನು ಅನುಮೋದಿಸತಕ್ಕವನೂ ಅಲ್ಲ.

ಅಡಿಗೆ ಸಿದ್ಧವಾಯಿತು. ವ್ಯಾಪಾರಿ ಒಂದು ಹಿತ್ತಾಳೆ ತಟ್ಟೆಯಲ್ಲಿ ಎರಡು ರೊಟ್ಟಿಗಳನ್ನು ತುಪ್ಪದಲ್ಲಿ ಕಿವಿಚಿ ಮೃದುವಾಗುವಂತೆ ಕಲಸಿ, ತಾಯಿ ಮಗುವಿಗೆ ತಿನ್ನಿಸುವಂತೆ ರಾಮುದಾಸನಿಗ (ತನ್ನ ಕೈಯಿಂದಲೇ) ತಿನ್ನಿಸಿದನು.

ರಾಮುದಾಸನು "ಹೇ, ದೇವ! ಪಂಢರಪುರದ ಅನ್ನಕ್ಷೇತ್ರದಲ್ಲಿ ನೀನು ರಾಮುದಾಸನ ಕೈಯಲ್ಲಿ ಮಾಡಿಸಿದುದಕ್ಕೆ ಪರಿಹಾರವನ್ನು ಕೊಡುತ್ತಿದ್ದೀಯಾ ?" ಎಂದುಕೊಂಡನು. ಏನು ಪ್ರೀತಿ! ಏನು ದಯೆ!

ಅಂಗಡಿಯವನಿಂದ ಬೀಳ್ಕೊಂಡು, ರಾಮುದಾಸನು ಅಲೆದಾಡಿ, ಅನೇಕ ಹಳ್ಳಿಗಳನ್ನು ದಾಟಿ ಕೊನೆಗೆ ಅಂಜನಗಾವ್ ಎಂಬ ಹಳ್ಳಿಗೆ ಬಂದು, ದಾರಿಯಲ್ಲಿ ಒಬ್ಬನು ಹೇಳಿದಂತೆ ಇಲ್ಲಿಯ ಕುಲಕರ್ಣಿಯ ಮನೆಗೆ ಹೋದನು.

ಇದು ಪೂರ್ವಕಾಲದ ತೊಟ್ಟಿಯ ಮನೆ. ರಾಮದಾಸನು ಇದರೊಳಗೆ ಹೋಗಿ ಒಂದು ಪಡಸಾಲೆಯಲ್ಲಿ ಕುಳಿತುಕೊಂಡನು. ಎದುರಿನ ಪಡಸಾಲೆಯಲ್ಲಿ ಮೈತುಂಬ ಹೊದೆದುಕೊಂಡು ಇಬ್ಬರು ಮಲಗಿದ್ದರು. ಕೈಸಾಲೆಯ ಹೊರಗಡೆ ಬೇರೆ ಯಾರೂ ಕಾಣಿಸಲಿಲ್ಲ. ಆಗ ಸುಮಾರು ಬೆಳಗಿನ ಹತ್ತು ಗಂಟೆ ಸಮಯ. ರಾಮದಾಸನು ತನ್ನ ಪದ್ಧತಿಯ ಮೇರೆ ರಾಮಮಂತ್ರವನ್ನು ಮೆತ್ತಗೆ ರಾಗವಾಗಿ ಹೇಳುತ್ತಿದ್ದನು. ಈ ದಿವ್ಯ ಮಂತ್ರೋಚ್ಚಾರಣೆ ನಿದ್ರೆ ಮಾಡುತ್ತಿದ್ದವರಲ್ಲಿ ಒಬ್ಬನನ್ನು ಎಚ್ಚರಗೊಳಿಸಿದಂತೆ ಕಂಡಿತು. ಅವನು ಕಣ್ಣುಜ್ಜುತ್ತಾ ಎದ್ದು ಕುಳಿತು ಇನ್ನೊಬ್ಬ ನನ್ನೂ ಎಬ್ಬಿಸಿದನು. ಈತನು ಒಳಕ್ಕೆ ಹೋದಮೇಲೆ ಮೊದಲನೆಯವನು ರಾಮದಾಸನ ಕಡೆ ನೋಡಿ, ಏನು ಬೇಕು ಎಂದು ಕೇಳಿದನು.

ರಾಮದಾಸನು "ರಾಮನು ಈ ಸೇವಕನನ್ನು ಭಿಕ್ಷಕ್ಕಾಗಿ ಇಲ್ಲಿಗೆ ಹೋಗು ವಂತೆ ಕಳುಹಿಸಿದ್ದಾನೆ" ಎಂದನು.

ಈ ಶಬ್ದಗಳನ್ನು ಕೇಳಿ ಆತನು ಚಕಿತನಾದಂತೆ ಕಂಡಿತು. ಅವನು ರಾಮದಾಸನನ್ನು ಚಾಪೆಯಮೇಲೆ ಕುಳಿತುಕೊಳ್ಳಲು ಕರೆದನು. ರಾಮದಾಸನು ದೇವರಮಹಿಮೆ ಮತ್ತು ಭಗವನ್ನಾಮದ ಶಕ್ತಿಯ ವಿಚಾರವಾಗಿ ಪ್ರಯತ್ನವಿಲ್ಲದೆ ಧಾರಾಪ್ರವಾಹವಾಗಿ ಉದ್ರೇಕವಾದ ಆವೇಶದಿಂದ ಮಾತನಾಡುತ್ತಿದ್ದನು. ಅಷ್ಟರಲ್ಲೇ ಒಳಗೆ ಹೋಗಿದ್ದವನು ಬಂದು ಸೇರಿದನು. ಮೊದಲು ಮಾತನಾಡಿದವನೇ ಮನೆಯ ಯಜಮಾನ, ಕುಲಕರ್ಣಿ ಮಾಧವರಾವ್. ಎರಡನೆಯವನು ಅಂಜನ ಗಾಮಿಗೆ ಮೂರು ಮೈಲಿ ದೂರದಲ್ಲಿರುವ ಉಪಲೈ ಎಂಬ ಗ್ರಾಮದ ವಾಸಿ, ಮಾಧವರಾಯನ ಕುಲಪುರೋಹಿತ ಗೋವಿಂದ ಜೋಷಿ. ಇಬ್ಬರೂ ಒಡನೆಯೇ ರಾಮದಾಸನಲ್ಲಿ ಅನುರಕ್ತರಾದರು. ಮಾಧವರಾಯನಲ್ಲಿ ದಯೆ ತುಂಬಿ ಹರಿ ಯುತ್ತಿದ್ದಿತು. ಅವನು ರಾಮದಾಸನ ಕಾಲುಗಳನ್ನು ತೆಗೆದುಕೊಂಡು ಅಂಗಾಲು ಗಳನ್ನು ಹಿಸುಕಲು ಪ್ರಾರಂಭಿಸಿ "ಅಂಗಾಲು ಸವೆದು ಊದಿಕೊಂಡಿವೆ, ತುಂಬಾ ಮುಳ್ಳು ಬೇರೆ ಚುಚ್ಚಿಕೊಂಡಿವೆ" ಎಂದನು.

ಜೋಷಿ ಮಾಧವರಾಯ ಇಬ್ಬರೂ ಎರಡು ಸೂಜಿಗಳಿಂದ ರಾಮದಾಸನ ಅಂಗಾಲಮೇಲೆ ಚಚ್ಚರದಿಂದ ಗೇಮೆ ನಡೆಸಿ ಎಲ್ಲಾ ಮುಳ್ಳುಗಳನ್ನು ತೆಗೆದು ಹಾಕಿದರು. ಅಂಗಾಲುಗಳಲ್ಲಿ ಆಳವಾದ ಗಾಯಗಳಿದ್ದುದಲ್ಲದೆ ಒಳಗಿನ ಮಾಂಸ ಕಾಣುವ ಮಟ್ಟಿಗೆ ಅಲ್ಲಲ್ಲಿ ಚರ್ಮ ಸುಲಿದುಹೋಗಿರುವುದೂ ಕಂಡುಬಂದಿತು.

ಮಾಧವರಾಯನು ಸ್ವಲ್ಪ ತುಪ್ಪವನ್ನು ತಂದು ಒಡೆದಿರುವ ಬಿರುಕುಗಳಿಗೆಲ್ಲ ತುಂಬಿ ಅಂಗಾಲಿಗೆಲ್ಲಾ ಸವರಿದನು. ಆಮೇಲೆ ರಾಮದಾಸನನ್ನು ಸ್ನಾನಕ್ಕೆ ಕರೆದುಕೊಂಡುಹೋದನು. ಮೈಗೆಲ್ಲಾ ಎಣ್ಣೆ ಹಚ್ಚಿದನು. ಅನೇಕ ದಿವಸಗಳಿಂದ ರಾಮದಾಸನು ಸ್ನಾನಮಾಡಿರಲಿಲ್ಲ; ಹಗಲೆಲ್ಲಾ ಬಿಸಿಲಲ್ಲಿ ಒಣಗಿ, ರಾತ್ರಿಯಲ್ಲಾ

ಹಿಮದಲ್ಲಿ ನೆನೆದು, ಸಾಲದುದಕ್ಕೆ ಆಹಾರವಿಲ್ಲದೆ ಇದ್ದುದರಿಂದ ಮೈ ಒಣಗಿ ಕೊಳಕಾಗಿ ಒರಟಾಗಿದ್ದಿತು. ಮಾಧವರಾಯನು ಬಹಳ ಕನಿಕರದಿಂದ ಈ ಮೈಯನ್ನು ಸಾಬೂನು ಬಿಸಿನೀರಿನಿಂದ ಮಿಾಯಿಸಿದನು. ಸ್ನಾನಮಾಡಿಸುತ್ತಿದ್ದಾಗ ರಾಮದಾಸನು ಮಾಧವರಾಯನಿಗೆ ಶ್ರೀ ಕೃಷ್ಣನು ಸುಧಾಮನಿಗೆ ಮಾಡಿದ ಸೇವೆಯ ಜ್ಞಾಪಕಕೊಟ್ಟನು. ಭಗವಂತನು ಬಹು ಪ್ರೀತಿಯಿಂದ ತನ್ನ ಭಕ್ತನ ಕೃಶವಾದ ದೇಹವನ್ನು ಜಾಗರೂಕತೆಯಿಂದ ಪೋಷಿಸಿದನು.

ರಾಮದಾಸನಿಗೆ ಸ್ನಾನವಾದಮೇಲೆ ಸಾಮಾನ್ಯ ಮತ್ತು ಆರೋಗ್ಯಕರವಾದ ಭೋಜನವಾಯಿತು. ಆ ಹಗಲೂ ಮತ್ತು ರಾತ್ರಿಯ ಕೆಲವು ಭಾಗವೂ ಭಕ್ತಿ ಮತ್ತು ಸಾಧುಸಜ್ಜನರ ಚರಿತ್ರೆಗಳ ವಿಚಾರವಾಗಿ ಮಾತನಾಡುವುದರಲ್ಲಿ ಕಳೆಯಿತು. ಮಾರನೆಯ ದಿನ ಗೋವಿಂದ ಜೋಷಿ ರಾಮದಾಸನನ್ನು ತನ್ನ ಊರು ಉಪಲೈಗೆ ಕರೆದುಕೊಂಡುಹೋಗಲು ಯೋಚಿಸಿ, ಅವನೊಡನೆ ಹೊರಟು ಕತ್ತಲಾಗುವುದಕ್ಕೆ ಮೊದಲು ತನ್ನ ಗ್ರಾಮವನ್ನು ಮುಟ್ಟಿದನು.

ಗೋವಿಂದ ಜೋಷಿ ಮುದುಕ, ಬಡವ. ಅವನು ವಾಸಮಾಡುತ್ತಿದ್ದುದು ಒಂದು ಗುಡಿಸಲು. ಇದರೊಳಗೆ ಪ್ರವೇಶಿಸುತ್ತಲೇ ಆತನ ಹೆಂಡತಿ ರಾಮದಾಸನ ಆಗಮನವನ್ನು ನಿರೀಕ್ಷಿಸುತ್ತಿದ್ದಂತೆ ಸ್ವಾಗತವಿತ್ತಳು. ರಾಮದಾಸನು ಕುಳಿತು ಕೊಂಡಮೇಲೆ ಅವನ ಕಾಲುಗಳನ್ನು ಹಿಸುಕುತ್ತ ಬಹಳ ಸಲಿಗೆಯಿಂದ, ಎಷ್ಟೋ ಕಾಲದಿಂದ ಪರಿಚಯವಿದ್ದಂತೆ ಮಾತನಾಡಲು ಪ್ರಾರಂಭಿಸಿದಳು. ಆಕೆ ಸರಳ; ಶಿಶುವಿನಂತೆ ಪರಿಶುದ್ಧ ಜೀವಿ!

ರಾಮದಾಸನು ಉಪಲೈಯಲ್ಲಿ ಎರಡು ದಿವಸ ಇದ್ದನು. ಅವನನ್ನು ನೋಡಲು ಹಳ್ಳಿಯವರು ನೂರಾರು ಜನ ಬರುತ್ತಿದ್ದರು. ಜೋಷಿ ದಂಪತಿಗಳಿಗೆ ಒಬ್ಬ ಮಗನಿದ್ದನು. ಈ ದಂಪತಿಗಳೂ ಮಗನೂ ರಾಮದಾಸನನ್ನು ಬಹಳ ಆದರಿಸಿದರು. (ನಿಜವಾಗಿ ಅತಿಥಿ ಸತ್ಕಾರ ಹಿಂದೂ ಸಂಸಾರಗಳ ಹೆಮ್ಮೆ, ಕೀರ್ತಿ, ಆಗಿದೆ.) ರಾಮದಾಸನು ಈ ದಂಪತಿಗಳನ್ನು ಅತ್ರಿಮುನಿ ಅನಸೂಯಾ ಎಂದೂ, ಮಗನನ್ನು ದತ್ತನೆಂದೂ, ಮನೆಯನ್ನು ಅತ್ರಿಯಾಶ್ರಮವೆಂದೂ ಕರೆದನು.

ಅನಗರ್ ಗ್ರಾಮದ ಕುಲಕರ್ಣಿ ಬಲವಂತರಾಯನು ಆಹ್ವಾನಿಸಲು ರಾಮದಾಸನು ಉಪಲೈಯಿಂದ ಅಲ್ಲಿಗೆ ಹೋದನು. ಇಲ್ಲಿಯೂ ಅವನನ್ನು ಎಲ್ಲರೂ ಪ್ರೀತಿಯಿಂದಲೂ ದಯೆಯಿಂದಲೂ ಆದರಿಸಿದರು. ರಾಮದಾಸನು ಇಲ್ಲಿಂದ ಒಬ್ಬನ ಜೊತೆಯಲ್ಲಿ ಮೊಹೋಳ್ ಎಂಬ ಹಳ್ಳಿಗೆ ಹೋಗಿ ಅಲ್ಲಿಯ ಉಪಾಧ್ಯಾಯ ನಾದ ಪರಮಭಕ್ತ ಜನಾರ್ದನ ಪಂತನ ಮನೆಯಲ್ಲಿ ಇಳಿದುಕೊಂಡನು. ಇವನದೂ ಪರಿಶುದ್ಧ ಹೃದಯ. ಇವನು ತತ್ವ ಶೋಧನೆಯಲ್ಲಿ ನಿಜವಾದ ಆಸಕ್ತಿಯುಳ್ಳವನು. ಇಲ್ಲಿ ರಾಮದಾಸನಿಗೆ ಬಾಬೂಜಿ ಎಂಬ ಇನ್ನೊಬ್ಬ ಉಪಾಧ್ಯಾಯನ ಪರಿಚಯ

ವಾಯಿತು. ಈತನೂ ದೈವಭಕ್ತ. ಈತನು ರಾಮದಾಸನು ಮೋಟಾರ್ ಬಸ್ಸಿನಲ್ಲಿ ಸೊಲ್ಲಾಪುರಕ್ಕೆ ಪ್ರಯಾಣಮಾಡಲು ಏರ್ಪಡಿಸಿದನು. ರಾಮದಾಸನು ಬಾಬೂಜಿ ಯೊಂದಿಗೆ ಸೊಲ್ಲಾಪುರವನ್ನು ಮುಟ್ಟಿ ಅಲ್ಲಿ ಪಾಂಡುರಂಗ ದೇವಾಲಯದಲ್ಲಿ ಇಳಿದನು. ಅಲ್ಲಿ ಒಂದು ದಿವಸವಿದ್ದು ಮಾರನೆದಿನ ಬಿಜಾಪುರಕ್ಕೆ ಪ್ರಯಾಣ ಮಾಡಿದನು.

---

# ಅಧ್ಯಾಯ ೮

## ಹುಬ್ಬಳ್ಳಿ

### (i) ತಾಯ ವಾತ್ಸಲ್ಯ

ರಾಮದಾಸನು ಪುನಃ ಒಬ್ಬನೇ ಕಾಲುನಡಗೆಯಲ್ಲಿ ಹೊರಟು ಹೊಲ, ಗದ್ದೆ, ಹುಲ್ಲುಗಾವಲು ಕಾಡಿನಲ್ಲಿ ನಡೆಯುತ್ತಾ ಹೋದನು. ಪಂಢರಪುರದ ಅನ್ನಕ್ಷೇತ್ರ ದಲ್ಲಿ ನಡೆದ ಘಟನೆಯಿಂದ ಉಂಟಾಗಿದ್ದ ದುಃಖ ಒಂದು ವಾರದ ಹಳ್ಳಿಗಾಡಿನ ಭಕ್ತಾದಿಗಳ ಸತ್ಸಂಗದಿಂದ ಶಮನವಾಯಿತು. ತಿಳಿಯಲಸಾಧ್ಯವಾದ ತನ್ನದೇ ಆದ ರೀತಿಯಲ್ಲಿ ಭಗವಂತನು ಎಲ್ಲವನ್ನೂ ನಡೆಸಿದ್ದನು. ನಿಜವಾಗಿ ಭಗವಂತನು ನಮ್ಮ ದುಃಖಗಳ ಮಹಾಪರಿಹಾರಕನು. ರಾಮದಾಸನು ಪ್ರಯಾಣಮಾಡು ತ್ತಿದ್ದಾಗ ಕಾಡುಗಿಡಗಳ ಪೊದೆಯಿಂದ ಮುಚ್ಚಿದ್ದ ಮರಡಿಯೊಂದು ಸಿಕ್ಕಿತು. ಇದರಲ್ಲಿ ಹೋಗುತ್ತಿದ್ದಾಗ ಬೀಡಿ ಸೇದಬೇಕೆಂಬ ಅಭಿಲಾಷೆ ಮನಸ್ಸಿನಲ್ಲಿ ಉದಿಸಿತು. ರಾಮದಾಸನು ಕೆಲವುಸಲ ಬೀಡಿಯನ್ನು ಸೇದುತ್ತಿದ್ದನು. ಆದರೆ ಅದನ್ನು ತನ್ನ ಸಂಗಡ ತೆಗೆದುಕೊಂಡು ಹೋಗುತ್ತಿರಲಿಲ್ಲ. ನಿರ್ಜನವಾದ ಆ ಕಾಡಿನಲ್ಲ ಬೀಡಿ ದೊರೆಯುವ ಸಂಭವ ಎಲ್ಲಿಂದ ಬಂದೀತು? ಆದರೆ ಭಗವಂತನಿಗೆ ಅಸಾಧ್ಯವಾದುದು ಯಾವುದೂ ಇಲ್ಲ.

ಹಠಾತ್ತಾಗಿ ಪೊದೆಗಳ ಹಿಂದಿನಿಂದ ಒಬ್ಬನು ಎದುರಿಗೆ ಬಂದನು. ಅವನು ಕಿವಿಯಮೇಲೆ ಒಂದು ಬೀಡಿಯನ್ನು ಸಿಕ್ಕಿಸಿಕೊಂಡಿದ್ದನು. ಆತನು ಸಹಜವಾಗಿ ಬೀಡಿಯನ್ನು ತೆಗೆದು ರಾಮದಾಸನಿಗೆ ಅರ್ಪಿಸಿದನು. ರಾಮದಾಸನನ್ನು ಮುಟ್ಟಲೊಲ್ಲ; ಬೀಡಿಯನ್ನು ಅವನ ಕೈಗೆ ಹಾಕಿದನು. ತನ್ನ ಕಿಸೆಯಿಂದ ಎರಡು ಕಪ್ಪು ಕಲ್ಲುಗಳನ್ನೂ ಹತ್ತಿಯನ್ನೂ ತೆಗೆದು ಕಲ್ಲು ಒಂದಕ್ಕೊಂದನ್ನು ಹೊಡೆದು ಹತ್ತಿಗೆ ಬೆಂಕಿ ಹೊತ್ತಿಸಿದನು. ಉರಿಯುತ್ತಿರುವ ಹತ್ತಿಯನ್ನು ಎಲೆಯ ಮೇಲಿಟ್ಟು ರಾಮದಾಸನಿಗೆ ಕೊಟ್ಟನು. ರಾಮದಾಸನು ಬೀಡಿಯನ್ನು ಹೊತ್ತಿಸಿ ಸೇದಲು ಪ್ರಾರಂಭಿಸಿದನು. ಇದೆಲ್ಲ ಕೆಲವೇ ಕ್ಷಣದಲ್ಲಿ ನಡೆದುಹೋಯಿತು. ಇದುವರೆಗೂ ರಾಮದಾಸನು ಅವನೊಂದಿಗೆ ಮಾತನಾಡಿರಲಿಲ್ಲ. ಇಬ್ಬರೂ ಒಂದಿಗೆ ನಡೆಯುತ್ತಿದ್ದರು. ಆದರೂ ಆತನು ಸ್ವಲ್ಪ ದೂರ ಬಿಟ್ಟೇ ಬರುತ್ತಿದ್ದನು.

ರಾಮದಾಸನು ಮೌನವನ್ನು ಮುರಿದು ಪ್ರಶ್ನಿಸಿದನು:

" ಅಣ್ಣಾ, ಏಕೆ ನೀನು ಸಂಕೋಚಪಟ್ಟುಕೊಂಡು ರಾಮದಾಸನ ಹತ್ತಿರ ಬಾರದೆ ದೂರದಲ್ಲಿಯೇ ನಡೆಯುತ್ತಿದ್ದೀಯೆ ? "

" ಸ್ವಾಮಿ, ನಾನು ಜಾತಿಯಲ್ಲಿ ಹೊಲೆಯ. ನಾನು ಹೇಗೆ ನಿಮ್ಮ ಹತ್ತಿರ ಬರಲಿ, ನಿಮ್ಮ ಪುಣ್ಯಶರೀರವನ್ನು ಸ್ಪರ್ಶಿಸಲಿ ? " ಎಂದು ಆತನು ಉತ್ತರ ವಿತ್ತನು.

ಇದನ್ನು ಕೇಳಿದ ಕ್ಷಣ ರಾಮದಾಸನು ಆತನ ಬಳಿಗೆ ಓಡಿ ಅವನ ಭುಜಗಳ ಮೇಲೆ ಕೈಹಾಕಿ ಅವನನ್ನು ಆಲಿಂಗಿಸಿದನು.

" ನೀನು ಅಸ್ಪೃಶ್ಯನಲ್ಲ. ನೀನು ಸ್ವಾಮಿ ವಿಠೋಬನೇ! ಮಂಗಳವೇಡೆಯ ಪ್ರಸಿದ್ಧ ಸಾಧು ದಾಮಾಜಿಪಂತನ ಸಹಾಯಕ್ಕೆ ಓಡಿದ ಅಂತ್ಯಜ ನೀನೇ ಅಲ್ಲವೇ ? "

ಆತನು ಈ ವಿಷಯವನ್ನು ತಿಳಿದಂತೆ ನಕ್ಕು ಆ ವಿಚಾರವನ್ನು ವಿಶದ ಪಡಿಸಿದನು.

" ಸ್ವಾಮಿ, ನೀವು ಈಗ ಎಲ್ಲಿಗೆ ಹೋಗುತ್ತಿದೀರಿ ? " ಎಂದು ಪ್ರಶ್ನಿಸಿದನು.

" ಎಲ್ಲಿಗೋ ತಿಳಿಯದು " ಎಂದು ರಾಮದಾಸನು ಉತ್ತರ ಹೇಳಿದನು.

ಅವನು "ಇಲ್ಲಿಗೆ ಎರಡು ಮೈಲಿ ದೂರದಲ್ಲಿ ಭೀಮಾನದಿಯ ದಡದಲ್ಲಿ ಒಂದು ಸಣ್ಣ ಹಳ್ಳಿ ಇದೆ. ಅಲ್ಲಿಗೆ ಅಗತ್ಯವಾಗಿ ಹೋಗಿ. ಅಲ್ಲಿ ಒಂದೇ ಅಂಗಡಿ ಇದೆ. ಅದರ ಎದುರಿಗೆ ನಿಲ್ಲಿ. ದೇವರು ನಿಮ್ಮ ವಿಚಾರ ನೋಡಿಕೊಳ್ಳುತ್ತಾನೆ. ಹಳ್ಳಿಯ ಹೊರವಳಯದವರೆಗೂ ನಾನು ಬರಬಲ್ಲೆ. ಮುಂದೆ ನನ್ನ ದಾರಿ ಬೇರೆ ಕಡೆ ಇದೆ" ಎಂದನು.

ರಾಮದಾಸನು ಸಮ್ಮತಿಸಿದನು. ಮುಂದೇನೂ ಮಾತು ನಡೆಯಲಿಲ್ಲ. ರಾಮದಾಸನು ಒಂದು ಆನಂದದ ಅನುಭವದಲ್ಲಿ ಮುಳುಗಿದನು. ಹಳ್ಳಿ ದೂರ ದಲ್ಲಿ ಕಾಣಿಸಿತು. ಅವನು ನೆಟ್ಟಗೆ ಅಲ್ಲಿಗೆ ನಡೆದನು. ಹಳ್ಳಿಯ ಗುಡಿಸಲುಗಳಿಗೆ ಇನ್ನೂ ಐವತ್ತು ಗಜ ದೂರದಲ್ಲಿದ್ದಾಗ ಆ ವಿಚಿತ್ರ ಸ್ನೇಹಿತನನ್ನು ನೋಡಲು ರಾಮ ದಾಸನು ಹಿಂತಿರುಗಿದನು. ಅಂತ್ಯಜನೆಂಬ ಆ ಗೆಳೆಯನು ಮಾಯವಾಗಿದ್ದನು.

ಸೂರ್ಯನು ನೆತ್ತಿಗೇರಿದ್ದನು. ಮೊದಲೇ ತಿಳಿದಿದ್ದಂತೆ ರಾಮದಾಸನು ಆ ಹಳ್ಳಿಯಲ್ಲಿದ್ದ ಒಂದೇ ಒಂದಾದ ಅಂಗಡಿಯ ಎದುರಿಗೆ ಹೋಗಿ ನಿಂತನು. ಅಂಗಡಿಯಲ್ಲಿ ಅತಿ ಸ್ಥೂಲಕಾಯದ ಹೆಂಗಸೊಬ್ಬಳು ಯುವಕನೊಬ್ಬನ ಸಹಾಯ ದಿಂದ ಅಂಗಡಿಗೆ ಬಂದವರನ್ನು ವಿಚಾರಿಸಿಕೊಳ್ಳುತ್ತಿದ್ದಳು. ಈ ಮಾತೆ ರಾಮ ದಾಸನನ್ನು ನೋಡಿದಳು. ಒಬ್ಬೊಂಟಿಗನಾಗಿ ಅಲೆದಾಡುತ್ತಿದ್ದ ಈ ಮಗುವಿನ ಮೇಲೆ ಆಕೆಗೆ ತಕ್ಷಣವೇ ವಾತ್ಸಲ್ಯ ಉತ್ಪನ್ನವಾಯಿತು. ಅವಳು ಅಂಗಡಿಯ

ಮುಂದೆ ತುಂಬಿಕೊಂಡಿದ್ದ ವ್ಯಾಪಾರಿಗಳ ಗುಂಪನ್ನು ಚದರಿಸಿ, ರಾಮದಾಸನಿಗೆ ಹತ್ತಿರಕ್ಕೆ ಬರುವಂತೆ ತನ್ನ ಎರಡು ಕೈಗಳಿಂದಲೂ ಸಂಜ್ಞೆಮಾಡಿದಳು.

ಆಕೆ ತನ್ನ ಹತ್ತಿರವಿದ್ದ ಯುವಕನಿಗೆ "ಮಗು, ಮಗು, ಮೊದಲು ಈ ಸಾಧುವಿಗೆ ತಿನ್ನಲು ಏನಾದರೂ ಕೊಡು" ಎಂದು ಹೇಳಿದಳು. ಕೂಡಲೇ, ರಾಮದಾಸನು ನೀಡಿದ ಬಟ್ಟೆಯ ಮೇಲೆ ಬುರುಗು, ಜಿಲ್ಲೆ, ಖರ್ಜೂರ ಮುಂತಾದ್ದರ ಮಳೆಯೇ ಸುರಿದುವು. ಸ್ಥೂಲಕಾಯದ ಆ ತಾಯಿ ಕುಳಿತಿದ್ದ ಸ್ಥಳದಿಂದ ಧುಮುಕಿ ಬಂದು ಒಂದು ಕಂಬಳಿಯನ್ನು ತರಿಸಿದಳು. ಅಂಗಡಿಯ ಎದುರಿಗಿದ್ದ ಈಶ್ವರ ದೇವಾಲಯದ ಕೈಸಾಲೆಗೆ ತನ್ನ ಸ್ಥೂಲಕಾಯ ಅವಕಾಶಕೊಟ್ಟಷ್ಟು ಬೇಗ ಹೋಗಿ ಅಲ್ಲಿ ಕಂಬಳಿಯನ್ನು ಹಾಸಿದಳು. ಅದರಮೇಲೆ ಕುಳಿತುಕೊಳ್ಳುವಂತೆ ರಾಮದಾಸನಿಗೆ ಹೇಳಿದಳು. ರಾಮದಾಸನು ಕ್ರಮವಾಗಿ ಕಂಬಳಿಯ ಮೇಲೆ ಮಂಡಿಸಿದ್ದಾಯಿತು. ಆಗ ಅವಳು ಅವನಿಗೆ ಒಂದು ಲೋಟ ಕುಡಿಯುವ ನೀರನ್ನು ತರಿಸಿಕೊಟ್ಟಳು.

ಮಾತೆ, ರಾಮದಾಸನ ಎದುರಿಗೆ ಕುಳಿತುಕೊಂಡು, ಅವನಿಗೆ ತಿಂಡಿ ತಿನ್ನುವಂತೆ ವಾತ್ಸಲ್ಯಪೂರ್ವಕವಾಗಿ ಒತ್ತಾಯಮಾಡಿದಳು. ಇಷ್ಟು ಹೊತ್ತಿಗೆ ಅನೇಕ ಮಂದಿ ಹುಡುಗರು ರಾಮದಾಸನನ್ನು ಸುತ್ತಿಕೊಂಡರು. ಅವನು ತಿಂಡಿಯ ಹೆಚ್ಚು ಭಾಗವನ್ನು ಅವರಿಗೆ ಹಂಚಿ, ತಾನೂ ಸ್ವಲ್ಪ ತಿಂದು ನೀರನ್ನು ಕುಡಿದನು.

ತಾಯಿ "ಸಾಧುಜಿ, ಭೀಮಾ ನದಿ ಹತ್ತಿರಲೇ ಇದೆ. ಅಲ್ಲಿ ಸ್ನಾನ ತೀರಿಸಿಕೊಂಡು ಬನ್ನಿ; ಅಡಿಗೆಯನ್ನು ಸಿದ್ಧಮಾಡಿಸಿರುತ್ತೇನೆ. ನನ್ನ ಮನೆ ಸಮೀಪದಲ್ಲಿಯೇ ಇದೆ. ನಿಮ್ಮನ್ನು ಮನೆಗಾದರೂ ಕರೆದುಕೊಂಡು ಹೋಗುತ್ತೇನೆ, ಊಟವನ್ನು ಇಲ್ಲಿಗಾದರೂ ತರುತ್ತೇನೆ" ಎಂದಳು.

ರಾಮದಾಸನು ಎದ್ದು ನದಿಗೆ ಹೋಗಿ ಬಟ್ಟೆ ಒಗೆದುಕೊಂಡು ಸ್ನಾನಮಾಡಿ ಬಂದನು. ಮಾತೆ ಇವನಿಗಾಗಿ ಕಾದಿದ್ದಳು.

ಅವಳು "ಸಾಧುಜಿ! ಬನ್ನಿ, ನಿಮ್ಮನ್ನು ಮನೆಗೆ ಕರೆದುಕೊಂಡು ಹೋಗುತ್ತೇನೆ" ಎಂದಳು. ರಾಮದಾಸನು ಅವಳ ಹಿಂದೆ ಹೋದನು. ಬಿಸಿಲಿನ ತಾಪ ಬಹಳವಾಗಿ ಇದ್ದಿತು. ನೆಲ ಸುಡುತ್ತಿದ್ದಿತು. ರಾಮದಾಸನಿಗೆ ತಲೆಯ ಮೇಲಾಗಲಿ, ಕಾಲಿಗಾಗಲಿ ಯಾವ ರಕ್ಷೆಯೂ ಇರಲಿಲ್ಲ. ಅರ್ಧ ದಾರಿ ಹೋಗುವಾಗ ಈ ವಿಷಯ ಮಾತೆಗೆ ಗೋಚರವಾಯಿತು. ಮೃದುವಾದ ಆಕೆಯ ಮನಸ್ಸನ್ನು ಪಶ್ಚಾತ್ತಾಪ ವೇಧಿಸಿತು.

"ನಾನು ಎಂತಹ ಕಠಿಣಾತ್ಮಳು! ಈ ಉರಿಬಿಸಿಲಲ್ಲಿ ನಿಮ್ಮನ್ನು ಕರೆದುಕೊಂಡು ಬರಬಾರದಾಗಿದ್ದಿತು. ದೇವಸ್ಥಾನಕ್ಕೆ ನಿಮ್ಮ ಊಟವನ್ನು ತರಬಹುದಾ

ಗಿದ್ದಿತು. ನಿಮಗೆ ರಕ್ಷೆಗಳಿಲ್ಲ. ನೆಲ ಹುರಿಯುವ ಬಾಣಲೆಯಂತೆ ಕಾದಿದೆ. ನಾನು ಹುಚ್ಚಿ ಹುಚ್ಚಿ '' ಎಂದು ಅವಳು ಕಿರಿಚಿದಳು.

ಮಾತೆಯೇನೋ ಪಾದರಕ್ಷೆಗಳನ್ನು ಹಾಕಿಕೊಂಡಿದ್ದಳು. ಆದ್ದರಿಂದಲೇ ಇಷ್ಟೊಂದು ಪಶ್ಚಾತ್ತಾಪ.

"ಹೋಗಲಿಬಿಡು, ತಾಯಿ. ನಿನ್ನ ಮಗುವಿಗೆ ಬಿಸಿಲಿನಲ್ಲಿ ನಡೆದು ಅಭ್ಯಾಸವಾಗಿದೆ'' ಎಂದು ರಾಮದಾಸನು ಸಮಾಧಾನಮಾಡಿದನು.

ಅವಳು "ಬನ್ನಿ, ಬೇಗ ಬೇಗ ನಡಿಯೋಣ, ಇನ್ನು ಸ್ವಲ್ಪ ದೂರವೇ ಉಳಿದಿದೆ'' ಎಂದಳು. ಆಕೆ ಜಾಗ್ರತೆಯಾಗಿ ನಡೆಯುವುದರಲ್ಲಿ ಆಕೆಯ ಸ್ಥೂಲಕಾಯ ಹಿಂದೂ ಮುಂದೂ ಓಲಾಡುತ್ತಿದ್ದಿತು. ಇವರು ಬಾಗಿಲ ಬಳಿ ಬಂದರು. ಅದಕ್ಕೆ ಬೀಗ ಹಾಕಿದ್ದಿತು. ಆಕೆಯ ಸೊಸೆ ಬಾಗಿಲನ್ನು ಮುಚ್ಚಿಕೊಂಡು ಮಗ್ಗಲು ಮನೆಗೆ ಹೋಗಿದ್ದಳು. ಬೀಗದ ಕೈ ಅವಳಲ್ಲಿದ್ದಿತು. ಅವಳು ಬರಬೇಕಾದರೆ ಇನ್ನೂ ಸ್ವಲ್ಪ ಹೊತ್ತಾಗುವುದು ಖಂಡಿತ. ಈ ಮಧ್ಯೆ ರಾಮದಾಸನಿಗೆ ಬಿಸಿಲಿನಲ್ಲಲ್ಲದೆ ನಿಲ್ಲಲು ಬೇರೆ ಸ್ಥಳ ಇರಲಿಲ್ಲ.

ತಾಯಿ "ಲಕ್ಷ್ಮೀ! ಲಕ್ಷ್ಮೀ!" ಎಂದು ಕೂಗಿದಳು. ದೀರ್ಘವಾಗಿ ಉಸಿರನ್ನು ಎಳೆಯುತ್ತಾ "ಏನು ಮಾಡಲಿ? ಕಾದಮರಳಿನ ಮೇಲೆ ಬರಿಯ ಕಾಲಿನಲ್ಲಿ ನಿಂತಿದ್ದೀರಲ್ಲಾ!" ಎಂದು ಕನಿಕರಪಟ್ಟಳು.

ಈಗ ಅವಳಿಗೆ ಉಪಾಯ ಗೊತ್ತಾಯಿತು. ಅವಳು ರಾಮದಾಸನನ್ನು ಹಿಂದಿನಿಂದ ತಬ್ಬಿ ಎತ್ತಿ ಹಿಡಿದುಕೊಂಡಳು. ಅವಳಿಗೆ ರಾಮದಾಸನು ಒಂದು ಗರಿಯ ಭಾರ. ಹೊಸಿಲಿನಮೇಲೆ ನಿಂತುಕೊಂಡು ಅವಳು ಲಕ್ಷ್ಮಿಯನ್ನು ಗಟ್ಟಿಯಾಗಿ ಕೂಗಿದಳು. ಕೊನೆಗೆ ಲಕ್ಷ್ಮಿ ಓಡಿಬಂದಳು. ಸೊಸೆಯಮೇಲೆ ಆಕ್ರೋಶ ಮಾಡದೆ ಇರಲು ಇವಳಿಗೆ ಸಾಧ್ಯವಾಗಲಿಲ್ಲ. ಸೊಸೆಗೆ ಚೆನ್ನಾಗಿ ವಷಟ್ಕಾರಗಳಾದುವು.

ಮನೆಯೊಳಕ್ಕೆ ಹೋದಮೇಲೆ ಮಾತೆ ಒಂದು ಮಣೆಯನ್ನು ತಂದು ಹಾಕಿದಳು. ಅದರಮೇಲೆ ರಾಮದಾಸನು ಮಂಡಿಸಿದನು. ಆತ್ತೆಯ ಅಪ್ಪಣೆಯಂತೆ ಸೊಸೆ ಒಂದು ತಟ್ಟೆಯಲ್ಲಿ ಊಟವನ್ನು ತಂದಿಟ್ಟಳು. ಅದರಲ್ಲಿ ದಪ್ಪವಾದ ಎರಡು ರೊಟ್ಟಿಗಳೂ, ತೊವ್ವೆಯೂ ಇದ್ದವು. ಊಟಕ್ಕೆ ಪ್ರಾರಂಭವಾಯಿತು. ರೊಟ್ಟಿಗಳು ಗಟ್ಟಿಯಾಗಿದ್ದವು, ಬೆರಳುಗಳಲ್ಲಿ ಮುರಿಯುವುದಕ್ಕೆ ಆಗಲಿಲ್ಲ. ಹಾಗೂ, ರಾಮದಾಸನು ಅವನ್ನು ಮುರಿದು ತೊವ್ವೆಯೊಂದಿಗೆ ಕಲೆಸಲು ಪ್ರಯತ್ನಿಸಿದನು; ಆದರೆ ರೊಟ್ಟಿಯ ಚೂರುಗಳು ಈ ವಿನ್ಯಾಸಕ್ಕೆ ಸಗ್ಗಲಿಲ್ಲ. ಆದರೂ ಅವನು ಎರಡು ಚೂರುಗಳನ್ನು ತೊವ್ವೆಯಲ್ಲಿ ಅದ್ದಿ ಬಾಯಲ್ಲಿ ಹಾಕಿಕೊಂಡು ನುಂಗಲು ಪ್ರಯತ್ನಮಾಡಿದನು. ಇಲ್ಲಿ ಹೇಳಬೇಕು, ಆಗ ರಾಮದಾಸನ ಬಾಯಲ್ಲಿ

ಮೂರು ನಾಲ್ಕು ಹಲ್ಲು ಮಾತ್ರ ಇದ್ದುವು. ಆದುದರಿಂದ ರೊಟ್ಟಿಯನ್ನು ಅಗಿಯುವ ಮಾತು ಇಲ್ಲ. ಅವನು ರೊಟ್ಟಿಯ ಚೂರುಗಳನ್ನು ನುಂಗಲು ಪ್ರಯತ್ನ ಪಟ್ಟನು. ಒಂದೊಂದಾಗಿ ನುಂಗುತ್ತಿರುವಾಗ ಒಂದು ದೊಡ್ಡ ಚೂರು ಗಂಟಲಲ್ಲಿ ಸಿಕ್ಕಿಕೊಂಡಿತು ಉಸಿರಾಡದ ಹಾಗೆ ಆಯಿತು. ಅವನು ಆ ಚೂರನ್ನು ಬಲವಂತದಿಂದ ನುಂಗುವುದಕ್ಕಾಗಿ, ಇಲ್ಲವೆ, ಕೆಮ್ಮಿ ಉಗುಳುವುದಕ್ಕಾಗಿ ಪ್ರಯತ್ನ ಪಟ್ಟನು. ಈ ಕಷ್ಟವನ್ನು ನೋಡುತ್ತಿದ್ದ ಮಾತೆಗೆ ಈ ವಿಷಯ ಹೊಳೆಯಿತು.

ಅವಳು "ನನ್ನ ಬುದ್ಧಿ ಹಾಳಾಯಿತು! ಲಕ್ಷ್ಮೀ, ನಿನಗೂ ಅಷ್ಟು ಕಣ್ಣು ಕುರುಡೇನೆ? ಸಾಧುವಿಗೆ ಹಲ್ಲಿಲ್ಲ. ಆದರೂ ಆರಿಸುವ ಗಟ್ಟಿಯಾದ ರೊಟ್ಟಿಗಳನ್ನು ಬಡಿಸಿದ್ದೀ! ಅವುಗಳನ್ನು ಹೇಗೆ ಅಗಿದು ತಿಂದಾರು? ನೋಡು, ಅವರ ಗಂಟಲಲ್ಲಿ ಹೇಗೆ ಸಿಕ್ಕಿಕೊಂಡಿದೆ. ಅಯ್ಯೋ ದೇವರೆ! ಲಕ್ಷ್ಮೀ, ನಿನಗೆ ಕರುಣೆಯೇ ಇಲ್ಲ! ಅವರಿಗೆ ಕುಡಿಯಲು ನೀರನ್ನು ಸಹ ಕೊಟ್ಟಿಲ್ಲ. ಬೇಗ, ಬೇಗ ಅವರಿಗೆ ನೀರನ್ನು ಕೊಡು. ನೋಡು, ಅವರ ಮುಖವೆಲ್ಲಾ ಕೆಂಪಾಗಿದೆ, ಉಸಿರು ಸಿಕ್ಕಿಕೊಂಡಿದೆ!" ಎಂದು ಕಿರಿಚಿದಳು.

ತಕ್ಷಣವೇ ಲಕ್ಷ್ಮಿ ಒಂದು ಲೋಟ ನೀರನ್ನು ಅವನ ಕೈಯ್ಯಲ್ಲಿಟ್ಟಳು. ರಾಮದಾಸನು ನೀರನ್ನು ಕುಡಿಯುತ್ತಲೇ ರೊಟ್ಟಿಯಚೂರು ಗಂಟಲಿಂದ ಕೆಳಕ್ಕೆ ಹೋಯಿತು. ಈಗ ಮಾತೆ ಊಟದ ತಟ್ಟೆಯನ್ನು ಧಡಾರನೆ ಕಿತ್ತುಕೊಂಡು "ಇದರಿಂದ ನಿಮಗೇನೂ ಒಳ್ಳೆಯದಾಗುವುದಿಲ್ಲ" ಎಂದು ತೆಗೆದಿಟ್ಟು "ಲಕ್ಷ್ಮೀ ಒಡನೆ ಹೊಸರೊಟ್ಟಿ ಮಾಡು. ಮೃದುವಾಗಿರಲಿ, ಮೊದಲು ಇದನ್ನು ಮಾಡು!" ಎಂದು ಸೊಸೆಗೆ ಆಜ್ಞೆಮಾಡಿದಳು.

ಲಕ್ಷ್ಮಿ ರೊಟ್ಟಿಯನ್ನು ಸಿದ್ಧಮಾಡುತ್ತಿದ್ದಾಗ ಮಾತೆ ಕಟ್ಟಡದ ಮಧ್ಯದ ಅಂಗಳದಲ್ಲಿ ನಿಂತಿದ್ದ ಎಮ್ಮೆಯನ್ನು ಕರೆದು ಕೆಲವು ನಿಮಿಷದಲ್ಲಿ ಹಾಲನ್ನು ಕಾಯಿಸಿದಳು. ಲಕ್ಷ್ಮಿ ನುರಿತ ಕೈಯಿಂದ ಮೃದುವಾದ ರೊಟ್ಟಿಯನ್ನು ಸಿದ್ಧಮಾಡಿದಳು. ಮಾತೆ ಅವುಗಳಲ್ಲಿ ಎರಡನ್ನು ಒಂದು ತಟ್ಟೆಯಲ್ಲಿ ಬಿಸಿಹಾಲಿನಲ್ಲಿ ಹಾಕಿ ಕಿವುಚಿದಳು. ಮೃದುವಾದ ಆಹಾರವನ್ನು ರಾಮದಾಸನ ಮುಂದಿಟ್ಟು "ಸಾಧುಜಿ, ನನ್ನ ತಪ್ಪನ್ನು ಕ್ಷಮಿಸಬೇಕು. ಎಷ್ಟೇ ಆಗಲಿ ನಾನು ಬುದ್ಧಿ ಇಲ್ಲದ ಹುಚ್ಚ ಹೆಂಗಸು. ನನ್ನನ್ನು ಮನ್ನಿಸಿ. ಈಗ ಆಹಾರ ಸರಿಯಾಗಿದೆ; ಸಾವಧಾನದಿಂದ ಭೋಜನ ಮಾಡಬೇಕು" ಎಂದು ಬೇಡಿಕೊಂಡಳು.

ಊಟ ಮುಗಿದಮೇಲೆ ಆಕೆ ರಾಮದಾಸನನ್ನು ದೇವಸ್ಥಾನಕ್ಕೆ ಕರೆದುಕೊಂಡು ಬಂದು, ಬೀಳ್ಕೊಂಡು, ಮನೆಗೆ ಹೋದಳು. ಈ ತಾಯ ವಾತ್ಸಲ್ಯ ಇಂಥದು. ರಾಮದಾಸನು ಆಗಲೇ ಪ್ರಯಾಣ ಹೊರಟು ಸೂರ್ಯಾಸ್ತಮಯದ ವರೆಗೂ ನಡೆದು ರಸ್ತೆಯ ಮಗ್ಗುಲ ಒಂದು ಹಳ್ಳಿಯನ್ನು ಮುಟ್ಟಿದನು.

## (iii) ದೇವರು ಇದ್ದಾನೆಯೇ ?

ರಾಮದಾಸನು ಹೀಗೆ ಹಳ್ಳಿಯಿಂದ ಹಳ್ಳಿಗೆ ಹೋಗುತ್ತಾ ಪ್ರಯಾಣವನ್ನು ಮುಂದುವರಿಸಿದನು. ಒಂದೇ ಸಮನಾಗಿ ನಡೆಯುತ್ತಿದ್ದುದರಿಂದ ಕಾಲುಗಳ ಸ್ಥಿತಿ ಪುನಃ ಕೆಟ್ಟಿತು. ಈಗ್ಗೆ ಇವನು ಒಂದು ಮಧ್ಯಾಹ್ನ ಒಂದು ಹಳ್ಳಿಯನ್ನು ಬಿಟ್ಟು ರಸ್ತೆಯಲ್ಲಿ ಮೂರು ಮೈಲಿ ನಡೆದಿದ್ದನು. ಬಿಜಾಪುರದ ಸಮೀಪಕ್ಕೆ ಬಂದಿದ್ದನು. ಆಗ ಸುಮಾರು ಮೂರು ಗಂಟೆಗೆ ಮೀರಿದ್ದಿತು. ಎದುರಿಗೆ ಸಿಕ್ಕಿದ ಕೆಲವರು ಇವನನ್ನು ನಿಲ್ಲಿಸಿ ಎಲ್ಲಿಗೆ ಪ್ರಯಾಣವೆಂದು ಕೇಳಿದರು. ರಾಮದಾಸನು ಸಹಜ ವಾಗಿ ಬಿಜಾಪುರಕ್ಕೆ ಹೋಗುವುದಾಗಿ ಹೇಳಿದನು. ಅವರಲ್ಲಿ ಒಬ್ಬನು ರಾಮ ದಾಸನಿಗೆ ಬಿಜಾಪುರ ಇನ್ನೂ ಇಪ್ಪತ್ತು ಮೈಲಿ ದೂರ ಇದೆ, ಕತ್ತಲಾಗುವುದರೊಳಗೆ ಅಲ್ಲಿಗೆ ಸೇರಲಾಗುವುದಿಲ್ಲ, ಮಧ್ಯೆ ನಿಲ್ಲಲು ಯಾವ ಹಳ್ಳಿಯೂ ಇಲ್ಲ, ಕತ್ತಲಲ್ಲಿ ದಾರಿತಪ್ಪಿ ಕಾಡಿನಲ್ಲಿ ನಿಲ್ಲಬೇಕಾಗಬಹುದು ಎಂದು ಎಚ್ಚರಿಕೆ ಹೇಳಿ, ಪ್ರಾತಃ ಕಾಲಕ್ಕೆ ಮುಂದಕ್ಕೆ ಹೊರಡಬಹುದೆಂದೂ, ಆ ಮಧ್ಯೆ ಆ ರಾತ್ರಿ ಅವನು ತನ್ನ ಸಹವಾಸ ಸುಖವನ್ನು ತಮಗೆ ಕೊಡಬಹುದೆಂದೂ ಸಲಹೆ ಕೊಟ್ಟನು.

ರಾಮನು ತನ್ನ ಮಗುವಿನ ಯೋಗಕ್ಷೇಮವನ್ನು ಎಲ್ಲೆಲ್ಲಿಯೂ ನೋಡಿ ಕೊಳ್ಳುತ್ತಾನೆ. ರಾಮದಾಸನು ಇವರೊಂದಿಗೆ ಹಳ್ಳಿಗೆ ಹಿಂದಕ್ಕೆ ಬಂದು ರಾತ್ರಿ ಅಲ್ಲಿದ್ದನು. ಪ್ರಾತಃಕಾಲ ಬಹಳ ಜಾಗ್ರತೆ ಹೊರಟು ಮಧ್ಯಾಹ್ನದಹೊತ್ತಿಗೆ ಹತ್ತುಮೈಲಿ ಪ್ರಯಾಣ ಮಾಡಿದನು. ಎಡಗಡೆ ವಿಸ್ತಾರವಾದ ಹೊಲ ಗದ್ದೆಗಳಿದ್ದು ಅವು ಒಂದು ಕಪಿಲೆಯ ಬಾವಿಯ ನೀರಿನಿಂದ ಸಾಗುವಳಿಯಾಗಿದ್ದುವು. ಒಬ್ಬ ರೈತನು ನಾಲ್ಕು ಎತ್ತುಗಳನ್ನು ಕಟ್ಟಿ ಕಪಿಲೆಹೊಡೆಯುತ್ತಿದ್ದನು. ರಾಮದಾ ಸನು ಬಾವಿಯೊಳಗೆ ಇಳಿದು ನೀರನ್ನು ಕುಡಿದು ದಾಹವನ್ನು ಅಡಗಿಸಿಕೊಂಡು, ಮೇಲಕ್ಕೆ ಬಂದನಂತರ, ಕಪಿಲೆ ಹೊಡೆಯುತ್ತಿದ್ದವನು ರಾಮದಾಸನನ್ನು ಹತ್ತಿ ರಕ್ಕೆ ಬರುವಂತೆ ಸಂಜ್ಞೆಮಾಡಿದನು. ಬಾವಿಯ ದಡದಮೇಲೆ ಒಂದು ದೊಡ್ಡ ಗಿಡದ ನೆರಳಿನಲ್ಲಿ ರಾಮದಾಸನನ್ನು ತನ್ನೊಡನೆ ಕುಳ್ಳಿರಿಸಿಕೊಂಡನು. ಅವನು ಕೊಟ್ಟ ಹೊಗೆಸೊಪ್ಪಿನ ಚಿಲುಮೆಯಿಂದ ರಾಮದಾಸನು ಕೆಲವು ದಮ್ಮುಗಳನ್ನು ಸೇದಿದನು.

ರೈತನು " ಈಗ ನಿಮ್ಮನ್ನು ಕೇಳಬೇಕಾದ ಒಂದು ಪ್ರಶ್ನೆ ಇದೆ. ಸಾಧುಜಿ, 'ದೇವರು' ಎನ್ನಿಸಿಕೊಳ್ಳುವವನು ನಿಜವಾಗಿಯೂ ಇದ್ದಾನೆಯೇ? ನನ್ನ ಪಾಲಿಗೆ ಅವನು ಇರುವುದೇ ಬಹುಸಂಶಯವಾಗಿದೆ " ಎಂದನು.

ರಾಮದಾಸನು " ಈ ನಂಬಿಕೆ ಇರುವವರಿಗೆ ದೇವರು ಇದ್ದಾನೆ, ಇಲ್ಲದ ವರಿಗೆ ಇಲ್ಲ " ಎಂದು ಉತ್ತರಕೊಟ್ಟನು.

ರೈತನು ಹೇಳಿದನು: " ಹಾಗಾದರೆ ನನ್ನ ಕಥೆ ಕೇಳಿ. ನೀವು ನೋಡುತ್ತಿರು ವಂತೆ ನನ್ನವೃತ್ತಿ ಜಮೀನುಸಾಗುವಳಿ. ನನ್ನ ಸಂಸಾರದಲ್ಲಿ ನನ್ನ ಹೆಂಡತಿ, ವಯಸ್ಕರಾದ ಮೂರುಜನ ಹೆಣ್ಣುಮಕ್ಕಳು ಒಬ್ಬ ಮಗ ಮತ್ತು ಅವನ ಹೆಂಡತಿ ಇದ್ದಾರೆ. ಸುತ್ತಲೂ ಕಾಣುವ ಹಸುರು ಬೆಳೆ ನಮ್ಮಿಂದ ಸಾಗುವಳಿಯಾದದ್ದು. ಹಗಲೂ ರಾತ್ರಿ ಮನೆಯವರೆಲ್ಲ ಜಮೀನಿನಲ್ಲೇ ದುಡಿಯುತ್ತೇವೆ, ಜಮೀನಿಗೆ ನೀರನ್ನು ಒದಗಿಸಲು ಈ ನಾಲ್ಕು ಎತ್ತುಗಳೂ ಜಾವ ಜಾವ ದುಡಿಯುತ್ತವೆ. ವರ್ಷವೆಲ್ಲ ನಮಗೆ ತಪ್ಪದೆ ಕೆಲಸವಿರುತ್ತದೆ. ಇಷ್ಟಾದರೂ ನೋಡಿ, ನಿಮಗೆ ಆಶ್ಚ ರ್ಯವಾಗಬಹುದು, ನಮಗೆ ಸಾಧಾರಣ ಊಟ ಉಡಿಗೆಗೆ ಕಷ್ಟವಾಗಿದೆ." ಇಷ್ಟು ಹೊತ್ತಿಗೆ ರಾಮದಾಸನ ಸಮೀಪಕ್ಕೆ ಬಂದಿದ್ದ ತನ್ನ ಹೆಣ್ಣುಮಕ್ಕಳನ್ನು ತೋರಿ ಸುತ್ತಾ ಅವನು ದುಃಖದಿಂದ "ನನ್ನ ಹೆಣ್ಣುಮಕ್ಕಳ ಉಡಿಗೆಯನ್ನು ನೋಡಿ, ಮಹರಾಜ್! ಎಲ್ಲ ಚಿಂದಿಯಾಗಿವೆ. ದೇವರಿದ್ದಾನೆಂದು ನೀವೇನೋ ಹೇಳು ತ್ತೀರಿ. ದೇವರು ಎನ್ನಿಸಿಕೊಳ್ಳುವವನು ಇದ್ದರೆ ಅವನು ಬಹಳ ನಿಷ್ಕರುಣಿ. ನಿಷ್ಕರುಣಿಯಾದರೆ ಅವನು ದೇವರಲ್ಲ!" ಎಂದನು.

ರಾಮದಾಸನು ಉತ್ತರ ಹೇಳಿದನು : "ರಾಮದಾಸನಿಗಾದರೋ ದೇವರು ಇದ್ದಾನೆಂಬುದು ಬರೀ ನಂಬಿಕೆ ಅಥವ ಊಹೆಯಲ್ಲ. ಅವನು ಇರುವುದು ನಿಶ್ಚಯ. ನಿನ್ನ ಸ್ಥಿತಿಯ ವಿಚಾರವಾಗಿ ನೀನು ಇಷ್ಟು ಹೇಳಿದಮೇಲೂ ರಾಮ ದಾಸನು ದೇವರಿದ್ದಾನೆ ಎಂದು ಖಂಡಿತ ಹೇಳಬಲ್ಲನು. (ಅವನು ಸಂಪೂರ್ಣ ದಯಾಮಯನು, ಪ್ರೇಮಮಯನು) ಪ್ರಪಂಚದಲ್ಲಿ ನಮಗೆ ದೊರೆಯುವ ವಿಷಯ ಸುಖ ಅಥವ ಅದರ ಅಭಾವದಿಂದ ನಾವು ದೇವರ ಇರುವಿಕೆಯನ್ನು ತೀರ್ಮಾನಿಸ ಲಾಗದು. (ನಮ್ಮ ಆತ್ಮದ ಬೆಳವಣಿಗೆಗೆ ಕಷ್ಟಗಳ ಅನುಭವ ಆವಶ್ಯಕ) ದೇವರಿ ಗೋಸ್ಕರ ರಾಜಾಧಿರಾಜರು ತಮ್ಮ ರಾಜ್ಯವನ್ನು ತ್ಯಜಿಸಿ ಭಿಕ್ಷಾಪಾತ್ರವನ್ನು ಹಿಡಿದು ಚಿಂದಿಬಟ್ಟೆಯನ್ನು ಧರಿಸಿದ್ದುಂಟು. ಧನಕನಕಾದಿ ಸಂಪತ್ತುಗಳನ್ನು ಎಷ್ಟೇ ಪಡೆದಿದ್ದರೂ ತೃಪ್ತಿಯನ್ನು ಹೊಂದದ ಮನುಷ್ಯನಿಗೆ ಜೀವನ ದುಃಖಮ ಯವೇ ನಿಜ. ತೃಪ್ತಿಯೊಂದನ್ನು ಪಡೆದಿದ್ದರೆ, ಅರಮನೆಯಲ್ಲಿ ಅತೃಪ್ತಿಯಿಂದಿ ರುವ ದೊರೆಗಿಂತಲೂ ಗುಡಿಸಿಲವಾಸಿಗೆ ಎಷ್ಟೋ ಹೆಚ್ಚಾದ ಸಂತೋಷವಿರುತ್ತದೆ. (ತೃಪ್ತಿಯೆಂಬುದು ದೇವರನ್ನು ನಂಬಿ ಅವನಲ್ಲಿ ಶರಣು ಹೋಗುವುದರಿಂದ ದೊರೆ ಯುವ ದೇವದತ್ತವಾದ ವರ) ದೇವರು ನಮ್ಮ ಕೇಡನ್ನು ಬಯಸುವುದಿಲ್ಲ, ಅವನ ಅಪಾರಕಾರುಣ್ಯದಲ್ಲಿ ನಮಗೆ ನಂಬಿಕೆ ಇಲ್ಲದಿರುವುದೇ ನಮ್ಮ ದುಃಖಗಳಿಗೆ ಮೂಲ ಕಾರಣ. ನೀನು ಹೇಳುವುದು ನಿನಗೆ ನಿರ್ಘೃಣವಾಗಿ ಎದುರಿಗಿರುವ ಕಠಿನಸಂಗತಿ ಗಳು ಎಂದು ನೀನು ವಾದಿಸಬಹುದು. ಅವಕ್ಕೆ ಯೋಗ್ಯವಾದ ಸ್ಥಾನವನ್ನು ಕೊಟ್ಟು ಜೀವನದ ನಿಜವಾದ ಗುರಿ ಏನೆಂಬುದನ್ನು ತಿಳಿದರೆ ಅವು ಲೆಕ್ಕಕ್ಕೆ ನಿಲ್ಲುವುವಲ್ಲ.

ನಿಜವಾಗಿಯೂ, ಯಾರು ಯಾವಾಗಲೂ ದುಃಖಿಸುತ್ತ ಗೋಣಗುಟ್ಟುತ್ತಿರುತ್ತಾರೋ ಅವರಿಗೆ ದೇವರು ಇಲ್ಲ. ಅಣ್ಣಾ! ನೀನು ನಿರಾಶೆಗೆ ಎಡೆಗೊಡದಿರು, (ದೈವೇಚ್ಛೆಗೆ ಅಧೀನನಾಗು,) ಎಲ್ಲವೂ ಒಳ್ಳೆಯದಾಗುವುದು.'' ಹೀಗೆಂದು ರಾಮುದಾಸನು ಸಮಾಧಾನಹೇಳಿದನು.

ರೈತನು ರಾಮುದಾಸನು ಹೇಳಿದುದನ್ನು ಮೌನವಾಗಿ ಕೇಳುತ್ತಿದ್ದನು. ಅವನ ಕಣ್ಣಿನಲ್ಲಿ ನೀರುತುಂಬಿತು. ರಾಮುದಾಸನು ಅವನನ್ನು ಬಿಟ್ಟು ಮುಂದೆ ಪ್ರಯಾಣ ಮಾಡಿದನು.

ರಾಮುದಾಸನು ಆಲೋಚನಾಪರನಾದನು. ಈ ಕೃಷಿಕನ ದುರ್ದಶೆ ಏತ ರಿಂದ ಬಂದಿತು? ಪ್ರತಿಯೊಬ್ಬನೂ ತನ್ನ ಕರ್ಮಾನುಸಾರ ದುಃಖವನ್ನು ಅನುಭ ವಿಸುತ್ತಾನೆ ಸರಿ. ಈ ರೈತನ ವಿಚಾರದಲ್ಲಿ ಕರ್ಮ ಹೊರಗಿನ ಕಾರಣಗಳ ಮೂಲಕ ಹೇಗೆ ಕೆಲಸ ಮಾಡಿತು? ಬಡವನ ಅಧೋಗತಿಗೆ ದಳ್ಳಾಳಿ ಮತ್ತು ಸಾಲಕೊಡು ವವನು ಇಬ್ಬರೂ ನಿಮಿತ್ತ ಕಾರಣ. ವ್ಯಾಪಾರಿ ನಿಷ್ಕರುಣಿಯಾಗಿ ಇವನಿಂದ ಕಸಿದು ಕೊಂಡದ್ದೂ ಮತ್ತು ಸಾಹುಕಾರನ ಆತುರವೂ ಈ ಕೃಷಿಕನನ್ನು ಪುಡಿಮಾಡಿರ ಬೇಕು. ಅನಾವಶ್ಯಕವಾದ ವೆಚ್ಚಗಳಿಗೆ ಕಾರಣವಾದ ಹಬ್ಬಹರಿದಿನಗಳೂ ಹವ್ಯ ಕವ್ಯಗಳೂ ಇವನನ್ನು ಸಾಹುಕಾರನ ಬಲೆಗೆ ತಂದೊಡ್ಡಿರಬೇಕು. ಇವುಗಳ ಜೊತೆಗೆ ಮಳೆಬೆಳೆಗಳ ಸಂಬಂಧವಾದ ಅನಿಶ್ಚಯ. ಇವೆಲ್ಲಕ್ಕೂ ಮೇಲೆ ವಿಪರೀತ ವಾದ ಕಂದಾಯ.

ರಾಮುದಾಸನು ಮಧ್ಯಾಹ್ನದ ಹೊತ್ತಿಗೆ ಒಂದು ಹಳ್ಳಿಯನ್ನು ಸೇರಿ ಅಲ್ಲಿ ಒಂದು ತೋಪಿನ ಮಧ್ಯೆ ಇದ್ದ ಒಂದು ಬಾವಿಯಲ್ಲಿ ಸ್ನಾನಮಾಡಿ ಮಗ್ಗುಲು ಹಳ್ಳಿಯಲ್ಲಿ ಭಿಕ್ಷವನ್ನು ತೀರಿಸಿಕೊಂಡನು. ಮರಗಳ ತಂಪಾದ ನೆರಳಿನಲ್ಲಿ ಒಂದು ಗಂಟೆ ಕಾಲ ವಿಶ್ರಮಿಸಿಕೊಂಡು ಮತ್ತೆ ನಡೆಯತೊಡಗಿದನು. ಬಿಜಾಪುರ ಇನ್ನು ಆರು ಮೈಲಿ ಮಾತ್ರ ದೂರ ಇದ್ದಿತು. ರಾಮುದಾಸನು ಸಾಯಂಕಾಲ ಐದುಗಂಟೆಯ ಹೊತ್ತಿಗೆ ಈ ದಾರಿಯನ್ನು ಮುಗಿಸಿದನು.

ರಾಮುದಾಸನು ಹಿಂದೆ ಬಿಜಾಪುರಕ್ಕೆ ಬಂದಿದ್ದಾಗ ಶಂಕರಲಾಲ್ ಓಜ ಎಂಬ ದಯಾಳುವಾದ ವ್ಯಾಪಾರಿ ಆತಿಥ್ಯವನ್ನು ನೀಡಿದ್ದನು. ಈಗ ರಾಮುದಾಸನು ಆತನ ಮನೆಗೆ ಹೋಗಿ ಆತನ ಕೋರಿಕೆಯಂತೆ ಅಲ್ಲಿ ಎರಡು ದಿವಸಗಳಿದ್ದನು. ಆತನೂ, ಕಾಯಿಲೆಯಿಂದ ನರಳುತ್ತಿದ್ದ ಆತನ ಹೆಂಡತಿಯೂ ಇವನನ್ನು ಪ್ರೀತಿ ಯಿಂದ ಕಂಡು ತಾವು ಪ್ರೇಮಮೂರ್ತಿಗಳೆಂಬುದನ್ನು ಪ್ರಕಟಮಾಡಿದರು. ರಾಮು ದಾಸನ ಕಾಲುಗಳ ಸ್ಥಿತಿ ಶಂಕರಲಾಲನಿಗೆ ಕಾಣಿಸಿತು. ಎರಡು ಕಾಲೂ ಊದಿ ಆನೆಗಾಲು ಬಂದಿದ್ದ ಹಾಗೆ ಕಾಣುತ್ತಿದ್ದಿತು. ರಾಮುದಾಸನು ಹುಬ್ಬಳ್ಳಿಗೆ ಹೋಗು ವುದಾಗಿ ತಿಳಿಸಿದುದರಿಂದ ಓಜನೂ ಆತನ ಸ್ನೇಹಿತರೂ ಮಾತನಾಡಿಕೊಂಡು ಹುಬ್ಬಳ್ಳಿಗೆ ರೈಲು ಛಾರ್ಜನ್ನು ಜೊತೆಮಾಡಿಕೊಟ್ಟರು.

### (iii) ಓಹೋ, ನೀವು ಉಪ್ಪರಿಗೆಯ ಮೇಲೆ ಇದ್ದೀರಿ!

ರಾಮದಾಸನು ಮೂರನೆ ದಿವಸ ಸಾಯಂಕಾಲದ ರೈಲಿನಲ್ಲಿ ಮುಂದೆ ಹೊರಟನು. ಶಂಕರಲಾಲನು ಸ್ನೇಹಿತರಿಂದ ಸೇರಿಸಿದ ಚಂದಾ ಹಣದಲ್ಲಿ ಟಿಕೀಟನ್ನು ಕೊಂಡುಕೊಂಡ ಮೇಲೆ ಎಂಟಾಣೆ ಉಳಿಯಿತು. ಶಂಕರಲಾಲನು ಆ ಹಣವನ್ನು ರಾಮದಾಸನು ತೆಗೆದುಕೊಳ್ಳಬೇಕೆಂದು ಒತ್ತಾಯಮಾಡಿದನು. ರಾಮದಾಸನು ಬೇಡವೆಂದರೂ ಕೇಳದೆ, ಅದನ್ನು ರಾಮದಾಸನು ಆಗ ತೊಟ್ಟಿದ್ದ ನಿಲುವಂಗಿಯ ಕಿಸೆಗೆ ಟಿಕೀಟಿನೊಂದಿಗೆ ಹಾಕಿದನು.

ರಾತ್ರಿ ಕಳೆದು ಬೆಳಗಾಯಿತು, ಕಿಸೆಯಲ್ಲಿ ಎಂಟಾಣೆ ಸದ್ದುಮಾಡುತ್ತಿದ್ದಿತು. ಅದನ್ನು ಏನುಮಾಡಬೇಕೆಂಬುದು ರಾಮದಾಸನಿಗೆ ತಿಳಿಯಲಿಲ್ಲ. ದುಡ್ಡಿನ ಆವಶ್ಯಕತೆ ಇರಲಿಲ್ಲವಾದುದರಿಂದ ಈವರೆಗೂ ದುಡ್ಡನ್ನು ಹೊತ್ತುಕೊಂಡು ಹೋಗುವ ಪದ್ಧತಿ ಇರಲಿಲ್ಲ. ದುಡ್ಡನ್ನು ಮುಟ್ಟಬೇಕಾದ ಪ್ರಮೇಯವನ್ನುಂಟುಮಾಡದೆ ಎಲ್ಲ ವಿಚಾರಗಳನ್ನೂ ಭಗವಂತನೇ ನೋಡಿಕೊಳ್ಳುತ್ತಿದ್ದನು. ಒಂದು ಸ್ಟೇಷನ್ನಿನಲ್ಲಿ ರೈಲುನಿಂತಾಗ ಒಬ್ಬ ಕುರುಡಭಿಕ್ಷುಕನು ಗಾಡಿಯೊಳಗೆ ಪ್ರವೇಶಮಾಡಿದನು. ಈಗ ಸಮಯ ದೊರೆಯಿತೆಂದು ಯೋಚಿಸಿ ರಾಮದಾಸನು ಮುಂದಣ ಸ್ಟೇಷನ್ನುಗಳಲ್ಲಿ ಬರಬಹುದಾದ ಭಿಕ್ಷುಕರಿಗಾಗಿ ಆರಾಣೆಯನ್ನು ಉಳಿಸಿಕೊಂಡು ಇವನ ಕೈಯ್ಯಲ್ಲಿ ಎರಡಾಣೆ ನಾಣ್ಯವನ್ನಿಟ್ಟನು. ಸ್ಟೇಷನ್ ಮೇಲೆ ಸ್ಟೇಷನ್ ಬಂದರೂ ಯಾವ ಭಿಕ್ಷುಕನ ಸುಳಿವೂ ಕಾಣಲಿಲ್ಲ.

ಹತ್ತುಗಂಟೆಯ ಹೊತ್ತಿಗೆ ರೈಲು ಹುಬ್ಬಳ್ಳಿ ಸ್ಟೇಷನ್ನಿಗೆ ಬಂದಿತು. ರೈಲಿಳಿದು ರಾಮದಾಸನು ರಸ್ತೆಯಲ್ಲಿ ನಡೆದನು. ದುಡ್ಡನ್ನು ಏನುಮಾಡಬೇಕೆಂಬ ಪ್ರಶ್ನೆ ರಾಮದಾಸನ ಮನಸ್ಸಿನಲ್ಲಿ ಕೊರೆಯುತ್ತಲೇ ಇದ್ದಿತು. ಉಭಯಕರ್ ಮನೆಗೆ ನೇರವಾಗಿ ಹೋಗಬೇಕೆಂದೂ, ಮಧ್ಯಾಹ್ನ ಶ್ರೀ ಸಿದ್ಧಾರೂಢ ಮಠಕ್ಕೆ ಹೋಗಬೇಕೆಂದೂ, ರಾಮನ ಪ್ರೇರಣೆಯಾಯಿತು. ಉಭಯಕರ್ ಮನೆಯವರೆಗೂ ಹೋದುದಾಯಿತು. ಆದರೆ ಕಿಸೆಯಲ್ಲಿ ದುಡ್ಡನ್ನಿಟ್ಟುಕೊಂಡು ಮನೆಯೊಳಕ್ಕೆ ಪ್ರವೇಶಿಸಲು ಆಗಲಿಲ್ಲ. ಹಣವನ್ನು ವಿನಿಯೋಗ ಮಾಡಬೇಕೆಂಬ ಅಭಿಲಾಷೆ ಇದ್ದಿತು. ಆದರೆ ದಾರಿಮಾತ್ರ ಇರಲಿಲ್ಲ. ಅವನು ಸ್ಟೇಷನ್ನಿಗೆ ಹಿಂದಕ್ಕೆ ಹೊರಟನು. ಅರ್ಧದಾರಿಯಲ್ಲಿ ನಿಂತನು. ಅಯ್ಯೋ, ದುಡ್ಡನ್ನು ಏನುಮಾಡಬೇಕು? ದಾರಿಯಲ್ಲೆಲ್ಲಿಯೂ ಭಿಕ್ಷುಕರ ಸುಳಿವೇ ಕಾಣಲಿಲ್ಲ. ರಸ್ತೆಯ ಮಗ್ಗುಲ ಚರಂಡಿಯಲ್ಲಿ ದುಡ್ಡನ್ನು ಬಿಸಾಡಬೇಕೆಂದು ಮನಸ್ಸಾಯಿತು. ಆದರೆ ಅದೂ ಆಗಲಿಲ್ಲ. ಆ ದುಡ್ಡನ್ನು ಯಾರಿಗಾದರೂ ಕೊಡಬೇಕೆಂಬುದೇ ರಾಮನ ಆಜ್ಞೆ. ಆ ಯಾರು ಎಂಬುವರು ಎಲ್ಲಿದ್ದಾರೆ? ಸ್ವಾಮಿಯೇ, ಎಂತಹ ಸನ್ನಿವೇಶ ಒದಗಿಸಿದ್ದೀಯೆ!

ಓದುಗರಿಗೆ ಇದು ಬಹುಸಾಮಾನ್ಯವಾದ ಸಂಗತಿ ಎಂದು ಕಾಣಬಹುದು. ಆದರೆ ರಾಮುದಾಸನಿಗೆ ಇದು ಬಹು ಮಹತ್ತರವಾದ ಪರೀಕ್ಷೆಯ ಪ್ರಸಂಗವಾಗಿದ್ದಿತು. ಅವನು ಪುನಃ ಉಭಯಕರರ ಮನೆಯಕಡೆ ಹೊರಟನು. ಮನೆಯನ್ನು ಸಮೀಪಿಸುತ್ತಿದ್ದಾಗ, ಮ್ಯುನಿಸಿಪಲ್ ಆಫೀಸಿನ ಪೌಳಿಯಿಂದ ಒಬ್ಬ ಕಸಗುಡಿಸುವವನು ಈಚೆಗೆ ಬರುತ್ತಿದ್ದುದನ್ನು ಕಂಡನು. "ನನ್ನನ್ನು ಕಷ್ಟದಿಂದ ಪಾರುಮಾಡಲು ರಾಮ ಇಲ್ಲಿ ಬಂದಿದ್ದಾನೆ" ಎಂದು ಹೇಳಿಕೊಂಡು ರಾಮುದಾಸನು ತನ್ನಲ್ಲಿದ್ದ ಚಿಲ್ಲರೆದುಡ್ಡನ್ನು ಆ ಕಸಗುಡಿಸುವವನಿಗೆ ಕೊಟ್ಟುಬಿಟ್ಟನು. ಅದನ್ನು ಅವನು ಬಹಳ ಸಂತೋಷದಿಂದ ಸ್ವೀಕರಿಸಿದನು. ರಾಮುದಾಸನ ತಲೆಯಿಂದ ದೊಡ್ಡ ಹೊರೆ ಇಳಿದಂತಾಯಿತು. ಈಗ ರಾಮುದಾಸನು ಉಭಯಕರರ ಮನೆಯನ್ನು ಹೊಕ್ಕನು. ಸುಬ್ಬರಾವ್ ಉಭಯಕರ್ ಸಂತನಂಥ ಮನುಷ್ಯರು. ಅವರು ರಾಮುದಾಸನನ್ನು ಸಂತೋಷದಿಂದ ಸ್ವಾಗತಿಸಿದರು. ಮನೆಮಕ್ಕಳೂ ಪ್ರೀತಿಯಿಂದ ತುಂಬಿ ಹರಿಯುತ್ತಿದ್ದರು. ಈ ವೃದ್ಧ ಸಾಧು ತಮ್ಮ ಪ್ರೇರಣೆ ಮತ್ತು ಪ್ರಯತ್ನದಿಂದ ಕಟ್ಟಿಸಿದ್ದ ಕೃಷ್ಣದೇವಾಲಯವನ್ನು ತೋರಿಸಿದರು. ಇಲ್ಲಿರುವ ಶ್ರೀ ಕೃಷ್ಣನ ವಿಗ್ರಹ ತುಷಾರದಂತೆ ಸ್ವಚ್ಛಧವಳವಾದ ಅಮೃತ ಶಿಲೆಯಿಂದ ಮಾಡಿರುವ ಮೋಹಕ ಮೂರ್ತಿ! ಅಷ್ಟೇ ಅಲ್ಲ, ಸುಂದರವಾದ ಒಂದು ಕಲಾಕೃತಿ.

ಮನೆಗೆ ಬಂದ ನಂತರ, ಹುಬ್ಬಳ್ಳಿಯಿಂದ ಮುಂದಣ ಪಯಣವೆಲ್ಲಿಗೆಂದು ಆ ಸತ್ಪುರುಷರು ಪ್ರಶ್ನೆಮಾಡಿದರು. ರಾಮುದಾಸನು "ಬೆಂಗಳೂರಿಗೆ" ಎಂದನು. "ನಮ್ಮ ಮನೆಯವರು ನಾಡಿದ್ದು ಬೆಂಗಳೂರಿಗೆ ಪ್ರಯಾಣ ಮಾಡುತ್ತಾರೆ. ನೀವು ಅವರ ಸಂಗಡ ಹೋಗಬಹುದು" ಎಂದು ಅವರು ಸೂಚಿಸಿದರು. ರಾಮುದಾಸನು ಒಪ್ಪಿದನು.

ಮಧ್ಯಾಹ್ನ ರಾಮುದಾಸನು ಪ್ರಸಿದ್ಧವಾದ ಶ್ರೀ ಸಿದ್ಧಾರೂಢಸ್ವಾಮಿ ಮಠಕ್ಕೆ ಹೋದನು. ಇವನು ಈ ಮಠಕ್ಕೆ ಹೋದುದು ಇದು ಎರಡನೆಯ ಸಾರಿ. ಶ್ರೀ ಸಿದ್ಧಾರೂಢರು ರಾಮುದಾಸನು ಹಿಂದೆ ಕಂಡಾಗ ಹೇಗೋ ಹಾಗೆ ಈಗಲೂ ಮಹಿಮಾವಂತರಾಗಿ ತಮ್ಮ ಪಾದದ ಬಳಿಗೆ ಸಾವಿರಾರು ಭಕ್ತರನ್ನು ಆಕರ್ಷಿಸುತ್ತಿದ್ದರು. ಈಚೆಗೆ ಸಂನ್ಯಾಸಪಡೆದಿರುವ ಚಂದ್ರಗಿರಿ ಶಿವರಾಯರ ಪುತ್ರನಾದ ರಾಮುರಾವ್ ರಾಮುದಾಸನನ್ನು ಬಹಳ ಪ್ರೀತಿಯಿಂದ ಕಂಡನು. ಈತನು ಧನ್ಯ ಮಾತಾಪಿತೃಗಳ ಸತ್ಪುತ್ರ.

ರಾಮುದಾಸನು ಮಠದಲ್ಲಿ ಎರಡು ದಿನ ನಿಂತನು. ರಾತ್ರಿ ಸಮಾಧಿ ಮುಂದಿರದ ಕೈಸಾಲೆಯಲ್ಲಿ ಮಲಗುತ್ತಿದ್ದನು. ಎರಡನೆ ರಾತ್ರಿ ಕತ್ತಲಾದ ಸ್ವಲ್ಪ ಹೊತ್ತಿಗೆ ಮಠದ ಭಕ್ತನೊಬ್ಬನು ಬಂದು "ಏನಾದರೂ ಫಲಹಾರ ಮಾಡುವಿರಾ?" ಎಂದು

ಪ್ರಶ್ನಿಸಿದನು. ರಾಮದಾಸನಿಗೆ ಏನನ್ನೂ ತಿನ್ನುವ ಇಷ್ಟವಿರಲಿಲ್ಲ. ಅಲ್ಲದೆ ಅವನು ದ್ವೈತಭಾವದಲ್ಲಿರಲಿಲ್ಲ.

"ನೀವು ಯಾರಿಗೆ ಈ ಪ್ರಶ್ನೆಯನ್ನು ಹಾಕುತ್ತಿದ್ದೀರಿ?" ಎಂದು ರಾಮದಾಸನು ಪ್ರತಿಪ್ರಶ್ನೆ ಮಾಡಿದನು. ಆ ಭಕ್ತನು ರಾಮದಾಸನಕಡೆ ಬೆಟ್ಟನ್ನು ತೋರಿಸುತ್ತಾ "ನಿಮಗೇ!" ಎಂದನು.

"ಎಲ್ಲವೂ ಒಂದೇ ಆಗಿರುವಾಗ 'ನೀನು' 'ನಾನು' ಎನ್ನುವ ಭೇದ ಉಂಟೇ?" ಎಂದು ರಾಮದಾಸನು ಕೇಳಿ, "ಕಣ್ಣಿಗೆ ಕಾಣುವ ಎಲ್ಲ ಪದಾರ್ಥಗಳೂ ಹಗ್ಗದೊಳಗಿನ ಹಾವಿನಂತೆ, ಬಂಜೆಯ ಮಗನಂತೆ, ಮೊಲದ ಕೊಂಬಿನಂತೆ, ಗಗನ ಕುಸುಮ................ಅಲ್ಲವೆ?" ಎಂದನು.

"ಓಹೋ, ನೀವು ಉಪ್ಪರಿಗೆಯ ಮೇಲಿದ್ದೀರಿ!" ಎಂದು ಹೇಳುತ್ತ ಆತನು ಓಡಿ ಕಣ್ಮರೆಯಾದನು.

ಮಾರನೆ ದಿನ ರಾಮದಾಸನು ಉಭಯಕರರ ಮನೆಗೆ ಬಂದು ಮನೆಯ ಹೆಂಗಸರೊಂದಿಗೆ ಮಧ್ಯಾಹ್ನದ ರೈಲಿನಲ್ಲಿ ಪ್ರಯಾಣಮಾಡಿದನು. ದಾರಿಯಲ್ಲಿ ಈ ಮಾತೆಯರು ರಾಮದಾಸನನ್ನು ಬಹಳ ಪ್ರೀತಿಯಿಂದ ಕಂಡರು. ಎಲ್ಲರೂ ಮಾರನೆ ದಿನ ಪ್ರಾತಃಕಾಲ ಬೆಂಗಳೂರನ್ನು ಸೇರಿದರು.

---

## ಅಧ್ಯಾಯ ೯

### ಅಗಸ್ತ್ಯಾಶ್ರಮ; ಮಂಗಳೂರು; ಎರ್ನಾಕುಲಂ.

### (i) ಹತ್ತು ದಿವಸದ ಉಪವಾಸ

ಮಾತೆಯರು ರಾಮದಾಸನನ್ನು ಕರೆದುಕೊಂಡು ಮೋಟಾರುಕಾರಿನಲ್ಲಿ ತಮ್ಮ ಮನೆಗೆ ಹೋದರು. ಅದು ಅಂದವಾದ ಸಣ್ಣ ಒಂದು ಬಂಗಲೆ. ರಾಮದಾಸನು ಆ ಮನೆಯಲ್ಲಿ ಅರ್ಧಗಂಟೆ ಇದ್ದನು. ಈ ಸ್ಥಳದಿಂದ ತಪ್ಪಿಸಿಕೊಂಡು ಹೋಗಬೇಕೆಂದು ರಾಮನ ಪ್ರೇರಣೆಯಾಯಿತು. ಅವನು ಜಾಗ್ರತೆಯಾಗಿ ನಡೆದುಕೊಂಡು ಮಲ್ಲೇಶ್ವರದ ಕಡೆ ಹೋದನು. ಹಿಂದಣವರ್ಷ ಕುಂದಾಪುರದಲ್ಲಿ ಸಂಧಿಸಿದ್ದ ಭವಾನೀಶಂಕರರಾಯನ ಮನೆಗೆ ಹೋಗಬೇಕೆಂದು ಅವನ ಯೋಚನೆ. ಅವನು ಬೆಂಗಳೂರು ಬಳಿಯಲ್ಲಿ ನೂರಾರು ಲಕ್ಷಣವಾದ ಮನೆಗಳಿಂದ ತುಂಬಿರುವ ಹೊಸದಾಗಿ ನಿರ್ಮಿತವಾಗಿರುವ ಮಲ್ಲೇಶ್ವರ ವಿಸ್ತರಣವನ್ನು ಸೇರಿದನು. ಇಲ್ಲಿ ಭವಾನೀಶಂಕರರಾಯನ ಮನೆ ಎಲ್ಲಿದೆ? ರಾಮದಾಸನು ಹಿಂದೆ ಯಾವಾಗಲೂ ಈ ಮನೆಗೆ ಹೋಗಿರಲಿಲ್ಲ. ರಾಮನೇ ದಾರಿಯನ್ನು ತೋರಿಸಬೇಕು! ತೋರಿಸಿದನು.

ಅನೇಕ ಸಂದುಗೊಂದುಗಳಲ್ಲಿ ನಡೆಯುತ್ತಾ, ತಾನು ನೇರವಾಗಿ ಇವರ ಮನೆಗೆ ಹೋಗುತ್ತಿದ್ದೇನೆಂಬ ಅರಿವಿಲ್ಲದೆ, ರಾಮದಾಸನು ಭವಾನೀಶಂಕರ ರಾಯನು ವಾಸವಾಗಿದ್ದ ಬೀದಿಗೆ ಬಂದನು. ಕೆಲವು ಗಜಗಳು ಹೋಗುವುದ ರೊಳಗೆ ಭವಾನೀಶಂಕರರಾಯನ ತಂದೆ ಎದುರಾಗಿ ಬಂದವರು ರಾಮದಾಸ ನನ್ನು ಮನೆಗೆ ಕರೆದುಕೊಂಡು ಹೋದರು. ಭವಾನೀಶಂಕರರಾಯನೂ ಅವನ ಕುಟುಂಬದವರೂ ರಾಮದಾಸನನ್ನು ನಿಷ್ಕಪಟವಾದ ಸಂತೋಷದಿಂದ ಬರಮಾಡಿ ಕೊಂಡರು.

ಇಲ್ಲಿ ರಾಮದಾಸನಿಗೆ ಕುಂದಾಪುರದ ಡಾಕ್ಟರ್ ದಿವಂಗತ ಉಮಾನಾಥ ರಾಯರ ಕುಟುಂಬ ಸೀತಾಬಾಯಿಯ ಭೇಟಿ ದೊರೆಯಿತು. ಒಂದು ವರ್ಷಕ್ಕೆ ಹೆಚ್ಚು ಹಿಂದೆ ಉಮಾನಾಥರಾಯರು ತಮ್ಮ ಪಾರ್ಥಿವ ಶರೀರವನ್ನು ತ್ಯಜಿಸಿ ದ್ದರು. ಸೀತಾಬಾಯಿಯ ಭಕ್ತಿ ಮತ್ತು ವೈರಾಗ್ಯ ನಿಜವಾಗಿ ವಿಚಿತ್ರವಾದುವು. ಮನೆಯಲ್ಲಿ ತಪ್ಪದೆ ಸಾಯಂಕಾಲ ಕೀರ್ತನೆ, ಮಧ್ಯಾಹ್ನದಲ್ಲಿ ರಾಮಾಯಣ ಪಾರಾಯಣ ನಡೆಯುತ್ತಿದ್ದವು. ಭವಾನೀಶಂಕರರಾಯನೂ, ಇವನ ಸಹೋ ದರಿ ಸೀತಾಬಾಯಿಯೂ ಇವುಗಳಲ್ಲಿ ಪ್ರಧಾನ ಭಾಗವನ್ನು ವಹಿಸುತ್ತಿದ್ದರು. ರಾಮ ದಾಸನ ಆಹಾರ, ಹಣ್ಣು ಹಾಲಿಗೆ ಮಾರ್ಪಟ್ಟಿದ್ದಿತು. ವಾತ್ಸಲ್ಯವಂತರಾದ ಈ ಭಗ ವದ್ಭಕ್ತರ ಸಂಗದಲ್ಲಿ ರಾಮದಾಸನು ನಾಲ್ಕುದಿವಸಗಳನ್ನು ಕಳೆದನು. ಕುಂದಾ ಪುರದ ಆಚೆ ಇರುವ ಅಗಸ್ತ್ಯ ಮುನಿಯಾಶ್ರಮವೆಂದು ಹೆಸರುಳ್ಳ ಕಿರಿಮಂಜೇಶ್ವ ರಕ್ಕೆ ಪ್ರಯಾಣ ಮಾಡಬೇಕೆಂಬ ಸ್ಪಷ್ಟವಾದ ಪ್ರೇರಣೆ ಮನಸ್ಸಿನಲ್ಲಿ ಮೂಡಿತು.

ರಾಮದಾಸನು ಐದನೆಯ ದಿವಸ ಬೆಂಗಳೂರಿನಲ್ಲಿ ರಾತ್ರಿಯ ರೈಲನ್ನು ಹತ್ತಿ ಕಾಸರಗೋಡಿಗೆ ಮರುದಿನ ಸಾಯಂಕಾಲಕ್ಕೆ ಸೇರಿದನು. ಇಲ್ಲಿ ರಾಮದಾಸನು ಗುರುದೇವನ ಮತ್ತು ಇತರ ಭಕ್ತರ ದರ್ಶನಲಾಭವನ್ನು ಪಡೆದು ಒಂದು ದಿನ ಮಾತ್ರವಿದ್ದು ಮಂಗಳೂರಿಗೆ ಪ್ರಯಾಣ ಮಾಡಿದನು. ಇವನ ಗುರಿ ಕಿರಿ ಮಂಜೇಶ್ವರ. ಅದನ್ನು ಸಾಧ್ಯವಾದಷ್ಟು ಶೀಘ್ರವಾಗಿ ಮುಟ್ಟಬೇಕು. ಇಲ್ಲಿ ಒಂದು ದೀರ್ಘವಾದ ಉಪವಾಸವ್ರತವನ್ನು ತಾನು ಆಚರಿಸಬೇಕಾಗಿದೆ ಎಂಬುದು ಭಾಸವಾಗಿದ್ದಿತು. ಅವನು ಮಂಗಳೂರನ್ನು ಹಾಯ್ದು ಅಲ್ಲಿ ಪೂರ್ವಾಶ್ರಮದ ಪತ್ನಿ ರುಕುಮಾಬಾಯಿ ಮಾತೆಯನ್ನು ಕ್ಷಣಮಾತ್ರ ಸಂದರ್ಶಿಸಿ ನೆಟ್ಟಗೆ ಉಡು ಪಿಗೆ ಪ್ರಯಾಣಮಾಡಿ ಅಲ್ಲಿಂದ ಕುಂದಾಪುರಕ್ಕೆ ತ್ವರೆಯಿಂದ ಹೊರಟನು. ಕುಂದಾಪುರದಲ್ಲಿ ರಾಮಭಟಜಿಯವರ ಔಷಧಾಲಯದಲ್ಲಿ ತಂಗಿದ್ದು ಮಾರನೆದಿನ ಹೊಳೆದಾಟಿ ಕಿರಿಮಂಜೇಶ್ವರವನ್ನು ಸೇರಿದನು.

ಇಲ್ಲಿಗೆ ಬಂದೊಡನೆಯೇ ಅವನು ದೇವಸ್ಥಾನದ ಎದುರಿಗಿರುವ ಕೊಳದಲ್ಲಿ ಸ್ನಾನವಾಡಿ ಸ್ವಲ್ಪ ನೀರು ಕುಡಿದು ಸಾಯಂಕಾಲದವರೆಗೂ ವಿಶಾಲವಾದ

ಕಾಡಿನಲ್ಲಿ ಅಲೆಯುತ್ತಿದ್ದನು. ಈ ಕಾಡಿನ ಮಧ್ಯೆ ಸಣ್ಣ ಒಂದು ದೇವಿಯ ಆಲಯ ಕಾಣಿಸಿತು. ಈ ದೇವಸ್ಥಾನದಲ್ಲಿ ಕಿರಿದಾಗಿ ಕತ್ತಲಾದ ಗರ್ಭಗುಡಿ, ಇದರ ಮುಂಭಾಗದಲ್ಲಿ ಚೆನ್ನಾಗಿ ಗಾಳಿಯಾಡುವ, ಚಂದವಾದ ಹಸನು ನೆಲವುಳ್ಳ ಒಂದು ಕೊಟಡಿ, ಇದರ ಮುಂಭಾಗದಲ್ಲಿ ಒಂದು ಕೈಸಾಲೆ ಇವೆ. ಗರ್ಭಗುಡಿಯಲ್ಲಿ ದೇವಿಯ ಶಿಲಾಪ್ರತಿಮೆ ಇದೆ. ದೇವಾಲಯುವ ಪ್ರವೇಶಕ್ಕೆ ಸಣ್ಣದಾದ ಒಂದು ತಗ್ಗುಬಾಗಿಲು ಮಾತ್ರ ಇದೆ. ರಾಮದಾಸನು ಗರ್ಭಾಂಗಣದ ಮುಂದಣ ಕೊಟಡಿಯಲ್ಲಿರಬೇಕೆಂದು ನಿಷ್ಕರ್ಷಿಸಿದನು. ಈತನಲ್ಲಿದ್ದುದು ಹೊದೆಯುವ ಒಂದು ಬಟ್ಟೆ, ಎರಡು ಕೌಪೀನ ಇಷ್ಟೇ.

ಇಲ್ಲಿರುವಾಗ ರಾಮದಾಸನ ದಿನಚರಿ ಕ್ರಮ ಸುಮಾರು ಹೀಗಿದ್ದಿತು: ಕೊಳದಲ್ಲಿ ತ್ರಿಕಾಲ ಸ್ನಾನ ಮತ್ತು ಅದೇ ಕಾಲಗಳಲ್ಲಿ ಜಲಪಾನ. ಕೊಳ ದೇವಸ್ಥಾನದಿಂದ ಐವತ್ತು ಗಜ ದೂರದಲ್ಲಿದೆ. ರಾತ್ರಿಯೆಲ್ಲಾ ದೇವಸ್ಥಾನದ ಮುಂಭಾಗದ ಕೊಟಡಿಯಲ್ಲೂ, ಹಗಲೆಲ್ಲಾ ಕಾಡಿನಲ್ಲಿಯೂ ಕಳೆಯುತ್ತಿದ್ದುವು. ಗರ್ಭಗುಡಿಯಲ್ಲಿ ರಾತ್ರಿಹೊತ್ತು ಸ್ವಲ್ಪಕಾಲ ಕೊಬ್ಬರಿಎಣ್ಣೆಯ ಒಂದು ಹಣತೆ ಉರಿಯುತ್ತಿದ್ದಿತು. ಹತ್ತಿರದಲ್ಲಿ ವಾಸಿಸುತ್ತಿದ್ದ ಒಬ್ಬ ಮಾತೆ ಪ್ರತಿ ಸಾಯಂಕಾಲವೂ ಇದನ್ನು ನೋಡಿಕೊಳ್ಳುತ್ತಿದ್ದಳು. ರಾಮದಾಸನು ದೇವಸ್ಥಾನಕ್ಕೆ ಬರುವುದಕ್ಕೆ ಮುಂಚೆಯೇ ದೀಪವನ್ನು ಆಕೆ ಹಚ್ಚುತ್ತಿದ್ದಿರಬೇಕು. ಏಕೆಂದರೆ, ಕತ್ತಲಾಗಿ ರಾಮದಾಸನು ಇಲ್ಲಿಗೆ ಬರುವ ಕಾಲಕ್ಕೆ ದೀಪ ಉರಿಯುತ್ತಿರುವುದು. ಒಂದು ದಿವಸ ಆಕೆ ಬರುವುದು ತಡವಾಯಿತು. ಅಷ್ಟುಹೊತ್ತಿಗೆ ರಾಮದಾಸನ. ಕೊಟಡಿಯೊಳಗಿದ್ದನು. ಎಂದಿನಂತೆಯೇ ಆಕೆ ಕೊಟಡಿಯನ್ನು ಪ್ರವೇಶಿಸಿದಳು. ಕತ್ತಲೆಯ ಮಬ್ಬಿನಲ್ಲಿ ಅಸ್ಪಷ್ಟವಾಗಿ ರಾಮದಾಸನ ಆಕಾರ ಕಂಡೊಡನೆಯೇ ಹೆದರಿ ಗಾಬರಿಯಿಂದ ಕೈಯೆತ್ತಿ ಕಿರಿಚಿಕೊಳ್ಳುತ್ತಾ ಓಡಿಹೋದಳು. ಅಲ್ಲಿಂದಾಚೆಗೆ ಆಕೆ ಅಲ್ಲಿಗೆ ಬರುವುದು ಸಂಪೂರ್ಣವಾಗಿ ನಿಂತುಹೋಗಿ ದೀಪವಿಲ್ಲದಂತಾಯಿತು.

ಸಾಯಂಕಾಲದ ಹೊತ್ತು ಒಂದೊಂದು ಸಲ ರಾಮದಾಸನು ಸಮುದ್ರತೀರದ ಕಡೆಗೆ ಹೋಗುತ್ತಿದ್ದನು. ಸಮುದ್ರದೊಳಕ್ಕೆ ಚಾಚಿಕೊಂಡಿದ್ದ ಒಂದು ದೊಡ್ಡ ಬಂಡೆ ಇವನಿಗೆ ಕಂಡಿತು. ಈ ಬಂಡೆಯ ಮೇಲೆ ಕುಳಿತು ಅವನು ದೊಡ್ಡ ಅಲೆಗಳು ಬಂಡೆಯ ಪಾರ್ಶ್ವಕ್ಕೆ ಅಪ್ಪಳಿಸುವುದನ್ನು ನೋಡುತ್ತಿದ್ದನು. ಸಮುದ್ರದ ಏಡಿಗಳು ಇವನ ಸುತ್ತಲೂ ಓಡಾಡುತ್ತಿರುವುವು. ನೆತ್ತಿಯಮೇಲೆ ಬಿಳಿಯ ನೀರುಗಿಡಗಗಳು ಹಾರಾಡುವುವು. ಕರೆಯ ಉದ್ದಕ್ಕೂ ಇರುವ ಮರಳು ಸೂರ್ಯನ ಬೆಳಕಿನಲ್ಲಿ ಹೊಳೆಯುತ್ತಿರುವುದು. ದಿನದ ಕೊನೆಯಲ್ಲಿ ಸೂರ್ಯ ಮುಳುಗುತ್ತಿರುವಾಗ ರಾಮದಾಸನಿಗೆ ಬಹುಗಂಭೀರವಾದ ದೃಶ್ಯಕಾಣುವುದು. ಪ್ರಜ್ವಲಿ

ಸುವ ಆ ಗೋಲ ನೀಲವರ್ಣದ ಸಾಗರದ ವಕ್ಷದಲ್ಲಿ ಮೆಲ್ಲಮೆಲ್ಲನೆ ಇಳಿಯುವ ದೃಶ್ಯ ರಾಮದಾಸನ ಕಣ್ಣನ್ನು ಮೋಹಗೊಳಿಸಿತು. ಅಲೆಗಳ ಗಟ್ಟಿಯಾದ ಗರ್ಜನೆ ಇದ್ದಾಗ್ಯೂ ರಾಮದಾಸನು ಈ ಸ್ಥಳದಲ್ಲಿ ವರ್ಣಿಸಲಾಗದಂತಹ ಒಂದು ಶಾಂತಿ ಯನ್ನು ಅನುಭವಿಸುತ್ತಿದ್ದನು.

ಕೊಳದಲ್ಲಿ ಸ್ನಾನ, ಜಲಾಹಾರ, ಮೌನವ್ರತ, ಹೀಗೆ ದಿನದಮೇಲೆ ದಿನ ಕಳೆಯಿತು. ಈ ಉಪವಾಸದ ವಿಷಯವನ್ನು ಕೇಳಿ, ಹಳ್ಳಿಯ ಜನ ಕೆಲವರು ರಾಮದಾಸನು ಹಾಲು ಹಣ್ಣನ್ನು ತೆಗೆದುಕೊಳ್ಳುವಂತೆ ಮಾಡಿ ಉಪವಾಸವನ್ನು ನಿಲ್ಲಿಸಲು ಪ್ರಯತ್ನಿಸಿದರು. ರಾಮದಾಸನಾದರೋ ಈ ಪ್ರೇರಕರ ವಿಷಯದಲ್ಲಿ ಅವರು ತಂದುಕೊಟ್ಟ ಪದಾರ್ಥಗಳ ವಿಷಯದಲ್ಲಿ ಏಕರೀತಿ ಅಸಕ್ತನಾಗಿದ್ದನು. ಗುರಿ ಇಲ್ಲದೆ ಅಲೆದಾಡುತ್ತಾ ಅವನು ಒಂದು ದಿನ ಅಂಗಡಿ ಬೀದಿಗೆ ಬಂದನು. ಅಲ್ಲಿ ಹೆಚ್ಚು ಅಂಗಡಿಗಳು ಮಹಮ್ಮದೀಯರವು.

"ಅವನು ಯಾರು?" ಎಂದು ದಾರಿಹೋಕನೊಬ್ಬನು ರಾಮದಾಸನ ಕಡೆಗೆ ಕೈಯನ್ನು ತೋರಿಸಿ ವರ್ತಕನೊಬ್ಬನನ್ನುಕೇಳಿದನು. ಆ ವರ್ತಕನು ತನ್ನ ಬೆರಳಿಂದ ತಲೆಯನ್ನು ಮುಟ್ಟಿತೋರಿಸಿ "ಅವನೊಬ್ಬ ಅರೆಹುಚ್ಚ!" ಎಂದನು.

ರಾಮದಾಸನು ಈ ಸಂಭಾಷಣೆಯನ್ನು ಕೇಳಿ ಅವನ ಬಳಿಗೆ ಹೋಗಿ "ಇಲ್ಲ ಅಣ್ಣ, ಅರೆ ಹುಚ್ಚಮಾತ್ರನಲ್ಲ, ಪೂರ್ತಹುಚ್ಚನೆಂದು ಏಕೆ ಹೇಳಲಿಲ್ಲ? ಅದೇ ನಿಜ!" ಎಂದು ಅವನ ಮಾತನ್ನು ತಿದ್ದಿದನು.

ಅನಿರೀಕ್ಷಿತವಾದ ಈ ವಿಜಾತೀಯ ಸಮ್ಮತಿಯನ್ನು ಕೇಳಿ ವರ್ತಕನು ಅಪ್ರತಿಭನಾದನು. ರಾಮದಾಸನು ಮುಂದೆ ಹೋದನು.

ಆಯಿತಲ್ಲ. ಈ ಉಪವಾಸದಿಂದ ರಾಮದಾಸನ ಮೇಲೆ ಏನು ಪರಿಣಾಮ ಉಂಟಾಯಿತು? ಮೂರನೆಯ ದಿವಸದ ನಂತರ ನಿಶ್ಶಕ್ತಿ ಕಂಡುಬಂದಿತು. ಇನ್ನೂ ಮೂರು ದಿನ ಕಳೆದುವು. ಓಡಾಡುವಶಕ್ತಿ ಬಹುಕುಂದಿತು. ಕೊಳದವರೆಗೂ ಒಂದೇ ಸಮನಾಗಿ ನಡೆದು ಹೋಗಲಿಕ್ಕಾಗಲಿಲ್ಲ. ಅಲ್ಲಲ್ಲಿ ಕುಳಿತುಕೊಳ್ಳಬೇಕಾಯಿತು. ಶರೀರ ಸ್ಪಷ್ಟವಾಗಿ ಕೃಶವಾಯಿತು. ಎಂಟುದಿವಸಗಳ ಅನಂತರ ಸ್ನಾನಪಾನಕ್ಕೆ ಅಂಬೆಗಾಲಿಟ್ಟು ಕೊಂಡೇ ಹೋಗಬೇಕಾಯಿತು. ಅವನು ಕೊಟಡಿಯಲ್ಲಿ ಹಸನಾದ ನೆಲದಮೇಲೆ ಅಂಗತಂಗನಾಗಿ ಬಿದ್ದುಕೊಳ್ಳುತ್ತಿದ್ದನು. ಏಳಲು ಪ್ರಯತ್ನಪಟ್ಟಾಗ ಬೆನ್ನನ್ನು ಗೋಂದಿನಿಂದ ನೆಲಕ್ಕೆ ಅಂಟಿಸಿದ್ದಂತೆ ಭಾಸವಾಗುತ್ತಿದ್ದಿತು. ಇಡೀ ರಾತ್ರಿ ಹಗಲು ಅವನು ಎಚ್ಚರವಾಗಿಯೇ ಇರುತ್ತಿದ್ದನು; ನಿದ್ರೆ ಅವನ ಪಾಲಿಗೆ ಇರಲಿಲ್ಲ. ತುಂಬ ನಿಶ್ಶಕ್ತಿಯ ಹೊರತು ಶರೀರದಲ್ಲಿ ಯಾವ ಬಾಧೆಯೂ ಇರಲಿಲ್ಲ. (ಮನಸ್ಸು ಪೂರ್ಣ ಶಾಂತಿಯಿಂದ ತುಂಬಿದ್ದಿತು) ಭಗವದ್ಧ್ಯಾನ ಮನಸ್ಸಿನ ನಿರಂತರವೂ ಸ್ಥಾಯಿಯೂ ಆದ ವೃತ್ತಿಯಾಗಿದ್ದತು. ಕುಳಿ

ತಿರಲಿ, ಮಲಗಿರಲಿ, ಅನೇಕಸಾರಿ ದೇಹಭಾವ ಪೂರ್ತಿಯಾಗಿ ಅಳಿಯುತ್ತಿದ್ದಿತು. ಒಂಭತ್ತನೆಯ ದಿವಸ, ಆ ಗ್ರಾಮದ ಮುನಸೀಫರು, ಒಬ್ಬ ಸಾರಸ್ವತರು, ಮಂದಿರಕ್ಕೆ ಬಂದು ರಾಮದಾಸನನ್ನು ಕಂಡು ಹಾಲನ್ನೂ ಬಾಳೆಯಹಣ್ಣನ್ನೂ ಕೊಟ್ಟರು. ಇವನ್ನು ತಿನ್ನಲು ಅಂತರಾತ್ಮನ ಅಪ್ಪಣೆ ಇಲ್ಲವೆಂದು ರಾಮದಾಸನು ಅವರಿಗೆ ಸಂಜ್ಞೆಮಾಡಿದನು. ಈ ಉಪವಾಸ ಎಂದಿಗೆ ಪೂರೈಸುವುದೋ ಗೊತ್ತಿಲ್ಲವೆಂದು ತಿಳಿಸಿದನು. ಆದರೂ ಉಪವಾಸ ಪೂರೈಸಿವನಂತರ ಇವರ ಮನೆಗೆ ಪಾರಣೆಗೆ ಬರುವುದಾಗಿ ಭರವಸೆ ಕೊಟ್ಟನು. ಆ ದಿನವೇನೂ ದೂರವಾಗಿರಲ್ಲಿಲ್ಲ. ಎರಡು ದಿವಸಗಳ ನಂತರ ಉಪವಾಸ ಮುಕ್ತಾಯವಾಯಿತು. ಅವರ ಮನೆ ದೇವಸ್ಥಾನದಿಂದ ಒಂದು ಮೈಲಿಗಿಂತ ಹೆಚ್ಚು ದೂರದಲ್ಲಿದ್ದಿತು. ರಾಮದಾಸನು ಪ್ರಯಾಸ ಪಡುತ್ತಾ ಅಲ್ಲಲ್ಲೇ ದಿರ್ಘಕಾಲ ವಿಶ್ರಮಿಸಿಕೊಂಡು ಅವರ ಮನೆಯನ್ನು ಸೇರಿದನು.

ಆ ದಯಾಳು ಸ್ನೇಹಿತನೂ ಪತಿಪರಾಯಣೆಯಾದ ಆತನ ಪತ್ನಿಯೂ ರಾಮದಾಸನಿಗೆ ಭೋಜನ ಮಾಡಿಸುವುದು ಅಪೂರ್ವ ಪುಣ್ಯವೆಂದು ಭಾವಿಸಿದರು. ಭೋಜನಾನಂತರ ರಾಮದಾಸನು ಪ್ರೇಮಿಯಾದ ಆ ಯಜಮಾನನ ಅನುಮತಿ ಪಡೆದು, ಆತನು ಮೋಟಾರು ಬಸ್ಸಿನಲ್ಲಿ ಸ್ಥಳವನ್ನು ಕೊಡಿಸಲು ಕುಳಿತು ಕುಂದಾಪುರಕ್ಕೆ ಹೊರಟನು. ಸಾಯಂಕಾಲಕ್ಕೆ ಆ ಊರನ್ನು ಮುಟ್ಟಿದನು.

### (ii) ಚೆನ್ನಾಗಿ ಸುಟ್ಟ ಇಟ್ಟಿಗೆ

ಕುಂದಾಪುರದಲ್ಲಿ ರಾಮದಾಸನು ಮೊದಲಿನಂತೆ ರಾಮಭಟಜಿ ಆಸ್ಪತ್ರೆಯ ಮಹಡಿಯಮೇಲೆ ಇಳಿದುಕೊಂಡನು. ಕಂಪೌಂಡರ್ ಸ್ನೇಹಿತನು ರಾಮದಾಸನನ್ನು ಅತ್ಯಂತ ಗೌರವದಿಂದಲೂ ಪ್ರೀತಿಯಿಂದಲೂ ನೋಡಿಕೊಂಡನು. ರಾಮದಾಸನು ಹಾಲನ್ನು ಮಾತ್ರ ಆಹಾರವಾಗಿ ತೆಗೆದುಕೊಳ್ಳುವ ಮನಸ್ಸಿನವನಾಗಿ ಹಾಗೆಯೇ ಮಾಡಿದನು. ಇಲ್ಲಿ ರಾಮದಾಸನು ರಾಮಚರಣನನ್ನು ಕಂಡನು. ಈತನು ಸಾಮಾನ್ಯಜನದ ಸಾಮಾಜಿಕ ಉದ್ಧಾರದಲ್ಲಿ ಬಹಳ ಆಸಕ್ತಿ ವಹಿಸುತ್ತಿದ್ದ ಉತ್ತರ ಹಿಂದೂಸ್ಥಾನದ ಒಬ್ಬ ವಿದ್ಯಾವಂತ ಸಂನ್ಯಾಸಿ. ಈ ಸಂನ್ಯಾಸಿಗೆ ರಾಮದಾಸನ ಮೇಲೆ ಅಸಾಧಾರಣವಾದ ಪ್ರೀತಿ ಹುಟ್ಟಿ, ಅವನು ರಾಮದಾಸನ ಅನುವರ್ತಿಯಾದನು.

ರಾಮದಾಸನು ಕುಂದಾಪುರದಲ್ಲಿದ್ದಾಗ ಮಾವಿನ ಹಣ್ಣಿನಕಾಲ. ರಾಮದಾಸನ ಭೇಟಿಗಾಗಿ ಬರುತ್ತಿದ್ದ ಸ್ನೇಹಿತರು ರಾಮದಾಸನಿಗೆ ಮಾವಿನಹಣ್ಣುಗಳನ್ನು ಯಥೇಷ್ಟವಾಗಿ ತಿನ್ನಿಸಿದರು. ಅಲ್ಲದೆ ಹೆಚ್ಚಾಗಿ ಹಾಲನ್ನು ಕುಡಿಸಿದರು. ಇದರ ಫಲವಾಗಿ ಭೇದಿ ಮತ್ತು ಜ್ವರ ಪ್ರಾರಂಭವಾದುವು. ಜ್ವರ ಅವನನ್ನು ಭದ್ರವಾಗಿ ಹಿಡಿಯಿತು. ಹತ್ತು ದಿನಸದ ಉಪವಾಸದಿಂದ ರಾಮದಾಸನ ಶರೀರ ಆಗಲೇ

ನಿತ್ರಾಣವಾಗಿದ್ದಿತು. ಜ್ವರವಿದ್ದಾಗ ಸಂಕಟಕ್ಕೆ ಪ್ರತಿಯಾಗಿ ಇವನು ವಿವರಿಸಲ ಸಾಧ್ಯವಾದ ಒಂದು ಆನಂದದಲ್ಲಿ ಹಾಯ್ದನು. ಜ್ವರ ವಿಪರೀತವಾಗಿದ್ದಾಗಲೂ ರಾಮದಾಸನು ಸಂತೋಷಾತಿಶಯದಿಂದ ಕುಣಿಯುತ್ತಿದ್ದನು.

ರಾಮುಭಟಜಿಗೆ ಶಂಕೆ ಆಗಿ ಅವನು ರಾಮುದಾಸನಿಗೆ ಔಷಧಕೊಡುವುದಾಗಿ ತಿಳಿಸಿದನು. ಜ್ವರವನ್ನು ಈ ರೀತಿ ಓಡಿಸುವುದು ರಾಮುದಾಸನಿಗೆ ಇಷ್ಟವಿಲ್ಲ. ಅವನು ಜ್ವರವನ್ನು ಮೆಚ್ಚಿಕೆಯ ಅತಿಥಿಯಾಗಿ ಕಂಡಿದ್ದನು. ಅದರ ಸಂಸರ್ಗದಲ್ಲಿ ಆನಂದವಾಗಿ ಕಾಲವನ್ನು ಕಳೆಯುತ್ತಿದ್ದನು. "ಜ್ವರವನ್ನು ಹೊರಡಿಸುವ ಯೋಚನೆಯನ್ನೇಕೆ ಮಾಡುತ್ತೀರಿ? ಅದಕ್ಕೆ ಮನಸ್ಸು ಬಂದಾಗ ಹೋಗಲಿ, ಬಿಡಿ" ಎಂದೂ, ಔಷಧದ ತಂಟೆಯೇಬೇಡವೆಂದೂ ರಾಮುದಾಸನು ಹೇಳಿದನು. ಜ್ವರ ಎರಡು ದಿನ ಪ್ರಬಲವಾಗಿದ್ದಿತು. ಎರಡನೆಯ ರಾತ್ರಿ ರಾಮುದಾಸನು ಮೂರನೆ ದಿನ ಕುಂದಾಪುರದಿಂದ ಹೊರಡಬೇಕೆಂಬ ಇಷ್ಟವನ್ನು ರಾಮುಭಟಜಿಗೆ ಸೂಚಿಸಿದನು.

ಭಟಜಿ "ರಾಮುದಾಸರೇ! ಕೂಡದು. ಜ್ವರನಿಲ್ಲುವವರೆಗೂ ನಿಮಗೆ ಪ್ರಯಾಣಮಾಡಲು ಅವಕಾಶ ಕೊಡಲಾರೆನು" ಎಂದು ಅಡ್ಡಿಮಾಡಿದನು.

ಈ ಮಧ್ಯೆ ಎರ್ನಾಕುಲಂ ಸಂಜೀವರಾಯರಿಂದ ಒಡನೆ ಅಲ್ಲಿಗೆ ಹೋಗಲು ರಾಮುದಾಸನಿಗೆ ಆಹ್ವಾನ ಬಂದಿದ್ದಿತು. ಅಲ್ಲಿಗೆ ಹೋಗಲು ಸಮ್ಮತಿಕೊಡುವಂತೆ ರಾಮುದಾಸನು ಭಟಜಿಯನ್ನು ಒಪ್ಪಿಸಲು ಪ್ರಯತ್ನಿಸಿದನು. ಆದರೆ ಭಟಜಿ ಖಂಡಿತವಾಗಿಯೂ ಒಪ್ಪಿಗೆ ಕೊಡಲಿಲ್ಲ.

"ಒಳ್ಳೆಯದು, ನಾಳೆ ಬೆಳಿಗ್ಗೆ ಜ್ವರ ನಿಂತರೆ ಸಮ್ಮತಿ ಕೊಡುವಿರೋ?" ಎಂದು ರಾಮುದಾಸನು ಭಟಜಿಗೆ ಆಶೆ ತೋರಿಸಿದನು.

ಭಟಜಿ ಈ ಆಶೆಗೆ ಒಳಗಾದನು. "ಅವಶ್ಯವಾಗಿ ಆಗಬಹುದು" ಎಂದು ತಕ್ಷಣ ಉತ್ತರ ಕೊಟ್ಟನು. ಅವನು ರಾಮುದಾಸನ ನಾಡಿಯನ್ನು ನೋಡಿದನು. ಜ್ವರದ ತಾಪ ಶಿಖರಕ್ಕೆ ಏರಿದ್ದಿತು. ಅವನು ರಾಮುದಾಸನನ್ನು ಬಿಟ್ಟು ಕೆಳಗೆ ಹೋದನು. ರಾಮುದಾಸನ ದೇಹಸ್ಥಿತಿಯ ವಿಚಾರ ಯೋಚನೆ ಹೆಚ್ಚಾಗಿ ಅವನು ಹೇಗಿದಾನೆಂದು ನೋಡಲು ಭಟಜಿ ಬೆಳಗಿನ ಜಾವ ನಾಲ್ಕುಗಂಟೆಗೆ ಬಂದನು. ನೋಡಿದರೆ ಜ್ವರ ಸಂಪೂರ್ಣವಾಗಿ ಬಿಟ್ಟಿದೆ. ಉಷ್ಣಮಾಪಕ ಯಂತ್ರ ಸಮಾಧಾನ ಸ್ಥಿತಿಯನ್ನು ತೋರಿಸಿತು. ಭಟಜಿಗೆ ಸಂತೋಷವೇನೋ ಆಯಿತು. ಆದರೆ ಅವನಿಗೆ ಆಶ್ಚರ್ಯವೂ ಆಗಿ ಅವನು ಕಾರ್ಯಕಾರಣ ಮೂಢನಾದನು. ಕೊನೆಗೆ "ದೇವರ ಲೀಲೆ ಆಶ್ಚರ್ಯಕರವಾದುದು" ಎಂದು ಸಮ್ಮತಿಸಿದನು.

"ನೀನು ನಿನ್ನ ಮಾತಿನಂತೆ ನಡೆಯಬೇಕು, ರಾಮು. ಮೊದಲನೇ ಬಸ್ಸಿನಲ್ಲಿಯೇ ರಾಮುದಾಸನನ್ನು ಮಂಗಳೂರಿಗೆ ಕಳುಹಿಸುವ ಏರ್ಪಾಡು ಮಾಡಬೇಕು"

ಎಂದು ರಾಮದಾಸನು ಹೇಳಿದನು. "ಆಗಲಿ" ಎಂದು ಅವನು ನಿದಾನವಾಗಿ ಉತ್ತರವಿತ್ತನು.

ಎಂಟುಗಂಟೆ ಹೊತ್ತಿಗೆ ರಾಮದಾಸನು ಮಂಗಳೂರು ಕಡೆ ಹೋಗುವ ಬಸ್ಸಿನಲ್ಲಿ ಕುಳಿತಿದ್ದನು. ರಾಮಚರಣ ಸಂನ್ಯಾಸಿ ಜೊತೆಗೆ ಪ್ರಯಾಣ ಮಾಡಿದನು. ರಾಮದಾಸನು ಉಡುಪಿ ಮುಖಾಂತರ ಸಾಯಂಕಾಲಕ್ಕೆ ಮಂಗಳೂರನ್ನು ಸೇರಿದನು. ಇವರು ಸೀತಾರಾಮರಾಯರ ಮನೆಯಲ್ಲಿ ಎರಡು ದಿವಸ ಉಳಿದುಕೊಂಡರು.

ಈ ಸಮಯದಲ್ಲಿ ರಾಮದಾಸನಿಗೂ ರಾಮಚರಣನಿಗೂ ರಾಮರಾಯರ ಮನೆಗೆ ಊಟಕ್ಕೆ ಆಹ್ವಾನ ಬಂದಿತು. ರಾಮರಾಯರು ರಾಮದಾಸನ ಪೂರ್ವಾಶ್ರಮದ ಪತ್ನಿ ರುಕುಮಾಬಾಯಿಯ ತಂದೆ. ಆಕೆ ಆಗ ಅವರ ಮನೆಯಲ್ಲಿದ್ದಳು. ಈ ಪೂರ್ವಸಂಬಂಧ ರಾಮಚರಣನಿಗೆ ತಿಳಿದಿರಲಿಲ್ಲ. ಇಬ್ಬರೂ ಅವರ ಮನೆಗೆ ಹೋದರು. ರುಕುಮಾಬಾಯಿಯೂ ಆಕೆಯ ತಂದೆಯೂ ಇವರನ್ನು ಬಹಳ ಆದರಿಸಿದರು. ಅಲ್ಲಿಂದ ಹೊರಡುವಾಗ ರುಕುಮಾಬಾಯಿ ತಾನು ರಾಮದಾಸನನ್ನು ಪುನಃ ಕಾಣುವುದು ಯಾವಾಗ ಎಂದು ಕೇಳಿದಳು. ರಾಮದಾಸನು "ರಾಮನ ಇಚ್ಛೆ" ಎಂದಷ್ಟೆ ಉತ್ತರ ಕೊಟ್ಟನು. ಇದನ್ನು ಕೇಳಿ ಆಕೆಯ ಕಣ್ಣುಗಳಲ್ಲಿ ನೀರು ತುಂಬಿದುವು. ರಾಮಚರಣನು ಈ ದೃಶ್ಯವನ್ನು ನೋಡುತ್ತಾ ನಿಂತಿದ್ದನು; ಮಧ್ಯೆ ಮನೆಯವರೊಬ್ಬರು ಇವರ ಪೂರ್ವ ಸಂಬಂಧವನ್ನು ಅವನಿಗೆ ತಿಳಿಸಿದರು. ರಾಮದಾಸನೂ ರಾಮಚರಣನೂ ಮನೆಯನ್ನು ಬಿಟ್ಟು ಹೊರಟರು. ದಾರಿಯಲ್ಲಿ ರಾಮಚರಣನು ರಾಮದಾಸನ ಕಡೆ ಆಶ್ಚರ್ಯಕರವಾದ ದೃಷ್ಟಿಯನ್ನು ಬೀರುತ್ತಾ ಸರಸಧ್ವನಿಯಲ್ಲಿ "ನೀವು ಸಾಧಾರಣ ಸಾಧುವಲ್ಲ! ಚೆನ್ನಾಗಿ ಸುಟ್ಟು ಘಟ್ಟಿಯಾಗಿರುವ ಇಟ್ಟಗೆ!" ಎಂದನು.

ಅವನ ಈ ಮಾತಿನ ಭಾವ ಅರ್ಥಯುಕ್ತವಾಗಿದ್ದಿತು. ಮಂಗಳೂರಿನ ಪ್ರವಾಸ ಮುಗಿದು ರಾಮದಾಸನು ಎರ್ನಾಕುಲಕ್ಕೆ ಹೋಗುವ ಮೆಯಿಲ್ ರೈಲನ್ನು ಏರಿದನು.

## (iii) ಎಲ್ಲ ಭಗವಂತನ ಮಹಿಮೆ

ರಾಮದಾಸನ ಪೂರ್ವಾಶ್ರಮದ ಸಹೋದರ ಸಂಜೀವರಾವ್ ಎರ್ನಾಕುಲಂ ಸ್ಟೇಷನ್ನಿನಲ್ಲಿ ಕಾದಿದ್ದನು. ರಾಮದಾಸನನ್ನು ಅವನು ತನ್ನ ಮನೆಯ ಒಂದು ಸಣ್ಣ ಕೊಟಡಿಯಲ್ಲಿ ಇಳಿಸಿದನು. (ರಾಮದಾಸನ ಆಹಾರ ಹಾಲು ಹಣ್ಣು) ಅವನು ಎರ್ನಾಕುಲದಲ್ಲಿ ಸುಮಾರು ಎರಡು ತಿಂಗಳು ಇದ್ದನು.

ಇಲ್ಲಿ ರಾಮದಾಸನು ಸಂಜೀವರಾಯನ ಮುಖಾಂತರ ಸಾರ್ವಜನಿಕ ಪುಸ್ತಕಭಂಡಾರದಿಂದ ಪುಸ್ತಕಗಳನ್ನು ತರಿಸಿ ಆತುರದಿಂದ ಓದಿದನು. ಐವತ್ತಕ್ಕೆ

ಮೇಲ್ಪಟ್ಟು ಮತಸಂಬಂಧವಾದ ಗ್ರಂಥಗಳನ್ನು ಓದಿದ್ದಾಯಿತು. ಇವುಗಳಲ್ಲಿ ಮ್ಯಾಕ್ಸ್‌ಮುಲ್ಲರವರ ಉಪನಿಷತ್ತಿನ ಭಾಷಾಂತರದ ದಪ್ಪ ಪುಸ್ತಕಗಳು, ಶ್ರೀ ಶಂಕರಾಚಾರ್ಯರ ಭಾಷ್ಯ ಮುಂತಾದವು ಇದ್ದುವು. ಪ್ರತಿದಿವಸವೂ ಕೆಲವರು ಗಣ್ಯವಕೀಲರೂ ಅಧಿಕಾರಿಗಳೂ ಅವನನ್ನು ಕಾಣಲು ಬರುತ್ತಿದ್ದರು. ಎರ್ನಾಕುಲ ದಲ್ಲಿದ್ದಾಗ್ಗೆ ನಡೆದ ಮುಖ್ಯವಾದ ಸಂಗತಿ ಬಡವರಿಗೆ ಅನ್ನಹಾಕಿದ್ದು. ಇದು ಸಂಘ ಟಿಸಿದ್ದು ಹೀಗೆ.

ಎಂದಿನಂತೆ ಸ್ನೇಹಿತರು ರಾಮದಾಸನ ಜೊತೆಯಲ್ಲಿ ಸೇರಿದ್ದಾಗ, ಒಂದು ದಿನ ಎಲ್ಲರೂ ಸೇರಿ ಬಡಬಗ್ಗರಿಗೆ ಅನ್ನದಾನ ಮಾಡಬಹುದೆಂಬ ಸೂಚನೆಯನ್ನು ರಾಮದಾಸನು ಕೊಟ್ಟನು. ಅವರು ತಕ್ಷಣ ಈ ವಿಚಾರದಲ್ಲಿ ಶ್ರದ್ಧೆವಹಿಸಿ, ಒಂದು ಸಾವಿರ ಜನಕ್ಕೆ ಅನ್ನದಾನ ಮಾಡಲು ಮುಟ್ಟುವ ವೆಚ್ಚವನ್ನು ತಮ್ಮ ತಮ್ಮಲ್ಲಿ ಒಪಗಿಸಿದರು. ಇವರಲ್ಲಿ ಬಹು ಉದಾರಿಯಾದ ಒಬ್ಬರ ವಿಷಯವನ್ನು ಮುಖ್ಯ ವಾಗಿ ಹೇಳಬೇಕು. ವೆಚ್ಚದಲ್ಲಿ ಹೆಚ್ಚು ಭಾಗವನ್ನು ಅವರೊಬ್ಬರೇ ವಹಿಸಿದರು. ಆದರೆ ತನ್ನ ಹೆಸರು ಪ್ರಕಟವಾಗಕೂಡದೆಂಬುದು ಅವರ ಇಷ್ಟ. ಅವರು ಎಷ್ಟು ಆಡಂಬರವಿಲ್ಲದ ಸರಳ ಸ್ವಭಾವದವರೆಂದರೆ, ಅವರು ದಾನಧರ್ಮಗಳನ್ನು ಇತ ರರಿಗೆ ಗೋಚರ ಆಗದಂತೆ ಮಾಡುತ್ತಾರೆ. ನಿಜವಾಗಿ ಅವರು “ ಬಲಗೈ ಮಾಡಿದ ದಾನವನ್ನು ಎಡಗೈ ಕಾಣದು” ಎಂಬ ತತ್ವವನ್ನು ಸಾಧಿಸಿಬಿಟ್ಟದ್ದಾರೆ.

ಮುಂದಣ ಭಾನುವಾರದ ದಿನ ಭೋಜನ ನಡೆಯುತಕ್ಕುದೆಂದು ನಿಷ್ಕರ್ಷೆ ಯಾಯಿತು. ವಿ. ಅಯ್ಯರ್ ಎಂಬ ವಕೀಲನು ಈ ಕಾರ್ಯವನ್ನು ನಿರ್ವಹಿಸಲು ಒಪ್ಪಿಕೊಂಡನು. ಆಗ ಮುಂಗಾರು ಮಳೆಗಾಲ. ಮಳೆ ಎಡೆಬಿಡದೆ ಹೆಚ್ಚಾಗಿ ಹೊಯ್ಯುತ್ತಿದ್ದಿತು. ಆ ಊರಿನ ಸಬ್ ರಿಜಿಸ್ಟ್ರಾರ್ ಕಛೇರಿಯ ಆವರಣದಲ್ಲಿ ಅಡಿಗೆ ಮಾಡಿ ಬಡಿಸಬೇಕೆಂದು ಗೊತ್ತಾಯಿತು. ಊಟದ ವಿಚಾರವನ್ನು ಡಂಗೋರೆ ಮೂಲಕ ಪ್ರಸಿದ್ಧಪಡಿಸಿದ್ದಾಯಿತು. ಶನಿವಾರ ರಾತ್ರಿಗೆ ಎಲ್ಲ ಸಲಕ ರಣೆಗಳನ್ನೂ ಒದಗಿಸಿಕೊಂಡು ಅಡಿಗೆಗೂ ಪ್ರಾರಂಭವಾಯಿತು. ಸಾಮಾನ್ಯವಾದ ಊಟಕ್ಕೆ ಏರ್ಪಾಡಾಯಿತು. ಆಕಾಶದಲ್ಲಿ ಮೋಡಕವಿದಿದ್ದುವು. ಮಳೆ ವಿಪರೀತ ವಾಗಿ ಸುರಿಯುತ್ತಿದ್ದಿತು. ರಾತ್ರಿ ವಿ. ಅಯ್ಯರ್ ರಾಮದಾಸನಬಳಿಗೆ ಬಂದು, “ ಸ್ವಾಮಿ, ಮಳೆ ಕಡಮೆಯಾಗುವ ಸೂಚನೆ ಕಾಣುವುದಿಲ್ಲ. ನಾಳೆ ಹೀಗೆಯೇ ಇದ್ದರೆ ಊಟ ನಡೆಸುವುದು ಅಸಾಧ್ಯ” ಎಂದು ವ್ಯಥೆಪಟ್ಟನು.

ಒಂದು ಸಾವಿರ ಜನಕ್ಕೆ ಬಡಿಸಬೇಕಾದರೆ ಬಯಲಿನಲ್ಲಲ್ಲದೆ ಬೇರೆ ಸಾಧ್ಯವೇ ಇರಲಿಲ್ಲ.

" ರಾಮು, ಕಳವಳಪಡಬೇಡ. ದೇವರಮೇಲೆ ಭಾರಹಾಕು." ಎಂದು ರಾಮದಾಸನು ನಂಬಿಕೆ ಹೇಳಿದನು. ಅರುಣೋದಯದ ಹೊತ್ತಿಗೆ ಅಡಿಗೆ ಸಿದ್ಧವಾಯಿತು. ಆದರೆ ಮಳೆಯು ಹೊಡೆತ ಹಾಗೆಯೇ ಇದ್ದಿತು. ಮುಂಜಾನೆ ವಿ. ಅಯ್ಯರ್ ಪುನಃ ಬಂದನು. ಅವನ ಮುಖದಲ್ಲಿ ನಿರಾಶೆ ಮೂಡಿದ್ದಿತು. " ಈಗ ಏನು ಮಾಡುವುದು ? " ಎಂದು ಅವನು ಪ್ರಶ್ನಿಸಿದನು.

" ನಾವೇನೂ ಮಾಡುವುದಿಲ್ಲ. ಎಲ್ಲವನ್ನೂ ದೇವರು ಮಾಡುತ್ತಾನೆ. ಅವನ ಪ್ರೇರಣೆಯ ಪ್ರಕಾರ ನಾವು ಏರ್ಪಾಡು ಮಾಡಿದೆವು. ಇದನ್ನು ಯಶಸ್ವಿಯಾಗಿ ನಡೆಯುವಂತೆ ನೋಡಿಕೊಳ್ಳುವುದು ಅವನನ್ನು ಸೇರಿದ್ದು " ಎಂದು ರಾಮದಾಸನು ಉತ್ತರವಿತ್ತನು.

ಹನ್ನೊಂದು ಗಂಟೆಗೆ ಊಟವೆಂದು ಸಾರಿದ್ದಿತು. ಒಂಬತ್ತು ಗಂಟೆ ಹೊಡೆಯಿತು. ಮಳೆ ಮೊದಲಿನಂತೆ ಸುರಿಯುತ್ತಲೇ ಇದ್ದಿತು. ಒಂಬತ್ತುವರೆ, ಒಂಬತ್ತುಮುಕ್ಕಾಲು ಗಂಟೆ ಕಳೆಯಿತು. ಮಳೆ ಹಾಗೆಯೇ ಇದ್ದಿತು. ಅಷ್ಟು ಹೊತ್ತಿಗೆ ಒಂದು ಆಶ್ಚರ್ಯಕರವಾದ ಘಟನೆ ನಡೆಯಿತು. ಮೋಡಗಳು ನಿಧಾನವಾಗಿ ಚದರಿದವು. ಮಳೆ ನಿಂತಿತು. ಬಿಸಿಲು ಬಂದಿತು. ಅರ್ಧಗಂಟೆಯೊಳಗಾಗಿ ಆಕಾಶದಲ್ಲಿ ಒಂದೂ ಮೋಡ ಇಲ್ಲದೆ, ಸೂರ್ಯನು ಬೇಸಿಗೆ ಕಾಲದಲ್ಲೆಂಬಂತೆ ಪ್ರಕಾಶಿಸಿದನು. ಹನ್ನೊಂದು ಗಂಟೆಗೆ ಸರಿಯಾಗಿ ಬಡಿಸುವುದಕ್ಕೆ ಪ್ರಾರಂಭವಾಯಿತು. ಊಟವನ್ನು ನೋಡಲು ಆ ಸ್ಥಳಕ್ಕೆ ರಾಮದಾಸನನ್ನು ಕರೆದುಕೊಂಡು ಹೋದರು. ಪೌಳಿಯ ಒಳಗೂ ಹೊರಗೂ ರಸ್ತೆಯಲ್ಲಿಯೂ ಇದ್ದ ಗುಂಪಿನ ದೃಶ್ಯ ರಾಮದಾಸನ ಹೃದಯದಲ್ಲಿ ಸಂತೋಷ ತರಂಗಗಳನ್ನು ಉಕ್ಕಿಸಿತು. ಯಾವ ಗದ್ದಲವಾಗಲಿ ಅಚಾತುರ್ಯವಾಗಲಿ ಇಲ್ಲದೆ ಭೋಜನ ಸಾಂಗವಾಗಿ ನೆರವೇರಿತು. ಸರ್ವಶಕ್ತನಾದ ಲೋಕಸ್ವಾಮಿ ಸಾವಿರಾರು ಬಾಯಿಗಳಿಂದ ಭುಂಜಿಸಿದನು.

ಊಟಮಾಡಿದವರ ಸಂಖ್ಯೆ ಮೂರುಸಾವಿರದವರೆಗೆ ಆಯಿತೆಂದು ಒಬ್ಬರು ಎಣಿಸಿದರು. ಸಾವಿರ ಜನಕ್ಕೆಂದು ಮಾಡಿಸಿದ್ದ ಅಡಿಗೆ ಅದರ ಮೂರರಷ್ಟು ಮಂದಿಗೂ ಸಾಕಾಯಿತು. ತೃಪ್ತಿಯಾಗಿ ಊಟ ಮಾಡಿದುದೂ ಅಲ್ಲದೆ ತಮ್ಮ ಮನೆಗಳಿಗೂ ಕೆಲವರು ಕಟ್ಟಿಕೊಂಡು ಹೋದರು.

ಪ್ರಪಂಚದಲ್ಲಿ ಭಿಕ್ಷಾಟನೆ ಮತ್ತು ನಿರಾಹಾರಗಳು ರೂಢಮೂಲವಾಗಿ ಜನಗಳನ್ನು ಮೆಟ್ಟಿರುವ ಒಂದು ದೇಶ ಇರುವುದಾದರೆ ಅದು ಹಿಂದೂಸ್ಥಾನ. ಹಿಂದೂಸ್ಥಾನದ ಒಳಗೂ ಹೊರಗೂ ತುಂಬಿರುವ ಬಡವರ ಜೀವವನ್ನು ಹೀರುವವರ ಮನಸ್ಸಿನಿಂದ ಮತ್ತು ಹೃದಯದಿಂದ ಅಂಧಕಾರ ಮತ್ತು ಸ್ವಾರ್ಥಬುದ್ಧಿಗಳನ್ನು ಕಿತ್ತೊಗೆದು ನಿರ್ಮೂಲ ಮಾಡುವದೊಂದೇ ಈ ಭಿಕ್ಷಾಟನೆ ಮತ್ತು ನಿರಾಹಾರಗಳ

ನಿವಾರಣೆಗೆ ಮಾರ್ಗ. ನಿಜವಾಗಿ ನೋಡಿದರೆ ಬಡತನದ ಬೇನೆಗೆ ತುತ್ತಾಗಿರುವವರಿಗಿಂತಲೂ ಅಂತಹ ಬಡಜೀವಗಳನ್ನು ಸೂರೆಗೊಳ್ಳುವವನ ಸ್ಥಿತಿ ಹೆಚ್ಚು ಶೋಚನೀಯವಾಗಿದೆ. ಏಕೆಂದರೆ ಆತನು ತನಗೆ ಘೋರವಾದ ಶಿಕ್ಷೆಯನ್ನು ತರತಕ್ಕ ಕರ್ಮವಬೀಜವನ್ನು ಬಿತ್ತುತ್ತಾನೆ. ಪರಿಶುದ್ಧವಾದ ಜ್ಞಾನದಿಂದ ಬರುವ ಸಮತಾಬುದ್ಧಿ, ಪ್ರೀತಿ, ಕಾರುಣ್ಯಗಳಿಂದ ಸ್ವಸುಖಪರಿತ್ಯಾಗ ಬುದ್ಧಿ ಎಚ್ಚರಗೊಳ್ಳುವುದು; ಇವುಮಾತ್ರ ಈ ಪ್ರಪಂಚಕ್ಕೆ ಶಾಂತಿ ಸಾಮರಸ್ಯ ಸೌಖ್ಯಗಳನ್ನು ತರಬಲ್ಲವು.

ಅಸ್ಪೃಶ್ಯರೆಂದು ಕರೆಯಿಸಿಕೊಳ್ಳುವವರನ್ನೂ ಒಳಗೊಂಡು ಎಲ್ಲ ಜಾತಿಯ ಅನ್ನಾತುರರಿಗೂ ಬಡವರಿಗೂ ಭೋಜನವಾಯಿತು. ಮೂರು ಗಂಟೆಯ ಹೊತ್ತಿಗೆ ಬಡಿಸುವ ಕಾರ್ಯ ಮುಗಿಯಿತು. ಪ್ರತಿಒಬ್ಬರೂ ಭೋಜನದಿಂದ ತೃಪ್ತರಾದರು. ಈ ಜನ ಆವರಣದಿಂದ ಹೊರಟು ಹೋದಮೇಲೆ ಕಾಗೆಗಳ ಒಂದು ದೊಡ್ಡಗುಂಪು ಹಾರಿಬಂದು ನೆಲದಮೇಲೆ ಚೆಲ್ಲಿದ್ದ ಅಗುಳನ್ನೆಲ್ಲಾ ಆರಿಸಿ ತಿಂದು ಮುಗಿಸಿದುವು. ನಿಜವಾಗಿ, ಪ್ರಕೃತಿಯ ನಿರ್ಮಾಣದಲ್ಲಿ ಕಾಗೆಗಳು ಕಶ್ಮಲತೆಗೆಯುವ ಕಾರ್ಯವನ್ನು ಅವಲಂಬಿಸಿವೆ. ಹೀಗೆ ಪಾಳಿ ಸ್ವಚ್ಛವಾಗಿ ಗುಡಿಸಿದಂತಾಯಿತು. ಇದರಲ್ಲಿ ಆಶ್ಚರ್ಯಕರವಾದ ಸಂಗತಿ ಏನೆಂದರೆ, ನಾಲ್ಕು ಗಂಟೆ ಹೊತ್ತಿಗೆ ಆಕಾಶದಲ್ಲಿ ಮೋಡಗಳು ಪುನಃ ಕವಿದು ಪಟ್ಟಾಗಿ ಮಳೆ ಸುರಿಯುವುದಕ್ಕೆ ಆರಂಭವಾಯಿತು. ರಾಮದಾಸನು ತನ್ನ ಕೊಟಡಿಯನ್ನು ಸೇರಿದನು. ಮೂರು ಸಾವಿರ ಬಡಜನರಿಗೆ ಅವರಲ್ಲಿ ಮೂರರಲ್ಲಿ ಒಂದು ಅಂಶದ ಸಂಖ್ಯೆಗೆ ಮಾಡಿದ್ದ ಅಡಿಗೆಯಿಂದ ಊಟ ಆದದ್ದೂ, ಊಟ ಬಡಿಸುವ ಆರು ಗಂಟೆಗಳಕಾಲ ಮಳೆನಿಂತಿದ್ದದೂ, ಭಗವಂತನ ಮಹಿಮೆಯನ್ನು ಪ್ರಕಟಿಸುವ ಸಂಗತಿಗಳು.

ಅನ್ನದಾನದ ಕಾರ್ಯದಲ್ಲಿ ಭಾಗವಹಿಸಿದ ಮತ್ತು ಅದನ್ನು ನೋಡಿದ ಕೆಲವರು ಕಾರ್ಯ ಸುಸೂತ್ರವಾಗಿ ನಡೆದುದಕ್ಕೆ ರಾಮದಾಸನನ್ನು ಶ್ಲಾಘಿಸಿದುದು ಅವನ ನೆನಪಿಗೆ ಬರುತ್ತದೆ. ರಾಮದಾಸನು ತಕ್ಷಣವೇ "ಈ ಸ್ತುತಿಗೆ ಭಗವಂತನೊಬ್ಬನೇ ಅರ್ಹನು; ಯಜಮಾನನು ಮಾಡಿದ ಕಾರ್ಯಕ್ಕಾಗಿ ಬಂಟನಿಗೆ ಉಪಚಾರೋಕ್ತಿಗಳನ್ನು ಹೇಳಬೇಡಿ" ಎಂದು ಸ್ವಲ್ಪ ಒರಟಾಗಿ ಹೇಳಿ ಅವರನ್ನು ತಡೆದನು.

---

## ಅಧ್ಯಾಯ ೧೦

### ಕಾಲಡಿ, ಕಾಸರಗೋಡು, ಹೊಗೆದೋಣಿಯಲ್ಲಿ

#### (1) ಶ್ರೀ ಶಂಕರಚಾರ್ಯರ ಜನ್ಮಸ್ಥಳ

ಒಂದು ಸಂಜೆ ರಾಮದಾಸನು ಮಿಕ್ಕ ದಿವಸಗಳಿಗಿಂತ ಹೆಚ್ಚಾಗಿ ಆನಂದದಿಂದ ವಿವಶನಾಗಿದ್ದನು. ಕೆಲವು ಸ್ನೇಹಿತರ ಸಂಗಡ ಭಗವಂತನ ವಿಶ್ವವ್ಯಾಪಕ

ಸ್ವರೂಪದ ವಿಚಾರವಾಗಿ ಬಹಳ ಉತ್ಸಾಹದಿಂದ ಮಾತನಾಡುತ್ತಿದ್ದನು. ಆ ಸ್ನೇಹಿತರಲ್ಲಿ ಅಯ್ಯರು ಒಬ್ಬನು. ಆತನು ಕುತೂಹಲದಿಂದ ಕೇಳುತ್ತಿದ್ದನು.

"ಸೃಷ್ಟಿಯೆಲ್ಲ ಭಗವಂತನಿಂದ ಓತಪ್ರೋತವಾಗಿ ವ್ಯಾಪ್ತವಾಗಿದೆ. ಕಣ್ಣಿಗೆ ಕಾಣುವ ಪ್ರಪಂಚ ಮತ್ತು ಕಾಣದ ಪ್ರಪಂಚ ಎಲ್ಲ ಅವನೇ. ಇವುಗಳಲ್ಲಿ ಅವನು ವ್ಯಕ್ತನಾಗಿಯೂ, ಅವ್ಯಕ್ತನಾಗಿಯೂ ಇದ್ದಾನೆ. ಆತನಲ್ಲದೆ ವಸ್ತು ಇಲ್ಲ; ವ್ಯಕ್ತಿ ಇಲ್ಲ. ಸಕಲವೂ ಅವನೇ. ಇದು ನಿಜಸ್ಥಿತಿ. ಹೀಗಿರುವಾಗ 'ನೀನು' 'ನಾನು' 'ನನ್ನದು' 'ನಿನ್ನದು' ಎಂಬ ಭಾವನೆಗಳಿಗೆ ಅವಕಾಶವೆಲ್ಲಿ? ಎಲ್ಲ ಅವನೇ, ಅವನದೇ."

ಹೀಗೆ ರಾಮದಾಸನು ಉಪನ್ಯಾಸಮಾಡುತ್ತಿದ್ದಾಗ ಅವನ ಬಾಯಿಂದ ಮಾತು ತಡೆಯಲಸಾಧ್ಯವಾದ ಪ್ರವಾಹವಾಗಿ ಹರಿದವು. ರಾಮದಾಸನಿಗೆ ಕೊಟಡಿಯಲ್ಲಿ ಆನಂದಮಯ ಜ್ಯೋತಿ ತುಂಬಿರುವುದೂ, ಅಲ್ಲಿ ಕುಳಿತಿದ್ದವರೆಲ್ಲರೂ ಮಸುಕಾದ ನೆರಳಂತಿರುವುದೂ ಕಂಡಿತು. ಅಧಿಕಾರವಾಣಿಯೂ ಮತ್ತು ಸ್ಥಳದ ಸನ್ನಿವೇಶವೂ ಅಯ್ಯರ ಮೇಲೆ ಮಹಾಪ್ರಭಾವವನ್ನು ಬೀರಿದುವು. ಆತನಮುಖ ಆಶ್ಚರ್ಯಕರವಾದ ತೇಜಸ್ಸಿನಿಂದ ಬೆಳಗುತ್ತಿದ್ದಿತು. ಅವನ ಕಣ್ಣುಗಳಲ್ಲಿ ನೀರು ತುಂಬಿದ್ದಿತು.

"ಹಾಗಾದರೆ ನನಗೆ ಮನೆ ಇಲ್ಲ; ಸಂಬಂಧಿಗಳು ಇಲ್ಲ. ನಾನು ಎಲ್ಲಿಗೆ ಹೋಗಲಿ?" ಎಂದು ಅವನು ತೀವ್ರವಾದ ದೈನ್ಯ ವ್ಯಾಕುಲದ ಧ್ವನಿಯಲ್ಲಿ ಮೊರೆಯಿಟ್ಟನು. ಅವನ ಮೈ ನಡುಗುತ್ತಿದ್ದಿತು. ಅವನು ನಡುಗಿ ಒಂದು ಕಡೆಗೆ ವಾಲಿದನು. ಅಲ್ಲಿದ್ದ ಸ್ನೇಹಿತರು ಕೂಡಲೆ ಅವನನ್ನು ಹಿಡಿದುಕೊಂಡು, ಹೊರಕ್ಕೆ ಕರೆದುಕೊಂಡು ಹೋಗಿ, ಒಂದು ಬೆಂಚಿನಮೇಲೆ ಮಲಗಿಸಿದರು. ಅವನು ಅರ್ಧಗಂಟೆಯ ಕಾಲ ಸಮಾಧಿಯಲ್ಲಿದ್ದಂತೆ ಮಲಗಿದ್ದನು. ಆ ಮೇಲೆ ಬಾಹ್ಯಸ್ಮೃತಿಯನ್ನು ಪಡೆದನು. ನಂತರ ರಾಮದಾಸನ ಬಳಿಗೆ ಬಂದು "ಸ್ವಾಮಿ, ನಾನು ಮನೆಗೆ ಹೋಗುತ್ತೇನೆ" ಎಂದನು.

"ಹಾಗಾದರೆ ಕೊಂಚಕಾಲ ಕಳೆದು ಹೋಗಿದ್ದ ವ್ಯಕ್ತಿಭಾವ ಪುನಃ ಬಂದಿತು!" ಎಂದು ರಾಮದಾಸನು ಮೆಲುನಗೆಯಿಂದ ಹೇಳಿದನು. ಅಯ್ಯರು "ಹೌದು" ಎಂದು ತಲೆಯನ್ನು ಆಡಿಸಿ ಹೊರಟು ಹೋದನು.

ಎರ್ನಾಕುಲಕ್ಕೆ ಕೆಲವು ಸ್ಟೇಷನ್ನುಗಳ ಆಚೆ ಇರುವ ಸುಪ್ರಸಿದ್ಧ ಶ್ರೀ ಶಂಕರಾಚಾರ್ಯರ ಜನ್ಮಸ್ಥಳವಾದ ಕಾಲಡಿಗೆ ರಾಮದಾಸನನ್ನು ಕರೆದುಕೊಂಡು ಹೋಗುವುದಾಗಿ ಸಂಜೀವರಾಯನೂ ಇತರ ಸ್ನೇಹಿತರೂ ಯೋಚಿಸಿದರು. ಕೆಲವರು ಸ್ನೇಹಿತರು ಅವರ ಕುಟುಂಬ ಸೇರಿ ಸುಮಾರು ಹನ್ನೆರಡು ಜನ

ಹೊರಟು ಸಕಾಲದಲ್ಲಿ ಆ ಹಳ್ಳಿಯನ್ನು ಮುಟ್ಟಿ ಆಲ್ವಾಯ್ ನದಿಯ ದಡದಲ್ಲಿ ಶಾರದಾಂಬಾ ಮತ್ತು ಮಹಾದೇವನ ದೇವಸ್ಥಾನಗಳಿರುವ ಒಂದು ತೋಟಕ್ಕೆ ನಡೆದರು. ದೇವಸ್ಥಾನಗಳ ಮುಂಭಾಗದಲ್ಲಿ ಶಂಕರಾಚಾರ್ಯರ ಮಾತೃಶ್ರೀಯವರ ಅಸ್ಥಿಭೂಗತವಾಗಿರುವ ಸ್ಥಳವನ್ನು ನಿರ್ದೇಶಿಸುವ ಚೌಕವಾದ ಮತ್ತು ಎತ್ತರವಾದ ಜಗುಲಿಯೊಂದಿವೆ. ಸುತ್ತಣ ದೃಶ್ಯ ರಮ್ಯವಾಗಿದ್ದಿತು; ಹಳ್ಳಿಗಾಡಿನ ಸೌಂದರ್ಯ ಸರಳತೆ ಮತ್ತು ಶಾಂತಿಯನ್ನು ಬೀರುತ್ತಿದ್ದಿತು. ದೇವಸ್ಥಾನದ ಸುತ್ತ ಹಲಸಿನ ಮತ್ತು ಮಾವಿನ ಮರಗಳ ತೋಪು ವಿಪುಲವಾದ ಹಸುರನ್ನು ತೆರೆದಿದ್ದವು. ಇವುಗಳ ಮಧ್ಯೆ ಎತ್ತರವಾದ ತೆಂಗಿನಗಿಡಗಳು ಹಾರಿನಿಂತು ತಮ್ಮ ಮೌಳಿಯನ್ನು ಗಾಳಿಯಲ್ಲಿ ಆಡಿಸುತ್ತಾ ಇದ್ದವು. ಇವು ನೆರಳನ್ನೂ ತಂಪನ್ನೂ ಕೊಡುತ್ತಾ ಈ ಪಾವನವಾದ ಸ್ಥಳಕ್ಕೆ ಮನಮೋಹಕವಾದ ಒಂದು ಸೊಬಗನ್ನು ಕೊಡುತ್ತಿದ್ದವು.

ಆ ಸ್ಥಳದ ವಾಸಿಯಾದ ಒಬ್ಬ ವೃದ್ಧಬ್ರಾಹ್ಮಣನು ಈ ಬಂದಿದ್ದವರಿಗೆ ಸ್ಥಳ ಇತಿಹಾಸ ಪುರಾಣವನ್ನು ವಿವರಿಸಿ, ಅಲ್ಲಿಗೆ ದಯಮಾಡಿದ್ದ ಗಣ್ಯವಕ್ತಿಗಳ ಹೆಸರುಗಳನ್ನು ತಿಳಿಸಿದನು. ಸ್ವಾಮಿ ವಿವೇಕಾನಂದರು ತಮ್ಮ ಪರಿವ್ರಜನದಲ್ಲಿ ಅಲ್ಲಿಗೆ ಬಂದಿದ್ದಾಗ್ಗೆ ಅವರ ಸೇವೆ ಮಾಡುವ ಅಪೂರ್ವ ಪುಣ್ಯ ತನಗೆ ಲಭಿಸಿತ್ತೆಂದು ಹೇಳಿದನು.

ಶ್ರೀ ಶಂಕರಾಚಾರ್ಯರು ಹುಡುಗನಾಗಿದ್ದಾಗ ಸಂನ್ಯಾಸತೆಗೆದುಕೊಳ್ಳುವಂತೆ ಮಾಡಿದ ಸುಪ್ರಸಿದ್ಧವಾದ ಸಂಗತಿ ಆಲ್ವಾಯ್ ನದಿಯ ದಡದಲ್ಲಿ ನಡೆಯಿತು. ಬಾಲಕನಾದ ಶ್ರೀ ಶಂಕರನು ಪ್ರಾಪಂಚಿಕ ವಿಷಯಗಳಲ್ಲಿ ಆಕಾಂಕ್ಷೆ ವ್ಯಾಕುಲಗಳಲ್ಲಿ ಮಗ್ನ ಆದ ಒಬ್ಬ ಸಂಸಾರಿಯ ಸಾಮಾನ್ಯ ಜೀವನಕ್ಕೆ ಪ್ರತಿಯಾಗಿ ಜೀವನವನ್ನು ದೇವರಿಗೆ ಸಂಪೂರ್ಣವಾಗಿ ವಿನಿಯೋಗಿಸಲು ಅಪ್ಪಣೆಯನ್ನು ಕೊಡಬೇಕೆಂದು ತಾಯಿಯನ್ನು ಬಲವಂತ ಪಡಿಸುತ್ತಿದ್ದನು. ತಾಯಿ ಒಪ್ಪಲಿಲ್ಲ.

ಒಂದು ದಿವಸ ಹುಡುಗನನ್ನು ಅವನ ತಾಯಿ ಎಂದಿನಂತೆ ಆಲ್ವಾಯ್ ನದಿಯಲ್ಲಿ ಸ್ನಾನಕ್ಕೆ ಕರೆದುಕೊಂಡು ಹೋಗಿದ್ದಾಗ, ಬಾಲಕನು ಮೊಣಕಾಲುದ್ದ ನೀರಿನಲ್ಲಿ ನಿಂತಿರಲು ಒಂದು ಮೊಸಳೆ ಹಠಾತ್ತಾಗಿ ಬಾಲಕನ ಕಾಲನ್ನು ಹಿಡಿದು ಆಳವಾದ ನೀರಿಗೆ ಎಳೆದುಕೊಂಡು ಹೋಗಲು ತೊಡಗಿತು. ಆಗ ಅವನು "ಅಮ್ಮ ಅಮ್ಮ, ಒಂದು ಮೊಸಳೆ ನನ್ನ ಕಾಲನ್ನು ಹಿಡಿದು ನನ್ನನ್ನು ನದಿಯ ಆಳಕ್ಕೆ ಎಳೆದು ಕೊಂಡು ಹೋಗುತ್ತಿದೆ! ನಾನು ಇಷ್ಟರಲ್ಲೆ ಮುಳುಗಿ ಹೋಗುತ್ತೇನೆ. ಮೊಸಳೆ ನನ್ನನ್ನು ನುಂಗಿಬಿಡುತ್ತದೆ. ನಾನು ಉಳಿದುಕೊಳ್ಳಬೇಕಾದರೆ ಇರುವುದು ಒಂದೇ ದಾರಿ. ನಾನು ಸಂನ್ಯಾಸ ತೆಗೆದುಕೊಳ್ಳಲು ನೀನು ಒಪ್ಪುವುದಾದರೆ ಮೊಸಳೆ

ನನ್ನನ್ನು ಬಿಟ್ಟು ಬಿಡುತ್ತದೆ" ಎಂದು ಕೂಗಿದನು. ಆ ಸನ್ನಿವೇಶ ಪ್ರೀತಿವಂತೆ ಯಾದ ತಾಯಿಗೆ ಕಳವಳವನ್ನುಂಟುಮಾಡಿತು. ತನ್ನ ಏಕಮಾತ್ರ ಪುತ್ರನು ಮೊಸಳೆಯ ರೂಪದ ಮೃತ್ಯುವಿಗೆ ತುತ್ತಾಗುವುದಕ್ಕಿಂತ ಸಂನ್ಯಾಸಿಯಾದರೂ ಜೀವಿಸಿರುವುದು ಲೇಸೆಂದು ಆಕೆಗೆ ತಕ್ಷಣ ಹೊಳೆಯಿತು.

"ಆಗಲಿ, ಮಗು, ನಾನು ಒಪ್ಪಿದೆ" ಎಂದು ಆಕೆ ನಿರ್ವಾಹವಿಲ್ಲದೆ ಮರು ನುಡಿದಳು.

ಮೊಸಳೆ ಕಾಲಿನ ಹಿಡಿತವನ್ನು ಬಿಟ್ಟಿತು. ಹುಡುಗನು ಸುರಕ್ಷಿತವಾಗಿ ನೀರಿನಿಂದ ಮೇಲಕ್ಕೆ ಬಂದನು. ತಾಯಿ ತನ್ನ ಮಾತಿನಂತೆ ನಡೆದುಕೊಂಡಳು. ಶ್ರೀ ಶಂಕರಾಚಾರ್ಯರು ಪ್ರಪಂಚ ಇದುವರೆಗೆ ಪಡೆದಿರುವ ಶ್ರೇಷ್ಠ ತತ್ವಜ್ಞಾನಿಗಳಲ್ಲಿ ಒಬ್ಬರಾದರು.

ಯಾತ್ರಿಕರು ಪಾವನವಾದ ನದಿಯಲ್ಲಿ ಸ್ನಾನಮಾಡಿ ದೇವಸ್ಥಾನಗಳಲ್ಲಿ ಮೂರ್ತಿಗಳ ದರ್ಶನಮಾಡಿ ಧರ್ಮಶಾಲೆಯಲ್ಲಿ ತಮ್ಮ ಬಿಡಾರಕ್ಕೆ ಬಂದರು. ಅಲ್ಲಿ (ಮಾತೆಯರು ದೇವರನಾಮ ಹೇಳುತ್ತಾ ಅಡಿಗೆ ಮಾಡಿದರು.) ಒಟ್ಟಿನಲ್ಲಿ ಈ ಪಯಣ ಬಹು ಆನಂದದಾಯಕವಾಗಿದ್ದಿತು. ಎಲ್ಲರೂ ಸಾಯಂಕಾಲ ಮತ್ತೆ ಎರ್ನಾಕುಲಕ್ಕೆ ಬಂದರು.

ಸಂಜೀವ ರಾಯನ ಮನೆಯಲ್ಲಿದ್ದಾಗ್ಗೆ ಅವನೂ ಅವನ ಧರ್ಮಪತ್ನಿ ಮತ್ತು ಮಕ್ಕಳೂ ರಾಮದಾಸನನ್ನು ಬಹು ಪ್ರೀತಿ ಆದರಗಳಿಂದ ಕಂಡರು.

## (ii) ಅಸ್ಪೃಶ್ಯತೆ, ಕೀಲೆಣ್ಣೆಯ ಒಂದು ಕಲೆ

ಈಗ ರಾಮದಾಸನಿಗೆ ಕಾಸರಗೋಡು ಕರೆಯುವಂತೆ ಅನುಭವವಾಯಿತು. ಅವನು ಆನಂದರಾಯರಿಗೆ ಈ ವಿಷಯ ಬರೆದು ಕಾಗದದಲ್ಲಿ ಅಲ್ಲಿರಲು ನಿರ್ಜನ ಪ್ರದೇಶದಲ್ಲಿ ಒಂದು ಸ್ಥಳವನ್ನು ಏರ್ಪಾಡು ಮಾಡಬೇಕೆಂದು ಬೇಡಿದನು. ಸಕಾಲದಲ್ಲಿ ಕಾಸರಗೋಡನ್ನು ಸೇರಿ ಪಿಲಿಕುಂಜಿ ಬೆಟ್ಟದ ಮೇಲಿದ್ದ ಒಂದು ಹುಲ್ಲು ಗುಡಿಸಿಲಿನಲ್ಲಿ ಇಳಿದುಕೊಂಡನು.

ಅವನು ಇಲ್ಲಿ ಆಡಿನಹಾಲು ಮತ್ತು ಬಾಳೆಯ ಹಣ್ಣುಗಳನ್ನು ಆಹಾರವಾಗಿ ತೆಗೆದುಕೊಳ್ಳುತ್ತಿದ್ದನು. ಪೂರ್ವಪರಿಚಿತನಾದ ರಾಜಯೋಗಿ ಪುನಃ ಅಲ್ಲಿಗೆ ಬಂದನು. ಇಬ್ಬರೂ ರಾತ್ರಿ ರಾಮಮಂತ್ರವನ್ನು ಹಾಡಿ ನರ್ತನಮಾಡುತ್ತಿದ್ದರು. ಕೆಲವು ಕಾಲಾನಂತರ ಬಂಟವಾಳದಿಂದ ಒಬ್ಬ ಹೊಸ ಸಂನ್ಯಾಸಿ ಬಂದು ಸೇರಿದನು. ಸಾಯಂಕಾಲಗಳಲ್ಲಿ ಅವನು ಊರಿನಿಂದ ಬಂದ ಇತರ ಸ್ನೇಹಿತರೊಂದಿಗೆ ಗುಡಿಸಿಲ ಮುಂದುಗಡೆ ಭಗವನ್ನಾಮ ಸಂಕೀರ್ತನೆ ಮಾಡುತ್ತಾ ಆನಂದ ಪರವಶನಾಗಿ ನರ್ತಿಸುತ್ತಿದ್ದನು.

ಕಾಸರಗೋಡಿನ ಬಡವರಿಗೂ ಅನ್ನದಾನ ಮಾಡಬೇಕೆಂದು ರಾಮನ ಸಂಕಲ್ಪವಾಯಿತು. ಈಸಲ ಹಣವನ್ನು ಕೂಡಿಸುವುದಕ್ಕೆ ರಾಮದಾಸನು ದುಡಿದನು. ಇವಕ್ಕಾಗಿ ಪ್ರಮುಖರ ಹತ್ತಿರ ಹೋಗಿ ಹಣವನ್ನು ತಂದುದಲ್ಲದೆ ಬಡವರಿಂದಲೂ ಸಣ್ಣಸಣ್ಣ ಮೊತ್ತಗಳನ್ನು ಸ್ವೀಕರಿಸಿದನು. ರಾಮದಾಸನ ಪ್ರಾರ್ಥನೆಯ ಮೇಲೆ ಆನಂದರಾಯರು ಈ ಕಾರ್ಯವನ್ನು ನಿರ್ವಹಿಸಿದರು. ರಾಮಗಿರಿ ಬೆಟ್ಟವನ್ನು ಊಟದ ಸ್ಥಳವಾಗಿ ಆರಿಸಿದ್ದಾಯಿತು. ಮತ್ತು ಒಂದು ಶನಿವಾರ ಊಟಕ್ಕೆಂದು ನಿರ್ಧರವಾಯಿತು. ಬೇಕಾದ ಏರ್ಪಾಡೆಲ್ಲ ಆಯಿತು. ಮಧ್ಯಾಹ್ನದಹೊತ್ತಿಗೆ ಒಂದು ಸಾವಿರ ಜನ ಬಂದು ಸೇರಿದರು. ಇವರಲ್ಲಿ ಮೋಚಿಗಳು, ಹೊಲೆಯರು, ಮೀನು ಹಿಡಿಯುವವರು, ಇವರೇ ಹೆಚ್ಚು ಜನರಿದ್ದರು. ಇವರೆಲ್ಲರೂ ಅಸ್ಪೃಶ್ಯರೆಂದು ಮೇಲುಜಾತಿಯವರಿಂದ ಭಾವಿಸಲಾಗಿದ್ದರೂ ಇವರಿವರಲ್ಲಿಯೇ ಭೇದಗಳಿದ್ದುವು. ಇವರು ಮೂರು ಪ್ರತ್ಯೇಕ ಪ್ರತ್ಯೇಕ ಪಂಕ್ತಿಗಳಲ್ಲಿ ಊಟಕ್ಕೆ ಕುಳಿತರು. ಊಟವನ್ನು ಬಡಿಸಲಾಯಿತು. ಅವರೊಂದಿಗೆ ತಾನೂ ಸೇರಬೇಕೆಂಬ ಇಚ್ಛೆ ರಾಮದಾಸನಿಗೆ ಉಂಟಾಯಿತು. ಅವನು ಹೊಲೆಯರ ಪಂಕ್ತಿಯಲ್ಲಿ ಕುಳಿತನು. ರಾಜಯೋಗಿಯೂ, ಹೊಸ ಸಂನ್ಯಾಸಿಯೂ ರಾಮದಾಸನ ಎದುರಿಗೆ ಕುಳಿತುಕೊಂಡು ಮೂವರು ಜನರೂ ಒಂದೇ ಎಲೆಯಲ್ಲಿ ಊಟಮಾಡಿದರು. ದೇವತೆಗಳು ಅನುಗ್ರಹಿಸಿದ ಶ್ರೇಷ್ಠ ವರವಾದ ಈ ಊಟವನ್ನು ಮಾಡುವಾಗ ರಾಮದಾಸನು ವರ್ಣಿಸಲಸಾಧ್ಯವಾದ ಆನಂದವನ್ನು ಪಡೆದನು.

ರಾಮದಾಸನಿಗೆ ಯಾವ ವಿಧವಾದ ಭೇದಭಾವಗಳೂ ಇರಲಿಲ್ಲ. ಯಾವುದೇ ವಿವರದಲ್ಲಿ ಉಚ್ಚ ನೀಚ ಎನ್ನುವ ಭಾವ ಹುಟ್ಟುವುದು ಕೇವಲ ಅಜ್ಞಾನದಿಂದ. ಈ ಪ್ರಪಂಚದಲ್ಲಿ ಯುದ್ಧ, ಕಲಹ, ಮತ್ತು ಗೋಳು ಇರುವುದು ಈ ವ್ಯತ್ಯಾಸ ಬುದ್ಧಿಯಿಂದಲೇ. ಎಲ್ಲಾ ಜೀವದ ಮತ್ತು ಹೊರಗೆ ಕಂಡುಬರುವ ಪ್ರಪಂಚದ ಒಳಗಣ ಆತ್ಮ ಒಂದೇ ಆಗಿರುವಾಗ ಜಾತಿ, ಮತ, ಕುಲ, ಬಣ್ಣ ಮುಂತಾದ ಭೇದಗಳಿಗೆ ಕಾರಣವೆಲ್ಲಿಯದು? ವಿಶ್ವಪ್ರಪಂಚದ ಜೀವನದ ಪಾರಿಶುದ್ಧ್ಯ ಮತ್ತು ಸೌಂದರ್ಯಕ್ಕೆ ಅತಿ ಹೇಯವಾದ ಕಳಂಕ ಅಸ್ಪೃಶ್ಯತೆ. ಅದು ಬಿಳಿಯ ಬಟ್ಟೆಯ ಮೇಲಿನ ಕೀಲೆಣ್ಣೆಯ ಕಲೆಯಂತೆ. (ಎಲ್ಲ ಜೀವಗಳಲ್ಲಿಯೂ ಇರುವ ಅಂತರಾತ್ಮ ಒಂದು, ಬಾಹ್ಯದಲ್ಲಿ ಕಾಣುವ ಅದರ ಆಕಾರವೆಲ್ಲ ಸಮ, ಎಂಬ ಸ್ವಾನುಭವದಿಂದ ಮಾತ್ರ ಸಮಾಧಾನ ಶಾಂತಿ ಸ್ವಾತಂತ್ರ್ಯಗಳು ದೊರೆಯಬಹುದು.)

ರಾಮದಾಸನ ಗುರುದೇವನು ತನ್ನ ಮಗ ಆನಂದರಾಯರೊಡನೆ ವಾಸಿಸುತ್ತಿದ್ದನು. ಒಂದು ದಿನ ಆತನು ಅತಿ ಪ್ರಯಾಸದಿಂದ ಬೆಟ್ಟದ ಮೇಲಿನ ರಾಮ

ದಾಸನ ಗುಡಿಸಿಲಿಗೆ ಬಂದನು. ಆತನು ಸಹಜವಾಗಿ ದೃಢಾಂಗನಾಗಿದ್ದರೂ ವೃದ್ಧಾಪ್ಯದ ಅಸ್ವಾಸ್ಥ್ಯಗಳಿಂದ ನಿಶ್ಶಕ್ತನಾಗಿದ್ದನು; ಒಂದು ಎಳೆನೀರನ್ನು ಮತ್ತು ಮನೆಯಲ್ಲಿ ಮಾಡಿದ ಸ್ವಲ್ಪ ಸಿಹಿರೊಟ್ಟಿಯನ್ನೂ ತಂದನು. ರಾಮದಾಸನು ಆಗಲೂ ಹಣ್ಣು ಮತ್ತು ಹಾಲನ್ನು ಮಾತ್ರ ತೆಗೆದುಕೊಳ್ಳುತ್ತಿದ್ದನು. ಗುರುದೇವನು ರಾಮದಾಸನನ್ನು ಆ ಎಳನೀರು ರೊಟ್ಟಿಗಳನ್ನು ಭುಜಿಸಬೇಕೆಂದು ಒತ್ತಾಯಪಡಿಸಿದನು. ಕ್ಷಮಿಸಬೇಕೆಂದು ರಾಮದಾಸನು ಅಂಗಲಾಚಿದನು. ಮನಸ್ಸಿಗೆ ಸಂಕಟವಾಗಿ ಕಣ್ಣಿನಲ್ಲಿ ನೀರುತುಂಬಿದ ಗುರುದೇವನು ರೊಟ್ಟಿಯನ್ನು ತಿನ್ನಬೇಕೆಂದು ಪುನಃ ಒತ್ತಾಯಪಡಿಸಿದರೂ ರಾಮದಾಸನು ತೆಗೆದುಕೊಳ್ಳಲಾಗುವುದಿಲ್ಲವೆಂದು ಖಂಡಿತವಾಗಿ ಹೇಳಿದನು; ಅವರೆ ಸ್ವಲ್ಪ ಎಳೆನೀರನ್ನು ಮಾತ್ರ ಕುಡಿದನು. ಇದಾದನಂತರ ಗುರುದೇವನು ಮನೆಗೆ ಹೊರಟುಹೋದನು. ಇದು ಆದಾಗ ಗುಡಿಸಿಲಿನಲ್ಲಿ ಐದು ಆರು ಜನ ಇದ್ದರು. ಇವರಲ್ಲಿ ಒಬ್ಬನು ಗುರುದೇವನಿಗುಂಟಾದ ನಿರಾಶೆಯಿಂದ ಮನಸ್ಸು ಕಲಕಿ ಆಕ್ಷೇಪಣೆಯನ್ನು ಸೂಚಿಸುವ ಧ್ವನಿಯಲ್ಲಿ " ಅವರು ನಿಮ್ಮ ಗುರುದೇವನೆಂದು ಹೇಳುತ್ತೀರಿ, ಆದರೂ ಅವರು ಅಷ್ಟು ಪ್ರೀತಿಯಿಂದ ಕೊಟ್ಟ ರೊಟ್ಟಿಯನ್ನು ತಿನ್ನಲು ನಿರಾಕರಿಸಿದ್ದೀರಿ, ಇದಕ್ಕೆ ಏನು ಸಮಾಧಾನ ? " ಎಂದು ಪ್ರಶ್ನಿಸಿದನು.

ರಾಮದಾಸನು ಮುಗುಳುನಗೆಯಿಂದ " ಒಳಗೂ ಅವನೇ ಹೊರಗೂ ಅವನೇ. ಅವನು ಹೊರಗಿಂದ ' ತಿನ್ನು ' ಎನ್ನುತ್ತಾನೆ. ಹಾಗೆಯೇ ಒಳಗಿನಿಂದ ' ತಿನ್ನಬೇಡ ' ಎನ್ನುತ್ತಾನೆ. ರಾಮದಾಸನು ಯಾವಾಗಲೂ ಒಳಗಿನ ಧ್ವನಿಯನ್ನು ಅನುಸರಿಸುತ್ತಾನೆ " ಎಂದು ಉತ್ತರಕೊಟ್ಟನು.

ಆ ಸ್ನೇಹಿತನು " ಹಾಗಿದ್ದಲ್ಲಿ ನಿಮ್ಮ ಅಂತರಾತ್ಮನು ಒಳಗಡೆಯಿಂದ ಮಾಡುವ ಪ್ರೇರಣೆಗೆ ವಿರೋಧವಾಗಿ ಬಾಹ್ಯದಲ್ಲಿ ಏಕೆ ವರ್ತಿಸಬೇಕು ? " ಎಂದು ಪ್ರಶ್ನಿಸಿದನು.

"ಅದೇ ಆತನ ಆಶ್ಚರ್ಯಕರವಾದ ಲೀಲೆ" ಎಂದು ರಾಮದಾಸನು ಉತ್ತರ ಹೇಳಿದನು. ಆ ಸ್ನೇಹಿತನು ಆ ವಿಷಯವನ್ನು ಮುಂದರಿಸಲಿಲ್ಲ.

ಒಂದು ದಿವಸ ಹಠಾತ್ತಾಗಿ ರಾಮಚರಣದಾಸನು ಆಕಾಶದಿಂದ ಇಳಿದು ಬಂದಂತೆ ಬಂದನು. ಚನ್ನಾಗಿ ಹದಮಾಡಿದ ಒಂದು ಸೊಗಸಾದ ಹುಲಿಯ ಚರ್ಮವನ್ನು ಮತ್ತು ಒಂದು ಯೋಗದಂಡವನ್ನು ಸಂಗಡ ತಂದನು. ಉತ್ತರ ಹಿಂದೂಸ್ಥಾನದ ಕೆಲವು ಭಾಗಗಳಲ್ಲಿ ಅಲೆದಾಡಿ ರಾಮದಾಸನನ್ನು ನೋಡಬೇಕೆಂಬ ಉತ್ಕಟಾಭಿಲಾಷೆ ಆದುದರಿಂದ ಆಗ ಬಂದುದಾಗಿ ತಿಳಿಸಿದನು.

ರಾಮಚರಣದಾಸನು " ಸ್ವಾಮೀಜಿ ! ಈ ವ್ಯಾಘ್ರಾಸನವನ್ನು ಝಾನ್ಸಿಯಲ್ಲಿ

ಒಬ್ಬ ಭಕ್ತ ನನಗೆ ಕೊಟ್ಟನು. ಇದನ್ನು ನಿಮಗಾಗಿ ಅಲ್ಲಿಂದ ಇಲ್ಲಿಯವರೆಗೂ ತಂದಿದ್ದೇನೆ. ದಯವಿಟ್ಟು ಸ್ವೀಕರಿಸಿ '' ಎಂದನು.

ರಾಮದಾಸನು " ರಾಮದಾಸನು ಒಂದೇ ಬಟ್ಟೆಯಲ್ಲಿ ಪ್ರಯಾಣ ಮಾಡುವುದರಿಂದ ಅವನಿಗೆ ಹುಲಿಯ ಚರ್ಮ ಬೇಕಿಲ್ಲ, ರಾಮ. ಅದನ್ನು ನೀನೇ ಇಟ್ಟುಕೊ '' ಎಂದನು.

ರಾಮಚರಣದಾಸನು '' ಇದನ್ನು ತಂದಿರುವುದು ನಿಮಗೋಸ್ಕರ. ನೀವು ತೆಗೆದುಕೊಳ್ಳಬೇಕು '' ಎಂದು ವಾದಿಸಿ "ನಿಮಗೋಸ್ಕರ ಇದನ್ನು ಹೊತ್ತುಕೊಂಡು ತಿರುಗುತ್ತೇನೆ. ನೀವು ಎಲ್ಲಿ ಹೋದರೂ ನಿಮ್ಮಹಿಂದೆ ಬರುತ್ತೇನೆ. ಈಸಲ ನಿಮ್ಮನ್ನು ಬಿಡುವುದಿಲ್ಲ." ಎಂದು ಒತ್ತಿ ಹೇಳಿದನು.

ರಾಮದಾಸನು '' ಮರದ ಶಿಲುಬೆ ಏತಕ್ಕೆ ? '' ಎಂದು ಕೇಳಿದನು.

ರಾಮಚರಣದಾಸನು " ಧ್ಯಾನಕ್ಕೋಸ್ಕರ. ಧ್ಯಾನಕಾಲದಲ್ಲಿ ನೆಟ್ಟಗೆ ಕುಳಿತಿರಲು ಅದರಿಂದ ಬಹಳ ಸಹಾಯವಾಗುತ್ತದೆ" ಎಂದು ವಿವರಿಸಿದನು.

ರಾಮದಾಸನು '' ನಿನಗಿನ್ನೂ ಚಿಕ್ಕವಯಸ್ಸು, ಶಕ್ತಿ ಇದೆ. ಇಂತಹ ಉಪಕರಣ ಬೇಕಾಗಿಲ್ಲ. ಅದು ಅನಾವಶ್ಯಕವಾದ ಬಂಧನ. ಅದನ್ನು ತ್ಯಜಿಸು '' ಎಂದು ಅವನಿಗೆ ಬುದ್ಧಿ ಹೇಳಿದನು.

ಆದರೆ ರಾಮಚರಣದಾಸನು ಅದರ ಅನುಕೂಲತೆಯ ವಿಚಾರವಾಗಿ ದೀರ್ಘಕಾಲ ಚರ್ಚೆಮಾಡಿ ಅದನ್ನು ತ್ಯಜಿಸುವ ವಿಷಯದಲ್ಲಿ ಅಸಮ್ಮತಿಯನ್ನು ವ್ಯಕ್ತಪಡಿಸಿದನು. ಆದರೂ ರಾಮದಾಸನ ಅನುವರ್ತಿಯಾಗಿರಲು ಅಪೇಕ್ಷೆಪಟ್ಟನು. ಆ ಕಾಲದಲ್ಲಿ ಗುರುದೇವನಿಗೆ ಬಹಳ ಕಾಯಿಲೆಯಾಯಿತು. ಅದೇ ಸಂದರ್ಭದಲ್ಲಿಯೇ ಅಂಜನಗಾವ್ ಮಾಧವರಾಯನಿಂದ ಅವನ ಮನೆಯಲ್ಲಿ ಶೀಘ್ರದಲ್ಲಿ ನಡೆಯಬೇಕಾಗಿದ್ದ ಒಂದು ಉತ್ಸವಕ್ಕೆ ಬರಬೇಕೆಂದು ರಾಮದಾಸನಿಗೆ ಕಾಗದ ಬಂದಿತು. ಈ ಕಾರ್ಯ ಒಂಬತ್ತು ದಿನ ನಡೆಯತಕ್ಕುದಾಗಿದ್ದಿತು. ಕಾಗದ ಬಂದ ಬಹುಬೇಗನೆ ರಾಮದಾಸನು ಅಲ್ಲಿಗೆ ಬರುವುದು ಅತ್ಯಾವಶ್ಯಕವೆಂದು ಒಂದು ತಂತಿಯೂ ಬಂದಿತು. ಅಲ್ಲಿಗೆ ಹೋಗಬೇಕೆಂದು ಅಂತರಾತ್ಮನ ಪ್ರೇರಣೆ ಬಲವಾಗಿದ್ದಿತು. ಆದರೆ ಗುರುದೇವನ ಕಾಯಿಲೆ ಹೆಚ್ಚಾಗಿದ್ದುದರಿಂದ ರಾಮದಾಸನು ಅನುಮಾನಿಸಿದನು; ಈ ವಿಷಯದಲ್ಲಿ ತೀರ್ಮಾನವನ್ನು ಗುರುದೇವನೇ ಅಪ್ಪಣೆ ಕೊಡಿಸಬೇಕೆಂದು ಅವನ ಮುಂದಿಟ್ಟನು.

'' ನಿನ್ನ ಗುರುದೇವನನ್ನು ಈ ಸ್ಥಿತಿಯಲ್ಲಿ ಬಿಟ್ಟುಹೋಗುವಿಯಾ ? '' ಎಂದು ಗುರುದೇವನು ಕೇಳಿದನು.

ರಾಮದಾಸನಿಗೆ ಇನ್ನು ತಡೆಯಲು ಸಾಧ್ಯವಾಗಲಿಲ್ಲ. ಅವನು ಅಂಜನ ಗಾವಿಗೆ ಪ್ರಯಾಣ ಮಾಡುವ ಇಚ್ಛೆಯನ್ನು ತೊರೆದು ಈ ವಿಷಯವನ್ನು ಮಾಧವರಾಯನಿಗೆ ತಂತಿಮೂಲಕ ತಿಳಿಸಿದನು. ಬಾರದೆ ನಿಲ್ಲಕೂಡದೆಂದು ಆತನು ತಂತಿ ಕಳುಹಿಸಿದನು. ಈಗ ರಾಮದಾಸನು ಈ ವಿಚಾರದ ತೀರ್ಮಾನ ವನ್ನು ರಾಮನಿಗೆ ಬಿಟ್ಟು ಸಾವಧಾನದಿಂದ ನಿರೀಕ್ಷಿಸಿದನು. ಯಾವಾಗಲೂ ರಾಮನ ದಾರಿ ಅವನದೇ ಬೇರೆ ದಾರಿ. ಮಾರನೆಯದಿನ ಗುರುದೇವನನ್ನು ನೋಡುವುದಕ್ಕೆ ಹೋದಾಗ ಬಹು ಗುಣವಾಗಿದ್ದುದು ಅಲ್ಲದೆ ಅವನಿಗೆ ತಿರುಗಾ ಡುವಷ್ಟು ಶಕ್ತಿಬಂದಿದ್ದಿತು. ಅವನನ್ನು ರಾಮದಾಸನು ಸೊಲ್ಲಾಪುರದ ಜಿಲ್ಲೆಗೆ ಹೋಗುವ ವಿಷಯದಲ್ಲಿ ಅನುಮತಿ ಉಂಟೇ ಎಂದು ಕೇಳಿದಾಗ ಗುರುದೇವನು ಮನಃಪೂರ್ವಕವಾಗಿ ಸಮ್ಮತಿ ಇತ್ತನು.

ದೇವ ನಿನ್ನ ವರ್ತನೆಗಳು ಎಂತು ನಿಗೂಢವಾದವು!

## (iii) ಗೋವಾ ಪೋಲೀಸಿನವರ ಸೋಲು

ಹೊರಡುವುದಕ್ಕೆ ಮುಂಚೆ ರಾಮದಾಸನು ರಾಮಚರಣದಾಸನಿಗೆ ಅವನು ತನ್ನೊಂದಿಗೆ ಪ್ರಯಾಣಮಾಡುವ ಕಾರಣವೇನೂ ಇಲ್ಲವೆಂದು ತಿಳಿಸಿದನು. ಆದರೆ ರಾಮಚರಣದಾಸನು ಎಂದಿನಂತೆ ಹಟಮಾಡಿದನು.

ರಾಮದಾಸನು ಅದೇ ಪ್ರಕಾರ ರಾಮಚರಣದಾಸನೊಂದಿಗೆ ಸಾಯಂಕಾ ಲಕ್ಕೆ ಮಂಗಳೂರನ್ನು ಸೇರಿದನು. ಮಾರನೆಯ ದಿನ ಬೊಂಬಾಯಿಗೆ ಹೊರಡುವ ಹಡಗಿನಲ್ಲಿ ಪ್ರಯಾಣ ಮಾಡತಕ್ಕುದೆಂದು ನಿಶ್ಚಯವಾಯಿತು. ರಾಮದಾಸನಿಗೆ ಟಿಕೀಟನ್ನು ಕೊಂಡುಕೊಳ್ಳಲು ಕಾಸರಗೋಡಿನಿಂದಲೇ ಏರ್ಪಾಡಾಗಿದ್ದಿತು. ಕದರಿ ಬೆಟ್ಟದಲ್ಲಿ ನಿಂತು ಭಗವಂತನ ಸ್ಮರಣೆ ಮತ್ತು ಧ್ಯಾನದಲ್ಲಿ ಕಾಲಕಳೆಯ ಬೇಕೆಂದು ರಾಮಚರಣದಾಸನಿಗೆ ಬುದ್ಧಿವಾದವನ್ನು ಹೇಳಿದಾಗ್ಯೂ ಅವನು ಒಪ್ಪಲಿಲ್ಲ.

ಆರಾತ್ರಿ ಅವನು ತನ್ನ ಪ್ರಯಾಣದ ವೆಚ್ಚಕ್ಕಾಗಿ ಹಣವನ್ನು ಸಂಗ್ರಹಿಸಲು ಹೋದನು. ರಾಮದಾಸನು ಇಳಿದಿದ್ದ ಸೀತಾರಾಮರಾಯರ ಮನೆಯಲ್ಲಿ ರಾಮ ಚರಣದಾಸನ ಈ ಸಂಗತಿಯನ್ನು ತಿಳಿದ ರಾಮದಾಸನ ಚಿಕ್ಕಮ್ಮ ಅವನ ಕೈಗೆ ರಾಮಚರಣದಾಸನ ಟಿಕೀಟಿಗಾಗಿ ಇಪ್ಪತ್ತು ರೂಪಾಯಿಗಳನ್ನು ಬಲವಂತಮಾಡಿ ಕೊಟ್ಟು, ಅವನು ಮಂಗಳೂರು ಬಂದರಿನಲ್ಲೇ ದೊರೆಯುವನೆಂದೂ, ಅವನಿಗೆ ಆ ದುಡ್ಡನ್ನು ಕೊಡಬೇಕೆಂದೂ ತಿಳಿಸಿದಳು. ಈ ತಾಯಿ ದಯಾವಂತಳೂ ಪರಿ ಶುದ್ಧಳೂ ಆದ ಪುಣ್ಯಾತ್ಮಳು.

ಮಾರನೆಯ ದಿನ ಬಂದರಿನಲ್ಲಿ ಹುಡುಕಿದರೆ ರಾಮಚರಣದಾಸನು ಸಿಕ್ಕ ಲಿಲ್ಲ. ರಾಮದಾಸನು ಉಗಿದೋಣಿಯಲ್ಲಿ ಕುಳಿತು ನದಿಯನ್ನು ದಾಟಿ ಹಡಗನ್ನು

ಹತ್ತಿದನು. ಆಗ ಮೊದಲು ಕಂಡ ದೃಶ್ಯವೇನು ? ರಾಮುಚರಣದಾಸನು ಅವನನ್ನು ಬಯಲಿಗೆಳೆಯುವ ಆ ಹುಲಿಯ ಚರ್ಮದಸಹಿತ ಒಂದು ಮೂಲೆಯಲ್ಲಿ ಬೆಂಚಿನ ಮೇಲೆ ಕುಳಿತಿದ್ದನು. ರಾಮುದಾಸನು ಹೋಗಿ ಅವನ ಮಗ್ಗುಲಲ್ಲಿ ಕುಳಿತನು. ರಾಮುಚರಣದಾಸನ ಯೋಗದಂಡವು ಮಾಯವಾಗಿದ್ದಿತು.

ರಾಮುಚರಣದಾಸನು ನಸುನಗುತ್ತಾ "ಸ್ವಾಮಿಜಿ ! ನಾನು ಮುಂಚಿತವಾಗಿ ಬಂದ ದೋಣಿಯಲ್ಲಿ ಬಂದೆನು" ಎಂದನು. ರಾಮುದಾಸನು ಚಿಕ್ಕಮ್ಮ ಕೊಟ್ಟಿದ್ದ ದುಡ್ಡನ್ನು ರಾಮುಚರಣದಾಸನ ಕೈಗೆಕೊಟ್ಟನು.

ಮರುದಿನ ಪ್ರಾತಃಕಾಲಕ್ಕೆ ಹಡಗು ಮಾರ್ಮಗೋವ ಬಂದರನ್ನು ಮುಟ್ಟಿತು. ಅಲ್ಲಿ ಎರಡು ಗಂಟೆಗಳ ಕಾಲ ಕಾಯುವುದಿದ್ದಿತು. ಈ ಮಧ್ಯೆ ಇಬ್ಬರು ಗೋವಾ ಪೋಲಿಸಿನವರು ತನಿಖೆಗಾಗಿ ಬಂದರು. ಹಡಗಿನ ಕೆಳ ಅಂತಸ್ತಿನಲ್ಲಿ ಹೋಗುತ್ತ ಅವರಲ್ಲಿ ಒಬ್ಬನು ರಾಮುದಾಸನ ಕಡೆ ಕದಾಚಿತ್ ನೋಡಿದನು. ರಾಮುದಾಸನು 'ಡೆಕ್ ಪ್ಯಾಸೆಂಜರ್', ಎಂದರೆ ಮೂರನೆ ತರಗತಿಯ ಪ್ರಯಾಣಿಕನಾಗಿದ್ದನು. ರಾಮುದಾಸನ ದರ್ಶನ ಆತನ ಮೇಲೆ ಅಸಾಧಾರಣವಾದ ಪ್ರಭಾವವನ್ನು ಉಂಟುಮಾಡಿದಂತೆ ಕಂಡಿತು. ಆತನು ನಿಂತು ರಾಮುದಾಸನ ಎದುರಿಗೆ ಕಟಕಟೆಗೆ ಒರಗಿಕೊಂಡು ರಾಮುದಾಸನನ್ನು ಎವೆಯಿಕ್ಕದೆ ದಿಟ್ಟಿಸಿ ನೋಡಲಾರಂಭಿಸಿದನು. ರಾಮುದಾಸನ ಮೇಲಣ ದೃಷ್ಟಿಯನ್ನು ತಿರುಗಿಸಲು ಪೋಲೀಸಿನವನಿಗೆ ಅಸಾಧ್ಯವೆಂಬಂತಿದ್ದಿತು. ರಾಮುದಾಸನೂ ಕೂಡ ಆತನ ಆಶ್ಚರ್ಯಕರವಾದ ನಡವಳಿಕೆಯನ್ನು ನೋಡುತ್ತಿದ್ದನು. ಸುಮಾರು ಅರ್ಧಗಂಟೆನಂತರ ಆತನು ರಾಮುದಾಸನಿದ್ದೆಡೆಗೆ ಬಂದನು.

"ನೀವಿಬ್ಬರೂ ನನ್ನಹಿಂದೆ ಬನ್ನಿ" ಎಂದು ಹೇಳಿದನು.

ಇವರು ಹಾಗೆ ಮಾಡಿದರು. ಆತನು ಅವರನ್ನು ನೇರವಾಗಿ ಬಂದರಿನಲ್ಲಿದ್ದ ಒಂದು ಹಿಂದೂ ಉಪಹಾರಮಂದಿರಕ್ಕೆ ಕರೆದುಕೊಂಡು ಹೋಗಿ ಇಬ್ಬರಿಗೂ ಚಹ ಮತ್ತು ಫಲಹಾರವನ್ನು ತರಿಸಿಕೊಟ್ಟು, ಅವರು ಅದನ್ನು ಭುಜಿಸುತ್ತಿದ್ದಾಗ ತಾನು ಎದುರಿನ ಒಂದು ಬೆಂಚಿನ ಮೇಲೆ ಕುಳಿತು ಅವರನ್ನು ನೋಡುತ್ತಿದ್ದನು. ಫಲಾಹಾರದ ವೆಚ್ಚವನ್ನು ಆತನೇ ಕೊಟ್ಟನು. ಅನಂತರ ಇಬ್ಬರೂ ಅವನ ಹಿಂದೆ ಹಡಗಿನ ಮೇಲ್ಭಾಗಕ್ಕೆ ಬಂದರು. ಮೊದಲು ಉಚ್ಚರಿಸಿದ ಕೆಲವು ಶಬ್ದಗಳನ್ನು ಬಿಟ್ಟು ಈತನು ತೀರ ಮೌನವಾಗಿದ್ದನು. ಅನಂತರ ಕೂಡ ಹಡಗು ಹೊರಡುವ ಸೂಚನೆಯಾಗಿ ಸಿಳ್ಳೆಹಾಕುವವರೆಗೂ ಆತನು ತಾನು ಒರಗಿಕೊಂಡಿದ್ದ ಕಟಕಟೆಯಿಂದ ರಾಮುದಾಸನನ್ನು ದಿಟ್ಟಿಸುತ್ತಾ ನಿಂತಿದ್ದನು. ಹಡಗನ್ನು ಬಿಟ್ಟು ಹೋಗಬೇಕಾದಾಗ ಈತನ ಮನಸ್ಸು ಸ್ವಲ್ಪ ಮಟ್ಟಿಗೆ ಕಲಕಿದಂತಾಯಿತು, ಬಾರಿ

ಬಾರಿಗೆ ಹಿಂದೆ ನೋಡುತ್ತಾ ಆತನು ಕೊನೆಗೆ ಹಡಗಿನಿಂದ ಧುಮುಕಿದನು. ನಂತರ ಹಡಗು ಬಂದರನ್ನು ಬಿಟ್ಟಿತು.

ರಾಮದಾಸನು ಬೊಂಬಾಯಿಗೆ ಮುಟ್ಟುವ ಕಾಲವನ್ನು ಮಂಗಳೂರಿನಿಂದ ಮುಂಚಿತವಾಗಿಯೇ ತಿಳಿಸಿದ್ದಿತು. ಬೊಂಬಾಯಲ್ಲಿ ರಾಮದಾಸನು ಸಂಜೀವ ರಾಯರ ಸದ್ಗೃಹದಲ್ಲಿ ನಿಂತನು. ಸದ್ಗೃಹವೇಕೆಂದರೆ, ಸಂಜೀವರಾಯರೂ ಅವರ ಧರ್ಮಪತ್ನಿಯೂ ಪ್ರೀತ್ಯಾದರಗಳ ಮೂರ್ತಿಗಳು. ಇಬ್ಬರೂ ಉಕ್ಕಿ ಹರಿಯುವ ತಮ್ಮ ಪ್ರೀತಿಯಲ್ಲಿ ರಾಮದಾಸನನ್ನು ಮುಳುಗಿಸಿದರು. ಆ ಕಟ್ಟಡದ ಇತರ ವಾಸಿಗಳು ಮತ್ತು ಹೊರಗಿನವರು ಹಲವರು ಬಂದು ರಾಮದಾಸನೊಡನೆ ಭಗವಂತನ ಮತ್ತು ಅವನ ನಾಮದ ಮಾಹಾತ್ಮ್ಯೆಯ ವಿಷಯವಾಗಿ ಸಂಭಾಷಣೆ ಮಾಡಿದರು. ಸಾಯಂಕಾಲದ ಹೊತ್ತು ಭಗವನ್ನಾಮಸಂಕೀರ್ತನೆ ನಡೆಯುತ್ತಿದ್ದಿತು. ಸಂಜೀವರಾಯರ ಮನೆಯಲ್ಲಿರುವಷ್ಟುಕಾಲ ರಾಮದಾಸನು ಶುದ್ಧವಾದ ಆನಂದವನ್ನು ಅನುಭವಿಸಿದನು.

ಬೊಂಬಾಯಿಂದ ಪ್ರಯಾಣ ಮಾಡುವಕಾಲ ಒದಗಿತು. ರಾಮದಾಸನು ರಾಮಚರಣದಾಸನೊಡಗೂಡಿ, ರಾತ್ರಿ ರೈಲಿನಲ್ಲಿ ಪ್ರಯಾಣ ಮಾಡಿ ಮರುದಿನ ಮಧ್ಯಾಹ್ನದಲ್ಲಿ ಅನಗರ್ ಸ್ಟೇಷನ್ನನ್ನು ಸೇರಿದನು. ಸ್ಟೇಷನ್ನಿನಲ್ಲಿ ಗೋವಿಂದ ಜೋಷಿ ಬಂದು ಕಾದಿದ್ದವನು ರಾಮದಾಸನನ್ನು ಅತ್ಯಂತ ಸಂತೋಷದಿಂದ ಸ್ವಾಗತಿಸಿ ಅಲಿಂಗನ ಕೊಟ್ಟನು. ಜೋಷಿ ಇವನಿಗಾಗಿ ಹಾಲನ್ನು ತಂದಿದ್ದನು. ಹಾಲನ್ನು ಸ್ವೀಕರಿಸಿದನಂತರ ಇವರು ಕಾಲು ನಡಿಗೆಯಲ್ಲಿ ಹೊರಟು ಅಂಜನಗಾವ್ ಗ್ರಾಮವನ್ನು ಸೂರ್ಯಾಸ್ತಮಯಕ್ಕೆ ಮುಂಚೆ ಸೇರಿದರು. ಊರಿನ ಹೊರಗೆ ನೂರಾರು ಜನ ರಾಮದಾಸನ ಆಗಮನವನ್ನು ಕುತೂಹಲದಿಂದ ನಿರೀಕ್ಷಿಸುತ್ತ ಕಾದಿದ್ದರು. ರಾಮದಾಸನನ್ನು ಮಾಧವರಾಯನ ಮನೆಗೆ ಮೆರವಣಿಗೆಯಲ್ಲಿ ಕರೆದುಕೊಂಡು ಹೋದರು. ಮಾಧವರಾಯನು ಇವನನ್ನು ಅತ್ಯಂತ ಸಂತೋಷದಿಂದ ಸ್ವಾಗತಿಸಿದನು.

---

## ಅಧ್ಯಾಯ ೧೧

### ಅಂಜನಗಾವ್, ಅನಗರ್

#### (i) ಕಡಾಕಡಿ ದಂಗೇಕೋರ

ಸೊಲ್ಲಾಪುರಜಿಲ್ಲೆಯ ಈ ಪ್ರವಾಸದಲ್ಲಿ ರಾಮದಾಸನಿಗೆ ಅಪೂರ್ವವಾದ ಒಂದು ಅನುಭವ ಉಂಟಾಯಿತು. ರಾಮದಾಸನು ಒಂದು ವರ್ಷದ ಹಿಂದೆ ಅಂಜನಗಾವಿಗೆ ಬಂದಿದ್ದುದು ಭಕ್ತಮಾಧವರಾವ್ ಕುಲಕರ್ಣಿಯ ಮನೆಯಲ್ಲಿ ಅತ್ಯಂತ ಪ್ರೀತ್ಯಾದರಗಳನ್ನು ಪಡೆದಿದ್ದುದು ವಾಚಕರಿಗೆ ಜ್ಞಾಪಕವಿರಬಹುದು. ಈ ಮನೆ

ಯಲ್ಲಿ ನವವಿಧ ಭಕ್ತಿ ಉತ್ಸವ ನಡೆಯುತ್ತಿದ್ದಿತು. ಈ ಭಕ್ತನು ನಿಷ್ಠನಾದ ಬ್ರಾಹ್ಮಣನಾದುದರಿಂದ ಈ ಪವಿತ್ರ ಉತ್ಸವದ ಬೇರೆ ಬೇರೆ ಕಾರ್ಯಗಳನ್ನು ನಡೆಸಲು ಹನ್ನೆರಡು ಮಂದಿಗೆ ಮೇಲ್ಪಟ್ಟ ಬ್ರಾಹ್ಮಣರನ್ನು ಗೊತ್ತುಮಾಡಿದ್ದನು. ರಾಮದಾಸನ ಜೊತೆಗೆ ರಾಮಚರಣದಾಸನಲ್ಲದೆ ಆ ಮೇಲೆ ಬೆಂಗಳೂರಿನಿಂದ ಭವಾನೀಶಂಕರರಾಯನೂ ಬಂದು ಸೇರಿದನು.

ರಾಮದಾಸನು ಬಂದಾಗ ನವಮಿ ಉತ್ಸವ ಪೂರ್ತಿಯಾಗುವುದಕ್ಕೆ ಎರಡು ಮೂರು ದಿನ ಮಾತ್ರ ಉಳಿದಿದ್ದವು. ಉತ್ಸವ ವಾಡಿಕೆಯಾಗಿ ನಡೆಯುವುದು ಒಂಬತ್ತು ದಿನ. ರಾಮದಾಸನು ಬಂದ ನಂತರ ಇವನನ್ನು ನೋಡುವುದಕ್ಕಾಗಿ ಮಾಧವರಾಯನ ಮನೆಗೆ ಬರುವ ಜನದ ಸಂದಣಿ ಹೆಚ್ಚಿತು. ಇದರಿಂದ ಮನೆಯವರ, ಹಾಗೆಯೇ ಗ್ರಾಮಸ್ಥರ, ದೃಷ್ಟಿ ನಡೆಯುತ್ತಿದ್ದ ಉತ್ಸವದ ಕಡೆಯಿಂದ ರಾಮದಾಸನ ಕಡೆಗೆ ತಿರುಗಿದಂತಾಯಿತು. ಬ್ರಾಹ್ಮಣರಿಗೆ ಇದು ಒಪ್ಪಾಗಲಿಲ್ಲ. ಊರೂರು ಅಲೆಯುವ ಸಾಧುವಿಗೆ ಅತಿ ಪ್ರಾಶಸ್ತ್ಯವನ್ನು ಕೊಟ್ಟ ವಿಚಾರದಲ್ಲಿ ಅವರು ಮಾಧವರಾಯನನ್ನು ಆಕ್ಷೇಪಿಸಿದರು. ಮಾಧವರಾಯನಿಗೆ ಉಭಯ ಸಂಕಟಕ್ಕೆ ಇಟ್ಟುಕೊಂಡಿತು. ಬ್ರಾಹ್ಮಣರು ಮೇಲೆ ಮೇಲೆ ಆಕ್ಷೇಪಿಸಿದರೂ, ಮಾಧವರಾಯನಿಗೆ ರಾಮದಾಸನ ಮೇಲಣ ಪ್ರೀತಿ ಗೌರವಗಳು ಕಡಿಮೆಯಾಗಲಿಲ್ಲ.

ಈ ಸಂದರ್ಭದಲ್ಲಿ ಸಹನೆಯನ್ನು ಮುರಿಯುವ ಕೊನೆಯ ಕಾರಣ ಇಲ್ಲದೆ ಹೋಗಲಿಲ್ಲ. ಕ್ಷಣಕ್ಷಣಕ್ಕೂ ಸನ್ನಿವೇಶ ದುಸ್ಸಹವಾಗುತ್ತಿದ್ದಿತು. ಮಾಧವರಾಯನ ಮತ್ತು ಇತರರ ಇಷ್ಟದಂತೆ ರಾಮದಾಸನು ಪ್ರಸಾದವಿನಿಯೋಗ ಮಾಡಬೇಕಾಯಿತು. ರಾಮದಾಸನ ಕೈಯಿಂದ ಪ್ರಸಾದವನ್ನು ಸ್ವೀಕರಿಸಲು ಬ್ರಾಹ್ಮಣರು ಗೊಣಗಿದರು. ಆದಾಗ್ಯೂ ಕೆಲವರು ಅತ್ಯಂತ ಅಸಮಾಧಾನದಿಂದ ಪ್ರಸಾದವನ್ನು ತೆಗೆದುಕೊಂಡರು. ಒಬ್ಬನು ಮಾತ್ರ ಮರೆಮಾಚದೆ ಪ್ರತಿಭಟಿಸಿದನು. ಈತನ ಹೆಸರೂ “ ರಾಮದಾಸ.” ಇಲ್ಲಿಂದ ಮುಂದೆ ಈತನನ್ನು ‘ ಬ್ರಾಹ್ಮಣ ರಾಮದಾಸ ’ ನೆಂದು ಕರೆಯಲಾಗುತ್ತದೆ. ಈತನು ಎದ್ದುನಿಂತು ಪ್ರತಿಭಟಿಸುತ್ತಾ, ರಾಮದಾಸನನ್ನು ತೋರಿಸಿ “ ನಾನು ಈತನ ಕೈಯಿಂದ ಪ್ರಸಾದವನ್ನು ಸ್ವೀಕರಿಸಿ ಪತಿತನಾಗಲಾರೆ ” ಎಂದು ಹೇಳಿದನು.

ಈ ಬಿರುನುಡಿ ಗುಂಪಿನಲ್ಲಿ ಒಂದು ಸಿಡಿಮದ್ದು ಒಡೆದಂತೆ ಮಾಧವರಾಯನನ್ನೂ ಮತ್ತು ನೆರೆದಿದ್ದ ಸಮೂಹವನ್ನೂ ಸ್ತಬ್ಧರನ್ನಾಗಿಮಾಡಿತು. ರಾಮದಾಸನು ನಸುನಕ್ಕು ಆತನ ಮಾತನ್ನು ಗಮನಿಸಬೇಕಾದುದಿಲ್ಲವೆಂದೂ ಆ ಮಾತುಗಳಿಂದ ಕೆಡಕೇನೂ ಆಗಿಲ್ಲವೆಂದೂ ಹೇಳಿದನು. ಇತರ ಬ್ರಾಹ್ಮಣರು ಬ್ರಾಹ್ಮಣ

ರಾಮದಾಸನ ನಿರ್ಭೀತ ನಾಯಕತ್ವವನ್ನು ಕಂಡು ಆತನಪಕ್ಷ ಸೇರಿ ಸಾಮೂಹಿಕ ಪ್ರತಿಭಟನೆಗೆ ಪ್ರಾರಂಭಿಸಿದರು. ಮಾಧವರಾಯನಿಗೆ ಬಹಳ ಭಯವಾಯಿತು. ಅಲ್ಲಿಯವರೆಗೂ ಸುಗಮವಾಗಿ ನಡೆದ ಉತ್ಸವಕ್ಕೆ ವಿಘಾತವಾಗುವುದೆಂದು ಅವನು ಹೆದರಿದನು. ಅವನು ರಾಮದಾಸನ ಸ್ವಭಾವವನ್ನು ಚೆನ್ನಾಗಿ ತಿಳಿದಿದ್ದನು. ಅಸಮಾಧಾನಕ್ಕೂ, ಕಾರ್ಯ ವಿಘ್ನಕ್ಕೂ ಅವಕಾಶವಾಗದಿರಲು ಈ ಬ್ರಾಹ್ಮಣರಿಗೆ ರಾಮದಾಸನ ಸಂಪರ್ಕವಾಗದಂತೆ ನೋಡಿಕೊಂಡನು. ಅದುವರೆಗೆ ಭೋಜನ ಸಮಯದಲ್ಲಿ ರಾಮದಾಸನೂ ಬ್ರಾಹ್ಮಣರೂ ಒಂದೇ ಪಂಕ್ತಿಯಲ್ಲಿ ಕೂಡುತ್ತಿದ್ದರು. ಈಗ ಭೋಜನಕ್ಕೆ ಕೂಡಿಸುವುದರಲ್ಲಿ ಮಾಧವರಾಯನು ಯಾರಿಗೂ ಪ್ರಾಶಸ್ತ್ಯ ಕಂಡುಬಾರದಂತೆ ಮಾರ್ಪಾಡು ಮಾಡಿದನು. ಅಸಮಾಧಾನಕ್ಕೆ ಕಾರಣವಾಗಬಹುದಾದ ಯಾವ ಘಟನೆಗಳೂ ಉಂಟಾಗದೆ ಉತ್ಸವವೇನೋ ಸಾಂಗವಾಗಿ ಮುಕ್ತಾಯವಾಯಿತು. ಆದರೂ ಬ್ರಾಹ್ಮಣರು ಕೊನೆಯವರೆಗೂ ಯಾವಕಾಲಕ್ಕೆ ಏನು ಘಟನೆ ನಡೆಯುತ್ತದೆಯೋ ಎಂಬ ಭಯ ತಪ್ಪದಂತೆ ನಡೆದುಕೊಂಡರು. ರಾಮದಾಸನಾದರೆ ಎಲ್ಲವೇಳೆ ಈ ದೃಶ್ಯವನ್ನು ವಿನೋದದಿಂದ ಈಕ್ಷಿಸುತ್ತಿದ್ದನು. ಆದರೆ ಈ ವಿಚಾರ ಇಲ್ಲಿಗೆ ಮುಗಿಯಲಿಲ್ಲ.

ಈ ಮಧ್ಯೆ ನೆರೆಯ ಗ್ರಾಮಕ್ಕೆ ಹೋಗಲು ರಾಮದಾಸನಿಗೆ ಆಹ್ವಾನ ಬಂದಿತು. ಈ ವಿಚಾರವನ್ನು ತಿಳಿದ ಬ್ರಾಹ್ಮಣ ರಾಮದಾಸನು, ಪೂರ್ವಭಾವಿಯಾಗಿ ಆ ಗ್ರಾಮಕ್ಕೆ ಹೋಗಿ, ಆಹ್ವಾನಕೊಟ್ಟಿದ್ದ ಭಕ್ತನನ್ನು ಕಂಡು, ರಾಮದಾಸನನ್ನು ಅಲ್ಲಿಗೆ ಕರೆದುಕೊಂಡು ಹೋಗಬಾರದೆಂದು ಎಚ್ಚರಿಕೆ ಕೊಟ್ಟನು. ರಾಮದಾಸನು ಸಾಧುವೇಷದ ಒಬ್ಬ ವಂಚಕನೆಂದೂ, ಆತನ ವಿಚಾರ ತಮಗೇನು ಗೊತ್ತು, ಆತನು ಜಾತಿಹೀನನಿರಬಹುದೆಂದೂ, ತಮ್ಮಂಥ ಬ್ರಾಹ್ಮಣರೊಂದಿಗೆ ವ್ಯವಹರಿಸಲು ಯೋಗ್ಯನಲ್ಲವೆಂದೂ ತಿಳಿಸಿದನು. ರಾಮದಾಸನ ವಿಚಾರ ಒಳ್ಳೆಯ ಪ್ರಚಾರ ಆಯಿತು.

ಈ ಭಕ್ತನು ಅನಗರ್ ಗ್ರಾಮದ ಬಲವಂತರಾವ್. ಅನಗರ್ ಆ ನೆರೆಯ ಗ್ರಾಮದ ಹೆಸರು. ಬಲವಂತರಾಯನು ಈ ಮಾತುಗಳಿಂದ ಮಾರ್ಪಡಲಿಲ್ಲ. ಹಿಂದೆ ಬಂದಿದ್ದಾಗ ಈತನಿಗೆ ರಾಮದಾಸನ ಪರಿಚಯವಾಗಿದ್ದಿತು. ಈತನು ಕೇವಲ ವಾತ್ಸಲ್ಯವಂತನು ಮತ್ತು ಪ್ರೇಮಮೂರ್ತಿ. ಈತನು ಅಂಜನಗಾಮಿಗೆ ಬಂದು ರಾಮದಾಸನನ್ನು ಕರೆದುಕೊಂಡು ಹೋದನು. ಮಾಧವರಾವ್ ಮತ್ತು ಈತನ ಮನೆಯವರು ಸೇರಿ ಸುಮಾರು ಐವತ್ತು ಜನ ಗ್ರಾಮಸ್ಥರು ಇವರ ಜೊತೆಯಲ್ಲೇ ಬಂದರು. ಸರಳ ಮತ್ತು ಪರಿಶುದ್ಧಭಾವದ ಈ ಹಳ್ಳಿಗರ ಹೃದಯದಲ್ಲಿ ದೈವೀಪ್ರೇಮ ಪೂರ್ಣವಾಗಿ ವರ್ತಿಸುತ್ತಿದ್ದಿತು. ಮೂರುಮೈಲಿ ದಾರಿಯನ್ನು ನಡೆದು, ರಾಮದಾಸನು ಸಂಗಡಿಗರೊಂದಿಗೆ ಅನಗರ್ ಗ್ರಾಮವನ್ನು ಮುಟ್ಟಿದನು.

ಬ್ರಾಹ್ಮಣ ರಾಮದಾಸನು ಅಲ್ಲಿ ಸಿದ್ಧನಾಗಿದ್ದನು. ಅವನು ರಾಮದಾಸನ ಸಮೀಪಕ್ಕೆ ಬಂದು ಕುಳಿತುಕೊಂಡನು. ಆತನ ನೋಟ ತಿರಸ್ಕಾರದಿಂದ ತುಂಬಿದ್ದಿತು. ಆತನ ನಡತೆಯೋ ಅವಿಶ್ವಾಸ ಮತ್ತು ದರ್ಪದಿಂದ ಕೂಡಿದ್ದಿತು. ಇಷ್ಟು ಹೊತ್ತಿಗೆ ರಾಮದಾಸನ ಸುತ್ತ ದೊಡ್ಡ ಗುಂಪೇ ಸೇರಿದ್ದಿತು. ಅವನನ್ನು ಬ್ರಾಹ್ಮಣ ರಾಮದಾಸನು "ಪಂಚೀಕರಣವೆಂದರೇನು?" ಎಂದು ಪ್ರಶ್ನೆ ಕೇಳಿದನು.

ರಾಮದಾಸನು ತಾನು ಪಂಡಿತನಲ್ಲ, ಈ ವಿಚಾರದಲ್ಲಿ ತನ್ನ ಜ್ಞಾನ ಬಹಳ ಸ್ವಲ್ಪ ಎಂದು ಉತ್ತರಕೊಟ್ಟನು. ಇದನ್ನು ಕೇಳಿ ಬ್ರಾಹ್ಮಣ ರಾಮದಾಸನು ಗಹಗಹಿಸಿ ನಗುತ್ತಾ, ಅಲ್ಲಿ ನೆರೆದಿದ್ದವರಿಗೆ ರಾಮದಾಸನು ಒಬ್ಬ ಮೋಸಗಾರ, ಅವನ ಏಕಮಾತ್ರ ಗುಣ ಎಂದರೆ ಅವನಲ್ಲಿದ್ದ ಗಾಢವಾದ ಅಜ್ಞಾನ, ಇಂಥ ಮನುಷ್ಯನಿಗೆ ಮರ್ಯಾದೆಮಾಡಲು ಬಂದಿದ್ದ ಅವರೆಲ್ಲ ನಿಜವಾಗಿ ಹುಚ್ಚರು ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಇದನ್ನು ಕೇಳಿದವರಿಗೆ ಈ ಸ್ಪಷ್ಟನಿಂದೆ ರುಚಿಸಲಿಲ್ಲ. ಅವರು ತಲೆ ತಗ್ಗಿಸಿಕೊಂಡರು. ರಾಮದಾಸನೋ ವಾಡಿಕೆಯ ಕಿರುನಗೆಯನ್ನು ಬೆಳಸಿ ಶೀರಾಶಾಂತನಾಗಿ ಸುಮ್ಮನೆ ಕುಳಿತಿದ್ದನು. ನೂರಾರುಜನ ಬಲವಂತರಾಯನ ಮನೆಗೆ ಬಂದು ತಮ್ಮ ಸತ್ಸಂಗ ಸುಖವನ್ನು ರಾಮದಾಸನಿಗೆ ಒದಗಿಸಿದರು. ರಾಮದಾಸನ ಮೇಲೆ ಅವರಿಗಿದ್ದ ಪ್ರೀತಿ ಅತಿಶಯವಾದುದು. ಬ್ರಾಹ್ಮಣ ರಾಮದಾಸನು ಮಾತ್ಸರ್ಯದಿಂದ ಬೆಂಕಿಬೆಂಕಿಯಾದನು. ಈ ರೀತಿ ಆದಿನ ಕಳೆಯಿತು. ಮಾರನೆಯ ದಿನ ದೊಡ್ಡ ಸಂತರ್ಪಣೆಗೆ ಏರ್ಪಾಡಾಯಿತು. ಬ್ರಾಹ್ಮಣ ರಾಮದಾಸನು ಭೋಜನಕ್ಕೆ ಬರುವುದಿಲ್ಲವೆಂದು ಪ್ರಕಾಶವಾಗಿಯೇ ತಿಳಿಸಿದನು.

ಸಾಯಂಕಾಲದಲ್ಲಿ ಬ್ರಾಹ್ಮಣ ರಾಮದಾಸನು ಹರಿಕಥೆ ಮಾಡುವುದಾಗಿ ಸೂಚಿಸಿದನು. ಇಂಥ ಸಮಯದಲ್ಲಿ ರಾಮದಾಸನನ್ನು ಒಂದು ಉನ್ನತಾಸನದಲ್ಲಿ ಕುಳ್ಳಿರಿಸಿ, ಅವನ ಸಮ್ಮುಖದಲ್ಲಿ ಸಾವಿರಾರು ಜನಗಳ ಮಧ್ಯೆ, ಹರಿಕಥೆ ಮಾಡುವುದು ಪದ್ಧತಿ. ಈಗ ಹಾಗೆಯೇ ಏರ್ಪಾಡಾಯಿತು. ತನ್ನ ಉದ್ದೇಶ ಸಾಧನೆಗಾಗಿ ಈ ಸನ್ನಿವೇಶವನ್ನುಂಟುಮಾಡಿದ್ದ ಬ್ರಾಹ್ಮಣ ರಾಮದಾಸನು, ರಾಮದಾಸನಿಗೆ ವಿರೋಧವಾಗಿ ಒಂದು ಆವೇಶಪೂರಿತ ದೂಷಣ ಪ್ರಬಂಧವನ್ನು ಸಾರಿದನು. ಡಾಂಭಿಕಸಾಧುವಿನ ಗುಣಗಳನ್ನು ವಿಸ್ತಾರವಾಗಿ ಪ್ರಶಂಸಿಸುತ್ತ, ಹರಿಕಥೆಯನ್ನು ಈ ಮುಕ್ತಾಯವಾಕ್ಯಗಳಿಂದ ಸಮಾಪ್ತಿಮಾಡಿದನು: "ದುಷ್ಟರೂ ಮೋಸಗಾರರೂ ಸಂನ್ಯಾಸಿಗಳ ಮತ್ತು ಸಾಧುಗಳ ವೇಷದಿಂದ ಕಾಣಿಸುತ್ತಿದ್ದಾರೆ. ಅವರ ವಿಚಾರದಲ್ಲಿ ಎಚ್ಚರವಾಗಿರಿ! ಮಂದಬುದ್ಧಿಯವರು ಮಾತ್ರ ಅಂತಹವರನ್ನು ಹಿಂಬಾಲಿಸುತ್ತಾರೆ, ಅಂತಹವರನ್ನು ದೊಡ್ಡಸ್ತಿಕೆಗೆ ಏರಿಸುತ್ತಾರೆ, ಕೊನೆಗೆ ಅವರ ಕೌಟಿಲ್ಯ ತಂತ್ರಗಳಿಗೆ ಸುಲಭವಾಗಿ ಬಲಿಯಾಗುತ್ತಾರೆ."

ಈ ಬೈಗಳ ಹೊಸ ದೀಕ್ಷೆಯಿಂದ ರಾಮದಾಸನಿಗೆ ಏನೂ ತೊಂದರೆಯಾಗಲಿಲ್ಲ. ಇದು ದೈವೇಚ್ಛೆಯೆಂದು ತಿಳಿದು, ಯಾವ ವ್ಯಾಕುಲವೂ ಇಲ್ಲದೆ ಅವನು ಶಾಂತನಾಗಿದ್ದನು.

### (ii) ಆಶ್ಚರ್ಯಕರವಾದ ಮಾರ್ಪಾಡು

ಎರಡು ದಿವಸಗಳನಂತರ ಆ ಊರಿನ ಒಬ್ಬ ಧರ್ಮಿಷ್ಠ ವರ್ತಕನು, ಒಂದು ಭೋಜನಕ್ಕೆ ಏರ್ಪಾಡು ಮಾಡಿದನು. ಆ ಕಾಲದಲ್ಲಿ ರಾಮದಾಸನು ವಿಶೇಷವಾಗಿ ಕ್ಷೀರವ್ರತವನ್ನು ಆಚರಿಸುತ್ತಿದ್ದನು. ಎರಡುಮೂರು ದಿನಕ್ಕೊಂದು ಸಾರಿ ಭೋಜನಕೂಟದಲ್ಲಿ ಭಾಗಿಯಾಗಿ ಸ್ವಲ್ಪವೇ ಆಹಾರವನ್ನು ತೆಗೆದುಕೊಳ್ಳುತ್ತಿದ್ದನು. ಈ ಭೋಜನಕ್ಕೂ ಬ್ರಾಹ್ಮಣ ರಾಮದಾಸನಿಗೆ ಆಹ್ವಾನ ಕೊಟ್ಟಿದ್ದರು. ಆದರೆ ಆತನು ಹೊತ್ತಿಗೆ ಬರಲಿಲ್ಲ. ಭೋಜನಕ್ಕೆ ಬಂದವರು ಅವನ ಆಗಮನವನ್ನು ನಿರೀಕ್ಷಿಸುತ್ತಾ ಕಾದಿದ್ದರು. ಆದರೂ ಅವನ ಸುಳಿವೇ ಇಲ್ಲ. ವರ್ತಕನು ಅವನನ್ನು ಕರೆತರಲು ಹೊರಟನು. ಹುಡುಕಿ ಕಂಡುಹಿಡಿದು ಬಹು ಬೇಡಿ ಒತ್ತಾಯಪಡಿಸಿದ ಮೇಲೆಯೇ ಅವನನ್ನು ಭೋಜನಕ್ಕೆ ಬರುವಂತೆ ಒಪ್ಪಿಸಿ ಆಯಿತು. ಆತನು ಕೊನೆಗೆ ಬಂದನು. ಅವನ ಮುಖ ಕಂದಿದ್ದಿತು, ಮುಖಮುದ್ರೆ ಕಂಗೆಟ್ಟಿದ್ದಿತು, ಕಣ್ಣುಗುಡ್ಡುಗಳು ಒಳಕ್ಕೆ ಇಳಿದಿದ್ದುವು. ಅವನನ್ನು ಅಸೂಯೆ ಬೇಯಿಸುತ್ತಿರುವುದು ವ್ಯಕ್ತವಾಗಿದ್ದಿತು. ಆತನು ಬಂದುದನ್ನು ನೋಡಿ ರಾಮದಾಸನಿಗೆ ನಿಜವಾಗಿ ಸಂತೋಷ ಉಂಟಾಯಿತು. ಆತನಿಗೆ ಮೊದಲು ಬಡಿಸಬೇಕೆಂದು ರಾಮದಾಸನು ವರ್ತಕನಿಗೆ ತಿಳಿಸಿದನು. ಬ್ರಾಹ್ಮಣ ರಾಮದಾಸನು "ಇಲ್ಲ, ಇಲ್ಲ. ನಾನು ಈದಿನ ಊಟಮಾಡುವುದಿಲ್ಲ. ಉಪವಾಸಮಾಡುತ್ತೇನೆಂದು ಪ್ರತಿಜ್ಞೆ ಮಾಡಿದ್ದೇನೆ" ಎಂದನು.

ಸ್ವಲ್ಪ ಸಿಹಿ ತಿಂಡಿಯನ್ನಾದರೂ ತೆಗೆದುಕೊಳ್ಳಬೇಕೆಂದು ರಾಮದಾಸನು ಅವನನ್ನು ಬೇಡಿಕೊಂಡನು. ಅವನು ಕೊಂಚಕಾಲ ಯೋಚನಾಪರನಾಗಿದ್ದು ನಂತರ ಸ್ವಲ್ಪ ತಿನ್ನುವುದಾಗಿ ಒಪ್ಪಿಕೊಂಡನು. ಇದರಿಂದ ರಾಮದಾಸನಿಗೇ ಅಲ್ಲದೆ ಎಲ್ಲರಿಗೂ ಅತ್ಯಂತ ಸಂತೋಷವಾಯಿತು. ಅನಂತರ ಆತನಿಗೆ ಕೆಲವು ಲಾಡುಗಳನ್ನು ಬಡಿಸಿದರು. ಆತನು ಸ್ವೀಕರಿಸುವವರೆಗೂ ಇತರರು ಭೋಜನಕ್ಕೆ ಪ್ರಾರಂಭ ಮಾಡಬಾರದೆಂದು ರಾಮದಾಸನು ಕೇಳಿಕೊಂಡನು. ಆತನು ಮೂರು ನಾಲ್ಕು ಲಾಡುಗಳನ್ನು ತಿಂದನು. "ಓ ಪ್ರೀತಿಮೂರ್ತಿಯಾದ ಭಗವಂತನೇ, ನಿನಗೆ ಜಯವಿರಲಿ. ಕೊನೆಗೆ ನೀನೇ ಜಯಶಾಲಿಯಾದೆ!"

ಬ್ರಾಹ್ಮಣ ರಾಮದಾಸನು ಸ್ವಲ್ಪ ಅಸುಖಿಯಾಗಿದ್ದುದು ಕಂಡುಬಂದಿತು. ತಾನು ತೋರ್ಪಡಿಸಿದ ಕಾಠಿಣ್ಯ ಮತ್ತು ದ್ವೇಷಕ್ಕೆ ಪ್ರತಿಯಾಗಿ ದೊರೆತ ಆದರ

ಮತ್ತು ಪ್ರೀತಿಯಿಂದ ಅವನು ಸೋತಂತಾದನು. ಇದ್ದಂತೆ ಅವನು ಅಲ್ಲಿಂದ ಹೊರಟುಹೋದನು. ಆ ದಿನ ಸಾಯಂಕಾಲ ನಾಲ್ಕು ಗಂಟೆಗೆ ಒಬ್ಬ ಭಕ್ತನು ತನ್ನ ಮನೆಯಲ್ಲಿ ಅದೇ ಗ್ರಾಮದ ಒಬ್ಬ ವೃದ್ಧ ಹರಿದಾಸನಿಂದ ಕಥೆ ಮಾಡಿಸಿದನು. ಸರಿ, ರಾಮದಾಸನು, ರಾಮಚರಣದಾಸ ಭವಾನಿಶಂಕರರಾಯರೊಂದಿಗೆ ಹರಿಕಥೆ ಕೇಳಲು ಹೋದನು. ರಾಮಚರಣದಾಸನೂ ಭವಾನೀಶಂಕರರಾಯನೂ ಸಾಧಾರಣವಾಗಿ ಸಾಯಂಕಾಲ ಐದುಗಂಟೆಯಾದಮೇಲೆ ಊರಿನೊಳಗೆ ಇರುತ್ತಿರಲಿಲ್ಲ. (ಊರಿನ ಸಮೀಪದ ಗುಡ್ಡಕ್ಕೆ ಹೋಗಿ ರಾತ್ರಿಯನ್ನು ರಾಮನಾಮ ಸ್ಮರಣೆಯಲ್ಲೂ ಧ್ಯಾನದಲ್ಲೂ ಕಳೆಯುತ್ತಿದ್ದರು.) ಕೀರ್ತನೆ ಇನ್ನೂ ನಡೆಯುತ್ತಿದ್ದಾಗ ಇವರಿಬ್ಬರೂ ತಮ್ಮ ಪದ್ಧತಿಯ ಹೊತ್ತಿನಲ್ಲಿ ಆ ಸ್ಥಳವನ್ನು ಬಿಟ್ಟು ಬೆಟ್ಟದ ಕಡೆಗೆ ಹೊರಟುಹೋದರು.

ಈಗ ಒಂದು ಆಶ್ಚರ್ಯಕರವಾದ ಘಟನೆ ನಡೆಯಿತು. ಒಂದು ವರ್ಷದ ಹಿಂದೆ ರಾಮದಾಸನನ್ನು ನೋಡಿದ್ದ, ಆದರೆ ರಾಮದಾಸನು ಈ ಸಲ ಅಂಜನಗಾಮಿಗೆ ಹೋಗಿದ್ದಾಗ ಊರಿನಲ್ಲಿ ಇಲ್ಲದಿದ್ದ, ಕೆಲವರು ಗ್ರಾಮಸ್ಥರು ರಾಮದಾಸನನ್ನು ನೋಡುವುದಕ್ಕಾಗಿ ಜಾಗ್ರತೆಯಾಗಿ ಬರುತ್ತಿದ್ದರು. ದಾರಿ, ರಾಮಚರಣದಾಸ ಮತ್ತು ಭವಾನೀಶಂಕರರಾಯರು ಕುಳಿತಿದ್ದ ಗುಡ್ಡದ ಮಗ್ಗುಲಲ್ಲಿ ಇದ್ದಿತು. ಗುಡ್ಡದ ಸಮೀಪಕ್ಕೆ ಬಂದಾಗ, ಮಧ್ಯೆ ರಾಮದಾಸ, ಅವನ ಎರಡು ಪಕ್ಕಗಳಲ್ಲಿ ರಾಮಚರಣದಾಸ ಮತ್ತು ಭವಾನೀಶಂಕರರಾಯ, ಈ ಮೂವರು ಕುಳಿತಿದ್ದಂತೆ ಅವರಿಗೆ ಕಾಣಿಸಿತು. ಇದರಿಂದ ಅವರಿಗೇನೂ ಆಶ್ಚರ್ಯವಾಗಲಿಲ್ಲ. ರಾಮದಾಸನು ಇಬ್ಬರು ಸ್ನೇಹಿತರೊಂದಿಗೆ ಗುಡ್ಡಕ್ಕೆ ವಿಹಾರಾರ್ಥವಾಗಿ ಬಂದಿರಬಹುದೆಂದು ಯೋಚಿಸಿದರು. ಮೂವರೂ ಧ್ಯಾನಾಸಕ್ತರಾಗಿದ್ದಂತೆ ಕಂಡುಬಂದುದರಿಂದ ಧ್ಯಾನಭಂಗ ಮಾಡಲು ಅವರಿಗೆ ಇಷ್ಟಬರಲಿಲ್ಲ.

ಕತ್ತಲಾದನಂತರ ರಾಮದಾಸನು ಹಿಂದಿರುಗಿದ ಮೇಲೆ ದರ್ಶನ ಮಾಡಬಹುದೆಂದು ಇವರು ಅನಗರ್ ಗ್ರಾಮಕ್ಕೆ ನೇರವಾಗಿ ಬಂದರು. ಗ್ರಾಮದೊಳಕ್ಕೆ ಪ್ರವೇಶಿಸುತ್ತಿದ್ದ ಹಾಗೆ ತಾಳದ ಶಬ್ದ ಕೇಳಿಸಲು ಕೀರ್ತನ ಸ್ಥಳಕ್ಕೆ ನೆಟ್ಟಗೆ ಬಂದರು. ಇಲ್ಲಿ ನೋಡಿದರೆ ಅವರ ಆಶ್ಚರ್ಯಕ್ಕೆ ಮೇರೆಯೇ ಇಲ್ಲ. ಕೆಲವು ನಿಮಿಷದ ಹಿಂದೆ ಗುಡ್ಡದ ಮೇಲೆ ರಾಮದಾಸನು ಕುಳಿತಿದ್ದುದನ್ನು ಕಣ್ಣಾರೆ ಕಂಡಿದ್ದರು. ಆದರೆ ಈಗ ನೋಡಿದರೆ ಈ ಕೀರ್ತನೆಯ ಮಧ್ಯೆ ಕುಳಿತು ಕೀರ್ತನೆಯನ್ನು ಕೇಳುತ್ತಿದ್ದಾನೆ! ಏನಿದು? ರಾಮದಾಸನು ಬೆಟ್ಟದ ಮೇಲೂ ಸಿದ್ಧ! ಅದೇ ಕಾಲದಲ್ಲಿ ಬೇರೆಕಡೆ ಕೀರ್ತನೆಯಲ್ಲೂ ಸಿದ್ಧ! ಇವರಿಗೆ ಭ್ರಮೆಯಾಯಿತು. ಈ ವಿಚಾರವನ್ನು ಇವರು ಕೀರ್ತನ ಸಭೆಯಲ್ಲಿ ಕುಳಿತಿದ್ದ ಬ್ರಾಹ್ಮಣ ರಾಮದಾಸನಿಗೆ ತಿಳಿಸಿದರು. ಈ ಯಕ್ಷಣೀ ಪ್ರಸಂಗ ಬ್ರಾಹ್ಮಣ ರಾಮದಾಸನ ಮೇಲೆ ಬಹು ಪ್ರಭಾವವನ್ನು ಬೀರಿತು.

ರಾತ್ರಿ ಎಂಟು ಗಂಟೆ ಸಮಯದಲ್ಲಿ ರಾಮದಾಸನು ಭಕ್ತರೊಂದಿಗೆ ಹಾಲು ಕುಡಿಯುತ್ತಿದ್ದಾಗ ಅವನನ್ನು ಬ್ರಾಹ್ಮಣ ರಾಮದಾಸನು ಸಂಧಿಸಿದನು. ಈ ಮಧ್ಯೆ ರಾಮದಾಸನ ವಿಷಯಕ್ಕೆ ಇವನ ನಿಲುವು ಪೂರ್ತಿಯಾಗಿ ಮಾರ್ಪಾಡಾಗಿದ್ದಿತು. ಇವನು ರಾಮದಾಸನ ಕಾಲಿಗೆ ಬಿದ್ದು ಬಿಕ್ಕಿ ಬಿಕ್ಕಿ ಅತ್ತನು; ತಾನು ಪಾಪಿಯೆಂದು ಬಹು ಕಠಿಣವಾದ ಮಾತುಗಳಿಂದ ಹೀಯಾಳಿಸಿಕೊಂಡನು; ತನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಏನು ವಿಚಾರವೆಂದು ರಾಮದಾಸನು ಪ್ರಶ್ನಿಸಿದಾಗ ಉಭಯ ಸ್ಥಳಗಳಲ್ಲೂ ಕಂಡುಬಂದ ವ್ಯಕ್ತಿಯ ಕಥೆ ತಿಳಿಯಿತು. ಈ ವಿಚಾರವನ್ನು ಕೇಳುತ್ತಿದ್ದಾಗ ರಾಮದಾಸನಿಗೆ ರೋಮಾಂಚವಾಯಿತು; ಕಣ್ಣುಗಳಲ್ಲಿ ನೀರು ತುಂಬಿತು; ಶರೀರಾದ್ಯಂತವೂ ವಿವರಿಸಲಸದಳವಾದ ಆನಂದದಿಂದ ಪುಳಕಿತವಾಯಿತು. "ಇದೆಲ್ಲ ರಾಮನ ಮಹಿಮೆ. ಅವನ ಮಾರ್ಗ ಅತರ್ಕ್ಯ!" ಎಂದು ಮಾತ್ರ ಮೆಲ್ಲಗೆ ಅವನು ಅಂದುಕೊಂಡನು. ಮರುದಿನದಿಂದ ರಾಮದಾಸನು ಆನಗರನ್ನು ಬಿಟ್ಟುಹೋಗುವವರೆಗೂ ಬ್ರಾಹ್ಮಣ ರಾಮದಾಸನು ಎಲ್ಲ ಸಂತೋಷಕೂಟಗಳಲ್ಲೂ ಮನಃಪೂರ್ವಕವಾಗಿ ಭಾಗಿಯಾಗಿ ರಾಮದಾಸನೊಂದಿಗೆ ಗಾಢವಾಗಿ ಸೇರಿ ನಡೆದುಕೊಂಡನು; ರಾಮದಾಸನ ವಿಚಾರದಲ್ಲಿ ಸ್ಪಷ್ಟವಾಗಿ ಪ್ರೀತಿ, ಆದರ, ಗೌರವಗಳನ್ನು ತೋರಿಸಿದನು. ಇದು ಎಂತಹ ವಿಚಿತ್ರ ಪರಿವರ್ತನ! (ನಿಜವಾಗಿ ನೋಡಿದರೆ ದೈವಿಕ ಪ್ರೇಮಕ್ಕಿಂತ ಬಲವಾದ ಶಕ್ತಿ ಇಲ್ಲ)!

---

# ಅಧ್ಯಾಯ ೧೨

## ಉಪಲಾಯಿ-ಪಂಢರಪುರ-ರೈಲಿನಲ್ಲಿ

### (i) ದೆವ್ವ ಬಿಡಿಸಿದುದು

ಆನಗರ್‌ನಿಂದ ರಾಮದಾಸನು, ರಾಮಚರಣದಾಸ ಭವಾನೀಶಂಕರರಾಯ ಮತ್ತು ಇತರರೊಂದಿಗೆ ಉಪಲಾಯಿಗೆ ಹೋಗಿ ಅಲ್ಲಿ ಹಿಂದಿನಂತೆ ಗೋವಿಂದ ಜೋಷಿಯ ಮನೆಯಲ್ಲಿ ಇಳಿದುಕೊಂಡನು. ಇಲ್ಲಿಯೂ ಪುನಃ ಮೂರು ದಿನ ಜಲಾಹಾರ ವ್ರತವನ್ನಾಚರಿಸಿದನು. ಇವನನ್ನು ನೋಡುವುದಕ್ಕೆ ಅನೇಕ ಜನರು ಗುಂಪುಗುಂಪಾಗಿ ಬಂದರು. ಗೋವಿಂದಜೋಷಿಯ ಹೆಂಡತಿ ಈ ಜಲಾಹಾರ ವ್ರತಕ್ಕಾಗಿ ಬಹಳ ಕಳವಳಗೊಂಡಳು. ಆ ತಾಯಿಯ ಹೃದಯ ರಾಮದಾಸನಿಗಾಗಿ ವ್ಯಥೆಗೊಂಡಿತು. ವ್ರತದ ಕಾಲದಲ್ಲಿ ಇವನು ಸ್ವಲ್ಪ ಕ್ಷೀರವನ್ನಾದರೂ ತೆಗೆದುಕೊಳ್ಳಬೇಕೆಂದು ಆಕೆ ಬಹುಸಲ ಪ್ರಾರ್ಥಿಸಿಕೊಂಡಳು; ರಾಮದಾಸನು ತೆಗೆದುಕೊಳ್ಳಲಿಲ್ಲ. ಆಗ ಚಳಿಗಾಲವಾದುದರಿಂದ ಗೋವಿಂದಜೋಷಿಯು

ತುಂಬಿಹರಿಯುವ ಪ್ರೀತಿಯಿಂದ ರಾಮದಾಸನಿಗೆ ಉಣ್ಣೆಯ ಒಂದು ಕೆಂಪು ಶಹಲನ್ನು ಮತ್ತು ಉಣ್ಣೆಯ ಒಂದು ಟೋಪಿಯನ್ನು ಕೊಟ್ಟನು. ಆ ಕೆಂಪು ಶಹಲನ್ನು ರಾಮದಾಸನು ರಾಮಚರಣದಾಸನಿಗೆ ಕೊಟ್ಟುಬಿಟ್ಟನು. ನಾಲ್ಕನೆಯ ದಿವಸ ಆ ಊರಿನವರು ವಿಠೋಬ ದೇವಸ್ಥಾನವಲ್ಲಿ ಸಮಾರಾಧನೆಗೆ ಏರ್ಪಡಿಸಿದರು. ಆ ಸಮಾರಾಧನೆಯಲ್ಲಿ ಎಲ್ಲ ಜಾತಿಯವರೂ ಸೇರಿ ಊಟ ಮಾಡಿದರು.

ಗೀತೆಯನ್ನು ಚನ್ನಾಗಿ ಅಭ್ಯಸಿಸಿ ಇದನ್ನು ವಿವರಿಸುವುದರಲ್ಲಿ ಅದ್ವಿತೀಯನಾಗಿದ್ದ ಮಾರುತಿ ಎಂಬ ಹುಡುಗನು ಸಮಾರಾಧನೆಯ ಪ್ರಾತಃಕಾಲ ರಾಮದಾಸನನ್ನು ತನ್ನ ಮನೆಗೆ ಬರಬೇಕೆಂದು ಕರೆದನು. ರಾಮದಾಸನು ಒಪ್ಪಿ ಸುಮಾರು ಐವತ್ತು ಮಂದಿಯನ್ನು ಕರೆದುಕೊಂಡು ಇವನ ಮನೆಗೆ ಹೋದನು. ಎಲ್ಲರೊಂದಿಗೆ ಮನೆಯ ಈಚಿನ ಕೈಸಾಲೆಯಲ್ಲಿ ಕುಳಿತನು. ಆ ಮನೆಯ ಒಬ್ಬ ಹೆಂಗಸನ್ನು ಈಚೆಗೆ ಕರೆದುಕೊಂಡು ಬಂದು ರಾಮದಾಸನ ಎದುರಿಗೆ ಅಂಗಳದಲ್ಲಿ ಕುಳ್ಳಿರಿಸಿದರು.

"ಈಕೆಗೆ ದೆವ್ವ ಹಿಡಿದಿದೆ. ಇವಳ ಮೇಲೆ ದಯವಿಟ್ಟು ಕೃಪೆ ಮಾಡಬೇಕು" ಎಂದು ಮಾರುತಿ ಕೇಳಿಕೊಂಡನು.

ರಾಮದಾಸನು ಆಕೆಯನ್ನು ನೋಡಿದನು. ಅವಳ ಉದ್ದವಾದ ತಲೆಗೂದಲು ಬಿಚ್ಚಿ ಭುಜದ ಮೇಲೂ ಕೈಮೇಲೂ ಸಿಕ್ಕಿದಂತೆ ಇಳಿದುಬಿದ್ದಿದೆ; ಮುಖ ಅಸಾಧಾರಣವಾಗಿ ಕೆಂಪೇರಿದೆ; ಕಣ್ಣು ಬಿರಿಬಿರಿ ತೆರೆದು ಆಲಿಗಳು ವಿಕಾರವಾಗಿ ತಿರುಗುತ್ತಿವೆ. ರಾಮದಾಸನ ಕಣ್ಣುಗಳು ಅವಳ ಕಣ್ಣುಗಳನ್ನು ದೃಷ್ಟಿಸಿದೊಡನೆ ಆಕೆ ಕಿರಿಚುತ್ತ ತನ್ನ ತಲೆ ಕೂದಲನ್ನು ಕೀಳುವುದಕ್ಕೆ ಪ್ರಾರಂಭಿಸಿದಳು. ಆಗ ರಾಮದಾಸನು ಸಾಮೂಹಿಕವಾಗಿ ದೇವರ ನಾಮವನ್ನು ಭಜಿಸಬೇಕೆಂದು ಅಲ್ಲಿದ್ದ ಭಕ್ತರನ್ನು ಕೇಳಿಕೊಂಡನು. ತಾಳಕ್ಕೆ ಸರಿಯಾದ ಶಬ್ದ ಸುತ್ತಲೂ ಹರಡಿ ತುಂಬಿತು. ಇದನ್ನು ಕೇಳುತ್ತ ಆ ಹೆಂಗಸು ಉದ್ರೇಕಗೊಂಡು ಕೋಪಾವಿಷ್ಟಳಾಗಿ ಎದ್ದುನಿಂತು ಕಿರಕಿರನೆ ಕಿರಿಚಿದಳು. ಕಾಲುಗಂಟೆ ನಂತರ ಭಗವನ್ನಾಮ ಸಂಕೀರ್ತನವನ್ನು ನಿಲ್ಲಿಸಲಾಯಿತು. ಹೆಂಗಸು ಕುಳಿತುಕೊಂಡಳು. ರಾಮದಾಸನ ಕೊರಳಿಗೆ ಮಾರುತಿ ಒಂದು ಹೂವಿನ ಹಾರವನ್ನು ಹಾಕಿದ್ದನು. ರಾಮನ ಪ್ರೇರಣೆಯಂತೆ ರಾಮದಾಸನು ಆ ಹಾರವನ್ನು ತೆಗೆದು, ಆಕೆಯ ಹತ್ತಿರ ಹೋಗಿ, ಆಕೆಯ ಕೊರಳಮೇಲೆ ಹಾಕಿ, ನಂತರ ಜೋಷಿಯ ಮನೆಗೆ ಹೊರಟುಬಂದನು. ಸಮಾರಾಧನೆ ಪೂರೈಸಿದ ಮೇಲೆ ಸಾಯಂಕಾಲದಲ್ಲಿ ಜನಾರ್ದನಪಂತನು ದೇವಸ್ಥಾನದೆದುರಿಗೆ ಹರಿಕಥೆ ಮಾಡಿದನು. ಇವನು ಅನಗರಿನಲ್ಲಿ ರಾಮದಾಸನ ಜೊತೆಗೆ ಸೇರಿದ್ದನು. ಹರಿಕಥೆಯನ್ನು ಕೇಳಲು ದೊಡ್ಡ

ಗುಂಪು ಕೂಡಿದ್ದಿತು. ಇದು ನಡೆಯುತ್ತಿದ್ದಾಗ ಒಬ್ಬ ಮುದುಕನು ದೆವ್ವ ಹಿಡಿದಿತ್ತೆಂಬ ಆ ಹೆಂಗಸನ್ನು ತನ್ನ ತೋಳಲ್ಲಿ ಎತ್ತಿಕೊಂಡು ಗುಂಪಿನಲ್ಲಿ ದಾರಿ ಬಿಡಿಸಿಕೊಳ್ಳುತ್ತ ಬರುವುದು ಕಂಡಿತು. ಆ ಮುದುಕನು ದೇವಸ್ಥಾನದಲ್ಲಿ ರಾಮ ದಾಸನ ಹಿಂದುಗಡೆ ಆ ಹೆಂಗಸನ್ನು ಕುಳ್ಳಿರಿಸಿ ತಾನೂ ಕುಳಿತುಕೊಂಡನು. ಹರಿಕಥೆ ಎರಡು ಗಂಟೆಗಳ ಕಾಲ ನಡೆಯಿತು. ಅದು ಪೂರೈಸಿದ ಮೇಲೆ ರಾಮ ದಾಸನು ಜೋಷಿಯ ಮನೆಯಲ್ಲಿ ತಾನಿಳಿದಿದ್ದ ಕೊಟಡಿಗೆ ಹೋದನು. ಇಲ್ಲಿಗೆ ಆ ಮುದುಕನು ಆ ಹೆಂಗಸನ್ನು ಕರೆತಂದನು. ಆಕೆ ರಾಮದಾಸನಿಗೆ ದೀರ್ಘ ದಂಡ ಪ್ರಣಾಮ ಮಾಡಿ ಮಗ್ಗುಲಲ್ಲಿ ಕುಳಿತಳು. ಆಕೆಯ ಸ್ಥಿತಿಯಲ್ಲಿ ಬಹಳ ಮಾರ್ಪಾಡು ಕಂಡಿತು. ಮುಖದಲ್ಲಿ ಸ್ಥಿರವಾದ ಶಾಂತತೆ ನೆಲಸಿದ್ದಿತು. ದೃಷ್ಟಿ ಕೆಳಮುಖವಾಗಿ ಕಣ್ಣಿನಲ್ಲಿ ತಾಳ್ಮೆಯ ನೋಟ ಮೂಡಿದ್ದಿತು. ತುಟಿಗಳು ತಮ್ಮ ಷ್ಟಕ್ಕೆ ತಾವೇ ಎಂಬಂತೆ ಅಲುಗುತ್ತಿದ್ದುವು. ಬಾಯಿಂದ ಸಣ್ಣಧ್ವನಿ ಬರುತ್ತಿ ದ್ದಿತು. ಆಲಿಸಿ ಕೇಳಿದ್ದರಲ್ಲಿ "ರಾಮ ರಾಮ ಸೀತಾರಾಮ!" ಎಂಬ ಧ್ವನಿ ಕೇಳಿಸುತ್ತಿದ್ದಿತು. ಅದೇ ಆ ಪ್ರಾತಃಕಾಲ ಸಾಮೂಹಿಕವಾಗಿ ಅವಳು ಕೇಳು ವಂತೆ ಭಜಿಸಿದ್ದ ದೇವರನಾಮ.

ಜೊತೆಗೆ ಬಂದಿದ್ದ ಮುದುಕನು ಹೇಳಿದನು: "ಮಹರಾಜ್, ಈ ಹೆಂಗಸು ನನ್ನ ಸಂಬಂಧಿ. ಬೆಳಿಗ್ಗೆ ನೀವು ಹೊರಟುಹೋದ ಕೂಡಲೆ ಇವಳು ಮನೆ ಯನ್ನು ಬಿಟ್ಟು ನಾಗಾಲೋಟದ ಕುದುರೆಯಂತೆ ಓಡಿದಳು. ನಾನೂ ಇನ್ನೊ ಬ್ಬನೂ ಹಿಂಬಾಲಿಸಿದೆವು. ಅವಳ ಸಮಕ್ಕೆ ಓಡುವುದು ದುಸ್ತರವಾಯಿತು. ಎರಡು ಮೈಲಿಗಳಷ್ಟು ದೂರ ಓಡಿಹೋಗಿ ಇವಳು ನಿಂತಳು. ಅಂತು ನಾವೂ ಅವಳಿರುವ ಸ್ಥಳವನ್ನು ಸೇರಿದೆವು. ನಮಗೆ ಮೇಲುಸಿರಾಗಿ ಸಾಕಾಗಿದ್ದಿತು. ಅವಳು ಕರ್ಕಶ ಧ್ವನಿಯಲ್ಲಿ 'ಓ, ಅಲ್ಲಿ ನಾನಿನ್ನಿರಲಾರೆ. ಆ ಸಾಧುವಿನ (ಎಂದರೆ ರಾಮದಾಸನ) ಸಾನ್ನಿಧ್ಯವನ್ನು ಸಹಿಸಲಾರೆ. ನಾನು ಹೊರಟುಹೋಗುತ್ತೇನೆ' ಎಂದು ಚೀರಿದಳು."

ಆಗ ಮುದುಕ ಕೇಳಿದನಂತೆ: "ಪುನಃ ಬಾರದಂತೆ ಖಂಡಿತವಾಗಿಯೂ ಹೊರಟುಹೋಗುತ್ತೇನೆಂದು ಹೇಳುತ್ತೀಯಾ? ಆ ರೀತಿ ಪ್ರಮಾಣ ಮಾಡು!"

ಆಗ ಆ ಹೆಂಗಸು "ಮಹದೇವ, ಹನುಮಾನ್, ರಾಮ ಇವರೇ ಸಾಕ್ಷಿ. ನಾನು ಹೊರಟುಹೋಗುತ್ತೇನೆ. ಹೊರಟೇಹೋದೆ!" ಎಂದು ಹೇಳುತ್ತ ದೊಪ್ಪನೆ ಬಿದ್ದು ಜ್ಞಾನ ತಪ್ಪಿದಳಂತೆ. ಮುದುಕನು ಇತರರ ಸಹಾಯದಿಂದ ಅವಳನ್ನು ಮನೆಗೆ ಎತ್ತಿಕೊಂಡು ಬಂದನು. ಆಮೇಲೆ ಆಕೆಯ ಸ್ಥಿತಿ ಮುಂದಿನಂತಾಗಿ ದ್ದಿತು; ಆದರೆ ಆಕೆ ಇನ್ನೂ ನಿಶ್ಶಕ್ತಳಾಗಿದ್ದಳು.

ರಾಮುದಾಸನಿಗೆ ದೈವ್ವಗಳೆಂದರೆ ಮನುಷ್ಯನ ಹೃದಯದಲ್ಲಿ ಉಲ್ಬಣ ವಾಗುವ ಅರಿಷಡ್ವರ್ಗವಲ್ಲದೆ ಬೇರೆ ಏನೂ ಅಲ್ಲ. ಇವು ಮನುಷ್ಯನನ್ನು ಆಕ್ರಮಿಸಿ ಅವನನ್ನು ಆಳುವುವು. ಇವುಗಳನ್ನು ಆಚೆಗೆ ಹೊರಡಿಸಲು ಇರುವುದು ಒಂದೇ ದಾರಿ. ಅದು ಯಾವುದೆಂದರೆ, ಅಂತಹವರ ಮನ ಹೃದಯಗಳಲ್ಲಿ ಅಂತರ್ಯಾಮಿ ಸತ್ಯದ ಪಾರಿಶುದ್ಧ ಪ್ರಕಾಶ ಮತ್ತು ಮಹಿಮೆಯನ್ನು ಎಚ್ಚರಗೊಳಿಸುವುದೇ. ಬೆಳಕು ಹರಿದಹಾಗೆಲ್ಲಾ ಕತ್ತಲೆಯು ಹೇಗೆ ನಾಶವಾಗುತ್ತದೋ ಹಾಗೆ ಪರಮಾತ್ಮನ ಪರಿಶುದ್ಧ ಸತ್ವದ ಎದುರಿಗೆ ಮನಸ್ಸಿನ ದೋಷಗಳು ಮಾಯವಾಗಿ ಪ್ರೀತಿ ಮತ್ತುಆನಂದಗಳಿಂದ ಹೃದಯ ಮೃದುವಾಗುತ್ತದೆ.

ಪಂಢರಪುರದಲ್ಲಿ ಪ್ರತಿವರ್ಷವೂ ನಡೆಯುವ ಒಂದು ಮುಖ್ಯ ಉತ್ಸವವಾದ ಕಾರ್ತೀಕ ಏಕಾದಶಿ ಮಹೋತ್ಸವಕ್ಕೆ ತಾವು ಹೋಗುವುದಾಗಿಯೂ, ಆಗ್ಗೆ ರಾಮುದಾಸನೂ ಅಲ್ಲಿಗೆ ಬಂದು ದರ್ಶನ ಕೊಡಬೇಕೆಂದೂ ಕೆಲವು ಭಕ್ತರು ಅಪೇಕ್ಷಿಸಿದರು. ರಾಮುದಾಸನು ಜನಾರ್ದನಪಂತ ಮತ್ತು ಇತರರೊಂದಿಗೆ ಉಪಲಾಯಿಯಿಂದ ಪ್ರಯಾಣಮಾಡಿ ದಾರಿಯಲ್ಲಿ ಷೆಟ್ಫಲದಲ್ಲಿ ನಿಂತು ಆ ರಾತ್ರಿ ಅಲ್ಲಿ ತಂಗಿದನು. ಆ ರಾತ್ರಿ ಗ್ರಾಮಸ್ಥರು ಭಜನೆ ಕೀರ್ತನೆಗಳನ್ನು ನಡೆಸಿದರು. ರಾಮುದಾಸನಿಗೆ ಅವನು ಹಿಂದಿನಸಾರಿ ಅಲ್ಲಿಗೆ ಬಂದಿದ್ದಾಗ ಅವನಿಗೆ ಬಲವಂತದಿಂದ ಭೋಜನ ಮಾಡಿಸಿದ್ದ ವರ್ತಕನನ್ನು ಇಲ್ಲಿ ಪುನಃ ಸಂದರ್ಶಿಸಿ ಆತನನ್ನು ಆಲಿಂಗಿಸುವ ಅವಕಾಶದೊರೆಯಿತು.

### (ii) ದೇವನು ಪ್ರೇಮಮಯ-ನಮ್ಮ ಹೃದಯದಲ್ಲಿ ಇದ್ದಾನೆ

ಯಾತ್ರಿಕರು ಏಕಾದಶಿಯ ಹಿಂದಣ ದಿನ ಪಂಢರಪುರವನ್ನು ಸೇರಿದರು. ಚಂದ್ರಭಾಗಾ ನದಿಯ ಮರಳಿನಮೇಲೆ ಉಳಿದುಕೊಳ್ಳುವುದಾಗಿ ರಾಮುದಾಸನು ಸೂಚಿಸಿದುದರಿಂದ ಸಂಗಡಿಗರು ನದಿಗೆ ಕೆಲವು ಗಜಗಳ ದೂರದಲ್ಲಿನ ದಡದ ಮೇಲೆ ನಿಂತರು. ರಾತ್ರಿ ಬಹು ಚಳಿ. ಇವರ ಮೇಲೆ ನದಿಯ ಪಾರ್ಶ್ವದಿಂದ ಚಳಿ ಗಾಳಿ ಬೀಸುತ್ತಿದ್ದಿತು. ರಾತ್ರಿಯೆಲ್ಲಾ ಜಾಗರಣೆಯಾಯಿತು. ಉತ್ಸವದ ಮರುದಿನದ ಪ್ರಾತಃಕಾಲ ಇವನು ಹಿಂದೆ ಕಂಡಿದ್ದ ಭಕ್ತರು ಒಬ್ಬೊಬ್ಬರಾಗಿ ಅವರವರ ಹಳ್ಳಿಗಳಿಂದ ಹರಿದುಬರಲು ಆರಂಭಿಸಿದರು. ಇಲ್ಲಿ ರಜಪೂತರ ಪ್ರೇಮಸಿಂಗ್ ಎಂಬ ಹೊಸ ಭಕ್ತನು ದೊರೆತನು. ರಾಮುದಾಸನಲ್ಲಿ ಇವನಿಗೆ ಗಾಢವಾದ ಅಭಿಮಾನ ಉಂಟಾಗಿ ಇವನು ಅವನನ್ನೇ ಅನುಸರಿಸಿದನು. ರಾಮುದಾಸನು ಆ ದಿನ ಸ್ವಲ್ಪ ಹಾಲನ್ನು ಮಾತ್ರ ತೆಗೆದುಕೊಂಡು ಉಪವಾಸ ಮಾಡಿದನು.

ಹೊತ್ತು ಏರಿದ ಹಾಗೆ ನದಿಯ ತೀರದ ಮೇಲೆ ಯಾತ್ರಿಕರ ಗುಂಪು ಹೆಚ್ಚಾಯಿತು. ಎರಡು ದಡಗಳಲ್ಲಿಯೂ ಒಂದುಲಕ್ಷದವರೆಗೆ ಜನ ಸೇರಿದ್ದರು.

ಜನಗಳು ಗುಂಪುಗುಂಪಾಗಿ ಸೇರಿದ್ದರು. ಕೆಲವರು ಡೇರೆಯನ್ನು ಹೊಡೆದಿದ್ದರು. ರಾತ್ರಿ ಕತ್ತಲಲ್ಲಿ ಭಕ್ತರ ತಂಡಗಳ ಮಧ್ಯೆ ಅಲ್ಲಲ್ಲೇ ದೀಪಗಳು ಮಿನುಗುತ್ತಿದ್ದವು. ಪಂಢರಪುರದ ಸ್ವಾಮಿಯಾದ "ವಿಠ್ಠಲ" ನ ನಾಮವು ಸಾವಿರಾರು ಕಂಠಗಳಿಂದ ಘೋಷಿತವಾಯಿತು. ನರ್ತನ ಮತ್ತು ಸಂಗೀತಗಳು ಅನೇಕ ಬಿಡಾರಗಳಲ್ಲಿ ಆರಂಭವಾದವು. ಜನಸಮೂಹಕ್ಕೆ ಭಕ್ತಿಯ ಮಹಿಮೆಯನ್ನು ಬೋಧಿಸಲು ಹರಿಕಥೆ ಮಾಡುತ್ತಿದ್ದ ಒಬ್ಬ ಸಾಧುವಿನ ಸುತ್ತಲೂ ದೊಡ್ಡ ಗುಂಪು ಕುಳಿತಿದ್ದಿತು. ಹೀಗೆ ಸಂಗೀತದಿಂದ ಕೂಡಿದ ಬೋಧನೆ ಅನೇಕ ಕಡೆ ನಡೆಯುತ್ತಿತ್ತು.

ಇಂತಹ ಒಂದು ಹರಿಕಥೆಯನ್ನು ಕೇಳಲು ಹೋಗಿ ರಾಮದಾಸನು ಮಹಾರಾಷ್ಟ್ರದೇಶದ ಪ್ರಸಿದ್ಧ ಕೀರ್ತನಕಾರರಾದ ಸತಾರಾಸಾಧು ದಾದಾ ಮಹಾರಾಜರ ಹರಿಕಥೆಯನ್ನು ಸುಮಾರು ಅರ್ಧಗಂಟೆಯ ಕಾಲ ಶ್ರವಣ ಮಾಡಿದನು. ಅವರು ಬೋಧಿಸಿದ ವಿಷಯಗಳಲ್ಲಿ ಒಂದು ವಾಕ್ಯ ರಾಮದಾಸನಿಗೆ ಅತ್ಯಂತ ನಿಜವೆಂದು ಮನದಟ್ಟಾಯಿತು. ಅದೇನೆಂದರೆ: "ನಾವು ಮಾಡಬೇಕಾದದ್ದು ದೇವರನ್ನು ಪ್ರೀತಿಸುವುದಲ್ಲ. ಪ್ರೇಮಮೂರ್ತಿಯಾದ ದೇವರು ನಮ್ಮ ಹೃದಯದಲ್ಲಿ ಇದ್ದಾನೆಂಬುದನ್ನು ಅನುಭವಕ್ಕೆ ತಂದುಕೊಳ್ಳುವುದು".

ರಾಮದಾಸನು ತಾನು ಮೊದಲು ಕುಳಿತಿದ್ದ ಸ್ಥಳಕ್ಕೆ ಬಂದನಂತರ ಒಬ್ಬ ಭಕ್ತನು ಬಂದು "ಮಹರಾಜ್, ವಿಠೋಬನ ದರ್ಶನಕ್ಕಾಗಿ ಹಗಲೆಲ್ಲ ಜನಸಂದಣಿ ಹೆಚ್ಚಾಗಿದ್ದಿತು. ಆದುದರಿಂದ ದೇವಸ್ಥಾನದಲ್ಲಿ ಪ್ರವೇಶ ಅಸಾಧ್ಯವಾಗಿದ್ದಿತು. ಈಗ ಸಮರಾತ್ರಿಯಾದುದರಿಂದ ಗರ್ಭಾಂಗಣಕ್ಕೆ ಹೋಗಲು ದಾರಿ ಬಿಡುವಾಗಿದೆ. ನಿಮಗೆ ಇಷ್ಟವಿದ್ದರೆ ನಿಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗುತ್ತೇನೆ" ಎಂದನು.

ರಾಮದಾಸನು "ರಾಮ, ರಾಮದಾಸನು ಈಗಾಗಲೇ ತನ್ನ ಎದುರಿಗೆ ಸಾವಿರಾರು ರೂಪಗಳಲ್ಲಿ ವಿಠೋಬನನ್ನು ಕಾಣುತ್ತಿದ್ದಾನೆ. ಕುಳಿತು, ನಿಂತು, ನರ್ತನ ಮಾಡುತ್ತ, ಸಂಗೀತವನ್ನು ಹಾಡುತ್ತ ಇರುವ ಈ ಅಸಂಖ್ಯಾತ ಮಾನವ ಆಕೃತಿ ಅವನು ಎಂದು ಕಾಣುವುದಿಲ್ಲವೇ? ದೇವಸ್ಥಾನದ ಶಿಲಾ ಮೂರ್ತಿಯಲ್ಲಿ ಮಾತ್ರ ವಿಠೋಬನಿರುವನೆಂದು ಯೋಚಿಸಿದೆಯಾ? ಆತನು ನಿನ್ನ ಹೃದಯ ಮಂದಿರದಲ್ಲಿಯೂ ಮತ್ತು ಎಲ್ಲ ಪ್ರಾಣಿಗಳ ಹೃದಯದಲ್ಲಿಯೂ ಇದ್ದಾನೆ ಎಂಬ ಸತ್ಯವನ್ನು ನೀನು ಅನುಭವ ಮಾಡಿಕೋ. ನಿಜವಾಗಿ ಆತನು ಎಲ್ಲದರಲ್ಲಿಯೂ ಇದ್ದಾನೆ. ಎಲ್ಲಾ ಅವನೆ" ಎಂದು ಉತ್ತರ ಕೊಟ್ಟನು.

ಇವನ್ನು ಕೇಳಿದ ಭಕ್ತನು ದೇವಸ್ಥಾನದೊಳಕ್ಕೆ ಹೋಗುವ ಪ್ರಸಕ್ತಿಯನ್ನು ಬಿಟ್ಟನು. ರಾತ್ರಿ ಕಳೆಯಿತು. ಬೆಳಗಿನ ದಿನ ಭಕ್ತರ ಗುಂಪಿನಲ್ಲಿ ಸುಮಾರು ಐವತ್ತು ಜನರಿದ್ದರು. ಘೊಂಡೋಪಂತನೆಂಬ ಬ್ರಾಹ್ಮಣನ ಮನೆಯಿಂದ ಇವರೆ

ಲ್ಲರಿಗೂ ಭೋಜನಕ್ಕೆ ಆಹ್ವಾನ ಬಂದಿತು. ಭೋಜನಾನಂತರ ರಾಮುದಾಸನೂ ಸೇರಿ ಆರು ಜನ ಮೊಹೋಳಕ್ಕೆ ನಡೆದುಕೊಂಡು ಹೋದರು. ಅಲ್ಲಿಯ ಒಬ್ಬ ಭಕ್ತನು ಅವರನ್ನು ತನ್ನ ಮನೆಗೆ ಕರೆದುಕೊಂಡು ಹೋದನು.

ರಾಮುಚರಣದಾಸನಿಗೆ ಒಂದು ತುಲಸೀಮಣಿ ಮಾಲೆಯ ಮೇಲಿದ್ದ ಅಭಿಮಾನದ ವಿಚಾರವಾಗಿ ನಡೆದ ಸಣ್ಣ ಪ್ರಸಂಗವನ್ನು ಇಲ್ಲಿ ಪ್ರಸ್ತಾಪಿಸಬೇಕಾಗಿದೆ. ಪಂಢರಪುರದಿಂದ ಪ್ರಯಾಣ ಮಾಡುವ ಮುಂಚೆ ರಾಮುಚರಣದಾಸನು ರಾಮುದಾಸನ ಬಳಿ ಬಂದು, ಒಂದು ಬಿಳಿಯ ತುಲಸೀಮಣಿ ಸರವನ್ನು ಅವನ ಕೈಯ್ಯಲ್ಲಿ ಕೊಟ್ಟು "ಸ್ವಾಮಿಜಿ, ಇನ್ನು ಮುಂದೆ ಎಷ್ಟು ಜಪಮಾಡಿದೆನೆಂಬುದನ್ನು ಗೊತ್ತು ಮಾಡುವುದಕ್ಕೆ ಒಂದು ಜಪಮಾಲೆಯನ್ನು ಉಪಯೋಗಿಸಬೇಕೆಂದಿದ್ದೇನೆ. ದಯವಿಟ್ಟು ಈ ಜಪಮಾಲೆಯನ್ನು ನಿಮ್ಮ ಬೆರಳುಗಳಿಂದ ಒಂದು ಸಲ ತಿರುವಿಕೊಡಿ" ಎಂದನು.

"ರಾಮು, ನಿನಗೆ ಜಪಮಾಲೆ ಅನಾವಶ್ಯಕ. (ಮಂತ್ರವನ್ನು ನೀನು ಯಾವಾಗಲೂ ಎಲ್ಲ ಸ್ಥಳಗಳಲ್ಲೂ ಜಪಮಾಡುತ್ತಿರಬೇಕು)'' ಎಂದು ರಾಮುದಾಸನು ಉತ್ತರವಿತ್ತನು.

"ಹಾಗಲ್ಲ ಸ್ವಾಮಿಜಿ! ನನಗೆ ಜಪಮಾಲೆ ಆವಶ್ಯಕ ಎನಿಸುತ್ತದೆ" ಎಂದು ರಾಮುಚರಣದಾಸನು ಒತ್ತಿ ಹೇಳಿದನು.

"ಹಾಗಾದರೆ ರಾಮುನ ಇಚ್ಛೆಯಂತೆ ಆಗಲಿ" ಎಂದು ಹೇಳಿ ರಾಮುದಾಸನು ಮಣಿಗಳನ್ನು ತಿರುಗಿಸುತ್ತಿರುವಾಗ ಖಟ್ಟೆಂದು ಸರವು ಕಿತ್ತುಹೋಯಿತು. ಹತ್ತಿರಿದ್ದವರೆಲ್ಲ ರಾಮುಚರಣದಾಸನ ಕಡೆ ನೋಡುತ್ತ "ನಿಜ; ಸ್ವಾಮಿಜಿಯವರು ನಿನಗೆ ಜಪಮಾಲೆ ಬೇಡವೆಂದು ಹೇಳಿದರು. ಅದಕ್ಕೇ ಅದು ಕಿತ್ತುಹೋಯಿತು" ಎಂದು ಹೇಳಿದರು.

ರಾಮುಚರಣದಾಸನು ಹಟದಿಂದ ''ಏತಕ್ಕೆ ಕೂಡದು? ಇನ್ನೊಂದು ಹೊಸದನ್ನು, ಘಟ್ಟಿಯಾಗಿರುವುದನ್ನು, ಕೊಂಡು ತರುತ್ತೇನೆ'' ಎಂದು ಹೇಳಿ ಹೊರಟು ಹೋಗಿ ಮಿನಗುವ ಕಪ್ಪು ಮಣಿಗಳ ಇನ್ನೊಂದು ಸರವನ್ನು ತಂದು "ಸ್ವಾಮಿಜಿ, ಈಗ ಇದನ್ನು ಕೆಲವು ನಿಮಿಷ ನಿಮ್ಮ ಕೈಲಿಟ್ಟುಕೊಂಡಿದ್ದು ನನಗೆ ಹಿಂದಕ್ಕೆ ಕೊಡಿ'' ಎಂದು ಹೇಳಿದನು. ರಾಮುದಾಸನು ಹಾಗೆಯೇ ಮಾಡಿ ಸರವನ್ನು ಸರಿಯಾದ ಸ್ಥಿತಿಯಲ್ಲಿ ಅವನಿಗೆ ಕೊಟ್ಟನು.

ಅನಂತರ ರಾಮುಚರಣದಾಸನು ಜಪಸರವನ್ನು ಎಲ್ಲರಿಗೂ ಕಾಣುವಂತೆ ತಿರುಗಿಸುತ್ತಿದ್ದನು. ಮೊಹೋಳ್‌ಗೆ ಹೋಗುತ್ತಿರುವಾಗ ದಾರಿಯಲ್ಲಿ ಅವನು ರಾಮುದಾಸನ ಬಳಿಗೆ ಪದೇ ಪದೇ ಬಂದು: ''ಸ್ವಾಮಿಜಿ, ಈ ದಿವಸ ಐದು ಸಹಸ್ರ ಜಪಮಾಡಿದೆ!'' ಎಂದು ಹೇಳುತ್ತಿದ್ದನು.

"ರಾಮು, ಜಪದ ಉದ್ದೇಶ ಅಹಂಭಾವವನ್ನು ತಗ್ಗಿಸುವುದಕ್ಕಾಗಿ ಇರುವಾಗ, ನೀನು ಜಪಮಾಲೆಯನ್ನು ಹೆಚ್ಚು ಚೆಚ್ಚಾಗಿ ತಿರುಗಿಸಿದ ಹಾಗೆಲ್ಲಾ ನಿನ್ನ ಅಹಂಭಾವ ಹೆಚ್ಚಾಗುತ್ತಿದೆ. ನೀನೊಬ್ಬ ವಿಚಿತ್ರ ರಾಮು!" ಎಂದು ರಾಮದಾಸನು ನಗುತ್ತ ಉತ್ತರ ಕೊಟ್ಟನು.

## (iii) ಜೀವನದ ಪ್ರಮುಖ ಧ್ಯೇಯ

ಮಾರನೆಯ ರಾತ್ರಿ ಇದೇ ಊರಿನಲ್ಲಿ ಜನಾರ್ದನಪಂತನ ಮನೆಯಲ್ಲಿ ನಡೆದ ಅವನ ಹರಿಕಥೆಗೆ ರಾಮುದಾಸನು ಹೋದನು. ಅದರ ಮಾರನೆಯ ದಿವಸ ಬಾಬುಜಿಯವರು ಮಾಡಿಸಿದ ಸಂತರ್ಪಣೆಗೆ ಅನಗರ್ ಅಂಜನಗಾವ್ ಮತ್ತು ಉಪಲಾಯಿ ಸ್ಥಳಗಳಿಂದ ಭಕ್ತವೃಂದವು ಬಂದು ಸೇರಿತು. ಅದೇ ಸಾಯಂಕಾಲ ರಾಮುದಾಸನು, ರಾಮುಚರಣದಾಸ ಮತ್ತು ಭವಾನೀಶಂಕರರಾಯರೊಂದಿಗೆ ಮೊಹೋಳದಿಂದ ಹೊರಟು ಬೆಂಗಳೂರಿಗೆ ರೈಲಿನಲ್ಲಿ ಪ್ರಯಾಣ ಮಾಡಿದನು. ರೈಲ್ವೇ ಸ್ಟೇಷನ್ನಿನಲ್ಲಿ ರಾಮುದಾಸನು ಬೇಡವೆಂದರೂ ಕೇಳದೆ ರಾಮುಚರಣದಾಸನು ಜನಾರ್ದನಪಂತನಿಂದ ಎಂಟು ರೂಪಾಯಿಗಳ ಕಾಣಿಕೆಯನ್ನು ಸ್ವೀಕರಿಸಿದನು. ಜನಾರ್ದನಪಂತ್, ಪ್ರೇಮುಸಿಂಗ್ ಮೊದಲಾದ ಕೆಲವು ಭಕ್ತರು ಸೊಲ್ಲಾಪುರದ ಸ್ಟೇಷಣವರೆಗೂ ಇವರೊಡನೆ ಪ್ರಯಾಣ ಮಾಡಿದರು. ಇಲ್ಲಿ ಇವರು ಇಳಿದು ಬೊಂಬಾಯಿ ಮೆಯಲಿಗೆ ಬದಲಾಯಿಸಬೇಕಾಗಿದ್ದಿತು. ರೈಲುಬಂದಿತು. ಆದರೆ ಗಾಡಿಗಳು ಕಿಕ್ಕಿರಿದು ತುಂಬಿದ್ದುವು. ಮೂರನೆಯ ತರಗತಿ ಗಾಡಿಗಳಲ್ಲಿ ಸ್ಥಳವಿರಲಿಲ್ಲ. ಯಾವ ಗಾಡಿಯೊಳಗೆ ಪ್ರವೇಶ ಮಾಡಲು ಪ್ರಯತ್ನಿಸಿದರೂ ಪ್ರಯಾಣಿಕರು ಹಿಂದಕ್ಕೆ ನೂಕುತ್ತಿದ್ದರು. ಈ ನುಗ್ಗಾಟವನ್ನು ನೋಡಿ ಇಬ್ಬರು ಪೋಲೀಸಿನವರು ಸಹಾಯಕ್ಕೆ ಬಂದು, ಮುಂದೆ ನುಗ್ಗಿ ಬಾಗಿಲನ್ನು ತೆಗೆದು, ಈ ಮೂರು ಜನರಿಗೂ ಕುಳಿತುಕೊಳ್ಳಲು ಸ್ಥಳ ಮಾಡಿಕೊಟ್ಟರು. ಪೋಲೀಸಿನವರು ತುಂಬ ಪ್ರೀತಿಯನ್ನೂ ಕಾರುಣ್ಯವನ್ನೂ ತೋರಿಸಿದರು. ಇದು ಏಕೆಂದರೆ (ಭಗವಂತನು ಎಲ್ಲರಲ್ಲಿಯೂ ಇದ್ದಾನೆ.)

ರೈಲು ಹೊರಟು ಸ್ಟೇಷನ್ನನ್ನು ಆಗತಾನೆ ಬಿಟ್ಟಿರಬಹುದು. ಆಗ ಮೇಲಣ ಅಂತಸ್ತಿನಲ್ಲಿ ಕುಳಿತಿದ್ದ ಒಬ್ಬ ಸ್ಥೂಲಕಾಯದ ಇರಾನಿ ಕೆಳಕ್ಕೆ ಧುಮುಕಿ ತನ್ನ ಸ್ಥಳದಲ್ಲಿ ಹತ್ತಿ ಕುಳಿತುಕೊಳ್ಳಬೇಕೆಂದು ರಾಮುದಾಸನನ್ನು ಪ್ರಾರ್ಥಿಸಿದನು. ಈ ಅಂತಸ್ತಿನಲ್ಲಿ ದಪ್ಪನಾದ ರಜಾಯಿ ಹಾಸಿದ್ದಿತು; ಒಬ್ಬರು ಸುಖವಾಗಿ ಮಲಗುವಂತೆ ಇದ್ದಿತು. ರಾಮುದಾಸನು ತನಗೆ ಬೇಕಿಲ್ಲವೆಂದೂ ತಾನಿದ್ದ ಕಡೆಯೇ ಇರುವೆನೆಂದೂ ಉತ್ತರಕೊಟ್ಟನು.

"ನಾನು ನಿಮ್ಮ ಮಗ್ಗುಲಲ್ಲಿ ಕೆಲವು ನಿಮಿಷ ಕುಳಿತುಕೊಳ್ಳುವುದಕ್ಕೆ ಅಪ್ಪಣೆ ಕೊಡುವಿರಾ?" ಎಂದು ಆತನು ರಾಮುದಾಸನನ್ನು ಕೇಳಿದನು.

“ ಅಗತ್ಯವಾಗಿ ಆಗಬಹುದು ” ಎಂದು ಹೇಳಿ ರಾಮದಾಸನು ಪಕ್ಕದಲ್ಲಿ ಅವನಿಗೆ ಸ್ಥಳಮಾಡಿದನು. ಆತನು ರಾಮದಾಸ ಮತ್ತು ರಾಮಚರಣದಾಸನ ಮಧ್ಯೆ ಇಕ್ಕಟ್ಟಾಗಿ ಕುಳಿತನು.

“ ಮನಸ್ಸಿನ ವ್ಯಾಮೋಹಗಳನ್ನು ಹರಿದು, ಅದು ಸದಾಪಡುತ್ತಿರುವ ಸಂಕಟದಿಂದ ಅದನ್ನು ಬಿಡಿಸಿ ದೇವರನ್ನು ಅರಿಯಲು ಏನುಮಾಡಬೇಕು ? ದಯವಿಟ್ಟು ಉಪದೇಶ ಮಾಡೋಣಾಗಲಿ. ನಾನು ಹೆಂಡತಿ ಮನೆ ಹಣ ಆಸ್ತಿ ಇವುಗಳ ಮಾಯೆಯಲ್ಲಿ ತೀರಾ ಸಿಕ್ಕಿಕೊಂಡಿದ್ದೇನೆ ” ಎಂದು ಆತ ದೈನ್ಯದಿಂದ ಕೇಳಿಕೊಂಡನು.

“ ನಿನಗೆ ತೊಂದರೆ ಕೊಡುತ್ತಿರುವ ಜಾಡ್ಯವನ್ನು ಸರಿಯಾಗಿ ಕಂಡುಹಿಡಿದಿದ್ದೀಯೆ; ಅಲ್ಲದೆ ಅದಕ್ಕೆ ಔಷಧವೇನೆಂಬುದನ್ನೂ ತಿಳಿದಿದ್ದೀಯೆ. ಮೊಟ್ಟಮೊದಲು ನೀನು ಹುಡುಕುತ್ತಿರುವ ದೇವರು ನಿನ್ನೊಳಗೇ ಇರುವುದನ್ನು ತಿಳಿ. ಆತನು ಈ ಪ್ರಪಂಚದ ಜೀವ ಮತ್ತು ಆಧಾರ. ಆತನನ್ನು ಸೇರುವುದೇ ಈ ಮಾನವ ಜನ್ಮದ ಅತ್ಯಂತ ಪ್ರಮುಖವಾದ ಧ್ಯೇಯ. ಈ ವಿಶ್ವಸತ್ಯದಿಂದ ಪ್ರತ್ಯೇಕವಾಗಿದ್ದೇನೆಂಬ ಭಾವನೆಯೇ ನಿನ್ನ ಕೆಡಕು ಮತ್ತು ದುಃಖಗಳ ಮೂಲ. ಅಹಂಭಾವವೇ ಈ ಪ್ರತ್ಯೇಕಿಸುವ ಗೋಡೆಯನ್ನು ಕಟ್ಟಿದೆ. ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬ ಉತ್ಕಟವಾದ ಇಚ್ಛೆಯನ್ನು ಹೊಂದು. ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದೆಂದರೆ ‘ ನಿನ್ನ ಜೀವನ, ಪ್ರಪಂಚದ ಜೀವನ, ಒಂದೇ ’ ಎನ್ನುವುದನ್ನು ಅನುಭವ ಮಾಡಿಕೊಳ್ಳುವುದೇ ಆಗಿದೆ. ಸ್ತೋತ್ರ, ಧ್ಯಾನ, ಮತ್ತು ಫಲಾಭಿಸಂಧಿಯಿಲ್ಲದೆ ಕರ್ಮಗಳನ್ನು ಆಚರಿಸುವುದು, ಇದರಿಂದ ದೈವದೊಂದಿಗೆ ಐಕ್ಯವಾಗಿ ಅಹಂಭಾವವನ್ನು ಭಗವಂತನಲ್ಲಿ ಅರ್ಪಿಸು. ಇದೇ ಭಕ್ತಿ, ಜ್ಞಾನ, ಆತ್ಮಸಮರ್ಪಣೆಯ ಮಾರ್ಗ. ಈ ಮಾರ್ಗದಲ್ಲಿ ನೀನು ಮುಂದುವರಿಯುತ್ತ ಬಂದಹಾಗೆಲ್ಲ ಈ ಪ್ರಪಂಚದ ನಶ್ವರ ವಿಷಯಗಳಲ್ಲಿ ಆಸಕ್ತಿ ಕಡಮೆಯಾಗಿ ಮನಸ್ಸಿನ ಮಾಯೆ ತೊಲಗುವುದು. ಆಗ ನಿನ್ನ ಹೃದಯದಲ್ಲಿ ದೈವಿಕ ಪ್ರೇಮ ತುಂಬಿ ನಿನ್ನ ದೃಷ್ಟಿ ಪರಿಶುದ್ಧವಾಗಿ ಸಮತಾಭಾವನೆಯನ್ನು ಹೊಂದುವುದು. ನೀನು ಮಾಡುವ ಸಮಸ್ತ ಕಾರ್ಯಗಳೂ ನಿನ್ನ ಅಮರ ಜೀವನದ ಆನಿಚ್ಛಾಕಾರ್ಯಗಳಾಗುವುವು. ಇದರಿಂದ ನೈಜವಾದ ಸಂತೋಷ ಮತ್ತು ಶಾಂತಿಯ ಅನುಭವ ಉಂಟಾಗುತ್ತದೆ. ಈ ಅನುಭವವನ್ನು ಪಡೆಯುವುದೇ ಮನುಷ್ಯಯತ್ನದ ಪರಮಾವಧಿ, ಜೀವನದ ಉದ್ದೇಶದ ಪೂರೈಕೆ ” ಎಂದು ರಾಮದಾಸನು ಬುದ್ಧಿವಾದ ಹೇಳಿದನು.

ಇರಾನಿ “ ಆಹ! ಎಷ್ಟು ವಿಶದವಾಗಿ ಮನಮುಟ್ಟುವಂತೆ ಈ ನಿಜ ತತ್ವವನ್ನು ವರ್ಣಿಸಿದ್ದೀರಿ! ನಿಮ್ಮ ಸಹವಾಸ ಹೆಚ್ಚಾಗಿ ನನಗೆ ದೊರಕಬೇಕೆಂಬ

ಆಶೆಯಾಗುತ್ತದೆ. ನನ್ನ ಸ್ಥಳ ಸಿಕಂದರಾಬಾದು. ಅಲ್ಲಿಗೆ ದಯವಿಟ್ಟು ಬಂದು ಒಂದು ದಿನವಾದರೂ ನನ್ನ ಮನೆಗೆ ದಯಮಾಡಿಸಬೇಕು. ನನ್ನ ಹೆಂಡತಿ ಮತ್ತು ಸಂಬಂಧಿಗಳಿಗೆ ನಿಮ್ಮನ್ನು ನೋಡಿದರೆ ಎಷ್ಟೋ ಸಂತೋಷವಾಗುತ್ತದೆ'' ಎಂದನು.

ರಾಮದಾಸನಿಗೆ ಬೆಂಗಳೂರು ಪ್ರಯಾಣ ನಿಷ್ಕರ್ಷೆಯಾಗಿದ್ದುದರಿಂದ ಈ ಇರಾನಿಯ ಆಹ್ವಾನವನ್ನು ಸ್ವೀಕರಿಸಲು ಆಗಲಿಲ್ಲ.

---

# ಅಧ್ಯಾಯ ೧೪

## ಬೆಂಗಳೂರು-ಬೊಂಬಾಯಿ

### (i) ಒಬ್ಬ ಸಾಧು ಯಕ್ಷಿಣಿಗಾರ

ಸಕಾಲದಲ್ಲಿ ಎಲ್ಲರೂ ಬೆಂಗಳೂರನ್ನು ಸೇರಿ ಮೊದಲನೆಯ ದಿವಸ ಮಲ್ಲೇಶ್ವರದಲ್ಲಿ ಭವಾನೀಶಂಕರರಾಯನ ಮನೆಯಲ್ಲಿ ನಿಂತರು. ರಾಮದಾಸನಿಗೂ ರಾಮಚರಣದಾಸನಿಗೂ ಪ್ರತ್ಯೇಕ ಸ್ಥಳವನ್ನು ಏರ್ಪಾಡು ಮಾಡಬೇಕೆಂದು ರಾಮದಾಸನು ಕೇಳಿಕೊಂಡನು. ರೈಲುರಸ್ತೆಗೆ ಸಮೀಪ ಒಂದು ಬರಿದಾಗಿದ್ದ ಮನೆ ಗೊತ್ತಾಯಿತು. ಅದರಲ್ಲಿ ದೆವ್ವ ಇದ್ದುದಾಗಿ ಆಡಿಕೊಳ್ಳುತ್ತಿದ್ದರು. ಬೆಂಗಳೂರಿನಲ್ಲಿರುವವರೆಗೆ ಈ ಮನೆಯಲ್ಲೇ ವಾಸಮಾಡಬೇಕೆಂದು ನಿಷ್ಕರ್ಷೆಯಾಯಿತು. ರಾಮದಾಸನೂ ರಾಮಚರಣದಾಸನೂ ಈ ಮನೆಗೆ ಹೋದರು. ಮನೆ ಸಮಜೂಕಾಗಿ ಕಟ್ಟಿದಂತಿರದೆ ಮನಸ್ಸುಬಂದಂತೆ ಅಡ್ಡಾದಿಡ್ಡಿಯಾಗಿ ಕಟ್ಟಿದ ಮನೆಯಾಗಿ ಬೆಕೋ ಎಂದು ಹಾಳು ಸುರಿಯುವಂತಿದ್ದಿತು. ಇವರು ಇದರಲ್ಲಿ ಒಂದು ದೊಡ್ಡ ಕೊಟಡಿಯನ್ನು ವಾಸಕ್ಕೆ ಆರಿಸಿದರು.

ಭವಾನೀಶಂಕರರಾಯನು ರಾಮದಾಸನಿಗೆ ಒಂದು ಚಾಪೆಯನ್ನೂ ಎರಡು ಕಂಬಳಿಗಳನ್ನೂ ತಂದುಕೊಟ್ಟನು. ಆಗ ಚಳಿಗಾಲ. ರಾಮಚರಣದಾಸನು ರಾಮದಾಸನ ಎಡಗಡೆಯಲ್ಲಿ ಸ್ಥಳಮಾಡಿಕೊಂಡನು. ಅವನು ಹುಲಿಯ ಚರ್ಮವನ್ನು ಯಾವಾಗಲೂ ಹತ್ತಿರ ಇಟ್ಟುಕೊಂಡು ಇರುತ್ತಿದ್ದನು. ಸೊಲ್ಲಾಪುರದ ಹಳ್ಳಿಗಳಲ್ಲಿ ಸಂಚರಿಸುವಾಗ ಇದನ್ನು ರಾಮದಾಸನ ಉಪಯೋಗಕ್ಕಾಗಿ ಕೊಡದೆ ತಪ್ಪುತ್ತಿರಲಿಲ್ಲ. ರಾಮದಾಸನು ಕುಳಿತದ್ದೂ ಮಲಗಿದ್ದೂ ಇದರಮೇಲೆಯೇ. ಇಲ್ಲಿಯೂ ಅವನು ಅದನ್ನು ರಾಮದಾಸನಿಗಾಗಿ ನೆಲದಮೇಲೆ ಹಾಸಿದ್ದ ಕಂಬಳಿಯ ಮೇಲೆ ಹಾಕಿದ್ದನು. ಕೆಂಪು ಶಹಲನ್ನು ಆಡಂಬರದಿಂದ ಹೊದ್ದುಕೊಂಡು ಜಪಮಣಿಯನ್ನು ತಿರುವುತ್ತಿದ್ದನು. ರಾಮದಾಸನ ಮೇಲಿದ್ದ ಈತನ ಪೂರ್ಣ

ಪ್ರೇಮ ಇವನು ಕೊನೆಯಿಲ್ಲದೆ ಸಂತೋಷಪೂರ್ವಕವಾಗಿ ರಾಮದಾಸನಿಗೆ ಮಾಡು ತ್ತಿದ್ದ ಸೇವೆಯಲ್ಲಿ ಕಾಣುತ್ತಿದ್ದಿತು. ಇವನು ರಾಮದಾಸನನ್ನು ಎಲ್ಲ ರೀತಿ ಯಿಂದಲೂ ಬಹಳ ಆದರದಿಂದ ನೋಡಿಕೊಂಡನು.

ರಾಮದಾಸನ ಆಗಮನವಾರ್ತೆ ಸುತ್ತಲೂ ಹರಡಿ ಬೆಂಗಳೂರು ಪಟ್ಟಣ ದಿಂದಲೂ ಉಪನಗರಗಳಿಂದಲೂ ಅನೇಕ ಪ್ರೇಕ್ಷಕರು ಬರುತ್ತಿದ್ದರು. ಸ್ನಾನ ಮತ್ತು ಮಧ್ಯಾಹ್ನದ ಊಟಕ್ಕಾಗಿ ಅವನು ಭವಾನೀಶಂಕರರಾಯನ ಮನೆಗೆ ಹೋಗಬೇಕಾಗಿದ್ದಿತು. ಭವಾನೀಶಂಕರರಾಯನ ತಮ್ಮ ಸದಾಶಿವರಾಯನು ರಾಮದಾಸನಿಗೆ ಬಹಳ ಪ್ರೀತಿಯಿಂದ ಮತ್ತು ಎಚ್ಚರಿಕೆಯಿಂದ ಸ್ನಾನಮಾಡಿಸು ತ್ತಿದ್ದನು. ಸಾಬೂನನ್ನು ಮೈಗೆ ಬಿರುಸಾಗಿ ಉಜ್ಜುವಾಗ, ರಾಮದಾಸನು "ರಾಮ, ಈ ಮಣ್ಣು ಮಡಿಕೆಯನ್ನು (ಎಂದರೆ ದೇಹವನ್ನು) ಉಜ್ಜುವಾಗ ಬಹಳ ಎಚ್ಚರವಿರಲಿ. ಅತಿ ಶಕ್ತಿ ಉಪಯೋಗಿಸಿದರೆ ಅದು ಚೂರುಚೂರಾಗಿ ಒಡೆದು ಹೋಗಬಹುದು!" ಎನ್ನುತ್ತಿದ್ದನು. ಅದಕ್ಕೆ ಆತನೂ ನಗುತ್ತಿದ್ದನು.

ಅನೇಕ ಸಲ ರಾಮದಾಸನಿಗೆ ಮುಂಚೆಯೇ ಊಟವನ್ನು ಬಡಿಸುತ್ತಿದ್ದರು. ಒಂದು ದಿನಸ ಗೃಹನಾತಿ ಬೇಳೆ ಹುಳಿ ಮಾಡುವುದರಲ್ಲಿ ಉಪ್ಪು ಹಾಕುವು ದನ್ನು ಮರೆತು ಬಿಟ್ಟಿದ್ದಳು. ಉಪ್ಪು ಹಾಕಿಲ್ಲವೆಂಬುದನ್ನು ಗಮನಿಸದೆ ಅವನು ಊಟ ಮುಗಿಸಿದನು. ಮನೆಯವರು ಊಟಮಾಡಿದಾಗಲೇ ಅದು ಅವರಿಗೆ ಗೊತ್ತಾದುದು. ರುಚಿ ಇಲ್ಲದೆ ಇದ್ದುದು ಕಂಡುಬಂದಾಗ ಉಪ್ಪು ಬೇಕೆಂದು ಏಕೆ ಕೇಳಲಿಲ್ಲವೆಂದು ಅವರು ಅವನನ್ನು ಪ್ರಶ್ನಿಸಿದರು.

ರಾಮದಾಸನು "ರುಚಿಯಲ್ಲಿ ಏನೂ ವ್ಯತ್ಯಾಸ ಕಂಡುಬರಲಿಲ್ಲ. ಊಟ ಮಾಡುವಾಗ ರುಚಿಯನ್ನು ಗಮನಿಸಲು ಅವನ ಮನಸ್ಸು ಅಲ್ಲಿರಲಿಲ್ಲ" ಎಂದು ಉತ್ತರಕೊಟ್ಟನು.

ರಾಮದಾಸನನ್ನು ನೋಡುವುದಕ್ಕೆ ಬಂದವರಲ್ಲಿ ಕವಿ ಚಟ್ಟೋಪಾಧ್ಯಾಯ ಮತ್ತು ಪ್ರತಿಭಾಶಾಲಿಯಾದ ಅತನ ಧರ್ಮಪತ್ನಿ ಕಮಲಾದೇವಿ ಇದ್ದರು. ಇವರು ತನ್ನೊಂದಿಗೆ ಅನೇಕ ಜನರನ್ನು ಕರೆದುಕೊಂಡು ಬರುತ್ತಿದ್ದರು. ಅವರಲ್ಲಿ ಒಬ್ಬ ಆಂಗ್ಲ ಪದವೀಧರನಾದ ಸೀನಿಯರ್ ರ್‍ಯಾಂಗ್ಲರ್ ಮತ್ತು ಭಕ್ತಳಾದ ಆತನ ತಾಯಿ ಸಹ ಇದ್ದರು. ಕವಿ ಆಗಾಗ ಅನೇಕ ಗಂಟೆಗಳ ಕಾಲ ರಾಮದಾಸನ ಸಹವಾಸವನ್ನು ಬಯಸಿದನು. ಭಾವ ಮತ್ತು ಸೌಂದರ್ಯ ದೇವತೆಯ ಉಪಾ ಸಕನಾದುದರಿಂದ ಅವನು ಸ್ವಭಾವವಾಗಿ ಆದರವಂತನೂ ಪ್ರೇಮಿಯೂ ಆಗಿ ದ್ದನು. ಇವರ ಸಂಗ ರಾಮದಾಸನಿಗೆ ತುಂಬ ಹರ್ಷದಾಯಕವಾಗಿದ್ದಿತು.

ಒಂದು ಸಾಯಂಕಾಲ ರಾಮಚರಣದಾಸನೊಂದಿಗೆ ಮಾತನಾಡುತ್ತಿದ್ದಾಗ ರಾಮದಾಸನು ಆಸಕ್ತಿ ಮತ್ತು ಮಮಕಾರವನ್ನು ಕುರಿತು ಉಪನ್ಯಾಸ ಮಾಡಿ

ದನು: "ವಸ್ತುಗಳ ಮೇಲಣ ವ್ಯಾಮೋಹವೇ ಹೆದರಿಕೆಗೂ ಕಳವಳಕ್ಕೂ ಕಾರಣ. ಅದು ಶಾಂತಿಯನ್ನು ಹಾಳುಮಾಡುತ್ತದೆ. ವ್ಯಾಮೋಹವೇ ಮನಸ್ಸಿನ ಚಾಂಚಲ್ಯಕ್ಕೆ ಕಾರಣ. ನಿನ್ನ ನಿಜ ಸ್ವರೂಪವಾದ ಪರಮಾತ್ಮನ ಧ್ಯಾನ ಮಾಡಲು ಮನಸ್ಸು ಅವಕಾಶ ಕೊಡುವುದಿಲ್ಲ. ಆದುದರಿಂದ ನಿನ್ನ ವಶದಲ್ಲಿರುವ ಪದಾರ್ಥಗಳ ಮೇಲಣ ವ್ಯಾಮೋಹವನ್ನು ತ್ಯಜಿಸು. 'ಪದಾರ್ಥಗಳು ನಿನ್ನ ವಶವಾಗಿರಲಿ; ನೀನು ಅವುಗಳ ವಶನಾಗದಿರು'. ಯಾರಾದರೂ ನಿನಗೆ ಏನನ್ನಾದರೂ ಕೊಟ್ಟಾಗ ಅದನ್ನು ನಿನಗೆ ಪರಮಾತ್ಮನೇ ಕೊಟ್ಟನೆಂದು ತಿಳಿ. ಅದನ್ನು ಇನ್ನೊಬ್ಬರಿಗೆ ಕೊಡಬೇಕಾದ ಸಮಯ ಒದಗಿದಾಗ, ನೀನು ತೆಗೆದುಕೊಳ್ಳುವಾಗ ಯಾವ ಸಂತೋಷದಿಂದಿದ್ದೆಯೋ ಅದೇ ಸಂತೋಷದಿಂದಲೇ ಕೊಟ್ಟುಬಿಡು. ಅವನ್ನು ನಿನಗೆ ಕೊಟ್ಟ ದೇವರಿಗೇ ಹಿಂದಿರುಗಿ ಕೊಡುತ್ತಿದ್ದೀ ಎಂದು ತಿಳಿದುಕೋ. ನಿನಗೆ ಒದಗುವ ಪ್ರತಿಯೊಂದು ಲಾಭ ಅಥವ ನಷ್ಟವನ್ನು ಈ ದೃಷ್ಟಿಯಿಂದ ನೋಡು. ಭಗವಂತನೇ ಕೊಡುತ್ತಾನೆ; ಅವನೇ ಹಿಂದಕ್ಕೆ ತೆಗೆದುಕೊಳ್ಳುತ್ತಾನೆ."

ಮಾರನೆ ದಿನ ಮಧ್ಯಾಹ್ನ ರಾಮಚರಣದಾಸನು "ಸ್ವಾಮಿಜೀ, ಕನ್ನಡ ಭಾಷೆಯಲ್ಲಿರುವ ಕೆಲವು ಮತಗ್ರಂಥಗಳನ್ನು ಕೊಂಡುಕೊಳ್ಳಲು ಇಚ್ಛೆ ಇದೆ. ಇದಕ್ಕಾಗಿ ಬೆಂಗಳೂರು ಪಟ್ಟಣಕ್ಕೆ ಹೋಗುತ್ತೇನೆ" ಎಂದು ಹೇಳಿದನು.

ರಾಮದಾಸನು ಸಮ್ಮತಿಸಿ "ಆಗಲಿ ರಾಮು, ಜಾಗ್ರತೆಯಾಗಿ ಬಂದುಬಿಡು. ರಾತ್ರಿ ಅಲ್ಲಿ ನಿಲ್ಲಬೇಡ" ಎಂದು ಉತ್ತರಕೊಟ್ಟನು.

ರಾಮಚರಣದಾಸನ ಬಳಿ ಸ್ವಲ್ಪ ಹಣವಿದೆಯೆಂದೂ ಅದನ್ನು ಇಡಲು ಅವನು ಭವಾನೀಶಂಕರರಾಯನ ತಾಯ ಕೈಗೆ ಕೊಟ್ಟಿದ್ದಾನೆಂದೂ ರಾಮದಾಸನಿಗೆ ಗೊತ್ತಿದ್ದಿತು. ಬೆಂಗಳೂರು ಪಟ್ಟಣ ಮಲ್ಲೇಶ್ವರಕ್ಕೆ ಎರಡು ಮೈಲಿ ದೂರ ಇದೆ. ರಾಮಚರಣದಾಸನು ಅಲ್ಲಿಗೆ ಹೋದನು. ಹಿಂದಕ್ಕೆ ಬರುವಾಗ ಇವನಿಗೆ ಮಲ್ಲೇಶ್ವರದ ಹತ್ತಿರ ದೊಡ್ಡ ರಸ್ತೆಯಲ್ಲಿ ಇಬ್ಬರು ಸಾಧುಗಳ ಭೇಟಿಯಾಯಿತು. ಅವರು ಪ್ರಾತಃಕಾಲದಿಂದಲೂ ಉಪವಾಸವೆಂದೂ, ನಾಲ್ಕಾಣೆಯನ್ನು ಕೊಟ್ಟರೆ ಉಪಕಾರವಾಗುತ್ತದೆಂದೂ, ಅವನಿಗೆ ತಿಳಿಸಿದರು. ಅವನು ಪಟ್ಟಣಕ್ಕೆ ತೆಗೆದುಕೊಂಡು ಹೋಗಿದ್ದ ದುಡ್ಡೆಲ್ಲ ಖರ್ಚಾಗಿತ್ತಾದರೂ ಭವಾನೀಶಂಕರರಾಯನ ತಾಯಹತ್ತಿರ ಇನ್ನು ಸ್ವಲ್ಪ ಹಣ ಉಳಿದಿದ್ದಿತು. ಆದುದರಿಂದ ಅವನು ಅವರಿಗೆ ತನ್ನ ಸಂಗಡ ಬಂದರೆ ಕೊಡುವುದಾಗಿ ಹೇಳಿದನು. 'ಮೊದಲು ಹತ್ತಿರದಲ್ಲಿಯೇ ಇಳಿದಿರುವ ಮಹಾತ್ಮರ ದರ್ಶನ ಮಾಡುವುದು ಒಳ್ಳೆಯದು. ನಿಮಗೆ ದರ್ಶನಮಾಡಿಸಿ ನಂತರ ನಿಮಗೆ ದುಡ್ಡುಕೊಡುವಂತೆ ಮಾಡುತ್ತೇನೆ' ಎಂದು

ಅವನು ಸೂಚಿಸಲು ಅವರು ಸಮ್ಮತಿಸಿದ್ದರು. ಅವರನ್ನು ಕರೆದು ತರುತ್ತಾ, ಅವನು ರಾಮದಾಸನಲ್ಲಿಗೆ ಮುಂದಾಗಿ ಓಡಿಬಂದು: "ಸ್ವಾಮಿಜಿ, ನಿಮ್ಮ ದರ್ಶನಕ್ಕಾಗಿ ಇಬ್ಬರು ಸಾಧುಗಳನ್ನು ಕರೆದುಕೊಂಡು ಬಂದಿದ್ದೇನೆ" ಎಂದು ಸಂತೋಷದಿಂದ ಕೈಗಳನ್ನುಜ್ಜಿಕೊಳ್ಳುತ್ತಾ ಹೇಳಿದನು.

"ಒಳ್ಳೇದು, ರಾಮ!" ಎಂದು ರಾಮದಾಸನು ಉತ್ತರಕೊಟ್ಟನು. ಸಾಧುಗಳು ಒಳಕ್ಕೆ ಬಂದರು. ರಾಮದಾಸನು ಅವರನ್ನು ತಾನು ಕುಳಿತಿದ್ದ ಕಂಬಳಿಯ ಮೇಲೆ ಕುಳಿತುಕೊಳ್ಳಲು ಸ್ವಾಗತಿಸಿದನು. ವಯಸ್ಸಿನ ತಾರತಮ್ಯದ ಮೇಲೆ ನೋಡಿದರೆ ಅವರು ಒಬ್ಬನು ಗುರು ಒಬ್ಬನು ಶಿಷ್ಯ ಎಂಬಂತಿದ್ದರು. ಅವರಲ್ಲಿ ವಯಸ್ಕನಾಗಿದ್ದವನು ನಡುಪ್ರಾಯದವನು; ಕಪ್ಪುಬಣ್ಣದ ಸ್ಥೂಲಕಾಯದ ದೃಢಾಂಗನಾಗಿದ್ದನು. ಆತನು ರಾಮದಾಸನ ಮಗ್ಗುಲಲ್ಲಿ ಕಂಬಳಿಯ ಮೇಲೆ ಕುಳಿತನು. ಚಿಕ್ಕವಯಸ್ಸಿನ ಇನ್ನೊಬ್ಬನು ತಕ್ಕಷ್ಟು ದೂರದಲ್ಲಿ ನೆಲದಮೇಲೆ ಕುಳಿತನು. ರಾಮಚರಣದಾಸನು ತನ್ನ ಆಸನದಲ್ಲಿ ಕುಳಿತನು. ಚನ್ನಾಗಿ ನೋಡಿದ್ದರಲ್ಲಿ ಹತ್ತಿರ ಕುಳಿತಿದ್ದ ಸಾಧುವಿನ ಹಲ ಕೆಲವು ವಿವರಗಳು ಕಂಡುಬಂದವು. ಅವನಿಗೆ ದಟ್ಟವಾದ ಕರಿಯ ಗಡ್ಡವಿದ್ದಿತು. ತಲೆಯಮೇಲೆ ಚನ್ನಾಗಿ ಬಾಚಿದ ಕಪ್ಪುಕೂದಲಿದ್ದಿತು. ಇದು ಕತ್ತರಿಸಲ್ಪಟ್ಟು ಗುಂಗುರುಗುಂಗುರಾಗಿ ಭುಜದಮೇಲೆ ಬಿದ್ದಿದ್ದಿತು. ಅವನಮುಖ ದಿಟ್ಟವಾಗಿ ಮತ್ತು ಒರಟಾಗಿ ವೀರ್ಯವತ್ತಾಗಿದ್ದಿತು. ಅವನು ಬಿಗಿಯಾದ ಚಿಕ್ಕದಾದ ಅರ್ಧತೋಳಿನ ಒಂದು ಅಂಗಿಯನ್ನು ತೊಟ್ಟಿದ್ದನು. ಅವನಮೈ ತುಂಬಿಕೊಂಡು ಕಟ್ಟುಮುಟ್ಟಾಗಿದ್ದಿತು. ಅವನಕೊರಳಲ್ಲಿ ದಪ್ಪ ಕೆಂಪುನೂಲಿನ ಒಂದುದಾರ, ಇದರ ಮಧ್ಯೆ ಒಂದು ರುದ್ರಾಕ್ಷಿ ಇದ್ದಿತು. ಇದೇ ದಾರಕ್ಕೆ ಕಟ್ಟಿದ್ದ ಇನ್ನೊಂದು ದಾರದಿಂದ ಒಂದು ಸಣ್ಣಸೀಸೆ ಜೋಲಾಡುತ್ತಿದ್ದಿತು. ಕೈ ಮಣಿಕಟ್ಟುಗಳ ಮೇಲೆ ಕಬ್ಬಿಣದ ಬಳೆಗಳಿದ್ದವು. ಆತನಿಂದ ಹೊರಟ ಶಬ್ದಗಳ ರೀತಿಯಿಂದ ಆತನು ತಮಿಳು ದೇಶಸ್ಥನೆಂದು ವ್ಯಕ್ತವಾಯಿತು.

## (ii) ಆಶ್ಚರ್ಯಕರ ಲೀಲೆ

### ಒಂದನೆಯ ಅಂಕ

ಈ ಸಾಧುವು ರಾಮಚರಣದಾಸನನ್ನು ಸನ್ನೆಮಾಡಿ ಹತ್ತಿರಕ್ಕೆ ಕರೆದು ಒಂದು ಒಣ ಹುಲ್ಲುಕಡ್ಡಿಯನ್ನು ತಾರೆಂದನು. ರಾಮಚರಣದಾಸನು ಹೊರಗೆ ಹೋಗಿ ಅವನಿಗೆ ಬೇಕಾದ ಒಂದು ಹುಲ್ಲುಕಡ್ಡಿಯನ್ನು ತಂದನು. ಅವನಿಂದ ಅದನ್ನು ತೆಗೆದುಕೊಂಡು ಸಾಧು ಅದನ್ನು ತನ್ನ ಬೆರಳಿನಿಂದ ಚೂರು ಚೂರುಮಾಡಿ, ರಾಮಚರಣದಾಸನನ್ನು ಕುರಿತು, "ಬಾಯಿತೆರೆ" ಎಂದನು. ರಾಮಚರಣದಾಸನು ಹಾಗೆ ಮಾಡಿದನು. ಸಾಧು ಆ ಅಗಲವಾಗಿ ಬಿಟ್ಟ ಬಾಯಿಯೊಳಕ್ಕೆ ಆ

ಚೂರುಗಳನ್ನು ಎಸೆದನು. ಆಗ ಒಂದು ವಿಚಿತ್ರ ನಡೆಯಿತು. ಅದೇನೆಂದರೆ ಆ ಕಡ್ಡಿಯ ಚೂರೆಲ್ಲ ಕೂಡಲೆ ಲವಂಗವಾದವು.

ಈಗ ಸ್ವಲ್ಪ ಹುಡಿಮಣ್ಣನ್ನು ತಾ ಎಂದು ಸಾಧು ಹೇಳಿದನು. ರಾಮಚರಣ ದಾಸನು ಒಡನೆಯೇ ತಂದುಕೊಟ್ಟನು. ಒಂದು ಹಿಡಿಮಣ್ಣನ್ನು ಕೈಯ್ಯಲ್ಲಿ ಹಿಡಿದು ಸಾಧು ಪುನಃ ಬಾಯಿ ತೆಗೆಯೆಂದು ಹೇಳಿ ರಾಮಚರಣದಾಸನು ತೆರೆಯಲು ಆ ಹಿಡಿಮಣ್ಣನ್ನು ಅವನ ಬಾಯಿಗೆ ತುರುಕಿದನು. ಅವನ ಬಾಯಲ್ಲಿ ಅದು ಸಕ್ಕರೆಯಾಗಿ ಪರಿಣಮಿಸಲು ರಾಮಚರಣದಾಸನು ಆನಂದದಿಂದ ಆ ಸಕ್ಕರೆಯ ಚೂರನ್ನು ಪ್ರದರ್ಶಿಸಿದನು. ಆದರೆ ಈ ಆನಂದ ಹೆಚ್ಚು ಕಾಲ ಇರಲಿಲ್ಲ. ಇದು ಮುಂದಿನ ಘಟನಾವಳಿಯಿಂದ ಕಾಣುತ್ತದೆ.

ಈ ಯಕ್ಷಿಣಿ ಪ್ರದರ್ಶನ ಪೂರೈಸಿದ ಒಡನೆ ಸಾಧು ರಾಮದಾಸನ ಕಡೆ ತಿರುಗಿ "ನೀವು ಬಹಳ ಕೃಶವಾಗಿದ್ದೀರಿ. ನಾನು ಎಷ್ಟು ದೃಢಾಂಗನಾಗಿದ್ದೇನೆ ನೋಡಿ. ನೀವೂ ನನ್ನಂತೆ ಇರುವುದು ನನಗೆ ಇಷ್ಟ. ನಿಮ್ಮನ್ನು ದೃಢಕಾಯರನ್ನಾಗಿ ಮಾಡಬಲ್ಲೆ. ಏನು ಹೇಳುತ್ತೀರಿ?" ಎಂದು ಕೇಳಿದನು.

ರಾಮದಾಸನು ಕೈಗಳನ್ನು ಮುಗಿದುಕೊಂಡು "ಮಹರಾಜ್, ತನಗಿರುವ ಈಗಿನ ದೇಹಸ್ಥಿತಿಯಿಂದ ರಾಮದಾಸನು ಸಂಪೂರ್ಣವಾಗಿ ತೃಪ್ತನಾಗಿದ್ದಾನೆ. ಅವನು ದೇವರು ಮಾಡಿದಂತೆ ಇದಾನೆ. ಅವನು ಮತ್ತೆ ಹೇಗೂ ಇರುವುದನ್ನು ಬಯಸುವುದಿಲ್ಲ" ಎಂದು ಉತ್ತರ ಕೊಟ್ಟನು.

ಸಾಧು "ಛೆ, ಛೆ, ನೀವು ದಪ್ಪನಾಗಿ ಬೆಳೆಯಬೇಕು. ಈಗಿರುವ ಹಾಗಿದ್ದರೆ ಏನೂ ಉಪಯೋಗವಿಲ್ಲ" ಎಂದು ಹೇಳುತ್ತ ತನ್ನ ಕೊರಳಲ್ಲಿದ್ದ ಸಣ್ಣ ಸೀಸೆಯನ್ನು ತೆಗೆದು ಅದರಿಂದ ಸ್ವಲ್ಪ ಬೂದಿಯನ್ನು ತನ್ನ ಬಲ ಅಂಗೈಮೇಲೆ ಸುರಿದು 'ಬಾಯನ್ನು ತೆಗೆ' ಎಂದು ಅಧಿಕಾರವಾಣಿಯಿಂದ ಹೇಳಿದನು. ರಾಮದಾಸನು ಬಾಯಿ ತೆಗೆಯಬೇಕಾಯಿತು. ಆ ಬೂದಿ ಒಡನೆಯೇ ಅವನ ಬಾಯಲ್ಲಿ ಬಿದ್ದಿತು. 'ನುಂಗು' ಎಂದು ಸಾಧು ಹೇಳಿದಂತೆ ಅದನ್ನು ರಾಮದಾಸನು ನುಂಗಿದನು. "ಈ ಭಸ್ಮಕ್ಕೆ ನಿಮ್ಮನ್ನು ದೃಢಕಾಯರನ್ನಾಗಿ ಮಾಡುವ ಮಂತ್ರಶಕ್ತಿ ಇದೆ" ಎಂದು ಹೇಳಿ ಆವನು ಸೀಸೆಯನ್ನು ತೆಗೆದಿಟ್ಟನು. ಈಗ ಎರಡನೆ ಅಂಕ ಪ್ರಾರಂಭವಾಯಿತು.

## ಎರಡನೆಯ ಅಂಕ

ಚಳಿ ಹೆಚ್ಚಾಗಿದ್ದುದರಿಂದ ರಾಮದಾಸನಿಗೆ ಉಣ್ಣೆಟೋಪಿಯನ್ನು ತೊಡಿಸಿ ಕಂಬಳಿಯನ್ನು ಹೊದ್ದಿಸಿದ್ದರು. ಈ ಟೋಪಿ ಬೇಕೆಂದು ಸಾಧು ಕೇಳಿದನು. ರಾಮದಾಸನು ತಲೆಯಮೇಲಿಂದ ಅದನ್ನು ತೆಗೆದು ಸಾಧುವಿಗೆ ಕೊಟ್ಟನು.

ಅದನ್ನು ತನ್ನ ತಲೆಗೆ ಹಾಕಿಕೊಂಡಾಗ ಅವನ ತಲೆ ರಾಮುದಾಸನ ತಲೆಗಿಂತ ದೊಡ್ಡದಾಗಿದ್ದು, ಟೋಪಿ ಸಾಲದೆಹೋದುದು ಕಂಡುಬಂದುದರಿಂದ ಸಾಧು ಇದು ಉಪಯೋಗವಿಲ್ಲವೆಂದು ಅದನ್ನು ಹಿಂದಕ್ಕೆ ಕೊಟ್ಟನು.

ಅನಂತರ ಅವನು ರಾಮುದಾಸನಿಗೆ ಹೊದ್ದಿಸಿದ್ದ ಕಂಬಳಿಯನ್ನು ಕೇಳಿದನು. ಇದನ್ನೂ ಒಡನೆಯೇ ಇವನ ಕೈಯಲ್ಲಿ ಇಟ್ಟುದಾಯಿತು. ನೋಡಿದ್ದರಲ್ಲಿ ಇದು ಒರಟಾಗಿ ಭಾರವಾಗಿದ್ದುದಲ್ಲದೆ ಗಾತ್ರದಲ್ಲಿ ಬಹುದೊಡ್ಡದಾಗಿದ್ದಿತು. ಸಾಧು ಅದನ್ನು ಹಿಂದಕ್ಕೆ ಬಿಸಾಟನು. ಆ ಮೇಲೆ ಸಾಧುವಿನ ದೃಷ್ಟಿ ಹುಲಿಯ ಚರ್ಮದ ಮೇಲೆ ಬಿದ್ದಿತು. ಅವನು ಬೆರಳಿಂದ ಅದರ ಮೃದುತ್ವವನ್ನು ಪರೀಕ್ಷಿಸಿದನು. ರಾಮುಚರಣದಾಸನ ಕಡೆ ನೋಡಿದರೆ ಅವನ ಮುಖದಲ್ಲಿ ಕಳವಳ ಎದ್ದು ಕಂಡು ಬರುತ್ತಿದ್ದಿತು.

ಸಾಧು "ಈ ಚರ್ಮ ಬಹು ಚನ್ನಾಗಿದೆ" ಎಂದು ಹೇಳಿ, ಅದನ್ನು ಎಳೆದು ಕೊಂಡು, "ಇದನ್ನು ಸರಿಯಾಗಿ ನೋಡೋಣ" ಎಂದನು.

ರಾಮುದಾಸನು ಎದ್ದು ಸಾಧುವಿಗೆ ಆ ಚರ್ಮವನ್ನು ಎಳೆದುಕೊಳ್ಳಲು ಅವ ಕಾಶಕೊಟ್ಟನು. ಸಾಧುವಿನ ಮುಖದಲ್ಲಿ ಸಮ್ಮತಿಸೂಚಕವಾದ ಮುಗುಳ್ನಗೆ ಹಾಯ್ದಿತು.

ಸಾಧು ಶಿಷ್ಯನ ಕಡೆತಿರುಗಿ "ಇಗೋ, ಇದನ್ನು ತೆಗೆದುಕೋ. ಹೆಗಲಮೇಲೆ ಹಾಕಿಕೋ. ಎಷ್ಟು ಹಗುರವಾಗಿ ಮೃದುವಾಗಿದೆ!" ಎಂದನು.

ರಾಮುಚರಣದಾಸನ ಮುಖ ಆಗ ನೋಡುವಂತಿದ್ದಿತು. ಅದು ನಿರ್ಜೀವ ಪಾಂಡುರವಾಯಿತು. ಸಾಧುವಿನ ದೃಷ್ಟಿ ರಾಮುಚರಣದಾಸನ ಕಡೆ ತಿರುಗಿತು. ಆದರೆ ಅವನ ಮುಖದ ಮೇಲಣ ಬಿಳಿಚನ್ನೂ ನಿರಾಶೆಯನ್ನೂ ನೋಡುವ ತೊಂದರೆ ತೆಗೆದುಕೊಳ್ಳಲಿಲ್ಲ. ಸಾಧುವಿನ ಮುಂದಿನ ಗಮನ ರಾಮುಚರಣದಾಸನ ಮೈಮೇಲೆ ಹೊಳೆಯುತ್ತಿದ್ದ ಕೆಂಪುಶಹಲಿನ ಮೇಲೆ ಬಿದ್ದಿತು. ಅವನು ಅದನ್ನು ಒಂದೇ ನೆಟ್ಟ ದೃಷ್ಟಿಯಿಂದ ನೋಡಲಾರಂಭಿಸಿದನು. ಇದರ ಅಭಿಪ್ರಾಯ ರಾಮುಚರಣದಾಸ ನಿಗೆ ತಿಳಿಯದೆ ಹೋಗಲಿಲ್ಲ. ಮುಂದೆ ಏನು ಆಗುತ್ತದೆಂದು ಊಹಿಸಿ, ಕೇಳುವು ದಕ್ಕೆ ಮುಂಚೆಯೇ ಅದನ್ನು ಕೊಟ್ಟುಬಿಡುವುದು ಯುಕ್ತವೆಂದು ಯೋಚಿಸಿ ಅವನು ವಿಧೇಯನಾದ ಹುಡುಗನಂತೆ ತಾನು ಹೊದೆದಿದ್ದ ಶಹಲನ್ನು ತೆಗೆದು ಸಾಧುವಿನ ಮುಂದಿಟ್ಟನು.

ರಾಮುಚರಣದಾಸನ ಇಂಗಿತಜ್ಞಾನಕ್ಕೆ ಸಾಧು ಮೆಚ್ಚಿಗೆಯನ್ನು ತೋರಿಸಿ ದನು. ಶಹಲು ಚೇಲನ ಇನ್ನೊಂದು ಭುಜವನ್ನು ಅಲಂಕರಿಸಿತು. ಈ ಕ್ಷಣದ ಕಳವಳ ರಾಮುಚರಣದಾಸನ ತೊಳಗುವ ಕರಿಮಣಿಯ ಜಪಸರವನ್ನು ಕೈಯಿಂದ

ಬೀಳುವಂತೆ ಮಾಡಿತು. ಇವನ ಪೀಠದ ಬಳಿ ಬಿದ್ದು ಅದು ಸಾಧುವಿನ ದೃಷ್ಟಿಗೆ ಮುಂದಿನ ಆಕರವಾಯಿತು. ಇಲ್ಲಿ ಹೇಳಬೇಕಾದುದೇನಂದರೆ ಸಾಧು ಅಭಿಜ್ಞನು ಮಾತ್ರವೇ ಅಲ್ಲದೆ ಕಲೋಪಾಸಕನೂ ಆಗಿದ್ದನು.

ಕೇಳಿ ತೆಗೆದುಕೊಳ್ಳುವ ಸಮಾರಂಭವಿಲ್ಲದೆ-ಇದರ ಅವಶ್ಯಕತೆಯೇ ಇರಲಿಲ್ಲ-ಸಾಧು ಜಪಸರವನ್ನು ನೆಲದಮೇಲಿಂದ ಎತ್ತಿಕೊಂಡು ತನ್ನ ಎರಡು ಕೈಗಳಿಂದ ಬಿಡಿಸಿದನು. ನಿಮಿಷಾರ್ಧದಲ್ಲಿ ಜಪಮಾಲೆ ಸಾಧುವಿನ ವಿಶಾಲವಾದ ವಕ್ಷಸ್ಥಲದ ಮೇಲೆ ಸೊಗಸಾಗಿ ತೇಲುತ್ತ ಅದನ್ನು ಅಲಂಕರಿಸಿತು. ಆತನು ದೊಡ್ಡದಾಗಿ ಹಲ್ಲುಕಿರಿಯುತ್ತಾ ತನ್ನನ್ನೇ ನೋಡಿಕೊಳ್ಳುತ್ತಾ ತನ್ನ ಸೌಖ್ಯಾನುಭವವನ್ನು ವ್ಯಕ್ತಪಡಿಸಿದನು.

### ಈಗ ನಾಟಕದ ಮೂರನೆಯದಾದ ಮಾಲಿ ಅಂಕ

### ಮೂರನೆಯ ಅಂಕ

ರಾಮಚರಣದಾಸನು ಸಾಧುವಿಗೆ ನಾಲ್ಕು ಆಣೆಯನ್ನು ಕೊಡುವುದಾಗಿ ಮಾತುಕೊಟ್ಟಿದ್ದನು. ಇದನ್ನು ಕೇಳುವ ಸಮಯ ಒದಗಿತು. ಸಾಧು ಇದನ್ನು ಜ್ಞಾಪಿಸಲು ರಾಮಚರಣದಾಸನು "ಮಹರಾಜ್, ದುಡ್ಡು ಇಲ್ಲಿಗೆ ಒಂದು ಫರ್ಲಾಂಗು ದೂರದಲ್ಲಿರುವ ಮನೆಯ ಯಜಮಾನಿಯಲ್ಲಿದೆ. ನಾನು ಅಲ್ಲಿಗೆ ಹೋಗಿ ತರಬೇಕು" ಎಂದು ಹೇಳಿದನು.

ಸಾಧು "ತೊಂದರೆ ಇಲ್ಲ. ನೀನು ಹೋಗಿತರಬಹುದು. ನೀನು ಬರುವ ವರೆಗೂ ಕಾದಿರುತ್ತೇನೆ. ಇದನ್ನೇನೂ ನಾನು ತೊಂದರೆಯೆಂದು ಭಾವಿಸುವುದಿಲ್ಲ. ಮಗು, ಹೋಗಿ ಬಾರಪ್ಪ!" ಎಂದನು

ರಾಮಚರಣದಾಸನು ಹೋಗಿ ಹತ್ತು ನಿಮಿಷಗಳೊಳಗೆ ಬಂದನು. ಅವನು ಓಡಿ ಹೋಗಿ ಓಡಿ ಬಂದಿರಬೇಕು. ಅವನು ತನ್ನ ಸರ್ವಸ್ವವೂ ತುಂಬಿದ್ದ ಒಂದು ಸಣ್ಣ ಹೆಣಿಗೆಯ ಚೀಲವನ್ನು ಹಿಡಿದುಕೊಂಡು ಬಂದನು.

ಸಾಧುವಿನ ಎದುರಿಗೆ ಕುಳಿತು ರಾಮಚರಣದಾಸನು ಚೀಲವನ್ನು ಬಿಚ್ಚಿ ತಲೆಕೆಳಗಾಗಿ ಹಿಡಿದು, ಅದರಲ್ಲಿದ್ದ ಹಣವನ್ನು ಸುರಿದನು. ಝಣ ಝಣ ಶಬ್ದ ಮಾಡುತ್ತ ಒಂದಾಗುತ್ತಲೊಂದರಂತೆ ನಾಣ್ಯಗಳು ಉದುರಿದವು. ನಾಲ್ಕು ಬೆಳ್ಳಿ ರೂಪಾಯಿ ಮತ್ತು ಒಂದು ನಾಲ್ಕಾಣೆ ನಾಣ್ಯ. ಸಾಧುವಿಗೆ ಕೊಡುವ ಬಗ್ಗೆ ನಾಲ್ಕಾಣೆಯನ್ನು ತೆಗೆದುಕೊಳ್ಳುವುದಕ್ಕೆ ರಾಮಚರಣದಾಸನು ಕೈಹಾಕುವುದರೊಳಗಾಗಿ ಸಾಧುವಿನ ಬಲಗೈ ನೀಡಿತು. ಅವನು ಆ ದುಡ್ಡನ್ನೆಲ್ಲಾ ಬಾಚಿಕೊಂಡು ತನ್ನ ಕೈಯಲ್ಲಿ ಹಿಡಿದು ಮಾತನಾಡದೆ ಜೇಬಿಗೆ ಸೇರಿಸಿದನು. ಇಷ್ಟೆಲ್ಲಾ ನಿಮಿಷಾರ್ಧದಲ್ಲಿ ನಡೆದು ಹೋಯಿತು. ರಾಮಚರಣದಾಸನು ಕೈಯ್ಯಲ್ಲಿ ಬರಿ ಚೀಲವನ್ನು ಹಿಡಿದುಕೊಂಡು ತಲೆಯನ್ನೆತ್ತಿ ಜಂತೆಯನ್ನು ದೃಷ್ಟಿಸುತ್ತಿದ್ದನು.

"ರಾಮ, ಚೀಲವನ್ನು ಕೊಡದೆ ಏಕೆ ನಿರ್ದಯ? ಅದು ನಿನಗಿಂತಲೂ ಸಾಧುವಿಗೆ ಹೆಚ್ಚು ಅವಶ್ಯಕ ಎನ್ನುವುದು ಕಾಣುವುದಿಲ್ಲವೆ?"

ರಾಮುದಾಸನ ಈ ಮಾತನ್ನು ಕೇಳಿ ರಾಮಚರಣದಾಸನು ಮೇಲೆತ್ತಿದ್ದ ತಲೆಯನ್ನು ತಗ್ಗಿಸಿದನು. ಸಕ್ಕರೆಯನ್ನು ತಿನ್ನುವಾಗಿದ್ದ ಸಂತೋಷದ ಚಿಹ್ನೆಯ ಕೊನೆಯ ಕುರುಹು ಅವನ ಮುಖದಿಂದ ಸಂಪೂರ್ಣವಾಗಿ ಅಳಿಸಿ ಹೋಗಿದ್ದಿತು. ಅವನು ಬರಿಯದಾದ ಚೀಲವನ್ನು ಸಾಧುವಿಗೆ ಕೊಟ್ಟನು. ಆತನು ಕೂಡಲೇ ನಾಣ್ಯಗಳನ್ನೆಲ್ಲಾ ಅದಕ್ಕೆ ತುಂಬಿ ಚಚ್ಚರದಿಂದ ಅದನ್ನು ಜೇಬಿಗೆ ಇಳಿಯಬಿಟ್ಟನು.

ಸಾಧು ತನ್ನ ನಾಟಕವನ್ನು ಸಂಪೂರ್ಣವಾಗಿ ಅಭಿನಯಿಸಿದ ಮೇಲೆ ಎದ್ದು ನಿಂತು, ಹೊರಡುವುದಕ್ಕೆ ಮುನ್ನ ಹೋಗಿಬರುತ್ತೇನೆಂದು ಹೇಳುವ ಸಾಮಾನ್ಯ ಸಂಪ್ರದಾಯವನ್ನು ಅನುಸರಿಸದೆ, ತನ್ನ ಶಿಷ್ಯನನ್ನು ಕರೆದುಕೊಂಡು ಮನೆಯ ಹೊರಗೆ ಹೋಗಿ ಅದೃಶ್ಯನಾದನು.

ಇಷ್ಟು ಕಾಲವೂ ಹೊರಹೊಮ್ಮಲು ಬಯಸುತ್ತಿದ್ದ ನಗೆಯನ್ನು ರಾಮುದಾಸನು ಬಹುಕಷ್ಟದಿಂದ ತಡೆದಿದ್ದನು. ಅದು ಈಗ ಆ ತಡೆದ ಎಲ್ಲ ಶಕ್ತಿಯಿಂದ ಉಕ್ಕಿ ಹರಿಯಿತು.

## (iii) ಋಷಿಗಳ ಸಂಗಡ ಹಬ್ಬದೂಟ

ರಾಮುದಾಸನು ಕೆಲವು ನಿಮಿಷಕಾಲ ನಗುತ್ತಿರುವವರೆಗೂ, ಬಾಯಿಮುಚ್ಚಿಕೊಂಡು, ಅಸಮ್ಮತಿಯನ್ನು ಸೂಚಿಸುತ್ತ, ಯೋಚನಾಪರನಾಗಿದ್ದ ರಾಮಚರಣದಾಸನು ಅನಂತರ ತಾನೂ ನಗುವುದರಲ್ಲಿ ಸೇರಿದನು. ಅವನಿಗೆ ನಗದೇ ಇರಲು ಆಗಲಿಲ್ಲ.

ಅವನು "ಸ್ವಾಮಿಜಿ, ಸಾಧು ಯಾವ ಪದಾರ್ಥಗಳನ್ನು ತೆಗೆದುಕೊಂಡಾಗಲೂ, ಕೊನೆಗೆ ದುಡ್ಡನ್ನು ಬಾಚಿಕೊಂಡಾಗಲೂ, ನನಗೇನೂ ಬೇಸರವಾಗಲಿಲ್ಲ. ಆದರೆ ನಿಜವಾಗಿ ಸ್ವಾಮಿಜಿ, ಅವನು ಹುಲಿಯ ಚರ್ಮವನ್ನು ತೆಗೆದುಕೊಂಡಾಗ ಮಾತ್ರ ನನ್ನ ಹೊಟ್ಟೆಯಲ್ಲಿ ಶೂಲ ಹಾಕಿದಂತಾಯಿತು. ಇಷ್ಟೆಲ್ಲ ಮಾಡಿರುವುದು ನಿಮ್ಮ ಕೆಲಸವೆಂದೇ ನನಗೆ ಕಾಣುತ್ತಿದೆ" ಎಂದು ಒಂದು ವಿಧವಾಗಿ ನಗುತ್ತ "ನೀವೇನೂ ತಿಳಿಯದ ನಿರಪರಾಧಿಯಂತೆ ಸುಮ್ಮನೆ ಇರುವಿರಿ. ಇದೆಲ್ಲಾ ನಿಮ್ಮ ಲೀಲೆ. ನಿನ್ನೆ ರಾತ್ರಿ ಹೇಳಿದಿರಿ, ಯಾವ ವಸ್ತುವಿನಲ್ಲೂ ಮಮಕಾರವಿರಬಾರದೆಂದು. ನನಗೆ ಬುದ್ಧಿ ಕಲಿಸುವುದಕ್ಕೋಸ್ಕರ ಈ ದಿವಸ ಈ ನಾಟಕವನ್ನು ಹೂಡಿದಿರಿ. ಇದೆಲ್ಲವೂ ನಿಮ್ಮ ಕೆಲಸವೆನ್ನುವುದರಲ್ಲಿ ಏನೂ ಸಂಶಯವಿಲ್ಲ" ಎಂದನು.

ರಾಮುದಾಸನು "ರಾಮ, ನೀನೊಂದು ಸೋಜಿಗ! ಎಲ್ಲೋ ಹೋಗುತ್ತಿದ್ದ ಸಾಧುಗಳನ್ನು, ರಾಮುದಾಸನ ದರ್ಶನಕ್ಕೆಂದು ಕರೆತಂದವನು ನೀನೆಂಬುದನ್ನು

ಮರೆತುಬಿಟ್ಟೆಯಾ? ಅವರಿಗೆ ದುಡ್ಡನ್ನು ಕೊಡುವ ನೆಪದಿಂದ ಕರೆದುಕೊಂಡು ಬಂದರೂ, ನಿನ್ನ ನಿಜಪಾದಕಾರಣ ಅವರು ತೆಗೆದುಕೊಂಡು ಹೋಗಿರುವ ವಸ್ತುಗಳನ್ನು ಅವರಿಗೆ ಕೊಡಬೇಕೆಂದೇ ಇದ್ದಿರಬೇಕು. ಏನು ಹೇಳಿದರೂ ಅವರು ತೆಗೆದುಕೊಂಡು ಹೋಗಿರುವುದು ಅವರಿಗೆ ಸೇರಿದ ಪದಾರ್ಥಗಳನ್ನೇ. ಆದುದರಿಂದ ಹೋಯಿತೆಂದು ವ್ಯಥೆಪಡಲು ಏನೂಕಾರಣವಿಲ್ಲ. ಜ್ಞಾಪಕವಿರಲಿ, (ಕೊಡುವವನೂ ಭಗವಂತನೇ, ತೆಗೆದುಕೊಂಡು ಹೋಗುವವನೂ ಭಗವಂತನೇ)' ಎಂದು ಹೇಳಿದನು.

ಇದಾದ ಮೇಲೆ ರಾಮದಾಸನ ಸಲಹೆಯಂತೆ ರಾಮಚರಣದಾಸನು ಉತ್ತರ ಹಿಂದೂಸ್ಥಾನದ ಪ್ರವಾಸವನ್ನು ಕೈಗೊಂಡನು.

ರಾಮದಾಸನಿಗೆ ಎಷ್ಟೋ ಜನರಿಂದ ಭೋಜನಕ್ಕೆ ಆಮಂತ್ರಣ ಬಂದಿತು. ಅಂತಹ ಯಾವ ಊಟವನ್ನು ಒಪ್ಪಿಕೊಳ್ಳುವಾಗಲೂ ತನ್ನೊಂದಿಗೆ ಹನ್ನೆರಡು ಮಂದಿ ಸಾಧುಗಳನ್ನು ಆಹ್ವಾನಿಸಬೇಕೆಂದು ಅವನು ನಿಯಮ ಹಾಕಿದನು. ಹೀಗೆ ಅನೇಕಕಡೆ ಔತಣಗಳಾದುವು. ಸೀನಿಯರ್ ರ್‍ಯಾಂಗ್ಲರ್ ಕುಪ್ಪುಸ್ವಾಮಿಐಯಂಗಾರ್ರ ಮನೆಯ ಔತಣದಲ್ಲಿ ಕವಿ ಚಟ್ಟೋಪಾಧ್ಯಾಯ ಅವನ ಪತ್ನಿ ಸಹ ಸೇರಿದ್ದರು. ಅದು ಬಹು ಸಂತೋಷದ ಒಂದು ಸಮಾರಂಭ. ಹನ್ನೆರಡು ಜನ ಬೇರೆ ಬೇರೆ ರೀತಿಯ ಸಾಧುಗಳು ಕೂಡಿದ್ದುದು ನೋಡುವುದಕ್ಕೆ ವಿಚಿತ್ರವಾಗಿದ್ದಿತು. ಪ್ರತಿಯೊಬ್ಬಸಾಧುವೂ ಬೇರೆ ಬೇರೆ ಸಿದ್ಧಾಂತ, ಬೇರೆ ಬೇರೆ ಪಂಥಕ್ಕೆ ಸೇರಿದವನಾಗಿದ್ದನು. ತಿಲಕಧಾರಿ, ಜಟಾಧಾರಿ, ಮುಂಡನಕಾಷಾಯಧಾರಿ, ಯೋಗದಂಡಿ, ಉದಾಸಿ, ದಶನಾಮಿ, ವ್ರಜನಾಸಿ, ರಾಮಾನಂದಿ ಮುಂತಾದವರಿದ್ದರು. ಒಂದು ವಿಶಾಲವಾದ ಕೊಠಡಿಯಲ್ಲಿ ಊಟಕ್ಕೆ ಬಡಿಸಿದರು. ರಾಮದಾಸನೂ ಚಟ್ಟೋಪಾಧ್ಯಾಯನೂ ಸಾಧುಗಳ ಪಂಕ್ತಿಯಲ್ಲೇ ಊಟಕ್ಕೆ ಕುಳಿತರು. ಈ ಸಂಧಿಯ ಅಪೂರ್ವತೆಯಿಂದ ಉತ್ಸುಕನಾಗಿ ಕವಿ ಚಟ್ಟೋಪಾಧ್ಯಾಯ “ ರಾಮದಾಸರೇ, ನನಗೆ ಈಗ ನನ್ನನ್ನು ನಮ್ಮ ದೇಶದ ಹಿಂದನಕಾಲದ ಋಷಿಗಳ ದಿವಸಕ್ಕೆ ಒಯ್ದಂತೆ ತೋರುತ್ತಿದೆ. ನಿಜವಾಗಿಯೂ ನಾನು ಆ ಪೂರ್ವಿಕರೊಡನೆ ಭೋಜನ ಮಾಡುತ್ತಿಲ್ಲವೆ? ” ಎಂದನು.

ನಿಜವಾಗಿಯೂ ಈ ಅನುಭವ ಅಸದೃಶವಾದುದು. ಊಟವಾದ ನಂತರ ಸಾಧುಗಳು ಹೊರಟು ಹೋದರು. ರಾಮದಾಸನು ಸ್ವಲ್ಪ ಹೊತ್ತು ಮಾತನಾಡುತ್ತಿದ್ದು ತನ್ನ ಆವಾಸಕ್ಕೆ ಹಿಂದಿರುಗಿದನು.

ಕೆಲವು ದಿನ ಕಳೆದ ನಂತರ ರಾಮದಾಸನು ಪುನಃ ಪ್ರಾಣಾಯಾಮವನ್ನು ಪ್ರಾರಂಭಿಸಿದನು. ಈಸಲ ಭವಾನೀಶಂಕರರಾಯನೂ ಅವನ ಜೊತೆಗೆ ಸೇರಿದನು.

ಹಗಲೂ ರಾತ್ರಿ ಪ್ರಾಣಾಯಾಮದ ಅಭ್ಯಾಸ ಭರದಿಂದ ಸಾಗಿತು. ಆಗ ಮೊದಲಿನಂತೆಯೇ ಸಹಿಸಲಸಾಧ್ಯವಾದ ಹಸಿವು ತಲೆದೋರಿತು. ಆಹಾರಕ್ಕಾಗಿ ರಾಮದಾಸನು ಭವಾನೀಶಂಕರರಾಯನ ಮನೆಗೆ ದಿನ ಒಂದಕ್ಕೆ ಎರಡು ಮೂರು ಸಲ ಓಡಿ ಹೋಗಬೇಕಾಗಿ ಬಂದಿತು. ಒಂದು ಸಲ ಮಧ್ಯಾಹ್ನದ ಹೊತ್ತು, ಅವನು ಅಡಿಗೆ ಮನೆಗೆ ಹೋದನು. ತಾಯಿ ದೋಸೆಯನ್ನು ಹೊಯ್ಯುತ್ತಿದ್ದಳು. ಅವನು ದೋಸೆಯನ್ನು ಕೇಳಿದನು. ವಾತ್ಸಲ್ಯಪೂರಿತಳಾದ ತಾಯಿ ಮೊದಲನೆ ಸಲ ಎರಡು ದೋಸೆಗಳನ್ನು ಕೊಟ್ಟಳು. ಅವೆರಡೂ ಕ್ಷಣದಲ್ಲಿ ಮಾಯವಾಗಿ ಅವನು ಮತ್ತಿಷ್ಟನ್ನು ಬಯಸಿದನು. ಮಾತೆ ಕೊಟ್ಟ ಹಾಗೆಲ್ಲಾ ದೋಸೆಗಳು ಉದರಾರ್ಪಣವಾದುವು. ಹೀಗೆ ಅವನು ಒಟ್ಟಿನಲ್ಲಿ ಹದಿನಾಲ್ಕು ದೋಸೆ ನಾಲ್ಕು ಬಟ್ಟಲು ಕಾಫಿ ಆರು ಬಾಳೆ ಹಣ್ಣು ಮುಗಿಸಿರಬೇಕು. ನಂತರ ಎಷ್ಟೋ ಸ್ವಲ್ಪ ಹೊಟ್ಟೆ ತುಂಬಿದಂತಾಗಿ, ಆ ಸ್ಥಳವನ್ನು ಬಿಟ್ಟು ತನ್ನ ಆವಾಸಕ್ಕೆ ಸೇರಿ, ಪುನಃ ಪ್ರಾಣಾಯಾಮವನ್ನು ಆರಂಭಿಸಿದನು. ಹತ್ತು ನಿಮಿಷದಲ್ಲಿ ಜಠರಾಗ್ನಿ ಮತ್ತೆ ಪ್ರಜ್ವಲಿಸಿತು. ಕೂಡಲೆ ಭವಾನೀಶಂಕರರಾಯನ ಮನೆಗೆ ಕಾಲುಗಳಿಗೆ ಶಕ್ತಿ ಇದ್ದಷ್ಟು ವೇಗದಿಂದ ಓಡಿದನು. ಪುನಃ ಮನಸ್ವಿಯಾಗಿ ತಿಂಡಿತಿಂದನು. ತಿಂಡಿಪೋತ ರಾಕ್ಷಸ ಬಕಾಸುರನು ತನ್ನ ಹೊಟ್ಟೆಯೊಳಗೆ ಹೊಕ್ಕಿರಬೇಕೆಂದು ಹೇಳಿದನು. ಕೊಂಚಕಾಲದಮೇಲೆ ಪ್ರಾಣಾಯಾಮ ಅಭ್ಯಾಸ ನಿಂತು ಹಸಿವು ಹಿಡಿತಕ್ಕೆ ಬಂದಿತು.

ರಾಮದಾಸನು ಬೆಂಗಳೂರಿನಲ್ಲಿ ಎರಡು ತಿಂಗಳಿಗೆ ಮೇಲೆ ಇದ್ದನು. ಆಗ ಅವನಿಗೆ ಝಾನ್ಸಿಗೆ ಹೋಗಬೇಕೆಂಬ ಅಭಿಲಾಷೆ ಹುಟ್ಟಿತು. ಝಾನ್ಸಿಗೆ ಹಿಂದೆ ಹೋಗಿದ್ದಾಗ ಅಲ್ಲಿ ದೊರೆತ ಸ್ನೇಹಿತರು ಪತ್ರದಮೇಲೆ ಪತ್ರಬರೆದು ಇವನನ್ನು ನೋಡಬೇಕೆಂಬ ತಮ್ಮ ಉತ್ಕಟೇಚ್ಛೆಯನ್ನು ವ್ಯಕ್ತಪಡಿಸಿದ್ದರು. ಅವನು ಬೆಂಗಳೂರಿಂದ ಕಾಸರಗೋಡಿಗೆ ಹೊರಟನು. ಪ್ರಯಾಣಮಾಡುವ ಸಮಯದಲ್ಲಿ ಭವಾನೀಶಂಕರರಾಯನೂ ಅವನಮನೆಯವರೂ ರೈಲ್ವೇಸ್ಟೇಷನ್ನಿಗೆ ಬಂದು ಬೀಳ್ಕೊಟ್ಟರು. ನಿಜವಾಗಿಯೂ ಅವರ ಪ್ರೀತಿಗೆ ಮಿತಿಯೇ ಇರಲಿಲ್ಲ.

ಸಕಾಲದಲ್ಲಿ ಕಾಸರಗೋಡನ್ನು ಮುಟ್ಟಿದ್ದಾಯಿತು. ಅನೇಕ ಸ್ನೇಹಿತರೂ, ಸಂನ್ಯಾಸಿ ರಾಮಚರಣನೂ, ರಾಮದಾಸನ ಆಗಮನವನ್ನು ನಿರೀಕ್ಷಿಸುತ್ತಿದ್ದರು. ರಾಮದಾಸನು ಇವರನ್ನೆಲ್ಲಾ ಕಂಡು, ಗುರುದೇವನ ದರ್ಶನವನ್ನು ಪಡೆದು ರಾಮಚರಣನೊಂದಿಗೆ ಮಂಗಳೂರಿಗೆ ಪ್ರಯಾಣ ಮಾಡಿದನು.

ಮಂಗಳೂರಲ್ಲಿದ್ದ ಮೂರು ದಿವಸಗಳಲ್ಲಿ ಒಂದು ದಿವಸ ಪೆಂಟ್‌ಲೆಂಡ್ ಪೇಟೆಯಲ್ಲಿ ಒಬ್ಬ ಭಕ್ತನ ಮನೆಗೆ ಹೋಗಿದ್ದಾಗ ಈ ಮನೆಯವರು ತುಂಬ ಪ್ರೀತ್ಯಾದರಗಳಿಂದ ಕಂಡರು. ರಾಮಚರಣನೂ ಸಂಗಡಲೇ ಇದ್ದನು. ಹಿಂದಣ ವರ್ಷ ಸಾಧನಕಾಲದಲ್ಲಿ ರಾಮದಾಸನು ವಾಸಿಸುತ್ತಿದ್ದ ಕದರಿ ಗುಡ್ಡದಮೇಲೆ ಇಬ್ಬರೂ ಸುತ್ತಾಡಿಕೊಂಡು ಬರುತ್ತಿದ್ದರು.

## (iv) ಒಂದು ತಾಮ್ರದ ಕಾಸೂ ಇಲ್ಲ

ಮಂಗಳೂರಿನಲ್ಲಿ ಮೂರು ದಿನಗಳಿದ್ದ ನಂತರ ರಾಮದಾಸನು ಬೊಂಬಾಯಿಗೆ ಹಡಗು ಹತ್ತಿದನು. ಹಡಗಿನಲ್ಲಿದ್ದವರು ರಾಮದಾಸನನ್ನು ತುಂಬ ಪ್ರೀತಿಯಿಂದಲೂ, ಎಚ್ಚರಿಕೆಯಿಂದಲೂ ನೋಡಿಕೊಂಡರು. ಅವನು ಬೊಂಬಾಯಿ ರೇವನ್ನು ಮುಟ್ಟಿದನು. ರಾಮದಾಸನ ಆಗಮನವನ್ನು ಪೂರ್ವಭಾವಿಯಾಗಿ ಸಂಜೀವರಾಯರಿಗೆ ತಿಳಿಸಿರಲಿಲ್ಲ. ಹಡಗು ಮುಟ್ಟಿದ ಹೊತ್ತು ಸಾಯಂಕಾಲವಾಗಿದ್ದುದರಿಂದ, ರಾಮದಾಸನು ಪ್ರಕಾಶವಾದ ದೀಪಗಳ ಬೀದಿಯಲ್ಲಿ ಒಂದರಿಂದ ಇನ್ನೊಂದಕ್ಕೆ ಸುಮ್ಮನೆ ಸುತ್ತಿದನು. ರಸ್ತೆಗಳು ಸಂಧಿಸುವ ಸ್ಥಳಗಳಲ್ಲಿದ್ದ ಪೋಲೀಸಿನವರು ದಾರಿಯನ್ನು ತಿಳಿಸಿದರು. ಕೊನೆಗೆ ಸಂಜೀವರಾಯನು ವಾಸಿಸುತ್ತಿದ್ದ ಗಾಮದೇವಿಯನ್ನು ಸೇರಿದನು. ಈ ಹಟಾತ್ತಾದ ದರ್ಶನದಿಂದ ಸಂಜೀವರಾಯರಿಗೂ ಅವರ ಕುಟುಂಬಕ್ಕೂ ಆಶ್ಚರ್ಯವಾಯಿತು. ಅವರು ಇವನನ್ನು ಸಂತೋಷದಿಂದ ಸ್ವಾಗತಿಸಿದರು. ಅದೇ ಕೆಲವು ನಿಮಿಷಗಳ ಮುಂಚೆ, ಅವರು ರಾಮದಾಸನ ವಿಚಾರವಾಗಿ ಮಾತನಾಡುತ್ತಿದ್ದರಂತೆ. ಆಗಲೇ ರಾಮದಾಸನು ಅಲ್ಲಿಗೆ ಹೋಗಿ ಸೇರಿದನು. ರಾಮದಾಸನು ಬೊಂಬಾಯಲ್ಲಿ ಸುಮಾರು ಐದು ದಿನ ಇದ್ದನು.

ಈ ಕಾಲದಲ್ಲಿ ರಾಮದಾಸನ ಪೂರ್ವಾಶ್ರಮದ ಪತ್ನಿ ರುಕುಮಾಬಾಯಿ, ಮಗಳು ರಮಾಬಾಯಿಯೊಡನೆ, ಬೊಂಬಾಯಿಗೆ ಸೇರಿದ ಕಾರ್ಲಾದಲ್ಲಿ ತನ್ನ ತಂಗಿಯ ಮನೆಯಲ್ಲಿ ವಾಸಿಸುತ್ತಿದ್ದಳು. ಹುಡುಗಿಗೆ ಅಗ ಸುಮಾರು ಹದಿಮೂರು ವರ್ಷ ವಯಸ್ಸು ಈ ಮನೆಯಿಂದ ಆಹ್ವಾನ ಬಂದುದರಿಂದ ರಾಮದಾಸನು ಅಲ್ಲಿಗೆ ಹೋದನು. ರುಕುಮಾಬಾಯಿ ಮತ್ತು ಮಗಳು ರಾಮದಾಸನೆದುರಿಗೆ ಬಂದು ಕುಳಿತರು. ರುಕುಮಾಬಾಯಿ "ಹುಡುಗಿಬೆಳೆಯುತ್ತಿದೆ ಮದುವೆ ಯೋಚನೆ ಏನು?" ಎಂದಳು. ಪ್ರಶ್ನೆ, ನೇರವಾಗಿ ರಾಮದಾಸನ ಮುಖಕ್ಕೆ ತಿವಿದಿತ್ತು. "ನನ್ನಲ್ಲಿ ಒಂದು ಕಾಸೂ ಸಹ ಇಲ್ಲ; ಹುಡುಗಿಗೆ ಮದುವೆಯಾಗಲೇ ಬೇಕು."

ರಾಮದಾಸನು ಸ್ವಲ್ಪ ಹಾಸ್ಯವಾಗಿ "ನಿನ್ನಲ್ಲಿ ಒಂದು ಕಾಸೂ ಇಲ್ಲವೆಂದು ನೀನು ಒಪ್ಪಿಕೊಳ್ಳುತ್ತಿರುವಂತೆ ತನ್ನಲ್ಲೂ ಒಂದು ತಾಮ್ರದ ಚಿಕ್ಕಾಸೂ ಇಲ್ಲವೆಂದು ರಾಮದಾಸನೂ ಒಪ್ಪಿಕೊಳ್ಳಬೇಕಾಗುತ್ತದೆ" ಎಂದು ಹೇಳಿ ನಕ್ಕನು.

ಈ ಉತ್ತರವನ್ನು ಕೇಳಿ ರುಕುಮಾಬಾಯಿಗೆ ತುಂಬ ಬೇಸರವಾಯಿತು. ಆಕೆ ರಾಮದಾಸನಿಗೆ ಅವನು ಕರ್ತವ್ಯದಿಂದ ಪರಾಙ್ಮುಖನಾಗಿರುವುದರ ಮತ್ತು ಹೊಣೆಯಿಲ್ಲದೆ ನಡೆಯುತ್ತಿರುವುದರ ವಿಷಯವಾಗಿ ಭಯಂಕರವಾದ ವರ್ಣನೆಯನ್ನು ಕೊಟ್ಟಳು. ರಾಮದಾಸನು ತನಗೇನೂ ಸಂಬಂಧವಿಲ್ಲದರೀತಿಯಲ್ಲಿ ಆಕೆಯ ಮಾತನ್ನು ಕೇಳುತ್ತ "ಈ ವಿಚಾರದಲ್ಲಿ ಏಕೆ ಕಳವಳ ಪಡುತ್ತೀಯೆ?

ದೇವರ ಸಂಕಲ್ಪ ಎಲ್ಲಕ್ಕೂ ದೊಡ್ಡದು. ಎಲ್ಲ ಅವನ ಇಚ್ಛೆಯಂತೆ ಅವನಿಗೆ ಇಷ್ಟ ಬಂದ ಕಾಲದಲ್ಲಿನಡೆಯುತ್ತದೆ '' ಎಂದು ಉತ್ತರ ಕೊಟ್ಟನು.

ಆಕೆ " ಹೀಗೆ ಹೇಗೆ ಹೇಳಬಲ್ಲಿರಿ? ಮನುಷ್ಯ ಪ್ರಯತ್ನಕ್ಕೆ ಏನೂ ಬೆಲೆಯಿಲ್ಲವೆಂದು ಹೇಳುವಿರೇನು ?" ಎಂದು ಮೂದಲಿಸಿದಳು.

" ಮನುಷ್ಯಪ್ರಯತ್ನವೇನೋ ಆವಶ್ಯಕ. ಆದರೆ ಬರೀ ಮನುಷ್ಯ ಪ್ರಯತ್ನವೇನೂ ಫಲಕಾರಿಯಲ್ಲವೆಂದೂ, (ದೈವೇಚ್ಛೆಯೇ ಪ್ರಾಮುಖ್ಯವೆಂದೂ, ದೈವೇಚ್ಛೆಯಿಂದಲೇ ಸಕಲಕಾರ್ಯಗಳೂ ನಡೆಯುವುವೆಂದೂ ತಿಳಿಯುವುದಕ್ಕೆ ಮಾತ್ರವೇ ಮನುಷ್ಯ ಪ್ರಯತ್ನ ಆವಶ್ಯಕ.) ಈ ತತ್ವ ಅನುಭವಕ್ಕೆ ಬಂದನಂತರ, ಮನುಷ್ಯ ಪ್ರಯತ್ನ ತಾನಾಗಿಯೇ ನಿಂತು ಹೋಗುತ್ತದೆ. ಆಗ ದೈವೇಚ್ಛೆ ನಿನ್ನಲ್ಲಿ ತನ್ನ ಕಾರ್ಯವನ್ನು ಪ್ರಾರಂಭಿಸುತ್ತದೆ. ಇಲ್ಲಿಂದಾಚೆಗೆ ನೀನು ಪ್ರತಿಯೊಂದು ಕೆಲಸವನ್ನೂ ಆತಂಕ, ಹೆದರಿಕೆ, ದುಃಖ ಯಾವುದೂ ಇಲ್ಲದೆ, ಮುಕ್ತಜೀವಿಯಾಗಿ ಮಾಡುವೆ ಇದೇ ನಿಜವಾಗಿ ಹೊಂದಬೇಕಾದ ಜೀವನ. ಆದುದರಿಂದ ಭಗವಂತನಿಗೆ ಶರಣಳಾಗಿ ಎಲ್ಲವನ್ನೂ ಅವನ ಇಚ್ಛೆಗೆ ಬಿಡು '' ಎಂದು ಉತ್ತರಕೊಟ್ಟನು.

ಈ ವೇದಾಂತ ಆಕೆಯ ಮನಸ್ಸಿಗೆ ಸರಿಹೋದಂತೆ ಕಾಣಲಿಲ್ಲ. ಈ ವಿಚಾರ ಅಷ್ಟಕ್ಕೇ ನಿಂತಿತು. ರಾಮದಾಸನು ಮಾರನೆ ದಿನ ಸಂಜೆ ಸಂಜೀವರಾಯರ ಮನೆಗೆ ಹಿಂದಿರುಗಿದನು.

ಬೊಂಬಾಯಿನಿಂದ ರಾಮದಾಸನು ಹಡಗಿನಲ್ಲಿ ವೀರಾಲ್‌ಗೆ ಪ್ರಯಾಣ ಮಾಡಿದನು. ಹಡಗಿನಲ್ಲಿ ಅವನಿಗೆ ಹಲವು ಮಹಮ್ಮದೀಯರ ಜೊತೆ ದೊರೆಯಿತು. ಅವರೆಲ್ಲ ರಾಮದಾಸನನ್ನು ಬಹು ಆದರದಿಂದ ಕಂಡರು. ಹಡಗಿನಲ್ಲಿದ್ದ ಹೋಟೆಲಿನ ಒಬ್ಬ ಬ್ರಾಹ್ಮಣ ಹುಡುಗನಿಗೆ ರಾಮದಾಸನಮೇಲೆ ತುಂಬಾ ಪ್ರೀತಿಯುಂಟಾಗಿ ಅವನು ರಾಮದಾಸನಿಗೆ ತಿಂಡಿಯನ್ನು ಒದಗಿಸಿದನು. ಹಡಗಿನ ಇತರ ಪ್ರಯಾಣಿಕರೂ ರಾಮದಾಸನ ವಿಚಾರದಲ್ಲಿ ಬಹು ಪ್ರೀತಿಯನ್ನು ತೋರಿದರು.

---

# ಅಧ್ಯಾಯ ೧೪

## ಜುನಾಗಡ ಲಿಂಬ್ಡಿ

### (i) ಸಂತರು ಹಸುಳೆಗಳಂತೆ

ಮಾರನೆ ಬೆಳಿಗ್ಗೆ ಹಡಗು ವೀರಾವಲ್ ಬಂದರನ್ನು ಮುಟ್ಟಿತು. ರಾಮದಾಸನು ಹಡಗಿನಿಂದಿಳಿದು ಊರೊಳಗೆ ಹೋದನು. ವೀರಾವಲ್ ಬಂದರು ಹಡಗುಗಳು ನಿಲ್ಲುವ ಮುಖ್ಯ ವ್ಯಾಪಾರಸ್ಥಳ. ರಾಮದಾಸನು ನೇರವಾಗಿ ರೈಲ್ವೇ ಸ್ಟೇಷ

ನ್ನಿಗೆ ನಡೆದನು, ದಾರಿಯಲ್ಲಿ ಹಾಲು ಮಾರುವವರು ರಾಮದಾಸನನ್ನು ಕರೆದು ಬಟ್ಟಲುಗಳಲ್ಲಿ ಹಾಲನ್ನು ಕೊಟ್ಟರು. ಇದರಿಂದ ರಾಮದಾಸನಿಗೆ ಆಪ್ಯಾಯಮಾನವಾಯಿತು. ಸ್ಟೇಷನ್ನಿನಲ್ಲಿ ಅವನಿಗೆ ಒಬ್ಬ ಸಂನ್ಯಾಸಿ ಸಿಕ್ಕಿದನು. ಅವನೊಡನೆ ರೈಲಿನಲ್ಲಿ ಪ್ರಯಾಣಮಾಡಿ ರಾಮದಾಸನು ರಾತ್ರಿ ಹತ್ತು ಗಂಟೆಗೆ ಜುನಾಗಡವನ್ನು ಸೇರಿದನು. ಇಲ್ಲಿ ರಾಮದಾಸನು ಹಿಂದೆ ಇದೇ ಊರಿಗೆ ಬಂದಿದ್ದಾಗ್ಗೆ ಮೂರುವಾರಗಳ ಕಾಲ ವಾಸವಿದ್ದ ಮಹಂತ ಕಾಶಿಗಿರಜಿಯ ಸಂನ್ಯಾಸಿಗಳ ಅಖಾಡಕ್ಕೆ ಹೋದನು. ಕಾಶಿಗಿರಜಿಯು ರಾಮದಾಸನನ್ನು ಬಹು ಸಂತೋಷದಿಂದ ಸ್ವಾಗತಿಸಿದನು. ಮಾರನೆಯದಿನ ರಾಮದಾಸನು ಮರ್ಗಲಾಲನನ್ನು ಅವನ ಮನೆಯಲ್ಲಿ ಕಂಡನು. ರಾಮದಾಸನನ್ನು ನೋಡಿ ಮರ್ಗಲಾಲನಿಗೂ ಅತ್ಯಂತ ಸಂತೋಷವಾಯಿತು. ಇಲ್ಲಿ ಜ್ಞಾಪಿಸಬೇಕಾದುದು ಏನೆಂದರೆ ರಾಮದಾಸನು ಹಿಂದೆ ಈ ಊರಿನಲ್ಲಿದ್ದಾಗ್ಗೆ ಮರ್ಗಲಾಲ್ ಮತ್ತು ಕಾಂತಿಲಾಲ್ ಇಬ್ಬರೂ ಅವನಲ್ಲಿ ತುಂಬ ಭಕ್ತಿಯನ್ನು ತೋರಿಸಿ ಅವನನ್ನು ಬಹು ಪ್ರೀತಿಯಿಂದಲೂ ಜಾಗರೂಕತೆಯಿಂದಲೂ ನೋಡಿಕೊಂಡಿದ್ದರು.

ಊರಿಗೆ ಅರ್ಧಮೈಲಿದೂರದಲ್ಲಿರುವ ಕಾಶಿಗಿರಜಿಗೆ ಸೇರಿದ ಆಶ್ರಮದ ತೋಟದಲ್ಲಿ ರಾಮದಾಸನು ವಾಸಿಸಬೇಕೆಂದು ನಿಷ್ಕರ್ಷೆಯಾಯಿತು. ಈ ತೋಟದಲ್ಲಿ ಬಾಗಿಲಲ್ಲಿದ್ದ ಗರಿಯ ಗುಡಿಸಿಲೊಂದಿದ್ದಿತು. ಇದರಲ್ಲಿ ಇಬ್ಬರು ಸಾಧುಗಳು ಇದ್ದರು. ರಾಮದಾಸನು ಇವರ ಸಂಗಡ ಸೇರಿದನು. ಅವರಲ್ಲಿ ಒಬ್ಬನು ದೊಡ್ಡ ಗಡ್ಡದಾತ. ಇನ್ನೊಬ್ಬನು ನುಣ್ಣಗೆ ಮುಂಡನ ಮಾಡಿಸಿಕೊಂಡಿದ್ದ ಸಂನ್ಯಾಸಿ. ಇವನ ಹೆಸರು ಆತ್ಮಾನಂದ.

ಆತ್ಮಾನಂದ ಸ್ಥೂಲಕಾಯದವನು. ಸಹಜವಾಗಿ ಉಪರತನು, ಶಾಂತನು. ಇವನ ಒಂದು ಲಕ್ಷಣ, ಪ್ರತಿ ಐದು ಅಥವ ಹತ್ತು ನಿಮಿಷಗಳಿಗೆ ಒಮ್ಮೆ ಯಾವ ಕಾರಣವೂ ಇಲ್ಲದೆ ತನ್ನಷ್ಟಕ್ಕೆ ತಾನೇ ನಗುವುದು. ಶರೀರ ಮತ್ತು ಬಟ್ಟೆ ಎರಡರ ಸ್ವಚ್ಛತೆಯ ವಿಚಾರಕ್ಕೆ ಇವನು ಮನಸ್ಸು ಕೊಡುತ್ತಿರಲಿಲ್ಲ. ಗಂಟೆಗಟ್ಟಲೆ ಒಂದೇ ಸ್ಥಳದಲ್ಲಿ ಮೌನವಾಗಿ ಶೂನ್ಯದೃಷ್ಟಿಯಿಂದ ಕುಳಿತಿರುತ್ತಿದ್ದನು. ಆತನನ್ನು ನೋಡಿದಲ್ಲಿ ಆತನ ಪಾಲಿಗೆ ಈ ಪ್ರಪಂಚವೇ ಇರಲಿಲ್ಲವೆಂಬಂತ್ತಿದ್ದಿತು.

ಗಡ್ಡದ ಸನ್ಯಾಸಿ ಇನ್ನೊಬ್ಬ ಬಹಳ ಚಟವಟಿಕೆಯ ಮುದುಕ. ದಿನವೆಲ್ಲ ಒಂದಲ್ಲದಿದ್ದರೆ ಒಂದು ಕೆಲಸ ಮಾಡುತ್ತ ವ್ಯಾಪೃತನಾಗಿರುವನು. ತನ್ನ ಒಬ್ಬನೇ ಮಗ ಊರಿನಿಂದ ಬಂದು ಪೀಡಿಸಿ ಜಗಳವಾಡುತ್ತಿದ್ದ ಸಂದರ್ಭದಲ್ಲಿ ವಿನಾ, ಉಳಿದಕಾಲದಲ್ಲೆಲ್ಲಾ ಈತನು ಹಸನ್ಮುಖಿಯಾಗಿ ಇರುತ್ತ, ಎಲ್ಲರಲ್ಲಿಯೂ ಸಂತೋಷದಿಂದ ವರ್ತಿಸುತ್ತಿದ್ದನು. ತಂದೆ ಮಕ್ಕಳು ಹುಂಜಗಳಂತೆ ಕೈಕೈಮುಟ್ಟಿ ಕಾದಾ

ಡುತ್ತಿದ್ದರು. ಇಷ್ಟು ಕಲಹಗಳಾದರೂ ಇಬ್ಬರಿಗೂ ಅನ್ಯೋನ್ಯ ಪ್ರೀತಿ ಇರುವುದು ರಾಮದಾಸನಿಗೆ ಚನ್ನಾಗಿ ಕಾಣುತ್ತಿದ್ದಿತು. ಹಾಗೆ ನೋಡಿದರೆ ಈ ಪ್ರಪಂಚದಲ್ಲಿ ಎಲ್ಲ ಜಗಳ ಬಡಿದಾಟವೂ ಅದೇ ಮೂಲದಿಂದ ಜನಿಸುವುದು ಕಾಣುತ್ತದೆ.

ಇಬ್ಬರು ಸಾಧುಗಳೂ ರಾಮದಾಸನನ್ನು ತುಂಬ ಆದರ ಸತ್ಕಾರದಿಂದ ಕಂಡರು. ಆಗ ಹಿಮಂತಋತುವಾದುದರಿಂದ ಚಳಿ ವಿಪರೀತ. ಗುಡಿಸಲಿನ ನೆಲದ ಮಧ್ಯದಲ್ಲಿ ಒಂದು ಅಗ್ಗಿಷ್ಟಿಕೆ ಇದ್ದಿತು. ಸಾಧುಗಳು ಅದರ ಎರಡು ಪಕ್ಕಗಳಲ್ಲಿ ಒಂದು ಮೂಲೆಗೆ ತಲೆಕೊಟ್ಟು ಮಲಗುತ್ತಿದ್ದರು. ರಾಮದಾಸನು ಇನ್ನೊಂದು ಪಕ್ಕದಲ್ಲಿ ಮಲಗುತ್ತಿದ್ದನು. ಮರ್ಗಲಾಲನು ಪ್ರತಿ ದಿನವೂ ತೋಟಕ್ಕೆ ಬಂದು ರಾಮದಾಸನನ್ನು ಮಧ್ಯಾಹ್ನದ ಊಟಕ್ಕೆ ಕರೆದುಕೊಂಡು ಹೋಗುತ್ತಿದ್ದನು. ಗಡ್ಡದ ವೃದ್ಧ ಸಾಧು ತನಗೂ ಆತ್ಮಾನಂದನಿಗೂ ರೊಟ್ಟಿಯನ್ನು ಸುಟ್ಟುಕೊಳ್ಳುತ್ತಿದ್ದನು. ಇವರು ಅನೇಕ ಸಲ ಬರಿ ರೊಟ್ಟಿ ಉಪ್ಪು ಮೆಣಸಿನಕಾಯಿಯಿಂದ ತೃಪ್ತಿಪಡಬೇಕಾಗಿದ್ದಿತು. ಒಂದು ದಿನ ಬೆಳಿಗ್ಗೆ ಆತ್ಮಾನಂದನಿಗೆ ಹಸಿವು ಎಲ್ಲೋ ಅಧಿಕವಾಗಿ ಅವನು ಹಿಂದಣ ರಾತ್ರಿಯ ರೊಟ್ಟಿ ಏನಾದರೂ ಉಳಿದಿದೆಯೇ ಎಂದು ಮುದುಕನನ್ನು ಕೇಳಲು, ಮುದುಕನು ಬಟ್ಟೆಯಲ್ಲಿದ್ದ ಕೆಲವು ಒಣ ರೊಟ್ಟಿಯ ಚೂರುಗಳನ್ನು ಕೊಟ್ಟನು. ಈ ಚೂರುಗಳು ದಪ್ಪನಾದ ಬಿಳಿಯ ಚರ್ಮದ ತುಂಡುಗಳ ಹಾಗೆ ಕಾಣುತ್ತಿದ್ದುವು. ಆತ್ಮಾನಂದನು ಅಂಗಿಯ ತೋಳನ್ನು ಹಿಂಪಕ್ಕೆ ಸವರಿಕೊಂಡು, ತಿನ್ನುವುದಕ್ಕೆ ಪ್ರಾರಂಭಿಸಿದನು. ಒರಟಾಗಿದ್ದಾಗ್ಯೂ ಆ ಚೂರುಗಳು ಒಂದಾಗುತ್ತ ಒಂದರಂತೆ ಅವನ ದೊಡ್ಡ ಬಾಯೊಳಕ್ಕೆ ಸೇರಿಹೋದುವು. ಭದ್ರವಾಗಿದ್ದ ಹಲ್ಲುಗಳಿಂದ ಅಗಿಯುತ್ತ ರಸವತ್ತಾದ ಕವಳವನ್ನು ಅಪೇಕ್ಷಿಸುವ ನಾಲಿಗೆಗೆ ತೃಪ್ತಿಪಡಿಸುವಂತೆ, ಅವನು ರುಚಿ ಇಲ್ಲದ ಒಣಗಿದ ಚೂರುಗಳನ್ನು ಬಾಯಲ್ಲಿ ಹಾಕಿಕೊಳ್ಳುವಾಗ, ಪ್ರತಿ ಒಂದು ಸಲವೂ 'ಲಡ್ಡು, ಲಡ್ಡು, ಲಡ್ಡು, ಪೂರಿ, ಪೂರಿ, ಪೂರಿ, ಜಿಲೇಬಿ, ಜಿಲೇಬಿ, ಜಿಲೇಬಿ, ಬರ್ಫಿ, ಬರ್ಫಿ, ಬರ್ಫಿ' ಎಂದು ಒದರುತ್ತಿದ್ದನು.

ಆ ಮಧ್ಯಾಹ್ನವೇ ಅವನು ಹೊಟ್ಟೆ ಶೂಲೆ ಎಂದು ಕೂಗಲಾರಂಭಿಸಿದನು. ಒಣಗಿದ ಒರಟಾದ ರೊಟ್ಟಿಯಿಂದ ಅವನ ಜೀರ್ಣಶಕ್ತಿ ತಲೆಕೆಳಗಾಗಿದ್ದುದು ಕಂಡಿತು. ಅವನು ವೈದ್ಯರ ಹತ್ತಿರ ಹೋಗುತ್ತೇನೆಂದು ಹೋದನು. ಸಾಯಂಕಾಲ ನಗುಮುಖದಿಂದ ಆರೋಗ್ಯವಾಗಿ ಹಿಂದಿರುಗಿ ಬಂದನು.

ವೃದ್ಧ ಸಾಧು "ಮಹರಾಜ್, ವೈದ್ಯರಿಂದ ಔಷದ ತೆಗೆದುಕೊಂಡಿರಾ? ಎಂದು ಕೇಳಿದನು.

ಆತ್ಮಾನಂದನು ಸರಸವಾಗಿ ಮುಗುಳ್ನಗೆ ನಗುತ್ತಾ, "ತೆಗೆದುಕೊಂಡೆ. ನಾಲ್ಕು ಗುಳಿಗೆಗಳನ್ನು ಕೊಟ್ಟರು. ಅವುಗಳೆಲ್ಲವನ್ನೂ ನುಂಗಿದೆ, ಅವು ಕ್ರಿಕೆಟ್

ಚಂಡುಗಳಷ್ಟು ದಪ್ಪವಾಗಿದ್ದುವು. ನಿಮಗೆ ಗೊತ್ತಿಲ್ಲವೇ ಲಾಡುಗಳು? ಲಾಡುಗಳನ್ನೇ ವೈದ್ಯರು ಕೊಟ್ಟಿದ್ದು! ಅವು ಬಹು ಒಳ್ಳೆ ಔಷಧಿ ಎಂದರು. ಈಗೆಲ್ಲಾ ಸರಿಯಾಗಿದೆ. ಒಳ್ಳೇ ಗುಳಿಗೆಗಳು" ಎಂದು ನಕ್ಕನು.

ಒಂದು ದಿನ ಮರ್ಗಲಾಲನು ರಾಮುದಾಸನನ್ನು ಜುನಾಗಡದ ವ್ಯಾಸಜಿ ಎಂಬ ಪ್ರಸಿದ್ಧ ಸಂತನ ಬಳಿಗೆ ಕರೆದುಕೊಂಡು ಹೋದನು. ಈ ಸಂತನು ಸುಮಾರು ಎಪ್ಪತ್ತು ವರ್ಷ ವಯಸ್ಸಿನ ವೃದ್ಧನು; ತೆಳ್ಳಗೆ ಗಿಡ್ಡಾಗಿದ್ದನು. ಈತನ ವಿಷಯದಲ್ಲಿ ಆಶ್ಚರ್ಯಕರವಾದ ವಿಚಾರವೇನೆಂದರೆ, ಸುಕ್ಕು ಬಿದ್ದಿದ್ದ ಇವನ ಚರ್ಮ ಚಿನ್ನದ ಮೆರುಗಿನಿಂದ ಹೊಳೆಯುತ್ತಿದ್ದಿತು. ರಾಮುದಾಸನು ಒಂದು ಗಂಟೆ ಈತನ ಸುಖಸಹವಾಸದಲ್ಲಿ ಇದ್ದನು. ಸಾಧು ಸರಳ ಸ್ವಭಾವದವನಾಗಿ ಶಿಶುವಿನೋದಾದಿಯಲ್ಲಿ ಆಡಂಬರ ರಹಿತನೂ ಕಳಂಕ ರಹಿತನೂ ಆಗಿದ್ದುದನ್ನು ಕಂಡನು. ಈತನು ರಾಮುದಾಸನನ್ನು ಕುರಿತು ವಿಶೇಷ ಪ್ರೀತಿಯನ್ನು ತೋರಿದನು. ಇವನು ರಾಮುದಾಸನಿಗೆ ಹಳೆಯದಾದ ಎರಡು ಪ್ರಶ್ನೆಗಳನ್ನು ಹಾಕಿದನು.

"ಚಂಚಲವಾದ ಮನಸ್ಸನ್ನು ವಶಕ್ಕೆ ತರುವುದು ಹೇಗೆ?"

"ದೇವರ ನಾಮವನ್ನು ಸದಾ ಜಪಿಸುವುದು ಮತ್ತು ಸರ್ವ ಕಾರ್ಯಗಳನ್ನೂ ದೇವರಿಗೆ ಅರ್ಪಿಸುವುದರಿಂದ" ಎಂದು ರಾಮುದಾಸನು ಉತ್ತರವಿತ್ತನು.

'ಈ ಅಭ್ಯಾಸದಿಂದ ಏನಾಗುತ್ತದೆ?' ಎಂದು ಮುಂದಿನ ಪ್ರಶ್ನೆ.

'ಭಗವಂತನನ್ನು ಎಲ್ಲ ಕಡೆಯಲ್ಲಿಯೂ ಕಾಣುವುದಾಗುತ್ತದೆ. ಇದೇ ಅಮರತ್ವ ಮತ್ತು ಆನಂದ.'

ಈ ಉತ್ತರಗಳಿಂದ ಪ್ರೀತನಾಗಿ, ಸಾಧು, ರಾಮುದಾಸನನ್ನು ಪ್ರೇಮದಿಂದ ಆಲಂಗಿಸಿದನು.

ಇನ್ನೊಂದು ಸಲ ಮರ್ಗಲಾಲನು ರಾಮುದಾಸನನ್ನು ಗಿರಿನಾರ್ ಬೆಟ್ಟದ ದಾರಿಯಲ್ಲಿರುವ ದೂರದ ಮುಚಕುಂದಾಶ್ರಮಕ್ಕೆ ಕರೆದುಕೊಂಡು ಹೋದನು. ಹಿಂದೆ ಜುನಾಗಡಕ್ಕೆ ಬಂದಿದ್ದಾಗ್ಗೆ ರಾಮುದಾಸನು ಇಲ್ಲಿ ವಾಸಿಸುತ್ತಿದ್ದನು. ಈ ಆಶ್ರಮದಲ್ಲಿ ಈಗ ಒಬ್ಬ ಸಂನ್ಯಾಸಿನಿ ವಾಸವಾಗಿದ್ದಳು. ಈಕೆಯನ್ನು ಮಾತಾಜಿ ಎಂದು ಕರೆಯುತ್ತಿದ್ದರು.

ಈಕೆ ಚಿಕ್ಕವಯಸ್ಸಿನವಳು, ಕಾವಿ ಬಟ್ಟೆಯನ್ನು ಧರಿಸಿದ್ದಳು, ಆಶ್ರಮದಲ್ಲಿ ಒಬ್ಬಳೇ ವಾಸಿಸುತ್ತಿದ್ದಳು. ಆಕೆಯ ಪ್ರಶಾಂತವಾದ ಮುಖದ ಮೇಲೆ ಶುದ್ಧ ವರ್ಚಸ್ಸು ಕಾಣುತ್ತಿದ್ದಿತು. ಇವಳ ಬಾಯಿಂದ 'ಶಿವೋಽಹಂ' ಎಂಬ ಧ್ವನಿ ಸದಾ ಹೊರಡುತ್ತಿದ್ದಿತು. ರಾಮುದಾಸನನ್ನು ನೋಡಿ ಈಕೆ ತುಂಬ ಸಂತೋಷ ವ್ಯಕ್ತಪಡಿಸಿದಳು. ಈಕೆ ಸಂಯಮಿತವೂ ಪಾವನವೂ ಆದ ಬಾಳನ್ನು

ನಡೆಸುತ್ತಿದ್ದಳು. ಓ ಮಾತಾಜಿ, ನಿನ್ನ ಕೀರ್ತಿ ಬೆಳಗಲಿ! ಆಶ್ರಮದಲ್ಲಿ ಸ್ವಲ್ಪ ಹೊತ್ತು ಇದ್ದು ಮರ್ಗಲಾಲನೂ ರಾಮದಾಸನೂ ಪಟ್ಟಣಕ್ಕೆ ಹಿಂದಿರುಗಿದರು.

ಕಾಂತಿಲಾಲ್ ಮತ್ತು ಇವನ ತಂದೆಯ ಹುಟ್ಟೂರು ಇದ್ದುದ್ದು ಕಾಥೆವಾಡ ದೇಶದ ಲಿಂಬ್ಡಿ ಸಂಸ್ಥಾನದಲ್ಲಿ. ರಾಮದಾಸನು ಜುನಗಡಕ್ಕೆ ಬಂದಿರುವುದನ್ನು ತಿಳಿದು ಕಾಂತಿಲಾಲನು ಅವನನ್ನು ಕರೆದುಕೊಂಡು ಹೋಗಲು ಜುನಾಗಡಕ್ಕೆ ಬಂದನು. ಸಕಾಲದಲ್ಲಿ ರಾಮದಾಸನು ಕಾಂತಿಲಾಲ್ ಮರ್ಗಲಾಲರ ಸಂಗಡ ಲಿಂಬ್ಡಿಗೆ ಪ್ರಯಾಣ ಮಾಡಿದನು.

## (ii) ಕಲ್ಲುಸಕ್ಕರೆ ಮಾತೆಯರು.

ಲಿಂಬ್ಡಿ ಒಂದು ಸಣ್ಣ ರಾಜ್ಯ. ಒಬ್ಬ ರಜಪೂತ ಸರದಾರರು ಇದಕ್ಕೆ ಅಧಿಪತಿ. ಅವರನ್ನು ಥಾಕೂರ್ ಸಾಹೇಬ್ ಎನ್ನುತ್ತಾರೆ. ಆಳುವ ಅರಸರ ಹೆಸರು ಸರ್ ದೌಲತ್‌ಸಿಂಗ್. ಇವರ ಮನಸ್ಸು ವಿಶಾಲ, ಬುದ್ಧಿ ಉದಾರ. ಪ್ರಜೆಗಳಿಗೆ ಇವರೆಂದರೆ ಬಹು ಪ್ರೀತಿ. ಇವರು ಜನರ ಪುರೋಭಿವೃದ್ಧಿ ಮತ್ತು ಹಿತಚಿಂತನೆಯ ನಿಜವಾದ ಪಾಲಕರೆಂಬುದನ್ನು ತೋರಿದ್ದಾರೆ.

ಲಿಂಬ್ಡಿಯಲ್ಲಿ ರಾಮದಾಸನನ್ನು ಕಾಂತಿಲಾಲನ ಮನೆಯಲ್ಲಿ ಇಳಿಸಿದರು. ಈ ಮನೆ ಒಂದು ಸಂದಿಯಲ್ಲಿದೆ. ರಾಮದಾಸನ ಆಗಮನದ ವಾರ್ತೆಯನ್ನು ಕೇಳಿ ನೂರಾರು ಜನರು ಇವನನ್ನು ನೋಡುವುಕ್ಕಾಗಿ ಕಾಂತಿಲಾಲನ ಮನೆಗೆ ಆತುರದಿಂದ ಬಂದರು. ಬಗೆ ಬಗೆಯ ಜನ ಒಳಗೆ ನುಗ್ಗಿದರು. ರಾಜ್ಯದ ಅಧಿಕಾರಿಗಳು, ವರ್ತಕರು, ವೈದ್ಯರು, ಎಲ್ಲರೂ ಪ್ರತಿ ದಿನವೂ ಬರುತ್ತಿದ್ದರು. ಇವರಲ್ಲದೆ ಮಧ್ಯಮ ತರಗತಿಯ ಮತ್ತು ಬಡವರ ಗಂಡಸರೂ ಹೆಂಗಸರೂ ಬಹು ಹೆಚ್ಚಾಗಿ ಬರುತ್ತಿದ್ದರು. ಎಲ್ಲ ಜಾತಿಯವರೂ, ಕೋಮಿನವರೂ ಇದ್ದರೂ ಹೆಚ್ಚು ಭಾಗ ಬ್ರಾಹ್ಮಣರು, ಜೈನರು ಆಗಿದ್ದರು. ದೇಶದ ಜನರಲ್ಲಿ ಹೆಚ್ಚು ಭಾಗ ಈ ಜಾತಿಗಳಿಗೆ ಸೇರಿದವರು. ರಾಮದಾಸನು ಇವರನ್ನೆಲ್ಲ ಎರಡನೆ ಅಂತಸ್ತಿನಲ್ಲಿ ಜಮಖಾನೆ ಹಾಸಿದ ಒಂದು ದೊಡ್ಡ ಕೊಠಡಿಯಲ್ಲಿ ಭೇಟಿ ಮಾಡುತ್ತ ರಾತ್ರಿಯ ಹೊತ್ತು ಮೂರನೆ ಅಂತಸ್ತಿನ ಒಂದು ಸಣ್ಣ ಕೊಠಡಿಯಲ್ಲಿ ಮಲಗುತ್ತಿದ್ದನು.

ಕಿಕ್ಕಿರಿದ ಸಭೆಯಲ್ಲಿ ರಾಮದಾಸನು ಭಗವನ್ನಾಮದ ಸವಿ ಮತ್ತು ಪ್ರಭಾವ ವನ್ನೂ ದೈವಸಾಕ್ಷಾತ್ಕಾರದ ಆನಂದವನ್ನೂ ಕುರಿತು ಪ್ರೀತಿ ಸಂತೋಷಗಳಿಂದ ಮಾತನಾಡುತ್ತಿದ್ದನು. ಸಭಿಕರು ಅವನ ಮಾತನ್ನು ಏಕಚಿತ್ತರಾಗಿ ಕೇಳು ತ್ತಿದ್ದರು. ಇಲ್ಲಿ ರಾಮದಾಸನು ಬರಿಯ ಹಾಲಿನ ಆಹಾರದಲ್ಲಿರುವುದಾಗಿ ನಿರ್ಧರಿಸಿಕೊಂಡನು. ಈ ಸುದ್ದಿ ಹರಡಿ ನೂರಾರು ತಾಯಂದಿರು ಬೆಳಗಿನಿಂದ ಮಧ್ಯಾಹ್ನದವರೆಗೂ ಲೋಟಗಳಲ್ಲಿ ಹಾಲನ್ನು ತರಲು ಆರಂಭವಾಯಿತು. ಅವರು ತಂದ ಹಾಲು ಎಷ್ಟಿತ್ತೆಂದರೆ ರಾಮದಾಸನು ಸುಮಾರು ಅದರಲ್ಲಿ ಸ್ನಾನಮಾಡು

ವುದು ಸಾಧ್ಯವೆನಿಸುತ್ತಿದ್ದಿತು. ಹಾಲು ತಂದ ವಾತ್ಸಲ್ಯವಂತರ ಪ್ರೀತ್ಯರ್ಥವಾಗಿ ಅವನು ಒಂದೊಂದು ಗುಟುಕು, ಅನೇಕಾವರ್ತಿ ಬೆರಳ ಕೊನೆಯಿಂದ ಒಂದು ತೊಟ್ಟನ್ನು ತೆಗೆದುಕೊಳ್ಳಬೇಕಾದ ಸ್ಥಿತಿಯುಂಟಾಯಿತು.

ಈ ರೀತಿ ಕಾಂತಿಲಾಲನ ಮನೆ, ಹಗಲೂ ರಾತ್ರಿ ಬಹಳ ಹೊತ್ತಿನವರೆಗೂ ಸಂಭ್ರಮ ಕೋಲಾಹಲಗಳ ಆಶ್ರಯವಾಯಿತು. ಕಾಂತಿಲಾಲನು " ಸ್ವಾಮೀಜಿ : ತಾವು ನಮ್ಮ ಈ ಬಡ ಕುಟೀರವನ್ನು ಒಂದು ದೇವಾಲಯವೆಂಬಂತೆ ಮಾಡಿದ್ದೀರಿ" ಎಂದನು.

ರಾಮದಾಸನ ಆಗಮನ ತಿಳಿದುಬಂದು ಥಾಕೂರ್ ಸಾಹೇಬರು ರಾಮದಾಸನನ್ನು ಅರಮನೆಗೆ ಕರೆದುಕೊಂಡು ಹೋಗಲು ಒಬ್ಬ ಅಧಿಕಾರಿಯನ್ನು ಕಳುಹಿಸಿದರು. ಬೆಳಿಗ್ಗೆ ಸುಮಾರು ಹನ್ನೊಂದು ಗಂಟೆಗೆ ಇವರು ರಾಮದಾಸನನ್ನು ಅರಮನೆಗೆ ಒಂದು ಗಾಡಿಯಲ್ಲಿ ಕರೆದುಕೊಂಡು ಹೋದರು. ಕಾಂತಿಲಾಲ್ ಮೊಹನ್‌ಲಾಲರು ಜೊತೆಯಲ್ಲೇ ಬಂದರು. ಥಾಕೂರ್ ಸಾಹೇಬರು ರಾಮದಾಸನಿಗೆ ಸುಸಜ್ಜಿತವಾದ ಒಂದು ಸಣ್ಣ ಕೊಠಡಿಯಲ್ಲಿ ಭೇಟಿ ಕೊಟ್ಟರು. ರಾಮದಾಸನು ಜಮಖಾನದ ಮೇಲೆ ಹಾಕಿದ್ದ ಒಂದು ಆಸನದ ಮೇಲೆ ಕುಳಿತನು. ಅಲ್ಲಿದ್ದವರು ಅಲ್ಲಿ ಹಾಸಿದ್ದ ಜಮಖಾನದ ಮೇಲೆ ಕುಳಿತರು. ಥಾಕೂರ್ ಸಾಹೇಬರ ಮಗ್ಗುಲಲ್ಲಿ ಆಂಗ್ಲ ಮಹಿಳೆಯೊಬ್ಬಳು ಕುಳಿತಿದ್ದಳು. ರಾಮದಾಸನು ತನ್ನ ಸಂಚಾರ ಕಾಲದಲ್ಲಿ ತನಗೆ ಉಂಟಾದ ಅನುಭವಗಳನ್ನು ಧಾರಾಳವಾಗಿ ವಿವರಿಸಿದನು. ಒಬ್ಬ ತಾಯಿ ಆಸಕ್ತಿಯಿಂದ ಕೇಳುವಾಗ ಅವಳ ಮಗು ತಾನು ಮಾಡಿದುದನ್ನೆಲ್ಲಾ ಸಲಿಗೆಯಿಂದ ಹೇಳುವ ರೀತಿಯಲ್ಲಿ ರಾಮದಾಸನು ಮಾತನಾಡುತ್ತಿದ್ದನು. ನಿಜವಾಗಿ, ಅವನ ಮಾತನ್ನು ಕೇಳುತ್ತಿದ್ದವರಲ್ಲಿ ಅಂತಹ ಮಾತೆಯೊಬ್ಬಳಿದ್ದಳು. ಅವಳು ಆ ಆಂಗ್ಲ ಮಹಿಳೆ ಮಿಸ್ ಎಲಿಜಬೆತ್‌ಷಾರ್ಪ್. ಇನ್ನು ಮುಂದೆ ಈಕೆಯನ್ನು ಎಲಿಜಬೆತ್ ಮಾತೆಯೆಂದೂ, ಥಾಕೂರ್ ಸಾಹೇಬರನ್ನು ರಾಜಾರಾಮರೆಂದು ಕರೆಯಲಾಗುತ್ತದೆ. ರಾಮದಾಸನ ನಿಷ್ಕಪಟವೂ ಸರಳವೂ ಆದ ಸಂಭಾಷಣೆಯನ್ನು ಕೇಳುವುದರಲ್ಲಿ ರಾಜಾರಾಮರಿಗೆ ತುಂಬ ಆನಂದ. ಅವರು ಅದರಲ್ಲಿ ತೀರ ಮಗ್ನರಾಗಿ ಹೊತ್ತು ಎಷ್ಟಾಯಿತೆಂದು ತಿಳಿಯದೆ ಇರುವರು. ಹನ್ನೆರಡೂವರೆ ಗಂಟೆಯಾದಾಗ ರಾಜಾರಾಮರು ತಮ್ಮ ಕೈಗಡಿಯಾರವನ್ನು ನೋಡಿ "ಓ ! ಹನ್ನೆರಡು ಗಂಟೆ ಮೀರಿದೆ. ನಾನು ಒಂದು ಗಂಟೆಯೊಳಗೆ ನನ್ನ ಕಛೇರಿಯಲ್ಲಿರಬೇಕು" ಎಂದು ಹೇಳುತ್ತಿದ್ದರು. ಕೂಡಲೆ ನಮ್ಮ ಸಭೆ ಮುಗಿಯುತ್ತಿದ್ದಿತು. ರಾಮದಾಸನು ತನ್ನ ತರುಣ ಸ್ನೇಹಿತರೊಂದಿಗೆ ಕಾಂತಿಲಾಲನ ಮನೆಗೆ ಹಿಂದಕ್ಕೆ ಹೋಗುತ್ತಿದ್ದನು.

ರಾಮದಾಸನು ಲಿಂಬ್ಡಿಯಲ್ಲಿ ಹದಿನೈದು ದಿನ ಇದ್ದನು. ಅವನು ಪ್ರತಿ ದಿನವೂ ಅರಮನೆಗೆ ಹೋಗಬೇಕಾಯಿತು. ಅಲ್ಲಿ ರಾಜಾರಾಮರ ಮತ್ತು ಎಲಿಜಬೆತ್ ಮಾತೆಯ ಸಂಗಡ ಅವನು ಒಂದೆರಡು ಗಂಟೆ ಇರುತ್ತಿದ್ದನು. ಇವನನ್ನು ಮೋಟಾರಿನಲ್ಲಿ ಕರೆದುಕೊಂಡು ಹೋಗುವುದಕ್ಕೆ ಅವರಿಬ್ಬರೂ ಬರುತ್ತಿದ್ದರು. ಇವನು ದೈವಿಕ ಪ್ರೇಮ ಮತ್ತು ಶಾಶ್ವತವಾದ ಸೌಖ್ಯದ ವಿಚಾರವಾಗಿ ಉಪನ್ಯಾಸ ಮಾಡುವನು. ಹೀಗೆ ಮಾಡುವಲ್ಲಿ ತನ್ನ ಸಂಚಾರ ಕಾಲದಲ್ಲಿ ದೈವಿಕ ಪ್ರೇಮ ಹೇಗೆ ಅನುಕೂಲಿಸಿದ್ದಿತು ಎಂಬುದನ್ನು ತೋರಿಸುವ ಸಂಗತಿಗಳನ್ನು ವಿವರಿಸುತ್ತಿದ್ದನು. ಕೇಳುತ್ತ ಅವರು ಆನಂದಪರವಶರಾಗುತ್ತಿದ್ದರು.

ಎಲಿಜಬೆತ್ ಮಾತೆಯ ಸಾತ್ವಿಕ ಪ್ರೇಮ ಅವಳನ್ನು ಒಮ್ಮೆ ರಾಮದಾಸನನ್ನು ಸೊಗಸಾದ ಉದ್ಯಾನದ ಮಧ್ಯೆ ಇದ್ದ ಆಕೆಯ ಬಂಗಲೆಗೆ ಕರೆದುಕೊಂಡು ಹೋಗುವಂತೆ ಪ್ರೇರಿಸಿತು. ಆಕೆ ಅದನ್ನು 'ಶ್ರೀಕೃಷ್ಣ ನಿವಾಸ' ವೆಂದು ಕರೆದಿದ್ದಳು. ಆಕೆ ಅವನನ್ನು ತುಂಬ ಪ್ರೀತಿ ವಾತ್ಸಲ್ಯದಿಂದ ಕಂಡಳು.

ಮಧ್ಯಾಹ್ನದ ಹೊತ್ತು ರಾಮದಾಸನು ಜನರನ್ನು ಕಾಣುತ್ತಿದ್ದ. ಕೊಠಡಿಯಲ್ಲಿ ಮಹಿಳೆಯರು ತುಂಬಿರುತ್ತಿದ್ದರು. ಇವರಲ್ಲಿ ಇಬ್ಬರು ವೃದ್ಧ ಮಾತೆಯರು ಎಂದೂ ಬರದೆ ತಪ್ಪಲಿಲ್ಲ. ಇವರು ಶಿಥಿಲರಾಗಿದ್ದರು, ಅಂಬೆಗಾಲಿಟ್ಟುಕೊಂಡು ಮೆಟ್ಟಲುಗಳನ್ನು ಹತ್ತಿ, ತೂರಾಡುತ್ತ ನೇರವಾಗಿ ಅವನ ಬಳಿ ಬಂದು ಅವನ ಬಾಯಿಗೆ ದಪ್ಪ ದಪ್ಪ ಕಲ್ಲುಸಕ್ಕರೆ ಚೂರುಗಳನ್ನು ತುಂಬುತ್ತಿದ್ದರು. ಇದರಿಂದ ಇವರನ್ನು ಕಲ್ಲುಸಕ್ಕರೆ ಮಾತೆಯರೆಂದು ಕರೆಯಲಾಗಿದೆ. ಇವರು ತಮ್ಮ ಕೈಗಳಿಂದ ರಾಮದಾಸನ ಕೆನ್ನೆಗಳನ್ನು ಮೃದುವಾಗಿ ಸವರುತ್ತಾ, ಪ್ರೀತಿಯ ನಗುಮುಖದಿಂದ ಆತನನ್ನು ನೋಡುತ್ತಾ "ಓ ನನ್ನ ಪ್ರಿಯ ವಸ್ತುವೆ!" ಎಂದು ಕರೆಯುತ್ತಿದ್ದರು.

ಗತಿಸಿದ ಠಾಕೂರ್‌ಸಾಹೇಬರ ಪತ್ನಿಯಾದ ರಾಣೀಸಾಹೇಬರ ಆಹ್ವಾನದ ಮೇಲೆ ಒಂದು ಸಾಯಂಕಾಲ ರಾಮದಾಸನು ರಾಜಮಂದಿರದ ಜನಾನ ಎಂದರೆ ರಾಜ ಕುಟುಂಬದ ಸ್ತ್ರೀಯರಿಗೆ ವಾಸಲಾದ ಸ್ಥಳಕ್ಕೆ ಹೋದನು. ಲಿಂಬ್ಡಿಯ ದಿವಾನರಾಗಿದ್ದು ಕೆಲಸದಿಂದ ವಿಶ್ರಾಂತಿ ಪಡೆದಿದ್ದ ಪ್ರಶಾಂತ ಧರ್ಮಿಷ್ಠ ವೃದ್ಧರೊಬ್ಬರು ಇವನನ್ನು ಅಲ್ಲಿಗೆ ಕರೆದುಕೊಂಡು ಹೋದರು. ರಾಣಿ ಸಾಹೇಬರು ಪದ್ಧತಿಯಂತೆ ಮರೆಯಲ್ಲಿ ರಂಧ್ರಗಳ ಪರದೆಯ ಹಿಂದೆ ಕುಳಿತಿದ್ದರು.

ರಾಮದಾಸನನ್ನು ಮುಂಭಾಗದ ಸಣ್ಣ ಕೊಠಡಿಯಲ್ಲಿ ಒಂದು ಎತ್ತರವಾದ ಆಸನದ ಮೇಲೆ ಕುಳ್ಳಿರಿಸಿದರು. ಪರದೆಯ ಹಿಂದಿರುವ ಸ್ತ್ರೀಯರಿಗೆ ಹೊರಗಿನ ಕೊಠಡಿಯಲ್ಲಿನ ಜನರು ಕಾಣುತ್ತಾರೆ; ಹೊರಗಿರುವ ಜನರಿಗೆ ಪರದೆಯ ಹಿಂದಿರುವವರು ಕಾಣಿಸುವುದಿಲ್ಲ. ಒಬ್ಬ ಬ್ರಾಹ್ಮಣ ಪುರಾಣಿಕನೂ ಕೊಠಡಿಯಲ್ಲಿ

ದ್ದನು. ಭಕ್ತಿಪೂರಿತರಾದ ವೃದ್ಧ ರಾಣಿ ಮಧ್ಯಾಹ್ನದ ಹೊತ್ತು ಪುರಾಣಶ್ರವಣದ ಪದ್ಧತಿಯನ್ನಿಟ್ಟುಕೊಂಡಿದ್ದರು. ಅವರು ರಾಮದಾಸನನ್ನು ಮಾತನಾಡಬೇಕೆಂದು ಅಪೇಕ್ಷಿಸಿದರು. ರಾಮದಾಸನು ಹಿಂದೀ ಭಾಷೆಯಲ್ಲಿ ಮಾತನಾಡಿದನು. ಬ್ರಹ್ಮಜ್ಞಾನ ಮತ್ತು ವಿಶ್ವಪ್ರೇಮ ಸಾಧನೆಗೆ ವಿಾಸಲಾಗಿ ಸಮರ್ಪಿಸದ ಬಾಳು ವ್ಯರ್ಥವೆಂಬ ವಿಚಾರವನ್ನು ವಿಸ್ತರಿಸಿ ಭಾಷಣ ಮಾಡಿದನು. ಅವನ ಮಾತು ನಿರರ್ಗಳವಾಗಿ ಸುಮಾರು ಅರ್ಧ ಗಂಟೆಯ ಹೊತ್ತು ಹರಿಯಿತು. ಉಪನ್ಯಾಸ ಮುಗಿದ ಮೇಲೆ ಐದು ನಿಮಿಷ ಕಾಲ ನಿಶ್ಶಬ್ದವಾಗಿದ್ದಿತ್ತು. ನಂತರ ರಾಣಿಯವರ ಧ್ವನಿ ಸ್ಪಷ್ಟವಾಗಿ ನಿಸಾನವಾದ ಮಿತಿಯಿಂದ ಪರದೆಯ ಮೂಲಕ ಕೇಳಿಸಿತು.

"ಈತನ ಮಹತ್ತರ ವೈರಾಗ್ಯವನ್ನು ನೋಡಿ! ಈ ಸ್ವರ್ಣ ಪಂಜರದಲ್ಲಿ ಸಿಕ್ಕಿಕೊಂಡಿರತಕ್ಕ ಸ್ತ್ರೀಯಾಗದೆ ನಾನು ಗಂಡಸಾಗಿರಬೇಕಾಗಿತ್ತೆಂದು ನನಗೆ ಆಶೆಯಾಗುತ್ತದೆ. ನಾನು ಗಂಡಸಾಗಿದ್ದರೆ ಈತನಂತೆ ಬಂಧನರಹಿತಳಾಗಿ ಆನಂದದ ಜೀವನವನ್ನು ನಡೆಯಿಸಬಹುದಾಗಿದ್ದಿತು.'' ✓

### (iii) ಮಾಯೆಯ ಗೊಂದಲದಿಂದ ಭಗವಂತನಗೊಂದಲಕ್ಕೆ

ರಾಮದಾಸನು ಒಂದು ಸಂನ್ಯಾಸಿ ಆಶ್ರಮಕ್ಕೆ ಭೇಟಿಕೊಟ್ಟನು. ಅಲ್ಲಿಯ ಸಂನ್ಯಾಸಿಗಳು ರಾಮದಾಸನನ್ನು ಆದರದಿಂದ ಕಂಡರು. ಅವರ ಕೋರಿಕೆಯ ಪ್ರಕಾರ ಇವನು ದೈವಸಾಕ್ಷಾತ್ಕಾರದ ವಿಚಾರವಾಗಿ ಕೆಲವು ಮಾತನಾಡಿದನು. ಅದೇ ಮಾನವನ ಗುರಿ ಎಂದು ಇವನು ಎಲ್ಲವೇಳೆಯೂ ಸಿದ್ಧಾಂತಮಾಡುತ್ತಿದ್ದನು.

ಅಲ್ಲದೆ ಲಿಂಬ್ಡಿಯಲ್ಲಿ ಜೈನರ ಕೇಂದ್ರ ಆಶ್ರಮದಲ್ಲಿ ಜೈನಸಾಧುಗಳನ್ನು ಕಾಣುವ ಸಂದರ್ಭ ಒದಗಿತು. ಜೈನಮತವೂ ವೇದದಷ್ಟೇ ಪ್ರಾಚೀನವಾದುದೆಂದು ಹೇಳುತ್ತಾರೆ. ಅನೇಕ ವಿಚಾರಗಳಲ್ಲಿ ಜೈನಬೋಧೆ ಬೌದ್ಧಮತದ ಬೋಧೆಯಂತಿದೆ.

ಜೈನರು ಅಹಿಂಸಾತತ್ವವನ್ನೂ ನಿಶ್ಶಾಂತವಾಗಿ ಅನುಸರಿಸುತ್ತಾರೆ. ಜೈನ ಸಾಧುಗಳು ಅವರ ತುಟಿಗಳನ್ನು ಅರ್ಧಚಂದ್ರಾಕಾರವಾದ ಬಟ್ಟೆಯಿಂದ ಮುಚ್ಚಿಕೊಂಡು, ಈ ಬಟ್ಟೆಯು ಈ ರೀತಿನಿಲ್ಲಲು ತೆಳ್ಳನೆ ಲಾಡಿಯಿಂದ ತಲೆಯಕೆಳಗೆ ಹಿಂಭಾಗದಲ್ಲಿ ಕಟ್ಟಿರುತ್ತಾರೆ. ಇವರು ಕೈಯಲ್ಲಿ ಒಂದು ಮೆದುವಾದ ಚೌರಿಯನ್ನು ಹಿಡಿದಿರುತ್ತಾರೆ. ಕುಳಿತುಕೊಳ್ಳುವಾಗ ನೆಲದಮೇಲೆ ಇರಬಹುದಾದ ಕ್ರಿಮಿಗಳು ನಾಶವಾಗದಿರಲೆಂದು ಅದರಿಂದ ಗುಡಿಸುತ್ತಾರೆ. ಇದೇ ಕಾರಣಕ್ಕಾಗಿ ಅವರು ಕಾಯಿಸಿದ ನೀರನ್ನೇ ಕುಡಿಯುವದು ಮತ್ತು ದೀಪದ ಬೆಳಕಿನಲ್ಲಿ ಊಟ ಮಾಡುವುದಿಲ್ಲ. ಸೂರ್ಯಾಸ್ತಮಯಕ್ಕೆ ಮುಂಚೆಯೇ ಸಂಜೆಯ ಊಟವನ್ನು ಮುಗಿಸುತ್ತಾರೆ. ಜೈನಮತದ ಪ್ರಕಾರ ಪರಿಶುದ್ಧ ಜೀವನ ಮತ್ತು ಅಹಿಂಸಾ ಇವೆರಡೂ ಮಾರ್ಗಗಳು; (ಮುಕ್ತಿ ಮತ್ತು ಶಾಂತಿಯೇ ಜೀವನದ ಧ್ಯೇಯ.)

ಈ ಜೈನ ಸಾಧುಗಳ ಸಂಗಡ ಸಂತೋಷವಾಗಿ ಅರ್ಧಗಂಟೆ ಕಾಲವನ್ನು ಕಳೆದಮೇಲೆ ರಾಮದಾಸನನ್ನು ಜೈನರ ಇನ್ನೊಂದು ಆಶ್ರಮಕ್ಕೆ ಕರೆದುಕೊಂಡು ಹೋದರು. ಅಲ್ಲಿ ರಾಮದಾಸನ ಉಪನ್ಯಾಸವನ್ನು ಕೇಳಲು ಸುಮಾರು ಇನ್ನೂರು ಜನ ಜೈನ ಮಹಿಳೆಯರು ಸೇರಿದ್ದರು. ಇಷ್ಟು ಜನ ವಾತ್ಸಲ್ಯವಂತೆ ಮಾತೆಯರ ದರ್ಶನವನ್ನು ಪಡೆದ ರಾಮದಾಸನು ತೀರಾ ಧನ್ಯನಾದನು. ಒಂದು ಉನ್ನತಾಸನದ ಮೇಲೆ ಕುಳಿತು ಅವನು ಮುಕ್ಕಾಲು ಗಂಟೆ ಒಂದೇಸಮನೆ ಪವಿತ್ರತೆ, ಪ್ರೀತಿ, ಶಾಂತಿಗಳ ವಿಚಾರವಾಗಿ ಉಪನ್ಯಾಸಮಾಡಿದನು. ಇಷ್ಟು ಹೊತ್ತೂ ಅವನು ವಿವರಿಸಲಸದಳವಾದ ಒಂದು ಆಹ್ಲಾದದಿಂದ ತುಂಬಿದ್ದನು. ರಾಮದಾಸನ ವಿಷಯದಲ್ಲಿ ತುಂಬ ಪ್ರೀತಿಗೊಂಡಿದ್ದ ಉಗರ್‌ಚಂದ್ ಸೇಟ್ ಮತ್ತು ಮೋರ್ಹಭಾಯ್ ಎಂಬ ಇಬ್ಬರು ಉದಾರಿ ಪ್ರಮುಖ ಜೈನವರ್ತಕರು ಈ ಆಶ್ರಮಗಳಿಗೆ ರಾಮದಾಸನನ್ನು ಕರೆದುಕೊಂಡು ಹೋದುದಲ್ಲದೆ ಅವರ ಮನೆಗಳಲ್ಲೂ ಸಹ ಔತಣಮಾಡಿಸಿದರು.

ಅರಮನೆಗೆ ಹೋಗಿದ್ದಾಗ ಒಂದು ದಿವಸ ರಾಜಾರಾಮರು ರಾಮದಾಸನನ್ನು ತಮ್ಮ ಪೂಜಾಮಂದಿರಕ್ಕೆ ಕರೆದುಕೊಂಡುಹೋದರು. ಅಲ್ಲಿ ಕಟ್ಟುಹಾಕಿದ ಬೆಳ್ಳಿಯ ಮೂರ್ತಿಗಳೂ ನಂತರ ಚಿತ್ರಗಳೂ ಹಲವು ಕಂಡವು. ರಾಜಾರಾಮರು ಶ್ರೀಕೃಷ್ಣನ ಭಕ್ತರು. ಅರವತ್ತು ವರ್ಷಗಳಿಗೆ ಮೇಲ್ಪಟ್ಟ ವಯಸ್ಸಾಗಿದ್ದರೂ ಎತ್ತರವಾಗಿಯೂ ಸ್ಥೂಲಕಾಯರಾಗಿಯೂ ದೃಢಾಂಗರಾಗಿಯೂ ಇದ್ದರು. ಇವರು ಆಚಾರಶೀಲರಾಗಿ ನೇಮನಿಷ್ಠೆಗಳನ್ನು ಕಟ್ಟುನಿಟ್ಟಾಗಿ ಅನುಸರಿಸುತ್ತ, ಪ್ರತಿ ದಿನವೂ ಮೂರು ಗಂಟೆಗೆ ಎದ್ದು ಬೆಳಕು ಹರಿಯುವವರೆಗೂ ಪೂಜೆ ಮತ್ತು ಧ್ಯಾನದಲ್ಲಿ ಆಸಕ್ತರಾಗಿರುತ್ತಿದ್ದರು.

ಒಂದು ಸಲ ಅವರು ಬಹಳ ಬೆಲೆಯ ಒಂದು ರೇಷ್ಮೆ ಶಹಲನ್ನು ಉಡುಗೆರೆಯಾಗಿ ತೆಗೆದುಕೊಳ್ಳಲು ರಾಮದಾಸನನ್ನು ಒತ್ತಾಯಮಾಡಿದರು. ಇಂತಹವು ರಾಜರಿಗೆ ತಕ್ಕುವೇ ಹೊರತು ಫಕೀರರಿಗೆ ತಕ್ಕುದಲ್ಲವೆಂದು ರಾಮದಾಸನು ಅವರಿಗೆ ವಿಜ್ಞಾಪಿಸಿ, ಉಡುಗೆರೆಯನ್ನು ತೆಗೆದುಕೊಳ್ಳಲಾಗದೆಂದು ಹೇಳಬೇಕಾಯಿತು. ರಾಮದಾಸನು ಒಂದು ಖಾದಿ ಬಟ್ಟೆಯನ್ನು ಮಾತ್ರ ಧರಿಸುತ್ತಿದನು. ಆಗ ಹಿಮಂತಋತು, ಚಳಿ ಹೆಚ್ಚಾಗಿದ್ದಿತು, ಥಂಡಿಗಾಳಿ ಬೀಸುತ್ತಿದ್ದಿತು. ರಾಮದಾಸನು ಹಿಮಂತಋತುವಿನ ಹೊಡೆತದ ವಿಚಾರದಲ್ಲಿ ಉದಾಸೀನನಾಗಿದ್ದನು. ಆದರೆ ಆಂಗ್ಲಮಹಿಳೆಯ ಪ್ರೀತಿಯ ಮಾತೃಹೃದಯ ರಾಮದಾಸನಿಗಾಗಿ ನೊಂದು ಆಕೆ ರಾಮದಾಸನಿಗೆ ಒಂದು ಸಾಮಾನ್ಯವಾದ, ಆದರೆ ಬೆಚ್ಚಗಿರುವ ಉಡುಪನ್ನು ಕೊಡುವಂತೆ ರಾಜಾರಾಮರನ್ನು ಒಡಂಬಡಿಸಿದಳು.

ರಾಮುದಾಸನಾದರೋ ಅವನಲ್ಲಿದ್ದ ಸಾಧಾರಣವಾದ ಬಟ್ಟೆಯಿಂದ ನಿಜವಾಗಿಯೂ ತೃಪ್ತನಾಗಿದ್ದನು. ಆದರೂ ರಾಜಾರಾಮರ ಮತ್ತು ಎಲಿಜಬೆತ್ ಮಾತೆಯ ಅನೇಕಸಲದ ಒತ್ತಾಯದ ಮೇಲೆ ತನ್ನ ಖಾದಿ ವಸ್ತ್ರವನ್ನು ಬಿಟ್ಟು ಸಾಮಾನ್ಯವಾದ ಉಣ್ಣೆಯ ಬಟ್ಟೆಯನ್ನು ತೆಗೆದುಕೊಳ್ಳಲು ಒಪ್ಪಿದನು. ಇವನ ಹಳೆಯ ಖಾದಿ ಬಟ್ಟೆಯನ್ನು ಅವರಿಬ್ಬರೂ ಹಂಚಿಕೊಂಡು ಜ್ಞಾಪಕಾರ್ಥವಾಗಿ ಇಟ್ಟುಕೊಂಡರು. ಇಷ್ಟರಿಂದ ಮಾತೆಗೆ ತೃಪ್ತಿಯಾಗಲಿಲ್ಲ. ಮರುದಿನ ರಾಮುದಾಸನಿಗೆ ಉಣ್ಣೆಯ ಬಟ್ಟೆಯ ಒಂದು ನಿಲುವಂಗಿಯನ್ನು ತೊಡಿಸಬೇಕೆಂದು ಆಕೆ ಇಚ್ಛಿಸಿದಳು. ನಿಲುವಂಗಿ ಜಾಗ್ರತೆಯಾಗಿಯೇ ಸಿದ್ಧವಾಯಿತು. ಅದು ರಾಜಾರಾಮರು ಬಹಳ ಉತ್ತಮವೆಂದು ಎಣಿಸಿದ್ದ ದಪ್ಪ ಟ್ವೀಡ್ ಬಟ್ಟೆಯಲ್ಲಿ ಹೊಲೆದ ಭಾರವಾದ ವಸನ. ರಾಮುದಾಸನು ಆ ನಿಲುವಂಗಿಯನ್ನು ಅವರೆದುರಿಗೆ ಒಮ್ಮೆ ತೊಟ್ಟು ಎರಡು ಸಲ ಹಾರಿ ಕುಣಿದನು. ಇದನ್ನು ನೋಡಿ ರಾಜರಾಮ ಎಲಿಜಬೆತ್ ಮಾತೆ ನಕ್ಕರು. ಆ ನಿಲುವಂಗಿಯನ್ನು ರಾಮುದಾಸನು ಧರಿಸಿದುದು ಅದೇ ಮೊದಲು, ಅದೇ ಕೊನೆಯಸಲ.

ರಾಮುದಾಸನು ರಾತ್ರಿಯ ಹೊತ್ತು ಇರುತ್ತಿದ್ದುದು ಮೂರನೆ ಮಹಡಿಯ ಮೇಲೆ ಒಂದು ಸಣ್ಣ ಕೊಟಡಿಯಲ್ಲಿ. ಅವನೊಡನೆ ಕಾಂತಿಲಾಲ್ ಮತ್ತು ಮಗನ್‌ಲಾಲ್ ಸಹ ಇರುತ್ತಿದ್ದರು. ಮಗನ್‌ಲಾಲ್ ರಸಿಕನಾದ ಹಾಸ್ಯಗಾರ. ರಾಮುದಾಸನನ್ನು ನೋಡುವುದಕ್ಕಾಗಿ ಬರುವ ಪ್ರೇಕ್ಷಕರ ನಡೆನುಡಿಗಳನ್ನು ಚನ್ನಾಗಿ ಅನುಕರಿಸುತ್ತ ರಾಮುದಾಸನನ್ನು ನಗಿಸುತ್ತಿದ್ದನು. ಒಂದು ಸಲ ಹಾಸ್ಯವಾಗಿ "ಸ್ವಾಮಿಜಿ, ನಾನು ನಿಮ್ಮ ಬೋಧೆಯನ್ನು ಮನಸ್ಸಿಟ್ಟು ಕೇಳುತ್ತಿದ್ದೇನೆ. ಆದರೆ ನನಗೆ ಮಾತ್ರ ಅದರ ಹಿಂದು ಮುಂದು ತಿಳಿಯುವುದಿಲ್ಲ. ನಿಮ್ಮ ಬೋಧೆಯೆಲ್ಲವೂ ನನಗೆ ಮಾಯಾ ಘೋಟಾಳದಿಂದ ಬ್ರಹ್ಮಘೋಟಾಳಕ್ಕೆ ಹೋದಂತೆ, ಎಂದರೆ ಮಾಯೆಯ ಗೊಂದಲದಿಂದ ಭಗವಂತನ ಗೊಂದಲಕ್ಕೆ ಬಿದ್ದಹಾಗೆ ಕಾಣುತ್ತದೆ" ಎಂದು ಹೇಳಿದನು.

ಲಿಂಬ್ಡಿ ಸಂಸ್ಥಾನದ ಹೊರಗಿನಿಂದ ರಾಮುದಾಸನನ್ನು ನೋಡಲು ಬಂದಿದ್ದ ಪ್ರೇಕ್ಷಕರಲ್ಲಿ ಡಾಕ್ಟರ್ ಶುಕ್ಲ ಎಂಬ ಬ್ರಾಹ್ಮಣ ಮತ್ತು ಚೂನಿಭಾಯ್ ಎಂಬ ಜೈನಮತೀಯ ಇವರಿಬ್ಬರಿದ್ದರು. ಇವರು ವಾಧ್ವಾರ್ ಎಂಬ ಇನ್ನೊಂದು ಸಂಸ್ಥಾನದಿಂದ ಬಂದಿದ್ದರು. ಇವರು ರಾಮುದಾಸನು ತಮ್ಮ ಸಂಸ್ಥಾನಕ್ಕೆ ಕೆಲವು ದಿನ ಬರಬೇಕೆಂದು ಬಯಸಿದರು. ರಾಮುದಾಸನು ಅವರ ಆಹ್ವಾನವನ್ನು ಅಂಗೀಕರಿಸಿ ವಾಧ್ವಾರ್‌ನಿಗೆ ಹೋದನು.

ಅಗ್ಗೆ ರಾಮುದಾಸನಿಗೆ ಸೂರತ್ತಿನ ಕಾಶಿರಾಂಭಾಯಿಯಿಂದ ಒಂದು ಕಾಗದ ಮತ್ತು ದುಡ್ಡು ಬಂದಿದ್ದವು. ಆತನು ರಾಮುದಾಸನನ್ನು ಜುನಾಗಡದಲ್ಲಿ

ಸಂಧಿಸಿದ್ದು. ಈಚೆಗೆ ಸೂರತ್ತಿನಲ್ಲಿ ನೆಲೆಸಿದ್ದನು. ಕಾಥೇವಾಡ್ ಸಂಚಾರವನ್ನು ಮುಗಿಸಿದನಂತರ ಕೆಲವು ದಿನ ತನ್ನಲ್ಲಿರಬೇಕೆಂದು ಅವನು ರಾಮದಾಸನನ್ನು ಕೇಳಿದ್ದನು. ✓

---

## ಅಧ್ಯಾಯ ೧೫

### ವಾಧ್ವಾನ್-ಸೂರತ್-ಝಾನ್ಸಿ

### (i) ರಾಮಚರಣದಾಸನ ಪುನರಾಗಮನ

ರಾಮದಾಸನು ವಾಧ್ವಾನ್ ಪಟ್ಟಣವನ್ನು ಮುಟ್ಟಿದನು. ಅವನನ್ನು ಮೊದಲನೇ ರಾತ್ರಿ ಬರಿದಾಗಿದ್ದ ಒಂದು ಆಸ್ಪತ್ರೆಯ ಕಟ್ಟಡದಲ್ಲಿ ಇಳಿಸಿದರು. ಮದನ್‌ಲಾಲನು ರಾಮದಾಸನಿಗೆ ಅಂಟಿಕೊಂಡೇ ಇದ್ದನು. ಆ ಕಾಲದಲ್ಲಿ ಅವನಿಗೆ ಪ್ರಪಂಚದಲ್ಲಿ ರಾಮದಾಸನ ಹೊರತು ಇನ್ನಾರೂ ಇರಲಿಲ್ಲ. ಅವನು ಒಂದು ನೆರಳಿನಂತೆ ರಾಮದಾಸನ ಹಿಂದೆಯೇ ಇದ್ದುಕೊಂಡು, ಎಲ್ಲ ರೀತಿಯ ಸೇವೆಯನ್ನೂ ಮಾಡುತ್ತಿದ್ದನು. ಎರಡನೆ ದಿನ ರಾಮದಾಸನನ್ನು ಚುನ್ನಿಭಾಯಿಯವರ ಮನೆಗೆ ಕರೆಸಿದರು. ಇಲ್ಲಿ ರಾಮದಾಸನನ್ನು ನೋಡಲು ಊರ ಜನರು ಬರಲು ಪ್ರಾರಂಭಮಾಡಿದರು. ಸತ್ಯಶೋಧನೆಯಲ್ಲಿ ಶ್ರದ್ಧಾಳು ಮತ್ತು ಉತ್ಸಾಹಶಾಲಿಯಾದ ಡಾಕ್ಟರ್ ಶುಕ್ಲ ಅನೇಕ ಸಲ ಭೇಟಿಯನ್ನು ಕೊಟ್ಟನು. ಸಮರ್ಥರೂ ಮತ್ತು ಧರ್ಮಿಷ್ಠರೂ ಆದ ಆ ಸಂಸ್ಥಾನದ ದಿವಾನರು ರಾಮದಾಸನ ವಿಷಯದಲ್ಲಿ ಬಹುಪ್ರೀತ್ಯಾದರಗಳನ್ನು ತೋರಿಸಿದರು. ಲಿಂಬ್ಡಿಯಿಂದಲೂ ಕೆಲವರು ಸ್ನೇಹಿತರು ಇಲ್ಲಿ ರಾಮದಾಸನನ್ನು ಪುನಃ ಭೇಟಿಮಾಡಲು ಬಂದರು. ಊರಿನ ಆಚೆ ಒಂದು ಗುಡಾರದಲ್ಲಿ ವಾಸಿಸುತ್ತಿದ್ದ ಜೀವರಾಜ್ ಎಂಬ ಸಾಧಕನನ್ನೂ ರಾಮದಾಸನು ಸಂದರ್ಶಿಸಿದನು. ಹಠಾತ್ತಾಗಿ ರಾಮಚರಣದಾಸನು ಬಂದು ಇನ್ನು ಮುಂದೆ ರಾಮದಾಸನೊಂದಿಗೇ ಇರುವುದಾಗಿ ಸೂಚಿಸಿದನು.

ಧ್ರಾಂಗಧ್ರದ ಒಬ್ಬ ವೃದ್ಧಬ್ರಾಹ್ಮಣ ಮೂಲಶಂಕರನೆಂಬಾತನು ರಾಮದಾಸನನ್ನು ತನ್ನೂರಿಗೆ ಒಯ್ಯಲು ಬಂದನು. ರಾಮದಾಸನು ಹೊರಟನು. ವಾಧ್ವಾನ್ ಜಂಕ್ಷನವರೆಗೆ ಮೋಟಾರಿನಲ್ಲಿ ಪ್ರಯಾಣ ಮಾಡುವುದೆಂದು ನಿಷ್ಕರ್ಷೆಯಾಯಿತು. ಆ ಬೆಳಗ್ಗೆ ಇವರು ಮೋಟಾರು ನಿಲ್ದಾಣಕ್ಕೆ ಬಂದರು. ಸಾಗಕಳುಹಿಸಲು ಒಂದು ದೊಡ್ಡ ಗುಂಪೇ ಹಿಂಬಾಲಿಸಿತು. ಸದಾಕಾಲದಲ್ಲೂ ಬಾಡಿಗೆ ಮೋಟಾರುಗಳು ಸಿದ್ಧವಾಗುತ್ತಿದ್ದರೂ ಆದಿವಸ ಒಂದು ಗಂಟೆ ಕಾದರೂ ಬಾಡಿಗೆ ಮೋಟಾರು ದೊರೆಯಲಿಲ್ಲ. ಅಲ್ಲಿ ಸೇರಿದ್ದ ಸ್ನೇಹಿತರಿಗೆ ಆಶಾಭಂಗವಾಗಿ ಬೇಸರದ ಚಿಹ್ನೆಗಳು ಕಂಡುಬಂದುವು. ಈ ಎಲ್ಲವೇಳೆ ರಾಮದಾಸನು ಪೂರ್ಣ ಹರ್ಷಚಿತ್ತನಾಗಿದ್ದನು. ಕೊನೆಗೆ ಎಲ್ಲರೂ ಊರಿಗೆ ಹಿಂತಿರುಗಿ ಹೆಜ್ಜೆ ಇಕ್ಕಿದ್ದಾಯಿತು. ಹಿಂತಿರುಗಿ ಹೋಗುವಾಗಲೂ ರಾಮದಾಸನು ಮುಗುಳ್ನಗೆ ಸೂಸುತ್ತ ಬೀದಿಯಲ್ಲಿ

ಕುಣಿದುಕೊಂಡು ಹೋಗುತ್ತ ಸ್ನೇಹಿತರಕಡೆ ತಿರುಗಿ "ಭಗವಂತನ ಇಚ್ಛೆಗೆ ಅಧೀನರಾಗಿದ್ದರೆ ಬೇಸರವಿಲ್ಲ, ಆಶಾಭಂಗವಿಲ್ಲ. ರಾಮದಾಸನು ರೈಲಿನಲ್ಲಿ ಪ್ರಯಾಣ ಮಾಡುವುದು ದೇವರ ಸಂಕಲ್ಪ ಎಂದು ವಿದಿತವಾಗಿದೆ" ಎಂದನು.

ಮಧ್ಯಾಹ್ನ ಹೊರಡುವ ಒಂದು ರೈಲು ಇದ್ದಿತು. ರಾಮದಾಸನೂ ಇತರರೂ ಸ್ಟೇಷನ್ನಿಗೆ ಬಂದರು. ಇಲ್ಲಿಂದ ಮುಂದಕ್ಕೆ ಮಗನ್‌ಲಾಲನು ರಾಮದಾಸನೊಡನೆ ಪ್ರಯಾಣ ಮಾಡಬೇಕೇ ಬೇಡವೇ ಎಂಬ ಪ್ರಶ್ನೆ ಹುಟ್ಟಿತು. ಜುನಾಗಡವನ್ನು ಬಿಟ್ಟು ಅವನು ರಾಮದಾಸನ ಸಂಗಡ ಸುಮಾರು ಮೂರು ವಾರಗಳ ಕಾಲ ಇದ್ದು ದಾಯಿತು. ಅಲ್ಲದೆ ರಾಮಚರಣದಾಸನು ಬಂದು ಸೇರಿದ್ದುದರಿಂದ ರಾಮದಾಸ ನನ್ನು ನೋಡಿಕೊಳ್ಳಲು ಒಬ್ಬನು ಇದ್ದಂತಾಯಿತು. ಆದುದರಿಂದ ರಾಮ ದಾಸನು ಮಗನ್‌ಲಾಲನಿಗೆ ತನ್ನ ಮನೆಗೆ ಹೋಗೆಂದು ಹೇಳಿದನು. ಈ ಬುದ್ಧಿ ವಾದದಿಂದ ಏನೂ ಉಪಯೋಗವಿಲ್ಲ. ತಾನು ಸಂಗಡಲೇ ಬರುವೆನೆಂದು ಸೂಚಿಸು ವಂತೆ ಮಗನ್‌ಲಾಲನು ತಲೆಯನ್ನು ಅಲ್ಲಾಡಿಸಿದನು. ಇದನ್ನು ಬಗೆಹರಿಸು ವುದು ರಾಮನಿಗೇ ಸೇರಿದ್ದಿತು. ತನ್ನ ಸಂಕಲ್ಪವನ್ನು ನೆರವೇರಿಸಿಕೊಳ್ಳುವ ವಿಧಾನವನ್ನು ಭಗವಂತನು ಬಲ್ಲನು. ಅದು ಇತರರಿಗೆ ಏನು ಗೊತ್ತು?

"ರಾಮ, ಕೇಳು. ರಾಮದಾಸನ ಸಂಗಡ ಪ್ರಯಾಣ ಮಾಡಬೇಕೆಂದು ನೀನು ಒತ್ತಾಯಪಡಿಸಿದರೆ ರಾಮದಾಸನು ಜಲಾಹಾರ ವ್ರತವನ್ನು ಕೈಕೊಳ್ಳ ಬೇಕಾಗುತ್ತದೆ. ಇದು ರಾಮನ ಇಚ್ಛೆ. ಏನು ಹೇಳುತ್ತಿ?" ಎಂದು ರಾಮ ದಾಸನು ಕೇಳಿದನು. "ನಾನೂ ಹಾಗೆಯೇ ಮಾಡುತ್ತೇನೆ" ಎಂದು ಮಗನ್ ಲಾಲನು ಶಾಂತವಾಗಿ ಉತ್ತರಕೊಟ್ಟನು.

ಆಗ ಒಬ್ಬ ಸ್ನೇಹಿತನು: "ಮಗನ್‌ಲಾಲ್, ನೀನು ಒಳ್ಳೆಯ ಮನುಷ್ಯ! ರಾಮದಾಸರು ಜಲಾಹಾರ ವ್ರತವನ್ನು ಆರಂಭಿಸುವಂತೆ ಮಾಡಲೋಸುಗವೇ ಹೋಗಬೇಕೆನ್ನುತ್ತೀಯಾ? ಈ ಹುಚ್ಚು ಯೋಚನೆಯನ್ನು ಬಿಡು. ಸುಮ್ಮನೆ ಹಿಂದೆ ನಿಲ್ಲು" ಎಂದು ಹೇಳಿದನು.

ಸ್ವಲ್ಪಕಾಲ ಮಗನ್‌ಲಾಲನು ಮುಷ್ಕರ ಮಾಡಿದನು. ಆದರೆ ಕೊನೆಗೆ ಒಪ್ಪಿಕೊಂಡನು. ಸಕಾಲದಲ್ಲಿ ರಾಮದಾಸನೂ ರಾಮಚರಣದಾಸನೂ ಮಾರ್ಗ ದರ್ಶಕನೊಂದಿಗೆ ಧ್ರಾಂಗಧ್ರವನ್ನು ಮುಟ್ಟಿದರು. ಅಲ್ಲಿಯ ಒಬ್ಬ ಧನಿಕ ವರ್ತ ಕನು ಇವರನ್ನು ಸ್ವಾಗತಿಸಿ, ದೊಡ್ಡ ರಸ್ತೆಗೆ ಅಭಿಮುಖವಾಗಿರುವ ಒಂದು ಹಿರಿಯ ಮಳಿಗೆಯ ಮಹಡಿಯ ಮೇಲೆ ಇಳಿಸಿದನು. ರಾಮದಾಸನು ಈಗಲೂ ಕ್ಷೀರಾ ಹಾರವನ್ನೇ ತೆಗೆದುಕೊಳ್ಳುತ್ತಿದ್ದನು. ಇಲ್ಲಿ ಕೂಡ ಊರಿನಿಂದ ಅನೇಕರು ಸಾಧು ಗಳು, ಸಂಸಾರಿಗಳು, ಗಂಡಸರು, ಹೆಂಗಸರು, ಮತ್ತು ಮಕ್ಕಳು ರಾಮದಾಸನ ಭೇಟಿಗಾಗಿ ಬಂದರು. ರಾಮದಾಸನು ತನ್ನ ಇಷ್ಟವಿಷಯವಾದ ದೈವಭಕ್ತಿ ಯನ್ನು ಕುರಿತು ಅವರಿಗೆ ಬೋಧೆಮಾಡಿದನು.

ಮೂರನೆಯ ದಿನ ಬೆಳಿಗ್ಗೆ ನೋಡಿದರೆ, ಮಗನ್‌ಲಾಲನು ರಾಮದಾಸನ ಕೊಟಡಿಯೊಳಗೆ ಸಿದ್ಧ. ಬಂದವನೇ, ಬುಡ ಕತ್ತರಿಸಿದ ಮರ ಬೀಳುವಂತೆ ರಾಮದಾಸನ ಕಾಲಿಗೆ ಬಿದ್ದನು. ಆತನ ಬರುವಿಕೆ ಅನಿರೀಕ್ಷಿತವಾಗಿದ್ದುದರಿಂದ ಅವನು ಆಕಾಶದಿಂದ ಧುಮಿಕಿದಂತೆ ಕಾಣುತ್ತಿದ್ದಿತು. ರಾಮದಾಸನ ಮೇಲೆ ಅವನಿಗಿದ್ದ ಉತ್ಕಟಪ್ರೇಮ ಅವನನ್ನು ಮತ್ತೆ ರಾಮದಾಸನೆಡೆಗೆ ಸೆಳೆದಿದ್ದಿತು.

ಎದ್ದು ಕುಳಿತುಕೊಂಡು ಆತನು "ಸ್ವಾಮಿಜಿ, ನನ್ನನ್ನು ದಯವಿಟ್ಟು ಕ್ಷಮಿಸಿರಿ. ಇಲ್ಲಿಗೆ ಬರುವುದನ್ನು ನಾನು ತಡೆಯಲು ಆಗದೆ ಹೋಯಿತು. ನಿಮ್ಮ ಜೊತೆಯಲ್ಲಿ ಮುಂದಕ್ಕೆ ಪ್ರಯಾಣ ಮಾಡಬೇಕೆಂದು ನಾನು ಒತ್ತಾಯ ಮಾಡು ವುದಿಲ್ಲ. ನೀವು ಸೂರತ್ತಿಗೆ ಪ್ರಯಾಣ ಮಾಡುತ್ತಲೂ ನಾನು ಜುನಾಗಡಕ್ಕೆ ಹೊರಟು ಹೋಗುತ್ತೇನೆ" ಎಂದು ಅಂಗಲಾಚಿದನು.

ಮೂಲಶಂಕರನು ರಾಮದಾಸನ ಮೇಲಣ ಪ್ರೀತಿಯಿಂದ ಮುಗ್ಧನಾಗಿದ್ದನು ಅವನು ಸವಿಯ ಸ್ವಭಾವದ ನಮ್ರ ವೃದ್ಧ ಜೀವ. ಒಂದು ದಿನಕ್ಕೆ ಆರು ಸಲವಾದರೂ ರಾಮದಾಸನನ್ನು ತನ್ನ ಎದೆಗೆ ಅಪ್ಪಿಕೊಳ್ಳದಿದ್ದರೆ ಅವನಿಗೆ ಸಮಾಧಾನವಾಗ. ತ್ತಿರಲಿಲ್ಲ. ಒಂದು ಸಲ ಮಹಾತ್ಮಾ ಗಾಂಧಿಯವರನ್ನು ಆಲಂಗಿಸುವ ಸುಯೋಗ ತನಗೆ ದೊರಕಿತ್ತೆಂದು ಅವನು ಹೇಳುತ್ತಿದ್ದನು.

ರಾಮದಾಸನು ಧ್ರಾಂಗದ್ರದಲ್ಲಿ ಇದ್ದುದು ಕೊಂಚಕಾಲ ಮಾತ್ರ. ಒಂದು ದಿನ ಸಾಯಂಕಾಲದ ರೈಲಿನಲ್ಲಿ ಅವನು ರಾಮಚರಣದಾಸನೊಂದಿಗೆ ಸೂರತ್ತಿಗೆ ಪ್ರಯಾಣಮಾಡಿದನು. ಧ್ರಾಂಗದ್ರ ಸ್ಟೇಷನ್ನಿನಲ್ಲಿ ರೈಲು ಹೊರಡುತ್ತಿರುವಾಗ, ರಾಮದಾಸನು ರಾಜಾರಾಮರು ಕೊಟ್ಟಿದ್ದ ಟ್ವೀಡ ನಿಲುವಂಗಿಯನ್ನು ತೊರೆದನು. ಅವನು ಅದನ್ನು ಮೂಲಶಂಕರನಿಗೆ ಬಲವಂತಮಾಡಿ ಕೊಟ್ಟನು. ನಿಜದಲ್ಲಿ ಅದನ್ನು ಅವನು ರೈಲು ಹೊರಟ ತಕ್ಷಣ ಮೂಲಶಂಕರನ ಭುಜಗಳ ಮೇಲೆ ಎಸೆದುಬಿಟ್ಟನು. ಮಗನ್ ಲಾಲನು ರಾಮದಾಸನಿಂದ ಬೀಳ್ಕೊಂಡು ತನ್ನ ಊರಿಗೆ ಪ್ರಯಾಣ ಮಾಡಿದನು.

### (ii) ರಾಮಚರಣದಾಸನು ಅಲಂಕಾರಪ್ರೇಮಿಯಾದುದು

ರಾಮದಾಸನು ರಾಂದೇರನ್ನು ಮುಟ್ಟಿದನು. ರಾಂದೇರ್ ಸೂರತ್ ಪಟ್ಟಣದ ಉಪಾಂತದಲ್ಲಿರುವ ಸಣ್ಣ ಒಂದು ಸ್ಥಳ. ಇಲ್ಲಿಯೇ ರಾಮದಾಸನ ಹಳೆಯ ಸ್ನೇಹಿತ ಕಾಶೀರಾಂಭಾಯಿ ವಾಸವಾಗಿದ್ದುದು. ಶ್ರೇಷ್ಠ ದಂಪತಿಗಳಾದ ಈತನೂ ಈತನ ಹೆಂಡತಿಯೂ ರಾಮದಾಸನನ್ನು ಅಕುಟಿಲವಾದ ಆದರಣೆಯಿಂದ ಕಂಡರು. ತಮ್ಮ ಕಾಲದಲ್ಲಿ ಹೆಚ್ಚು ಭಾಗವನ್ನು ಭಕ್ತಿ, ಪೂಜೆ, ಪಾರಾಯಣ ಇವುಗಳಲ್ಲಿ ಕಳೆಯುತ್ತಾ ಇವರು ಪ್ರಶಾಂತ ಜೀವನವನ್ನು ನಡೆಯಿಸುತ್ತಿದ್ದರು. ಮನಸ್ಸನ್ನು ಜಾಗ್ರತಗೊಳಿಸುವ ದುಃಖಾನುಭವ ಅವರ ಮನಸ್ಸನ್ನು ಜೀವನದ ಮಿಥ್ಯಾವ್ಯಾಪಾರ

ಗಳಿಂದ ಸೆಳೆದು ಏಕೈಕ ಸತ್ಯತತ್ವವಾದ ಭಗವಂತನ ಕಡೆಗೆ ತಿರುಗಿಸಿದ್ದಿತು. ಬೆಳದ ಅವರ ಗಂಡು ಹೆಣ್ಣುಮಕ್ಕಳು ಅವರ ಮುಂದೆ ಲೋಕಾಂತರವನ್ನೈದಿ ಮಾತಾಪಿತೃ ಗಳನ್ನು ವೃದ್ಧಾಪ್ಯದಲ್ಲಿ ಭಗವಂತನ ಧ್ಯಾನಮಾತ್ರಕ್ಕೆ ಉಳಿಸಿದ್ದರು. ಆ ವೃದ್ಧ ದಂಪತಿಗಳು ರಾಮುದಾಸನನ್ನು ತಮ್ಮ ಆದರದ ಸೇವೆಯಿಂದ ಸಾಕುಪಡಿಸಿದರು.

ಒಂದು ಮಧ್ಯಾಹ್ನ ಕಾಶೀರಾಂಭಾಯಿ ಆಧ್ಯಾತ್ಮಿಕ ಬೆಳವಣಿಗೆಯಲ್ಲಿ ಸಪ್ತಭೂಮಿಕೆಗಳನ್ನು ವಿವರಿಸುವ ಒಂದು ಧರ್ಮಗ್ರಂಥವನ್ನು ಅದೇ ಕೆಲಸ ಓದಿಸಿದನು. ಓದು ಮುಗಿದ ಮೇಲೆ ಅವನು ರಾಮುದಾಸನ ಕಡೆ ತಿರುಗಿ "ನೀವು ಯಾವ ಭೂಮಿಕೆಗೆ ಏರಿದ್ದೀರಿ? ಹೇಳಲೇನು?" ಎಂದು ಕೇಳಿದನು. ರಾಮುದಾಸನು ಉತ್ತರ ಕೊಡಲಿಲ್ಲ. ಮಗ್ಗುಲಲ್ಲಿದ್ದ ಪುಸ್ತಕವನ್ನು ಬೆರಳಿಂದ ತಟ್ಟುತ್ತಾ ಅವನು "ಇಲ್ಲಿ ಕೊಟ್ಟಿರುವ ನಿದರ್ಶನಗಳನ್ನು ಅನ್ವಯಿಸಿ ನೋಡಿದರೆ ನೀವು ಐದನೇ ಭೂಮಿಕೆ ದಾಟಿ ಆರನೆ ಭೂಮಿಕೆಯ ಕೊನೆ ಹತ್ತಿರಿದ್ದೀರೆಂದು ನಾನು ಹೇಳಬಲ್ಲೆ" ಎಂದನು.

ಕಾಶೀರಾಂಭಾಯಿ ವಿನೋದಪ್ರಿಯ. ಅವನು ಇಬ್ಬರು ಸಾಧುಗಳನ್ನು ಕುರಿತು ಒಂದು ಕಥೆಯನ್ನು ಹೇಳಿದನು. ಇದನ್ನು ಕೇಳಿ ಅಲ್ಲಿದ್ದವರಿಗೆಲ್ಲಾ ಹುಚ್ಚು ಹುಚ್ಚು ನಗು ಬಂದಿತು.

ಒಂದು ಸಲ, ಇಬ್ಬರು ಸಾಧುಗಳು ಒಂದೂರಿಗೆ ಬೇರೆ ಬೇರೆ ದಿಕ್ಕಿನಿಂದ ಬಂದರು. ಒಬ್ಬನು ಒಂದು ಅರಳಿಯ ಮರದ ಕೆಳಗೆ ಕುಳಿತನು. ಇನ್ನೊಬ್ಬನು ಒಂದು ಆಲದ ಮರದಡಿ ಕುಳಿತನು. ಸಾಧುಗಳ ಆಗಮನದ ವಿಷಯವನ್ನು ಕೇಳಿದ ಒಬ್ಬ ಬನಿಯ ಗೃಹಸ್ಥನು, ಅರಳಿಯ ಮರದ ಕೆಳಗಿದ್ದ ಸಾಧುವಿನ ಬಳಿ ಹೋಗಿ ಪ್ರಣಾಮಮಾಡಿ "ಮಹರಾಜ್, ನಮ್ಮೂರಿಗೆ ಇನ್ನೊಬ್ಬರು ಮಹಾತ್ಮರು ಬಂದಿದ್ದಾರಂತೆ. ಅವರು ನಿಮಗೆ ಗೊತ್ತೆ ?" ಎಂದು ಕೇಳಿದನು. ಆತನು ಹೀಯಾಳಿಸುವ ಧ್ವನಿಯಲ್ಲಿ "ಹೌದು, ಅವನನ್ನು ಬಲ್ಲೆ. ಅವನು ಒಂದು ಕೋಣ" ಎಂದನು.

ಕೂಡಲೇ ಆ ಭಕ್ತನು ಒಂದು ಹುಲ್ಲುಕಂತೆಯನ್ನು ತೆಗೆದುಕೊಂಡು ಆಲದ ಮರದ ಕೆಳಗಿದ್ದ ಸಾಧುವಿನ ಬಳಿಗೆ ಹೋಗಿ, ಹುಲ್ಲನ್ನು ಆತನ ಮುಂದಿಟ್ಟು ನಮಸ್ಕಾರ ಮಾಡಿದನು.

ಆ ಸಾಧು "ಅಯ್ಯ, ಇದೇನು ನೀನು ಮಾಡುತ್ತಿರುವುದು ? ಈ ಹುಲ್ಲು ಏತಕ್ಕೆ ?" ಎಂದು ಕೂಗಿದನು. ಭಕ್ತನು ಕೈಮುಗಿದುಕೊಂಡು "ಮಹರಾಜ್, ಇದು ಕಾಣಿಕೆ, ದಯವಿಟ್ಟು ಅದನ್ನು ತಿಂದು ಭಕ್ತನನ್ನು ಹರಿಸಿ" ಎಂದು ಕೇಳಿಕೊಂಡನು.

"ಏನು ! ನಿನಗೇನು ಹುಚ್ಚೋ ! ನಾನು ಹುಲ್ಲು ತಿನ್ನಬೇಕೋ ?" ಎಂದು ಸಾಧು ರೇಗಿದನು.

ಭಕ್ತನು "ಮಹರಾಜ್! ಊರ ಇನ್ನೊಂದು ಕೊನೆಯಲ್ಲಿ ಅರಳಿಮರದ ಕೆಳಗಿರುವ ಸಾಧುಗಳು ನೀವು ಕೋಣವೆಂದು ದಯವಿಟ್ಟು ತಿಳಿಸಿದರು. ಆದುದರಿಂದ ನಿಮಗೆ ಸರಿಯಾದ ಕಾಣಿಕೆಯನ್ನು ತರಬೇಕೆಂದು ಯೋಚಿಸಿದೆನು" ಎಂದು ಸಮಾಧಾನದಿಂದ ಹೇಳಿದನು.

"ಅವನು ಹೇಳಿದ್ದನ್ನು ನೀನು ನಂಬಿದೆ ಹೇಗೆ? ನಿನಗೇನು ಬುದ್ಧಿ ಇಲ್ಲವೇ?" ಎಂದು ಸಾಧು ಗದರಿಸಿದನು.

"ಮಹರಾಜ್, ಈ ದಾಸನಂತಹ ಒಬ್ಬ ಅಜ್ಞಾನಿ ಬಡವನಿಗೆ ಸಾಧುಗಳ ಯೋಗ್ಯತೆಯನ್ನು ತಿಳಿದುಕೊಳ್ಳುವ ಧೈರ್ಯ ಎಲ್ಲಿಂದ ಬರಬೇಕು? ಮಹಾತ್ಮರ ಯೋಗ್ಯತೆಯನ್ನು ಮಹಾತ್ಮರೇ ತಿಳಿಯಲು ಶಕ್ತರು" ಎಂದು ಆ ಭಕ್ತನು ಉತ್ತರ ಕೊಟ್ಟನು.

"ಹಾಗಾದರೆ ಹೋಗಿ ಅವನು ಒಂದು ಕತ್ತೆ ಎಂದು ಅವನಿಗೆ ತಿಳಿಸು" ಎಂದು ಸಾಧು ಹೇಳಿದನು.

ಭಕ್ತನು ನೇರವಾಗಿ ಪೇಟೆಗೆ ಹೋಗಿ, ಒಂದು ಸೇರು ಹತ್ತಿ ಬೀಜವನ್ನು ಖರೀದಿಮಾಡಿ ಬಟ್ಟೆಯಲ್ಲಿ ಕಟ್ಟಿಕೊಂಡು, ಅರಳಿಮರದ ಕೆಳಗಿದ್ದ ಸಾಧುವಿನ ಬಳಿಗೆ ಹೋಗಿ, ಗಂಟು ಬಿಚ್ಚಿ ಹತ್ತಿಬೀಜವನ್ನು ಸುರಿದು, ಅವನಿಗೆ ಪ್ರಣಾಮಮಾಡಿದನು. ಸಾಧು ಆಶ್ಚರ್ಯಚಕಿತನಾಗಿ "ಏನಿದು? ಈ ಹತ್ತಿಬೀಜ ಏತಕ್ಕೆ?" ಎಂದನು.

ಭಕ್ತನು "ನಿಜ, ಮಹರಾಜ್, ನಿಮಗೆ ಪ್ರಿಯವಾದ ವಸ್ತು. ದಯವಿಟ್ಟು, ಅದನ್ನು ಸ್ವೀಕರಿಸಿ, ತಿಂದು, ಸುಪ್ರೀತರಾಗಿ, ಈ ದಾಸನಮೇಲೆ ಅನುಗ್ರಹ ಸುರಿಸಿ" ಎಂದು ಕೇಳಿಕೊಂಡನು.

"ನಿನಗೇನಾದರೂ ಬುದ್ಧಿ ಕೆಟ್ಟದೆಯೋ? ಏನು ನೀನು ಹೇಳುವುದು? ಹತ್ತಿ ಬೀಜ ತಿನ್ನಬೇಕೆ?" ಎಂದು ಅವನು ಅತಿ ಚಕಿತನಾಗಿ ಕೇಳಿದನು.

ಭಕ್ತನು "ಏಕೆ ಕೂಡದು ಮಹರಾಜ್? ಆ ಆಲದ ಮರದಕೆಳಗೆ ಕುಳಿತಿರುವ ಸಾಧು ನೀವು ಕತ್ತೆ ಎಂದು ತಿಳಿಸಿದರು. ಕತ್ತೆಗೆ ಹತ್ತಿಬೀಜ ಕಂಡರೆ ಬಹು ಆಸೆ" ಎಂದನು.

ಸಾಧು ಕೋಪದಿಂದ "ಎಲಾ ದಡ್ಡ! ನಾನು ಕತ್ತೆಯಲ್ಲವೆಂದು ನಿನಗೆ ಕಾಣುವುದಿಲ್ಲವೆ?" ಎಂದು ಗರ್ಜಿಸಿದನು.

ಭಕ್ತನು "ಮಾಯೆಯ ಜಾಲದಲ್ಲಿ ಸಿಕ್ಕಿಕೊಂಡಿರುವ ನನ್ನಂತಹ ಬಡಪಾಯಿಗೆ ಹೇಗೆ ಗೊತ್ತಾಗಬೇಕು ಮಹರಾಜ್? ಮಹಾತ್ಮರ ವಿಚಾರ ಮಹಾತ್ಮರಿಗೇ ಗೊತ್ತು ಎಂದು ಹೇಳುತ್ತಾರೆ" ಎಂದು ಉತ್ತರ ಕೊಟ್ಟನು. ಅವನ ತೆಳುವಾದ ತುಟಿಗಳ ಕೊನೆ ಕುಹಕದಿಂದ ಸ್ವಲ್ಪ ಅಲುಗಿತು.

ಇಷ್ಟು ಹೊತ್ತಿಗೆ ಸಾಧುವಿಗೆ ಆಕ್ರೋಶ ಪೂರ್ಣವಾಯಿತು. ಆತನು ಎದ್ದು ಅಧಿಕಾರವಾಣಿಯಿಂದ "ಹೇ ಭಕ್ತಾಗ್ರೇಸರ, ಆ ಇನ್ನೊಬ್ಬ ಮಹಾತ್ಮನಿರುವ ಸ್ಥಳ ವನ್ನು ತೋರಿಸು: ತನಗಿಂತ ದೊಡ್ಡವರ ವಿಚಾರದಲ್ಲಿ ಹೇಗೆ ನಡೆದುಕೊಳ್ಳ ಬೇಕೆಂಬುದನ್ನು ಆತನಿಗೆ ಕಲಿಸಬೇಕು" ಎಂದನು.

ಇಬ್ಬರೂ ಹೋದರು. ಇಬ್ಬರು ಮಹಾತ್ಮರಿಗೂ ದೊಡ್ಡ ಕಲಹವಾಯಿತಂತೆ. ಭಕ್ತ ಬನಿಯ ದೂರದಿಂದ ಈ ಸೋಜಿಗವನ್ನು ನೋಡುತ್ತ ನಿಂತನು. ಈ ಕಲಹದ ಫಲವಾಗಿ ಮಹಾತ್ಮರಿಬ್ಬರಿಗೂ ಆ ದಿವಸವೆಲ್ಲಾ ಊಟವಿಲ್ಲವಾಯಿತು.

ರಾಂದೇರ್ ಗ್ರಾಮ ತಪತೀನದಿಯ ದಡದ ಮೇಲಿದೆ. ರಾಮದಾಸನು ಪ್ರತಿ ದಿನವೂ ರಾಮಚರಣದಾಸನೊಂದಿಗೆ ನದಿಯಲ್ಲಿ ಸ್ನಾನಕ್ಕಾಗಿ ಹೋಗುತ್ತಿದ್ದನು. ಸ್ನಾನದ ವಿಷಯದಲ್ಲಿ ರಾಮಚರಣದಾಸನು ರಾಮದಾಸನ ಮೇಲೆ ಸಂಪೂರ್ಣ ಅಧಿಕಾರವನ್ನು ನಡೆಸುತ್ತ, ಕೆಲವು ಸಂದರ್ಭಗಳಲ್ಲಿ, ತಂಟೆಮಾಡುವ ಮಗುವನ್ನು ತಾಯಿ ಹೇಗೆ ದಾರಿಗೆ ತರುವಳೋ ಹಾಗೆ, ರಾಮದಾಸನನ್ನು ಹೆದರಿಸಿ ತನ್ನ ಆಜ್ಞೆಯ ಮೇರೆ ನಡೆಯುವಂತೆ ಮಾಡುತ್ತಿದ್ದನು.

ಗಡುಸಾದ ಧ್ವನಿಯಲ್ಲಿ "ಸ್ವಾಮಿಜಿ, ಅಲ್ಲಿ ಸ್ನಾನಮಾಡಕೂಡದು. ಈ ಕಡೆ ಬನ್ನಿ" ಎಂದು ಹೇಳುತ್ತ ರಾಮದಾಸನ ರಟ್ಟೆಯನ್ನು ಹಿಡಿದು ಅವನನ್ನು ಮೊಣ ಕಾಲುದ್ದ ನೀರಿಗೆ ಎಳೆದುಕೊಂಡು ಹೋಗಿ, ಕಾಸ್ತಾರನು ಕುದುರೆಗೆ ಮಾಡುವಂತೆ ರಾಮದಾಸನ ಮೈಯನ್ನು ಉಜ್ಜಿ ತೊಳೆಯುತ್ತಿದ್ದನು. ರಾಮದಾಸನ ಮೇಲಿದ್ದ ಅಧಿಕವಾದ ಪ್ರೀತಿಯಿಂದಲೇ ಅವನು ಹೀಗೆ ಮಾಡುತ್ತಿದ್ದನೆಂಬುದರಲ್ಲಿ ಏನೇನೂ ಸಂಶಯವಿಲ್ಲ. ಕೆಲವು ದಿವಸಗಳಲ್ಲಿ ರಾಮದಾಸನಿಗೆ ತನಗೆ ನದಿಯಲ್ಲಿ ಯಾವ ಸ್ವಾತಂತ್ರ್ಯವೂ ಇಲ್ಲದೆ ಹೋಗಿರುವುದು ಅರಿವಿಗೆ ಬಂದಿತು. ಒಂದು ದಿನ ರಾಮ ದಾಸನು ಕೈಜೋಡಿಸಿಕೊಂಡು ಬಹಳ ದೈನ್ಯದಿಂದ "ರಾಮ, ನಿನ್ನ ನಡವಳಿಕೆ ಶ್ರೀ ರಾಮಕೃಷ್ಣ ಪರಮಹಂಸರ ವಿಚಾರದಲ್ಲಿ ಅವರ ಸೋದರಳಿಯ ತೋರಿಸು ತ್ತಿದ್ದ ನಡವಳಿಕೆಯನ್ನು ಜ್ಞಾಪಕಕ್ಕೆ ತರುತ್ತಿದೆ. ಹಸುಗೂಸಿನೋಪಾದಿಯಲ್ಲಿದ್ದ ಮಹಾತ್ಮನ ಮೇಲೆ ಆತನು ಅಧಿಕಾರವನ್ನು ನಡೆಸುತ್ತಿದ್ದನಂತೆ. ಕೊನೆಗೆ ಶ್ರೀ ರಾಮ ಕೃಷ್ಣ ಪರಮಹಂಸರು ಅವನನ್ನು ಹೊರಟುಹೋಗೆನ್ನಬೇಕಾಯಿತು. ಆದುದ ರಿಂದ ರಾಮದಾಸನನ್ನು ಅವನ ಪಾಡಿಗೆ ಬಿಟ್ಟು, ನೀನು ಹೊರಟುಹೋಗ ಬೇಕೆಂದು ರಾಮದಾಸನು ಬೇಡಿಕೊಳ್ಳುತ್ತಾನೆ" ಎಂದು ಹೇಳಿದನು.

ರಾಮಚರಣದಾಸನು ಇದನ್ನು ಕೇಳಿ ಹಲ್ಲುಕಿರಿದು ಸುಮ್ಮನಿದ್ದನು. ಪೇಟೆಗೆ ಹೋಗಿ ಬರುತ್ತ ಅವನಿಗೆ ಅನೇಕ ವರ್ತಕರ ಸ್ನೇಹವಾಯಿತು. ಒಂದು ದಿನ ಪೇಟೆಯಿಂದ ಬಂದವನೇ "ಸ್ವಾಮಿಜಿ, ವರ್ತಕಸ್ನೇಹಿತರು ನನಗೆ ಬಟ್ಟೆಗಳನ್ನು ದಾನ ಮಾಡಬೇಕೆಂದು ಇಚ್ಛಿಸುತ್ತಾರೆ. ನಿಮಗೂ ಕೆಲವನ್ನು ತರಬಲ್ಲೆ. ಎಂತಹ ಬಟ್ಟೆ ತೆಗೆದುಕೊಳ್ಳೋಣ ?" ಎಂದನು.

ರಾಮದಾಸನು "ನಾವು ಭಿಕ್ಷುಕರಾದುದರಿಂದ ನಮಗೆ ತಕ್ಕದ್ದು ಖಾದಿ. ಅದು ಒರಟಾಗಿರುತ್ತದೆ, ಬಾಳಿಕೆ ಬರುತ್ತದೆ, ನಮ್ಮ ಉಪಯೋಗಕ್ಕೆ ಸರಿಯಾಗಿರುತ್ತದೆ. ರಾಮದಾಸನಿಗಾದರೋ ಒಂದು ವಸ್ತ್ರ ಇದ್ದೇ ಇದೆ. ಅವನಿಗೆ ಹೆಚ್ಚಾಗಿ ಬೇಕಾಗಿಲ್ಲ" ಎಂದು ಉತ್ತರ ಕೊಟ್ಟನು.

ಇದು ಅವನಿಗೆ ಒಪ್ಪಾಗಲಿಲ್ಲವೆಂಬುದು ಅವನ ಮುಖದಿಂದ ತಿಳಿಯಿತು. ಅವನು ಪೇಟೆಗೆ ಹೋಗಿ ಸಾಯಂಕಾಲ ಬಂದನು. ರಾಮದಾಸನಿಗೆ ಕಾಣಿಸಿದ್ದು ಏನು? ವರಿಷ್ಠರಸಿಕಶೈಲಿಯ ವಸ್ತ್ರದಿಂದಲಂಕೃತನಾದ ಒಬ್ಬ ಸಾಧು! ಧರಿಸಿದ್ದುದು ನಯವಾದ ಮುಸ್ಲಿನ್ ಬಟ್ಟೆಯ ನಿಲುವಂಗಿ. ಅದರ ಮೇಲೆ ಹೊಳೆಯುವ ಗುಂಡಿಗಳು. ಬಹಳ ಬೆಲೆಯ ನಾಜೂಕಾದ ಕೊಡೆಯೊಂದನ್ನು ಅವನು ಕೈಯಲ್ಲಿ ತಿರುವುತ್ತಿದ್ದನು. ಕಾಲನ್ನು ಮುಚ್ಚಿ ರಬ್ಬರ್ ಅಟ್ಟೆಯ ಬಿಳಿಯ ಕಾನ್ವಾಸ್ ಜೋಡು. ಈ ರಸಿಕ ವ್ಯಕ್ತಿಯನ್ನು ನೋಡಿ ರಾಮದಾಸನು ತಲೆಬಾಗಿ "ರಾಮು, ರಾಮದಾಸನು ಒಬ್ಬ ದೀನ ಫಕೀರನೆಂದು ನಿನಗೆ ತಿಳಿದೇ ಇದೆ. ನೀನು ಈಗ ಒಬ್ಬ ಸಾಹೇಬನಾಗಿ ಮಾರ್ಪಾಡಾಗಿದ್ದೀಯೆ. ಬಡ ಫಕೀರನು ಸಾಹೇಬನೊಂದಿಗೆ ವ್ಯವಹರಿಸಬಹುದು ಹೇಗೆ?" ಎಂದು ಕೇಳಿದನು.

ರಾಮಚರಣದಾಸನು ವಾಚಾಳಿಯಲ್ಲ. ರಾಮದಾಸನ ಮಾತಿಗೆ ಮುಗುಳ್ನಗೆ ನಕ್ಕು ಮುಗಿಸಿದನು. ಅವನು ಯಾವಾಗಲೂ ತನ್ನ ಇಷ್ಟಬಂದಂತೆ ನಡೆಯುವವನು.

ಝಾನ್ಸಿಯ ಸ್ನೇಹಿತರಿಂದ ರಾಮದಾಸನಿಗೆ ಆಹ್ವಾನವೂ ಒಬ್ಬನ ಪ್ರಯಾಣದ ವೆಚ್ಚವೂ ಬಂದುವು. ರಾಮದಾಸನು ಝಾನ್ಸಿಗೆ ಒಬ್ಬನೇ ಪ್ರಯಾಣ ಮಾಡಬೇಕೆನ್ನುವುದು ಸ್ಪಷ್ಟವಾಯಿತು. ಅವನು ಈ ವಿಷಯವನ್ನು ಪ್ರಸ್ತಾಪಿಸಿದ ಕೂಡಲೆ ರಾಮಚರಣದಾಸನು ಪ್ರತಿಭಟಿಸಿದನು. "ನೀವು ನನ್ನನ್ನು ಯಾವಾಗಲೂ ದೂರ ನೂಕಬೇಕೆಂದೇ ಇದ್ದೀರಿ" ಎಂದನು.

ರಾಮದಾಸನು "ರಾಮು, ಅದು **ರಾಮನ** ಇಚ್ಛೆ. ಅದಕ್ಕೆ ನೀನು ತಲೆ ಬಾಗಬೇಕು. ಅಲ್ಲದೆ ನೀನು ಒಬ್ಬಂಟಿಗನಾಗಿಯೇ ಪ್ರಯಾಣ ಮಾಡಿ ನಿನ್ನದೇ ದಾರಿಯಲ್ಲಿ ಅನುಭವ ಪಡೆಯುವುದು ನಿನಗೆ ಒಳ್ಳೆಯದು. ನೀನು ನರ್ಮದಾತೀರಕ್ಕೆ ಹೋಗಿ ಅಲ್ಲಿಯ ಉತ್ತೇಜಕವಾದ ವಾತಾವರಣದಲ್ಲಿ ಕೆಲವು ಕಾಲವನ್ನು ಕಳೆಯಬೇಕೆನ್ನುವುದು ರಾಮದಾಸನ ಸಲಹೆ" ಎಂದನು.

## (iii) ಕೃಷ್ಣ, ಕ್ರೀಸ್ತ, ಬುದ್ಧ.

ಪ್ರಯಾಣಕ್ಕೆ ನಿಷ್ಕರ್ಷೆಯಾಗಿದ್ದ ದಿನ ರಾಮದಾಸನು ಸೂರತ್ತನ್ನು ಬಿಟ್ಟು ಉತ್ತರಕ್ಕೆ ಹೊರಟನು. ರಾಮಚರಣದಾಸನು ರಾಮದಾಸನ ಸಂಗಡ ಕೆಲವು

ಸ್ಟೇಷನ್ನು ಗಳವರೆಗೆ ಪ್ರಯಾಣಮಾಡಿ ಬೇರೆಯಾದನು. ರಾಮದಾಸನು ಉಜ್ಜಯಿನಿ ಯಲ್ಲಿ ನಿಲ್ಲಬೇಕಾಗಿ ಬಂದು, ಒಂದು ಧರ್ಮಶಾಲೆಯಲ್ಲಿ ಒಂದು ರಾತ್ರಿ ತಂಗಿದ್ದು, ಮಾರನೆದಿನ ಪ್ರಯಾಣವನ್ನು ಮುಂದುವರಿಸಿದನು. ರೈಲಿನಲ್ಲಿ ಒಬ್ಬ ಮುಸಲ್ಮಾನ ಯುವಕನ ಪರಿಚಯವಾಯಿತು. ಈತನು ರಾಮದಾಸನ ಮಗ್ಗುಲಲ್ಲೇ ಕುಳಿತು ತನ್ನ ದುಃಖವನ್ನು ಹೇಳಿಕೊಂಡಾಗ, ದೇವರಲ್ಲಿ ಶರಣುಹೋಗುವುದೇ ಈ ಜೀವನದ ಕಷ್ಟಗಳಿಗೆ ಪರಮೌಷಧವೆಂದು ರಾಮದಾಸನು ಉಪದೇಶಿಸಿದನು. ಚಂಚಲನಾದ ಮನಸ್ಸನ್ನು ದಾರಿಗೆ ತರಲು ಒಂದು ಮಾರ್ಗವನ್ನು ತೋರಿಸಿಕೊಡಬೇಕಾಗಿ ಆತನು ಕೇಳಿಕೊಳ್ಳಲು, ರಾಮಮಂತ್ರವನ್ನು ಜಪಿಸಬೇಕೆಂದು ರಾಮದಾಸನು ಆತನಿಗೆ ಸಲಹೆ ಕೊಟ್ಟನು.

ಭೋಪಾಲ್ ಸ್ಟೇಷನ್ನಿನಲ್ಲಿ ರೈಲು ಅರ್ಧ ಗಂಟೆ ನಿಲ್ಲುವುದು. ಇಲ್ಲಿ ಮುಟ್ಟಿದಾಗ ಮುಸ್ಲಿಂ ಸ್ನೇಹಿತನು ರಾಮದಾಸನಿಗೆ ಹಾಲು ಹಣ್ಣನ್ನು ಒದಗಿಸಿ, ತಾನು ಅಲ್ಲಿಯೇ ನಿಲ್ಲಬೇಕಾಗಿದ್ದುದರಿಂದ ಇಳಿದು, ಭಗವನ್ನಾಮವನ್ನು ಜಪಿಸುತ್ತಾ ಹೊರಟುಹೋದನು.

ರಾಮದಾಸನು ಝಾನ್ಸಿಗೆ ಸೇರಿದಾಗ ಅರ್ಧ ರಾತ್ರಿ. ಪ್ರಯಾಣಿಕರು ತಂಗುವ ಸ್ಥಳದಲ್ಲಿ ರಾತ್ರಿಯನ್ನು ಕಳೆದು ಅವನು ಬೆಳಿಗ್ಗೆ ಬೇಗನೆ ರೈಲ್ವೆ ಸ್ಟೇಷನ್ನಿನಿಂದ ಎರಡು ಮೈಲಿ ದೂರವಿರುವ ನಗರಕ್ಕೆ ನಡೆದನು. ನೇರವಾಗಿ ಮಹದೇವ ಪ್ರಸಾದನ ಮನೆಗೆ ಹೋದನು. ರಾಮದಾಸನನ್ನು ನೋಡಿ ಮಹದೇವ ಪ್ರಸಾದನು ಆನಂದದಿಂದ ಪ್ರಕ್ಷುಬ್ಧನಾದನು. (ರಾಮದಾಸನ ಪಾದಗಳ ಮೇಲೆ ಬಿದ್ದು, ಅವುಗಳನ್ನು ಮುತ್ತಿಟ್ಟುಕೊಂಡು, ಎದ್ದು, ರಾಮದಾಸನನ್ನು ಮತ್ತೆ ಮತ್ತೆ ಅಪ್ಪಿಕೊಂಡನು.) ಅಸಹನೀಯ ಉದ್ವೇಗದಿಂದ ಅವನ ಕಣ್ಣುಗಳಲ್ಲಿ ಆನಂದಬಾಷ್ಪ ಸುರಿಯುತ್ತಿದ್ದಿತು.

ಇದಕ್ಕೆ ಎರಡು ವರ್ಷಗಳ ಮೇಲ್ಪಟ್ಟು ಹಿಂದೆ ರಾಮದಾಸನು ಮಹದೇವ ಪ್ರಸಾದನ ಆದರದ ಆತಿಥ್ಯದಲ್ಲಿ ಹಲವು ತಿಂಗಳ ಕಾಲ ವಾಸವಾಗಿದ್ದನು. ಆಗ ಅವನು ರಾಮದಾಸನನ್ನು ಎಷ್ಟು ಪ್ರೀತಿ ಆದರದಿಂದ ಕಂಡಿದ್ದನು! ರಾಮದಾಸನನ್ನು ಪುನಃ ಸಂದರ್ಶಿಸಲು ಆತನಿಗೆ ನಿಜವಾಗಿ ಉತ್ಕಟೇಚ್ಛೆ ಇದ್ದಿರಬೇಕು. ಇದು ಅವನು ರಾಮದಾಸನನ್ನು ಈಗ ಸತ್ಕರಿಸಿದ ರೀತಿಯಿಂದ ಸ್ಪಷ್ಟವಾಗುತ್ತಿದ್ದಿತು.

ರಾಮದಾಸನಿಗೆ ಬದರಿನಾರಾಯಣ ಯಾತ್ರೆಯಲ್ಲಿ ತುಂಬ ಪ್ರೀತಿಯಿಂದ ಶುಶ್ರೂಷೆ ಮಾಡುತ್ತಿದ್ದ ರಾಮಕಿಂಕರನು ಸಾಯಂಕಾಲ ಸಿಕ್ಕಿದನು. ರಾಮದಾಸನನ್ನು ಕಂಡಕೂಡಲೇ ಈತನು ಆನಂದದಿಂದ ಪರವಶನಾದನು. ಹಿಂದೆ ಬಂದಿದ್ದಾಗ ರಾಮದಾಸನು ಇಳಿದಿದ್ದ ರಾಮಮಂದಿರವೇ ಈಗ ಅವನ ಆವಾಸ ಆಗತಕ್ಕದ್ದೆಂದು ಗೊತ್ತಾಯಿತು.

ರಾಮುಕಿಂಕರನು ರಾಮುದಾಸನನ್ನು ರಾಮುಮಂದಿರಕ್ಕೆ ಕರೆದುಕೊಂಡು ಹೋದನು. ಅಲ್ಲಿ ಪೂರ್ವ ಪರಿಚಿತ ಪಂಡಾಜಿಯೇ ಇದ್ದನು. ಅವನು ರಾಮುದಾಸ ನನ್ನು ಸ್ವಾಗತಿಸಲು ಹೊರಗೆ ಬಂದನು. ಅವನ ಸ್ಥೂಲಶರೀರ ಆನಂದಾತಿಶಯ ದಿಂದ ಕಂಪಿಸುತ್ತಿದ್ದಿತು. ಅವನು ರಾಮುದಾಸನನ್ನು ಪುನಃ ಪುನಃ ಎದೆಗೆ ಅಪ್ಪಿಕೊಂಡನು.

ರಾಮುದಾಸನ ಆಗಮನವಾರ್ತೆ ಬೆಳಿಗ್ಗೆ ಇತರ ಸ್ನೇಹಿತರಿಗೆ ಗೊತ್ತಾಗಿ ಅವರು ಗುಂಪುಗುಂಪಾಗಿ ಬಂದರು ಸಾಯಂಕಾಲದ ಹೊತ್ತು ರಾಮುಮಂದಿರದ ಎದುರಿಗೆ ದೊಡ್ಡಗುಂಪೇ ಸೇರಿದ್ದಿತು. ರಾಮುದಾಸನಿಗೆ ಹಿಂದೀಭಾಷಾ ಪರಿಚಯ ಇನ್ನೂ ಕಡಿಮೆಯಾಗಿದ್ದುದರಿಂದ ಅವನು ತನ್ನ ಪ್ರೇಮ ಮತ್ತು ಆನಂದದ ಸಂದೇಶ ವನ್ನು ಆಂಗ್ಲಭಾಷೆಯಲ್ಲಿ ಸಾರಿದನು. ಬೇರೆ ಬೇರೆ ಮತ ಅಥವ ಪಂಥವನ್ನು ಅನುಸರಿಸುತ್ತಿದ್ದವರು ತಮ್ಮ ಅನುಮಾನ ಪರಿಚ್ಛೇದಕ್ಕಾಗಲಿ, ಇಲ್ಲವೆ ತಮ್ಮ ಅಭಿಪ್ರಾಯವನ್ನು ಸಾಧಿಸುವುದಕ್ಕಾಗಲಿ, ರಾಮುದಾಸನೊಂದಿಗೆ ಚರ್ಚೆಮಾಡು ವರು. ಅವರ ವಿವಿಧ ನಿಲುವುಗಳನ್ನು ರಾಮುದಾಸನು ಅರಿತುಕೊಂಡು ಅವುಗ ಳೊಂದಿಗೆ ಸಮನ್ವಯಮಾಡಿಕೊಳ್ಳುತ್ತಿದ್ದನು. ಏಕೆಂದರೆ, ಏನೇ ಹೇಳಲಿ, ವರ್ಣ ವರ್ಣದ ಈ ಲೋಕಲೀಲೆಯನ್ನು ಸಂಕಲ್ಪಿಸಿರುವವನು ಭಗವಂತನೆ. **ಅವನನ್ನು** ಎಲ್ಲರಲ್ಲಿಯೂ ಕಾಣುತ್ತ ಪ್ರೀತಿಸುವ ಭಾಗ್ಯ ರಾಮುದಾಸನದಾಗಿದ್ದಿತು.

ರಾಮುದಾಸನು ಒಂದು ಸಲ ಸಿಪ್ರಿಪೇಟೆಗೆ ಹೋಗಿ, ಅಲ್ಲಿಯೂ ಅನೇಕ ಸ್ನೇಹಿತರನ್ನು ಸಂದರ್ಶಿಸಿ ನಗರಕ್ಕೆ ಹಿಂದಿರುಗಿ ಬಂದನು. ಊರ ಹೊರಗೆ ವಾಸಮಾಡಬೇಕೆಂಬ ಇಚ್ಛೆಯುಂಟಾಗಿ ಅದನ್ನು ತಿಳಿಸಲು, ಆಟ್ಕಂಬ ಎಂಬ ಒಂದು ಸ್ಥಳವನ್ನು ಆರಿಸಿದರು. ಒಂದು ಕೊಟಡಿ ಒಂದು ಕೈಸಾಲೆ, ಇರುವ ಸಣ್ಣ ಕಟ್ಟಡ ಒಂದು, ಲಕ್ಷ್ಮೀತಲಾವ್ ಎಂಬ ಕೆರೆಯ ದೂರದ ಮೂಲೆಯಲ್ಲಿ ಇದ್ದಿತು. ತಟಾ ಕದ ಅಂಚಿನಲ್ಲಿ ಎಂಟು ಕಂಬಗಳಮೇಲೆ ಕೆಂಪುಕಲ್ಲಿನ ಒಂದು ಭುವನೇಶ್ವರಿ ಮೇಲೆ ಒಂದು ಕಳಸವುಳ್ಳ ಮೊಗಲ್ ಶಿಲ್ಪದ ಮಾದರಿಯ ಒಂದು ಕಟ್ಟಡವಿದೆ. ಎಂಟು ಕಂಬಗಳಿರುವುದರಿಂದ ಇದಕ್ಕೆ ಆಟ್ಕಂಬ ಎಂದು ಹೆಸರು ಬಂದಿದೆ. ಈ ಕಟ್ಟಡದ ಜಗುಲಿಯಮೇಲೆ ಕೊಳಕ್ಕೆ ಎದುರಾಗಿ ಕುಳಿತುಕೊಂಡರೆ, ಮನೋಹರವಾದ ದೃಶ್ಯ ಕಾಣುತ್ತದೆ. ನಿಶ್ಚಲವಾದ ತಟಾಕದ ನೀರು ಸುತ್ತಣ ಪ್ರಕೃತಿಸೌಂದರ್ಯವನ್ನು ಒಂದು ಕನ್ನಡಿಯೆಂಬಂತೆ ಪ್ರತಿಬಿಂಬಿಸುತ್ತದೆ. ಈ ಕಟ್ಟಡದಮೇಲೆ ಒಂದು ಅರಳಿ ಮರ ತನ್ನ ವಿಸ್ತಾರವಾದ ಕೊಂಬೆಗಳನ್ನು ಹರಡಿದ್ದಿತು. ಮರದ ಬುಡದಲ್ಲಿ ಬಾಗಿಲು ಇಲ್ಲದ ಒಂದು ಕಲ್ಲುಮಂಟಪದಲ್ಲಿ ಕೆಂಪುಬಣ್ಣ ಬಳಿದಿರುವ ಆಂಜನೇಯನ ಶಿಲಾವಿಗ್ರಹ ಒಂದಿದೆ. ರಾಮುದಾಸನು ಆಟ್ಕಂಬದಲ್ಲಿ ಒಂದು ತಿಂಗಳಿಗಿಂತ ಹೆಚ್ಚುಕಾಲ ವಾಸಮಾಡಿದನು. ಇಲ್ಲಿಯೂ ಸಾಯಂಕಾಲದ ಹೊತ್ತು ಅನೇಕ ಜನರು ಗುಂಪುಗುಂಪಾಗಿ ಬರುತ್ತಿದ್ದರು. ರಾತ್ರಿಹೊತ್ತಿನಲ್ಲಿ ರಾಮುಕಿಂಕರನು

ಜೊತೆಯಲ್ಲಿರುತ್ತಿದ್ದನು. ಮಹದೇವಪ್ರಸಾದನಾದರೋ ಒಂದು ಸಂಜೆಯಾದರೂ ಬರದೆ ತಪ್ಪಲಿಲ್ಲ. ಕೆಲವು ವೇಳೆ ರಾಮದಾಸನು ಪ್ರಾತಃಕಾಲದಲ್ಲಿ ಬೆಟ್ಟಗಳ ಮೇಲೆ ಬಹುದೂರ ಸಂಚಾರಮಾಡುತ್ತಿದ್ದನು. ಒಂದು ಬೆಟ್ಟದಮೇಲೆ ಭಿನ್ನವಾದ ಬಿಳಿಶಿಲೆಯ ದೇವಿಯ ಪ್ರತಿಮೆಯನ್ನೊಳಗೊಂಡ ಒಂದು ಪಾಳುದೇವಸ್ಥಾನ ಅವನಿಗೆ ಕಾಣಿಸಿತು. ಈ ಬೆಟ್ಟದಮೇಲೆ ನಿಂತು ನೋಡಿದರೆ ಬಹಳ ದೂರದ ವರೆಗಿನ ಸುತ್ತಣ ಪ್ರದೇಶವೆಲ್ಲಾ ಕಾಣಬರುತ್ತದೆ. ಇಲ್ಲಿಯ ಉಲ್ಲಾಸಕರವಾದ ಮಾರುತದಲ್ಲಿ ರಾಮದಾಸನು ಗಂಟೆಗಟ್ಟಲೆ ಕಾಲವನ್ನು ಶಾಂತಿಮಯ ಧ್ಯಾನದಲ್ಲಿ ಕಳೆಯುತ್ತಿದ್ದನು.

ಶ್ಯಾಮಚೋಪ್ರಾದಲ್ಲಿದ್ದ ವೃದ್ಧ ಸಾಧುವಿನದರ್ಶನಕ್ಕಾಗಿಯೂ ರಾಮದಾಸನು ಕೆಲವುಸಲ ಹೋಗಿದ್ದನು. ಮಗುವಿನಂಥ ಆತನ ನಿಷ್ಕಲ್ಮಷಸ್ವಭಾವ ರಾಮ ದಾಸನನ್ನು ಅಲ್ಲಿಗೆ ಸೆಳೆದಿತು. ಅವನಿಗೆ ತನ್ನ ಚಿಕ್ಕಂದಿನ ಅಲೆದಾಟಗಳ ಚರಿತ್ರೆ ಯನ್ನು ವಿವರಿಸುವುದು ಇಷ್ಟ. ಅವನಿಗೆ ಆಶ್ಚರ್ಯಕರವಾದ ಅನುಭವಗಳುಂಟಾ ಗಿದ್ದುವು. ಅವನಿದ್ದ ದೇವಸ್ಥಾನ ಊರಿಗೆ ಬಹುದೂರದಲ್ಲಿ ಕಾಡಿನಮಧ್ಯೆ ಇದ್ದಿತು. ಹತ್ತಿರದಲ್ಲಿಯ ಭದ್ರವಾದ ಎರಡು ಕೊಳಗಳು ಸ್ನಾನಕ್ಕಾಗಿ ಪ್ರತಿದಿನವೂ ಅನೇಕ ಭಕ್ತರನ್ನಾಕರ್ಷಿಸುತ್ತಿದ್ದುವು.

ನಿರ್ಭಯಾನಂದಜಿ ಎಂಬ ಇನ್ನೊಬ್ಬ ಸಾಧುಮಹನೀಯ ಮತ್ತು ಇವರ ಧರ್ಮಪತ್ನಿ ಪೂರ್ಣಾನಂದಜಿ ಎಂಬುವರ ಪರಿಚಯದ ಸುಯೋಗ ರಾಮದಾಸನಿಗೆ ದೊರೆಯಿತು. (ಪತಿಪತ್ನಿಯರಿಬ್ಬರೂ ಸಂನ್ಯಾಸಗ್ರಹಣಮಾಡಿ ಕಾವಿಯನ್ನು ಧಾರಣೆ ಮಾಡಿದ್ದರು) ಇವರು ಜೀವನವನ್ನೇ ಭಗವಂತನಸೇವೆಗೆ ಮೀಸಲಾಗಿಟ್ಟಿದ್ದ ಆದರ್ಶ ದಂಪತಿಗಳು. ಇವರು ಚಿತ್ರಕೂಟದಲ್ಲಿರುವ ಪಿಳಿಕೋಟಿ ಸಂನ್ಯಾಸಿ ಆಶ್ರಮಕ್ಕೆ ಸೇರಿ ದವರು. ರಾಮದಾಸನು ಝಾನ್ಸಿಯಲ್ಲಿದ್ದಾಗ ಇವರಿಬ್ಬರೂ ಊರಹೊರಗೆ ಒಂದು ತೋಟದಲ್ಲಿ ವಾಸಿಸುತ್ತಿದ್ದರು; ರಾಮದಾಸನಿಗೆ ವಿಶೇಷ ಪ್ರೇಮವನ್ನು ತೋರಿದರು. ತಾಯಿ ಪೂರ್ಣಾನಂದಜಿ ನಿಜವಾಗಿಯೂ ಒಬ್ಬ ಪರಿಶುದ್ಧ ಪ್ರೇಮಜೀವಿ.

ಈ ಸಂದರ್ಭದಲ್ಲಿ ಈ. ಮಾತನ್ನು ಇಲ್ಲಿ ಗುರುತುಮಾಡಬೇಕು. ತಾನು ಪರಿಚಯ ಪಡೆದ ವ್ಯಕ್ತಿಗಳ ವಿಶಿಷ್ಟ ಪರಿಶುದ್ಧತೆ ಅಥವ ಮಹಿಮೆಗಳ ವಿಷಯವನ್ನು ರಾಮದಾಸನು ಹೇಳುವುದಾದರೂ, ರಾಮದಾಸನಿಗೆ ಯಾರೂ ಅಪರಿಶುದ್ಧರಾಗಲಿ ಪಾಪಿಗಳಾಗಲಿ ಅಲ್ಲ. ತನಗೆ ಒದಗಿದ ಸಂಗತಿ ತನ್ನ ತಿಳುವಳಿಕೆಗೆ ಬಂದ ವ್ಯಕ್ತಿಗಳ ವಿಚಾರದಲ್ಲಿ ತನ್ನ ಅನುಭವ ಇವನ್ನು ಉಲ್ಲೇಖಿಸುವುದು ಮಾತ್ರ ರಾಮದಾಸನ ಕೆಲಸ. ಭಗವಂತನ ಲೀಲೆಯನ್ನು ನಿರಭಿಮಾನದಿಂದ ಈಕ್ಷಿಸುವ ಒಬ್ಬ ಸಾಕ್ಷಿಯಾಗಿ ಅವನು ಈ ಕಥೆಯನ್ನು ಹೇಳುತ್ತಾನೆ. ಏಕೆಂದರೆ ಈ ಪ್ರಪಂಚವೆಲ್ಲವೂ, ನಾನಾ ಸ್ಥಳಗಳಲ್ಲಿ, ನಾನಾ ಗುಣಗಳಿಂದೊಡಗೂಡಿ, ಅಸಂಖ್ಯಾತ ರೂಪಗಳಿಂದ ಕಾಣಿಸಿಕೊಳ್ಳುವ ಪರಮಾತ್ಮನ ವ್ಯಕ್ತಸ್ವರೂಪ.

(ರಾಮುದಾಸನು ಸರ್ವವನ್ನೂ ಮಾಯಾತೀತವಾದ ಒಂದೇ ದೃಷ್ಟಿಯಿಂದ ನೋಡುತ್ತಾನೆ.) ಸತ್ಪುರುಷರೇ ಆಗಲಿ ಪಾಪಿಗಳೇ ಆಗಲಿ ಎಲ್ಲರ ಮೇಲೂ ರಾಮುದಾಸನ ಪ್ರೀತಿ ಒಂದೇ ರೀತಿಯಾಗಿದೆ. ಇವರಿಬ್ಬರಲ್ಲಿ ಯಾವ ವ್ಯತ್ಯಾಸಗಳೂ ರಾಮುದಾಸನಿಗೆ ಗೋಚರವಾಗುವುದಿಲ್ಲ. ಈ ಐಹಿಕ ವ್ಯಾಪಾರ ನಾಟಕದಲ್ಲಿ ಎಲ್ಲ ನಟರ ಭಾಗವನ್ನೂ ವಹಿಸಿರುವವನು ದೇವರು ಒಬ್ಬನೇ.

ಆಬಟ್ ಎಂಬ ಆಂಗ್ಲ ಮಹನೀಯನು ರಾಮುದಾಸನನ್ನು ಕಾಣಲು ಬಯಸಿ ಅವನನ್ನು ತನ್ನ ಬಂಗಲೆಗೆ ಮೋಟಾರ್ ಕಾರಿನಲ್ಲಿ ಕರೆದುಕೊಂಡು ಹೋದನು. ಆತನೂ ವೃದ್ಧಳಾದ ಆತನ ಅಕ್ಕನೂ ರಾಮುದಾಸನನ್ನು ಕೈಸಾಲೆಯಲ್ಲಿ ಸ್ವಾಗತಿಸಿದರು. ಆ ಆಂಗ್ಲಮಾತೆ ಯೇಸುಕ್ರೀಸ್ತ ಮತ್ತು ಆತನ ಬೋಧನೆಯ ವಿಚಾರವಾಗಿ ಬಹಳ ಮೆಚ್ಚಿ ಪ್ರಶಂಸಿಸಿದಳು. ಅವಳು ನುಡಿದ ಆ ದಿವ್ಯಗುರುವಿನ ಸ್ತೋತ್ರವನ್ನು ರಾಮುದಾಸನು ಸಂಪೂರ್ಣವಾಗಿ ಅನುಮೋದಿಸಿದನು. ಆದರೆ ಆಕೆ ತನ್ನ ಆವೇಶದಲ್ಲಿ ಶ್ರೀ ಕೃಷ್ಣ, ಬುದ್ಧ ಮತ್ತು ಇತರರ ವಿಚಾರವಾಗಿ ಹೀನಾಯವಾಗಿ ಮಾತನಾಡಲು ಪ್ರಾರಂಭಿಸಿದಳು.

ರಾಮುದಾಸನು "ತಾಯಿ, ಈ ವಿಚಾರದಲ್ಲಿ ರಾಮುದಾಸನು ನಿಮ್ಮೊಂದಿಗೆ ಸಮ್ಮತಿಸಲಾರನು. ಶ್ರೀ ಕೃಷ್ಣ, ಬುದ್ಧ ಇವರು ಯೇಸುಕ್ರೀಸ್ತನಿಗಿಂತ ಮೇಲಲ್ಲವೆಂದರೂ ಆತನಿಗೆ ಸಮಾನರೆಂದು ರಾಮುದಾಸನ ಗ್ರಹಿಕೆ. ಅವರ ವಿಚಾರವಾಗಿ ನೀವು ಹೀಗೆ ಮಾತನಾಡುತ್ತಿರುವುದು ಅವರ ವಿಷಯ ತಿಳುವಳಿಕೆ ಇಲ್ಲದುದರಿಂದ. ಹೀಗೆಯೇ ಕ್ರೀಸ್ತನ ವಿಷಯವನ್ನು ತಿಳಿಯದೆ ಆತನ ವಿಚಾರವಾಗಿ ಹೀನಾಯವಾಗಿ ನುಡಿಯುವ ಹಿಂದೂಗಳೂ ಉಂಟು" ಎಂದನು,

ಆ ತಾಯಿ ಇವನ ಅಭಿಪ್ರಾಯವನ್ನು ವಿರೋಧಿಸಿ ಅದನ್ನು ವಾದದಿಂದ ಬಡಿಯಲು ಪ್ರಾರಂಭಿಸಿದಳು. ರಾಮುದಾಸನು ಸುಮ್ಮನಿದ್ದನು. ತನ್ನ ಅಕ್ಕ ಮಾತನಾಡುವ ರೀತಿ ಆಬಟ್‌ನಿಗೆ ಸರಿತೋರಲಿಲ್ಲ. ಅವನು ಆಕೆಯನ್ನು ಸಮಾಧಾನಪಡಿಸಲು ಪ್ರಯತ್ನಿಸಿದನು. ಕೊನೆಗೆ ಆಕೆ ಸುಮ್ಮನಾದಳು. ರಾಮುದಾಸನು ಬೀಳ್ಕೊಂಡು ಹೊರಟನು.

ರಾಮುಕಿಂಕರನೂ ಝಾನ್ಸಿಯ ಇತರ ಸ್ನೇಹಿತರೂ ರಾಮುದಾಸನಿಗೆ ಹಿಂದಿಯ ಪರಿಚಯ ಮಾಡಿಕೊಳ್ಳಬೇಕಾಗಿ ಸೂಚಿಸಿದರು. ಅವನೊಡನೆ ಮಾತನಾಡಲು ಬರುತ್ತಿದ್ದ ಅನೇಕರಿಗೆ ಆಂಗ್ಲಭಾಷಾ ಪರಿಚಯವಿರಲಿಲ್ಲ. ಇಂಥವರಿಗೆ ರಾಮುದಾಸನ ಮಾತಿನ ಪ್ರಯೋಜನ ಲಭಿಸದೆ ಹೋಗುವುದೆಂದು ಅವರ ವ್ಯಥೆ. ಆದುದರಿಂದ ಅವರಲ್ಲೊಬ್ಬನು ರಾಮುದಾಸನಿಗೆ ಹಿಂದಿಯನ್ನು ಕಲಿಸಲು ಒಪ್ಪಿಕೊಂಡನು. ರಾಮುದಾಸನಿಗ ಒಂದು ಹಿಂದೀ ಮೊದಲನೆಯ ಪುಸ್ತಕ, ಒಂದು ಸ್ಲೇಟು, ಬಳಪವನ್ನು ತಂದುಕೊಟ್ಟುದಾಯಿತು. ರಾಮುದಾಸನಿಗೆ ತನ್ನನ್ನು ಮಕ್ಕಳ

ತರಗತಿಗೆ ಸೇರಿಸಿದಂತಾಯಿತು. ಅವನು ಆ ದಯಾಳು ಉಪಾಧ್ಯಾಯನಿಂದ ಪ್ರತಿ ದಿನವೂ ಒಂದು ಗಂಟೆ ಹೊತ್ತು ಪಾಠ ಕಲಿತನು. ಪಾಠದಲ್ಲಿ ವೇಗದಿಂದ ಮುಂದು ವರಿದನು. ಹತ್ತು ದಿನಗಳೊಳಗಾಗಿ ಮೊದಲನೆಯ ಪುಸ್ತಕವನ್ನು ಮುಗಿಸಿ ಇನ್ನು ಐದು ದಿನಗಳಲ್ಲಿ ಎರಡನೆಯ ಪುಸ್ತಕವನ್ನು ಪೂರೈಸಿದನು. ನಂತರ ಬಾಲ ರಾಮಾಯಣ, ಸಮರ್ಥ ರಾಮದಾಸಚರಿತೆ, ಗೀತಾಸಂಗ್ರಹ, ಮುಂತಾದ ಸುಲಭ ಹಿಂದೀ ಪುಸ್ತಕಗಳನ್ನು ಓದಲಾರಂಭಿಸಿದನು. ಹಾಗೆಯೇ ಹಿಂದಿಯಲ್ಲಿಯೇ ಕಾಗದಗಳನ್ನು ಬರೆಯಲು ಪ್ರಾರಂಭಿಸಿದನು.

ಶ್ರೀ ರಾಮಚಂದ್ರನ ಜನ್ಮದಿನದ ಉತ್ಸವವಾದ ರಾಮನವಮಿ ಅಷ್ಟರಲ್ಲೆ ಬರುವುದರಲ್ಲಿದ್ದಿತು. ಈ ಉತ್ಸವ ಚಿತ್ರಕೂಟದಲ್ಲಿ ವಿಜೃಂಭಣೆಯಿಂದ ನಡೆಯುವು ದೆಂದು ತಿಳಿಯಿತು. ಅದನ್ನು ನೋಡಬೇಕೆಂದು ರಾಮದಾಸನು ಮನಸ್ಸು ಮಾಡಿ ದನು. ಆದುದರಿಂದ ಒಂದು ದಿನ ಅವನು ಝಾನ್ಸಿಯ ಸ್ನೇಹಿತರಿಗೆ ಆ ಸಾಯಂಕಾಲ ಅಲ್ಲಿಗೆ ಪ್ರಯಾಣ ಮಾಡುವುದಾಗಿ ತಿಳಿಸಿದನು. ರಾಮದಾಸನನ್ನು ಬೀಳ್ಕೊಡಲು ರಾಮಕಿಂಕರ ಮತ್ತು ಇತರ ಸ್ನೇಹಿತರು ರೈಲ್ವೆ ಸ್ಟೇಷನ್ನಿಗೆ ಬಂದಿ ದ್ದರು. ರಾಮದಾಸನೊಬ್ಬನೇ ಪ್ರಯಾಣ ಮಾಡುವುದೆಂದು ನಿಷ್ಕರ್ಷೆಯಾಗಿದ್ದಿತು.

---

# ಅಧ್ಯಾಯ ೧೬

## ಚಿತ್ರಕೂಟ

### (i) ಒಬ್ಬ ಬನಿಯನ ತ್ಯಾಗ

ರಾಮದಾಸನ ಜೊತೆಗೆ ಒಬ್ಬ ಸಹಾಯಕನಿದ್ದರೆ ಚನ್ನಾಗಿದ್ದೀತೆಂದು ರಾಮ ಕಿಂಕರನು ತಿಳಿಸಿದನು. ಇದನ್ನು ಕೇಳಿ ಪ್ಲಾಟ್‌ಫಾರಂನಲ್ಲಿದ್ದ ಒಬ್ಬ ಬನಿಯನು ಮುಂದೆ ಬಂದು ನಾನೂ ಚಿತ್ರಕೂಟಕ್ಕೆ ಪ್ರಯಾಣ ಮಾಡುತ್ತಿದ್ದೇನೆ, ಇವ ರೊಂದಿಗೆ ಇದ್ದು ಇವರ ಅನುಕೂಲಗಳನ್ನು ಸಂತೋಷದಿಂದ ನೋಡಿಕೊಳ್ಳುತ್ತೇನೆ ಎಂದು ಹೇಳಿದನು.

ಅದರಂತೆ ಬನಿಯನೂ ರಾಮದಾಸನೂ ಒಂದಿಗೆ ರೈಲಿನಲ್ಲಿ ಕುಳಿತರು. ರೈಲು ಸ್ಟೇಷನ್ನನ್ನು ಬಿಟ್ಟು ಹೊರಟಿತು. ಬನಿಯನ ಹತ್ತಿರ ಒಂದು ಕಂಬಳಿಯೂ ಒಂದು ಲೋಟವೂ ಇದ್ದುವು ಬನಿಯನು ಬೆಂಚಿನ ಮೇಲೆ ಕಂಬಳಿಯನ್ನು ಹಾಸಿ, ಅದರ ಮೇಲೆ ರಾಮದಾಸನನ್ನು ಮಲಗುವಂತೆ ಹೇಳಿ, ಅವನ ಕಾಲುಗಳನ್ನು ಹಿಸುಕುತ್ತ ತನ್ನ ಮನಸ್ಸನ್ನು ಬಿಚ್ಚಿ ಹೇಳಿದನು.

"ಮಹರಾಜ್, ನನಗೆ ಈ ಪ್ರಾಪಂಚಿಕ ಜೀವನ ಬೇಸರವಾಗಿದೆ. ಸಾಧುವಿನ ಜೀವನವನ್ನು ನಡೆಯಿಸಬೇಕೆಂದು ಬಯಕೆಯಾಗುತ್ತದೆ. ಚಿಂತೆ, ದುಃಖಗಳಿಂದ

ತುಂಬಿದ ಪ್ರಪಂಚ ಜೀವನದಿಂದ ನಾನು ವಿಮುಖನಾಗಿದ್ದೇನೆ. ನನ್ನನ್ನು ನಿಮ್ಮ ಶಿಷ್ಯನನ್ನಾಗಿ ಎಣಿಸಿ ಕಾಪಾಡಿ."

"ರಾಮಜಿ! ಈ ಪ್ರಪಂಚದಲ್ಲಿ ತಪ್ಪೇನೂ ಇಲ್ಲ. ನಿನ್ನ ಮನಸ್ಸು ಆವಿಷ್ಟವಾಗಿದೆ, ಅಷ್ಟೆ. ನಿನ್ನೊಳಗೆ ಇರುವ ನಿಜವನ್ನು ಆಚ್ಛಾದಿಸಿರುವ ಮಾಯೆಯ ತೆರೆಯನ್ನು ಹರಿಯಬೇಕೆಂಬ ಉತ್ಕಟೇಚ್ಛೆ ನಿನ್ನ ಮನಸ್ಸಿನಲ್ಲಿ ಹುಟ್ಟದ ಹೊರತು ಬರಿಯ ಬಾಹ್ಯದ ತ್ಯಾಗದಿಂದೇನೂ ಉಪಯೋಗವಿಲ್ಲ. ಅದು ಬಾಣಲೆಯಿಂದ ಜಿಗಿದು ಒಲೆಯೊಳಕ್ಕೆ ಬಿದ್ದಂತೆ ಆಗುವುದು. ಪ್ರಪಂಚ ಮತ್ತು ಜೀವನದ ಕಡೆ ಸರಿಯಾದ ಭಾವನೆಯನ್ನು ತಳೆಯುವುದರಲ್ಲೇ ನಿಜವಾದ ಸಂತೋಷವಿದೆ. ಸರಿಯಾದ ಭಾವನೆ ಸರಿಯಾದ ದೃಷ್ಟಿಯನ್ನು ಅವಲಂಬಿಸಿದೆ ಕಂಡೆಯ. ಈ ದೃಷ್ಟಿ ಸತ್ಯ ಅಥವಾ ದೈವಸಾಕ್ಷಾತ್ಕಾರದಿಂದ ಬರುತ್ತದೆ. ವಂಚಿತನಾಗಬೇಡ. ಪ್ರಪಂಚವನ್ನು ತಿರಸ್ಕರಿಸಿದ ಮಾತ್ರದಿಂದ ನೀನು ಮುಕ್ತಿ ಶಾಂತಿಗಳನ್ನು ಪಡೆಯಲಾರೆ. ನಿನ್ನ ಮನಸ್ಸನ್ನು ಚನ್ನಾಗಿ ತಿಳಿದುಕೋ. ಬಂಧವಿಮೋಚನೆಯೂ, ಆನಂದವೂ ನಿನ್ನಲ್ಲಿಯೇ ಇವೆ. ಕಾಮ ಕ್ರೋಧ ಲೋಭಗಳನ್ನು ಜಯಿಸುವುದೇ ದಾರಿ. ರಾಮದಾಸನಿಗೆ ಅಂಟಿಕೊಳ್ಳಬೇಡ. ಅವನೇನೂ ಗುರುವಲ್ಲ. ಅವನು ನಿನ್ನ ಮಾರ್ಗದರ್ಶಕನು ಮಾತ್ರ ಆಗಬಲ್ಲನು. ಕಾರ್ಯಸಾಧನೆಗಾಗಿ ಮಾಡಬೇಕಾದ ಪ್ರಯತ್ನ ನಿನ್ನಿಂದಲೇ ನಡೆಯಬೇಕು. ಆದುದರಿಂದ ಸತ್ಯದ ಶಿಷ್ಯನಾಗು" ಎಂದು ರಾಮದಾಸನು ಬುದ್ಧಿವಾದ ಹೇಳಿದನು.

ಬನಿಯನ ಮನಸ್ಸು ಯೋಚನೆಯಲ್ಲೇ ಮಗ್ನವಾಗಿದ್ದಿದ್ದಂತೆ ಕಂಡಿತು. ಅವನಿಂದ ರಾಮದಾಸನ ಮಾತಿಗೆ ಯಾವ ಉತ್ತರವೂ ಬರಲಿಲ್ಲ. ಅವನು ಅವುಗಳನ್ನು ಅರ್ಥಮಾಡಿಕೊಂಡನೆನ್ನುವುದಕ್ಕೆ ಯಾವ ಸೂಚನೆಯೂ ಕಂಡು ಬರಲಿಲ್ಲ. ರಾತ್ರಿ ಕಳೆಯಿತು. ಬೆಳಗು ಮುಂಜಾನೆ ಚಿತ್ರಕೂಟದ ರೈಲ್ವೆ ಸ್ಟೇಷನ್ ಸಿಕ್ಕಿತು. ರೈಲಿನಿಂದಿಳಿದು ರಾಮದಾಸನೂ ಆ ಬನಿಯನೂ ಮೂರು ಮೈಲಿ ದೂರವಿರುವ ಚಿತ್ರಕೂಟದ ಬೆಟ್ಟಗಳ ಕಡೆಗೆ ಹೊರಟರು. ದಾರಿಯಲ್ಲಿ ಪುನಃ ರಾಮದಾಸನಿಗೆ ಬನಿಯನೊಂದಿಗೆ ಮಾತು ನಡೆಯಿತು.

ರಾಮದಾಸನು "ರಾಮಜಿ, ಮನಸ್ಸನ್ನು ಏಕಾಗ್ರತೆಯಲ್ಲಿ ದೃಢಮಾಡಲು ಏನಾದರೂ ಸಾಧನೆ ಮಾಡುತ್ತಿದ್ದೀಯಾ?" ಎಂದು ಕೇಳಿದನು.

"ಏಕಿಲ್ಲ! ಕೆಲವು ಸಲ ದೇವರ ನಾಮಸ್ಮರಣೆ ಮಾಡುತ್ತೇನೆ" ಎಂದು ಅವನು ಉತ್ತರ ಹೇಳಿದನು.

ರಾಮದಾಸನು "ಕೆಲವು ಸಲ ಉಪಯೋಗವಿಲ್ಲ. ದೇವರ ನಾಮವನ್ನು ಸಂತತವಾಗಿ ಸ್ಮರಿಸಬೇಕು. ಆಲೋಚನೆಯಲ್ಲಿ ಅದರ ನೆನಪನ್ನು ಅವಿಚ್ಛಿನ್ನವಾಗಿ ಹರಿಯಿಸಬೇಕು" ಎಂದು ಹೇಳಿದನು.

ಬನಿಯನು "ಆ ವಿಚಾರದಲ್ಲಿ ನಾನು ಸರಿಯಾಗಿಯೇ ಇದ್ದೇನೆ" ಎಂದು ಮಾತನ್ನು ಮುಗಿಸಿದನು.

ರಾಮುದಾಸನು "ರಾಮುಜಿ, ರಾಮುದಾಸನನ್ನು ಅವನ ದಾರಿಗೆ ಬಿಟ್ಟುಬಿಡು. ಅವನು ಒಬ್ಬಂಟಿಗನಾಗಿ ಅಲೆದಾಡುವನು. ನಿನ್ನ ದಾರಿಯನ್ನು ನೀನು ಹಿಡಿ" ಎಂದನು.

ಬನಿಯನು "ಛೆ, ಛೆ, ನಿಮ್ಮನ್ನು ಖಂಡಿತ ಬಿಡುವುದಿಲ್ಲ" ಎಂದು ತೀಕ್ಷ್ಣವಾಗಿ ಉತ್ತರ ಕೊಟ್ಟನು.

"ರಾಮುದಾಸನು ಅನುಸರಿಸುತ್ತಿರುವ ಮಾರ್ಗ ಕಷ್ಟ ಮತ್ತು ಅಪಾಯಗಳಿಗೀಡಾಗಿದೆ. ಅವನಿಗೆ ಹೆದರಿಕೆಯಿಲ್ಲ. ಮೃತ್ಯುವಿನ ಅಂಜಿಕೆಯೂ ಇಲ್ಲ. ಅವನನ್ನು ಅನುಸರಿಸುವುದಾದರೆ ನೀನು ಎಷ್ಟೋ ಕಷ್ಟ ಮತ್ತು ದುಃಖಗಳನ್ನು ಅನುಭವಿಸಬೇಕಾಗುತ್ತದೆ" ಎಂದು ರಾಮುದಾಸನು ಸೂಚಿಸಿದನು.

ಬನಿಯನು ಉದ್ವೇಗದಿಂದ "ನನಗೂ ಯಾವ ಹೆದರಿಕೆಯೂ ಇಲ್ಲ. ನೀವು ಅನುಸರಿಸಬೇಕೆನ್ನುವ ಜೀವನದ ಯಾವ ಮಾರ್ಗಕ್ಕೂ ನಾನು ಹೊಂದಿಕೊಳ್ಳಬಲ್ಲೆ. ನಾನು ನಿಮ್ಮೊಂದಿಗೆ ಸಹಭಾಗಿಯಾಗಿರಬೇಕೆಂದು ದೃಢಸಂಕಲ್ಪ ಮಾಡಿದ್ದೇನೆ" ಎಂದನು.

ರಾಮುದಾಸನು ನಿರ್ವಾಹವಿಲ್ಲದೆ ಒಪ್ಪಬೇಕಾಯಿತು. ಹೀಗಿದ್ದಿತು ದೈವೇಚ್ಛೆ. ಇಷ್ಟರಲ್ಲಿ ಇವರು ಊರು ಮಧ್ಯೆ ಇರುವ ಮಂದಾಕಿನೀ ನದಿಯ ದಡವನ್ನು ಮುಟ್ಟಿದರು. ಒಂದು ಸ್ನಾನಘಟ್ಟಕ್ಕೆ ಬಂದರು. ಅಲ್ಲಿ ರಾಮುದಾಸನು ಸವೆದುಹೋಗಿದ್ದ ತಗ್ಗಾದ ಒಂದು ಹಲಗೆಯ ಮೇಲೆ ಕುಳಿತುಕೊಂಡನು. ಬನಿಯನನ್ನು ಹಿಡಿದಿದ್ದ ವೈರಾಗ್ಯದ ಆವೇಶ ತನ್ನ ಪ್ರಭಾವವನ್ನು ಬೀರುತ್ತಿದ್ದಿತು. ತೊಟ್ಟಿದ್ದ ಷರಟನ್ನು ಬಿಚ್ಚಿ, ಅವನು ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ಕ್ಷೌರಿಕನನ್ನು ಕರೆದು, ಒಂದು ಕಲ್ಲು ಮೆಟ್ಟಲು ಮೇಲೆ ಕುಳಿತು "ನಾನು ಸಂನ್ಯಾಸ ತೆಗೆದುಕೊಳ್ಳುತ್ತೇನೆ, ತಲೆಯನ್ನು ಪೂರಾ ಕ್ಷೌರಮಾಡು" ಎಂದು ಹೇಳಿದನು.

ಆ ನಾಪಿತನು "ನನ್ನನ್ನು ನೀವೇನೆಂದೋ ತಿಳಿದಿದ್ದೀರಿ. ಸಂನ್ಯಾಸ ತೆಗೆದುಕೊಳ್ಳುವುದಕ್ಕೆ ನಿಮಗೆ ಸಹಾಯಮಾಡಿ, ನಿಮ್ಮ ಹೆಂಡತಿಮಕ್ಕಳ ಶಾಪಗಳನ್ನು ನನ್ನ ತಲೆಯ ಮೇಲೆ ಎಳೆದುಕೊಳ್ಳಲು ನಾನು ಸಿದ್ಧನಾಗಿಲ್ಲ" ಎಂದು ಪ್ರತಿ ಹೇಳಿದನು.

ಬನಿಯನು ನಾಪಿತನನ್ನು ಸಮಾಧಾನಪಡಿಸಲು "ಅಣ್ಣಾ, ಅದನ್ನು ಕಟ್ಟಿಕೊಂಡು ನಿನಗೇನಾಗಬೇಕು ? ನಾನು ಹೇಳಿದಂತೆ ಮಾಡು. ಇಗೋ, ನಿನ್ನ ಮರಿ ಅಲ್ಲದೆ ನನ್ನ ಷರಟನ್ನೂ ಗಡಿಯಾರವನ್ನೂ ಕೊಡುತ್ತೇನೆ" ಎಂದು ಉಪಾಯವಾಗಿ ಒತ್ತಾಯಮಾಡಿದನು. ನಾಪಿತನು ಕದಲಲಿಲ್ಲ. ಶಾಪಭೀತಿ ಉಳಿದೆಲ್ಲ ಎಣಿಕೆಗೂ ಮಿಗಿಲಾಗಿದ್ದಿತು. ಅವನು ಆಸೆಗೆ ಒಳಗಾಗಲು ಒಪ್ಪಲಿಲ್ಲ. ಆ ಸ್ಥಳವನ್ನೇ ಬಿಟ್ಟು ಹೋಗಲು ಎದ್ದನು. ಆಗ ಬನಿಯನು ಅವನನ್ನು ಕೈಹಿಡಿದು ನಿಲ್ಲಿಸಿ, "ತಲೆಯ

ಮೇಲೆ ಸ್ವಲ್ಪ ಶಿಖೆಯನ್ನೂ, ಕಣ್ಣುಗಳಮೇಲೆ ಹುಬ್ಬುಗಳನ್ನೂ ಬಿಟ್ಟು ಉಳಿದಂತೆ ತಲೆ ಮತ್ತು ಮುಖದ ಎಲ್ಲ ಕೂದಲನ್ನೂ ತೆಗೆದುಬಿಡು. ಏನು ಹೇಳುತ್ತಿ ? ಇದಕ್ಕೆ ಏನೂ ಅಭ್ಯಂತರವಿರಲಾರದು" ಎಂದು ಅಂಗಲಾಚಿದನು.

ಇದರಮೇಲೆ ನಾಪಿತನು ತನ್ನ ಹಡಪವನ್ನು ಕೆಳಕ್ಕಿಳಿಸಿ ಕುಳಿತನು. ಈ ಮಧ್ಯವರ್ತನೆಗೆ ಒಪ್ಪಿಗೆ ಇತ್ತನು. ಹದಿನೈದು ನಿಮಿಷಗಳೊಳಗೆ ತಲೆಯಮೇಲೆ ಮಧ್ಯಭಾಗದಲ್ಲಿ ಸ್ವಲ್ಪ ಜುಟ್ಟನ್ನೂ ಹುಬ್ಬುಗಳ ಮೇಲಣ ಕೂದಲನ್ನೂ ಬಿಟ್ಟು ಉಳಿದ ಭಾಗವನ್ನು ಚೊಕ್ಕಟವಾಗಿ ಕ್ಷೌರಮಾಡಿದನು. ಬನಿಯನು ಅವನಿಗೆ ಸ್ವಲ್ಪ ದುಡ್ಡನ್ನೂ ಷರಟನ್ನೂ ಗಡಿಯಾರವನ್ನೂ ಕೊಟ್ಟುಬಿಟ್ಟನು. ಅನಂತರ ರಾಮದಾಸನ ಅನುಮೋದನೆಗಾಗಿ ಅವನಕಡೆ ತಿರುಗಿದನು. ರಾಮದಾಸನಿಗೆ ಈ ನಾಟಕದ ಸಂತುಷ್ಟ ಪ್ರೇಕ್ಷಕನಾಗಿರುವುದು ಮಾತ್ರ ಸಾಧ್ಯವಾಗಿದ್ದಿತು, ಅಷ್ಟೆ.

ನಂತರ ಬನಿಯನ ಹತ್ತಿರ ಉಳಿದುದು ಮಣಕು ಕಟ್ಟಿದ ಒಂದು ಹಳೆಯ ಟೋಪಿ, ಎರಡು ಪಂಚೆ, ಸ್ವಲ್ಪ ದುಡ್ಡಿದ್ದ ಒಂದು ಸಣ್ಣ ಚೀಲ ಮತ್ತು ಬೆರಳಿನ ಮೇಲೆ ಭಂಗಾರದ ಒಂದು ಉಂಗುರ. ಅವನು ಟೋಪಿಯನ್ನು ಬಿಸಾಟನು. ಒಂದು ಪಂಚೆಯನ್ನು ಒಬ್ಬ ತಿರುಕನಿಗೆ ದಾನಮಾಡಿದನು. ಅವನ ಹತ್ತಿರ ಇನ್ನು ಉಳಿದದ್ದು ಒಂದು ಪಂಚೆ, ಒಂದು ಉಂಗುರ, ಸ್ವಲ್ಪ ದುಡ್ಡು, ಒಂದು ಲೋಟ ಇಷ್ಟುಮಾತ್ರ.

ಸ್ನಾನವಾದ ಮೇಲೆ ಬನಿಯನು ರಾಮದಾಸನನ್ನು ಹತ್ತಿರವಿದ್ದ ಒಂದು ಮಿಠಾಯಿ ಅಂಗಡಿಗೆ ಕರೆದುಕೊಂಡು ಹೋದನು. ಇಬ್ಬರೂ ಪೂರಿ ಮತ್ತು ಹಾಲನ್ನು ತೆಗೆದುಕೊಂಡರು. ಇಲ್ಲಿಂದ ಇಬ್ಬರೂ ನದಿಯ ಪಾರ್ಶ್ವದಲ್ಲೇ ನಡೆದು ಹೋಗಿ, ಫಟಿಕ್‌ಶಿಲ ಎಂಬ ಸ್ಥಳವನ್ನು ಮುಟ್ಟಿದರು. ಅಲ್ಲಿ ನದಿಯ ದಂಡೆಯ ಒಂದು ಗುಡಿಸಿಲಿನಲ್ಲಿ ಸುಮಾರು ಹನ್ನೆರಡು ಜನ ಸಾಧುಗಳು ವಾಸಿಸುತ್ತಿದ್ದುದು ಕಾಣಿಸಿತು. ಒಂದು ಮರದ ಕೆಳಗೆ ಕೊಂಚಕಾಲ ವಿಶ್ರಮಿಸಿಕೊಂಡು ಅವರು ಮಧ್ಯಾಹ್ನದ ಹೊತ್ತಿಗೆ ಮರಳಿ ಊರೊಳಕ್ಕೆ ಬಂದರು. ಬನಿಯನಿಗೆ ಹಸಿವಾಗಿ ಮತ್ತೆ ಮಿಠಾಯಿ ಅಂಗಡಿಗೆ ಹೋಗಿ ಉದರವೃಕನನ್ನು ಅಡಗಿಸಿದುದಾಯಿತು.

ಮಧ್ಯಾಹ್ನ ಇವರು ಪ್ರಸಿದ್ಧವಾದ ಕಾಮ್ತಾನಾಥ ಬೆಟ್ಟವನ್ನು ಪ್ರದಕ್ಷಿಣೆ ಮಾಡಿದರು. (ಈ ಬೆಟ್ಟದಲ್ಲಿ ಶ್ರೀರಾಮಚಂದ್ರನು ಸೀತಾಮ್ಮನವರ ಸಮೇತ ಹನ್ನೆರಡು ವರ್ಷ ವಾಸವಾಗಿದ್ದಂತೆ ಪ್ರತೀತಿ) ಸಾಯಂಕಾಲಕ್ಕೆ ಮತ್ತೆ ಮಿಠಾಯಿ ಅಂಗಡಿಗೆ ಹೋದದ್ದಾಯಿತು

ರಾತ್ರಿ ರಾಮದಾಸನಿಗೆ ಒಂದು ಮರದ ಕೆಳಗೆ ಮಲಗುವುದು ಸುಖವಾಗಿ ಕಂಡಿತು. ಬನಿಯನು ಅವನ ಮಗ್ಗುಲಲ್ಲಿ ಮಲಗಿದನು. ಅವನು ರಾಮದಾಸ ನೊಂದಿಗೆ ಅವನ ನೆರಳು ಎಂಬಂತೆ ಚಲಿಸಿದನು. ರಾಮದಾಸನು ಯಾವ

ಕ್ಷಣದಲ್ಲೋ ತಪ್ಪಿಸಿಕೊಂಡು ಹೋದಾನು ಎಂದು ಅವನಿಗೆ ಹೆದರಿಕೆ. ಬೆಳಿಗ್ಗೆ ಹುಲ್ಲುಹಾಸಿಕೆಯಿಂದ ಎದ್ದಾಗ ಬನಿಯನಿಗೆ ದೇಹದಲ್ಲಿ ಏನೋ ಅಸ್ವಸ್ಥ ಎನಿಸಿತು.

ಅವನು ರಾಮದಾಸನಿಗೆ "ಕಾರ್ವಿ ಸ್ಟೇಷನ್ನಿಗೆ ಹೋಗೋಣ. ಅದು ಇಲ್ಲಿಗೆ ನಾಲ್ಕುಮೈಲಿ ದೂರವಿದೆ; ಸಾಯಂಕಾಲ ಹಿಂದಿರುಗೋಣ" ಎಂದು ಸೂಚಿಸಿದನು. ರಾಮದಾಸನು ಇದು ಏಕೆ ಎಂದು ಈಗ ಕೇಳತಕ್ಕವನಾಗಿರಲಿಲ್ಲ; ಹೇಳಿದಂತೆ ನಡೆಯುವುದು ಅವನ ಕೆಲಸವಾಗಿದ್ದಿತು. ಆಕರ್ಷಕವಾದ ಫಲಹಾರದ ಅಂಗಡಿಗೆ ಹೋಗಿ ಆಮೇಲೆ ಹೊರಟದ್ದಾಯಿತು. ದಾರಿಯಲ್ಲಿ ಒಂದು ಬೆಟ್ಟದ ಕಿಬ್ಬರಿಯಲ್ಲಿ ನಡೆಯುತ್ತಿರುವಾಗ ರಾಮದಾಸನು ಬನಿಯನ ಹಿಂದೆಯೇ ಇರಬೇಕಾಯಿತು. ಆಗ ಬನಿಯನ ಬಾಯಿಂದ ಬುಸುಗುಟ್ಟುವ ಶಬ್ದ ಮತ್ತು ನರಳಾಟದ ಧ್ವನಿ ಕೇಳಿಸಿದವು. ರಾಮದಾಸನು ಒಂದು ಪಕ್ಕಕ್ಕೆ ಹಾರಿ ಬನಿಯನ ಎದುರಿಗೆ ನಿಂತನು. ಬನಿಯನು ಅಳುತ್ತಿದ್ದನು.

"ಏಕೆ ಅಳುತ್ತೀಯೆ ?" ಎಂದು ರಾಮದಾಸನು ಪ್ರಶ್ನಿಸಿದನು.

ದುಃಖಭರಿತವಾಗಿ ಹಲವುಬಾರಿ ಬಿಕ್ಕಿ ಅಳುತ್ತ, ಕಣ್ಣೀರನ್ನು ಒರಸಿಕೊಂಡು ಬನಿಯನು "ನನ್ನ ಹೆಂಡತಿ ಮಕ್ಕಳಿಗಾಗಿ ವ್ಯಥೆಪಡುತ್ತಿದ್ದೇನೆ. ಅವರಿಗೆ ತಿಳಿಯದಂತೆ ಅವರನ್ನು ಬಿಟ್ಟು ಓಡಿಬಂದೆ. ನನ್ನನ್ನು ಜ್ಞಾಪಿಸಿಕೊಳ್ಳುತ್ತ ಅವರು ನಾನು ಇಲ್ಲವೇ ಎಂದು ದುಃಖಪಡುತ್ತಿರಬಹುದು. ನನಗೋಸ್ಕರ ನಾನೇನೂ ಒದ್ದಾಡುವುದಿಲ್ಲ. ಅವರಿಗೋಸ್ಕರ ನನ್ನ ಹೃದಯ ಕನಿಕರಪಡುತ್ತದೆ" ಎಂದನು. ಹೀಗೆನ್ನುತ್ತ ಅವನು ಗೊಳೋ ಎಂದು ಅತ್ತನು.

ರಾಮದಾಸನು ಅವನನ್ನು "ರಾಮಜಿ, ಹಾಗಾದರೆ ನೀನು ಅವರ ಬಳಿಗೆ ಏಕೆ ಹಿಂದಿರುಗಬಾರದು ?" ಎಂದು ಕೇಳಿದನು. ಬನಿಯನು "ಆ ಮಾತನ್ನು ಹತ್ತಿರ ಹತ್ತಿರ ಮುಗಿಸಿಬಂದೆನು ನೋಡಿ. ಕೊನೆಗೂ ಕ್ಷೌರಿಕನ ಮಾತೇ ನಿಜ !" ಎಂದು ಹೇಳುತ್ತಾ, ತಲೆಯಮೇಲೆ ಉಳಿದಿದ್ದ ಶಿಖೆಯನ್ನು ಪ್ರೀತಿಯಿಂದ ಸ್ವಲ್ಪ ಸವರಿಕೊಳ್ಳುತ್ತಾ "ನಿಜ. ಈಗಿನ ಸಂದರ್ಭ ಅಷ್ಟೇನೂ ಕಠಿಣವಾಗಿಲ್ಲ. ಈಗಲೂ ನಾನು ಅವರ ಬಳಿಗೆ ಹೋಗಬಹುದು" ಎಂದನು.

## (ii) ಸಂಧಾನದ ಯತ್ನ ವಿಫಲ

ಹೀಗೆ ಮಾತನಾಡುತ್ತ ಇವರು ಕಾರ್ವಿಯನ್ನು ಮುಟ್ಟಿದರು. ಬನಿಯನು ಒಡನೆಯೇ ರೈಲ್ವೆ ಸ್ಟೇಷನ್ ಬಳಿ ಇದ್ದ ಒಂದು ಗುಡಿಸಿಲಿನ ಅಂಗಳಕ್ಕೆ ಹೋದನು. ಮನೆಯ ಬಾಗಿಲಿಗೆ ನಾಲ್ಕು ಹೆಜ್ಜೆ ಈಚೆ ಅಂಗಳದಲ್ಲಿದ್ದ ಒಂದು ಬೆಂಚಿನಮೇಲೆ ಇಬ್ಬರೂ ಕುಳಿತರು. ಮನೆಯ ಮುಂದೆ ಇಬ್ಬರು ಹುಡುಗರು ಆಡುತ್ತಿದ್ದರು. ಬನಿಯನು ಅವರಿಗೆ ಬಹುಸಲ ಸಂಜ್ಞೆ ಮಾಡಿದನು. ಅವರು ಅವನ ಗುರುತು ಹಿಡಿಯಲಿಲ್ಲ; ಅವನನ್ನು ಗಮನಿಸಲೂ ಇಲ್ಲ. ಅವರು ಗುರುತಿಸದೆ ಇದ್ದುದಕ್ಕೆ ಅವನ

ವೇಷದ ಮಾರ್ಪಾಡೇ ಕಾರಣ ! ನಂತರ ಬನಿಯನು ಹುಡುಗರಲ್ಲೊಬ್ಬನನ್ನು ಕರೆದು ಯಾರೋ ಬಂದಿದ್ದಾರೆಂದು ನಿಮ್ಮ ತಾಯಿಗೆ ತಿಳಿಸೆಂದು ಅವನ ಕಿವಿಯಲ್ಲಿ ಪಿಸು ಮಾತಿನಲ್ಲಿ ಹೇಳಿದನು.

ಹುಡುಗನು ಒಳಕ್ಕೆ ಹೋದನು. ಬನಿಯನು ಮಧ್ಯೆ ರಾಮದಾಸನಿಗೆ ತನ್ನ ಉದ್ದೇಶದ ಗುಟ್ಟನ್ನು ಬಿಚ್ಚಿ ಹೇಳಿದನು. ಅವನು ಬಂದಿದ್ದದ್ದು ಅವನ ನಾದನಿಯ ಮನೆಗೆ. ಅವನು ಅವಳಿಗೆ ತನ್ನ ಸ್ಥಿತಿಯನ್ನು ತಿಳಿಸಿಕೊಟ್ಟು ಆಕೆಯ ಮೂಲಕ ತನ್ನ ಹೆಂಡತಿಯೊಂದಿಗೆ ಸಮಾಧಾನಕ್ಕೆ ಬರುವ ದಾರಿಯನ್ನು ಕಂಡು ಹಿಡಿಯಬೇಕೆಂದು ಬಯಸಿದ್ದನು. ಹೆಂಡತಿಯ ಸಂಗಡ ಕಲಹಮಾಡಿಕೊಂಡು ಮತ್ತೆ ಆ ಮನೆಯ ಹೊಸಲಮೇಲೆ ತನ್ನ ನೆರಳನ್ನು ಹಾಕುವುದಿಲ್ಲವೆಂದು ಶಪಥ ಮಾಡಿ ಹೊರಟು ಬಂದಿದ್ದನೆಂದು ಅವನ ಮಾತಿನಿಂದ ಸ್ಪಷ್ಟವಾಯಿತು.

ಹುಡುಗನು ಮನೆಯೊಳಗಿನಿಂದ ಬಂದವನು ತನ್ನ ಪಾಡಿಗೆ ತನ್ನ ಸಹೋದರನೊಂದಿಗೆ ಆಟಕ್ಕೆ ನಿಂತನು. ಅಪರಿಚಿತನನ್ನು ತನ್ನ ಮನೆಯೊಳಗೆ ಕಾಣಲು ಆ ಸಾಧ್ವಿ ಹೇಗೆ ಒಪ್ಪಿಯಾಳು ? ಬನಿಯನು ಪುನಃ ಹುಡುಗನ ಹತ್ತಿರ ಹೋಗಿ "ನಿನ್ನ ತಂಗಿ ಮಾಮಿಯ ಗಂಡ ಬಂದಿದ್ದಾನೆಂದು ನಿಮ್ಮಮ್ಮನಿಗೆ ತಿಳಿಸು" ಎಂದು ಮೆಲ್ಲಗೆ ಹೇಳಿದನು.

ಹುಡುಗನು ಹುಬ್ಬುಗಳನ್ನು ಎತ್ತಿ, ಬಾಯನ್ನು ಅಗಲವಾಗಿ ತೆರೆದು, ಬನಿಯನ ಮುಖವನ್ನು ಆಶ್ಚರ್ಯದಿಂದ ದೃಷ್ಟಿಸಿದನು. ಅವನ ಮುದ್ದು ಮುಖವನ್ನು ಒಂದು ಕಿರುನಗೆ ಬೆಳಗಿತು. ಅವನು ಮನೆಯೊಳಕ್ಕೆ ಓಡಿಹೋಗಿ ಮತ್ತೆ ಬಂದು, ಇವನನ್ನು ಒಳಗೆ ಬರುವಂತೆ ಸಂಜ್ಞೆ ಮಾಡಿದನು. ಬನಿಯನು ಸಂತೋಷದ ಮುಖದಿಂದ ಮನೆಯೊಳಕ್ಕೆ ಅವಸರವಾಗಿ ಹೋದನು. ರಾಮದಾಸನು ಕಾದಿದ್ದನು. ಸುಮಾರು ಹದಿನೈದು ನಿಮಿಷ ಕಳೆಯಿತು ; ಬನಿಯನು ಹೊರಕ್ಕೆ ಬಂದನು. ಅವನು ಪೆಟ್ಟುತಿಂದ ನಾಯಂತೆ ಕಾಣುತ್ತಿದ್ದನು. ಅವನ ಕಹಿಯಾದ ಮುಖ ಅವನ ನಾದಿನಿ ಅವನಿಗೆ ಎಂಥ ಮಾತನ್ನು ಬಡಿಸಿದ್ದಳೆಂಬುದನ್ನು ವ್ಯಕ್ತಪಡಿಸುತ್ತಿದ್ದಿತು. ಅವನಿಗೆ ತನ್ನ ಮನಸ್ಸನ್ನು ಆಕೆ ಚೆನ್ನಾಗಿ ಮುಟ್ಟಿಸಿರಬೇಕು. ಆಕೆಯ ಬಾಯಿಂದ ಹೊರಟ ಬಿಸಿಬಿಸಿ ಛಡಿಮಾತು ಅವನ ಮುಖವನ್ನು ಸುಟ್ಟು ಸುಕ್ಕು ಮಾಡಿದ್ದಿತು.

ಅವನು "ಅವಳ ನಾಲಗೆ ಅಲಗಿನಂತೆ ಕುಯ್ಯುತ್ತದೆ. ಅಬ್ಬ ! ಹೆಂಗಸಿನ ನಾಲಗೆಯೆ" ಎಂದು ಅನುಭವದಿಂದ ನುಡಿದನು. ನಂತರ "ಮಹರಾಜ್, ಈಗ ನನಗೆ ಪ್ರಾಯಶ್ಚಿತ್ತವಾಯಿತು. ಸಂಸಾರ ಮಾಡಿಕೊಂಡಿರುವುದು ನನ್ನ ಸ್ವಭಾವಕ್ಕೆ ಸರಿಹೋಗುವುದಿಲ್ಲ. ಸಾಧುವಿನ ಜೀವನ ನನ್ನ ಮನಸ್ಸನ್ನು ಸೆಳೆಯುತ್ತದೆ. ನಾನು ಎಂದಿನೂ ನನ್ನ ಮನೆಗೆ ಹೋಗುವುದಿಲ್ಲ. ಇನ್ನೊಬ್ಬ ಸೋದರಿಯ ಎದುರಿಗೆ ನಿಲ್ಲಲಾರೆ. ನಿಜವಾಗಿ, ನಿಜವಾಗಿ" ಎಂದನು. ಈ ದೃಢ ಸಂಕಲ್ಪಕ್ಕೆ

ಬಂದು ಅವನು "ಮಹರಾಜ್, ಈ ಅಯೋಗ್ಯ ಸ್ಥಳದಿಂದ ಹೊರಟುಹೋಗೋಣ" ಎಂದನು.

ಇಷ್ಟು ಹೊತ್ತಿಗೆ ಮಧ್ಯಾಹ್ನ ಮೀರಿ ಬನಿಯನಿಗೆ ಹಸಿವು ಹೆಚ್ಚಾಗಿದ್ದಿತು. ಅವನು ಒಂದು ಮಿಠಾಯಿ ಅಂಗಡಿಗೆ ನಡೆದನು. ಅಲ್ಲಿ ಇಬ್ಬರೂ ಅಲ್ಪಾಹಾರ ತೆಗೆದುಕೊಂಡುದಾಯಿತು. ತನ್ನ ಹೃದಯ ಪರಸ್ಪರ ವಿರೋಧ ಭಾವನೆಗಳಿಂದ ಕ್ಷತವಿಕ್ಷತವಾಗಿದ್ದರೂ ಬನಿಯನ ನಡತೆ ರಾಮದಾಸನ ವಿಚಾರದಲ್ಲಿ ಏಕರೀತಿ ಗೌರವ ಪ್ರೇಮಗಳಿಂದ ಲಕ್ಷಿತವಾಗಿದ್ದಿತು. ಭಗವಂತನೇ ಈ ಲೀಲೆಗಳನ್ನು ಆಡುತ್ತಿದ್ದಾನೆಂದು ರಾಮದಾಸನಿಗೆ ಮನದಟ್ಟಾಯಿತು. ಎಂಥ ಚತುರ ಆಟಗಾರ !

ರಾತ್ರಿಯಾಗುತ್ತ ಇವರು ಒಂದು ಧರ್ಮಶಾಲೆಯ ಆಶ್ರಯವನ್ನು ಅರಸಿದರು. ಆದರೆ ಅದು ಜನಗಳಿಂದ ತುಂಬಿ ಅಲ್ಲಿ ಸ್ಥಳವೇ ಇರಲಿಲ್ಲವಾದುದರಿಂದ ಈಚೆಗೆ ಬಂದರು. ಚಂದ್ರನು ನಭದಲ್ಲಿ ಮೇಲೆ ಕಾಣಿಸಿದನು. ಅವನ ಸೌಮ್ಯವಾದ ಶೀತಲ ಕಿರಣಗಳು ನಿದ್ರಾಸಕ್ತವಾದ ಪ್ರಪಂಚವನ್ನು ಬೆಳಗುತ್ತಿದ್ದುವು. ಅವನು ಆಹ್ಲಾದಕರವಾದ ತನ್ನ ತೇಜಸ್ಸಿನಿಂದ ಆ ದೊಡ್ಡ ರೈಲ್ವೆ ಸ್ಟೇಷನ್ನಿನ ಅಂಗಳವನ್ನೆಲ್ಲಾ ತುಂಬಿದ್ದನು. ರಾಮದಾಸನು ರೈಲ್ವೆ ಅಂಗಳದ ಕಡೆಗೆ ನಡೆದನು ; ಬನಿಯನೂ ಅವನ ಹಿಂದಿದ್ದನು. ಹೆಬ್ಬಾಗಿಲೊಳಗೆ ಹಾಯ್ದು ಇಬ್ಬರೂ ಸ್ಟೇಷನ್ ಅಂಗಳಕ್ಕೆ ಹೋದರು. ಅದರಲ್ಲಿ ದೊಡ್ಡ ಚಪ್ಪಡಿಗಳು ಅಲ್ಲಲ್ಲೇ ಬಿದ್ದಿದ್ದುವು. ರಾಮದಾಸನು ಒಂದು ಚಪ್ಪಡಿಯ ಮೇಲೆ ಕುಳಿತು ಪಕ್ಕದಲ್ಲಿದ್ದ ಇನ್ನೊಂದು ಚಪ್ಪಡಿಯ ಮೇಲೆ ಕುಳಿತುಕೊಳ್ಳುವಂತೆ ಬನಿಯನಿಗೆ ತಿಳಿಸಿ "ರಾತ್ರಿ ಮಲಗುವುದಕ್ಕೆ ಸ್ಥಳ ಪ್ರಶಸ್ತವಾಗಿದೆ" ಎಂದನು.

ಬನಿಯನು ಗಂಟಲಲ್ಲೇ ಶಬ್ದಮಾಡಿದನು. ಅದು ರಾಮದಾಸನಮಾತಿಗೆ ಅಸಮ್ಮತಿಯನ್ನು ಸೂಚಿಸುವಂತೆ ಇದ್ದಿತು. ಏನಾದರೂ ಹುಳುಹುಪ್ಪಟೆಗಳಿವೆಯೇನೋ ಎಂದು ಅವನು ಚಪ್ಪಡಿಯ ಸುತ್ತಲೂ ಕೆಳಭಾಗದ ಕತ್ತಲನ್ನು ದೃಷ್ಟಿಸಿ ನೋಡಿದನು. ರಾಮದಾಸನು ಅಷ್ಟರಲ್ಲೇ ತನ್ನ ಚಪ್ಪಡಿಯ ಮೇಲೆ ಕಾಲುಚಾಚಿ ಮಲಗಿದ್ದನ್ನು ನೋಡಿ, ದೊಡ್ಡದಾಗಿ ನರಳಿ, ತಾನೂ ಹಾಗೆಯೇ ಚಪ್ಪಡಿಯ ಮೇಲೆ ಮಲಗಿದನು. ಗಗನದಲ್ಲಿ ಪ್ರಕಾಶಮಾನವಾದ ಚಂದ್ರನ ಮಂಡಲವನ್ನೂ, ಸುತ್ತಣ ಮನೋಹರವಾದ ವಿಶಾಲ ನೀಲಆಕಾಶವನ್ನೂ ದೃಷ್ಟಿಸುತ್ತ, ರಾಮದಾಸನು ಮುಗ್ಧನಾಗಿ ಆನಂದದಲ್ಲಿ ಮಗ್ನನಾದನು. ಹಠಾತ್ತಾಗಿ ಬನಿಯನ ಬಾಯಿಂದ ವಿಕಾರವಾದ ಕಿರಿಚಾಟ ಕೇಳಿಸಿತು. ರಾಮದಾಸನು ಎದ್ದು ಕುಳಿತು ಅವನ ಕಡೆ ನೋಡಿದನು. ಬನಿಯನು "ಹಾವು ಹಾವು" ಎಂದು ಕೂಗುತ್ತ ಎದ್ದು ನಿಂತುಕೊಂಡು, ಅವನ ಮೈಮೇಲಿದ್ದ ಒಂದೇ ಒಂದು ಬಟ್ಟೆಯನ್ನು ಬಹು ಗಾಬರಿಯಿಂದ ಕೊಡಹುತ್ತಿದ್ದನು.

"ಮಹರಾಜ್, ಈ ಸ್ಥಳದಲ್ಲಿ ಹಾವು ತುಂಬಿವೆ. ಇಲ್ಲಿಂದ ಹೊರಟುಹೋಗೋಣ" ಎಂದನು.

ಚಪ್ಪಡಿಗಳ ಕೆಳಗಿನ ಅಚ್ಚುಕಟ್ಟಾದ ಸ್ಥಳವನ್ನು ಹಲ್ಲಿಗಳು ತಮ್ಮ ಸುಖಾವಾಸ ಮಾಡಿಕೊಂಡಿರುವುದನ್ನು ರಾಮದಾಸನು ಕಂಡಿದ್ದನು. "ಏನೂ ಹೆದರಿಕೆ ಇಲ್ಲ, ರಾಮುಜಿ, ಚಪ್ಪಡಿ ಕೆಳಗಿರುವವು ಹಾವುಗಳಲ್ಲ, ಹಲ್ಲಿಗಳು. ಅವುಗಳಿಂದ ಏನೂ ಅಪಾಯವಿಲ್ಲ" ಎಂದು ಅವನು ಧೈರ್ಯಕೊಟ್ಟನು. ಬನಿಯನು "ಅಯ್ಯೋ! ಅದು ಏನೋ ಅದು ನನ್ನ ಕಾಲಮೇಲೆ ಹರಿಯಿತು. ನನಗೆ ಹೇಗೆ ಹೇಗೋ ಆಯಿತು!" ಎಂದು ಕಿರಿಚಿದನು. ರಾಮದಾಸನು ಧೈರ್ಯ ಹೇಳುತ್ತ "ಹೋಗಲಿ ಬಿಡು, ಮಲಗಿಕೊ, ಏನೂ ಹೆದರಿಕೆ ಬೇಡ" ಎಂದು ಹೇಳಿದನು.

ರಾಮದಾಸನು ಆ ಸ್ಥಳವನ್ನು ಬಿಡುವ ಸಂಭವವೇ ಕಾಣಲಿಲ್ಲವಾದುದರಿಂದ ಬನಿಯನು ತಲೆಯಿಂದ ಕಾಲುವರೆಗೂ ಬಟ್ಟೆಯನ್ನು ಭದ್ರವಾಗಿ ಹೊದ್ದುಕೊಂಡು ಅಲ್ಲೇ ಮುದುರಿಕೊಂಡನು. ರಾತ್ರಿಯಲ್ಲಿ ಎರಡು ಸಲ ನಿದ್ರೆಯಿಂದ ಬೆಚ್ಚಿ ಗಟ್ಟಿಯಾಗಿ ಕಿರಿಚಿಕೊಂಡನು. ಈ ಕಿರಿಚಾಟ ಮೊದಲಿನ ಭಯದ ಪ್ರಭಾವದ ಫಲ. ಅವನ ಮೊದಲಿನ ಕೂಗು ಆ ಬಡಪಾಯಿ ಹಲ್ಲಿಗಳನ್ನು ಹೆದರಿಸಿದ್ದಿತು. ಆ ಕಾರಣದಿಂದ ಅವು ಇಂಥ ಹೃದಯಭೇದಕ ಧ್ವಾನವನ್ನು ಮಾಡಬಲ್ಲ ಈ ಪ್ರಾಣಿಯನ್ನು ಮುಟ್ಟುವುದಕ್ಕೆ ತಮ್ಮ ನೆಲೆಯಿಂದ ಹೊರಕ್ಕೆ ಬರುವ ಸಾಹಸ ಮಾಡಲಾಗದೆ ಇದ್ದುವು. ಬನಿಯನ ಸಂಧಾನ ಪ್ರಯತ್ನ ತೀರಾ ವಿಫಲವಾದುದರಿಂದ ಮಾರನೆಯ ದಿನ ಇವರು ಕಾರ್ವಿಯಿಂದ ಚಿತ್ರಕೂಟಕ್ಕೆ ಪುನಃ ಹೊರಟರು. ನದಿಯಲ್ಲಿ ಸ್ನಾನ ಮಾಡಿದ ಮೇಲೆ ಪ್ರೀತ್ಯಾಸ್ಪದವಾದ ಅಂಗಡಿಯಲ್ಲಿ ಪೂರಿ ಹಾಲು ಸಿಕ್ಕಿತು. ಬಿಸಿಲು ತೀಕ್ಷ್ಣವಾಗಿದ್ದಿತು. ಇವರು ನದಿಯ ದಡದ ಒಂದು ಮರದ ತಂಪಾದ ನೆರಳಿನಲ್ಲಿ ವಿಶ್ರಾಂತಿಪಡೆದರು. ಸೂರ್ಯನು ಅರ್ಧ ಆಕಾಶಕ್ಕೆ ಇಳಿದವೇಳೆಗೆ ರಾಮದಾಸನು ಹನುಮಾನ್‌ಧಾರಾ ಬೆಟ್ಟ ಹತ್ತಿ ರಾತ್ರಿ ಅಲ್ಲಿಯೇ ಕಳೆಯೋಣವೆಂದು ಸಲಹೆಮಾಡಿದನು.

## (iii) (ಸಾಧುಜೀವನ ಸದರವಲ್ಲ)

ನೂರಕ್ಕೂ ಹೆಚ್ಚಿನ ಸಂಖ್ಯೆಯ ಮೆಟ್ಟಲುಗಳನ್ನು ಹತ್ತಿ ಇವರು ಹನುಮಾನ್ ಧಾರಾ ಎಂಬ ಸ್ಥಳವನ್ನು ಮುಟ್ಟಿದರು. ಇಲ್ಲಿ ಒಂದು ದೊಡ್ಡ ನೀರಿನ ಪ್ರವಾಹ ಕೆಳಗೆ ಸುಮಾರು ಐವತ್ತು ಅಡಿ ಆಳದಲ್ಲಿರುವ ಒಂದು ಇಟ್ಟಿಗೆ ಗಾರೆ ಕಟ್ಟಡದ ಕೊಳಕ್ಕೆ ಧುಮುಕುತ್ತದೆ. ಜಲಪಾತದ ಹತ್ತಿರ ಒಂದು ಸಣ್ಣ ಧರ್ಮಶಾಲೆಯೂ ಇದೆ. (ಇಲ್ಲಿ ಒಮ್ಮೆ ಶ್ರೀರಾಮಚಂದ್ರದೇವರು ಸೀತಾ ಅಮ್ಮನವರೊಡನೆ ವಾಸಿಸಿದರೆಂದು ಹೇಳುತ್ತಾರೆ.) ಅದಕ್ಕಾಗಿ ಇದು ಪುಣ್ಯಕ್ಷೇತ್ರವೆಂದು ಭಾವಿಸಲ್ಪಟ್ಟಿದೆ. ಇಲ್ಲಿಂದ ಸುತ್ತಲ ಪ್ರದೇಶದ ವಿಸ್ತಾರದೃಶ್ಯ ದೊರೆಯುತ್ತದೆ. ನೋಡುವ ಕಣ್ಣಿಗೆ

ವಿಶಾಲವಾದ ಮೈದಾನಗಳು, ದಟ್ಟವಾಗಿ ಸಸ್ಯದಿಂದ ತುಂಬಿದ ಎತ್ತರದ ಬೆಟ್ಟಗಳು, ನಿಶ್ಶಬ್ದವಾಗಿ ಹರಿಯುವ ನದಿ ಇವು ಕಂಗೊಳಿಸುತ್ತವೆ. ಚಿತ್ರಕೂಟ ಋಷಿಗಳ ಮತ್ತು ಸಂತರ ಆವಾಸಸ್ಥಾನ. ಬೆಟ್ಟಗಳ ಮೇಲೆಯೂ, ಮಧ್ಯೆಯೂ ಮತ್ತು ನದಿಯ ದಡದಲ್ಲೂ ಅಲ್ಲಲ್ಲೇ ಕಾಣುವ ಕುಟಿಗಳೆಂದು ಕರೆಯುವ ಆಶ್ರಮಗಳಲ್ಲಿ ಈಗಲೂ ನೂರಾರುಜನ ಸಾಧುಗಳು ತಪಶ್ಚರ್ಯೆಯನ್ನು ನಡೆಯಿಸುತ್ತಿದ್ದಾರೆ.

ಇವರಿಬ್ಬರೂ ಜಲಪಾತದ ಹತ್ತಿರ ನಿಂತಿದ್ದ ಸ್ಥಳದಿಂದ ರಾಮದಾಸನು ಕಣ್ಣೆತ್ತಿ ನೋಡಲು, ಬೆಟ್ಟ ಇನ್ನೂ ಎತ್ತರವಾಗಿ ಏರಿರುವುದು ಕಂಡುಬಂದಿತು. ಅದನ್ನು ಅವನು ಹತ್ತಬೇಕೆಂದಿದ್ದನು. ಆಗ ಬನಿಯನು ಒಂದು ಕಟ್ಟಡವನ್ನು ತೋರಿಸುತ್ತ “ಮಹರಾಜ್, ಇಲ್ಲಿ ಸೊಗಸಾದ ಸಣ್ಣ ವಿಶ್ರಾಂತಿಗೃಹವಿದೆ. ನಾವು ರಾತ್ರಿ ಇಲ್ಲಿಯೇ ನಿಂತರೆ ಹೇಗೆ?” ಎಂದು ಪ್ರಶ್ನಿಸಿದನು.

ರಾಮದಾಸನು ಉತ್ತರಕೊಡದೆ ಒಂದು ಬಳಸುದಾರಿಯಲ್ಲಿ ನಡೆದನು. ಬನಿಯನು ಹಿಂಬಾಲಿಸಬೇಕಾಯಿತು. ಒಂದುಕಡೆ ತಕ್ಕಷ್ಟು ಸಮನೆಲ ಕಂಡಿತು. ಅದರಲ್ಲಿ ಎರಡು ಗುಡಿಸಲು, ಒಂದು ಗೋಡೆಯಿಲ್ಲದ ಕುಟಿ ಕಾಣಿಸಿದುವು. ರಾಮದಾಸನು ಒಂದು ಗುಡಿಸಲನ್ನು ಹೊಕ್ಕು ನೋಡಿದನು. ಅದರಲ್ಲಿ ಸ್ತ್ರೀಯ ವಸ್ತ್ರಗಳಿಂದ ಅಲಂಕರಿಸಿದ್ದ ಕಪ್ಪುಶಿಲೆಯ ಒಂದು ಪ್ರತಿಮೆ ಕಾಣಿಸಿತು. ಇದು ಸೀತಾಅಮ್ಮನವರ ವಿಗ್ರಹ. ವಿಗ್ರಹದ ಬಳಿ ಒಬ್ಬ ಸಾಧು ಕುಳಿತಿದ್ದನು. ಯಾತ್ರಿಕರು ದೇವಿಗೆ ಸಮರ್ಪಣೆಮಾಡುವ ಕಾಸುಗಳನ್ನು ತೆಗೆದುಕೊಳ್ಳುವುದು ಅವನ ಕೆಲಸ. ಸೀತಾಅಮ್ಮನವರು ಈ ಮಂದಿರವನ್ನು ಅಡಿಗೆಮನೆಯಾಗಿ ಉಪಯೋಗಿಸುತ್ತಿದ್ದರೆಂದು ಪ್ರತೀತಿ. ಆದುದರಿಂದ ಇದಕ್ಕೆ ಸೀತಾರಸೊಯಿ ಎಂದು ಹೆಸರು.

ಇನ್ನೊಂದು ಗುಡಿಸಲಿಗೆ ಬೀಗಹಾಕಿದ್ದಿತು. ಬನಿಯನು ಆವರಣವಿಲ್ಲದ ಕುಟಿಯಲ್ಲಿ ತನ್ನ ಸೋತ ಅಂಗಗಳನ್ನು ವಿಶ್ರಮಿಸಲು ಕುಳಿತನು. ಬೆಟ್ಟ ಇನ್ನೂ ಇನ್ನೂರು ಗಜದಷ್ಟು ಎತ್ತರವಿದ್ದಿತು. ಪ್ರದೇಶದಲ್ಲೆಲ್ಲಾ ಎತ್ತರವಾದ ಕಾಡುಮರಗಳು ಗುಂಪಾಗಿ ಬೆಳೆದಿದ್ದವು.

ರಾಮದಾಸನು ಬನಿಯನಿಗೆ “ರಾಮಜಿ, ಈ ಸ್ಥಳ ಭಜನೆಗೆ ಬಹು ಪ್ರಶಸ್ತವಾಗಿದೆ. ರಾತ್ರಿಯನ್ನು ಇಲ್ಲಿಯೇ ಕಳೆಯೋಣ” ಎಂದನು. ಬನಿಯನು ಅದು ತನಗೆ ಒಪ್ಪಿಗೆ ಇಲ್ಲವೆಂದು, ಆ ಯೋಚನೆಯೇ ಅಯುಕ್ತವೆಂದು ಅಥವಾ ಸುಮಾರು ಆ ಅರ್ಥದ ಉತ್ತರವನ್ನು ಕೊಟ್ಟನು. ಇಷ್ಟರಲ್ಲಿ ಸೂರ್ಯಾಸ್ತವಾಗಿ ಸುತ್ತಲೂ ಕತ್ತಲೆ ಬೇಗನೆ ಆವರಿಸುತ್ತ ಬಂದಿದ್ದಿತು. ಸೀತಾಮಂದಿರದ ಸಾಧು ಈಚೆಗೆ ಬಂದು, ರಾಮದಾಸನು ಒಂದು ಮರದ ಬುಡದಲ್ಲಿಯೂ ಬನಿಯನು ಕುಟಿಯಲ್ಲಿಯೂ ಕುಳಿತಿದ್ದುದನ್ನು ಕಂಡನು.

ಸಾಧು "ಏನಿದು? ಇಲ್ಲಿ ಏನು ಮಾಡುತ್ತಿದ್ದೀರಿ? ಕತ್ತಲಾಗುತ್ತಿರುವುದು ಕಾಣುವುದಿಲ್ಲವೆ? ನಡೆಯಿರಿ, ಕೆಳಕ್ಕೆ ಹೋಗೋಣ" ಎಂದನು.

"ರಾಮದಾಸನು ರಾತ್ರಿಯನ್ನು ಇಲ್ಲಿಯೇ ಕಳೆಯಬೇಕೆಂಬುದು **ರಾಮನ** ಇಚ್ಛೆ" ಎಂದನು ರಾಮದಾಸ.

"ಹುಚ್ಚು! ಈ ಕಾಡಿನಲ್ಲಿ ಕ್ರೂರ ಮೃಗಗಳು ಅಲೆಯುತ್ತವೆ. ರಾತ್ರಿಯ ಹೊತ್ತು ಇಲ್ಲಿ ಯಾರೂ ಬಯಲಿನಲ್ಲಿರಕೂಡದು. ಬೀಗಹಾಕಿರುವ ಗುಡಿಸಲು ನನ್ನ ಗುರುವಿಗೆ ಸೇರಿದುದು. ಆತನು ರಿದ್ಧಿಸಿದ್ಧಿಗಾಗಿ ಊರೊಳಗೆ ಹೋಗಿದ್ದಾನೆ. ರಾತ್ರಿ ಇಲ್ಲಿ ಯಾರೂ ಇರಕೂಡದೆಂದು ಅವನ ಆಜ್ಞೆ" ಎಂದು ಸಾಧು ಗೊಣಗಿದನು.

"ರಾಮದಾಸನು **ರಾಮನ** ಆಜ್ಞೆಯನ್ನು ಪಾಲಿಸತಕ್ಕವನು. ಈ ಸ್ಥಳವನ್ನು ಬಿಟ್ಟು ಕದಲಕೂಡದೆಂದು **ರಾಮನ** ಆಜ್ಞೆ" ಎಂದು ರಾಮದಾಸನು ಪ್ರತ್ಯುತ್ತರ ವಿತ್ತನು.

"ಹಾಗಾದರೆ ನಿಮ್ಮ ಹಣೆಯಬರಹ. ನಿಮಗೆ ಹೇಗೆ ಬೇಕೋ ಹಾಗೆ ಮಾಡಿ. ಆದರೆ ಒಂದು ವಿಷಯ. ಆ ಗುಡಿಸಲನ್ನು ಮಾತ್ರ ಉಪಯೋಗಿಸ ಬೇಡಿ" ಎಂದು ಹೇಳುತ್ತ, ಅವನು ಬನಿಯನ ಕಡೆಗೆ ತಿರುಗಿ "ಏ, ನೀನು, ನೀನು, ಕುಟಿಯಿಂದಾಚೆ ನಡೆ" ಎಂದನು. ಬನಿಯನು ಹೊರಕ್ಕೆ ಬಂದನು.

ಕೊನೆಯ ಎಚ್ಚರಿಕೆಯಾಗಿ ಮತ್ತೆ ಒಂದು ಮಾತು ಹೇಳಿ ಸಾಧು ಅಲ್ಲಿಂದ ಹೊರಟು ಬೆಟ್ಟವಿಳಿದು ಹೋದನು. ಕುಟಿಯಿಂದ ಸುಮಾರು ಹತ್ತು ಗಜ ಎತ್ತರದಲ್ಲಿ ಮರಗಳ ಮಧ್ಯೆ ರಾಮದಾಸನಿಗೆ ಒಂದು ಕಲ್ಲುಚಪ್ಪಡಿ ಕಾಣಿಸಿತು. ಅಲ್ಲಿ ಹೋಗಿ ಅವನು ಅದನ್ನು ಆಕ್ರಮಿಸಿಕೊಂಡನು. ಸಾಧು ಕಣ್ಣಿಂದ ಮರೆಯಾದನೋ ಇಲ್ಲವೋ ಬನಿಯನು ಕುಟಿಯೊಳಗಿನ ಪೀಠಕ್ಕೆ ಹಿಂದಿರುಗಿದನು. ಕತ್ತಲೆ ಕವಿದು ಕೊಂಡಿತು.

"ಮಹರಾಜ್‌ಜಿ! ದಯವಿಟ್ಟು ಕುಟಿಯೊಳಕ್ಕೆ ಬನ್ನಿ" ಎಂದು ಬನಿಯನು ಕರೆದನು.

"ಒಳ್ಳೆ, ರಾಮಜಿ! ಈ ಚಪ್ಪಡಿ ಅಗಲವಾಗಿದೆ, ಇಬ್ಬರೂ ಮಲಗಬಹುದು. ನೀನೇ ಇಲ್ಲಿ ಬಾ" ಎಂದು ರಾಮದಾಸನು ಉತ್ತರವಿತ್ತನು.

"ಈ ಸ್ಥಳ ಉತ್ತಮ ಮಹರಾಜ್!" ಎಂದನು ಬನಿಯ. ಇಷ್ಟುಹೊತ್ತಿಗೆ ಕತ್ತಲು ಪೂರ್ತಿ ಕವಿದಿದ್ದಿತು. ಬನಿಯನು ಹೆದರಿಕೊಂಡು "ಓ ಮಹರಾಜ್, ಈ ಘೋರವಾದ ಸ್ಥಳದಲ್ಲಿ ಒಬ್ಬನೇ ಇರಲಾರೆ; ದಯವಿಟ್ಟು ಇಲ್ಲಿಗೇ ಬನ್ನಿ" ಎಂದು ಕಿರಿಚಿದನು.

ಚಪ್ಪಡಿಯನ್ನು ಬಿಟ್ಟು ರಾಮದಾಸನು ಕುಟಿಯೊಳಕ್ಕೆ ಅವನ ಬಳಿಗೆಹೋದನು. ಕತ್ತಲಾದಂತೆ ಚಳಿಯೂ ಆರಂಭವಾಗಿದ್ದಿತು. ನಾಲ್ಕು ಬಿದರುಕಂಬಗಳ ಮೇಲೆ ಛಾವಣಿ ಮಾತ್ರವಿದ್ದು, ನಾಲ್ಕುಕಡೆಯೂ ತೆರದಿದ್ದ ಕುಟಿ ಕೊರೆಯುವ ತಂಗಾಳಿ

ಯನ್ನು ತಡೆಯದೆ ಹರಿಯಬಿಡುತ್ತಿದ್ದಿತು. ಬನಿಯನು ನಿದ್ರಿಸಲು ಮಲಗಿದನು. ರಾಮದಾಸನೇನೋ ಕುಳಿತೇ ಇದ್ದನು. ಆದರೆ ಆ ಭೀಕರ ಪ್ರದೇಶದಲ್ಲಿ ಬನಿಯನಿಗೆ ನಿದ್ರೆ ಹೇಗೆ ಬಂದೀತು? ಅವನು ಹೆದರಿಕೆಯಿಂದಲೂ ಚಳಿಯಿಂದಲೂ ನಡುಗುತ್ತಿದ್ದನು. ನಡುರಾತ್ರಿಯಲ್ಲಿ, ಮರಗಳ ಕೆಳಗೆ ದಟ್ಟವಾಗಿ ಬಿದ್ದಿದ್ದ ತರಗೆಲೆಗಳಲ್ಲಿ, ಸರಸರ ಶಬ್ದವಾಯಿತು. ಬನಿಯನು ಇದನ್ನು ಕೇಳಿದೊಡನೆ ಕಿಟಾರನೆ ಕಿರಚಿ ಎದ್ದು ಕುಳಿತನು. "ಮಹರಾಜ್, ಅದೇನು ಶಬ್ದ?" ಎಂದು ಪಿಸುಮಾತಿನಲ್ಲಿ ಕೇಳಿದನು.

ರಾಮದಾಸನು "ರಾಮಜಿ, ಏನೂ ಇಲ್ಲ. ಎಲ್ಲೋ ಕಾಡುಹೆಗ್ಗಣಗಳು ಆಟವಾಡುತ್ತಿರಬೇಕು" ಎಂದು ಸಮಾಧಾನ ಮಾಡಿದನು. ಬನಿಯನು ತುಂಬ ಕಳವಳದಿಂದ "ಹೇಗೆ ಹೇಳುವುದು? ಕಾಡುಪ್ರಾಣಿಯೋ ನಾಗರಹಾವೋ ಇರಬಹುದು. ಈ ಕಾಡುಗಳಲ್ಲೆಲ್ಲಾ ದೊಡ್ಡ ನಾಗರಹಾವುಗಳು ಸೇರಿಕೊಂಡಿವೆಯೆಂದು ಕೇಳಿದ್ದೇನೆ" ಎಂದನು.

ರಾಮದಾಸನು "ನಿರ್ಭಯವಾಗಿರು ರಾಮಜಿ, ಅವು ಬೆಟ್ಟದ ಇಲಿಗಳಿರಬಹುದು" ಎಂದು ಧೈರ್ಯ ಹೇಳಿದನು.

ಸುಮಾರು ಒಂದು ಗಂಟೆಯಮೇಲೆ ಮತ್ತು ಅಂತಹ ಇನ್ನೊಂದು ಶಬ್ದ ಇನ್ನೂ ಗಟ್ಟಿಯಾಗಿ ಹತ್ತಿರವೆ ಕೇಳಿಸಿತು. ಈ ಸಲ ಬನಿಯನ ಹೆದರಿಕೆ ಮುಗಿಲು ಮುಟ್ಟಿತು. ಬೆದರಿದ ಕೋತಿಯಮರಿ ತಾಯಿಗೆ ಅವಿಚಿಕೊಳ್ಳುವಹಾಗೆ ಅವನು ರಾಮದಾಸನಿಗೆ ಅಂಟಿಕೊಂಡು "ಏನು ಮಾಡೋಣ?" ಎಂದು ಕೇಳಿದನು. "ರಾಮನಾಮವನ್ನು ಜಪಿಸು. ಆ ಮಹಿಮಾನ್ವಿತನಾಮ ನಾಲಗೆಯ ಮೇಲಿರುವಾಗ ಏನೂ ಭಯವಿಲ್ಲ. ಅದನ್ನು ಜಪಿಸು, ಶಾಂತನಾಗಿರು" ಎಂದು ರಾಮದಾಸನು ಧೈರ್ಯ ಹೇಳಿದನು. ಅಲ್ಲಿಂದಾಚೆಗೆ ರಾಮನಾಮ ಬನಿಯನ ನಾಲಗೆಯಿಂದ ಆಶ್ಚರ್ಯಕರವಾದ ಅವಿರಳತೆಯಿಂದ ಹೊರಟಿತು. ಬೆಳಕು ಹರಿಯುವವರೆಗೂ ಅವನು ಜಪ ನಡಿಸಿದನು. ಇನ್ನಾವ ಶಬ್ದವೂ ಅವನಿಗೆ ತೊಂದರೆ ಮಾಡಲಿಲ್ಲ. ಬೆಳಗಾಗುತ್ತ ಅವನ ಹೆದರಿಕೆಯೆಲ್ಲ ಮಾಯವಾಯಿತು. ಬರಿಯ ಆಯಾಸದಿಂದ ನಿದ್ರೆಬಂದು ಅವನು ಗೊರಕೆ ಹಾಕುವುದಕ್ಕಾರಂಭಿಸಿದನು.

ರಾಮದಾಸನು ಎದ್ದು ಕಾಡಿನಲ್ಲಿ ತಿರುಗಾಡುತ್ತ ಬೆಟ್ಟದ ತುದಿಗೆ ಸೇರಿದನು. ಮಂಜಿನ ಮುಸುಕಿನಲ್ಲಿ ದೂರದ ಭೂಮುಖವೂ ಚಿತ್ರಕೂಟದ ಗುಡಿಗಳ ಕೊತ್ತಳ ಗೋಪುರಗಳ ಮಸಕಾದ ಆಕಾರವೂ ಕಾಣಿಸಿದವು. ದೃಶ್ಯ ಚಿತ್ತಾಕರ್ಷಕವಾಗಿದ್ದಿತು. ರಾಮದಾಸನು ಕೆಲವು ನಿಮಿಷ ಅದರ ಇಂದ್ರಜಾಲದ ಮಹಿಮೆಯಿಂದ ಮುಗ್ಧನಾಗಿ ನಿಂತಿದ್ದನು. ಅವನು ಇನ್ನೂ ಒಳಗೆ ಹೊಕ್ಕು ಅಲೆದನು. ಪ್ರಾಣಿಗಳ ಒಣ ಎಲುಬುಗಳು ಅಲ್ಲಲ್ಲೆ ಚಲ್ಲಾಪಿಲ್ಲಿಯಾಗಿ ಬಿದ್ದಿರುವುದು ಕಾಣಿಸಿತು. ಇದರಿಂದ ಕಾಡುಮೃಗಗಳ ಚರಿತೆ ಹೊರಬೀಳುತ್ತಿದ್ದಿತು.



ಶ್ರೀ ರಾಮದಾಸರು
ವಯಸ್ಸು ೧೮

ಬನಿಯನ ಜ್ಞಾಪಕ ಬಂದು ರಾಮದಾಸನು ಅವನನ್ನು ಬಿಟ್ಟಿದ್ದ ಸ್ಥಳಕ್ಕೆ ಜಾಗ್ರತೆಯಾಗಿ ಇಳಿದು ಬಂದನು. ಆದರೆ ಬನಿಯನೆಲ್ಲಿ ? ಅವನು ಮಾಯವಾಗಿದ್ದನು. ರಾಮದಾಸನು ಅವನನ್ನು ಹುಡುಕುತ್ತಿರುವಲ್ಲಿ, ಸೀತಾಮಂದಿರದ ಸಾಧು ಹತ್ತಿ ಬಂದು, "ಯಾರನ್ನು ಹುಡುಕುತ್ತಿದ್ದೀಯೆ ? ಬನಿಯನನ್ನೆ ? ನಾನು ಹತ್ತಿಬರುವಾಗ, ಪಿಶಾಚಿ ಅಟ್ಟಿಸಿಕೊಂಡು ಬರುವಾಗ ಓಡಿಹೋಗುವವನಂತೆ ಅವನು ಬೆಟ್ಟ ವಿಳಿದು ಓಡುತ್ತಿದ್ದನು" ಎಂದನು. ನಂತರ ನಗುತ್ತಾ "ಕೊನೆಗೂ ಸಾಧುಜೀವನ ಸದರವಲ್ಲವೆಂದು ಅವನು ಮನಗಂಡನು" ಎಂದು ಹೇಳಿದನು.

ಕಾಡು ಪುನಃ ಕರೆದುದರಿಂದ ರಾಮದಾಸನು ಅದರೊಳಗೆ ಮರಳಿ ನುಗ್ಗಿ ಸ್ವೇಚ್ಛೆಯಾಗಿ ಸುಮಾರು ಹನ್ನೊಂದು ಗಂಟೆಯವರೆಗೂ ಸುತ್ತಾಡಿ, ನಂತರ ಬೆಟ್ಟ ವಿಳಿದು ನದಿಯ ಕಡೆಗೆ ಹೋದನು.

---

## ಅಧ್ಯಾಯ ೧೭

### ಚಿತ್ರಕೂಟ (ಮುಂದುವರಿದದ್ದು)

### ಚಿತ್ತಲಿ ಮಾನಿ

ನದಿಯಲ್ಲಿ ಸ್ನಾನಮಾಡುತ್ತಿದ್ದಾಗ ರಾಮದಾಸನಿಗೆ ಒಬ್ಬ ಎತ್ತರವಾದ ಕಪ್ಪನೆಯ ಸಾಧು, ಚಿತ್ರಕೂಟದಿಂದ ಏಳು ಮೈಲಿ ದೂರದಲ್ಲಿ ಅನಸೂಯಾಜಿ ಎಂಬ ಸ್ಥಳವಿದೆಯೆಂದೂ, ತಾನು ಆ ದಿನಸವೇ ಅಲ್ಲಿಗೆ ಪ್ರಯಾಣ ಮಾಡಲು ಉದ್ದೇಶಿಸಿದ್ದಾಗಿಯೂ, ರಾಮದಾಸನನ್ನು ಸಂತೋಷದಿಂದ ಜೊತೆಗೆ ಕರೆದುಕೊಂಡು ಹೋಗುವುದಾಗಿಯೂ ತಿಳಿಸಿದನು. ರಾಮದಾಸನು ಈ ಸಲಹೆಗೆ ಸಮ್ಮತಿಸಿದನು. (ಭಗವಂತನು ರಾಮದಾಸನಿಗೆ ಹೀಗೆ ಎಲ್ಲವೇಳೆಯೂ ಏರ್ಪಾಡುಗಳನ್ನು ಮಾಡಿಕೊಡುತ್ತಿರುವನು.) ಆ ಸಾಧು ರಾಮದಾಸನನ್ನು ಫಟಕ್‌ಶಿಲದ ಸಾಧುಆಶ್ರಮಕ್ಕೆ ಕರೆದುಕೊಂಡು ಹೋದನು. ಅಲ್ಲಿ ರಾಮದಾಸನಿಗೆ ಸುಮಾರು ಇಪ್ಪತ್ತುನಾಲ್ಕು ಸಾಧುಗಳ ಜೊತೆಯಲ್ಲಿ ಭೋಜನ ದೊರೆಯಿತು.

ಇಲ್ಲಿ ನಡೆದ ಒಂದು ವಿಷಯ ಗಮನಾರ್ಹವಾಗಿದೆ. ಆಶ್ರಮ ಸಣ್ಣದಾಗಿದ್ದು ಒಳಗೆ ಸ್ಥಳ ಸಾಲದ್ದರಿಂದ ರಾಮದಾಸನು ಹೊರಗಡೆ ಕೈಸಾಲೆಯಲ್ಲಿ ಊಟಕ್ಕೆ ಕುಳಿತುಕೊಳ್ಳಬೇಕಾಯಿತು. ಚಿತ್ರಕೂಟದ ಕಾಡುಗಳು ಕಪಿಗಳಿಂದ ತುಂಬಿವೆ. ರಾಮದಾಸನ ಮುಂದೆ ರೊಟ್ಟಿ, ಅನ್ನ, ಮತ್ತು ತೊಪ್ಪೆಯನ್ನು ಬಡಿಸಿದ ತಟ್ಟೆಯನ್ನಿಟ್ಟ ಕೂಡಲೆ ಒಂದು ದೊಡ್ಡ ಕೋತಿ ಹಿಂದುಗಡೆಯಿಂದ ಬಂದದ್ದೇ, ಒಂದು ರೊಟ್ಟಿಯನ್ನೂ ಸ್ವಲ್ಪ ಅನ್ನವನ್ನೂ ಒಂದೇ ಆತುರದ ಹಿಡಿತದಲ್ಲಿ ಎತ್ತಿಕೊಂಡು

ಹೋಯಿತು. ಬಡಿಸುತ್ತಿದ್ದ ಸಾಧು ಇದನ್ನು ನೋಡಿ ಸಿಟ್ಟಿನಿಂದ "ದಡ್ಡ ! ಕೋತಿ ರೊಟ್ಟಿಯನ್ನು ಎತ್ತಿಕೊಂಡು ಹೋದರೆ ಸುಮ್ಮನೆ ಇದ್ದೆಯೇಕೆ ?" ಎಂದು ಕೇಳಿದನು.

"ಹೋಗಲಿ ಬಿಡಿ, ಮಹರಾಜ್ ! ಅದು ಹನುಮಂತನ ಭಾಗವನ್ನು ತೆಗೆದು ಕೊಂಡು ಹೋಯಿತು. ಅದು ಹನುಮಂತನಲ್ಲವೆ !" ಎಂದು ರಾಮದಾಸನು ಮುಗುಳ್ನಗೆಯಿಂದ ಹೇಳಿದನು. ಇದನ್ನು ಕೇಳಿ ಸಾಧು ರಾಮದಾಸನನ್ನು ನಿಟ್ಟಿಸಿ ನೋಡಿ ಸುಮ್ಮನಿದ್ದನು.

ಊಟವಾದ ಮೇಲೆ ರಾಮದಾಸನು ಆ ಕಪ್ಪನೆಯ ಸಾಧು ಮತ್ತು ಇತರರಿಬ್ಬ ರೊಡನೆ ಅನಸೂಯಾಜಿಗೆ ಹೊರಟನು. ಅವರು ದೊಡ್ಡ ಮರಗಳ ವಿಶಾಲವಾದ ಕಾಡಿನಲ್ಲಿ ಹಾಯಬೇಕಾಗಿದ್ದಿತು. ಆ ಕಾಡಿನ ಒಳಭಾಗವನ್ನು ಪ್ರವೇಶಿಸಿದಾಗ ದುಷ್ಟಮೃಗಗಳ ಹೆಜ್ಜೆಯ ಗುರುತುಗಳು ಕಂಡುಬಂದುವು. ಅಷ್ಟರಲ್ಲೆ ಅವರು ಒಂದು ಸಣ್ಣ ಗುಡಿಸಲಿಗೆ ಬಂದರು. ಅದು ಒಬ್ಬ ಸಾಧುವಿನದು. ಅವನು ರಾತ್ರಿಅಗ್ಗಿಷ್ಟಿಕೆ ಗಾಗಿ ಸೌದೆಯನ್ನು ಕಡಿಯುತ್ತಿದ್ದನು. ಪ್ರಯಾಣಿಕರು ಕೆಲವು ನಿಮಿಷ ಆ ಆಶ್ರಮ ದಲ್ಲಿ ವಿಶ್ರಮಿಸಿಕೊಂಡು, ಅವನು ಕೊಟ್ಟ ತಂಪಾದ ನೀರನ್ನು ಕುಡಿದರು. ಸಾಧು ವೃದ್ಧನು. ಅವನ ಗಡ್ಡ ನರೆತಿದ್ದಿತು. ಅವನು ಆರೋಗ್ಯವಂತನಾಗಿ ವರ್ಚಸ್ವಿಯಾಗಿ ಹರ್ಷಚಿತ್ತನಾಗಿ ಇದ್ದನು. ಅವನು ಹಿಂಸ ಮೃಗಗಳ ವಿಷಯವಾಗಿ ಅವು ಮನೆಯ ಪ್ರಾಣಿಗಳೆಂಬಂತೆ ಮಾತನಾಡಿದನು.

ಪ್ರಯಾಣಿಕರು ಮುಂದೆ ನಡೆದು ಸೂರ್ಯಾಸ್ತಮಯಕ್ಕೆ ಮುಂಚೆ ಅನ ಸೂಯಾಜಿಯನ್ನು ಮುಟ್ಟಿದರು. ಅನಸೂಯಾಜಿ ಭಯಾನಕ ಸ್ಥಳವಾಗಿದ್ದಿತು. ಇದು ನದಿಯ ಪಾರ್ಶ್ವದಲ್ಲಿ ಹೆಚ್ಚು ಅಗಲವಿಲ್ಲದ ಅರಣ್ಯದ ಒಂದು ಪಟ್ಟಿ. ಇದರ ಹಿಂಭಾಗದಲ್ಲಿ ಎತ್ತರವೂ ಒರಟೂ ಆದ ವಿಲಕ್ಷಣವಾಗಿ ಕಾಣುವ ಬಂಡೆಗಳಿವೆ. ನದಿಗೆ ಎದುರಾಗಿ ಒಂದು ತಾರ್ಸಿ ಕಟ್ಟಡ ಇದ್ದಿತು. ಅದರಲ್ಲಿ ಕೆಲವು ಸಾಧುಗಳು ವಾಸಿಸುತ್ತಿದ್ದರು. ಸ್ವಲ್ಪ ದೂರದಲ್ಲಿ ದಟ್ಟವಾದ ಮರಗಳ ಮಧ್ಯೆ ಹತ್ತಿರ ಹತ್ತಿರ ಮರೆಯಾಗಿ ಅನಸೂಯಾಜಿ ದೇವಸ್ಥಾನವಿದೆ. ಅನಸೂಯಾಜಿ ವಿಖ್ಯಾತ ಪತಿವ್ರತೆ. ಅತ್ರಿಮಹರ್ಷಿಯ ಧರ್ಮಪತ್ನಿ. ಇಲ್ಲಿಯೂ ವಿಗ್ರಹೆ ಕಪ್ಪು ಶಿಲೆಯದು. ಉತ್ತರ ಹಿಂದೂಸ್ಥಾನದ ವಾಡಿಕೆಯಂತೆ ಬೆಲೆ ಬಾಳುವ ವಸ್ತ್ರಗಳಿಂದ ಅಲಂಕೃತ ವಾಗಿದ್ದಿತು.

ಇಲ್ಲಿ ನದಿಯ ನೀರು ಸ್ಫಟಿಕಸ್ವಚ್ಛವಾಗಿದ್ದಿತು. ಯಾತ್ರಿಕರು ನದಿಯಲ್ಲಿ ದಾಹವನ್ನು ತೀರಿಸಿಕೊಂಡು, ಕಟ್ಟಡದ ಮುಂಭಾಗದಲ್ಲಿದ್ದ ಒಂದು ದೊಡ್ಡ ಮರದ ಬುಡದಲ್ಲಿ ವಿಶ್ರಮಿಸಿಕೊಂಡರು. ರಾತ್ರಿ ಸಮೀಪಿಸುತ್ತಿದ್ದಿತು. ಅದರೊಂದಿಗೆ ಚಳಿಯೂ ಪ್ರಾರಂಭವಾಯಿತು. ಸಾಧುಗಳು ರಾತ್ರಿ ಬೆಂಕಿ ಕಾಯಿಸುವುದಕ್ಕಾಗಿ ಸೌದೆಯನ್ನು ಹುಡುಕಲು ಹೊರಟರು.

ಮರದ ಕೆಳಗೆ ರಾಮುದಾಸನೊಬ್ಬನೇ ಕುಳಿತಿರುವಾಗ ಮಾಳಿಗೆ ಕಡೆಯಿಂದ ಯಾರೋ ಚಪ್ಪಾಳೆ ಹೊಡೆದ ಶಬ್ದ ಕೇಳಿಸಿತು. ಒಬ್ಬ ಸಾಧು ಬಾ ಎಂದು ಸಂಜ್ಞೆ ಮಾಡಿದನು. ರಾಮುದಾಸನು ಮೆಟ್ಟಿಲುಗಳನ್ನು ಏರಿಹೋಗಿ ಮಾಳಿಗೆಯನ್ನು ಸೇರಿ, ತನ್ನನ್ನು ಕರೆದಿದ್ದ ಸಾಧುವಿನ ಬಳಿಗೆ ಹೋದನು. ಈ ಸಾಧು ಸಂಪೂರ್ಣವಾಗಿ ನಗ್ನನಾಗಿದ್ದನು. ಅವನು ಒಂದು ಒರಟಾದ ಕಂಬಳಿಯನ್ನು ನೆಲದಮೇಲೆ ಹಾಸಿ, ಅದರಮೇಲೆ ಕುಳಿತುಕೊಳ್ಳಲು ರಾಮುದಾಸನಿಗೆ ಸಂಜ್ಞೆ ಮಾಡಿದನು. ರಾಮುದಾಸನು ಅದರಮೇಲೆ ಕುಳಿತನಂತರ ತಾನೂ ಕುಳಿತನು. ಸಾಧುವಿಗೆ ಚಿಕ್ಕವಯಸ್ಸಾದರೂ ಆತನ ದೇಹ ಕಠಿಣ ತಪಶ್ಚರ್ಯದಿಂದ ತೆಳ್ಳಗೆ ಕೃಶವಾಗಿದ್ದಿತು. ಕೆದರಿದ ಅವನ ತಲೆ ಕೂದಲೂ ಗಡ್ಡವೂ ಆತನಿಗೆ ದೇಹದಮೇಲೆ ಇದ್ದ ಸಂಪೂರ್ಣ ಅಸಡ್ಡೆಯನ್ನು ಸೂಚಿಸುತ್ತಿದ್ದುವು. ಆತನ ದೃಷ್ಟಿ ಎಲ್ಲಿಯೋ ದೂರವಿದ್ದಂತೆಯೂ ಸ್ವಪ್ನ ರಾಜ್ಯದಲ್ಲಿದ್ದಂತೆಯೂ ತೋರುತ್ತಿದ್ದಿತು. ಅವನ ಆ ಕಂದುಬಣ್ಣದ ಮುಖದ ಮೇಲೆ ನಯವಾದ ಕಾಂತಿ ಮೂಡಿದ್ದಿತು. ಸಂಜ್ಞೆಗಳನ್ನು ಮಾತ್ರ ಮಾಡುತ್ತಿದ್ದುದರಿಂದ ಆತನು ಮೌನವ್ರತವನ್ನು ಆಚರಿಸುತ್ತಿದ್ದನೆಂಬುದು ಸ್ಪಷ್ಟವಾಗಿದ್ದಿತು.

ಅವನು ಕೈಯಲ್ಲಿ ಸಣ್ಣ ಒಂದು ರುದ್ರಾಕ್ಷಿ ಮಾಲೆಯನ್ನು ಹಿಡಿದು ಅದರ ಮಣಿಗಳನ್ನು ಬೆರಳುಗಳಿಂದ ತಿರುವುತ್ತಿದ್ದನು. ರಾಮುದಾಸನು ರಾತ್ರಿ ಅಲ್ಲಿಯೇ ನಿಲ್ಲಬೇಕೆಂದು ಅದನ್ನು ಸಂಜ್ಞೆಗಳಿಂದ ತಿಳಿಸಿ ರಾಮುದಾಸನನ್ನು ಕೋಣೆಯ ಒಳಗೆ ಕರದುಕೊಂಡು ಹೋದನು. ಅದೋ ಅವ್ಯವಸ್ಥೆಯ ಪರಾಕಾಷ್ಠೆಯಲ್ಲಿದ್ದಿತು. ಕೋಣೆಯ ಮಧ್ಯೆ ಬೆಂಕಿಹಾಕಿ ಅವನು ರಾಮುದಾಸನನ್ನು ಅದರ ಹತ್ತಿರ ಕುಳ್ಳಿರಿಸಿದನು. ರಾಮುದಾಸನು ರಾತ್ರಿಯನ್ನು ಸಾಧುವಿನೊಡನೆ ಮೌನದಲ್ಲಿ ಕಳೆದನು. ಪ್ರಾತಃಕಾಲ ಬೇಗನೆಯೇ ರಾಮುದಾಸನು ಸಾಧುವನ್ನು ಪ್ರಯಾಣಕ್ಕೆ ಅನುಮತಿ ಕೊಡಬೇಕೆಂದು ಕೇಳಿದನು. ಅವನು ರಾಮುದಾಸನನ್ನು ಜೊತೆಯಲ್ಲಿ ನೀರಿನ ಪಾತ್ರೆಯನ್ನು ಏಕೆ ಇಟ್ಟುಕೊಂಡಿಲ್ಲವೆಂದು ಸಂಜ್ಞೆಯಿಂದ ಪ್ರಶ್ನಿಸಿದನು. ರಾಮುದಾಸನು ಅದು **ರಾಮನ** ಇಚ್ಛೆ ಎಂದು ಉತ್ತರವಿತ್ತನು. ಆ ಕೋಣೆಯೊಳಗೆ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದ ಹಾಳು ಮೂಳುಗಳಲ್ಲಿ, ಕೈಯಲ್ಲಿ ಹಿಡಿಯುವುದಕ್ಕೆ ಸರಿಪಡಿಸಿದ್ದ ಸಣ್ಣ ಒಂದು ಮಾಟವಾದ ಸೋರೆ ಬುರುಡೆಯನ್ನು ಪತ್ತೆಮಾಡಿ ಸಾಧು ಅದನ್ನು ರಾಮುದಾಸನ ಮುಂದಿಟ್ಟು, ಅದನ್ನು ಸ್ವೀಕರಿಸಬೇಕೆಂದು ಸಂಜ್ಞೆಮಾಡಿದನು. ರಾಮುದಾಸನು ಒಲ್ಲೆನೆಂದನು. ಆದರೆ ಸಾಧು ಇದಕ್ಕೆ ಒಪ್ಪುವವನಲ್ಲ. ಆತನ ಖಂಡಿತ ಸಂಜ್ಞೆಗಳು, ರಾಮುದಾಸನು ಕಮಂಡಲುವಿಲ್ಲದೆ ಪ್ರಯಾಣ ಮಾಡಲೇ ಕೂಡದೆಂದು ಸೂಚಿಸಿದುವು. ಕೊನೆಗೆ ರಾಮುದಾಸನು ಒಪ್ಪಬೇಕಾಯಿತು. ಅವನು ಆ ಬುರುಡೆಯನ್ನು ತೆಗೆದುಕೊಂಡು ಸಾಧುವನ್ನು ಬೀಳ್ಕೊಂಡು ಹೊರಬಿದ್ದನು. ಅಲ್ಲಿಂದ ಇಳಿದು ರಾಮುದಾಸನು ತನಗಾಗಿ ಕಾದಿದ್ದ ಕಪ್ಪುಬಣ್ಣದ ಸಾಧುವಿನ ಜೊತೆಗೆ ಸೇರಿದನು. ಉಳಿದ ಸಾಧುಗಳು ಆ ಮುನ್ನ ಹೊರಟುಹೋಗಿ

ದ್ದರು. ರಾಮದಾಸನೂ ಕಪ್ಪನೆಯ ಸಾಧುವೂ ಭರತ್‌ಕೂಪದ ಕಡೆಗೆ ಹೊರಟರು. ದಾರಿಯಲ್ಲಿ ಕೃಷಿಗಾರರ ಗುಡಿಸಲುಗಳ ಮೇಲೆ ಹಾಯ್ದರು. ಆ ದೀನ ರಿಕ್ತ ಗ್ರಾಮವಾಸಿಗಳು ಇವರಿಗೆ ಮೊಸರನ್ನದ ಊಟವನ್ನು ನೀಡಿದರು. ಇವರು ಸಾಯಂಕಾಲಕ್ಕೆ ಭರತ್‌ಕೂಪವನ್ನು ಮುಟ್ಟಿದರು.

ಇಲ್ಲಿ ವಿಶಾಲವಾದ ಒಂದು ಬಾವಿ ಇದೆ. ಅದರಮೇಲೆ ಒಂದು ದೊಡ್ಡ ಪುರಾತನವಾದ ಅರಳಿಯಮರದ ಕೊಂಬೆಗಳು ಬಾಗಿವೆ. (ಪಕ್ಕದಲ್ಲೇ ಶ್ರೀರಾಮ, ಸೀತಾದೇವಿ, ಲಕ್ಷ್ಮಣ, ಭರತ, ಹನುಮಂತರ ದೇವಾಲಯಗಳಿವೆ.) ಸಾಧುಗಳು ಬಾವಿಯ ಕಟ್ಟೆಯಮೇಲೆ ಮರದಕೆಳಗೆ ರಾತ್ರಿಯನ್ನು ಕಳೆದು ಬೆಳಗ್ಗೆ ಬಾವಿಯಲ್ಲಿ ಸ್ನಾನಮಾಡಿ ಅಲ್ಲಿಂದ ಪ್ರಯಾಣಮಾಡಿದರು. ಕಪ್ಪುಸಾಧು ಇಲ್ಲಿಂದ ಬೇರೆಕಡೆ ಹೊರಟುಹೋದನು.

ಒಬ್ಬಂಟಿಗನಾಗಿ ರಾಮದಾಸನು ಆ ಕಾಡಿನಲ್ಲಿ ಸ್ವೇಚ್ಛೆಯಾಗಿ ತಿರುಗುತ್ತ, ರಾತ್ರಿ ಪಾಳುಸ್ಥಳಗಳಲ್ಲೋ, ಮರದ ಬುಡದಲ್ಲೋ ಇರುತ್ತ, ಮರಗಳ ಕೆಳಗೆ ಆರಿಸಿಕೊಂಡ ಮೋವಾ (ಹಿಪ್ಪೆ) ಹೂವುಗಳನ್ನು ತಿನ್ನುತ್ತ ಮೂರು ದಿನ ಕಳೆದನು. ಮೋವಾ ಗುಲಾಬಿಮೊಗ್ಗಿನ ಆಕಾರದ ಬಿಳಿಯ ಒಂದು ಹೂವು, ಅದರ ಎಸಳು ದಪ್ಪವಾಗಿ ಮಂದವಾಗಿರುತ್ತವೆ. ಹೂವು ತಿನ್ನುವುದಕ್ಕೆ ಸಿಹಿಯಾಗಿರುತ್ತವೆ.

ರಾಮನವಮಿ ಉತ್ಸವಕ್ಕೆ ಒಂದುವಾರದ ಮುಂದಾಗಿ ರಾಮದಾಸನು ಚಿತ್ರಕೂಟಕ್ಕೆ ಬಂದಿದ್ದನು. ಉತ್ಸವ ಪ್ರಾರಂಭವಾಗುವುದಕ್ಕೆ ಇನ್ನೂ ಎರಡು ದಿನ ಇದ್ದುವು. ಇಲ್ಲಿ ಸುತ್ತಾಡುತ್ತ ಅವನು ಕಾಮ್ತಾನಾಥಬೆಟ್ಟದ ಸುತ್ತಲ ದಾರಿಗೆ ಪುನಃ ಸೇರಿದನು. ಈ ದಾರಿಯಲ್ಲಿ ಅಲ್ಲಲ್ಲೇ ದೇವಾಲಯಗಳೂ, ಆಶ್ರಮಗಳೂ, ಕೊಳಗಳೂ ಇವೆ. ಮಧ್ಯಾಹ್ನದ ಸಮಯದಲ್ಲಿ ಗಿರಿಪ್ರದಕ್ಷಣೆ ಮಾಡುತ್ತಿದ್ದಾಗ, ಒಂದು ದೇವಾಲಯದ ಹೊರಮನೆಯಲ್ಲಿದ್ದ ಇಬ್ಬರು ಭಕ್ತಮಾತೆಯರು ರಾಮದಾಸನನ್ನು ಆದರದಿಂದ ಆಹ್ವಾನಿಸಿ ಪ್ರೀತಿಯಿಂದ ಭೋಜನ ಮಾಡಿಸಿದರು. ಒಂದು ಸಾಯಂಕಾಲ ರಾಮದಾಸನು ಲಕ್ಷ್ಮಣಟೆಕ್ರಿ ಬೆಟ್ಟವನ್ನು ಹತ್ತಿ ಆ ರಾತ್ರಿಯನ್ನು ಒಂದು ನಿರ್ಜನ ಪ್ರದೇಶದಲ್ಲಿ ಕಳೆದನು. ✓

## (ii) (ಸತ್ಯಶೋಧನಕ್ಕಾಗಿ ದಾಹಪಡುವವನಿಗೇ ದೇವರು.)

ಬೆಟ್ಟದ ಸುತ್ತಲುದಾರಿಯಲ್ಲಿ ಒಂದು ಬ್ರಹ್ಮಚಾರಿ ಆಶ್ರಮವಿದೆ. ಇದರಲ್ಲಿ ಹನ್ನೆರಡು ಜನ ಹುಡುಗರಿಗೆ ವೇದಪಾಠ ಪ್ರವಚನಗಳು ನಡೆಯುತ್ತಿದ್ದುವು, ಮತ್ತು ಪೂರ್ವಕಾಲದ ಕರ್ಮ ಮತ್ತು ಆಚಾರಗಳಲ್ಲಿ ಶಿಕ್ಷಣ ದೊರೆಯುತ್ತಿದ್ದಿತು. ಆಶ್ರಮದ ಎದುರಿಗೆ ಒಂದು ಯಜ್ಞಕುಂಡವಿದೆ. ಅಲ್ಲಿ ಪ್ರತಿದಿನವೂ ಬ್ರಹ್ಮಚಾರಿಗಳು ಅಧ್ಯಾಪಕನೊಂದಿಗೆ ಸೇರಿ ಮಂತ್ರಗಳನ್ನು ಪಠಿಸುತ್ತಾ ವಿಧ್ಯುಕ್ತವಾಗಿ ಯಜ್ಞಕಾರ್ಯವನ್ನು ಆಚರಿಸುತ್ತಿದ್ದರು. ಆಶ್ರಮಕ್ಕೆ ಎದುರಾಗಿ ಯಜ್ಞಕುಂಡವಲ್ಲದೆ

ಹಿಂದೂ ಶಿಲ್ಪಶಾಸ್ತ್ರಾನುಸಾರವಾಗಿ ಕಟ್ಟಿರುವ ಸುಂದರವಾದ ಸಣ್ಣ ಕಟ್ಟಡಗಳೂ ಇವೆ. ಈ ಕಟ್ಟಡಗಳಲ್ಲಿ ಒಂದರಲ್ಲಿ ರಾಮದಾಸನು ಒಂದು ರಾತ್ರಿಯನ್ನು ಕಳೆದನು.

ಗಿರಿಪ್ರದಕ್ಷಣೆ ಮಾಡುತ್ತಿದ್ದಾಗ, ಹುಚ್ಚನಾಗಿ ತೋರುತ್ತಿದ್ದ ಒಬ್ಬ ಸಾಧಕನು ರಾಮದಾಸನಿಗೆ ದೊರೆತನು. (ನಿಜವಾಗಿ ದೈವಭಕ್ತಿಯಿಂದ ಕೂಡಿದವರೆಲ್ಲರೂ ಒಂದು ರೀತಿಯಲ್ಲಿ ಹುಚ್ಚರೇ ಹೌದು !) ಇವನು ಗಟ್ಟಿಯಾಗಿ ರಾಮನಾಮವನ್ನು ಸಂತತ ಪಠಿಸುತ್ತ, ಕೆಲವುವೇಳೆ ಅಲ್ಲಿಯ ಸಣ್ಣ ಗುಡಿಗಳ ಹೊರಗೆ ಕುಳಿತಿರುತ್ತ ಕೆಲವುವೇಳೆ ಬೆಟ್ಟದಸುತ್ತಲೂ ಸುತ್ತಾಡುತ್ತಿದ್ದನು.

ಒಂದು ರಾತ್ರಿ ರಾಮದಾಸನು ಧ್ಯಾನಕ್ಕಾಗಿ ಅಗ್ನಿಕುಂಡದ ಸುತ್ತಲಿರುವ ಎತ್ತರವಾದ ಜಗುಲಿಯಮೇಲೆ ಕುಳಿತನು. ಅಲ್ಲಿ ಈ ಸಾಧಕನೂ ಜೊತೆಗೆ ಬಂದು ಇವನ ಮಗ್ಗುಲಲ್ಲಿ ಕುಳಿತನು. ರಾಮದಾಸನು ರಾಮನಾಮವನ್ನು ಮೆಲ್ಲಗೆ ಹೇಳುತ್ತಿರುವಾಗ ಸಾಧಕನು ನಾಮವನ್ನು ಗಟ್ಟಿಯಾಗಿ ಉಚ್ಚರಿಸುತ್ತಿದ್ದನು. ಗಂಟೆಗಟ್ಟಲೆ ಕಳೆಯಿತು ; ಇವರು ಜಪಮಾಡುತ್ತಲೇ ಇದ್ದರು. ಸುಮಾರು ಮೂರು ಗಂಟೆ ಮೀರಿರಬೇಕು. ಆಗ ಸಾಧಕನು ನಿದ್ರಾಪರವಶನಾಗಿ ಕಲ್ಲಮೇಲೆ ಉರುಳಿ ನಿದ್ರೆ ಮಾಡಿದನು.

ಅರ್ಧ ಗಂಟೆಯ ಒಳಗಾಗಿ ಸಾಧಕನು ಕಿರಿಚಿಕೊಂಡು ಎದ್ದುಕುಳಿತು, ರಾಮದಾಸನು ಮಂತ್ರವನ್ನು ಜಪಿಸುತ್ತಲೇ ಇರುವುದನ್ನು ಕಂಡನು. ತನ್ನಮೇಲೆ ತಾನೇ ಕೋಪಾವಿಷ್ಟನಾಗಿ, "ನಾನೆಂತಹ ದುರಾತ್ಮ ! ಭಜನೆಮಾಡುವಾಗ ನಿದ್ರೆಗೆ ಅವಕಾಶಕೊಟ್ಟೆ" ಎನ್ನುತ್ತ, ರಾಮದಾಸನ ಕಡೆಗೆ ತಿರುಗಿ "ಆತನನ್ನು ನೋಡು, ಆತನು ಇನ್ನೂ ಎಚ್ಚರವಾಗಿಯೇ ಇದ್ದಾನೆ. ನಿದ್ರೆಯನ್ನು ಎಷ್ಟು ಅಂಕೆಯಲ್ಲಿ ಇಟ್ಟುಕೊಂಡಿದ್ದಾನೆ. ಆ ! ಈಗ ಗೊತ್ತಾಯಿತು. ನಿನ್ನೆ ರಾತ್ರಿಯ ಭೋಜನವೇ ಈ ಅಧಃಪತನಕ್ಕೆ ಕಾರಣ. ಅಯ್ಯೋ ! ಅಮೂಲ್ಯವಾದ ಕಾಲವನ್ನು ಕಳೆದುಕೊಂಡೆನಲ್ಲಾ" ಎಂದು ಆಕ್ರೋಶ ಪಶ್ಚಾತ್ತಾಪಗಳಿಂದ ಹೇಳಿಕೊಂಡನು.

(ನಿಜವಾಗಿಯೂ ದೇವರು ದೊರೆಯುವುದು ಸತ್ಯಶೋಧನೆಗಾಗಿ ಇಂಥ ಉತ್ಕಟೇಚ್ಛೆಯಿಂದಿರುವವನಿಗೇ ಸರಿ) ರಾಮನವಮಿ ಉತ್ಸವಗಳು ಸಾಧಾರಣವಾಗಿ ಒಂಬತ್ತು ದಿನ ನಡೆಯುತ್ತವೆ. ಮೊದಲನೆಯ ದಿನ ಬಂದಿತು. ಹಿಂದೂಸ್ಥಾನದ ನಾನಾ ಕಡೆಗಳಿಂದ ಸಾವಿರಾರು ಮಂದಿ ಯಾತ್ರಿಕರು ಕಾಮ್ತಾನಾಥಗಿರಿಯ ಪರಿಕ್ರಮ ಎಂದರೆ ಪ್ರದಕ್ಷಣೆಗಾಗಿ ಚಿತ್ರಕೂಟಕ್ಕೆ ಬಂದಿಳಿದರು. ಹಿಂದೆ ಶ್ರೀರಾಮಚಂದ್ರನೂ ಸೀತಾಲಕ್ಷ್ಮಣರೂ ಈ ಬೆಟ್ಟದಲ್ಲಿ ತಪಸ್ಸುಮಾಡಿದ್ದರು. ಇದರಿಂದ ಈ ಸ್ಥಳಕ್ಕೆ ಆಧ್ಯಾತ್ಮಿಕ ಪ್ರಭಾವವಿದೆಯೆಂದು ನಂಬಿಕೆ. ಆದುದರಿಂದಲೇ ಯಾತ್ರಿಕರು ಗುಂಪು ಗುಂಪಾಗಿ ಗಿರಿಪ್ರದಕ್ಷಣೆ ಮಾಡಿದರು.

ಗಿರಿಪ್ರದಕ್ಷಣೆ ಮಾಡುತ್ತಿರುವಾಗ ರಾಮದಾಸನು ಪಿಳಿಕೋಟೆ ಆಶ್ರಮವನ್ನು ಗುರುತಿಸಿದನು. ಝಾನ್ಸಿಯಲ್ಲಿ ಪರಿಚಿತರಾದ ಪೂಜ್ಯ ನಿರ್ಭಯಾನಂದಜಿಯವರೂ

ಅವರ ಧರ್ಮಪತ್ನಿಯವರೂ ಈ ಆಶ್ರಮಕ್ಕೆ ಸಂಬಂಧಪಟ್ಟವರು. ಈ ಆಶ್ರಮವನ್ನು ತಳಿರು ತೋರಣಗಳಿಂದಲೂ, ಪತಾಕೆಗಳಿಂದಲೂ, ಬಟ್ಟೆಯ ಚಪ್ಪರಗಳಿಂದಲೂ, ಸುಂದರವಾಗಿ ಅಲಂಕರಿಸಿದ್ದುದು ಕಂಡಿತು. ಅದರ ಆವರಣದಲ್ಲಿ ಹಿಂದೂಸ್ಥಾನದ ನಾನಾ ಭಾಗಗಳಿಂದ ಬಂದಿದ್ದ ನೂರಾರುಜನ ಸಂನ್ಯಾಸಿಗಳು ಸೇರಿದ್ದರು. ಅಲ್ಲಿಗೆ ಯಾವ ಸಂನ್ಯಾಸಿ ಬಂದರೂ ಅವನಿಗೆ ಆತಿಥ್ಯವನ್ನು ನೀಡುವುದು ಈ ಆಶ್ರಮದ ನಿಯಮ. ಆಶ್ರಮದ ಯಜಮಾನರು ಸಂಯುಕ್ತಪ್ರಾಂತದ ಪ್ರಸಿದ್ಧ ಸಂನ್ಯಾಸಿಗಳಾದ ಸ್ವಾಮಿ ಅಖಂಡಾನಂದರು. ಇವರ ಶಿಷ್ಯ ಸ್ವಾಮಿ ಸಚ್ಚಿದಾನಂದರು ಆಶ್ರಮದ ವಿಚಾರಣಾಕರ್ತರು; ಇವರು ಸಂಸ್ಕೃತದಲ್ಲಿ ಪಂಡಿತರು. ಆಶ್ರಮದಲ್ಲಿ ಹುಡುಗರಿಗಾಗಿ ಒಂದು ಉಚಿತ ವಿದ್ಯಾಭ್ಯಾಸದ ಸಂಸ್ಕೃತ ಪಾಠಶಾಲೆಯೂ ಇದೆ.

ಸ್ವಾಮಿ ನಿರ್ಭಯಾನಂದರೂ, ಇವರ ಪತ್ನಿಯೂ ಮತ್ತು ಅಲ್ಲಿ ಆಗ ಇದ್ದ ಸ್ವಾಮಿ ನಿರ್ಭಯಾನಂದರ ತಮ್ಮ ಸ್ವಾಮಿ ರಾಮಾನಂದರೂ ಸಹ ಸ್ವಾಮಿ ಅಖಂಡಾನಂದರ ಶಿಷ್ಯರು. ಸಂನ್ಯಾಸಿಗಳಲ್ಲದೆ ಅನೇಕ ಗೃಹಸ್ಥರೂ, ಸ್ವಾಮಿ ಅಖಂಡಾನಂದರ ಶಿಷ್ಯರಾಗಿದ್ದರು. ಸ್ವಾಮಿ ಅಖಂಡಾನಂದರೂ ಅವರ ಸಂನ್ಯಾಸಿ ಶಿಷ್ಯರೂ, ತಮ್ಮ ಪರಿವ್ರಾಜಕ ಜೀವನದಲ್ಲಿ ಝಾನ್ಸಿಯಲ್ಲಿ ಕೆಲವು ಕಾಲ ಇದ್ದರು. ಆಗ ರಾಮಕಿಂಕರನಿಂದ ರಾಮದಾಸನ ವಿಚಾರವನ್ನು ಕೇಳಿದ್ದರು; ಆದರೆ ಅವನನ್ನು ನೋಡಿರಲಿಲ್ಲ.

ಝಾನ್ಸಿಯಿಂದ ಹೊರಡುವಾಗ ಸ್ವಾಮಿ ನಿರ್ಭಯಾನಂದರು ರಾಮದಾಸನಿಗೆ ಪಿಳಿಕೋಟಿ ಆಶ್ರಮವನ್ನು ಸಂದರ್ಶಿಸದೆ ಹೋಗಬಾರದೆಂದು ತಿಳಿಸಿದ್ದರು. ರಾಮದಾಸನು ಆಶ್ರಮದ ಆವರಣವನ್ನು ಪ್ರವೇಶಿಸಿ ಸಂನ್ಯಾಸಿಗಳ ಗುಂಪಿನೊಂದಿಗೆ ಬೆರತನು. ಮಧ್ಯಾಹ್ನದ ಊಟದಲ್ಲಿ ಅವರೊಡನೆ ಕುಳಿತನು. ಮಧ್ಯಾಹ್ನದ ಮೇಲೆ ಬೆಟ್ಟದ ಸುತ್ತ ತಿರುಗಾಡಿಕೊಂಡಿದ್ದು ಸಾಯಂಕಾಲಕ್ಕೆ ಆಶ್ರಮಕ್ಕೆ ಹಿಂತಿರುಗಿ, ರಾತ್ರಿಯನ್ನು ಕಳೆಯಲು ಅಲ್ಲಿ ಅಂಗಳದಲ್ಲಿ ಹಾಕಿದ್ದ ಅನೇಕ ಕಲ್ಲುಬೆಂಚುಗಳಲ್ಲಿ ಒಂದರಮೇಲೆ ಕುಳಿತನು. ಈ ಬೆಂಚುಗಳನ್ನು ಮಾಡಿದ್ದ ರೀತಿಯಲ್ಲಿ ಒಂದು ವಿಶೇಷವಿದ್ದಿತು. ಇವುಗಳಮೇಲೆ ಮಲಗಿದರೆ ಹಾಸುಚಪ್ಪಡಿಯು ಸ್ವಲ್ಪ ಇಳಿಜಾರಾಗಿದ್ದುದರಿಂದ ತಲೆ ಯಾವಾಗಲೂ ಕಾಲಿಗಿಂತ ಎತ್ತರವಾಗಿರಲು ಅನುಕೂಲವಿದೆ. ಈ ಕಲ್ಲುಚಪ್ಪಡಿಗಳು ರಾತ್ರಿಕಾಲದಲ್ಲಿ ಮಂಜಿನ ಗೆಡ್ಡೆಗಳಂತೆ ಕೊರೆಯುತ್ತಿರುತ್ತವೆ.

ರಾತ್ರಿ ಮುಂಬರಿಯಲು ರಾಮದಾಸನು ನಿದ್ರಿಸಲು ಬಯಸಿ ತನ್ನಲ್ಲಿದ್ದ ಏಕವಸ್ತ್ರದಲ್ಲಿ ಅರ್ಧವನ್ನು ಬೆಂಚಿನಮೇಲೆ ಹಾಸಿಕೊಂಡು ಉಳಿದ ಅರ್ಧವನ್ನು ಹೊದೆದುಕೊಂಡು ಮಲಗಿದನು. ಆ ಕಾಲದಲ್ಲಿ ಅವನಿಗೆ ಅತ್ಯಲ್ಪ ನಿದ್ರೆ ಬರುತ್ತಿದ್ದಿತು. ಒಂದು ಗಂಟೆನಂತರ ಒಬ್ಬ ಯುವಕ ಸಂನ್ಯಾಸಿ ಎರಡು ಕಂಬಳಿಗಳನ್ನು ತಂದು, ಮಹರಾಜ್ ಇವುಗಳನ್ನು ತೆಗೆದುಕೊಳ್ಳಿರಿ. ಚಳಿ ಬಹು ತೀಕ್ಷ್ಣವಾಗಿದೆ" ಎಂದು

ಅವನ ಗಮನವನ್ನು ಸೆಳೆದನು. ಆತನ ಒತ್ತಾಯದ ಮೇಲೆ, ರಾಮದಾಸನು ಬೆಂಚಿನಿಂದ ಎದ್ದನು. ಸಂನ್ಯಾಸಿ ಒಂದು ಕಂಬಳಿಯನ್ನು ಹಾಸಿ, ಅದರ ಮೇಲೆ ರಾಮದಾಸನು ಮಲಗಿದನಂತರ, ಇನ್ನೊಂದನ್ನು ಹೊದ್ದಿಸಿದನು. (ಪ್ರತಿಯೊಬ್ಬರೂ ರಾಮದಾಸನಿಗೆ ಕರುಣ ತೋರುವವರೇ, ಏಕೆಂದರೆ ಪ್ರತಿಯೊಬ್ಬರೂ ಭಗವಂತನೇ)!

ಬೆಳಿಗ್ಗೆ ಅರುಣೋದಯಕ್ಕೆ ರಾಮದಾಸನು ಸ್ನಾನಕ್ಕಾಗಿ ನದಿಗೆ ಹೋದನು. ಸೋರೆ ಬುರುಡೆ ಜೊತೆಯಲ್ಲಿಯೇ ಇದ್ದಿತು. ಮಧ್ಯಾಹ್ನವೇಳೆಗೆ ಅವನು ಆಶ್ರಮಕ್ಕೆ ಬಂದನು. ಹಿಂದಣ ರಾತ್ರಿ ಕಂಬಳಿಗಳನ್ನು ಕೊಟ್ಟಿದ್ದ ಸಂನ್ಯಾಸಿ ಸಾಯಂಕಾಲದಲ್ಲಿ ರಾಮದಾಸನನ್ನು ಹುಡುಕಿ ತನ್ನ ಕುಟಿಗೆ ಕರದುಕೊಂಡು ಹೋದನು. ಅದು ದಾರಿಯ ಎದುರು ಬದಿಗಿದ್ದಿತು. ರಾಮದಾಸನು ಅವನಿಗೆ ಸ್ವಾಮಿ ನಿರ್ಭಯಾನಂದಜಿ ಮತ್ತು ಅವರ ಧರ್ಮಪತ್ನಿಯನ್ನು ಝಾನ್ಸಿಯಲ್ಲಿ ಕಂಡಿದ್ದುದಾಗಿ ತಿಳಿಸಿದನು. ಆಗ ಸಂನ್ಯಾಸಿ ಇವನ ಹೆಸರನ್ನು ಕೇಳಲು ರಾಮದಾಸನು ಅದನ್ನು ತಿಳಿಸಿದನು.

ರಾತ್ರಿ ಕಳೆಯಿತು. ಬೆಳಿಗ್ಗೆ ವಾಡಿಕೆಯಂತೆ ಮುಂದಾಗಿ ರಾಮದಾಸನು ನದಿಗೆ ಹೋಗಿ ಸ್ನಾನಮಾಡಿ ಮಧ್ಯಾಹ್ನಕ್ಕೆ ಆಶ್ರಮಕ್ಕೆ ಹಿಂತಿರುಗಿದನು. ಹೊರಗಣ ಒಂದು ಕಟ್ಟಡದ ಮುಂದಣ ಕೈಸಾಲೆಯಲ್ಲಿ ಹಲವರು ಸಂನ್ಯಾಸಿಗಳು ಕಲೆತಿದ್ದರು. ರಾಮದಾಸನು ಆಶ್ರಮದೊಳಕ್ಕೆ ಪ್ರವೇಶಿಸಿದಾಗ ಎಲ್ಲರೂ ಅವನನ್ನೇ ದೃಷ್ಟಿಸಿ ನೋಡುತ್ತಾ ಕಿಲಕಿಲ ನಗುತ್ತಿದ್ದರು. ರಾಮದಾಸನು ಅವರಿರುವ ಸ್ಥಳವನ್ನು ದಾಟಿ ಮುಂದಕ್ಕೆ ಹೋಗುವುದರಲ್ಲಿದ್ದನು. ಆಗ ವ್ಯವಸ್ಥಾಪಕರಾದ ಸ್ವಾಮಿ ಸಚ್ಚಿದಾನಂದರು ಅವನಿಗೆ "ನಿಲ್ಲಿ !" ಎಂದರು. ರಾಮದಾಸನನ್ನು "ಇಲ್ಲಿ ಬನ್ನಿ." ಎಂದು ಬೆಸಸಿ ಸನ್ನೆ ಮಾಡಿದರು. ರಾಮದಾಸನು ಅವರ ಬಳಿಗೆ ಹೋದನು.

"ನಿಮಗೆ ಯಾವ ಶಿಕ್ಷೆ ಕೊಡಬೇಕೆಂದು ಯೋಚಿಸುತ್ತಿದ್ದೇವೆ" ಎಂದು ಸ್ವಾಮಿ ಸಚ್ಚಿದಾನಂದರು ಮುಂದುವರಿಸಿದರು.

ಒಬ್ಬ ಸಾಧುವಿನ ಕೈಯಲ್ಲಿ ದಪ್ಪನಾದ ದೊಣ್ಣೆಯಿದ್ದಿತು. ರಾಮದಾಸನು ನಸುನಗುತ್ತ ಆ ದೊಣ್ಣೆಯನ್ನು ತೆಗೆದುಕೊಂಡು ಸ್ವಾಮಿ ಸಚ್ಚಿದಾನಂದರಿಗೆ ಅದನ್ನು ಕೊಟ್ಟು "ಇಗೋ! ದೊಣ್ಣೆಯಿದೆ. ನಿಮಗೆ ತೃಪ್ತಿಯಾಗುವವರೆಗೂ ಇದರಿಂದ ರಾಮದಾಸನಿಗೆ ಶಿಕ್ಷೆ ಮಾಡಿ" ಎಂದು ಹೇಳಿ ಬಗ್ಗಿ ತನ್ನ ಬೆನ್ನನ್ನು ತೋರಿಸಿದನು. ಎಲ್ಲರೂ ನಕ್ಕರು. ಆಗ ಸ್ವಾಮಿ ಸಚ್ಚಿದಾನಂದರು "ಅದಲ್ಲ, ನಾವು ಸರಿಯಾಗಿ ತೀರ್ಮಾನ ಮಾಡಿದ್ದೇವೆ. ನೀವು ಒಂದು ವರ್ಷ ಪೂರ್ಣವಾಗಿ ಈ ಆಶ್ರಮದಲ್ಲಿರಬೇಕು. ಅದೇ ಶಿಕ್ಷೆ" ಎಂದು ವಿವರಿಸಿದರು.

ರಾಮದಾಸನು "**ರಾಮನಿಚ್ಛೆ** ಹಾಗಿಲ್ಲದಿದ್ದರೋ ?" ಎಂದು ಮೆಲ್ಲಗೆ ಕೇಳಿದನು.

ಸ್ವಾಮಿ ಸಚ್ಚಿದಾನಂದರು "ನಮ್ಮ ಮೂಲಕ ನುಡಿಯುತ್ತಿರುವನು **ರಾಮನೇ**" ಎಂದರು.

ರಾಮದಾಸನು "**ರಾಮನು** ರಾಮದಾಸನಲ್ಲಿಯೂ ನಿಂತು ಮಾತನಾಡು ತ್ತಿದ್ದಾನೆ; ನಿಮ್ಮ ತೀರ್ಮಾನಕ್ಕೆ ರಾಮದಾಸನು ಒಪ್ಪಕೊಡದೆಂದು ಹೇಳು ತ್ತಿದ್ದಾನೆ" ಎಂದನು.

ಸ್ವಾಮಿ ಸಚ್ಚಿದಾನಂದರು ತಲೆಯನ್ನಾಡಿಸುತ್ತ, "ಆ ವಿಚಾರವನ್ನು ನಾವು ನೋಡಿಕೊಳ್ಳುತ್ತೇವೆ. ನಿಮ್ಮನ್ನು ಬೇರೆ ಕೊಟಡಿಯಲ್ಲಿ ಬಂದಿಯಾಗಿಟ್ಟು ನಮ್ಮಲ್ಲಿ ಒಬ್ಬರು ಕಾವಲಿರುತ್ತೇವೆ. ನೀವು ತಪ್ಪಿಸಿಕೊಂಡು ಹೋಗಲಾರಿರಿ" ಎಂದರು.

ರಾಮದಾಸನು "**ರಾಮನಿಚ್ಛೆ** ಇದ್ದಂತೆ ಆಗಲಿ" ಎಂದನು. ಆಗ ಸ್ವಾಮಿ ಸಚ್ಚಿದಾನಂದರು "ನಿಮ್ಮ ಮೇಲೆ ಬಂದಿರುವ ಆರೋಪಣೆ ಏನೆಂಬುದು ನಿಮಗೆ ಏನಾ ದರೂ ಗೊತ್ತಿದೆಯೆ ?" ಎಂದು ಕೇಳಿದರು. ರಾಮದಾಸನು "ನೀವು ತೀರ್ಪನ್ನು ಕೊಟ್ಟುಬಿಟ್ಟದ್ದೀರಿ. ಆರೋಪಣೆ ಏನು ಎಂಬುದು ರಾಮದಾಸನಿಗೆ ತಿಳಿದರೆ ಏನು ತಿಳಿಯದಿದ್ದರೆ ಏನು ?" ಎಂದು ಉತ್ತರವಿತ್ತನು.

ಸ್ವಾಮಿ ಸಚ್ಚಿದಾನಂದರು "ಹೇಗಾದರೂ ಆಗಲಿ, ಆರೋಪಣೆ ಏನೆಂಬುದನ್ನು ತಿಳಿಸುತ್ತೇನೆ. ನೀವು ಎರಡು ದಿವಸ ನಮ್ಮನ್ನು ಬೆಳ್ಳಿಸಿದ್ದೀರಿ; ನಮ್ಮ ಜೊತೆಗಿದ್ದು ನಮಗೆ ನಿಮ್ಮ ಸುಳಿವು ಕೊಡದೆ ಇದ್ದಿದ್ದೀರಿ. ನಿಮ್ಮ ವಿಚಾರವನ್ನು ಕೇಳಿದ್ದೆವು; ನಿಮ್ಮನ್ನು ನೋಡಲು ಕುತೂಹಲದಿಂದಿದ್ದೆವು. ಆದುದರಿಂದಲೇ ನಿಮ್ಮ ಮೋಸಕ್ಕೆ ಶಿಕ್ಷೆ" ಎಂದರು.

## (iii) ಆತ್ಮಸಮರ್ಪಣೆಯ ಪರೀಕ್ಷೆ

ರಾಮದಾಸನಿಗೆ ಒಂದು ಸಣ್ಣ ಕೋಣೆ ಸಿದ್ಧವಾಯಿತು. ಇದರಲ್ಲಿ ಒಂದು ಮರದ ಮಂಚ, ಮೇಲೆ ಹಾಸಿದ ಒಂದು ರಜಾಯಿ, ನೀರು ತುಂಬಿದ ಒಂದು ಗಡಿಗೆ ಇದ್ದವು. ರಾಮದಾಸನನ್ನು ಸ್ವಾಮಿ ರಾಮಾನಂದನೆಂಬ ವೃದ್ಧ ಸಂನ್ಯಾಸಿಯ ವಶಕ್ಕೆ ಕೊಡಲಾಯಿತು. ಆತನು ರಾಮದಾಸನ ಕಷ್ಟಸುಖಗಳನ್ನು ನೋಡಿಕೊಂಡನು. ಈ ಆಶ್ರಮದಲ್ಲಿದ್ದ ಸಂನ್ಯಾಸಿಗಳು ಮಕ್ಕಳಂತೆ ನಿಷ್ಕಪಟಿಗಳು. ಇವರ ಈ ಗುಣ ಆಶ್ಚರ್ಯಕರವಾಗಿದ್ದಿತು. ಇವರು ರಾಮದಾಸನಿದ್ದ ಕೋಣೆಗೆ ಎಷ್ಟೋಸಾರಿ ಬಂದು ಆವನ ಸಂಗಡ ಮಾತನಾಡುತ್ತಾ ಅವನನ್ನು ಒಂದು ಮಗುವಿನೋಪಾದಿ ಯಲ್ಲಿ ಮುದ್ದಿಸುತ್ತಿದ್ದರು. ರಾಮದಾಸನಿಗೆ ಇಲ್ಲಿ ಪ್ರೀತಿಯ ಔತಣಗಳೇ ಆದುವು.

ಒಂದು ದಿನ ಸ್ವಾಮಿ ರಾಮಾನಂದರೂ ಮತ್ತು ಮೊದಲು ರಾತ್ರಿ ಕಂಬಳಿ ಗಳನ್ನು ತಂದು ಕೊಟ್ಟಿದ್ದ ಸ್ವಾಮಿ ಗುಪ್ತಾನಂದರೂ ರಾಮದಾಸನೊಂದಿಗೆ ಮಂಚದ ಮೇಲೆ ಕುಳಿತಿದ್ದಾಗ, ರಾಮದಾಸನು ಆತ್ಮಸಮರ್ಪಣೆಯ ವಿಚಾರವಾಗಿ ಮಾತ ನಾಡುತ್ತ, ಉದಾಹರಣೆಗಾಗಿ, ಕೌರವರ ಆಸ್ಥಾನದಲ್ಲಿ ದುಶ್ಶಾಸನನು ದ್ರೌಪದೀ ದೇವಿಯ ಮಾನಭಂಗ ಮಾಡಲು ಉದ್ಯೋಗಿಸಿದ ವೇಳೆಯ ಅವಳ ಅವಸ್ಥೆಯ ಪ್ರಸಂಗವನ್ನು ವಿವರಿಸಿದನು. "ದ್ರೌಪದಿ ಶ್ರೀ ಕೃಷ್ಣನಿಗೆ ಮೊರೆಯಿಟ್ಟು ಬೇಡುತ್ತ ಎಷ್ಟು ಕಾಲದವರೆಗೂ ಆತ್ಮರಕ್ಷಣೆಗಾಗಿ ಒದ್ದಾಡುತ್ತಿದ್ದಳೋ, ಅಲ್ಲಿಯವರೆಗೂ

ಶ್ರೀ ಕೃಷ್ಣನು ಅವಳ ಸಹಾಯಕ್ಕೆ ಒದಗಲಿಲ್ಲ. ಕೊನೆಗೆ ದ್ರೌಪದಿಗೆ ತನ್ನ ಮೌಢ್ಯವು ಕಂಡುಬಂದು "ಶ್ರೀ ಕೃಷ್ಣಾ" ಎಂದು, ಅವಳು ಅನನ್ಯಭಾವದಿಂದ ಕೈಗಳನ್ನು ಮೇಲಕ್ಕೆತ್ತಿ ಯಾವಾಗ ಶರಣು ಹೊಕ್ಕಳೋ ಆ ಕ್ಷಣವೇ ಸ್ವಾಮಿ ಅವಳನ್ನು ರಕ್ಷಿಸಿದನು."

ದ್ರೌಪದೀ ದೇವಿಯ ಆತ್ಮ ನಿವೇದನೆಯ ಈ ಭಾಗವನ್ನು ವಿವರಿಸುತ್ತಿದ್ದಾಗ, ಮನಗೊಟ್ಟು ಕೇಳುತ್ತಿದ್ದ ಸ್ವಾಮಿ ಗುಪ್ತಾನಂದರು ಭಾವದ ಉದ್ವೇಗದಿಂದ ಸೋತು ಗೊಳೋ ಎಂದು ಅತ್ತುಬಿಟ್ಟರು. ಸ್ವಾಮಿ ರಾಮಾನಂದರ ಕಣ್ಣುಗಳಲ್ಲೂ ನೀರೂರಿತು.

ಒಂದು ದಿನ, ರಾಮದಾಸನು ಆಶ್ರಮದ ಎದುರಿಗಿರುವ ಕಾಮ್ತಾನಾಥ ಬೆಟ್ಟವನ್ನು ಸ್ವಾಮಿ ಗುಪ್ತಾನಂದರ ಜೊತೆಯಲ್ಲಿ ಹತ್ತಿ ಹೋದನು. ಪೂರ್ವದಲ್ಲಿ ಶ್ರೀ ರಾಮರೂ ಸೀತಾದೇವಿಯೂ ಇಲ್ಲಿ ವಾಸಮಾಡಿದ್ದರಿಂದ ಪವಿತ್ರವೆಂದು ಗಣಿಸಲ್ಪಡುವ ಈ ಬೆಟ್ಟದ ಮೇಲೆ ಹೆಜ್ಜೆಗಳನ್ನು ಸೋಕಿಸಿ ನಡೆಯುವುದು ಪಾಪಕಾರ್ಯವೆಂದು ಕೆಲವರು ಹಿಂದುಗಳು ಭಾವಿಸುತ್ತಾರೆ. ಬೆಟ್ಟ ಬುಡದಿಂದ ಐದು ನೂರು ಅಡಿ ಎತ್ತರದಲ್ಲಿದೆ. ಬೆಟ್ಟದಮೇಲೆ ಕಟ್ಟಡಗಳಾಗಲಿ ಅವುಗಳ ಕುರುಹುಗಳಾಗಲಿ ಇಲ್ಲ. ಈ ಬೆಟ್ಟದಲ್ಲಿ ಕುರುಚಲು ಗಿಡಗಳು ಮರಗಳು ತುಂಬಿವೆ. ಒಂದು ಜಾತಿಯ ಗಿಡದಲ್ಲಿ ತೇಂದು ಎಂಬ ರುಚಿಯಾದ ಹಣ್ಣು ಬಿಡುತ್ತವೆ. ಇಳಿಯುವಾಗ ರಾಮದಾಸನು ಬತ್ತಿಹೋಗಿದ್ದ ಝರಿಯ ಶಯ್ಯೆಯಲ್ಲಿ ಓಡಿದನು. ಇಲ್ಲಿ ನುಣುಪಾಗಿದ್ದ ಮತ್ತು ಗುಂಡಾಗಿದ್ದ ಕಲ್ಲುಗಳು ಅಲ್ಲಲ್ಲಿ ಚೆಲ್ಲಿದ್ದುವು.

ಇನ್ನೊಂದು ದಿನ, ಕಾಶಿಯಿಂದ ಬಂದ ಒಬ್ಬ ಸಂನ್ಯಾಸಿಯು ರಾಮದಾಸನನ್ನು ಕರೆದುಕೊಂಡು ಪ್ರಸಿದ್ಧವಾದ ಈ ಗಿರಿಯ ಪ್ರದಕ್ಷಿಣೆಗೆ ಹೊರಟನು. ಸ್ವಲ್ಪ ದೂರ ಹೋಗಿ ಇಬ್ಬರೂ ಒಂದು ಮರದ ಕೆಳಗಿನ ಒಂದು ಕಲ್ಲು ಜಗುಲಿಯ ಮೇಲೆ ಕುಳಿತರು. ಅಲ್ಲಿ ಸಂನ್ಯಾಸಿ ರಾಮದಾಸನಿಗೆ ತನ್ನ ಸ್ಥಿತಿಯನ್ನು ತಿಳಿಸಿದನು. "ಮಹರಾಜ್, ನಾನು ಹತ್ತಿರ ಹತ್ತಿರ ಮೂವತ್ತು ವರ್ಷಗಳಿಂದ ಸಂನ್ಯಾಸ ಧರ್ಮದಲ್ಲಿದ್ದರೂ ನನ್ನ ಮನಸ್ಸು ಚಂಚಲವಾಗಿಯೇ ಇದೆ. ಕಾಮ, ಕ್ರೋಧ, ಲೋಭ ಮುಂಚಿನಂತೆಯೇ ತುಂಬಿವೆ. ಏನು ಮಾಡಲಿ?" ಎಂದು ಕೇಳಿದನು.

"ನೀನು ಹೇಳುವ ದುರ್ಗುಣಗಳನ್ನು ಮನಸ್ಸಿನಿಂದ ಹೊರಡಿಸಿ, ಮನಸ್ಸನ್ನು ಅಂಕೆಯಲ್ಲಿಟ್ಟುಕೊಳ್ಳಲು ಒಂದೇ ಒಂದು ದಾರಿ: (ಸದಾ ದೇವರ ನಾಮವನ್ನು ಜಪಿಸುತ್ತ, ದೇವರ ಅನಂತ ಗುಣಗಳನ್ನು ಧ್ಯಾನಿಸುತ್ತ, ನೀನು ಮಾಡುವ ಪ್ರತಿಯೊಂದು ಕಾರ್ಯವನ್ನೂ ನಿಷ್ಕಾಮ ದೃಷ್ಟಿಯಿಂದ ಭಗವಂತನಿಗೆ ಅರ್ಪಿಸುವುದು") ಎಂದು ರಾಮದಾಸನು ಸಲಹೆ ಕೊಟ್ಟನು.

ಸಂನ್ಯಾಸಿ "ಅವೆಲ್ಲವನ್ನು ಮಾಡಿ ನಾನು ಸೋತಿದ್ದೇನೆ" ಎಂದನು.

ರಾಮದಾಸನು "ಹಾಗಾದರೆ ನಿರ್ಜನ ಪ್ರದೇಶದಲ್ಲಿ ಅನುಷ್ಠಾನ ಮಾಡಬೇಕು" ಎಂದು ಸೂಚಿಸಿದನು.

ಸಂನ್ಯಾಸಿ "ಅಯ್ಯೋ! ಒಬ್ಬಂಟಿಗನಾಗಿರುವ ವಿಚಾರವನ್ನು ಹೇಳಬೇಡಿ. ಏಕಾಕಿಯಾಗಿರುವುದೆಂದರೆ ನನಗೆ ಬಹಳ ಭಯ. ನಾನೊಬ್ಬನೇ ಇರುವ ಸಮಯದಲ್ಲಿ ಮನಸ್ಸು ತೀರಾ ಅಪರಿಶುದ್ಧವಾದ ಆಸೆಗಳ ಸುಳಿಯಲ್ಲಿ ಸುತ್ತುತ್ತದೆ. ಆದುದರಿಂದಲೇ ನಾನು ಸಾಧುಗಳನ್ನು ಹುಡುಕಿಕೊಂಡು ತಿರುಗುತ್ತಿದ್ದೇನೆ. ಇವರ ಸಂಸರ್ಗದಲ್ಲಿದ್ದಾಗ ಮನಸ್ಸು ಶಾಂತವಾಗಿರುತ್ತದೆ. ಬಾಹ್ಯ ಆನುಕೂಲ್ಯಗಳಿಂದ ದೊರೆಯುವ ಶಾಂತಿ ಶಾಶ್ವತವಲ್ಲವಾದುದರಿಂದ ಶಾಂತಿಯನ್ನು ಪಡೆಯಲು ಅವನ್ನು ನಂಬಿಕೊಂಡಿರಬಾರದೆಂದೂ ನಾನು ಬಲ್ಲೆನು" ಎಂದು ಹೇಳಿ, ಮಾತನ್ನು ಅಲ್ಲಿಗೆ ನಿಲ್ಲಿಸಿ, ಈ ಸಮಸ್ಯೆಗೆ ನಿವಾರಣೆಯನ್ನು ಬಯಸಿ ರಾಮದಾಸನ ಕಡೆ ನೋಡಿದನು.

ರಾಮದಾಸನು, "ನೀನು ಹೇಳುವುದು ನಿಜ. (ಸಚ್ಚಿದಾನಂದರೂಪನಾದ ಭಗವಂತನು ನಿನ್ನೊಳಗೇ ಇದ್ದಾನೆ.) ಇಷ್ಟೇ ಅಲ್ಲ. (**ಅವನೂ** ನೀನೂ ಬೇರೆ ಬೇರೆಯಲ್ಲ.) (ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಂಡ ಹೊರತು ನಿಜವಾದ ಮುಕ್ತಿಯಾಗಲಿ ಶಾಶ್ವತವಾದ ಶಾಂತಿಯಾಗಲಿ ದೊರೆಯಲಾರದು.) ಭಗವಂತನನ್ನು ಅರಿಯಲು ಹೊರಡುವವನಿಗೆ ಇರಬೇಕಾದ ಮೊದಲನೆಯ ಗುಣವೆಂದರೆ ಭಯರಾಹಿತ್ಯ. ಏಕಾಂತದ ಭಯವಾಗಲಿ ಜನಸಂದಣಿಯ ಭಯವಾಗಲಿ ನಿನ್ನಲ್ಲಿ ಅಧೈರ್ಯವನ್ನುಂಟು ಮಾಡಕೂಡದು. ಆದರೆ (ಏಕಾಂತವಾಸ ಬಹಳ ಸಹಕಾರಿಯಾಗಿರುತ್ತದೆ. ನಿನ್ನ ಅಂತರ್ಯಾಮಿಯಾದ ಭಗವಂತನು ಸರ್ವಶಕ್ತನೆಂದು ತಿಳಿ. ಸದಾ ಸ್ಮರಣೆ, ಧ್ಯಾನ ಮತ್ತು ಸ್ತೋತ್ರಗಳಿಂದ ಭಗವಂತನ ಸಹಾಯವನ್ನು ಬೇಡು.) ಅವುಗಳಿಂದ ಮನಸ್ಸು ಅಂಕೆಗೆ ಬಂದೇ ತೀರುತ್ತದೆ. ದುರ್ವ್ಯಸನಗಳು ಖಂಡಿತವಾಗಿ ಅದರಿಂದ ತೊಲಗುತ್ತವೆ. (ಭಗವಂತನು ನಿನ್ನ ಹೃದಯದಲ್ಲೇ ಇದ್ದಾನೆಂಬ ಮೂಲತತ್ವವನ್ನು ಮರೆಯಬೇಡ.) ಪ್ರಾರಂಭದಲ್ಲಿನ ಪರಾಜಯಗಳಿಂದ ಧೈರ್ಯಗುಂದಬೇಡ. ನಿನ್ನ ಒಳಗೂ ನಿನ್ನ ಹೊರಗೂ ಭಗವದಿಚ್ಛೆಯಿಂದ ನಡೆಯುವ ಸಮಸ್ತಕ್ಕೂ ಒಪ್ಪಿಕೊಂಡಿರುವುದನ್ನು ಅಭ್ಯಾಸಮಾಡು. ಕೊನೆಗೆ "ನಾನು" ಎಂಬ ಭಾವವನ್ನು ಸಂಪೂರ್ಣವಾಗಿ ತ್ಯಜಿಸುವೆ. (ಭಗವಂತನು ಸರ್ವರಲ್ಲಿಯೂ ಅಂತರ್ಯಾಮಿ. ಸರ್ವವೂ **ಅವನೇ**, ನೀನೂ **ಅವನೂ** ಇಬ್ಬರೂ ಒಂದೇ ಎಂದು ಮನದಟ್ಟಾಗುವುದು.) ತಾಳ್ಮೆಯಿಂದಿರು. ದೈವಸಾಕ್ಷಾತ್ಕಾರಕ್ಕೆ ದಾರಿಯಾದ ಆತ್ಮಸಂಯಮ ಮಾರ್ಗ ಸುಲಭವಲ್ಲ. ಮಧ್ಯೆ ಎಷ್ಟೋ ಅಡಚಣೆಗಳು ಕಷ್ಟಗಳು ಒದಗುತ್ತವೆ. ಕಷ್ಟಗಳನ್ನು ಸಹಿಸಬೇಕು. ಅಡಚಣೆಗಳಿಂದ ಪಾರಾಗಬೇಕು. ಇಷ್ಟು ಭಗವಂತನ ಸಹಾಯದಿಂದಲೇ ಆಗತಕ್ಕದ್ದು. ಏಕಾಗ್ರಚಿತ್ತದಿಂದ ಮಾತ್ರ ಆ ಸಹಾಯ ದೊರೆಯಬಹುದು. ಭಗವನ್ನಾಮದ ಜಪ ಏಕಾಗ್ರಚಿತ್ತವನ್ನು ಪಡೆಯಲು ಸಹಾಯಕವಾಗುತ್ತದೆ" ಎಂದು ವಿಸ್ತಾರವಾಗಿ ವಿವರಿಸಿದನು.

ಸಂನ್ಯಾಸಿ ಮೌನವಾಗಿ ಕೇಳಿದನು: ಪುನಃ ಪ್ರಶ್ನೆಮಾಡಲಿಲ್ಲ. ಇಬ್ಬರೂ ಆಶ್ರಮಕ್ಕೆ ಹಿಂದಿರುಗಿದರು.

### (iv) ರಾಮದಾಸನು ದೇವರ ಶಿಶು

ಕೆಲವು ದಿನಗಳ ನಂತರ ಒಂದು ದಿನ ಅದೇ ಸಂನ್ಯಾಸಿ ರಾಮದಾಸನಬಳಿಗೆ ಬಂದು "ನಿಮಗೆ ಗೊತ್ತಿಲ್ಲವೇ ಸ್ವಾಮಿ ಅಖಂಡಾನಂದಜಿಯವರು ಬಂದಿರುವುದು? ಅವರನ್ನು ನೋಡಿದ್ದೀರಾ?" ಎಂದು ಕೇಳಿದನು. "ನಿನ್ನನ್ನು ನೋಡಿದರೆ ಅವರನ್ನು ನೋಡಿದಹಾಗೆ" ಎಂದು ರಾಮದಾಸನು ಉತ್ತರವಿತ್ತನು.

ಅವನು ಗಂಭೀರ ದೃಷ್ಟಿಯಿಂದ "ಹಾಗಲ್ಲ ಮಹರಾಜ್, ನೀವು ಅವರನ್ನು ನೋಡಬೇಕು. ಆಶ್ರಮಕ್ಕೆ ಕೆಲವೇ ಗಜಗಳ ದೂರದಲ್ಲಿದಾರೆ, ಒಂದು ತೋಪಿನಲ್ಲಿ ಕುಳಿತಿದ್ದಾರೆ. ಅವರಿಗೆ ಯಾವಾಗಲೂ ಅರಣ್ಯದಲ್ಲಿರಲು ಆಸೆ. ಯಾವ ಕಟ್ಟಡ ದಲ್ಲಿರಲೂ ಅವರು ಇಚ್ಛೆಪಡುವುದಿಲ್ಲ. ಅವರು ಪ್ರಸಿದ್ಧ ಮಹಾತ್ಮರು. ನಾಳೆ ಬೆಳಿಗ್ಗೆ ಹೊರಟುಹೋಗುತ್ತಾರೆ. ಈ ದಿವಸ ಅವರ ದರ್ಶನ ಮಾಡದಿದ್ದರೆ, ಒಳ್ಳೆಯ ಸಮಯವನ್ನೇ ಕಳೆದುಕೊಳ್ಳುತ್ತೀರಿ" ಎಂದನು.

"ರಾಮದಾಸನಿಗೆ ದೇವರು ಸರ್ವತ್ರ ಇದ್ದಾನೆ. **ಅವನನ್ನು** ನೋಡುವು ದಕ್ಕಾಗಿ ಯಾವಸ್ಥಳಕ್ಕೂ ಪ್ರತ್ಯೇಕವಾಗಿ ಹೋಗಬೇಕಾಗಿಲ್ಲ" ಎಂದು ರಾಮ ದಾಸನು ಉತ್ತರಕೊಟ್ಟನು.

ಸಂನ್ಯಾಸಿ ಆಶ್ಚರ್ಯದಿಂದ "ಏನು! ಅವರನ್ನು ನೋಡುವುದಕ್ಕೆ ಆಸೆ ಪಡುವುದಿಲ್ಲವೇ? ನೀವು ಅವರನ್ನು ನೋಡಲೇಬೇಕು" ಎಂದು ಒತ್ತಿಹೇಳುತ್ತ ರಾಮದಾಸನ ತೋಳನ್ನು ಹಿಡಿದು, "ಬನ್ನಿ, ನಾನೂ ನಿಮ್ಮ ಜೊತೆಗೆ ಬರುತ್ತೇನೆ" ಎಂದು ಎಳದುಕೊಂಡೇ ಹೋದನು. ಆತನು ಬಹಳ ಬಲಶಾಲಿ. ರಾಮದಾಸನು ಅಡ್ಡಿಮಾಡಲಿಲ್ಲ. ಇವರು ಕೆಲವು ನಿಮಿಷ ನಡೆದು ಎತ್ತರದಲ್ಲಿ ದೊಡ್ಡಮರಗಳ ಕೆಳಗೆ ಅನೇಕ ಸಂನ್ಯಾಸಿಗಳು ಕುಳಿತಿದ್ದ ಸ್ಥಳಕ್ಕೆ ಬಂದರು. ಒಂದು ಮರಕ್ಕೆ ಒರಗಿಕೊಂಡು ಒಂದು ಮಂಚದ ಮೇಲೆ ಕೌಪೀನಧಾರಿಯಾಗಿದ್ದ ಒಬ್ಬ ಸಂನ್ಯಾಸಿ ಕುಳಿತಿದ್ದನು; ಉಳಿದವರೆಲ್ಲ ಸುತ್ತಲೂ ನೆಲದ ಮೇಲೆ ಕುಳಿತಿದ್ದರು.

ರಾಮದಾಸನು ಈ ಸಂನ್ಯಾಸಿಯ ಹತ್ತಿರ ಹೋಗಿ ಅವರ ಪಾದಗಳಿಗೆ ತಲೆ ಯನ್ನಿಟ್ಟು, ಮಂಚದಬಳಿ ನೆಲದಮೇಲೆ ಕುಳಿತುಕೊಂಡನು. ಸಭೆಯ ಮೇಲೆ ಏನೋ ನಿಶ್ಶಬ್ದ ಕವಿದಂತೆ ಕಂಡಿತು. ಕೆಲವು ನಿಮಿಷ ಮೌನವಾಗಿದ್ದಿತು. ನಂತರ ಸ್ವಾಮಿಜಿಯವರು ಮಾತನ್ನು ಮೊದಲುಮಾಡಿದರು.

"ಈತನಿಗೇನಾದರೂ ಪರಿಚ್ಛೇದವಾಗಬೇಕಾದ ಅನುಮಾನಗಳಿವೆಯೇ ಕೇಳಿ" ಎಂದು ಅವರು ಹಿಂದೀಭಾಷೆಯಲ್ಲಿ, ಮಗ್ಗುಲಲ್ಲಿದ್ದ ಗೃಹಸ್ಥ ಶಿಷ್ಯನಿಗೆ ಹೇಳಿದರು. ಅವನು ಇಂಗ್ಲೀಷು ಬಲ್ಲವನು. ಈ ಪ್ರಶ್ನೆಯನ್ನು ಈತನು ಆಂಗ್ಲಭಾಷೆಯಲ್ಲಿ

ಪರಿವರ್ತಿಸಿದನು. ರಾಮದಾಸನಿಗೆ ಹಿಂದೀಭಾಷಾ ಪರಿಶ್ರಮ ಹೆಚ್ಚಾಗಿರಲಿಲ್ಲ, ಆದುದರಿಂದ ಅವನು ಸಹಜವಾಗಿ ಇಂಗ್ಲೀಷಿನಲ್ಲಿ ಉತ್ತರವಿತ್ತನು.

"ರಾಮದಾಸನು ಭಗವಂತನ ಶಿಶು. ಭಗವಂತನು ತನ್ನ ಶಿಶುವಿನ ಸಂಶಯಗಳನ್ನೆಲ್ಲಾ ಆಗಲೇ ದೂರಮಾಡಿದ್ದಾನೆ" ಈ ಉತ್ತರವನ್ನು ಭಕ್ತನು ಹಿಂದೀ ಭಾಷೆಯಲ್ಲಿ ತರ್ಜುಮೆಮಾಡಿ ಸ್ವಾಮಿಗಳಿಗೆ ತಿಳಿಸಿದನು.

"ಹಾಗಾದರೆ ಈತನು ಯಾವ ಸ್ಥಿತಿ ಮುಟ್ಟಿದ್ದಾನೆ?" ಎಂಬ ಸ್ವಾಮಿಗಳ ಪ್ರಶ್ನೆ ಹೊರಬಿದ್ದಿತು.

"ರಾಮದಾಸನ ಸ್ಥಿತಿ ಇಷ್ಟು: ಅವನು ಗಂಗಾನದಿಯಂತೆ: ನದಿ ಸಮುದ್ರವನ್ನು ಮುಟ್ಟಿ ಅದರಲ್ಲಿ ಬೆರತೂ ಅದರ ಕಡೆಗೆ ಓಡುತ್ತಿದೆ" ಎಂದನು ರಾಮದಾಸ.

ಸ್ವಾಮಿಗಳೂ ಇತರರೂ ಈ ಉತ್ತರವನ್ನು ಕೇಳಿದಾಗ ಗುಂಪಿನಲ್ಲಿ ಕಿಲಕಿಲ ನಗು ಹರಿಯಿತು. ಸ್ವಾಮಿಜಿ ಸುಮ್ಮನಿದ್ದರು.

ನಂತರ ಆ ಭಕ್ತನು ತಾನೇ "ಹಾಗಾದರೆ ನೀವು ಇಲ್ಲಿ ಬರಲು ಕಾರಣವೇನು?" ಎಂದು ಸಮಸ್ಯೆಯನ್ನು ಹೂಡಿದನು. ಈ ಪ್ರಶ್ನೆ ಅರ್ಥಗರ್ಭಿತವಾದದ್ದೆ.

"ರಾಮನು ಎಳೆದುಕೊಂಡು ಬಂದುದರಿಂದ ರಾಮದಾಸನು ಇಲ್ಲಿಗೆ ಬಂದನು" ಎಂದು ಹೇಳಿ, ರಾಮದಾಸನು ತನ್ನನ್ನು ಕರೆತಂದ ಸಂನ್ಯಾಸಿಯಕಡೆ ತಿರುಗಿ, ಮುಗುಳ್ನಗೆ ನಕ್ಕನು.

ಸ್ವಾಮಿಜಿ ಶಿಷ್ಯನನ್ನು "ಏನದು?" ಎಂದು ಪ್ರಶ್ನೆ ಕೇಳಿದ್ದಕ್ಕೆ ಆತನು ನಡೆದ ವೃತ್ತಾಂತವನ್ನು ವಿವರಿಸಿದನು. ಸಭೆಯಲ್ಲಿ ಗಟ್ಟಿಯಾಗಿ ನಗೆ ಎದ್ದಿತು.

ಆಮೇಲೆ ರಾಮದಾಸನು ಇದ್ದಂತೆಯೇ ಎದ್ದುನಿಂತು, ಸ್ವಾಮಿಜಿಯವರನ್ನು ಸಾರಿ ವಂದನೆಮಾಡಿ ವೇಗವಾಗಿ ಆಶ್ರಮದ ತನ್ನ ಕೊಟಡಿಗೆ ಓಡಿದನು. ಒಂದು ನಿಮಿಷಕ್ಕೆ ಮುನ್ನ ಅದನ್ನು ಮುಟ್ಟಿದನು.

ಸ್ವಾಮಿರಾಮಾನಂದರು ದಯಾವಂತ ಸರಳಜೀವಿ. ರಾಮದಾಸನನ್ನು ತುಂಬಾ ವಾತ್ಸಲ್ಯದಿಂದ ಆದರಿಸುತ್ತಿದ್ದರು. ರಾಮದಾಸನು ಹೆಚ್ಚುಕಾಲ ಆಶ್ರಮದಲ್ಲಿರುತ್ತಾನೆಂದು ನಂಬಿದ್ದರು. ತಮ್ಮದೇ ಆದ ರೀತಿಯಲ್ಲಿ ರಾಮದಾಸನ ಮೇಲೆ ಕಾವಲಿದ್ದರು. ಅವರಿಗೆ ತಿಳಿದಂತೆ ಆಶ್ರಮವನ್ನು ಬಿಟ್ಟುಹೋಗಲು ಸಾಧ್ಯವಿಲ್ಲವೆಂಬುದು ರಾಮದಾಸನಿಗೆ ಗೊತ್ತಿದ್ದಿತು. ಓಟ ಕೀಳಬೇಕೆಂದು **ರಾಮನು** ಆಜ್ಞೆ ಮಾಡುತ್ತಿದ್ದನು. ಆದರೆ ಹೇಗೆ ಹೋಗುವುದು?

**ರಾಮನೇ** ಈ ಯೋಗವನ್ನು ಒಂದು ದಿವಸ ಒದಗಿಸಿದನು. ಬಿಸಿಲಿನ ತಾಪ ಎಂದಿಗಿಂತ ಬಹಳವಾಗಿದ್ದಿತು. ಮಧ್ಯಾಹ್ನದ ಹೊತ್ತಿನಲ್ಲಿ ವೃದ್ಧರಾದ ಸಂನ್ಯಾಸಿಗಳು ಕೆಲವರಿಗೆ ಸ್ವಲ್ಪ ನಿದ್ರೆಮಾಡುವುದು ವಾಡಿಕೆ. ಈ ದಿನ ಮಾತ್ರ ಬಿಸಿಲಿನ ಬೇಗೆ ತೀಕ್ಷ್ಣವಾಗಿ ವೃದ್ಧರ ಜೊತೆಗೆ ಯೌವನಸ್ಥರನ್ನೂ ನೆಲಕ್ಕೆ ಕೆಡವಿತು. ಮಧ್ಯಾಹ್ನ ಒಂದು ಗಂಟೆಯ ಸಮಯದಲ್ಲಿ ಆ ಹೊರಕಟ್ಟಡ ನಾನಾ ವಿಧವಾದ

ಗೋರಕೆಗಳಿಂದ ತುಂಬಿದ್ದಿತು. ಸ್ವಾಮಿ ರಾಮಾನಂದರ ಗೊರಕೆ ಎಲ್ಲರದಕ್ಕಿಂತಲೂ ಗಟ್ಟಿ.

ಎಚ್ಚರವಾಗಿ ಚಟುವಟಿಕೆಯಾಗಿದ್ದ ರಾಮುದಾಸನು, ಸೋರೆಯ ಬುರುಡೆಯನ್ನು ಹಿಡಿದುಕೊಂಡು, ಉಂಗುಟದ ಮೇಲೆ ಮೆತ್ತಗೆ ನಡೆಯುತ್ತ, ಈಚೆಗೆ ಬಂದು, ಸ್ವಲ್ಪವೂ ಶಬ್ದಮಾಡದೆ ರಸ್ತೆಯನ್ನು ಸೇರಿದನು. ಸಂನ್ಯಾಸಿಗಳೊಬ್ಬರಿಗೂ ಅರಿವಾಗಲಿಲ್ಲ. ರಸ್ತೆಯನ್ನು ಸೇರಿದೊಡನೆಯೇ, ರಾಮುದಾಸನು ಜಾಗ್ರತೆಯಾಗಿ ನಡೆಯಲಾರಂಭಿಸಿದನು. ಬೇಗನೆ ನಡಿಗೆ ಭರದ ಓಟವಾಗಿ ಪರಿಣಮಿಸಿತು. ಒಂದು ಮೈಲಿ ಹೋದನಂತರ ರಾಮುದಾಸನು ಓಡುವುದನ್ನು ನಿಲ್ಲಿಸಿ ವೇಗದ ಹೆಜ್ಜೆಯಲ್ಲಿ ನಡೆಯತೊಡಗಿದನು.

---

## ಅಧ್ಯಾಯ ೧೮

### ಬಾಂದಕಡೆ—ಬಾಂದ

### (i) ಪವಿತ್ರ ಪ್ರೇಮಾಮೃತ ತೀರ್ಥ

ರಾಮುದಾಸನಿಗೆ ಎಲ್ಲಿಗೆ ಆಗಲಿ ಇಂಥ ಕಡೆಗೆ ಹೋಗಬೇಕೆಂಬ ಉದ್ದೇಶವಿರಲಿಲ್ಲ. ಆದಕಾರಣ ಎತ್ತ ಹೋಗುತ್ತಿದ್ದೇನೆಂದು ಅವನು ಚಿಂತಿಸಲಿಲ್ಲ. ಸಾಯಂಕಾಲದ ಹೊತ್ತಿಗೆ ಅವನು ಮತ್ತೆ ಕಾರ್ವಿಗೆ ಬಂದು ಮುಟ್ಟಿದನು. ಮಾರನೆ ದಿನ ಮುಂಜಾನೆ ರೈಲುದಾರಿಯ ಮಾರ್ಗದಲ್ಲಿ, ರೈಲು ಕಂಬಿಗಳ ಪಕ್ಕದ ಚೂಪಾದ ಕಲ್ಲುಗಳ ಹಾಸಿನಮೇಲೆ ಅಡ್ಡಾಡುತ್ತ ನಡೆಯುತ್ತಿದ್ದನು. ಸುಮಾರು ಒಂದು ಮೈಲಿ ಕಳೆದನಂತರ ರೈಲುದಾರಿಗೆ ಅಡ್ಡವಾಗಿ ಒಂದು ರಸ್ತೆ ಕಾಣಿಸಿತು. ಇಲ್ಲಿ ನಿಂತಿದ್ದ ರೈಲುಕಾವಲುಗಾರನು ಕರ್ಕಶ ಧ್ವನಿಯಲ್ಲಿ “ನಿನಗೇನಾಗಿದೆ? ಹುಚ್ಚು ಹಿಡಿದಿದಿಯೆ? ಚೂಪಾದ ಕಲ್ಲುಗಳ ಮೇಲೆ ನಡೆಯುತ್ತಿದ್ದೀಯೆಂದು ನಿನಗೆ ಗೊತ್ತಾಗಿಲ್ಲವೆ? ಆ ರಸ್ತೆಯಲ್ಲಿ ಹೋಗು. ಅದು ನೇರವಾಗಿ ಬಾಂದಕ್ಕೆ ಹೋಗುತ್ತದೆ!” ಎಂದು ರಸ್ತೆಯನ್ನು ತೋರಿಸಿದನು.

ಕಾವಲುಗಾರನ ಸಲಹೆಯಂತೆ ರಾಮುದಾಸನು ರಸ್ತೆಗೆ ಹೋಗಿ ಪ್ರಯಾಣವನ್ನು ಮುಂದರಿಸಿದನು. ಮಧ್ಯಾಹ್ನದ ಹೊತ್ತಿಗೆ ಅವನು ಒಂದು ಸಣ್ಣ ಹಳ್ಳಿಯನ್ನು ಸೇರಿದನು. ಅದರಲ್ಲಿ ರಸ್ತೆಯ ಪಕ್ಕದಲ್ಲಿ ಕೆಲವು ಅಂಗಡಿಗಳಿದ್ದವು. ಒಬ್ಬ ಅಂಗಡಿಯವನು ಅವನನ್ನು ಕರೆದನು. ರಾಮುದಾಸನು ಅಂಗಡಿಯೊಳಕ್ಕೆ ಹೋಗಿ ಒಂದು ಚಾಪೆಯ ಮೇಲೆ ಕುಳಿತನು. ಒಳಗೆ ಹೋದಾಗ ಮೊದಲು ಕಣ್ಣಿಗೆ ಬಿದ್ದುದು, ಗೋಡೆಯ ಮೇಲೆ ಹೂವಿನಹಾರದಿಂದಲಂಕರಿಸಲ್ಪಟ್ಟಿದ್ದ, ಕಟ್ಟು ಹಾಕಿದ ಕಾಳಿಯ ಪಟ ಒಂದು.

ಎದುರಿಗೆ ಹಲವರು ಕುಳಿತು ಸಣ್ಣ ತಗಡಿನ ಬಟ್ಟಲುಗಳಲ್ಲಿ ಸ್ವಚ್ಛವಾದ ಒಂದು ದ್ರವವನ್ನು ಕುಡಿಯುತ್ತಿದ್ದರು. ಅದು ಮದ್ಯ ಎಂಬುದು, ಅದರ ಕಟುವಾದ ವಾಸನೆಯಿಂದಲೇ ತಿಳಿಯುವಂತಿದ್ದಿತು. ಆಹ! ರಾಮದಾಸನು ಸಾರಾಯಿ ಅಂಗಡಿಗೆ ಬಂದಿದ್ದನು! ಇಲ್ಲಿ ಗಾಂಜಾ ಸಹ ಮಾರಾಟಕ್ಕಿದ್ದಿತು. ಏಕೆಂದರೆ ಇನ್ನೊಂದು ಪಕ್ಕದಲ್ಲಿ ಒಬ್ಬನು ಕೊಂಡಿದ್ದ ಗಾಂಜಾವನ್ನು ಸೇದುವುದಕ್ಕೆ ಅಣಿ ಮಾಡುತ್ತಿದ್ದನು.

ಅಂಗಡಿಯವನು ಕೂಡ ಗಾಂಜಾ ಚಿಲುಮೆಯನ್ನು ಸಿದ್ಧಮಾಡಿ ಹಚ್ಚಿ ರಾಮ ದಾಸನಿಗೆ ನೀಡಿದನು. ಪ್ರತಿಯೊಬ್ಬ ಸಾಧುವೂ ಗಾಂಜಾಸೇವನೆ ಮಾಡತಕ್ಕವನು ಎನ್ನುವುದು ಸ್ವತಸ್ಸಿದ್ಧವಾಗಿದ್ದಿತು. ರಾಮದಾಸನಿಗೆ ಚಿಲುಮೆಯನ್ನು ಸೇದುವ ಅಭ್ಯಾಸವಿರಲಿಲ್ಲ. ಅವನು ಅಂಗಡಿಯವನಿಗೆ ಈ ಸಂಗತಿಯನ್ನು ತಿಳಿಸಿ ಕ್ಷಮಾಪಣೆ ಬೇಡಿದನು.

"ಚಿಲುಮೆಯನ್ನು ಉಪಯೋಗಿಸುವ ವಿಧಾನವನ್ನು ನಾನು ಹೇಳಿಕೊಡು ತ್ತೇನೆ" ಎಂದು ಆತನು ಪ್ರೀತಿಯಿಂದ ಹೇಳಿದನು; ಒಂದು ನಿಮಿಷದೊಳಗೆ ರಾಮ ದಾಸನಿಗೆ ಪಾಠ ಮುಗಿಯಿತು. ಅವನು ಕೆಲವು ದಮ್ಮುಗಳನ್ನೆಳೆದನು.

ಒಂದು ಗಂಟೆಯನಂತರ, ದಯಾಳುವಾದ ಆ ಅಂಗಡಿಯವನು ರಾಮದಾಸ ನಿಗೆ ಊಟವನ್ನು ಕೊಡಿಸಿದನು. ರಾಮದಾಸನು ಮೂರು ಗಂಟೆಯ ಹೊತ್ತಿಗೆ ಆ ಹಳ್ಳಿಯನ್ನು ಬಿಟ್ಟು ಮುಂದೆ ಸಾಗಿ, ಸಾಯಂಕಾಲದ ಹೊತ್ತಿಗೆ ಒಂದು ಸಣ್ಣ ಕೊಪ್ಪಲನ್ನು ಮುಟ್ಟಿದನು. ರಸ್ತೆಯ ಪಕ್ಕದಲ್ಲಿ ಮರಗಳ ಕೆಳಗೆ ಸುತ್ತ ಎತ್ತರ ವಾದ ಕಲ್ಲು ಬೆಂಚುಗಳಿದ್ದ ಅಂಗಳ ಒಂದಿದ್ದಿತು. ರಾಮದಾಸನು ಬೆಂಚು ಒಂದರ ಮೇಲೆ ಕುಳಿತುಕೊಂಡನು.

ರಾಮದಾಸನಿಗೆ ಸಾಧಾರಣವಾಗಿ ಒಂದು ಹೊತ್ತಿನ ಊಟವೇ ಸಾಕಾಗು ತ್ತಿದ್ದಿತು. ರಾತ್ರಿ ಹಸಿವಾಗುತ್ತಿರಲಿಲ್ಲ. ಆದರೆ ಈ ರಾತ್ರಿ ಸ್ಪಷ್ಟವಾಗಿ ಹಸಿವು ಕಾಣಿ ಸಿತು. ಗಾಂಜಾ ಸೇವನೆಯಿಂದ ಬೇರೆ ಯಾವ ಬದಲಾವಣೆಗಳಾಗದಿದ್ದರೂ ಹಸಿವಾಯಿತು, ಈ ವಿಚಾರವನ್ನು ಹೇಳಿಕೊಂಡನು. ಯಾರಿಗೆ? ರಾಮನಲ್ಲದೆ ಮತ್ತಾರಿಗೆ?

ಐದು ನಿಮಿಷ ಇನ್ನೂ ಕಳೆದಿರಲಿಲ್ಲ. ಆಗಲೇ, ಸುಮಾರು ಹದಿನಾಲ್ಕು ವರ್ಷದ ಹುಡುಗನೊಬ್ಬನು ಓಡಿ ಬಂದು, ಚಪ್ಪಡಿಯ ಮೇಲಕ್ಕೆ ಹಾರಿ ರಾಮದಾಸನ ಮಗ್ಗುಲಿಗೆ ಬಂದು "ನಿಮಗೆ ಊಟಮಾಡಿಸಬೇಕೆಂದಿದ್ದೇನೆ? ಏನು ತೆಗೆದುಕೊಳ್ಳು ತ್ತೀರಿ?" ಎಂದು ಕೇಳಿದನು.

"ಹಾಲು ಅನ್ನ" ಎಂದು ರಾಮದಾಸನು ಉತ್ತರವಿತ್ತನು.

ಈ ಸಂಗತಿಯಿಂದ ರಾಮದಾಸನಿಗೆ ಆಶ್ಚರ್ಯವಾಗಲಿಲ್ಲ. ರಾಮದಾಸನ ಜೀವನ ಇಂತಹ ಆಶ್ಚರ್ಯಕರವಾದ ಸನ್ನಿವೇಶಗಳಿಂದ ತುಂಬಿದ್ದಿತು. ರಾಮನ

ಪಾಲಕ ಹಸ್ತ ರಾಮದಾಸನಿಗೆ ಎಲ್ಲೆಡೆಯಲ್ಲಿಯೂ ಕಂಡುಬರುತ್ತಿದ್ದಿತು. ಹುಡುಗನು ಹೊರಟುಹೋಗಿ ಸುಮಾರು ಎರಡು ಗಂಟೆಯನಂತರ ಬಂದು, ರಾಮದಾಸನನ್ನು ತನ್ನ ಗುಡಿಸಿಲಿಗೆ ಕರೆದುಕೊಂಡು ಹೋದನು. ಆತನ ತಾಯಿ ರಾಮದಾಸನಿಗೆ ಪ್ರೀತಿಯಿಂದ ಹಾಲು ಅನ್ನ ಭೋಜನ ಮಾಡಿಸಿದಳು. ಊಟ ಪೂರೈಸಿದ ನಂತರ ರಾಮದಾಸನು ಕಲ್ಲುಚಪ್ಪಡಿಯ ತನ್ನ ಪೀಠವನ್ನು ಸಾರಿದನು.

ರಾತ್ರಿ ಕಳೆಯಿತು. ಬೆಳಗ್ಗೆ ಅವನು ಮತ್ತೆ ಪ್ರಯಾಣ ಮಾಡಿದನು. ಮಧ್ಯಾಹ್ನವಾಯಿತು. ನಿಶ್ಚಲವಾದ ಗಾಳಿ ಕಾದು ಸುಡುತ್ತಿದ್ದಿತು. ರಾಮದಾಸನು ಬರಿಯಕಾಲಿನಲ್ಲಿ ಬರಿಯತಲೆಯಲ್ಲಿ ನಡಿಯುತ್ತಿದ್ದನು. ರಾಮದಾಸನಿಗೆ ಈ ಕಷ್ಟವನ್ನನುಭವಿಸುವುದು ಸಂತೋಷಕರವಾಗಿದ್ದಿತು. ದೇಹಸೌಖ್ಯದ ವಿಷಯದಲ್ಲಿ ಅವನಿಗಿದ್ದ ತೀವ್ರ ಅನಾದರಣೆ ಪ್ರತಿಯೊಂದು ಉದ್ವೇಗವನ್ನೂ ಆನಂದವಾಗಿ ಪರಿವರ್ತಿಸಿದ್ದಿತು. ಸೂರ್ಯನ ಜ್ವಾಲೆಯ ವೈಭವದಲ್ಲಿ ಮೀಯುತ್ತ ಅವನು ನಡೆದನು. ಆಗ ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ಬಂಡಿಯವನು ಕೂಗಿ ಹೇಳಿದನು.

"ಮಹರಾಜ್, ಬಿಸಿಲು ಬಹಳವಾಗಿದೆ. ಒಂದು ಫರ್ಲಾಂಗ್ ದೂರದಲ್ಲಿ, ಎಡಗಡೆ ಸಾಧು ರಾಮದಾಸಜಿಯವರ ಆಶ್ರಮವಿದೆ. ಅಲ್ಲಿಗೆ ಹೋಗಿ"

ಗಾಡಿಯವನು ತೋರಿಸಿದ ದಾರಿಯಲ್ಲಿ ತಿರುಗಿ ರಾಮದಾಸನು ಆಶ್ರಮವನ್ನು ಕುರಿತು ನಡೆದನು. ಅಲ್ಲಿ ಅವನು ಒಬ್ಬ ಬಹು ವೃದ್ಧ ಸಾಧುವನ್ನು ಕಂಡನು. ಆತನು ದಯಾಳು ಸ್ನೇಹಪರನು. ರಾಮದಾಸನು ಬಾವಿಯಲ್ಲಿ ಸ್ನಾನಮಾಡಿ, ಇಲ್ಲಿ ದೊರೆತ ಸಾಧಾರಣ ಊಟವನ್ನುಂಡು, ಅಲ್ಲಾಡುತ್ತಿದ್ದ ಒಂದು ಕಲ್ಲು ಬೆಂಚಿನ ಮೇಲೆ ಒಂದು ಗಂಟೆ ವಿಶ್ರಮಿಸಿಕೊಂಡು, ಮತ್ತೆ ಪ್ರಯಾಣಮಾಡಿದನು. ಅಸ್ತಮಯಸಮಯಕ್ಕೆ ಅವನು ಒಂದು ಕಾಡಿನಲ್ಲಿದ್ದನು. ರಾತ್ರಿಯ ಹೊತ್ತು ಕಾಡಿನಲ್ಲಿ ಒಂಟಿಯಾಗಿರುವಾಗ ರಾಮದಾಸನಿಗೆ ಯಾವಾಗಲೂ ಒಂದು ಬಗೆಯ ಉಲ್ಲಾಸ ಉಂಟಾಗುತ್ತಿದ್ದಿತು. ಆ ರಾತ್ರಿಯನ್ನು ಕಳೆಯಲು ಅವನು ಒಂದು ದೊಡ್ಡಮರದ ಬುಡವನ್ನು ಸೇರಿದನು. ಪರಟು ನೆಲದಮೇಲೆ ಮಲಗಿಕೊಂಡನು. ಐದು ನಿಮಿಷಗಳೊಳಗೆ ಮೇಲಿಂದ ಹಕ್ಕಿಗಳ ಮಲಮೂತ್ರಗಳಿಂದ ರಾಮದಾಸನಿಗೆ ಅಭಿಷೇಕವಾಯಿತು. ಅನಂತರ ಅವನು ಸ್ವಲ್ಪದೂರ ಹೋಗಿ ಮೈದಾನದಲ್ಲಿ ಮೆತ್ತಗಿದ್ದ ಹುಲ್ಲಿನ ಮೇಲೆ ಮಲಗಿದನು.

ಚಂದ್ರನು ಉದಯಿಸಿದ್ದನು. ಅವನ ಶೀತಲ ಕಿರಣಗಳು ಕಾಡನ್ನು ಬೆಳಗಿದವು. ಎಲೆ ಕೊಂಬೆಗಳ ಸಂದಿಯಲ್ಲಿ ತೂರಿ ನೆಲದಮೇಲೆ ಬಿದ್ದ ಬೆಳಕು ನಾನಾ ಆಕೃತಿಯ ಚಿತ್ರಗಳನ್ನು ಮಾಡಿತು. ಕಾಡು ವಿವಿಧವಾದ ಒಡಲ ರತ್ನಕಂಬಳಿಯನ್ನು ಹಾಸಿದ್ದಂತೆ ಕಾಣುತ್ತಿದ್ದಿತು. ಗಾಳಿ ತಂಪಾಗಿದ್ದಿತು; ಮಂದಮಾರುತ ಬೀಸುತ್ತಿದ್ದಿತು. ಆಗಾಗ್ಗೆ ಕಪಟಗಳು ರೆಂಬೆಯಿಂದ ರೆಂಬೆಗೆ ಹಾರುತ್ತಿದ್ದ ಶಬ್ದವೂ, ದೂರದಲ್ಲಿ ಇರುಳಸಂವಾದನನ್ನು ನಡೆಸುತ್ತಿದ್ದ ಗೂಬೆಗಳ ಘೂಕಾರಧ್ವನಿಯೂ

ನಿಶಿಯ ಮೌನವನ್ನು ಭೇದಿಸುತ್ತಿದ್ದುವು. ರಾತ್ರಿ ಜಾಗರಣೆ ಆನಂದಗಳಲ್ಲಿ ಕಳೆಯಿತು.

ಮರುದಿನವೂ ಮಧ್ಯಾಹ್ನದ ಹೊತ್ತಿನಲ್ಲಿ ಒಬ್ಬ ಗಾಡಿಯವನು ರಾಮದಾಸನನ್ನು ನಿಲ್ಲಿಸಿ, ಹತ್ತಿರವಿದ್ದ ದೇವಸ್ಥಾನಕ್ಕೆ ಹೋಗಲು ತಿಳಿಸಿ, ಇದರೊಳಗೆ ವಾಸಿಸುತ್ತಿದ್ದ ಕಾಮ್ತಾನಾಥನೆಂಬ ಸಾಧುವಿನ ದರ್ಶನ ಪಡೆಯುವುದು ಒಳ್ಳೆಯದೆಂದು ಹೇಳಿದನು. ಆಗ ಸುಮಾರು ಮಧ್ಯಾಹ್ನ ಕಳೆದು ಒಂದು ಗಂಟೆಯ ಸಮಯ. ದೇವಸ್ಥಾನ ರಸ್ತೆಗೆ ಸುಮಾರು ಐವತ್ತು ಗಜಗಳ ದೂರದಲ್ಲಿದ್ದಿತು. ರಾಮದಾಸನು ದೇವಸ್ಥಾನದೊಳಗೆ ಹೊಕ್ಕನು. ಒಳಗೆ ಎಲ್ಲ ಸಂಪೂರ್ಣನಿಶ್ಶಬ್ದ. ಮಂಚದಮೇಲೆ ಮಲಗಿ ಗೊರಕೆ ಹೊಡೆಯುತ್ತಿದ್ದ ಒಬ್ಬ ಸಾಧು ಹೊರತು ಯಾರೂ ಇರಲಿಲ್ಲ. ರಾಮದಾಸನು ಶಬ್ದಮಾಡದೆ ಸಾಧುವಿನಿಂದ ಸ್ವಲ್ಪ ದೂರದಲ್ಲಿ ಕುಳಿತನು. ಸಾಧು ಬೆಚ್ಚಿ ಎಚ್ಚತ್ತು, ರಾಮದಾಸನನ್ನು ನೋಡಿದನು. ಅವನನ್ನು ಹತ್ತಿರಕ್ಕೆ ಕರೆದು, ಅವನ ಮುಖದ ಮೇಲೂ ತೋಳಿನ ಮೇಲೂ ಹರಿಯುತ್ತಿದ್ದ ಬೆವರನ್ನು ತನ್ನ ವಸ್ತ್ರದಿಂದ ಒರಸಿದನು. ಮುಗುಳುನಗೆ ಸೂಸುತ್ತ "ನಿಮಗೆ ಕೊಡಲು ಯಾವ ಆಹಾರವೂ ಇಲ್ಲ. ಈಗ ಬರಿಯ ನೀರಿನಿಂದಲೇ ನೀವು ತೃಪ್ತರಾಗಬೇಕು. ರಾತ್ರಿಗೆ ಸರಿಯಾದ ಭೋಜನ ಮಾಡಿಸುತ್ತೇನೆ" ಎಂದನು.

ರಾಮದಾಸನು ನಗುತ್ತಾ, "ಮಹರಾಜ್, ಬರಿಯನೀರೇ ಸಾಕು !" ಎಂದು ಉತ್ತರಕೊಟ್ಟನು.

ಸಾಧು ಆಮೇಲೆ "ಹೋಗಿ, ಸ್ನಾನಮಾಡಿ" ಎಂದನು.

ರಾಮದಾಸನು ಬಾವಿಯಲ್ಲಿ ಸ್ನಾನಮಾಡಿ ಬಂದನು. ಸಾಧು, ರಾಮದಾಸನನ್ನು ಕೈಹಿಡಿದು ಕರೆದುಕೊಂಡು ಸ್ವಲ್ಪ ಅತಿಯಾಗಿ ಅಲಂಕರಿಸಿದ್ದ ವಿಗ್ರಹಗಳಿರುವ ಗರ್ಭಾಂಕಣಕ್ಕೆ ಒಯ್ದನು. ನಂತರ ಇಕ್ಕಟ್ಟಾದ ಓಣಿಗೆ ಕರೆದುಕೊಂಡು ಹೋಗಿ ಒಂದು ಚಾಪೆಯ ಮೇಲೆ ಅವನನ್ನು ಕುಳ್ಳಿರಿಸಿದನು. ಒಳಗಿನ ಕೊಟಡಿಯೊಂದಕ್ಕೆ ಹೋಗಿ, ಒಂದು ಬಟ್ಟಲು ತೊವ್ವೆಯನ್ನೂ, ದಪ್ಪನಾದ ಒಂದು ರೊಟ್ಟಿಯನ್ನೂ ತಂದನು. ರಾಮದಾಸನ ಮಗ್ಗುಲಲ್ಲಿ ಕುಳಿತು, ರೊಟ್ಟಿಯನ್ನು ತೊವ್ವೆಯಲ್ಲಿ ನೆನಸಿ, ಒಂದು ಚೂರನ್ನು ಇದ್ದದಿದ್ದಂತೆ ರಾಮದಾಸನ ಬಾಯಿಯೊಳಕ್ಕೆ ತುರುಕಿದನು. ರಾಮನು ರಾಮದಾಸನಿಗೆ ಭೋಜನ ಮಾಡಿಸುವ ಪದ್ಧತಿಯೇ ವಿಚಿತ್ರವಾಗಿದೆ! ರೊಟ್ಟಿಯ ಚೂರನ್ನು ನುಂಗಿದಂತೆಲ್ಲಾ ಒಂದಾಗುತ್ತಲು ಮತ್ತೊಂದರಂತೆ ರೊಟ್ಟಿಯ ಚೂರನ್ನು ಸಾಧು ಇವನ ಬಾಯಿಗೆ ತುಂಬಿದನು. ರಾಮದಾಸನಿಗೆ ಮೂಗುಮಟ್ಟ ತೃಪ್ತಿಯಾಯಿತು. ಹೊರಗೆ ಬಂದು ಇಬ್ಬರೂ ಮಂಚದಮೇಲೆ ಕುಳಿತುಕೊಂಡರು. ಸಾಧುವಿನ ತೋಳು ರಾಮದಾಸನ ಕೊರಳನ್ನು ಅಪ್ಪಿದ್ದಿತು. ಆ ಸಾಧು ಪ್ರೀತಿಯಿಂದ ತೀರಾ ತುಳುಕುತ್ತಿದ್ದನು.

"ನೀವು ಕೆಲವು ದಿವಸಗಳಾದರೂ ಇಲ್ಲಿ ನಿಲ್ಲಬೇಕು. ಒಲ್ಲೆರಾ?" ಎಂದು ಅವನು ಕೇಳಿದನು.

"ಇಲ್ಲ. ಮಹಾರಾಜ್, ರಾಮದಾಸನು ಈಗಲೆ ಹೊರಡುವವನು" ಎಂದು ರಾಮದಾಸನು ಬೇಡಿಕೆಯ ದನಿಯಲ್ಲಿ ಉತ್ತರವಿತ್ತನು.

ಸಾಧು ತುಟಿಗಳನ್ನು ಅವುಕಿಕೊಂಡು "ಇಲ್ಲಿಂದ ಹೊರಡಲು ನಿಮ್ಮನ್ನು ಬಿಡುವುದಿಲ್ಲ. ನಾಲ್ಕೈದು ದಿನಗಳಾದರೂ ನೀವು ನನ್ನ ಸಂಗಡ ಇರಬೇಕೆಂದು ನನ್ನ ಆಸೆ" ಎಂದನು.

ಆತನೊಂದಿಗೆ ಚರ್ಚೆಮಾಡುವುದು ಉಪಯೋಗವಿಲ್ಲವೆಂದು ಕಂಡು ರಾಮ ದಾಸನು ಮೌನವಾಗಿದ್ದನು.

"ಬಿಸಿಲಿನ ತಾಪ ಹೆಚ್ಚಾಗಿದೆ. ಸ್ವಲ್ಪ ನಿದ್ರೆಮಾಡಿ" ಎಂದು ಹೇಳಿ ಸಾಧು ಕಾಲುನೀಡಿಕೊಂಡು ಮಲಗಿ ನಿದ್ರಿಸಿದನು.

ಕೆಲವು ನಿಮಿಷಗಳು ಕಾದು, ಸಾಧುವಿಗೆ ಗಾಢನಿದ್ರೆ ಬಂದಿರುವುದನ್ನು ನೋಡಿ, ರಾಮದಾಸನು ಮೆಲ್ಲಗೆ ಎದ್ದು, ಪಿಳಿಕೋಟೆ ಆಶ್ರಮದಲ್ಲಿ ಮಾಡಿದಂತೆಯೇ, ಶಬ್ದ ಮಾಡದೆ ಉಂಗುಟದ ಮೇಲೆ ಮೆತ್ತಗೆ ಹೆಜ್ಜೆ ಇಡುತ್ತ, ದೇವಸ್ಥಾನದ ಹೊರಗೆ ಬಂದನು. ಕಾಲುದಾರಿಯನ್ನು ಸೇರಿದೊಡನೆ ವೇಗವಾಗಿ ಓಡಿ ರಸ್ತೆಯನ್ನು ಸೇರಿ ದನು. ಮುಂದೆ ಕೆಲವು ಮೈಲಿ ಪ್ರಯಾಣ ಮಾಡಿದ ಮೇಲೆ ಒಂದು ಎತ್ತಿನ ಬಂಡಿ ಸಿಕ್ಕಿತು. ರಾಮದಾಸನನ್ನು ಕಾಣುತ್ತಲೆ ಒಬ್ಬ ಮನುಷ್ಯ ಬಂಡಿಯಿಂದ ಧುಮಿಕಿ ಹತ್ತಿ ರಕ್ಕೆ ಬಂದು, "ಮಹರಾಜ್, ದಯವಿಟ್ಟು ನನ್ನ ಗಾಡಿಯಲ್ಲಿ ಕುಳಿತುಕೊಳ್ಳಿರಿ. ಈ ಉರಿ ಬಿಸಿಲಿನಲ್ಲಿ ಸುಡುತ್ತಿರುವ ನೆಲದಮೇಲೆ ನೀವು ನಡೆಯುವುದನ್ನು ನಾನು ನೋಡಿ ಸಹಿಸಲಾರೆ" ಎಂದು ಬೇಡಿಕೊಂಡನು.

ರಾಮದಾಸನು ತಾನು ಬಾಂದಕ್ಕೆ ಹೋಗುವುದಾಗಿಯೂ ತನ್ನ ಹಾದಿ ಪ್ರತ್ಯೇಕ ವೆಂದೂ ತಿಳಿಸಿದನು.

"ಹಾಗಾದರೆ ಈ ದುಡ್ಡನ್ನು ತೆಗೆದುಕೊಳ್ಳಿರಿ. ಕೇವಲ ಒಂದೂವರೆ ಆಣೆ ಮಾತ್ರವಿದೆ. ಹತ್ತಿರದಲ್ಲಿಯೇ ಇರುವ ರೈಲ್ವೆ ಸ್ಟೇಷನ್ನಿನಿಂದ ಬಾಂದದವರೆಗೆ ಇದು ಛಾರ್ಜು. ಇನ್ನು ಕೆಲವು ನಿಮಿಷಗಳೊಳಗೆ ಒಂದು ರೈಲು ಬರುತ್ತದೆ. ದಯವಿಟ್ಟು ಅದರಲ್ಲಿ ಪ್ರಯಾಣಮಾಡಿ" ಎಂದು ಹೇಳಿ ಗಾಡಿಯವನು ರಾಮದಾಸನಿಗೆ ಆ ದುಡ್ಡನ್ನು ಬಲವಂತಮಾಡಿ ಕೊಟ್ಟನು.

ರಾಮದಾಸನು ಆ ಸಣ್ಣ ಸ್ಟೇಷನ್ನಿಗೆ ಹೋದನು. ವಿಚಾರಿಸಿದ್ದರಲ್ಲಿ ಟಿಕೆಟ್ಟಿಗೆ ಎರಡಾಣೆ ಬೇಕೆಂದು ತಿಳಿಯಿತು. ಅವನು ಸ್ಟೇಷನ್ನಿನಿಂದ ಹೊರಗೆ ಬಂದು ನಡೆದುಕೊಂಡೇ ಮುಂದರಿದು ಸೂರ್ಯಾಸ್ತಕ್ಕೆ ಮುಂಚೆ ಬಾಂದದ ಗಡಿಯನ್ನು ಸೇರಿದನು. ರಸ್ತೆಯಪಕ್ಕದಲ್ಲಿ ಒಂದು ಮರದಡಿ ಒಬ್ಬ ಮಾತೆಯ ಗರಿ ಗುಡಿಸಿಲಿದ್ದಿತು. ಆಕೆ ಅದರಲ್ಲಿ ದೊಡ್ಡದೊಡ್ಡ ಮಡಕೆಗಳಲ್ಲಿ ಕುಡಿಯುವ ನೀರನ್ನು ತುಂಬಿಟ್ಟು

ಕೊಂಡು ಅಲ್ಲಿ ಹೋಗುವ ದಾಹಗೊಂಡ ಪ್ರಯಾಣಿಕರಿಗೆ ಧರ್ಮಕ್ಕಾಗಿ ದಾಹಶಾಂತಿ ಪಡಿಸುತ್ತಿದ್ದಳು.

ರಾಮುದಾಸನನ್ನುಕಂಡು ಆಕೆ "ಮಹಾತ್ಮಜಿ! ಮಹಾತ್ಮಜಿ! ಇಲ್ಲಿ ದಯ ಮಾಡಿ. ಈ ನನ್ನ ದೀನ ಕುಟೀರದಲ್ಲಿ ಸ್ವಲ್ಪ ವಿಶ್ರಮಿಸಿಕೊಳ್ಳಿ" ಎಂದು ಕರೆದಳು. ರಾಮುದಾಸನು ಅವಳ ಕರೆಯನ್ನು ಮನ್ನಿಸಿದನು.

ಕರುಣಾಳುವಾದ ಆ ಮಾತೆ ರಾಮುದಾಸನನ್ನು ಬೆಂಚಿನಮೇಲೆ ಕುಳ್ಳಿರಿಸಿ, ಮಡಕೆಯ ತಂಪಾದ ನೀರಿನಿಂದ ರಾಮುದಾಸನ ಕಾಲುಗಳನ್ನು ಮೊಣಕಾಲವರೆಗೂ ತೊಳೆದಳು. ಅಲ್ಲದೆ ರಾಮುದಾಸನು ಆಕೆ ಕೊಟ್ಟ ನೀರನ್ನು ಪಾನಮಾಡಿದನು. ಆ ತೀರ್ಥ ಪವಿತ್ರ ಪ್ರೇಮದ ಅಮೃತವಾಗಿದ್ದಿತು.

## (ii) ಯೋದ್ಧಸಾಧು.

ರಾಮುದಾಸನು ಚಾಂದದ ಅಂಗಡಿ ಸಾಲಿನಲ್ಲಿ ಜನಸಂದಣಿಯಲ್ಲಿ ಹೋಗು ತ್ತಿದ್ದಾಗ ಒಬ್ಬ ವರ್ತಕನು ತನ್ನ ಅಂಗಡಿಯಿಂದ ಅವನನ್ನು ಕರೆದು "ಮಹರಾಜ್, ಊರಿಗೆ ಸ್ವಲ್ಪವೇ ದೂರದಲ್ಲಿ ಒಂದು ನಿರ್ಜನ ಪ್ರದೇಶದಲ್ಲಿ ವಿಶುದ್ಧಾನಂದರೆಂಬ ಸಾಧುಗಳಿದ್ದಾರೆ. ಈ ಸ್ಥಳಕ್ಕೆ ಬುದ್ಧರಾಮಕುವ ಎಂದು ಹೆಸರು. ಅವರು ಪರಿ ಶುದ್ಧರಾದ ಸಾಧು. ಅವರಲ್ಲಿಗೆ ಹೋಗಿ" ಎಂದು ಹೇಳಿ ಒಂದು ಸಂದಿಯಲ್ಲಿ ದಾರಿಯನ್ನು ತೋರಿಸಿದನು.

ರಾಮುದಾಸನು, ಆತನು ತೋರಿಸಿದ ದಾರಿಯಲ್ಲಿ ಹೊರಟನು. ಮುಂದೆ ಹೋಗುವಾಗ ಬೀದಿಗಳ ಗೊಂದಲದಲ್ಲಿ ಅವನಿಗೆ ದಾರಿ ತಪ್ಪಿತು. ಒಬ್ಬ ದಾರಿ ಹೋಕನನ್ನು ಕೇಳಲಾಗಿ ಆತನು ರಾಮುದಾಸನನ್ನು ಅಲ್ಲಿಗೆ ಕರೆದುಕೊಂಡು ಹೋಗು ವುದಾಗಿ ಹೇಳಿದನು. ರಾಮುದಾಸನು ಅವನನ್ನು ಹಿಂಬಾಲಿಸಿದನು. ಇವರು ಒಂದು ಬೆಟ್ಟದ ಬುಡದಲ್ಲಿಯ ಮಹದೇವನ ದೇವಸ್ಥಾನವನ್ನು ಮುಟ್ಟಿ, ಒಂದು ಎತ್ತರವಾದ ಮಹಾದ್ವಾರವನ್ನು ಪ್ರವೇಶಿಸಿ ಬೆಟ್ಟವನ್ನು ಹತ್ತಿದರು. ಕೆಲವು ಗಜಗಳನ್ನು ಅಂಬೆ ಗಾಲಿಟ್ಟುಕೊಂಡು ಹತ್ತಬೇಕಾಯಿತು. ಈಗ ಇವರು ಒಂದು ಅಗಲವಾದ ತಟ್ಟೆ ಯಾದ ಗುಹೆಯ ಮುಂಗಡೆಯ ಅಂಗಳಕ್ಕೆ ಬಂದರು. ಇಲ್ಲಿ ಅನೇಕರು ನೆಲದ ಮೇಲೆ ಕುಳಿತಿದ್ದರು. ಕೌಪೀನಧಾರಿಯಾದ ಚಿಕ್ಕ ವಯಸ್ಸಿನ ಸಾಧು ಒಬ್ಬನು ಗುಹೆಯ ಬಾಗಿಲ ಹತ್ತಿರ ಕಟ್ಟುತ್ತಿದ್ದ ಅಗ್ನಿಕುಂಡವನ್ನು ಪರಿಶೀಲಿಸುತ್ತನಿಂತಿದ್ದನು.

ರಾಮುದಾಸನನ್ನು ಕಂಡು ಆತನು ಒಂದು ಗೋಣಿಯ ಚೀಲವನ್ನು ತಂದು ಹಾಸಿದನು. ರಾಮುದಾಸನು ಅದರ ಮೇಲೆ ಕುಳಿತನು. ಸಾಧುವಿನ ದೃಷ್ಟಿ ಗುಂಪಿ ನಲ್ಲಿದ್ದ ಒಬ್ಬನ ಮೇಲೆ ಬಿದ್ದಿತು. ಸಾಧು ಕೂಡಲೆ ಕೋಪಗೊಂಡು ಅವನನ್ನು ಕೆಟ್ಟಮಾತುಗಳಿಂದ ಬೈದನು. ತನ್ನನ್ನು ಕರೆತಂದವನನ್ನು ರಾಮುದಾಸನು "ಇವರೇ ವಿಶುದ್ಧಾನಂದರು?" ಎಂದು ಪ್ರಶ್ನಿಸಿದನು.

ಜೊತೆಗಾರನು "ಅಲ್ಲ, ಈತನು ಬಾಲಕ್‌ರಾಮ ಪರಮಹಂಸ. ವಿಶುದ್ಧಾನಂದರು ಇನ್ನೂ ಒಂದು ಮೈಲಿ ದೂರದಲ್ಲಿ ವಾಸಿಸುತ್ತಾರೆ" ಎಂದು ಹೇಳಿದನು.

ರಾಮದಾಸನು ಅವನನ್ನು "ರಾಮದಾಸನನ್ನು ಅವರಲ್ಲಿಗೆ ಕರೆದುಕೊಂಡು ಹೋಗಬಲ್ಲೆಯಾ?" ಎಂದು ಕೇಳಿದನು.

ಅವನು "ಆಗಬಹುದು" ಎಂದು ಉತ್ತರ ಕೊಟ್ಟನು.

ಈ ಸಂಭಾಷಣೆಯ ಕೊನೆಯಭಾಗ ಕೋಪಿಷ್ಠ ಸಾಧುವಿನ ಕಿವಿಗೆ ಬಿದ್ದು, ಆತನ ಕೋಪವನ್ನು ಹೆಚ್ಚಿಸುವುದಕ್ಕೆ ಕಾರಣವಾಯಿತು. ಆತನು ರಾಮದಾಸನ ಜೊತೆಗಾರನ ಮೇಲೆ ತನ್ನ ಕೋಪವನ್ನು ಸುರಿಸಿದನು.

"ಏನು! ನೀನು ಸಾಧುವನ್ನು ಬೇರೆ ಕಡೆಗೆ ಕರೆದುಕೊಂಡು ಹೋಗುತ್ತೀಯಾ? ಕತ್ತೆ, ಇಲ್ಲಿಂದ ತೊಲಗು; ಈಕ್ಷಣ ಹೊರಡು!" ಎನ್ನುತ್ತಾ ಅವನು ಈ ಮನುಷ್ಯನನ್ನು ಒದೆಯಲು ಬಲಗಾಲನ್ನೆತ್ತಿದನು. ರಾಮದಾಸನ ಜೊತೆಗಾರನು ಹೆದರಿ ಬೆಟ್ಟದಿಂದಿಳಿದು ಓಡಿದನು.

ಸಾಧು ರಾಮದಾಸನ ಕಡೆ ತಿರುಗಿ "ಮಹರಾಜ್, ದಯವಿಟ್ಟು ಇಲ್ಲಿಯೆ ನಿಲ್ಲಿರಿ. ನಿಮಗೆ ಬೇಕಾದದ್ದನ್ನೆಲ್ಲಾ ನಾನು ಒದಗಿಸುತ್ತೇನೆ" ಎಂದು ಹೇಳಿದನು.

ಅವನ ಆಜ್ಞೆಯಂತೆ ನಡೆಯಬೇಕಾಯಿತು. ತನಗೆ ಬೇಕಾದ ಪದಾರ್ಥಗಳು ಬಹಳ ಕೆಲವೆಂದೂ, ತಾನು ಅಲ್ಲಿ ಕ್ಷೀರಾಹಾರದಿಂದ ಇರಲು ಅಪೇಕ್ಷಿಸುವೆನೆಂದೂ ರಾಮದಾಸನು ತಿಳಿಸಿದನು. ಸೇಟ್ ಮೂಲಚಂದ್ ಎಂಬ ವರ್ತಕನು ಸಾಧುವಿಗೆ ಎರಡು ಹೊತ್ತು ಊಟವನ್ನು ಒದಗಿಸುತ್ತಿದ್ದನು. ಈ ಊಟವನ್ನು ತರಲು ಒಬ್ಬ ಚಿಕ್ಕ ಹುಡುಗನನ್ನು ನೇಮಿಸಿದ್ದನು. ರಾತ್ರಿಯಾಗುತ್ತ ಬಂದಿತು. ಜನವೆಲ್ಲ ಹೊರಟುಹೋದರು. ಸುಮಾರು ಒಂದು ಗಂಟೆಯನಂತರ ಹುಡುಗನು ಎಂದಿನಂತೆ ಊಟವನ್ನು ತಂದನು. ಸಾಧುವಿನ ಜೊತೆಗೆ ಬೇರೆ ಒಬ್ಬ ಅತಿಥಿ ಇದ್ದನು. ಅವನು ಈಗ ವಿಸ್ತಾರದ ಆ ತೆರೆದ ಗುಹೆಯ ಎಡದ ಕಡೆಯ ಒಂದು ಕಂಡಿಯಿಂದ ಈಚೆಗೆ ಬಂದನು.

"ತಪಸ್ವಿಜಿ! ಜಾಗ್ರತೆಮಾಡಿ. ಊಟ ಬಂದಿದೆ" ಎಂದು ಸಾಧು ಬಾಲಕ್‌ರಾಮನು ಕೂಗಿದನು.

ತಪಸ್ವಿಜಿ ಸುಮಾರು ಮೂವತ್ತೈದು ವಯಸ್ಸಿನ ಮನುಷ್ಯ. ದಪ್ಪನಾದ ಮೈಕಟ್ಟಿನ ಶರೀರ. ಮೈಗೆಲ್ಲಾ ದಪ್ಪನಾಗಿ ವಿಭೂತಿ ಲೇಪಿಸಿದ್ದಿತು. ಅವನ ಸೊಂಟದಲ್ಲಿ ದಪ್ಪನಾದ ಹಗ್ಗದ ಉಡಿದಾರವಿದ್ದಿತು. ಅವನು ಒಂದು ಕೌಪೀನವನ್ನು ಮಾತ್ರ ಧರಿಸಿದ್ದನು. ಜಡೆ ಹೊಸೆದ ಅವನ ತಲೆಕೂದಲನ್ನು ತಲೆಯಮೇಲೆ ಕಿರೀಟದಂತೆ ಎತ್ತಿ ಕಟ್ಟಿದ್ದಿತು. ಅವನು ಒಂದು ಕೈಯಲ್ಲಿ ಒಂದು ಯೋಗದಂಡವನ್ನು ಇನ್ನೊಂದರಲ್ಲಿ ರುದ್ರಾಕ್ಷಿ ಮಾಲೆಯನ್ನು ಹಿಡಿದಿದ್ದನು.

ಇಬ್ಬರೂ ಭೋಜನಕ್ಕೆ ಕುಳಿತು, ರಾಮದಾಸನನ್ನು ಜೊತೆಗೆ ಕರೆದರು. ರಾಮದಾಸನು ತನಗೆ ಬೇಕಿಲ್ಲವೆಂದು ಕ್ಷಮಾಪಣೆ ಕೇಳಿದನು. ಬಾಲಕ್‌ರಾಮನು ಆ ಹುಡುಗನನ್ನು ಪುನಃ ಹೋಗಿ ರಾಮದಾಸನಿಗಾಗಿ ಸ್ವಲ್ಪ ಹಾಲನ್ನು ತರುವಂತೆ ಪ್ರೇರೇಪಿಸಲು ಪ್ರಯತ್ನಿಸಿದನು. ಹುಡುಗನು ಗೊಣಗುಟ್ಟುತ್ತ, ಹಾಲು ಎಲ್ಲಿ ದೊರೆಯುತ್ತದೊ ಗೊತ್ತಿಲ್ಲವೆಂದು ಹೇಳಿದನು.

ರಾಮದಾಸನು "ಹೋಗಲಿ ಬಿಡಿ. ರಾಮದಾಸನಿಗೆ ಹಸಿವಿಲ್ಲ. ಒಂದು ಲೋಟ ನೀರಾದರೆ ಸಾಕು" ಎಂದನು.

ಊಟವಾದ ನಂತರ ಸಾಧುಗಳು ಚಿಲುಮೆಯನ್ನು ತುಂಬಿ ಗಾಂಜಾಸೇವನೆಗೆ ಸಿದ್ಧಮಾಡಿದರು. ಬಾಲಕ್‌ರಾಮನು ರಾಮದಾಸನನ್ನು ತಮ್ಮೊಂದಿಗೆ ಗಾಂಜಾ ಸೇದಲು ಬೇಡಿ ಕರೆದನು. ರಾಮದಾಸನು ವಂದಿಸಿ ಇದನ್ನೂ ಬೇಡವೆಂದು ತಿರಸ್ಕರಿಸಿ ಮೌನವಾಗಿ ಇವರ ನಡೆವಳಿಕೆಗಳನ್ನು ನೋಡುತ್ತ ಇದ್ದನು. ಗಾಂಜಾ ಅಮಲು ಏರಿದಂತೆ ಸಾಧುಗಳ ಸಂಭಾಷಣೆ ವಿಚಿತ್ರವೂ ಅಸಂಬದ್ಧವೂ ಆದ ಮಾತುಗಳಿಗೆ ಹರಿಯಿತು.

ರಾಮದಾಸನು ಆ ಬೆಟ್ಟದಮೇಲೆ ಸುಮಾರು ಹದಿನೈದು ದಿವಸ ನಿಂತನು. ಆ ಅಲ್ಪಾವಕಾಶ ತಮಾಷೆಯಾದ ಮತ್ತು ಮೈ "ಝುಂ" ಎನಿಸುವ ಸನ್ನಿವೇಶಗಳಿಂದ ತುಂಬಿದ್ದಿತು. ಬೆಟ್ಟಕ್ಕೆ ಬಾಂಬೇಶ್ವರಗಿರಿ ಎಂದು ಹೆಸರು. ಕೆಲವು ಕುರುಚಲು ಗಿಡ, ಎರಡು ಮೂರು ಮರ ಬಿಟ್ಟರೆ, ಆ ಬೆಟ್ಟ ಸಸ್ಯರಹಿತವಾದ ಕಲ್ಲುಬಂಡೆ. ಆದುದರಿಂದ ಬಾಂಬೇಶ್ವರಗಿರಿಯಲ್ಲಿ ನೀರಿಗೆ ಅಭಾವ. ಕೆಳಗಿನ ದೇವಸ್ಥಾನದ ಬಾವಿಯಿಂದ ನೀರನ್ನು ಮೇಲಕ್ಕೆ ಹೊತ್ತು ತರಬೇಕಾಗಿದ್ದಿತು.

ಬಾಲಕ್‌ರಾಮ ಪರಮಹಂಸನು ಸುಮಾರು ಮೂವತ್ತೆರಡು ವಯಸ್ಸಿನ ತರುಣನು. ಅವನ ದೇಹ ಹಗುರವಾಗಿ ನೇರವಾಗಿ ಇದ್ದಿತು. ಕೆಳಗಿನ ದಾಡೆಯೂ ಅದುಮಿದಂತಿರುವ ತುಟಿಗಳೂ ಅವನ ಮನೋದಾರ್ಢ್ಯವನ್ನು ವ್ಯಕ್ತಪಡಿಸುತ್ತಿದ್ದುವು.

ಅವನ ಕಣ್ಣು ವಾತ್ಸಲ್ಯಪೂರ್ಣವಾಗಿದ್ದುವು. ಕೋಪಾವಿಷ್ಟನಾಗಿದ್ದ ಸಮಯದಲ್ಲಿ ಹೊರತು ಈತನ ಮುಖದಲ್ಲಿ ಮಂದಹಾಸವು ಮೂಡಿರುತ್ತಿದ್ದಿತು. ಆ ಕೋಪ ಚಂಡಮಾರುತನಂತೆ ಅವನ ಮೇಲೆ ಬೀಸಿ ಬರುತ್ತಿದ್ದಿತು. ಹಿಂದೆಯೇ ಶಾಂತತೆ ನಿರ್ಮಲಾಕಾಶ. ಈತನ ಹೃದಯಾಂತರದ ಮೃದು ಸ್ವಭಾವ ಮತ್ತು ಕನಿಕರ ರಾಮದಾಸನಿಗೆ ಕಂಡುಬಂದುವು. ಸರಿಯಾದ ಶಿಕ್ಷಣ ಮತ್ತು ಯೋಗ್ಯಸಹವಾಸದ ಅಭಾವದಿಂದ, ಆತನ ಮನಸ್ಸು ಹಿಡಿತದಲ್ಲಿರದೆ ದಾಂದಲೆಮಾಡುತ್ತಿದ್ದಿತು. ಪ್ರಾಪಂಚದ ಅನಿತ್ಯ ವಿಷಯಗಳಲ್ಲಿ ಆತನಿಗೆ ವೈರಾಗ್ಯ. (ಅವನ ಅನಾಸಕ್ತಿ ಶ್ಲಾಘ್ಯವಾದದ್ದು.) ಮನಸ್ಸಿನ ಬಯಕೆಗಳನ್ನು ಅಡಗಿಸಲು ಅವನು ಅನುಸರಿಸುತ್ತಿದ್ದ ಒಂದೇ ಮಾರ್ಗ ಗಾಂಜಾಸೇವನೆ. ಆದರೆ ಇದು ಕೋಪದ ಭೂತವನ್ನು ಉದ್ರೇಕಗೊಳಿಸುತ್ತಿದ್ದಿತು, ಅಷ್ಟೆ. ಆತನಲ್ಲಿ ಕಂಡ ಒಂದು ಮುಖ್ಯ ಗುಣವೇನೆಂದರೆ,

ಸಾಧುಗಳ ಸೇವೆ ಮಾಡಬೇಕೆಂಬ ಆಸಕ್ತಿ. ಈ ಸಾಧುಸೇವೆಯಿಂದಲೇ ಮುಕ್ತಿ ದೊರೆಯುವುದೆಂದು ಅವನ ದೃಢವಾದ ನಂಬಿಕೆ. ತನ್ನ ಹತ್ತಿರಕ್ಕೆ ಬಂದವರಿಗೆಲ್ಲರಿಗೂ ಅವನು ಕೊಡುತ್ತಿದ್ದ ಸಂದೇಶ ಒಂದೇ ಒಂದು; ನಿಮ್ಮ ಸಂಪತ್ತನ್ನು ಸಾಧುಸೇವೆಗುಪಯೋಗಿಸಿ ಎಂಬುದು. ಆ ಬೆಟ್ಟವನ್ನು ಸಾಧುಗಳ ಆವಾಸಸ್ಥಾನವಾಡಬೇಕು, ತಾನು ಅವರ ಕಿಂಕರನಾಗಿರಬೇಕು, ಲೌಕಿಕ ಜನರು ಅವರ ಸೇವೆಗೆ ಆನುಕೂಲ್ಯಗಳನ್ನು ಒದಗಿಸಬೇಕು ಎಂಬುದೇ ಆತನ ಹಿರಿಯಾಸೆಯಾಗಿದ್ದಿತು.

ಬಂದವರನ್ನು ಅವನು ದರ್ಪದಿಂದ ಕಾಣುವನು ಮತ್ತು ತನ್ನ ನಾಲಿಗೆಯಿಂದ ಛಡಿಯಿಂದ ಎಂಬಂತೆ ಪ್ರಹರಿಸುವನು. ಅವನು ಅವರೊಡನೆ ಮಾತನಾಡುವ ರೀತಿಯ ಒಂದು ಉದಾಹರಣೆಯನ್ನು ಇಲ್ಲಿ ವಿವರಿಸುತ್ತದೆ. ಬಾಂದಕ್ಕೆ ಬಂದಿದ್ದ ಜಿಲ್ಲಾ ಡೆಪ್ಯುಟಿ ಕಲೆಕ್ಟರಿಗೆ ಅವನು ಒಂದು ದಿನ ಹೇಳಿ ಕಳುಹಿಸಿದನಂತೆ. ಆ ಕಲೆಕ್ಟರು ಹಿಂದು. ಧಾರ್ಮಿಕ ಪ್ರವೃತ್ತಿ ಇದ್ದ ಈ ಬಡಪಾಯಿ ಅಧಿಕಾರಿ ತನಗೆ ಏನು ಒದಗಲಿತ್ತೆಂಬುದನ್ನು ನೆನೆಯದೆ ಈ ಮಹಾತ್ಮನ ಕರೆಗೆ ಮನ್ನಣೆಕೊಟ್ಟನು. ಕಛೇರಿಯ ಕೆಲಸಗಳನ್ನು ಪೂರೈಸಿಕೊಂಡು, ಕಛೇರಿಗೆ ಹೋಗುವಾಗ ಧರಿಸಿದ್ದ ವಾಡಿಕೆಯ ಉಡುಪಿನಲ್ಲೇ ಸಾಯಂಕಾಲ ಬಂದನು; ಬಾಲಕ್‌ರಾಮನಿಗೆ ವಂದನೆ ಮಾಡಿ ಕುಳಿತನು.

ಆಗ ಬಾಲಕ್‌ರಾಮನು, ಎದುರಿಗೆ ಕಂಡ ಅಧಿಕಾರಿಯನ್ನು ಆ ಮೌಳಿಪರ್ಯಂತ ಈಕ್ಷಿಸಿ, ನಾಲಿಗೆ ಬಿಚ್ಚಿ ಅದನ್ನು ಹದಮಾಡಿದನು. ಬಾಲಕ್‌ರಾಮನು ವಾಚಾಳಿ; ಮತ್ತು ಬಲವಾಗಿ ಮಾತನಾಡಬಲ್ಲವನು; ಎದುರಾಳಿಯನ್ನು ಪುಡಿಪುಡಿ ಮಾಡಬಲ್ಲನು. ಅವನು ಅಧಿಕಾರಿಗೆ ಅಟ್ಟಹಾಸದ ದನಿಯಲ್ಲಿ ನುಡಿಯತೊಡಗಿದನು.

"ಆಹಹ! ಎಷ್ಟು ಸೊಗಸಾದ ಪೇಟ ಧರಿಸಿದ್ದೀ! ಚೆನ್ನಾಗಿ ಇಸ್ತ್ರಿಮಾಡಿದ ಸಿಲುವಂಗಿ! ಸ್ವಚ್ಛವಾದ ಬಿಳಿಯ ಷರಾಯಿ! ಉತ್ತಮ ರೀತಿಯ ಆಂಗ್ಲ ಮೋಜಗಳು! ಇದು ಸಾಲದು ಎಂತ ಸುಂದರವಾದ ಬೆತ್ತ!

ಅಯ್ಯಾ, ಅಲಂಕಾರದ ಮೋಜುಗಾರ! ಇಂತಹ ಡಂಭದ ಪದಾರ್ಥಗಳ ಮೇಲೆ ಎಷ್ಟು ದುಡ್ಡನ್ನು ವ್ಯರ್ಥಮಾಡುತ್ತಿದ್ದೀಯೆ? ಈ ಅಲಂಕಾರ ಮಾಡಿಕೊಂಡು ನೀನೆ ಬಹಳ ಬುದ್ಧಿವಂತನೆಂದು ತಿಳಿದುಕೊಂಡಿದ್ದೀಯಾ? ಅಯ್ಯೋ ಹುಚ್ಚ! ಕೊಳಕು ಕ್ರಿಮಿಯಂತೆ ಈ ಟೀಕುಟಾಕುಗಳನ್ನು ಒದಗಿಸಿಕೊಳ್ಳುವುದಕ್ಕಾಗಿಯೂ ಸ್ವಾರ್ಥವಾದ ಪಾಪಿಷ್ಠ ಆಸೆಗಳನ್ನು ಪೂರ್ಣಮಾಡುವುದಕ್ಕಾಗಿಯೂ ಬೆಳಗಿನಿಂದ ರಾತ್ರಿಯವರೆಗೂ ಕಷ್ಟಪಡುವೆಯಾ? ಕಸದಲ್ಲಿ ಹೊರಳಾಡುವುದರಲ್ಲೇ ಇನ್ನೂ ಸಂತೋಷಪಡುತ್ತೀಯಾ?"

ಮಾತನ್ನು ಮುಂದರಿಸಿ ಅವನು ಮತ್ತೆ ಹೇಳಿದನು.

"ಎಚ್ಚರಿಕೆ! (ಯಾವ ಕ್ಷಣದಲ್ಲೋ ನಿನ್ನನ್ನು ನುಂಗಿಬಿಡಲು ಹೊಂಚುತ್ತಾ ಮರಣ ಘಟಸರ್ಪದಂತೆ ನಿನ್ನ ಹಿಂದೆಯೇ ಸಾರಿಬರುತ್ತಿದೆ.) ಈ ಜನ್ಮ ಏಕೆ

ಎತ್ತಿದ್ದೀಯೆ ಎಂದು ಸ್ವಲ್ಪ ವಿಚಾರಮಾಡು. ನಿನ್ನಂತಹ ನರಕೀಟಗಳಿಗೆ ಮೋಕ್ಷ ಸಾಧನೆಗೆ ಒಂದೇ ದಾರಿ. ಅದು ಸಾಧುಗಳ ಸೇವೆ. ಇದನ್ನು ಮಾಡದಿದ್ದರೆ ನಿನ್ನ ಪಾಡು ಮುಗಿಯಿತು. ನಿನ್ನಲ್ಲೇನಾದರೂ ದುಡ್ಡು ಇದ್ದರೆ ಅದನ್ನು ಕೊಟ್ಟುಬಿಡು."

ಅಧಿಕಾರಿಗೆ ಮಂಕುಬಡಿದು ಏನೂ ತೋಚದೆ ಹೋಯಿತು. ಮನೆಗೆ ಹೋಗಿ ಸ್ವಲ್ಪ ಹಣವನ್ನು ಕಳುಹಿಸುವುದಾಗಿ ಹೇಳಿ, ಏನೋ ಒಂದು ನೆಪವನ್ನು ಗೊಣಗಿ ಅವನು ತಪ್ಪಿಸಿಕೊಂಡು ಹೋದನು. ದುಡ್ಡು ಬರಲಿಲ್ಲ. ಬಾಲಕ್‌ರಾಮನು ಐದಾರು ಸಲ ಹೇಳಿ ಕಳುಹಿಸಿದನು. ಅಧಿಕಾರಿ ಮುಖ ತೋರಿಸಲಿಲ್ಲ. ಇದು ನಿರೀಕ್ಷಿಸಬಹುದಾಗಿದ್ದ ಸಂಗತಿ.

## (iii) ಶಾಂತಿಯನ್ನು ಪಡೆಯುವ ಮಾರ್ಗ

ಸಾಧುಗಳನ್ನು, ಮಹಾತ್ಮರನ್ನು ಕಂಡರೆ ಶಾಲಾ ಹುಡುಗರಿಗೆ ಏನೋ ಒಂದು ತರದ ಆಕರ್ಷಣ. ಅವರ ಸಂಗಡವಿದ್ದಾಗ ತಮಾಷೆ ಮಾಡಬಹುದು. ಅವರು ಸಾಧು ಜನರ ನಡವಳಿಕೆಗಳನ್ನು ಗಮನಿಸಿ ಅವರ ವಿಚಿತ್ರ ಚರ್ಯೆಗಳನ್ನು ಅನುಕರಿಸುವರು. ಸಾಧುಗಳ ಸ್ವೇಚ್ಛಾವೃತ್ತಿ ಅನಿಯತವಾದ ಅಪೇಕ್ಷೆ ವಿಲಕ್ಷಣವಾದ ಚರ್ಯೆ ಇವುಗಳನ್ನು ಹುಡುಗರು ಎಂದೂ ತೀವ್ರವಾಗಿ ಪರಿಶೀಲಿಸುತ್ತಾರೆ. ಏಕೆಂದರೆ ಅವರು ಇಲ್ಲಿ ಮನರಂಜಕವಾದ ದೃಶ್ಯಗಳನ್ನು ಕಾಸು ಖರ್ಚಿಲ್ಲದೆ ನೋಡಬಹುದು. ಆದರೆ ಬಾಲಕ್‌ರಾಮನೊಂದಿಗೆ ಹಾಗಾಗುತ್ತಿರಲಿಲ್ಲ. ಹುಡುಗರನ್ನು ಕಂಡರೆ ಅವನಿಗೆ ತುಂಬ ಪ್ರೀತಿಯೇನೋ ಇದ್ದಿತು. ಆದರೆ ಹುಡುಗರು ಈತನ ಆಟಗಳನ್ನು ನೋಡುವುದಕ್ಕೂ, ತಮ್ಮ ಮೇಲಿದ್ದ ಈತನ ಪ್ರೀತಿಯಿಂದಲೂ ತುಂಬ ಕಷ್ಟಕ್ಕೆ ಸಿಕ್ಕುತ್ತಿದ್ದರು. ಶಾಲೆ ಪೂರೈಸುತ್ತಲೂ ಹುಡುಗರ ಒಂದು ತಂಡ ಬಾಂಬೇಶ್ವರಬೆಟ್ಟವನ್ನು ಹತ್ತಿಹೋಗುತ್ತಿದ್ದಿತು. ಬಾಲಕ್‌ರಾಮನ ಹತ್ತಿರ ಹನ್ನೆರಡು ದೊಡ್ಡ ಗಡಿಗೆಗಳು ಇದ್ದುವು.

ಅವನು ಅವರನ್ನು "ಅಣ್ಣಯ್ಯ! ಅಪ್ಪಾಜಿ!" ಎಂದು ಪ್ರೀತಿಯಿಂದ ಕರೆಯುತ್ತಿದ್ದನು. ತನ್ನ ಪ್ರೀತಿಯನ್ನು ವ್ಯಕ್ತಪಡಿಸಲು, ತನ್ನ ತೆಳುವಾದ ತುಟಿಗಳನ್ನು ತಟ್ಟೆಯಾದ ಆಲಿಗೆಯಂತೆ ಮಾಡುವುದರಲ್ಲಿ ನಿಪುಣ. "ಕೆಳಗಿನಿಂದ ಸ್ವಲ್ಪ ನೀರು ತರುತ್ತೀರಾ? ಇಗೋ, ಇಲ್ಲಿ ಗಡಿಗೆಗಳಿವೆ, ಒಬ್ಬೊಬ್ಬರು ಒಂದೊಂದು ತೆಗೆದುಕೊಳ್ಳಿ. ನೀವೆಲ್ಲಾ ಜಾಣರು, ಕಣ್ಣುಮುಚ್ಚಿ ತೆಗೆಯುವುದರೊಳಗೆ ತರಬಲ್ಲಿರಿ. ಎಲ್ಲಿ, ನೋಡೋಣ" ಎನ್ನುವನು. ಇದು ಅವರಿಂದ ಕೆಲಸ ಮಾಡಿಸಿಕೊಳ್ಳುವುದಕ್ಕೆ ಅವನು ಅವರನ್ನು ಉಬ್ಬಿಸುವ ದಾರಿ.

ಒಂದು ಸಲ ಇಂಥ ಒಂದು ಪ್ರಸಂಗವನ್ನು ರಾಮದಾಸನು ಕಂಡನು. ಬಾಲಕ್‌ರಾಮನು ಆರು ಜನ ಹುಡುಗರನ್ನು ನೀರು ತರಲು ಪ್ರೇರಿಸಿ ಅವರಿಗೆ ಮಡಕೆಗಳನ್ನು ಕೊಟ್ಟನು. ಇವರ ಪೈಕಿ ಇಬ್ಬರು ಮಾತ್ರ ಮಡಕೆಗಳನ್ನು ಭದ್ರವಾಗಿ ಉಳಿಸಿ ನೀರನ್ನು ಮೇಲಕ್ಕೆ ತರಲು ಸಾಧ್ಯವಾಯಿತು. ಉಳಿದವರು ಗಡಿಗೆಯ

ಕುಂತವನ್ನೋ ತಳಪನ್ನೋ ತಂದರು. ಒಂದು ಸಲಕ್ಕೆ ನಾಲ್ಕು ಗಡಿಗೆಗಳು ಒಡೆದು ಹೋದುದನ್ನು ನೋಡಿ ಬಾಲಕ್‌ರಾಮನಿಗೆ ಆಕ್ರೋಶ ಉಕ್ಕಿತು. ಅವನ ಮುಗುಳ್ನಗೆ ಮಾಯವಾಯಿತು. ತಪ್ಪಿತಸ್ಥರಾದ ನಾಲ್ಕು ಮಂದಿ ಹುಡುಗರನ್ನು ಮರುದುರನೆ ನೋಡುತ್ತಾ ಅವನು "ಘಟಿಂಗರಿರಾ ! ಗಡಿಗೆಗಳು ನಿಮ್ಮ ತಾತನವೇ! ಅವಕ್ಕೆ ನಗದು ದುಡ್ಡು ಕೊಟ್ಟಿದ್ದೇನೆ. ಅವುಗಳನ್ನು ಒಡೆದು ಹಾಕಿದಿರಾ ! ದೆವ್ವಗಳಿರಾ ! ಮನೆಗೆ ಹೋಗಿ ನಿಮ್ಮ ತಂದೆ ತಾಯಿಗಳಿಂದ ಒಂದೂವರಾಣೆ ಒಂದೂವರಾಣೆ ತೆಗೆದುಕೊಂಡು ಬನ್ನಿ. ಓಡಿಹೋಗಿ ಜಾಗ್ರತೆ ಬನ್ನಿ. ಸಂಜೆಯ ಒಳಗಾಗಿ ತರಬೇಕು" ಎಂದನು. ಹುಡುಗರು ಜಾರಿದರು. ಪುನಃ ಮುಖವನ್ನು ತೋರಿಸಲೇ ಇಲ್ಲ. ಇನ್ನೊಂದುದಿನ ಬೇರೆ ಹುಡುಗರ ತಂಡ ಬಂದಿತು. ಅಂದೂ ಅದೇ ಕತೆ ನಡೆಯಿತು.

ಬಾಲಕ್‌ರಾಮನು ಒಬ್ಬ ಓವರ್ಸಿಯರ ವಿಷಯ ಕೆಲವು ದಿವಸದಿಂದ ಯೋಚಿಸುತ್ತಿದ್ದನು. ಬೆನ್ನುಮೇಲೆ ಬಾಳೆಪಟ್ಟೆಯ ಏಟು ಬಿದ್ದಮೇಲೆಯೇ ಹಾಲು ಕೊಡುವ ಎಮ್ಮೆಯಂತೆ ಆ ಓವರ್ಸಿಯರು ಮೊದಲ ಬೈಗಳಕ್ಕೆ ಹೆದರಿ ಬಾಲಕ್‌ರಾಮನಿಗೆ ಎರಡು ರೂಪಾಯಿಗಳನ್ನು ಕೊಟ್ಟಿದ್ದನು. ಆ ಓವರ್ಸಿಯರನ್ನು ಎರಡನೆ ಸಲ ಪರೀಕ್ಷಿಸಬೇಕೆಂದು ಅವನಿಗೆ ಆಸೆ; ಆದರೆ ಓವರ್ಸಿಯರು ಅಂಥ ದಡ್ಡನಲ್ಲ. ಬಾಲಕ್‌ರಾಮನು ಕಳುಹಿಸಿದ ಎಲ್ಲರೂ ಬಂದು ಓವರ್ಸಿಯರು ಸಿಕ್ಕಲಿಲ್ಲವೆಂದು ತಿಳಿಸಿದರು. ಡೆಪ್ಯುಟಿ ಕಲೆಕ್ಟರಂತೂ ಬಾಲಕ್‌ರಾಮನ ದೃಷ್ಟಿಯಿಂದ ಕೆಲಸಕ್ಕೆ ಬಾರದವರಾಗಿದ್ದರು. ತಿರುಗಿ ಆತನ ಸುಳಿವೇ ಇಲ್ಲ.

ಒಂದು ರಾತ್ರಿ ರಾಮದಾಸನು ಬಾಲಕ್‌ರಾಮನನ್ನು "ನೋಡಲು ಬರುವವರನ್ನು ಏಕೆ ಹೀಗೆ ಬಯ್ಯುತ್ತೀಯೆ ?" ಎಂದು ಕೇಳಿದನು. ಆತನು ತಿರಸ್ಕಾರದಿಂದ ಮುಸುಗುಟ್ಟಿ, "ನೋಡಿ ! ಒಳ್ಳೆಯ ಮಾತು ವಿಚಾರಸರಣಿ ಕತ್ತೆಗಳಿಗೆ ತಗವು. ಅವುಗಳಿಂದ ಕೆಲಸ ಮಾಡಿಸಬೇಕಾದರೆ ಬಲವಾದ ದೊಣ್ಣೆ ಬೇಕು. ಸ್ವಾರ್ಥಪರರಾದ ಮೂಢ ಜನಗಳಿಗೂ ಅಷ್ಟೆ. ಅವರಿಗೆ ಒಳ್ಳೆಯದಾಗಬೇಕೆಂಬುದೇ ನನ್ನ ಅಭಿಲಾಷೆ. ಅವರನ್ನು ಎಚ್ಚರಗೊಳಿಸಬೇಕಾದರೆ ಅವರ ದಪ್ಪಚರ್ಮದ ಮೇಲೆ ಸುತ್ತಿಗೆಪೆಟ್ಟು ಬೇಕು" ಎಂದು ಹೇಳಿದನು.

ರಾಮದಾಸನು "ನಿನ್ನದು ತಪ್ಪು ತಿಳಿವಳಿಕೆ. (ಪ್ರೀತಿಗಿಂತಲೂ ಹೆಚ್ಚಾದ ಶಕ್ತಿ ಇಲ್ಲ ಪ್ರಪಂಚದಲ್ಲಿ.) (ಮೃದುವಾಗಿರುವುದರಿಂದ ನಯದಿಂದ ನೀನು ಪ್ರಪಂಚವನ್ನೇ ಗೆಲ್ಲಬಹುದು.) ಸಾಧುವಾದ ನೀನು ದೇವರನ್ನು ಸಾಕ್ಷಾತ್ಕಾರಮಾಡಿಕೊಳ್ಳಲು ಹೊರಟಿದೀಯೆ. (ದೇವರು ಪ್ರೇಮ, ಶಾಂತಿ.) ಬಯ್ಯುವ ಬಾಯಿ, ಕೋಪದಿಂದ ಕೂಡಿದ ಮನಸ್ಸು, ಎರಡೂ ಅಜ್ಞಾನದ ಕುರುಹುಗಳು. (ಪ್ರೀತಿ, ಕನಿಕರ, ಕ್ಷಮೆ ನಿನ್ನ ಹೃದಯದಲ್ಲೂ, ಶಾಂತಿ ನಿನ್ನ ಮನಸ್ಸಿನಲ್ಲೂ, ನೆಲೆಸಿದ ಹೊರತು ನೀನು ದೈವ ಸಾಕ್ಷಾತ್ಕಾರವನ್ನು ಪಡೆಯಲಾರೆ)" ಎಂದನು.

"ಓಹೋ! ತಮ್ಮ ಉಪದೇಶ ಎಷ್ಟು ಆಪ್ಯಾಯಮಾನವಾಗಿದೆ! ನನ್ನನ್ನು ಒಳ್ಳೆಯವನನ್ನಾಗಿ ಮಾಡಿ" ಎಂದು ಅವನು ಆವೇಶದಿಂದ ಕೂಗಿಕೊಂಡನು. "ನನ್ನಲ್ಲಿ ದುರ್ಗುಣಗಳು ತುಂಬಿವೆ ಎಂಬುದನ್ನು ಬಲ್ಲೆನು. ಅದಕ್ಕಾಗಿಯೇ ನೀವು ನನ್ನ ಸಂಗಡ ಇರಬೇಕೆಂದು ನಾನು ನಿಮ್ಮನ್ನು ಕೇಳಿದುದು. ನಿಮ್ಮ ಸಹವಾಸದಿಂದ ಉತ್ತಮನಾಗಬೇಕೆಂದು ನಾನು ಮನಃಪೂರ್ವಕವಾಗಿ ಆಶಿಸುತ್ತೇನೆ" ಎಂದನು.

ಈಗ ತಪಸ್ವಿಜಿ ಸಿದ್ಧವಾಗಿದ್ದ ಚಿಲುಮೆಯ ವಿಚಾರವನ್ನು ಜ್ಞಾಪಿಸಿದನು. ಸಂಭಾಷಣೆ ಅಷ್ಟಕ್ಕೆ ನಿಂತಿತು.

ಬಾಲಕ್‌ರಾಮನು ಜನಗಳೊಂದಿಗೆ ಕಠಿನೋಕ್ತಿಗಳನ್ನಾಡುತ್ತಿದ್ದ ಅನೇಕ ಸಮಯಗಳಲ್ಲಿ ರಾಮದಾಸನು ಅವನೊಂದಿಗೆ ಇದ್ದು ಈ ಬೈಗಳನ್ನು ಕೇಳುವುದಕ್ಕಿಂತ, ಅಲ್ಲಿರದೆ ಹೊರಟುಹೋಗುವುದು ತನಗೆ ಹೆಚ್ಚು ಸುಖವೆಂದು ತಿಳಿಸಿದನು. ರಾಮದಾಸನನ್ನು ಕಳೆದುಕೊಳ್ಳುವುದು ಬಾಲಕ್‌ರಾಮನಿಗೆ ಸಮ್ಮತವಲ್ಲ. ಅವನಿಗೆ ರಾಮದಾಸನ ಮೇಲೆ ಪ್ರಿತಿ, ಪೂಜ್ಯಭಾವ. ರಾಮದಾಸನು ತನ್ನನ್ನು ಬಿಟ್ಟು ಎಲ್ಲಿಯಾದರೂ ಹೊರಟು ಹೋದಾನು ಎಂಬ ಭೀತಿಯಿಂದ ಅವನು ಹಲವು ಸಲ ತನ್ನ ನಾಲಗೆಯನ್ನು ಬಿಗಿಹಿಡಿದನು.

ಒಂದು ರಾತ್ರಿ ಸನ್ನಿವೇಶವು ಹತ್ತಿರ ಹತ್ತಿರ ಮುಗಿಲನ್ನು ಮುಟ್ಟಿತು. ಬಾಲಕ್‌ರಾಮನು ಗುಹೆಯೊಳಗೆ ಎಲ್ಲಿಯೋ ಒಂದು ಸಂದಿಯಲ್ಲಿ ಒಂದು ರೂಪಾಯಿ ಇಟ್ಟಿದ್ದನು. ಆ ಮಧ್ಯಾಹ್ನ ಅದನ್ನು ಹುಡುಕಿದನು; ಅದು ದೊರೆಯಲಿಲ್ಲ. ಊಟವನ್ನು ತರುತ್ತಿದ್ದ ಹುಡುಗನು ವಾಡಿಕೆಯಾಗಿ ಕೊಟಡಿಯನ್ನು ಗುಡಿಸುತ್ತಿದ್ದನು. ಅವನ ಮೇಲೆ ಅನುಮಾನ ಬಂದಿತು. ಹುಡುಗ ಇರಲಿಲ್ಲ. ಸಿಟ್ಟಿನಿಂದ ಬಾಲಕ್‌ರಾಮನು ರೇಗಿದನು. "ಬರಲಿ ಹುಡುಗ. ಅವನನ್ನು ಸರಿಯಾಗಿ ನೋಡಿಕೊಳ್ಳುತ್ತೇನೆ ಕಳ್ಳನನ್ನು" ಎಂದು ಮೊರೆದನು.

ಎಂದಿನಂತೆ ರಾತ್ರಿ ಎಂಟು ಗಂಟೆಯ ಹೊತ್ತಿಗೆ ಹುಡುಗನು ಊಟವನ್ನು ತಂದನು. ಊಟದ ಪಾತ್ರೆಯನ್ನು ಕೆಳಕ್ಕಿಟ್ಟಕೂಡಲೇ, ಬಾಲಕ್‌ರಾಮನು ಹುಡುಗನ ತೋಳನ್ನು ಭದ್ರವಾಗಿ ಹಿಡಿದುಕೊಂಡು, "ಲೋ ಕಳ್ಳ! ಎಲ್ಲಿ ನನ್ನ ರೂಪಾಯಿ?" ಎಂದು ಕಿರಿಚಿದನು. ಅವನ ಕೆಂಡದಂತಿರುವ ಕಣ್ಣನ್ನು ನೋಡಿ, ಭಯವನ್ನುಂಟುಮಾಡುವ ಧ್ವನಿಯನ್ನು ಕೇಳಿ, ಹುಡುಗನು ನಡುಗುತ್ತ, ನನಗೆ ಗೊತ್ತಿಲ್ಲ, ನಾನು ತೆಗೆದುಕೊಂಡಿಲ್ಲ" ಎಂದು ಅತಿ ದೈನ್ಯದಿಂದ ಉತ್ತರವಿತ್ತನು.

ಬಾಲಕ್‌ರಾಮನು "ಸುಳ್ಳುಗಾರ! ಕದ್ದದ್ದೂ ಅಲ್ಲದೆ ಅದರ ಜೊತೆಗೆ ಸುಳ್ಳನ್ನೂ ಹೇಳುತ್ತೀಯಾ? ನೀನು ಬದುಕಿರಲು ಯೋಗ್ಯನಲ್ಲ. ನಿನ್ನನ್ನು ಜೀವಿಸಲು ಬಿಟ್ಟರೆ ಮುಂದೆ ದೊಡ್ಡ ಕಳ್ಳನಾಗುತ್ತೀಯೆ! ಅಯೋಗ್ಯ, ಈಗಲೆ ಕತ್ತು ಹಿಸುಕಿ ನಿನ್ನ ಪ್ರಾಣ ತೆಗೆಯುತ್ತೇನೆ" ಎಂದು ಘರ್ಜಿಸುತ್ತಾ, ತಾನು ಹೇಳಿದ್ದಂತೆ

ಮಾಡಲು ಕೋಪಾವೇಶದಿಂದ ಹುಡುಗನ ಗಂಟಲ ಮೇಲೆ ಬಿಗಿಯಾಗಿ ಬೆರಳು ಗಳಿಂದ ಅದುಮಲು ಉಪಕ್ರಮಿಸಿದನು.

ಕೂಡಲೆ ರಾಮುದಾಸನು ಅವನಿದ್ದಲ್ಲಿಗೆ ಹೋಗಿ, "ಇಲ್ಲಿ ನೋಡು ರಾನು, ರಾಮುದಾಸನು ಹೊರಟ. ನಿನ್ನೊಂದಿಗೆ ಇರಲಾರ" ಎಂದು ಹೇಳಿ, ಬೆಟ್ಟ ಏಳಿಯಲು ಒಂದು ಕಲ್ಲಿನ ಮೇಲೆ ಹಾರಿದನು.

ಬಾಲಕ್‌ರಾಮನು ಹುಡುಗನ ಗಂಟಲನ್ನು ಬಿಟ್ಟು, ರಾಮುದಾಸನ ಹಿಂದೆ ಓಡಿಬಂದು ಕಾಲುಗಳಿಗೆ ಬಿದ್ದು, "ಕ್ಷಮಿಸಿ! ಕ್ಷಮಿಸಿ! ಎಚ್ಚರತಪ್ಪಿದೆ. ಹುಡುಗನಿಗೆ ಎಂದೂ ತೊಂದರೆಮಾಡುವುದಿಲ್ಲ. ದಯವಿಟ್ಟು ಹಿಂದಿರುಗಿ" ಎಂದು ಅಂಗ ಲಾಚಿದನು.

ರಾಮುದಾಸನು ಹಿಂದಿರುಗಿ ಆ ರಾತ್ರಿಯೂ ಅವನೊಂದಿಗೆ ಮುಚ್ಚುಮರೆ ಯಿಲ್ಲದೆ ಮಾತನಾಡಿದನು.

"ರಾಮುಜಿ, ನಿನ್ನ ಕೋಪವನ್ನು ಹಿಡಿತದಲ್ಲಿಟ್ಟುಕೊಳ್ಳಬೇಕು. ಈಗ ಕೆಲವು ನಿಮಿಷಗಳ ಹಿಂದೆ ಬಿಟ್ಟಂತೆ ಮನಸ್ಸಿ ಹರಿಯಲು ಬಿಡಬಾರದು. ನಿನ್ನ ಸಿಟ್ಟಿನಲ್ಲಿ ನೀನು ಆ ಬಡಪಾಯಿ ಹುಡುಗನನ್ನು ಕೊಲ್ಲುವುದರಲ್ಲಿದ್ದೆ. ನಿನ್ನ ನಡತೆಯೇ ಸರಿಯಾಗಿಲ್ಲ. ಇತರರನ್ನು ತಿದ್ದಲು ಪ್ರಯತ್ನಮಾಡುತ್ತಿದ್ದೀ ಎಂದು ತಿಳಿದಿದ್ದೀಯೆ. "ವೈದ್ಯನೆ ಮೊದಲು ನಿನ್ನ ಖಾಯಿಲೆ ವಾಸಿಮಾಡಿಕೋ" ಎಂಬ ಗಾದೆಯನ್ನು ಕೇಳಿದ್ದೀಯಾ? ಈ ಗಾದೆ ನಿನಗೆ ಬಹು ಚೆನ್ನಾಗಿ ಹೊಂದುತ್ತದೆ. ನಿನ್ನ ಬೈಗಳ ಮಾತಿನಿಂದ ನೀನು ಇತರರನ್ನು ಸಿಕ್ಕಾಪಟ್ಟೆ ನೋಯಿಸುತ್ತಿದ್ದೀಯೆ, ಇದು ಕೂಡದು. ನೀನು ಹೀಗೆ ಮುಂದೆ ಮಾಡಬಾರದು. ಜನ ನಿನ್ನಲ್ಲಿಗೆ ಶಾಂತಿಯ ದಾರಿಯನ್ನು ತಿಳಿ ಯಲು ಬರುತ್ತಾರೆ. ನೀನು ಅವರಿಗೇನುಕೊಡುತ್ತೀ? ಬೈಗಳ ಮಳೆ. ನಿನ್ನ ಹೃದಯ ದಲ್ಲಿ ಅಪಾರ ಪ್ರೀತಿ ಇದೆ. ಆದರೆ ನೀನು ಅದನ್ನು ಅನಿಯಂತ್ರಿತ ರಾಗದ್ವೇಷಗಳ ಬಿರುಗಾಳಿಯಲ್ಲಿ ಮುಳುಗಿಸುತ್ತಿದ್ದೀಯೆ."

ಬಾಲಕ್‌ರಾಮನು "ಅಯ್ಯೋ! ನಾನು ನನ್ನ ಮಾತುಗಳಿಂದ ಜನಗಳಿಗೆ ನೋವು ಉಂಟುಮಾಡುತ್ತೇನೆಯೆ? ಹಾಗೆ ಮಾಡಬಾರದೆಂದು ನನಗೆ ಎಷ್ಟು ಆಸೆ! ನಾನು ಅಂತಹ ಕ್ರೂರಿ ಎಂದು ನನಗೆ ತಿಳಿದಿರಲಿಲ್ಲ. ಯಾವಾಗಲೂ ಒಳ್ಳೆಯ ದಾಗಬೇಕೆಂದೇ ನನ್ನ ಉದ್ದೇಶ. ಅಯ್ಯೋ! ನಾನೆಂತಹ ನಿರ್ದಯನಾದ ಪಾಪಿ!" ಎಂದು ತೀವ್ರವಾಗಿ ವ್ಯಥೆಪಡುತ್ತ, ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿ ಕೊಂಡು ಗಳಗಳನೆ ಅತ್ತನು. ಆಮೇಲೆ ಅವನು "ಈ ಹುಚ್ಚು ಮನಸ್ಸನ್ನು ನಿಗ್ರ ಹಿಸಲು ದಾರಿಯನ್ನು ತೋರಿಸಿಕೊಡಿ. ಕೆಲವು ಸಲ ಅದು ಆವಿಗೆಯ ಒಲೆಯಂತೆ ಸುಡುತ್ತದೆ. ನನ್ನ ತಲೆ ಒಡೆಯುವಂತೆ ಕಾಣುತ್ತದೆ. ಅಯ್ಯೋ! ನನಗೆ ಯಾವ ದಾದರೂ ದಾರಿಯನ್ನು ತೋರಿಸಿ" ಎಂದು ಅಂಗಲಾಚಿದನು.

ರಾಮದಾಸನು "ಮನೋನಿಗ್ರಹಕ್ಕೆ ಅತ್ಯುತ್ತಮವಾದ ಸಾಧನ ಭಗವನ್ನಾಮದ ಜಪ. ಯಾವಾಗಲೂ ನಿನ್ನ ನಾಲಗೆಯ ಮೇಲೆ ಭಗವನ್ನಾಮವನ್ನು ಇರಿಸಿಕೊ. ಮಿತಭಾಷಿಯಾಗು. ಸರಿಯಾದ ಆಹಾರವನ್ನು ತೆಗೆದುಕೊ. ಎಲ್ಲಕ್ಕಿಂತಲೂ ಮಿಗಿಲಾಗಿ ಗಾಂಜಾಸೇವನೆಯನ್ನು ಬಿಟ್ಟುಬಿಡು. ಈ ದುರಭ್ಯಾಸ ನಿನ್ನನ್ನು ಹಾಳು ಮಾಡಿದೆ" ಎಂದು ಬುದ್ಧಿವಾದ ಹೇಳಿದನು.

---

# ಅಧ್ಯಾಯ ೧೯

## ಬಾಂದ-ಘೋಕಾರ್ ಪರ್ವತ

### (i) ಭಗವಂತನಿಗೆ ಯಾವುದೂ ಅಸಾಧ್ಯವಲ್ಲ

ಬಾಲಕ್‌ರಾಮನು ಹುಡುಗನ ಕತ್ತನ್ನು ಹಿಸುಕಲು ಪ್ರಯತ್ನಪಟ್ಟ ರಾತ್ರಿ ಕಳೆದು ಮಾರನೆಯ ದಿನ ತಪಸ್ವಿಜಿ ಹೊರಟುಹೋಗಿದ್ದನು. ಹುಡುಗನೂ ಮಾಯವಾದನು. ಆಳು ಇಲ್ಲದಂತಾಗಿ ಸೇಟ್ ಮೂಲಚಂದ್ರರ ಮನೆಯಿಂದ ಊಟವನ್ನು ತರಿಸಿಕೊಳ್ಳುವುದು ಕಷ್ಟವಾಯಿತು. ರಾಮದಾಸನು ಕ್ಷೀರವ್ರತದಲ್ಲಿದ್ದನು. ಕೆಲವು ಭಕ್ತರು ಅವನಿಗೆ ಬೆಳಿಗ್ಗೆ ಸಾಯಂಕಾಲ ಕ್ರಮವಾಗಿ ಹಾಲು ತಂದುಕೊಡುತ್ತಿದ್ದರು. ಈಗ ಈ ಹಾಲಿನಲ್ಲಿ ಬಾಲಕ್‌ರಾಮನೂ ಭಾಗಿಯಾದನು. ಬಾಲಕ್‌ರಾಮನು ರಾಮಮಂತ್ರವನ್ನು ಜಪಿಸಲು ಆರಂಭಿಸಿದನು. ಎರಡು ದಿನ ಅವನು ಸಮಾಧಾನವಾಗಿದ್ದನು. ಅವನಿಗೆ ಸಿಟ್ಟಿನಆವೇಶ ಬರಲಿಲ್ಲ. ಗಾಂಜಾಸೇವನೆ ನಿಂತುಹೋಯಿತು. ಮಾತು ಮಿತವಾಯಿತು. ಅವನು ಉದಾಸೀನನಾಗಿ ಶಾಂತನಾಗಿದ್ದನು. ಎರಡನೆ ದಿನ ಹಸಿವಾಗುತ್ತದೆಂದು ತಿಳಿಸಿದನು.

ಕೂಡಲೆ ರಾಮದಾಸನು ಒಬ್ಬ ದಾರಿ ತೋರಿಸುವವನೊಂದಿಗೆ, ಸಾಧು ವಿಶುದ್ಧಾನಂದರಿದ್ದ ಬುದ್ಧರಾಮಕುಟಕ್ಕೆ ಹೋದನು. ರಾಮದಾಸನನ್ನು ಕಂಡು ಸಾಧುವಿಗೆ ಅತ್ಯಾನಂದವಾಯಿತು. ಅವರು ರಾಮದಾಸನನ್ನು ಪ್ರೇಮಾಲಿಂಗನದಿಂದ ಸ್ವಾಗತಿಸಿದರು. ಆತ ವೃದ್ಧರು, ತೆಳ್ಳಗೆ ಎತ್ತರವಾಗಿದ್ದರು. ಉದ್ದವಾದ ಬಿಳಿಯ ಗಡ್ಡ; ಹೆಗಲುವರೆಗೆ ತಲೆಯಕೂದಲು. ಅವರು ಒಂದು ಕೌಪೀನವನ್ನು ಮಾತ್ರ ಧರಿಸಿದ್ದರು. ಬಾಲಕ್‌ರಾಮನಿಗಾಗಿ ಒಂದು ಊಟವನ್ನು ಯಾಚಿಸಲು ಬಂದಿರುವುದಾಗಿ ರಾಮದಾಸನು ಅವರಿಗೆ ತಿಳಿಸಿದನು.

ಅವರು "ನೀವು ಇಲ್ಲಿ ಭೋಜನಮಾಡಿದನಂತರವೇ, ಅವನಿಗೆ ಊಟ ತೆಗೆದುಕೊಂಡು ಹೋಗಲು ಅವಕಾಶಕೊಟ್ಟೇನು" ಎಂದರು.

ಅವರು ಚಟುವಟಿಕೆಯ ಮುದುಕ. ಅರ್ಧ ಗಂಟೆಯೊಳಗಾಗಿ ಮೃದುವಾದ ರೊಟ್ಟಿ ತೊವ್ವೆಯ ಸಾಧಾರಣವಾದ ಒಂದು ಊಟವನ್ನು ಸಿದ್ಧಪಡಿಸಿದರು. ಆಮೇಲೆ ರಾಮದಾಸನನ್ನು ಒಂದು ಬಾವಿಗೆ ಕರೆದುಕೊಂಡು ಹೋದರು. ಈ

ಬಾವಿಯನ್ನು ತೋಡಿಸಿದ ಮಹರ್ನಿಯನ ಹೆಸರನ್ನು ಈ ಸ್ಥಳಕ್ಕೆ ಇಟ್ಟಿದೆ. ವಿಶುದ್ಧಾನಂದರು ಇಲ್ಲಿ ಬಂದು ನೆಲಸುವುದಕ್ಕೆ ಮುಂಚೆ ಬುದ್ಧರಾಮ ಎಂಬ ಹೆಸರಿನ ಸಾಧು ಇಲ್ಲಿ ವಾಸವಾಗಿದ್ದರು. ಆದ್ದರಿಂದ ಬುದ್ಧರಾಮಕೂಪ ಎಂದರೆ ಬುದ್ಧರಾಮರಕೂಪ ಎಂಬ ಹೆಸರು.

ಹಿಂದೂಸ್ಥಾನದ ಮಾತೆ ಮಗುವಿಗೆ ಸ್ನಾನಮಾಡಿಸುವಂತೆ ವಿಶುದ್ಧಾನಂದರು ಬಾವಿಯಿಂದ ನೀರನ್ನು ಸೇದಿ ರಾಮದಾಸನಿಗೆ ತನ್ನ ಕೈಯಿಂದಲೇ ಸ್ನಾನಮಾಡಿಸಿದರು. ನಂತರ ತಾನು ಅಡಿಗೆ ಮಾಡಿದ್ದ ಸಾಮಾನ್ಯವಾದ ಆದರೆ ಆರೋಗ್ಯಕರವಾದ ಆಹಾರವನ್ನು ರಾಮದಾಸನಿಗೆ ಬಡಿಸಿ ಆಮೇಲೆ ಬಾಲಕ್‌ರಾಮನಿಗೆ ಊಟವನ್ನು ತೆಗೆದುಕೊಂಡು ಹೋಗಲು ಅವಕಾಶಕೊಟ್ಟರು. ಬಾಲಕ್‌ರಾಮನು ಭೋಜನವನ್ನು ತೀರಿಸಿದನು. ಸಾಯಂಕಾಲಕ್ಕೆ ಅವನಿಗೆ ಗಾಂಜಾಸೇವನೆಯ ಇಚ್ಛೆ ಮತ್ತೆ ಉಂಟಾಯಿತು. ಅದನ್ನು ತಡೆಯಲಾರದೆ ಗಾಂಜಾವನ್ನು ಮತ್ತೆ ಸೇದಿದನು. ನಾಮಜಪ ಅವನ ನಾಲಗೆಯಿಂದ ನಿಂತುಹೋಯಿತು. ಎರಡು ದಿವಸದಿಂದ ಅಡಗಿದ್ದ ಕೋಪಸರ್ಪ ತನ್ನ ದುಷ್ಟಫಣವನ್ನು ಈಗ ಮತ್ತೆ ಎತ್ತಿತು.

ಮಾರನೆ ದಿನ ಗುಹೆಯಲ್ಲಿ ರಾಮಲೀಲಾ ಪ್ರದರ್ಶನಕ್ಕೆ ಏರ್ಪಾಡು ಮಾಡಬೇಕೆಂದು ಬಾಲಕ್‌ರಾಮನು ಯೋಚಿಸಿದನು. ಇದು ಇಬ್ಬರು ಸಂಗೀತಗಾರರು ಒಬ್ಬರಾದ ಮೇಲೆ ಒಬ್ಬರು, ಪಕ್ಕ ವಾದ್ಯಗಳೊಡನೆ ಶ್ರೀರಾಮಚಂದ್ರನ ಸಾಹಸ ಕಾರ್ಯಗಳನ್ನು ಹಾಡುವ ಕೀರ್ತನ. ರಾಮಲೀಲೆ ಸಂಯುಕ್ತ ಸಂಸ್ಥಾನದ ಜನರಿಗೆ ಬಹು ಇಷ್ಟ. ಇದನ್ನು ಕೇಳಲು ನೂರಾರು ಜನ ಸೇರುತ್ತಾರೆ. ಬೆಳಗಿನಿಂದಲೂ ಬಾಲಕ್‌ರಾಮನು ಬಂದ ಜನಗಳನ್ನೆಲ್ಲಾ ಈ ಏರ್ಪಾಡು ಮಾಡಲು ಕೇಳುತ್ತಿದ್ದನು. ಯಾರೂ ಅದನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. ಇದರಿಂದ ಬಹಳ ಬೇಜಾರಾಗಿ ಅವನು ಅಸಂತುಷ್ಟನಾಗಿದ್ದನು.

ಮಧ್ಯಾಹ್ನ ರಾಮದಾಸನು ಚಿಕ್ಕಗುಹೆಯಲ್ಲಿ ವಿಶ್ರಮಿಸಿಕ್ಕೊಳ್ಳುತ್ತಿದ್ದಾಗ, ಅಲ್ಲಿಗೆ ಯಾವಾಗಲೂ ಬರುತ್ತಿದ್ದ ಮಹದೇವ ದೇವಸ್ಥಾನದ ಅರ್ಚಕನು ಬಂದನು.

ಬಾಲಕ್‌ರಾಮನು "ಅರ್ಚಕರೇ, ಹೇಗಾದರೂ ಮಾಡಿ ಈ ರಾತ್ರಿ ಇಲ್ಲಿ ರಾಮಲೀಲೆಗೆ ಏರ್ಪಾಡು ಮಾಡಬೇಕು" ಎಂದನು.

ಅರ್ಚಕನು "ಮಹರಾಜ್ ! ನಾನು ಬಡವ. ಇದಕ್ಕೆ ಹತ್ತು ರೂಪಾಯಿಗೆ ಮೇಲ್ಪಟ್ಟು ಖರ್ಚಾಗುತ್ತದೆ. ಅಷ್ಟು ಹಣವನ್ನು ನಾನು ಹೇಗೆ ಸೇರಿಸುವುದೆಂದು ನನಗೆ ತೋರಲಿಲ್ಲ" ಎಂದನು.

ಬಾಲಕ್‌ರಾಮನು "ಅದೆಲ್ಲ ಆಗುವುದಿಲ್ಲ ಅರ್ಚಕರೇ ! ಅದನ್ನು ನಡೆಯಿಸಲೇಬೇಕೆಂದು ನನ್ನ ಮನಸ್ಸು. ಹೇಗಾದರೂ ಮಾಡಿ ಏರ್ಪಾಡು ಮಾಡಿ" ಎಂದು ಒತ್ತಾಯಮಾಡಿದನು.

"ಅಸಾಧ್ಯವಾದುದನ್ನು ಮಾಡೆಂದು ಹೇಳುತ್ತಿದ್ದೀರಲ್ಲಾ" ಎಂದು ಅರ್ಚಕನು ಬೇಡಿಕೊಂಡನು.

ಗುಹೆಯ ಒಳಗಿನಿಂದ ರಾಮದಾಸನು ಈ ಸಂಭಾಷಣೆಯನ್ನು ಕೇಳುತ್ತಿದ್ದನು. ಈ ಮಾತು ಮುಗಿದಾಗ ತಾನು ಮಾತನಾಡಿದನು.

"ಅರ್ಚಕರೇ, ದೇವರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಯಾವ ಕೆಲಸವನ್ನಾಗಲಿ ಮಾಡುವುದು ನೀವು ಎಂಬ ಭಾವನೆ ಏಕೆ? (ನೀವು ಭಗವಂತನ ಸೂತ್ರದ ಬೊಂಬೆ ಮಾತ್ರ) ಎಂದು ಭಾವಿಸಿ. ಈ ಕೆಲಸಕ್ಕೆ ಪ್ರಯತ್ನಮಾಡಿ. ದೇವರು ನಿಮ್ಮ ಪ್ರಯತ್ನವನ್ನು ಸಫಲಗೊಳಿಸುವನು" ರಾಮದಾಸನು ಹೀಗೆ ಧೈರ್ಯ ಹೇಳಿದನು.

"ಒಳ್ಳೆಯದು. ಅದು ಮಹದೇವನ ಇಚ್ಛೆಯಾದರೆ ಹಾಗೆಯೇ ಆಗಲಿ. ಈ ವಿಚಾರದಲ್ಲಿ ನಾನು ದೇವರ ನಿಮಿತ್ತ ಮಾತ್ರ ಆಗಬಲ್ಲೆನೆಂದು ಈಗ ಅನಿಸುತ್ತದೆ. ನಾನು ಹೋಗಿ ಬರುತ್ತೇನೆ" ಎಂದು ಹೇಳಿ ಅರ್ಚಕನು ಹೊರಟುಹೋದನು.

ಬಾಲಕ್‌ರಾಮನಿಗೆ ಸಂಶಯ ಹಾಗೆಯೇ ಇದ್ದಿತು. ಹೊತ್ತು ಕಳೆಯಿತು. ಸಾಯಂಕಾಲ ಐದು ಗಂಟೆಯ ಸಮಯ. ಅವನು ನಿರಾಶೆಯ ಧ್ವನಿಯಲ್ಲಿ

"ಮಹರಾಜ್! ರಾಮಲೀಲೆ ನಡೆಯುವ ಆಸೆ ಕಾಣುವುದಿಲ್ಲ. ಪೂಜಾರಿಯ ಸುಳಿವಿಲ್ಲ" ಎಂದು ಉಸಿರಿದನು.

"ಇನ್ನೂ ಕಾಲವಿದೆ ಅವಸರಪಡಬೇಡ" ಎಂದನು ರಾಮದಾಸ.

ಹೀಗೆಂದ ಹತ್ತು ನಿಮಿಷಗಳೊಳಗಾಗಿ ಆರು ಜನ ರಾಮಲೀಲಾ ಪ್ರದರ್ಶನಕ್ಕೆ ಬೇಕಾದ ಸಾಮಾನು, ಜಮಖಾನೆ, ಹೂವು, ಗ್ಯಾಸ್‌ದೀಪ, ನೈವೇದ್ಯ, ಊದು ಬತ್ತಿ, ಹಣ್ಣು, ತೋರಣ ಮುಂತಾದುವುಗಳನ್ನು ಹೊತ್ತುಕೊಂಡು ಬಂದರು. ವಾದ್ಯ ಸಮೇತರಾಗಿ ಸಂಗೀತಗಾರರೂ ಬಂದರು. ಈಗ ಬಾಲಕ್‌ರಾಮನ ಮುಖ ಅರಳಿತು.

ಬಾಲಕ್‌ರಾಮನು ರಾಮದಾಸನಿಗೆ "ಮಹರಾಜ್! ನೀವು ದಯವಿಟ್ಟು ವಿಶುದ್ಧಾನಂದರಲ್ಲಿಗೆ ಹೋಗಿ ಅವರನ್ನು ಕರೆದುಕೊಂಡು ಬನ್ನಿ. ಈ ಕಾರ್ಯಸಮಾರಂಭಕ್ಕೆ ಆ ಮಹನೀಯರ ಪಾವನಸಾನ್ನಿಧ್ಯವೂ ಅವಶ್ಯಕ. ನೀವು ಹೋಗಿ ಕರೆದರೆ ಮಾತ್ರ, ಅವರು ದಯಮಾಡಿಸುತ್ತಾರೆ" ಎಂದನು.

ರಾಮದಾಸನು ಅದೇ ಪ್ರಕಾರ ಹೊರಟನು. ಬುದ್ಧರಾಮಕುವಕ್ಕೆ ಹೋಗಿ, ವಿಶುದ್ಧಾನಂದರನ್ನು ತಮ್ಮ ಸಾನ್ನಿಧ್ಯದಿಂದ ಸಮಾರಂಭವನ್ನು ಬೆಳಗಬೇಕೆಂದು ಬೇಡಿಕೊಂಡನು. ಅವರು ಒಪ್ಪಿ, ಇಬ್ಬರೂ ಏಳು ಗಂಟೆಗೆ ಬೆಟ್ಟದಮೇಲಣ ಗುಹೆಗೆ ಬಂದರು. ಇಷ್ಟು ಹೊತ್ತಿಗೆ ಗುಹೆಯ ಮುಂಭಾಗ ಸುಂದರವಾಗಿ ಅಲಂಕರಿಸಲ್ಪಟ್ಟಿದ್ದಿತು. ನೆಲದಮೇಲೆ ಜಮಖಾನೆ ಕಂಬಳಿಗಳನ್ನು ಹಾಸಿದ್ದಿತು. ಅವುಗಳ ಮೇಲೆ ನೂರಾರು ಜನ ಸ್ತ್ರೀಯರೂ ಪುರುಷರೂ ಕುಳಿತಿದ್ದರು. ಪೆಟ್ರೋಮ್ಯಾಕ್ಸ್

ದೀಪಗಳ ಬೆಳಕಿನಿಂದ ಸುತ್ತಣ ಪ್ರದೇಶ ಪ್ರಕಾಶವಾಗಿದ್ದಿತು. ಅರ್ಚಕನು ಏರ್ಪಾಡು ಮಾಡುವುದರಲ್ಲಿ ನಿರತನಾಗಿದ್ದನು.

ಬಾಲಕ್‌ರಾಮು, ವಿಶುದ್ಧಾನಂದರು, ರಾಮದಾಸ, ಗುಹೆಯ ಬಾಗಿಲ ಬಳಿ ಒಂದು ಸಾಲಿನಲ್ಲಿ ಕುಳಿತರು. ರಾಮಲೀಲಾ ಸಮಾರಂಭ ಮೊದಲಾಯಿತು. ಸಂಗೀತಗಾರರ ಕಂಠ ಮಧುರವಾಗಿದ್ದಿತು. ಇವರ ಇಂಪಾದ ಗಾನದಿಂದ ಗಾಳಿ ಜುಮ್ಮೆಂದಿತು. ಕೀರ್ತನೆ ರಾತ್ರಿ ಒಂದು ಗಂಟೆಯವರೆಗೆ ನಡೆಯಿತು. ಅನಂತರ ಎಲ್ಲರೂ ತೆರಳಿದರು.

## (ii) ನಿರಶನವ್ರತ

ರಾಮಲೀಲಾ ಸಮಾರಂಭದ ಮರುದಿವಸ ರಾಮದಾಸನು ಬಾಂಬೇಶ್ವರ ಬೆಟ್ಟದಲ್ಲಿ ಸುತ್ತುತ್ತಿದ್ದನು. ಬಾಲಕ್‌ರಾಮನ ಗುಹೆಗೆ ಮೇಲೆ ಕೆಲವು ಗಜದೂರದಲ್ಲಿ ಇದ್ದ ಇನ್ನೊಂದು ಗುಹೆ ರಾಮದಾಸನಿಗೆ ಕಾಣಿಸಿತು. ದೊಡ್ಡ ದೊಡ್ಡ ಗುಂಡು ಒಂದಕ್ಕೊಂದು ಆತುನಿಂತು, ಅವುಗಳ ಅಡಿಯಲ್ಲಿ ಒಂದು ದೊಡ್ಡಗವಿ ಆಗಿದ್ದಿತು. ಕಲ್ಲುಗಳು ಸಂಧಿಸಿದ್ದ ನೆತ್ತಿಯಲ್ಲಿ ಮಾತ್ರ ಸ್ವಲ್ಪ ಬಾಯಿ ಬಿಟ್ಟಿದ್ದಿತು. ಒಳಗೆ ಹೋಗಲು ಸಣ್ಣಸಂದು. ಇದರಲ್ಲಿ ನೆಟ್ಟಗೆ ನಡೆದು ಹೋಗಲು ಸಾಧ್ಯವಿರಲಿಲ್ಲ; ಅಡ್ಡಲಾಗಿ ತೂರಿ ಹೋಗಬೇಕಾಗಿದ್ದಿತು.

ರಾಮದಾಸನು ಒಳಕ್ಕೆ ಹೋದನು. ನೋಡಿದರೆ ಸ್ಥಳ ಒಬ್ಬನಿಗೆ ಮಾತ್ರ ಸಾಕಾಗುವಂತಿದ್ದಿತು. ರಾಮದಾಸನ ಮೇಲೆ ಗುಹೆಗಳು ಅಸಾಧಾರಣ ಪ್ರಭಾವವನ್ನು ಬೀರುತ್ತಿದ್ದುವು. ಒಂದು ಗುಹೆಯನ್ನು ಕಂಡಕೂಡಲೆ ಅವನು ಕೆಲವು ದಿವಸ ಇಲ್ಲಿರಬೇಕೆಂದು ನಿರ್ಧರಿಸುವನು. ಈ ಗುಹೆ ಕೂಡ ಕೆಲವುದಿನ ಇಲ್ಲಿರು ಎಂದು ಕರೆಯುವಂತೆ ಅವನಿಗೆ ಕಂಡಿತು. ಆದರೆ ಒಂದು ನಿಯಮ. ಅನ್ನಪಾನ ಎಂದರೆ ನೀರು ಸಹ ಇಲ್ಲದೆ ಇರಬೇಕು. ಜೊತೆಗೆ ಮೌನವ್ರತವನ್ನೂ ಆಚರಿಸಬೇಕು.

ರಾಮದಾಸನು ಬಾಲಕ್‌ರಾಮನ ಬಳಿಗೆ ಹೋಗಿ "ರಾಮಜಿ! ಮೇಲೆ ಪತ್ತಿರದಲ್ಲಿ ಒಂದು ಗವಿ ಇದೆ. ರಾಮದಾಸನು ಇದರಲ್ಲಿ ಕಟ್ಟುನಿಟ್ಟು ಉಪವಾಸ ವ್ರತವನ್ನು ಆಚರಿಸಬೇಕೆಂದು **ರಾಮನ** ಪ್ರೇರಣೆಯಾಗಿದೆ. ನೀರನ್ನು ಸಹ ತೆಗೆದು ಕೊಳ್ಳಕೂಡದು, ಮತ್ತು ತೀರ ಮೌನವಾಗಿರಬೇಕು" ಎಂದನು.

"ಉಪವಾಸ ಎಷ್ಟು ಕಾಲ ಆಚರಿಸತಕ್ಕದ್ದು?" ಎಂದು ಬಾಲಕ್‌ರಾಮನು ಪ್ರಶ್ನಿಸಿದನು.

"ರಾಮದಾಸನಿಗೆ ಗೊತ್ತಿಲ್ಲ. **ರಾಮನೇ** ಅದನ್ನು ನಿರ್ಧರಿಸುವನು" ಎಂದು ರಾಮದಾಸನು ಉತ್ತರವಿತ್ತನು.

ಬಾಲಕ್‌ರಾಮನು ಯಾತ್ರಿಕರ ಮೂಲಕ ಒಂದು ಮಂಕರಿ ಸಗಣಿಯನ್ನು ತರಿಸಿ ಗುಹೆಯನ್ನು ಚನ್ನಾಗಿ ಗುಡಿಸಿ ಸಾರಿಸಿ, ನೆಲ ಒಣಗಿದ ಮೇಲೆ ತನ್ನಲ್ಲಿದ್ದ

ಒಂದು ಹರಕು ಚಾಪೆಯನ್ನು ಹಾಸಿದನು. ಈ ಏರ್ಪಾಡುಗಳನ್ನು ಮಾಡುವುದರಲ್ಲಿ ಬಾಲಕ್‌ರಾಮನಿಗೆ ತುಂಬಾ ಉತ್ಸಾಹ. ಸಾಯಂಕಾಲ ರಾಮದಾಸನು ಗುಹೆಯು ಪ್ರವೇಶಮಾಡಿ ಆ ಗಾಢಾಂಧಕಾರದಲ್ಲಿ ಮನಸಾ ರಾಮ ಮಂತ್ರವನ್ನು ಜಪಿಸುತ್ತ ಚಾಪೆಯ ಮೇಲೆ ಕುಳಿತನು. ಗುಹೆಯನ್ನು ರಚಿಸಿದ್ದ ಕಲ್ಲುಗಳು ಸೇರಿರುವ ಎಡೆ ಮೂಲೆಗಳಿದ್ದುವು. ಅವುಗಳ ತುಂಬ ತರಗೆಲೆಗಳು ತುಂಬಿದ್ದುವು. ಇವುಗಳಲ್ಲಿ ವಾಸಿಸುತ್ತಿದ್ದ ಹುಳು ಹುಪಟೆಗಳ ಓಡಾಟದಿಂದ ಮರಮರ ಶಬ್ದ ಕತ್ತಲಲ್ಲಿ ರಾಮ ದಾಸನ ಕಿವಿಗೆ ಬೀಳುತ್ತಿದ್ದಿತು. ಕೆಲವು ವೇಳೆ ಅವು ರಾಮದಾಸನ ಹತ್ತಿರವೇ ಓಡಾಡುತ್ತಿರುವಂತೆ ಭಾಸವಾಗುತ್ತಿದ್ದಿತು. ರಾಮದಾಸನ ಜೀವದಿಂದ ಭಯ ತೊಲಗಿ ಹೋಗಿದ್ದಿತು. ಅವನು ವಿಕಲ್ಪಗೊಳ್ಳದೆ ಶಾಂತನಾಗಿದ್ದನು. ದೃಷ್ಟಿ ಮೇಲೆ ಹೋದಾಗ ಗುಹೆಯ ನೆತ್ತಿಯ ಆ ಮೂಲೆಯ ಕಂಡಿಯಿಂದ ದೂರದ ನೀಲಾಕಾಶದಲ್ಲಿ ಹರಡಿ ಮಿನಗುವ ನಕ್ಷತ್ರಗಳು ಕಾಣುತ್ತಿದ್ದವು.

ಬೆಳಕು ಹರಿಯಿತು. ಬಾಲಕ್‌ರಾಮನು ಅವನನ್ನು ನೋಡಲು ಬಂದು ಕೆಲವು ನಿಮಿಷ ನಿಂತನು. ರಾಮದಾಸನು ಮೌನವಾಗಿದ್ದು, ತನ್ನ ಆಗಮನವನ್ನು ಲಕ್ಷಿಸದೆ ಇದ್ದುದರಿಂದ ಹೊರಟುಹೋದನು. ದಿನ ಹರಿಯಿತು. ಆಗ ನಡು ಬೇಸಗೆ. ಸಂಯುಕ್ತಸಂಸ್ಥಾನದಲ್ಲಿ ಬೇಸಗೆಯಲ್ಲಿ ಬಿಸಿಲಿನ ಜೇಗೆಯು ಬಹು. ಕ್ರೂರವಾಗಿರುತ್ತದೆ. ಹಗಲು ಹತ್ತು ಗಂಟೆಯಿಂದ ಸಾಯಂಕಾಲ ಐದು ಗಂಟೆಯ ವರೆಗೂ ಸೂರ್ಯನು ಬೆಂಕಿಯನ್ನು ಕಾರುತ್ತಿದ್ದನು. ನೇರವಾಗಿ ಬಿಸಿಲಿನ ಹೊಡೆತಕ್ಕೆ ಸಿಕ್ಕಿದ್ದ ಗವಿಯಕಲ್ಲು ಕೆಂಡದಂತೆ ಕಾಯುವವು. ಇಕ್ಕಟ್ಟಾದ ಬಾಯಿಂದ ಗವಿಯೊಳಕ್ಕೆ ಕಾದಗಾಳಿ ನುಗ್ಗುತ್ತಾ ಇದ್ದಿತು. ರಾಮದಾಸನು ಚಾಪೆಯನ್ನು ಬಿಟ್ಟು ಕದಲಲಿಲ್ಲ. ಎರಡನೆ ದಿನ ಕಳೆಯಿತು.

ಮೂರನೆಯ ದಿನ ರಾಮದಾಸನು ದೇಹದ ಕಲ್ಪನೆಯನ್ನು ಮೀರಿದನು. ಆಗ ಅವನ ಅನುಭವದಲ್ಲಿ ಬದುಕು ಗಂಭೀರವಾದ ಒಂದು ಶೂನ್ಯ ಎಂದು ಕಂಡಿತು. ಒಂದು ನಿಶ್ಶಬ್ದತೆಯೂ ಶಾಂತಿಯೂ ಅವನ ಇರವನ್ನು ತುಂಬಿದುವು. ಆಗ ಅವನು ಬಹುತೇಕ ಚಾಪೆಯಮೇಲೆ ಅಂಗತಳಕನಾಗಿ ಮಲಗಿರುತ್ತಿದ್ದನು. ಅವನಿಗೆ ಒಂದು ನಿಮಿಷವಾದರೂ ನಿದ್ರೆ ಇಲ್ಲ. ರಾತ್ರಿಕೂಡ ಕಣ್ಣು ಸದಾ ತೆರೆದೇ ಇದ್ದುವು. ಕಣ್ಣುಗಳನ್ನು ಹೆಚ್ಚುಕಾಲ ಮುಚ್ಚಿಕೊಳ್ಳಲು ಆಗಲಿಲ್ಲ. ನಿಶ್ಶಕ್ತಿಯಾಗಲಿ ಹಸಿವಿನ ಬಾಧೆಯಾಗಲಿ ಅವನಿಗೆ ಸ್ವಲ್ಪವಾದರೂ ತೊಂದರೆ ಮಾಡಲಿಲ್ಲ. ಬಾಲಕ್‌ರಾಮನು ಪ್ರತಿದಿನವೂ ಬೆಳಗಿನ ಹೊತ್ತು ಬಂದು ಇವನನ್ನು ನೋಡಿ ಕೊಂಡು ಹೋಗುತ್ತಿದ್ದನು. ಈ ಉಪವಾಸವನ್ನು ರಾಮದಾಸನು ತನ್ನ ಸಲುವಾಗಿ ಆಚರಿಸುತ್ತಿದ್ದಾನೆಂದು ಅವನು ಯೋಚಿಸಿದನು. ರಾಮದಾಸನ ತಪಶ್ಚರ್ಯದ ಫಲವಾಗಿ ತನಗೆ ಮೋಕ್ಷ ದೊರೆಯುವುದೆಂದು ಅವನ ಆಸೆ. ರಾಮದಾಸನಿಗೋ ಈ ಉಪವಾಸ ವ್ರತವನ್ನು ಆಚರಿಸಲು ಕಾರಣ ಗೊತ್ತಿರಲಿಲ್ಲ. ಅದನ್ನು ತಿಳಿದುಕೊಳ್ಳ

ಬೇಕೆಂಬ ಕುತೂಹಲವೂ ಇರಲಿಲ್ಲ. ಅವನು ಸುಮ್ಮನೆ **ರಾಮನ** ಇಚ್ಛೆಯಂತೆ ಅದನ್ನು ಆಚರಿಸಿದನು. ಮಾರನೆಯ ದಿನ ಸಮರಾತ್ರಿಯಲ್ಲಿ ರಾಮದಾಸನು ಆಸನದಲ್ಲಿ ಕುಳಿತಿದ್ದಾಗ ಒಂದು ದೊಡ್ಡ ಗುಡುಗಿನ ಧ್ವನಿ ಕೇಳಿಸಿತು. ಕಾಲುಗಂಟೆಯ ಕಾಲ ಬಲವಾಗಿ ಮಳೆ ಸುರಿಯಿತು. ಗುಹೆಯ ನೆತ್ತಿಯ ಬಾಗಿಲಿಂದ ಸುರಿದ ಮಳೆಯ ನೀರು ರಾಮದಾಸನ ಮೇಲೆ ಅವನು ಒಂದು ಜಲಪಾತದ ಬುಡದಲ್ಲಿ ಕುಳಿತಿದ್ದರೆ ಹೇಗೋ ಹಾಗೆ ನೇರವಾಗಿ ಬಿದ್ದಿತು. ರಾಮದಾಸನು ಸಂಪೂರ್ಣವಾಗಿ ನೆನೆದು ಹೋದನು; ಗುಹೆಯಲ್ಲಿ ಒಂದು ಅಂಗುಲದೆತ್ತರ ನೀರು ನಿಂತಿತು. ರಾಮದಾಸನು ಕದಲಲಿಲ್ಲ. ಅವನ ಏಕಮಾತ್ರ ವಸ್ತ್ರವೂ ಚಾಪೆಯೂ ಪೂರ್ತಿಯಾಗಿ ತೊಯ್ದಿದ್ದುವು. ಮಾರನೆಯ ದಿನ ಬಿಸಿಲು ಎಂದಿನಂತೆಯೇ ತೀಕ್ಷ್ಣವಾಗಿ ಕಾಯ್ದಿತು. ಆದ್ದರಿಂದ ಮಧ್ಯಾಹ್ನದ ಹೊತ್ತಿಗೆ ಗುಹೆಯ ನೀರೆಲ್ಲಾ ಇಂಗಿತು. ಹಾಗೆಯೇ ರಾಮದಾಸನ ಬಟ್ಟೆಯೂ ಚಾಪೆಯೂ ಒಣಗಿದವು.

ಈ ಉಪವಾಸದ ಸಮಾಚಾರ ಬಾಂದದಲ್ಲಿ ಹರಡಿ ಜನಗಳು ರಾಮದಾಸನನ್ನು ನೋಡಲು ತಂಡತಂಡವಾಗಿ ಬೆಟ್ಟವನ್ನೇರಿ ಬಂದರು. ಕೆಲವರು ಕೆಳಗಿನ ಗುಹೆಯ ವರೆಗೆ ಬಂದು ಬಾಲಕ್‌ರಾಮನಿಂದ ವಿಚಾರ ತಿಳಿದುಕೊಂಡು ಹಿಂದಿರುಗಿದರು. ಇನ್ನು ಕೆಲವರು ರಾಮದಾಸನಿದ್ದ ಮೇಲಣ ಗುಹೆಯ ಬಾಗಿಲವರೆಗೂ ಏರಿ ಕಲ್ಲುಗಳ ಸಂದಿಯಲ್ಲಿ ಇಣಿಕಿ ನೋಡುವರು. ಒಳಗೆ ಬರಲು ಯಾರಿಗೂ ಧೈರ್ಯವಿರಲಿಲ್ಲ. ಅದು ಒಂದು ಮೂಢಭೀತಿ. ಆದರೂ ಮಧ್ಯಾಹ್ನ ಒಬ್ಬನು ಧೈರ್ಯಮಾಡಿ ಗುಹೆಯ ಒಳಕ್ಕೆ ಬಂದನು. ರಾಮದಾಸನು ಮಲಗಿದ್ದನು. ಅವನು ರಾಮದಾಸನ ಕಾಲಿನ ಹತ್ತಿರ ಕುಳಿತು ಮೆತ್ತಗೆ ಕಾಲುಗಳನ್ನು ಒತ್ತಲು ಪ್ರಾರಂಭಿಸಿದನು. ಹಾಗೆಯೇ ರಾಮದಾಸನ ಮುಖವನ್ನು ಸಮೀಪಿಸಿ ಅಳುವುದಕ್ಕೆ ಪ್ರಾರಂಭಿಸಿದನು; ಎಳೆಯ ಮಗುವಿನಂತೆ ಅತ್ತನು. ಅಂಗಿಯ ತೋಳಿನಿಂದ ಕಣ್ಣೀರನ್ನು ವರೆಸಿಕೊಳ್ಳುತ್ತಾ ಹೀಗೆಂದನು.

"ಮಹರಾಜ್! ನಾನೊಬ್ಬ ಬಡ ಮೋಚಿ. ರಸ್ತೆಯ ಮಗ್ಗುಲಲ್ಲಿ ಕೆಲಸ ಮಾಡುತ್ತೇನೆ. ಪಾದರಕ್ಷೆಯನ್ನು ಸರಿಮಾಡಿಸಿಕೊಳ್ಳಲು ಬಂದಿದ್ದ ಒಬ್ಬರು ನಿಮ್ಮ ಉಪವಾಸದ ವಿಷಯವನ್ನು ತಿಳಿಸಿದರು. ನೀವು ನೀರನ್ನೂ ಕುಡಿಯದೆ ಉಪವಾಸ ಮಾಡುತ್ತಿದ್ದೀರೆಂದು ಹೇಳಿದರು. ಈ ವರ್ತಮಾನವನ್ನು ಕೇಳಿ ನನಗೆ ಬಹು ಕಷ್ಟವಾಯಿತು. ಬೆಟ್ಟದಮೇಲೆ ಅನ್ನಾಹಾರಗಳಿಲ್ಲದೆ ಒಬ್ಬರು ಉಪವಾಸಮಾಡುತ್ತಿರುವುದು ತಿಳಿದೂ ನಾನು ಮನೆಗೆ ಹೋಗಿ ಹೇಗೆ ಊಟಮಾಡಲಿ ಎಂಬ ಯೋಚನೆ ಹುಟ್ಟಿತು. ಇದಕ್ಕೆ ಮನಸ್ಸು ಒಪ್ಪಲಿಲ್ಲ. ಮಂಕುಬಡಿದು ಏನೂ ತೋರದೆ ನಾನು ಕೆಲಸವನ್ನು ಎಸೆದುಬಿಟ್ಟು ಇಲ್ಲಿಗೆ ಓಡಿಬಂದೆ. ನನ್ನ ತೀರ್ಮಾನ ಇಷ್ಟೆ! ನೀವು ಭೋಜನಮಾಡುವವರೆಗೆ ನಾನೂ ಮಾಡುವುದಿಲ್ಲ. ನಿಮ್ಮೊಂದಿಗೆ

ಉಪವಾಸಮಾಡುವುದು ನನಗೆ ಸುಖ. ಅದುವರೆಗೆ ನಾನು ಈ ಗುಹೆಯನ್ನೂ ಬಿಟ್ಟು ಸರಿಯುವುದಿಲ್ಲ"

ಅವನ ಮಾತು, ರಾಮುದಾಸನ ಹೃದಯದಲ್ಲಿ ಉಪವಾಸ ಕಾಲದಲ್ಲಿ ಸ್ತಬ್ಧವಾಗಿದ್ದ ಒಂದು ನಾಡಿಯನ್ನು ಮೀಟಿ ಅದು ಸ್ಫುರಿಸುವಂತೆ ಮಾಡಿತು. ಅದರಿಂದ ಹುಟ್ಟಿದ ಪುಳಕಕ್ಕೆ ಶರೀರಾದ್ಯಂತವೂ ಕಂಪಿಸಿತು. ರಾಮುದಾಸನು ತಟಕ್ಕನೆ ಎದ್ದು ತನ್ನ ಎರಡು ಕೈಗಳನ್ನೂ ಮೋಚಿಯ ಭುಜದಮೇಲಿಟ್ಟು,

"ರಾಮುದಾಸನು ಏನು ಮಾಡಬೇಕೆನ್ನುತ್ತೀಯೆ ?" ಎಂದು ಕೇಳಿದನು.

ಮೋಚಿ "ಬೇರೆ ಏನೂ ಅಲ್ಲ. ಆಹಾರವನ್ನು ಸ್ವೀಕರಿಸಿ" ಎಂದನು.

ರಾಮುದಾಸನು "ಹಾಗಾದರೆ ಏನಾದರೂ ತಂದುಕೊಡು" ಎಂದನು.

ಮೋಚಿ (ಆದರದಿಂದ) "ನಿಮಗೇನು ಬೇಕಾದರೂ ತಂದುಕೊಡುತ್ತೇನೆ" ಎಂದು ಉತ್ತರಕೊಟ್ಟನು.

ರಾಮುದಾಸನು "ಒಂದು ಬಟ್ಟಲು ಹಾಲು" ಎಂದು ಸೂಚಿಸಿದನು.

ಗೆಳೆಯ ಮೋಚಿ ಕೂಡಲೆ ಗವಿಯಿಂದ ಹೊರಟು ಹತ್ತು ನಿಮಿಷಗಳೊಳಗೆ ಒಂದು ಬೋಗುಣಿ ತುಂಬ ಹಾಲನ್ನು ತಂದನು. ಅವನು ಏದುತ್ತಿರುವುದನ್ನು ನೋಡಿದರೆ ಅಲ್ಲಿಂದ ಪೇಟೆಗೂ ಪೇಟೆಯಿಂದ ಹಿಂದಕ್ಕೂ ಅವನು ಓಡಿರಬೇಕೆಂದು ಕಂಡಿತು.

"ಕೊಳ್ಳಿರಿ ಮಹರಾಜ್ !" ಎಂದು ಹೇಳಿ ಮೋಚಿ ಹಾಲನ್ನು ನೀಡಿದನು. ರಾಮುದಾಸನು ಅದನ್ನು ಕುಡಿದನು.

## (iii) ದುಂಡುಗಾರ ಬಾಲಕ್‌ರಾಮು

ಉಪವಾಸದ ಪಾರಣೆಯಾದೊಡನೆಯೇ ರಾಮುದಾಸನು ಗುಹೆಯನ್ನು ಬಿಟ್ಟು ಕೆಳಕ್ಕೆ ಬಂದನು. ಅವನನ್ನು ನೋಡಿ ಬಾಲಕ್‌ರಾಮುನಿಗೆ ಆಶ್ಚರ್ಯವಾಯಿತು.

ರಾಮುದಾಸನು "ರಾಮುಜಿ, ರಾಮುದಾಸನು ಬೆಟ್ಟವನ್ನು ಬಿಟ್ಟು ಬಾಂದಾದಿಂದ ಹೋಗಬೇಕೆಂದು ರಾಮನ ಆಜ್ಞೆಯಾಗಿದೆ. ಇಗೋ ಹೊರಟನು" ಎಂದನು.

ಬಾಲಕ್‌ರಾಮನು "ಸರಿ, ನಾನೂ ಒಂದಿಗೇ ಹೊರಡುವವನು. ನಾನು ನೀವಿದ್ದಲ್ಲೇ ಇರುವವನು. ನಿಮ್ಮನ್ನು ಬಿಡಲಾರೆ" ಎಂದು ಹೇಳಿದನು.

ರಾಮುದಾಸನು ಬೇಡವೆಂದು ಒಪ್ಪಿಸಲು ನೋಡಿದನು. ಅವನು ಹಟ ಮಾಡಿದನು. ಇಬ್ಬರೂ ಬೆಟ್ಟವಿಳಿದರು. ಬಾಲಕ್‌ರಾಮನು ರಾಮುದಾಸನಿಗೆ ಸೇಟ್ ಮೂಲಚಂದನ ಮನೆಯ ದಾರಿಯನ್ನು ತೋರಿಸಿದನು. ಸೇಟನೂ ಆತನ ಪತ್ನಿಯೂ ಈ ಇಬ್ಬರನ್ನೂ ಸಂತೋಷದಿಂದ ಸ್ವಾಗತಿಸಿದರು. ಬೆಳಿಗ್ಗೆ ಕಾಲುನಡಿಗೆಯಲ್ಲಿ ಝಾನ್ಸಿಗೆ ಹೋಗುವುದಾಗಿ ರಾಮುದಾಸನು ತಿಳಿಸಿದನು.

ಬಾಲಕ್‌ರಾಮನು "ಸ್ವಾಮಿಜಿ, ನಿಮ್ಮನ್ನು ಮಹೋಬಕ್ಕೆ ಕರೆದುಕೊಂಡು ಹೋಗುತ್ತೇನೆ" ಎಂದು ಮಧ್ಯೆ ಮಾತನಾಡಿ ಒತ್ತಾಯ ಮಾಡಿದನು. "ಅಲ್ಲಿಗೆ ಮೂರು ಮೈಲಿ ದೂರದಲ್ಲಿ ಕಾಡುಗುಡ್ಡಗಳ ಒಂದು ಸ್ಥಳ ನೋಡಲರ್ಹವಾದದ್ದಿದೆ. ಅದನ್ನು ಒಂದು ತಪೋಭೂಮಿ ಎಂದು ಹೇಳುತ್ತಾರೆ. ಅದಕ್ಕೆ ಗೋಃಕಾರ್ ಪರ್ವತವೆಂದು ಹೆಸರು. ನನಗೆ ಅಲ್ಲಿ ಕೆಲವು ತಿಂಗಳು ವಾಸಮಾಡುವ ಸಂದರ್ಭ ಬಂದಿದ್ದಿತು. ನಾವು ನೇರವಾಗಿ ಅಲ್ಲಿಗೆ ಹೋಗೋಣ. ನಡೆಯುವುದು ಬೇಡ, ರೈಲಿನಲ್ಲಿ ಹೋಗೋಣ" ಎಂದನು.

ಮಹೋಬಕ್ಕೆ ಹೋಗಲು ರಾತ್ರಿಯ ಒಂದು ರೈಲು ಇದ್ದಿತು. ಅದರಲ್ಲಿ ಪ್ರಯಾಣ ಮಾಡಬಹುದೆಂದು ರಾಮದಾಸನು ಸೂಚಿಸಿದನು. ಇಷ್ಟು ಹೊತ್ತಿಗೆ ಸಾಧುಗಳ ದರ್ಶನಕ್ಕೆಂದು ಮೂಲ್‌ಚಂದನ ಮನೆಯಲ್ಲಿ ಜನಗಳ ದೊಡ್ಡ ಗುಂಪು ಸೇರಿತು. ಅದರಲ್ಲಿ ಭಕ್ತೆಯಾದ ಮೂಲ್‌ಚಂದನ ತಂಗಿ ಇದ್ದಳು. ಆಕೆ ಮುಂದೆ ಬಂದು "ಮಹಾರಾಜ್, ನನ್ನದೊಂದು ವಿನಯದ ಕೋರಿಕೆ. ನಿಮ್ಮ ಪ್ರಯಾಣವನ್ನು ನಾಳೆ ರಾತ್ರಿಗೆ ಮುಂದುವರಿಸಬೇಕೆಂದು ಬೇಡುತ್ತೇನೆ. ನೀವಿಬ್ಬರೂ ನಾಳೆ ಮಧ್ಯಾಹ್ನದ ಊಟಕ್ಕೆ ನಿಮ್ಮ ಸಾನ್ನಿಧ್ಯವನ್ನು ಕೊಟ್ಟು ನನ್ನ ಮನೆಯನ್ನು ಪಾವನಮಾಡಬೇಕು" ಎಂದು ಕೇಳಿಕೊಂಡಳು.

ರಾಮದಾಸನು ಆಕೆಯ ಆಹ್ವಾನವನ್ನು ಅಂಗೀಕರಿಸಿದನು. ಬಾಲಕ್‌ರಾಮನೂ ಅನುಮೋದಿಸಿದನು. ಆ ರಾತ್ರಿಯನ್ನು ಮೂಲ್‌ಚಂದನ ಮನೆಯ ಮುಂದಿನ ಅಂಗಳದಲ್ಲಿ ಕಳೆಯಲಾಯಿತು. ಮಾರನೆಯ ದಿನ ಮಧ್ಯಾಹ್ನ ಹನ್ನೊಂದು ಗಂಟೆ ಸಮಯದಲ್ಲಿ ಮೂಲ್‌ಚಂದನ ತಂಗಿ ಸಾಧುಗಳನ್ನು ತನ್ನ ಮನೆಗೆ ಕರೆದು ಕೊಂಡು ಹೋಗಲು ಬಂದಳು. ಈಕೆ ಧನಿಕನಾದ ಒಬ್ಬ ವರ್ತಕನ ಹೆಂಡತಿ.

ಈಕೆ ಸಾಧುಗಳನ್ನು ತನ್ನ ದೊಡ್ಡಮನೆಯ ಮಹಡಿಯ ಒಂದು ಕೊಟಡಿಗೆ ಕರೆದುಕೊಂಡು ಹೋಗಿ, ಜೊತೆಯಲ್ಲಿ ಕುಳ್ಳಿರಿಸಿ ಊಟಕ್ಕೆ ಬಡಿಸಿದಳು. ಮಿಷ್ಟಾನ್ನದ ಭೋಜನ. ಈ ಮಾತೆ ಪ್ರೇಮಪೂರ್ಣೆ. ಊಟವಾದನಂತರ ಈಕೆ ರಾಮ ದಾಸನನ್ನು ಭಕ್ತಿಯ ಮೇಲೆ ಉಪನ್ಯಾಸ ಮಾಡಬೇಕೆಂದು ಕೇಳಿಕೊಂಡಳು. ಮನೆಯ ಸ್ತ್ರೀಯರೆಲ್ಲಾ ಉಪನ್ಯಾಸ ಕೇಳಲು ಕೊಟಡಿಯೊಳಗೆ ಬಂದು ಕುಳಿತರು. ರಾಮದಾಸನಿಗೆ ಹಿಂದೀಭಾಷಾ ಪರಿಶ್ರಮ ಸ್ವಲ್ಪವಾಗಿದ್ದರೂ ಧಾರ್ಮಿಕ ವಿಷಯ ಗಳನ್ನು ಕುರಿತು ಉಪನ್ಯಾಸಮಾಡುವ ಕಾಲದಲ್ಲಿ ಅವನಿಗೆ ಮಾತು ಧಾರಾಳ ವಾಗುತ್ತಿದ್ದಿತು. ಅವನು ಸುಮಾರು ಒಂದು ಗಂಟೆಯಕಾಲ ಮಾತನಾಡಿದನು. ಉಪನ್ಯಾಸದಲ್ಲಿ ಪುರಾಣದ ಕಥೆಗಳನ್ನು ಸೇರಿಸಿ ಭಕ್ತರ ಜೀವನದಲ್ಲಿ ಬಹು ಒಳ ಕೋಟೆ ನಡೆದು ಕೊನೆಯಲ್ಲಿ ಭಕ್ತಿಯೇ ಜಯಿಸುವುದು ಎಂಬುದನ್ನು ವಿವರಿಸಿದನು. ಒಂದು ಮಾತಿನಲ್ಲಿ, (ಮಾನುಷಜನ್ಮವನ್ನು ಸಾರ್ಥಕಮಾಡುವ ಒಂದೇ ಉದ್ದೇಶ

ದೈವಭಕ್ತಿಯೆಂದು ವಿಶದಪಡಿಸಿದನು.) ಶ್ರೋತೃಗಳಿಗೆ ಈ ಮಾತಿನಿಂದ ಮನಸ್ಸು ಕರಗಿ ಅವರ ಕಣ್ಣುಗಳಿಂದ ಪರಿಶುದ್ಧ ಭಾವೋದ್ರೇಕದ ಅಶ್ರು ಹರಿಯಿತು.

ರಾಮದಾಸನು ಈಗ ಎದ್ದು ಹೊರಡಲು ಸಿದ್ಧನಾದನು. ಬಾಲಕ್‌ರಾಮನು ಅವನಿಗೆ ಇನ್ನೂ ಕೆಲವು ನಿಮಿಷ ಕುಳಿತುಕೊಳ್ಳುವಂತೆ ಸಂಜ್ಞೆಮಾಡಿ, "ನಾನೂ ಎರಡು ಮಾತು ಹೇಳಬೇಕಾಗಿದೆ" ಎಂದು ಹೇಳಿ ಆತಿಥ್ಯವನ್ನಿತ್ತ ಮಾತೆಯ ಕಡೆಗೆ ತಿರುಗಿ "ಸಾಧುಗಳ ಸೇವೆಗಾಗಿ ಇಪ್ಪತ್ತು ರೂಪಾಯಿ ಕೊಡಬೇಕು. ತಕ್ಷಣ, ಎಲ್ಲಿ" ಎಂದು ನೊರೆದು ಬಲಗೈಯನ್ನು ಮೇಲಕ್ಕೆ ಎತ್ತಿ ಕೆಳಗಿಳಿಸಿ ಅಂಗೈಯಿಂದ ನೆಲವನ್ನು ಅಪ್ಪಳಿಸಿದನು. ಅನಿರೀಕ್ಷಿತವಾಗಿ ಒದಗಿದ ಈ ದುಡ್ಡಿನ ಅಭಿಯೋಗವನ್ನು ಕೇಳಿ, ಆದರವಂತೆಯಾದ ಆ ಯಜಮಾನತಿಯೂ ಇತರ ಸ್ತ್ರೀಯರೂ ಮೂಕರಾದಂತಾದರು.

ಬಾಲಕ್‌ರಾಮನು "ಮಾತಾಜಿ, ಏಕೆ ಹಿಂದು ಮುಂದೆ ನೋಡುತ್ತೀಯೆ ? ಹಣವನ್ನು ಕೊಡು. ಹೊತ್ತಿಲ್ಲ; ಇಪ್ಪತ್ತು ರೂಪಾಯಿ ಬರಲಿ" ಎಂದನು.

ಮಾತೆ ಗಾಬರಿಪಟ್ಟು ಕೊಟಡಿಯಿಂದ ಹೋಗಿ ಹಣವನ್ನು ತಂದು, ಇಪ್ಪತ್ತು ಬೆಳ್ಳಿ ರೂಪಾಯಿಗಳ ಗುಪ್ಪೆಯನ್ನು ಸಾಧುಗಳ ಮುಂದಿಟ್ಟಳು. ಬಾಲಕ್‌ರಾಮನು ಒಡನೆಯೆ ಆ ಗುಪ್ಪೆಯನ್ನು ಬಾಚಿಕೊಂಡು ಹಣವನ್ನು ಕೈಯಲ್ಲಿ ಹಿಡಿದುಕೊಂಡು ಎದ್ದನು.

"ಸ್ವಾಮಿಜಿ, ನಡೆಯಿರಿ ಇನ್ನು ಹೋಗೋಣ" ಎಂದನು. ಇಬ್ಬರೂ ಮೂಲ್‌ಚಂದನ ಮನೆಗೆ ಹಿಂದಿರುಗಿದರು.

ಬಾಲಕ್‌ರಾಮನು ಈಗ ಧನದ ಪ್ರಭುವಾಗಿ, ಅದನ್ನು ಖರ್ಚುಮಾಡುವ ದಾರಿಯನ್ನು ಹುಡುಕಲಾರಂಭಿಸಿದನು. ಆಗಂತುಕನೊಬ್ಬನನ್ನು ಬಳಿಗೆ ಕರೆದು "ಇಗೋ ಆರು ರೂಪಾಯಿ ಇದೆ. ಅಂಗಡಿಯಿಂದ ನನಗೆ ನಿಲುವಂಗಿಗೆ ಬೇಕಾಗುವಷ್ಟು ಕಿತ್ತಲೆಬಣ್ಣದ ಬಟ್ಟೆಯನ್ನು ಕೊಂಡುಕೊಂಡು ಹಾಗೆಯೇ ಒಬ್ಬ ದರ್ಜಿಯವನನ್ನು ಕರೆದುಕೊಂಡು ಬಾ" ಎಂದು ದುಡ್ಡುಕೊಟ್ಟು ಕಳುಹಿಸಿದನು. ಅವನು ಹಣವನ್ನು ತೆಗೆದುಕೊಂಡು ಹೋದನು.

ಬಾಲಕ್‌ರಾಮನು ನಂತರ ಇನ್ನೊಬ್ಬನನ್ನು ಸಂಬೋಧಿಸಿ "ಏ, ಇಲ್ಲಿ ಬಾ! ಇಗೋ ಎರಡು ರೂಪಾಯಿ, ಎರಡು ರೂಪಾಯಿಯ ಚರಸ್ಸನ್ನು (ಗಾಂಜಾಭಟ್ಟೆಯನ್ನು) ತೆಗೆದುಕೊಂಡು ಬಾ" ಎಂದವನು ಅವನನ್ನೂ ಆ ಕೆಲಸದ ಮೇಲೆ ಕಳುಹಿಸಿದನು. ಎರಡು ಗಂಟೆಗಳೊಳಗೆ ಅವನು ಒಂದು ದೊಗಲೆಯಾದ ನಿಲುವಂಗಿಯನ್ನು ಧರಿಸಿ ಗಾಂಜಾ ಚರಸ್ಸಿನ ಎರಡು ತುಂಬು ದಮ್ಮನ್ನು ಸೇವಿಸಿದನು. ಆತನಲ್ಲಿ ಇನ್ನೂ ಹನ್ನೊಂದು ರೂಪಾಯಿ ಇದ್ದಿತು. ಆ ನಾಣ್ಯ ಕೈಯಲ್ಲಿ ಝಣಝಣ ಗುಟ್ಟುತ್ತಿದ್ದುವು. ಅವನು ಹರ್ಷವನ್ನು ಸೂಸುತ್ತಾ ನಗುತ್ತಿದ್ದನು.

"ಸ್ವಾಮಿಜಿ, ಪೇಟೆಯಲ್ಲಿ ಸುತ್ತಿಬರೋಣ" ಎಂದು ಸೂಚಿಸಿದನು.

ಬಾಲಕ್‌ರಾಮು, ರಾಮುದಾಸ ಮತ್ತು ಇನ್ನೂ ಮೂರು ನಾಲ್ಕು ಜನ ಹೊರಟರು. ಬಾಲಕ್‌ರಾಮನು ಬೀದಿಯಲ್ಲಿ "ಆದೃಷ್ಟಿ ಪರ್ಯಂತ ಭೂಮಂಡಲದ ಸಾರ್ವಭೌಮ" ಎಂಬಂತೆ ಅಟ್ಟಹಾಸದಿಂದ ನಡೆಯುತ್ತಿದ್ದನು. ಬೀಸುವ ಅವನ ಎರಡು ಕೈಯೂ ಹಿಂದಕ್ಕೂ ಮುಂದಕ್ಕೂ ಆಡಿದುವು; ಹೆಜ್ಜೆಹೆಜ್ಜೆಗೂ ಭುಜ ಕುಣಿದುವು; ಕಾಲುಗಳು ಅಗಲವಾಗಿ ದೂರದೂರಕ್ಕೆ ಹೆಜ್ಜೆ ಇಡುತ್ತಾ ಡಂಭದಿಂದ ನಡೆದವು. ತಲೆ ಸಡಿಲವಾದ ಒಂದು ಆಣಿಯಮೇಲೆ ಇದ್ದಿತೆಂಬ ರೀತಿ ಒಂದು ಕೊಂಡ್ಯಾಲಿನಂತೆ ಪಾರ್ಶ್ವದಿಂದ ಪಾರ್ಶ್ವಕ್ಕೆ ತೂರಾಡುತ್ತಿದ್ದಿತು. ಒಟ್ಟು ಆತನ ನಡತೆ, ಮಹನೀಯ ವ್ಯಕ್ತಿಯೊಬ್ಬನು ತನ್ನ ಪವಿತ್ರಪಾದಸ್ಪರ್ಶದಿಂದ ಬಾಂದ ಊರನ್ನು ಪಾವನಮಾಡಿ ಅನುಗ್ರಹಿಸಿದ್ದಾನೆಂಬುದನ್ನು ಅಜ್ಞರಾದ ಜನಗಳಿಗೆ ನಿಶ್ಚಯಮಾಡಿಕೊಡಲು ಪ್ರವೃತ್ತವಾಗಿದ್ದಂತೆ ಕಾಣುತ್ತಿದ್ದಿತು. ಪೇಟೆಯ ಸಂದಣಿಯಲ್ಲಿ ಜನರು ಈತನನ್ನು ಕಂಡಕೂಡಲೆ ದಾರಿಮಾಡಿಕೊಟ್ಟರು. ಎಷ್ಟೋ ಜನ ಅವನಿಗೆ ವಂದನೆಮಾಡಿದರು, ಸಾಷ್ಟಾಂಗ ಪ್ರಣಾಮ ಮಾಡಿದರು.

"ಹೇ, ರಾಮು! ನೀನು ಎಂತಹ ಆಶ್ಚರ್ಯಕರವಾದ ವೇಷಗಳನ್ನು ಹಾಕಿಕೊಳ್ಳುತ್ತಿ!"

ಒಂದು ಕೊಡೆಯ ಅಂಗಡಿಯನ್ನು ಕಂಡು ಬಾಲಕ್‌ರಾಮನು ಅದನ್ನು ಹೊಕ್ಕನು. ಮೂರು ರೂಪಾಯಿಗೆ ಒಂದು ಸೊಗಸಾದ ಕೊಡೆಯನ್ನು ಕೊಂಡು ಹೊರಗೆ ಬಂದನು.

ಅನಂತರ ಒಂದು ಪಾದರಕ್ಷೆಯ ಅಂಗಡಿಗೆ ಹೋಗಿ ಮಿನುಗುವ ಒಂದು ಜೊತೆ ಮೋಜವನ್ನೂ ಹಳದಿ ಕೆಂಪು ಗೆರೆಗಳ ಒಂದು ಜೊತೆ ಕಾಲುಚೀಲವನ್ನೂ ವ್ಯಾಪಾರ ಮಾಡಿ ತೆಗೆದನು.

ಈಗ ಅವನು ಕೊಡೆಯನ್ನು ಬಲದ ಕೈಯಲ್ಲಿ ತಿರುಗಿಸುತ್ತಿದ್ದನು. ಮೋಜಗಳು ಆತನ ಕಾಲಿಗೆ ಸ್ವಲ್ಪ ಚಿಕ್ಕದಾದುದರಿಂದ ಅವನು ಕುಂಟಿಕೊಂಡು ನಡೆಯಬೇಕಾಯಿತು. ಇದರಿಂದ ಅವನ ನಡಿಗೆಗೆ ಒಂದು ಕಳೆ ಕೊಟ್ಟಂತಾಯಿತು. ಅಂಗಡಿಯಲ್ಲಿನ ವರ್ತಕರು, ಒಂದುಕ್ಷಣ ತಮ್ಮಲ್ಲಿ ವ್ಯಾಪಾರಕ್ಕೆ ಬಂದವರಿಗೆ ಗಮನಕೊಡುವುದನ್ನು ಬಿಟ್ಟು, ಬಾಲಕ್‌ರಾಮನನ್ನು ಆಶ್ಚರ್ಯಚಕಿತರಾಗಿ ನೋಡಲಾರಂಭಿಸಿದರು. ಈ ಆಶ್ಚರ್ಯದಲ್ಲಿ ಹೆದರಿಕೆಯೂ ಸೇರಿದ್ದಿತು. ಕೊನೆಗೆ ಇವರು ಮೂಲ್‌ಚಂದನ ಮನೆಗೆ ಸೇರಿದ್ದಾಯಿತು.

"ಮೋಜ ತಯಾರು ಮಾಡಿದವನ ಮನೆ ಹಾಳಾಗಾ!" ಎಂದು ಬಾಲಕ್‌ರಾಮನು ಕಿರಿಚಿದನು.

ಒಂದು ಬೆಂಚಿನ ಮೇಲೆ ಕುಳಿತುಕೊಂಡು, ಅಲ್ಲಿದ್ದ ಒಬ್ಬ ಭಕ್ತನಿಗೆ ಮೋಜವನ್ನು ತೆಗೆಯಲು ಹೇಳಿದನು. ಅಲ್ಲಿದ್ದವರೊಬ್ಬರು ಮೋಜವನ್ನೂ ಕಾಲುಚೀಲ

ವನ್ನೂ ತೆಗೆದರು. ಬಾಲಕ್‌ರಾಮನು ಕಾಲನ್ನು ಹೊರಗೆ ತೆಗೆದಾಗ ಕಾಣಿಸಿದ್ದೇನು? ಗೋಲಿಯ ಗಾತ್ರದ ಎರಡು ಬೊಬ್ಬೆಗಳು.

ಬಾಲಕ್‌ರಾಮನು "ಠಕ್ಕುಗಾರ! ನನಗೆ ಪೂರಾ ಮೋಸ ಮಾಡಿದ. ಅವನನ್ನು ಸುಮ್ಮನೆ ಬಿಡುವುದಿಲ್ಲ. ಬನ್ನಿ, ಅವನ ಹತ್ತಿರ ಹೋಗೋಣ. ಅವನ ನೀಳವಾದ ದಾಡಿಯನ್ನು ಚನ್ನಾಗಿ ಹಿಡಿದು ಎಳೆಯುತ್ತೇನೆ" ಎಂದು ಕೋಪದಿಂದ ಅಬ್ಬರಿಸಿದನು.

ಗುಂಪು ಮತ್ತೆ ಹೊರಟಿತು; ಈಸಲ ಒಂದು ಸಮಾರಂಭಕ್ಕೆ. ಬಾಲಕ್‌ರಾಮನು ಆ ಜನರಲ್ಲಿ ಒಬ್ಬನಿಂದ ಮೋಜಗಳನ್ನು ಹೊರಿಸಿದನು. ಗಂಭೀರದ ನಡಿಗೆಯನ್ನು ಬಿಟ್ಟನು; ವೇಗವಾದ ನಡಿಗೆಯಿಂದ ಆತುರ ಆತುರವಾಗಿ ನಡೆದನು. ಅವನ ಕೈ ಆ ಮುಹಮ್ಮದೀಯನ ಗಡ್ಡವನ್ನು ಹಿಡಿದೆಳೆಯುವುದಕ್ಕೆ ನವೆಗುಟ್ಟುತ್ತಿದ್ದಿರಬೇಕು. ಇವರು ಅಂಗಡಿ ಹತ್ತಿರ ಬಂದರು. ಬಾಗಿಲು ಮುಚ್ಚಿದೆ. ಗಾಂಜಾ ಅಮಲಿನಲ್ಲಿ ಬಾಲಕ್‌ರಾಮನಿಗೆ ತಾನು ಯಾವ ಅಂಗಡಿಯಲ್ಲಿ ವ್ಯಾಪಾರ ಮಾಡಿದ್ದನೆಂಬುದು ಮರೆತುಹೋಯಿತು. ಮುಚ್ಚಿದ್ದ ಅಂಗಡಿಯ ಮಗ್ಗುಲ ಅಂಗಡಿ ಮತ್ತೊಬ್ಬ ಮೋಚಿಯದು. ಗಡ್ಡವಿರುವ ಒಬ್ಬ ಮುದುಕ ಅದರಲ್ಲಿ ಕುಳಿತಿದ್ದನು. ಬಾಲಕ್‌ರಾಮನು ಅವನ ಹತ್ತಿರಕ್ಕೆ ಹೋದನು. ಅವನು ತನ್ನ ನುರಿತ ನಾಲಗೆಯನ್ನು ಪೂರ್ಣ ಸ್ವಾತಂತ್ರದಿಂದ ಆಡಿಸಬೇಕೆನ್ನುವಷ್ಟರಲ್ಲಿ ರಾಮದಾಸನು ಅವನ ಕೈಹಿಡಿದೆಳೆದು, "ಇಲ್ಲಿ ನೋಡು. ನೀನು ಯಾರ ಮೇಲೋ ಕೈಮಾಡುತ್ತಿದ್ದಿ; ನೀನು ಮೋಜಗಳನ್ನು ಕೊಂಡುಕೊಂಡುದುದು ಆ ಮುಚ್ಚಿರುವ ಅಂಗಡಿಯಲ್ಲಿ. ಹೊರಟುಹೋಗೋಣ ಬಾ" ಎಂದು ಎಚ್ಚರಿಸಿದನು.

ಗುಂಪು ಹಿಂದಿರುಗಿತು. ತಡೆದಿಟ್ಟ ಜ್ವಾಲಾಮುಖಿಯಂತೆ ಬಾಲಕ್‌ರಾಮನು ಬುಸುಗುಟ್ಟುತ್ತಿದ್ದನು. ದಾರಿಯುದ್ದಕ್ಕೂ ಅವನು ಅಂಗಡಿಯವನ 'ಮೇಲೆ ಹಾರಿಸಲು ಯಾವಯಾವ ಬೈಗಳನ್ನೋ ಬೈಯಬೇಕೆಂದು ಆರಿಸಿಟ್ಟುಕೊಂಡಿದ್ದನು. ಅವುಗಳನ್ನು ಉಪಯೋಗಿಸಲಾಗಲಿಲ್ಲ. ಇದರಿಂದ ಅವನಿಗೆ ಆದ ಆಶಾಭಂಗ ಬಹಳ. ಆದರೂ ಅವನು, ಈ ನಷ್ಟವನ್ನು ಸ್ವಲ್ಪಮಟ್ಟಿಗೆ ತೀರಿಸಿಕೊಂಡನು. ಮುಚ್ಚಿದ ಅಂಗಡಿಯೆದುರಿಗೆ ನಿಂತು ಅಲ್ಲಿಲ್ಲದ ಮನುಷ್ಯನ ಮೇಲೆ ತನ್ನ ಶಾಪವನ್ನು ಹಾಕಿದನು. ಈ ಶಾಪದಲ್ಲಿ ಆ ಅಂಗಡಿಯವನ ಪೂರ್ವಜರೂ ಮಕ್ಕಳು ಮೊಮ್ಮಕ್ಕಳೂ ಸೇರಿದ್ದರು. ಕೊನೆಗೆ ಎಲ್ಲರನ್ನೂ ಮನುಜಕುಲದ ಅತ್ಯಧಮ ಚಂಡಾಲರಾಗುವಂತೆ ಇವನು ಶಪಿಸಿ ಮುಗಿಸಿದನು. ಹಿಂದಕ್ಕೆ ಹೋಗುವಾಗ ಮರೆತಿದ್ದು ಜ್ಞಾಪಕಕ್ಕೆ ಬಂದ ಹಲವು ಅವಾಚ್ಯಶಬ್ದಗಳನ್ನು ನಿದಾನವಾಗಿ ಗುಡುಗಿನ ಶಬ್ದದ ರೀತಿ ಉಚ್ಚರಿಸಿದನು.

### (iv) ಹಲ್ಲುನೋವಿನ ಕಾರಣ

ಬಾಲಕ್‌ರಾಮನೂ ರಾಮದಾಸನೂ ರಾತ್ರಿ ರೈಲಿನಲ್ಲಿ ಹೊರಟು ಪ್ರಾತಃ

ಕಾಲಕ್ಕೆ ಮಹೋಬವನ್ನು ಮುಟ್ಟಿದರು. ಪೇಟೆಯಲ್ಲಿ ಸಂಧಿಸಿದ ಬಾಲಕ್‌ರಾಮನ ಸ್ನೇಹಿತರು ಅವನ ಯೋಗಕ್ಷೇಮವನ್ನು ವಿಚಾರಿಸಿದರು. ಇವರಲ್ಲಿ ಬಹದೂರ್ ಮತ್ತು ಜಗನ್ನಾಥ ಎಂಬುವರಿಬ್ಬರು, ಬಾಲಕ್‌ರಾಮನ ಶುಶ್ರೂಷೆಯಲ್ಲಿ ಬಹಳ ಆಸಕ್ತಿ ವಹಿಸಿದರು. ಸಾಯಂಕಾಲ ಇವರು ಗೋಃಕಾರ್ ಪರ್ವತಕ್ಕೆ ಹೋದರು. ಊರನ್ನು ಬಿಡುವ ವೇಳೆ ಬಾಲಕ್‌ರಾಮನು ನಿಲುವಂಗಿಯನ್ನು ಕಳಚಿ ಪೇಟೆಯಲ್ಲಿ ಒಬ್ಬ ಗೆಳೆಯನಿಗೆ ದಾನಮಾಡಿದನು. ಹಾಗೆಯೇ ಕೊಡೆಯನ್ನೂ ಪಾದರಕ್ಷೆಗಳನ್ನೂ ಇತರರರಿಗೆ ದಾನಮಾಡಿ ಬರೀ ಕೌಪೀನದಲ್ಲಿದ್ದನು.

ಗೋಃಕಾರ್‌ಪರ್ವತ ಕೆಲವು ತಗ್ಗಾದ ಕೆಲವು ಎತ್ತರವಾದ ಬೆಟ್ಟಗಳ ಸಾಲುಗಳಿಂದ ಆಗಿದೆ. ಬೆಟ್ಟಗಳು ದೊಡ್ಡದೊಡ್ಡ ಕರಿಯ ಕಲ್ಲುಗಳ ಗುಡ್ಡೆಗಳಿಂದ ಆಗಿವೆ. ಇಲ್ಲಿ ದೊಡ್ಡ ಮರಗಳು ಕಡಮೆ. ಗುಡ್ಡದ ಮೇಲೆ ಕುರುಚಲು ಗಿಡಗಳು, ಹುಲ್ಲು, ದಟ್ಟವಾಗಿ ಬೆಳೆದಿದ್ದುವು. ಕೆಳಗಿನ ಮಟ್ಟದಲ್ಲಿ ವಿಶಾಲವಾದ ಒಂದು ಮೈದಾನದಲ್ಲಿ ಶಾಂತವಾದ ತಮ್ಮ ವಕ್ಷದಲ್ಲಿ ಕೆಂಪು ಬಿಳಿಯ ತಾವರೆಗಳನ್ನು ಧರಿಸಿದ ಸಣ್ಣ ಸರೋವರಗಳಿದ್ದುವು. ಬೆಟ್ಟವನ್ನು ಹತ್ತಿ ಇವರು ಸುತ್ತಲೂ ಎತ್ತರವಾದ ಬೆಟ್ಟಗಳ ಸಾಲು ಇರುವ ಒಂದು ಸಮ ಭೂಮಿಯನ್ನು ಸೇರಿದರು. ಸರಿಯಾಗಿ ಇದರ ಮಧ್ಯೆ ನೂರು ಅಡಿ ಎತ್ತರದ ದೊಡ್ಡ ಬಂಡೆಗಳ ಗುಪ್ಪೆ ಒಂದಿದ್ದಿತು. ಈ ಗುಪ್ಪೆಯ ಕೆಳಗೆ ಪೆಟ್ಟಿಗೆಯಂಥ ಕಲ್ಲಿನ ಗುಹೆ ಒಂದಿದ್ದಿತು. ಪ್ರಯಾಸದಿಂದ ಇನ್ನೂ ಮೇಲಕ್ಕೆ ಹತ್ತಿಹೋದಾಗ ಇನ್ನೊಂದು ವಿಶಾಲವಾದ ಆದರೆ ತಗ್ಗಾದ ಕೋಣೆ ಕಂಡಿತು. ಇದು ಎರಡು ಚಪ್ಪಟೆಯಾದ ಕಲ್ಲುಗಳ ಮಧ್ಯೆ ಇದ್ದಿತು. ಇದರಲ್ಲಿ ಒಂದು ಕಡೆ ಒಬ್ಬನಿಗೆ ಸಾಕಾಗುವಷ್ಟು ಸ್ಥಳದ ಗೂಡು ಬೇರೆ ಒಂದಿದ್ದಿತು. ಕೋಣೆಯೂ ಗೂಡೂ ಬಹು ತಗ್ಗು. ಅದರಲ್ಲಿ ನುಸಿಯಬೇಕಾದರೆ ತೆವಳಬೇಕು. ಇವರು ರಾತ್ರಿ ಈ ಮೇಲಣ ಶಿಲೆಯ ಗೂಡಿನಲ್ಲಿ ನಿಂತರು.

ಬಾಲಕ್‌ರಾಮನ ಕೋಪ ಪೂರ್ವದಂತೆಯೇ ಉಗ್ರವಾಗಿದ್ದಿತು. ಅವನು ತೀರ ಅಲ್ಪ ವಿಷಯಗಳಿಂದಲೂ ಸಿಟ್ಟುಗೊಂಡು ಜನಗಳ ಮೇಲೆ ರೇಗುತ್ತಿದ್ದನು. ಒಬ್ಬನೇ ಇದ್ದಾಗ ರಾಮದಾಸನು ಬಾಲಕ್‌ರಾಮನಿಗೆ ಶಾಂತತೆಯ ವಿಷಯವಾಗಿ ಮಾತನಾಡಿದನು. ಇದರಿಂದ ಬಾಲಕ್‌ರಾಮನು ಮಾರನೆಯ ದಿನದಿಂದ ತಾನು ತೀರಾ ಮೌನವಾಗಿರುವುದಾಗಿಯೂ, ಹಾಲನ್ನು ಮಾತ್ರ ಕುಡಿಯುತ್ತ ಗವಿಯನ್ನು ಏಳು ದಿವಸ ಬಿಡದೆ ಇರುವೆನೆಂದೂ ಮನಸ್ಸು ಮಾಡಿದನು. ಅಲ್ಲದೆ ತಾನು ಒಬ್ಬನೇ ಇರಬೇಕೆಂದೂ ರಾಮದಾಸನ ಹೊರತು ಇನ್ನು ಯಾರನ್ನೂ ನೋಡಲಾಗದೆಂದೂ ಬಯಸಿದನು. ರಾಮದಾಸನು ಅವನಿಗೆ ಹಾಲನ್ನೂ ನೀರನ್ನೂ ಬೆಟ್ಟದ ಕೆಳಗಿನಿಂದ ತಂದುಕೊಡುವುದಾಗಿ ಒಪ್ಪಿಕೊಂಡನು, ಮತ್ತು ಬಾಲಕ್‌ರಾಮನನ್ನು ರಾಮಮಂತ್ರವನ್ನು ಜಪಮಾಡುತ್ತಿರಬೇಕಾಗಿ ಕೇಳಿಕೊಂಡನು.

ಮಾರನೆಯ ದಿನ ರಾಮದಾಸನು ಬೆಟ್ಟದ ಬುಡದಲ್ಲಿ ಬಾಗಿರುವ ಒಂದು ಕಲ್ಲ

ಬಳಿ ಕುಳಿತನು. ಪ್ರೇಕ್ಷಕರು ಬರಲು ಆರಂಭಿಸಿದರು. ಬಾಲಕ್‌ರಾಮನನ್ನು ನೋಡ ಬೇಕೆಂದು ಬಯಸಿದರು. ರಾಮದಾಸನು ಇದ್ದ ವಿಷಯವನ್ನು ತಿಳಿಸಿದನು. ಅವರು ತುಂಬ ಅಸಮಾಧಾನದಿಂದ ಗೊಣಗುಟ್ಟಿದರು. ರಾಮದಾಸನು ಒಂದನೆಯದಾಗಿ ಯಾರನ್ನೂ ಬೆಟ್ಟದ ಮೇಲಕ್ಕೆ ಹೋಗಲು ಅವಕಾಶಕೊಡದೆ ಇರುವುದು, ಎರಡನೆಯ ದಾಗಿ ಬಾಲಕ್‌ರಾಮನಿಗೆ ಹಾಲನ್ನೂ ನೀರನ್ನೂ ತಂದುಕೊಡುವುದು, ಹೀಗೆ ತನ್ನ ಮೇಲಿದ್ದ ಹೊರೆಯನ್ನು ನಡೆಸಿದನು.

ಒಂದು ಮಾತು ಹೇಳಬೇಕು. ಬೆಟ್ಟದ ಈ ಭಾಗದಲ್ಲಿ ನೀರಿನ ಅಭಾವ. ಬಾವಿಯಾಗಲಿ ಕೊಳವಾಗಲಿ ಇರಲಿಲ್ಲ. ಗುಹೆಗೆ ಹತ್ತಿರಹತ್ತಿರ ಎರಡು ಮೈಲಿ ದೂರದ ಒಂದು ಬಾವಿಯಿಂದ ನೀರನ್ನು ತರಬೇಕಾಗಿದ್ದಿತು. ಪ್ರೀತಿವಂತ ಗೆಳೆಯರು ಬಹುದೂರ್ ಜಗನ್ನಾಥರು ನೀರಿಗೆ ಏರ್ಪಾಡು ಮಾಡಿದರು.

ಒಂದು ರಾತ್ರಿ ಬಾಲಕ್‌ರಾಮನು ಗುಹೆಯ ಮೇಲುಗಡೆ ಚಪ್ಪಡಿಯ ಮೇಲೆ ಬಿದ್ದುಕೊಂಡು ನರಳುತ್ತ ಅಳುತ್ತ ಇದ್ದುದನ್ನು ರಾಮದಾಸನು ಕಂಡನು. ಹತ್ತಿರಕ್ಕೆ ಹೋಗಿ "ನಿನಗೇನಾಗುತ್ತದೆ ರಾಮು ?" ಎಂದು ಕೇಳಿದನು.

"ಹಲ್ಲು ಬಹು ನೋಯುತ್ತಿದೆ. ಈ ಅಸಾಧ್ಯವಾದ ಬೇನೆಯನ್ನು ತಡೆಯ ಲಾರೆ ಮಹರಾಜ್" ಎಂದು ಅವನು ಬಿಕ್ಕುತ್ತಾ ಹೇಳಿದನು.

ರಾಮದಾಸನು ಅವನ ಮೇಲೆ ಕೈಯಾಡಿಸಿ ಸವರುತ್ತಿರುವಾಗ ಬಾಲಕ್ ರಾಮನು "ನನಗೀಕಷ್ಟ ಏಕೆ ಬಂದಿದೆ ಬಲ್ಲಿರಾ ? ಹೇಳುತ್ತೇನೆ ಕೇಳಿ. ನಾನು ತ್ಯಜಿ ಸಿದ ನನ್ನ ಹೆಂಡತಿ ಮಕ್ಕಳ ಶಾಪವೇ ಕಾರಣವೆಂದು ನಾನು ನಿಜವಾಗಿ ನಂಬಬಲ್ಲೆ" ಎಂದನು.

"ಅಯ್ಯೋ ದೇವರೇ ! ಅದೇ ಕಾರಣವಾದರೆ ನೀನು ಅವರ ಬಳಿಗೆ ಏಕೆ ಹಿಂದಿರುಗಬಾರದು ?" ಎಂದು ರಾಮದಾಸನು ಉದ್ಗರಿಸಿದನು.

"ಅದು ಅಸಾಧ್ಯ ! ಹಿಂದಕ್ಕೆ ಹೋಗುವ ಆಸೆಯೇ ಇಲ್ಲದಂತೆ ಅವರಿಂದ ತೀರಾ ಕಡಿದುಕೊಂಡು ಬಂದಿದ್ದೇನೆ" ಎಂದು ಬಾಲಕ್‌ರಾಮನು ಒದರಿದನು.

"ಅಂತಹದೇನೂ ಇಲ್ಲ ರಾಮು. ಮನಸ್ಸು ಮಾತ್ರ ಮಾಡಿದರೆ ನೀನು ಈಗಲೂ ಹಿಂದಕ್ಕೆ ಅವರಲ್ಲಿಗೆ ಹೋಗಬಲ್ಲೆ" ಎಂದು ರಾಮದಾಸನು ಉತ್ತೇಜನ ಕೊಟ್ಟನು.

ಬಾಲಕ್‌ರಾಮನಾದರೋ ದೃಢವಾದ ನಿಶ್ಚಯದ ಮನುಷ್ಯ. ಇದಾದ ಸ್ವಲ್ಪ ಹೊತ್ತಿನಲ್ಲೇ ಅವನಿಗೆ ನಿದ್ರೆ ಬಂದಿತು. ಬೆಳಗಿನ ಹೊತ್ತಿಗೆ ಹಲ್ಲುನೋವು ನಿಂತು ಹೋಗಿದ್ದಿತು.

ದಿನದಿನ ಕಳೆದುವು. ಊರಿನಿಂದ ಬಹು ಜನರು ಬಾಲಕ್‌ರಾಮನ ದರ್ಶನ ಕ್ಕಾಗಿ ಬರುತ್ತ ಅವನನ್ನು ನೋಡಬೇಕೆಂದು ಗಲಭೆಮಾಡಿದರು. ಅವನು ಮರೆ ಯಾಗಿರುವುದಕ್ಕೆ ರಾಮದಾಸನೇ ಕಾರಣನೆಂಬಂತೆ ಆಕ್ಷೇಪಿಸಿದರು. ರಾಮದಾಸನು ಈ ದೂಷಣೆಯನ್ನು ಸಮಾಧಾನವಾಗಿ ಕೇಳಿದನು. ಅತ್ತ ಬಾಲಕ್‌ರಾಮನು

ತವಕಪಡುತ್ತಿದ್ದನು. ಆತನ ಮನಸ್ಸು ಅದರ ಮೇಲಣ ನಿರ್ಬಂಧವನ್ನು ಪ್ರತಿ ಭಟಿಸುತ್ತಿದ್ದಿತು. ಐದನೆಯ ದಿನ ಭಕ್ತರ ದೊಡ್ಡದೊಂದು ಗುಂಪು ಬೆಟ್ಟದ ಬುಡ ದಲ್ಲಿ ದೊಡ್ಡ ಗಲಾಟೆಯನ್ನೆಬ್ಬಿಸಿತು. ಮೇಲೆ ಏಕಾಕಿಯಾಗಿದ್ದ ಬಾಲಕ್‌ರಾಮನಿಗೆ ಇವರ ಕೂಗಾಟ ಕೇಳಿಸಿತು. ಬಂಧನದಿಂದ ಮುಕ್ತನಾದ ಬಂದಿಯಂತೆ ಅವನು ಗುಹೆಯಿಂದ ಹೊರಕ್ಕೆ ಬಂದು, ಗುಂಡಿನಿಂದ ಗುಂಡಿನಮೇಲೆ ಹಾರುತ್ತ, ಒಂದು ನಿಮಿಷದಲ್ಲಿ ಗುಂಪಿನ ಮಧ್ಯೆ ನಿಂತನು. ಭಕ್ತರೆಲ್ಲರೂ ಇವನನ್ನು ಹರ್ಷಧ್ವನಿಯಿಂದ ಸ್ವಾಗತಿಸಿದರು.

ಕೆಲವು ನಿಮಿಷಗಳವರೆಗೆ ಅವನು ಸೌಮ್ಯವಾಗಿ ಹರ್ಷಚಿತ್ತನಾಗಿ ಮಂದಹಾಸ ದಿಂದಿದ್ದನು. ಆಮೇಲೆ ಐದು ದಿವಸಗಳಿಂದ ಅಡಗಿಸಿಟ್ಟಿದ್ದ ಅವನ ಕೋಪವು ಮತ್ತೆ ತಲೆ ಎತ್ತಿತು. ಅದರ ವಿಷ ತಡೆಯಿಲ್ಲದ ವೇಗದಲ್ಲಿ ಅಲ್ಲಿ ಸೇರಿದ್ದ ಜನರ ಮೇಲೆ ಬೈಗುಳ ಮಳೆಯಲ್ಲಿ ಪ್ರವಹಿಸಿತು. ಇದನ್ನು ನೋಡಿ ಜನರ ಗುಂಪು ಸ್ವಲ್ಪ ಸ್ವಲ್ಪವಾಗಿ ಚದುರಿ ಕಣ್ಮರೆಯಾಯಿತು. ಬಹುಜನ ತಮ್ಮ ಮನೆಗೆ ಸರಿದರು. ಅವನ ಕಾಠಿಣ್ಯವನ್ನು ಲಕ್ಷಿಸದೆ ಅವನಲ್ಲಿ ಪ್ರೀತಿ ವಿಶ್ವಾಸಗಳನ್ನಿಟ್ಟಿದ್ದ ಕೆಲವರು ಮಾತ್ರ ಉಳಿದರು. ಅವನ ಕೂಗಾಟ ನಿಜವಲ್ಲವೆಂದೂ, ಅವನ ಹೃದಯ ಮೃದು ವೆಂದೂ, ಕನಿಕರ ಪ್ರೀತಿಯಿಂದ ತುಂಬಿರುವುದೆಂದೂ ಅನೇಕರು ಬಲ್ಲರು. ಒಂದು ಸಲ ರಾಮದಾಸನು ಇವನು ಒಂದು ಮಗುವನ್ನೆತ್ತಿಕೊಂಡು ಆಡಿಸುತ್ತಿದ್ದುದನ್ನು ನೋಡಿದನು. ಆ ಮಗುವಿನ ಸಂಗಡವಿದ್ದಾಗ ಅವನು ಹರ್ಷದಲ್ಲಿ ಮುಳುಗಿ ಹೋಗಿದ್ದನು. ಅವನು ಸುಳ್ಳು ಮೋಸ ದುರಾಸೆಗಳ ಪರಮ ಶತ್ರುವಾಗಿದ್ದನು. ಇವುಗಳನ್ನು ಕಂಡರೆ ಅವನಿಗೆ ಅತಿ ಅಸಹನೆ ಅತಿ ಕ್ರೌರ್ಯ.

ಬಾಲಕ್‌ರಾಮನು ಮೌನವ್ರತವನ್ನು ಪೂರ್ತಿಗೊಳಿಸಿದ ಆ ದಿನದ ಸಂಜೆ ರಾಮದಾಸನು ರಾತ್ರಿಯ ರೈಲಿನಲ್ಲಿ ಮಹೋಬದಿಂದ ಝಾನ್ಸಿಗೆ ಪ್ರಯಾಣಮಾಡು ವುದಾಗಿ ತಿಳಿಸಿದನು. ಬಾಲಕ್‌ರಾಮನು ಕೂಡದೆಂದು ಅತ್ತು ರಾಮದಾಸನ ಕಾಲುಗಳನ್ನು ಹಿಡಿದು ಬೇಡಿಕೊಂಡನು. ಅವನನ್ನು ಇನ್ನೂ ಹೆಚ್ಚುಕಾಲ ನಿಲ್ಲಿಸ ಬೇಕೆಂದು ಸರ್ವಪ್ರಯತ್ನವನ್ನೂ ಮಾಡಿದನು. ಆದರೆ ರಾಮದಾಸನ ಸಂಕಲ್ಪ ದೃಢವಾಗಿದ್ದಿತು. ಅದನ್ನು ಬದಲಾಯಿಸಲು ಬಾಲಕ್‌ರಾಮನಿಗೆ ಈ ಸಲ ಸಾಧ್ಯ ವಾಗಲಿಲ್ಲ. ಅದೇ ಪ್ರಕಾರ ರಾತ್ರಿಯ ರೈಲಿನಲ್ಲಿ ಪ್ರಯಾಣಮಾಡಿ ರಾಮದಾಸನು ಮಾರನೆಯ ಬೆಳಗ್ಗೆ ಝಾನ್ಸಿಯನ್ನು ಸೇರಿದನು.

---

# ಅಧ್ಯಾಯ ೨೦

## ಆಬೂ ಪರ್ವತ

### (i) ಶ್ರೀ ಶಾಂತಿವಿಜಯಜಿ:—ಪರಿಶುದ್ಧ ಸಾಧು

ರಾಮದಾಸನು ಮತ್ತೆ ಲಕ್ಷ್ಮೀತಲಾವಿನ ದಂಡೆಯ ಮೇಲಣ ಆಟ್ಕಂಬದಲ್ಲಿ ನಿಂತನು. ಇಲ್ಲಿಗೆ ಬಂದ ದಿನ ಅವನಿಗೆ ಹೆಚ್ಚಿನ ಜ್ವರ ಬಂದು ಮೂರು ದಿವಸ ಇದ್ದಿತು. ರಾಮಕಿಂಕರನು ಅವನಿಗೆ ಶುಶ್ರೂಷೆ ಮಾಡಿದನು. ಆತನಿಗೆ ರಾಮದಾಸನ ವಿಷಯದಲ್ಲಿ ಬಹಳ ಕಳವಳ ಉಂಟಾಯಿತು. ಜ್ವರ ಬಹು ಹೆಚ್ಚಿದ್ದಾಗ ಅವನು ಕೆಲವು ಸಂದರ್ಭಗಳಲ್ಲಿ ಅತ್ತನು. ರಾಮದಾಸನು ಔಷಧ ತೆಗೆದುಕೊಳ್ಳಲು ಒಪ್ಪಲಿಲ್ಲ; ಒಂದೆರಡು ದಿವಸ ಉಪವಾಸ ಮಾಡುವುದಾಗಿ ತಿಳಿಸಿದನು. ಮೊದಲು ರಾಮಕಿಂಕರನು ಇದಕ್ಕೆ ಅಡ್ಡಿ ಮಾಡಿದನು. ಆದರೆ ಜ್ವರ ಕಾಯುತ್ತಲೇ ಇದ್ದುದರಿಂದ ಒಪ್ಪಬೇಕಾಯಿತು. ಎರಡು ದಿವಸಗಳ ಉಪವಾಸದಿಂದ ಜ್ವರ ಇಳಿಯಿತು.

ಇಲ್ಲಿದ್ದಾಗ ರಾಮದಾಸನಿಗೆ ಆಬೂ ಪರ್ವತದ ಮೇಲೆ ತಂಗಿದ್ದ ಎಲಿಜಬೆತ್ ಮಾತೆಯಿಂದ ಆಹ್ವಾನ ಬಂದಿತು. ಅವನು ಆಬೂ ಪರ್ವತಕ್ಕೆ ಹೋಗಲು ನಿಶ್ಚಯಿಸಿದನು. ರಾಮಕಿಂಕರನೂ ಝಾನ್ಸಿಯ ಇತರ ಸ್ನೇಹಿತರೂ, ಬಂದೇಲ್ ಖಂಡದಲ್ಲಿ ಎಲ್ಲಿಯಾದರೂ ಒಂದು ಕಡೆ, ರಾಮದಾಸನು ಒಂದು ಆಶ್ರಮ ಮಾಡಿಕೊಂಡಿರಬೇಕೆಂದು ಸೂಚಿಸಿದರು. ಸ್ವಲ್ಪ ಚರ್ಚೆಮಾಡಿ ಇಂತಹ ಆಶ್ರಮಕ್ಕೆ ಗೋಃಕಾರ ಪರ್ವತವೇ ಪ್ರಶಸ್ತವಾದ ಸ್ಥಳವೆಂದು ನಿರ್ಧರಿಸಿದರು. ರಾಮದಾಸನು ಆಬೂಪರ್ವತದ ಯಾತ್ರೆಯ ನಂತರ ಅಲ್ಲಿಗೆ ಹಿಂದಿರುಗಬೇಕೆಂದು ಒತ್ತಾಯ ಮಾಡಿದರು. ಈ ಸಮಯಕ್ಕೆ ರಾಮಚರಣದಾಸನೂ ಝಾನ್ಸಿಗೆ ಬಂದು ಸೇರಿದನು. ರಾಮದಾಸನೊಂದಿಗೆ ಇರಲು ಅಪ್ಪಣೆ ಕೊಡಬೇಕೆಂದು ಪುನಃ ಬೇಡಿಕೊಂಡನು. ಮಹೋಬಕ್ಕೆ ಹೋಗಿ ಕಾದಿರಬೇಕೆಂದೂ, ಆಬೂಪರ್ವತದಿಂದ ಹಿಂದಕ್ಕೆ ಬರುವಾಗ ತಾನು ಅವನನ್ನು ನೋಡುವುದಾಗಿಯೂ ರಾಮದಾಸನು ತಿಳಿಸಿದನು.

ರಾಮದಾಸನು ಸ್ವಾಮಿ ನಿರ್ಭಯಾನಂದಜಿ ಮತ್ತು ಇವರ ಧರ್ಮಪತ್ನಿಯನ್ನು ಅವರ ಕುಟಿಯಲ್ಲಿ ಪುನಃ ಒಮ್ಮೆ ಸಂದರ್ಶಿಸಿ ಝಾನ್ಸಿಯಿಂದ ಹೊರಡುವುದಕ್ಕೆ ಮುಂಚಿನ ಊಟವನ್ನು ಅವರ ಸಂಗಡ ಮಾಡಿದನು.

ರಾಮದಾಸನ ಆಗಮನವನ್ನು ತಿಳಿಸಲು, ಎಲಿಜಬೆತ್ ಮಾತೆಗೆ ಮುಂದಾಗಿ ತಂತಿ ಸಮಾಚಾರ ಕಳುಹಿಸಲಾಗಿದ್ದಿತು. ರಾಮದಾಸನು ಸಕಾಲದಲ್ಲಿ ಆಬೂ ರೋಡು ಸ್ಟೇಷನ್ನನ್ನು ಸೇರಿದಾಗ ರಾಜಾರಾಮರ ಶಿಪಾಯಿ ಸ್ಟೇಷನ್ನಿನಲ್ಲಿ ಕಾದಿದ್ದನು. ಇಲ್ಲಿಂದ ಆ ಶಿಪಾಯಿಯೊಂದಿಗೆ ರಾಮದಾಸನು ಮೋಟಾರು ಬಸ್ಸಿನಲ್ಲಿ

ಆಬೂ ಪರ್ವತದ ಮೇಲೆ ಇಪ್ಪತ್ತು ಮೈಲಿ ಪ್ರಯಾಣಮಾಡಿ ಕೊನೆಗೆ ಎಲಿಜಬೆತ್ ಮಾತೆಯ ಬಂಗಲೆಯನ್ನು ಮುಟ್ಟಿದನು. ಆ ಬಂಗಲೆಯಲ್ಲಿ ಇಬ್ಬರು ಪ್ರಮುಖ ಅತಿಥಿಗಳಿದ್ದರು. ಅವರು ಲಿಂಬ್ಡಿಯ ಥಾಕೂರ್ ಸಾಹೇಬರು ಮತ್ತು ಭಾವನಗರ ಸಂಸ್ಥಾನದ ದಿವಾನರಾದ ಸರ್ ಪಿ. ಪಟ್ಟಾಣಿಯವರು.

ಎಲಿಜಬೆತ್ ಮಾತೆ ರಾಮದಾಸನನ್ನು ಸ್ವಾಗತಿಸುವುದರ ಸಂತೋಷ ಸ್ಪಷ್ಟ ವಾಗಿದ್ದಿತು. ಆಕೆಯ ಬಂಗಲೆಯಲ್ಲಿ ರಾಮದಾಸನಿಗಾಗಿ ಪ್ರತ್ಯೇಕ ಕೊಟಡಿ ಸಿದ್ಧ ವಾಗಿದ್ದಿತು. ಮಾರನೆಯ ದಿನ ರಾಮಪ್ರಸಾದನೆಂಬ ಜಾಮ್ನಗರದ ಸಂತನೂ ಬಂದು ಅತಿಥಿವೃಂದವನ್ನು ಸೇರಿದನು. ರಾಮದಾಸನು ಹಣ್ಣು ಹಾಲುಗಳನ್ನು ಮಾತ್ರ ತೆಗೆದುಕೊಳ್ಳಲಿಚ್ಛಿಸಿದನು. ಊಟದ ಕಾಲದಲ್ಲಿ ಮಾತೆಯ ಮತ್ತು ಈಕೆಯ ಅತಿಥಿ ಮಹಾಶಯರುಗಳೊಂದಿಗೆ ಕುಳಿತು ಹಾಲು ಹಣ್ಣುಗಳನ್ನು ತೆಗೆದುಕೊಳ್ಳು ತ್ತಿದ್ದನು. (ಮಾತೆ ರಾಮದಾಸನ ಮೇಲೆ ತನ್ನ ಪ್ರೀತ್ಯಾದರಗಳನ್ನು ಅತಿಯಾಗಿಯೇ ಹೇರಿದಳು) ರಾಮದಾಸನಿಗೆ ತನ್ನ ಕೈಗಳಿಂದಲೇ ಆಹಾರವನ್ನು ತಿನ್ನಿಸುವ ಮಟ್ಟಿಗೂ ಆಕೆಯ ಆದರ. ಅವನು ಸುಮಾರು ಹನ್ನೆರಡು ದಿವಸ ಆಬೂಪರ್ವತದ ಮೇಲಿದ್ದನು. ಆ ಸ್ವಲ್ಪ ಕಾಲದಲ್ಲಿ ಅಲ್ಲಿ ನಡೆದ ಒಂದೆರಡು ವಿಷಯಗಳನ್ನು ಇಲ್ಲಿ ತಿಳಿಸಲಾಗುತ್ತದೆ.

(ರಾಮದಾಸನು ಸದಾ ರಾಮಮಂತ್ರವನ್ನು ಜಪಿಸುತ್ತಲೇ ಇರುವನು). ಇವನಿದ್ದ ಕೊಟಡಿ ರಾಮಮಂತ್ರೋಚ್ಚಾರಣೆಯಿಂದ ಸದಾ ಧ್ವನಿಸುತ್ತಿದ್ದಿತು. ಆಗ ಎಲಿಜಬೆತ್ ಮಾತೆ ಬಂಗಲೆಯ ಸುತ್ತ ಪವಳಿಗೋಡೆಯನ್ನು ಕಟ್ಟಲು ಕೆಲವರು ಕೆಲಸಗಾರರನ್ನು ನೇಮಿಸಿದ್ದಳು. ಈ ಕೊಟಡಿಗೆ ಸುಮಾರು ಇಪ್ಪತ್ತುಗಜ ದೂರದಲ್ಲಿ ಅವರು ಕೆಲಸಮಾಡುತ್ತಿದ್ದರು. ಒಂದು ದಿವಸ ಮಾತೆ ಆತುರದಿಂದ ಇವನ ಬಳಿಗೆ ಬಂದು:

"ರಾಮದಾಸ್ ! ನೀವು ರಾಮಮಂತ್ರವನ್ನು ಕೆಲಸಗಾರರಿಗೂ ಉಪದೇಶ ಮಾಡಿದ್ದೀರಾ ! ಕೆಲಸಮಾಡುತ್ತ ಅವರು ಅದನ್ನು ಉಚ್ಚರಿಸುತ್ತಿರುವುದು ನನಗೆ ಕೇಳಿಸುತ್ತಿದೆ !" ಎಂದು ಕೇಳಿದಳು.

ನಿಜವಾಗಿ ಪೌಳಿಯಲ್ಲಿದ್ದವರೆಲ್ಲರ ಬಾಯಿಯಿಂದಲೂ ರಾಮಮಂತ್ರ ತಾನಾಗಿ ಉಚ್ಚಾರವಾಗುತ್ತಿದ್ದಿತು. ರಾತ್ರಿ ಮೂರು ಗಂಟೆಯನಂತರ ಪಟ್ಟಾಣಿ ರಾಮನು—ಇದು ಶ್ರೀ ಪಟ್ಟಾಣಿಯವರಿಗೆ ಬಂದಿದ್ದ ಹೆಸರು—ರಾಮಮಂತ್ರವನ್ನು ಆಲಾಪನೆ ಮಾಡುತ್ತಿದ್ದುದು ಕೇಳಬಂದಿತು. ಈತನ ಕೊಟಡಿಗಳು ರಾಮದಾಸನ ಕೊಟಡಿಗೆ ಸಮೀಪದಲ್ಲೆ ಇದ್ದುವು. ರಾಜಾರಾಮರ ಅಡಿಗೆಯ ಬ್ರಾಹ್ಮಣನೂ ಸಿಪಾಯಿಗಳೂ ಇತರ ಜವಾನರೂ ರಾಮಮಂತ್ರವನ್ನು ತಮಗೆ ತಾವೇ ಹಾಡಿಕೊಳ್ಳುವುದು ಕೇಳ ಬಂದಿತು. ಒಂದು ದಿನ ಎಲಿಜಬೆತ್ ಮಾತೆ, ರಾಜಾರಾಮರು, ಪಟ್ಟಾಣಿರಾಮ ಮತ್ತು ರಾಮದಾಸನೊಂದಿಗೆ ದಿಲ್ವಾರ ದೇವಸ್ಥಾನಕ್ಕೆ ಮೋಟಾರಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ಮೋಟಾರು ರಾಮಮಂತ್ರದ ಉದ್ಗಾಯನದಿಂದ ತುಂಬಿಹೋಗಿ

ದ್ದಿತು. ಕಾರಿನಲ್ಲಿದ್ದ ಪ್ರತಿಯೊಬ್ಬರೂ ಆ ಮಂತ್ರವನ್ನು ಗಟ್ಟಿಯಾಗಿ ಹಾಡು ತ್ತಿದ್ದರು. ಅದು ಎಲ್ಲರನ್ನೂ ಒಂದು ಸೋಂಕಿನಂತೆ ಹಿಡಿಯಿತು.

ಇವರು ನೋಡಹೋದ ದಿಲ್ವಾರ ದೇವಾಲಯ ಶ್ವೇತಶಿಲೆಯಲ್ಲಿ ಕೆತ್ತಿ ಕಟ್ಟಿರುವ ವಿಲಕ್ಷಣ ಭವ್ಯಮಂದಿರ. ಈ ಕಟ್ಟಡದ ಶಿಲ್ಪಿ ತನ್ನ ಕಲೆ ಮತ್ತು ಕೌಶಲ್ಯವನ್ನೆಲ್ಲಾ ಧಾರಾಳವಾಗಿ ಉಪಯೋಗಿಸಿ ದೇವಸ್ಥಾನವನ್ನು ಶಿಲ್ಪಶಾಸ್ತ್ರದ ಅದ್ವಿತೀಯ ಕಲಾ ವಸ್ತುವನ್ನಾಗಿ ಮಾಡಿದ್ದಾನೆ. ಒಳಗೆ ಹೋಗುತ್ತಲೇ ಚಚ್ಚೌಕ ಕಟ್ಟಡಗಳು ಕಾಣುತ್ತನೆ. ಮಧ್ಯದಲ್ಲಿ ಪ್ರಸಿದ್ಧ ಜೈನಗುರು ಮಹಾವೀರನ ಮುಖ್ಯ ಪ್ರತಿಮೆ ಇರುವ ದೇವಾಲಯ. ಅಂಗಳದ ನಾಲ್ಕು ಕಡೆಯೂ ಉದ್ದವಾದ ಕೈಸಾಲೆಗಳಿವೆ. ಇವಕ್ಕೆ ಒಳಪಾರ್ಶ್ವದಲ್ಲಿ ಗೋಡೆ ಇಲ್ಲ. ಗೋಡೆಗಳ ಮೇಲೂ, ತಾರ್ಶಿಯ ಮೇಲೂ, ಕಂಬಗಳ ಮೇಲೂ ಲಾಂಛನ ಲಕ್ಷಣಗಳ ಸುಂದರವಾದ ಕೆತ್ತನೆ ಇವೆ. ಗೋಡೆಯಲ್ಲಿ ಅಲ್ಲಲ್ಲೆ ಗೂಡುಗಳಲ್ಲಿ ಮಹಾವೀರನ ದಿಗಂಬರ ವಿಗ್ರಹಗಳಿವೆ. ಮಧ್ಯದ ಭುವನೇ ಶ್ವರಿಯ ಒಳಭಾಗ ಸುಂದರವಾದ ನಾನಾ ಆಕೃತಿಗಳ ಕೆತ್ತನೆಗಳ ಕೌಶಲ್ಯದಿಂದ ಆಶ್ಚರ್ಯವನ್ನುಂಟುಮಾಡುತ್ತದೆ.

ದೇವಸ್ಥಾನದೊಳಗಿದ್ದ ಜೈನ ಸಾಧುಗಳು ರಾಮದಾಸನ ಮೇಲೆ ಕೃಪೆಮಾಡಿ ಅವನನ್ನು ಕರೆದುಕೊಂಡು ಹೋಗಿ ದೇವಸ್ಥಾನದ ಒಳಗನ್ನೆಲ್ಲ ತೋರಿಸಿದರು. ಮುಂಭಾಗದಲ್ಲಿ ಅಮೃತಶಿಲೆಯ ಸಣ್ಣ ಕಟ್ಟಡ ಉಂಟು. ಅದರಲ್ಲಿ ಶುಭ್ರ ಶ್ವೇತಶಿಲೆ ಯಲ್ಲಿ ಕೆತ್ತನೆಯಾಗಿರುವ ಅಲಂಕೃತವಾದ ಆನೆಗಳ ವ್ಯೂಹ ಒಂದಿದೆ. ಆನೆಗಳ ಮೇಲಿ ರುವ ಅಲಂಕೃತವಾದ ಹೌದಾಗಳಲ್ಲಿ ಹಿಂದಣಕಾಲದ ಜೈನ ದೊರೆಗಳ ವಿಗ್ರಹಗಳು ಮೂರ್ತವಾಗಿವೆ.

(ಆಬೂ ಪರ್ವತದ ಒಂದು ಗುಹೆಯಲ್ಲಿ ವಾಸವಾಗಿದ್ದ, ಶ್ರೀ ಶಾಂತಿವಿಜಯಜಿ ಯವರನ್ನು ಎಲಿಜಬೆತ್ ಮಾತೆ ತನ್ನ ಗುರುವಾಗಿ ಸ್ವೀಕರಿಸಿದ್ದಳು.) ಆಕೆ ರಾಮ ದಾಸನನ್ನು ಅವರಲ್ಲಿಗೆ ಕರೆದುಕೊಂಡು ಹೋಗುವುದಾಗಿ ಒಂದು ಸಲ ಹೇಳಿದ್ದಳು. ಆದರೆ ಈ ವಿಷಯದಲ್ಲಿ ರಾಮದಾಸನೇನೂ ಆಸಕ್ತಿಯನ್ನು ತೋರಿಸಲಿಲ್ಲವಾಗಿ ಅಷ್ಟಕ್ಕೇ ಸುಮ್ಮನಾದಳು. ಒಂದು ದಿನ ಆ ಮಹಾತ್ಮರೇ ಹಠಾತ್ತಾಗಿ ಎಲಿಜಬೆತ್ ಮಾತೆಯ ಬಂಗಲೆಯಲ್ಲಿ ದರ್ಶನಕೊಟ್ಟರು. ಮಾತೆ ಅವರಿಗೆ ರಾಮದಾಸನ ಪರಿಚಯಮಾಡಿಕೊಟ್ಟಳು. ಆಕೆಯ ಕೊಟಡಿಯೊಂದರಲ್ಲಿ ಅವರು ಒಂದು ಉನ್ನತಾ ಸನದ ಮೇಲೆ ಕುಳಿತಿದ್ದರು. ರಾಮದಾಸನು ಅವರ ಹತ್ತಿರಕ್ಕೆ ಹೋಗಿ ಅವರನ್ನು ತುಂಬ ಆನಂದದಿಂದ ಆಲಂಗಿಸಿದನು. ಅವರೂ ಕೂಡ ಅಷ್ಟೇ ಸಂತೋಷದಿಂದ ಆಲಿಂಗನವನ್ನು ಕೊಟ್ಟರು. ನಂತರ ರಾಮದಾಸನು ಅವರ ಬಳಿ ಕುಳಿತುಕೊಂಡನು. ಆತ ವಿನಯವೇ ಮೂರ್ತಿಯಾದಂತೆ ಇದ್ದರು; ದಪ್ಪನಾಗಿ ಕುಳ್ಳಾಗಿದ್ದರು. ಅವರಿಗೆ ಕರಿದಾದ ತುಂಬುದಾಡಿ ಇದ್ದಿತು. ಅವರು ಭುಜದಮೇಲೆ ಒಂದು

ಬಟ್ಟೆಯನ್ನು ಮಾತ್ರ ಹೊದೆದಿದ್ದರು. ಆ ಬಟ್ಟೆ ಅಲ್ಲಲ್ಲಿ ಚಿಂದಿಯಾಗಿ ಕೊಳೆಯಾಗಿದ್ದಿತು. ನೋಟ ಎಲ್ಲೋ ದೂರದೃಷ್ಟಿಯಿಂದ ಧ್ಯಾನವನ್ನು ಸೂಚಿಸುತ್ತಿದ್ದಿತು. ಅವರು ಸಾತ್ವಿಕತೆಯನ್ನೂ ಶಾಂತಿಯನ್ನೂ ಬೀರುತ್ತಿದ್ದರು. ರಾಮದಾಸನು ಅವರೊಡನೆ ಸಂಭಾಷಿಸಲಿಲ್ಲ. ಅವರಿಗೆ ಗುಜರಾತಿ ಭಾಷೆ ಮಾತ್ರ ಬರುತ್ತಿದ್ದಿತು. ರಾಮದಾಸನಿಗೆ ಆ ಭಾಷೆಯ ಪರಿಚಯವಿರಲಿಲ್ಲ.

### (ii) ತನಗೇನೂ ತಿಳಿಯದೆಂಬ ಭಾವನೆಯೇ ತಿಳಿವಿನ ಲಕ್ಷಣ

ಒಂದು ದಿನ ಎಲಿಜಬೆತ್ ಮಾತೆ ರಾಮದಾಸನನ್ನು ಬೆಟ್ಟದ ಮೇಲೆ ಸುತ್ತಾಡಿಸಲು ಕರೆದುಕೊಂಡು ಹೋದಳು. ತನಗೆ ಎಷ್ಟು ಆಸ್ತಿ ಇದೆ ಎನ್ನುವುದನ್ನು ಅವನಿಗೆ ತೋರಿಸಿ,

"ಯಾವಾಗಲೂ ನನಗೆ ಸಾಧುಗಳ ಸಹವಾಸವೆಂದರೆ ಇಷ್ಟ. ಇತರರ ಸಹವಾಸ, ತತ್ರಾಪಿ ಪ್ರಾಪಂಚಿಕ ವಿಷಯಗಳಲ್ಲಿ ಮಗ್ನರಾದ ಗೃಹಸ್ಥರ ಸಹವಾಸ ಮನಸ್ಸಿಗೆ ಹಿತವಾಗುವುದಿಲ್ಲ" ಎಂದು ಹೇಳಿದಳು. ರಾಮದಾಸನು "ತಾಯಿ, ರಾಮದಾಸನ ದೇಹ ಕೃಶವಾಗಿದೆ. ಅವನು ಹೆಚ್ಚು ಕಾಲ ಜೀವಿಸಿರಲಾರನು. ಈ ದೇಹ ಸದ್ಯದಲ್ಲಿಯೇ ಬಿದ್ದುಹೋಗುವುದೆಂದು ಅವನಿಗೆ ನಿಮಿತ್ತ ತೋರುತ್ತದೆ" ಎಂದನು.

ಮಾತೆ "ಹಾಗೆ ಹೇಳಬೇಡಿ. ಅದು ಇನ್ನೂ ಅನೇಕ ಮಹತ್ತರ ಕಾರ್ಯಗಳನ್ನು ಮಾಡಬೇಕಾಗಿದೆ" ಎಂದಳು. ಆ ಸುತ್ತಾಟ ಸುಮಾರು ಅರ್ಧ ಗಂಟೆ ಹಿಡಿಯಿತು. ಆಮೇಲೆ ಇವರು ಬಂಗಲೆಗೆ ಹಿಂದಿರುಗಿದರು.

ಮಾತೆಯ ಹೃದಯದಲ್ಲಿ ತಾನೇ ಅಡಿಗೆ ಮಾಡಿದ ಊಟವನ್ನು ರಾಮದಾಸನು ಭುಜಿಸಬೇಕೆಂದು ಅಭಿಲಾಷೆ ಇದ್ದಿತು. ಗೋಪ್ಯವಾಗಿದ್ದ ಆಕೆಯ ಅಭಿಲಾಷೆ ರಾಮದಾಸನಲ್ಲೂ ಪ್ರತಿಯಾಗಿ ಉದ್ಭವಿಸಿದ್ದು ವಿಚಿತ್ರ. ಅವನು ಉದ್ದೇಶಪಡದೆ, ಆಕೆಯನ್ನು ನೀನೇ ಅಡಿಗೆಮಾಡಿದ ಊಟವನ್ನು ನನಗೆ ಬಡಿಸಬೇಕು ಎಂದು ಬೇಡಿದನು. ಮಾತೆ ಅತ್ಯಂತ ಸಂತೋಷದಿಂದ ಮೇರೆಹರಿದ ಪ್ರೇಮದಿಂದ ಸ್ವಂತವಾಗಿ ಗೋಧಿ ರೊಟ್ಟಿಗಳನ್ನು ಸಿದ್ಧಮಾಡಿದಳು. ಅವುಗಳ ರುಚಿ ದಿವ್ಯವಾಗಿದ್ದಿತು.

ಇನ್ನೊಂದು ದಿವಸ ಇವನಲ್ಲಿ ಆದರಉಳ್ಳವನಾದ ರಾಜಾರಾಮರ ಒಬ್ಬ ಸಿಪಾಯಿ ರಾಮದಾಸನನ್ನು ತಿರುಗಾಡುವುದಕ್ಕೆ ಕರೆದುಕೊಂಡು ಹೋದನು. ಒಂದು ನಿರ್ಜನ ಪ್ರದೇಶಕ್ಕೆ ಕರೆದುಕೊಂಡು ಹೋಗಬೇಕಾಗಿ ರಾಮದಾಸನು ಆ ಮಿತ್ರನನ್ನು ಕೇಳಿಕೊಂಡನು. ಆತನದು ಅತಿ ಪ್ರಸಕ್ತಿಯ ಸ್ವಭಾವ. ಅವನು ರಾಮದಾಸನನ್ನು ಒಬ್ಬ ಸಂನ್ಯಾಸಿ ವಾಸಮಾಡುತ್ತಿದ್ದ ದೂರದ ಒಂದು ಗುಹೆಗೆ ಕರೆದುಕೊಂಡು ಹೋದನು. ರಾಮದಾಸನು ಕಾಡಿನ ಮಧ್ಯೆ ಒಂದು ಬಂಡೆಯಲ್ಲಿ ಕೊರೆದಿರುವ ವಿಸ್ತಾರವಾಗಿ ತೆರೆದಿರುವ ದೊಡ್ಡ ಗುಹೆಯೊಂದನ್ನು ಕಂಡನು. ಅದರೊಳಗೆ ಕಾವಿ

ವಸ್ತ್ರಧರಿಸಿದ್ದ ಒಬ್ಬ ಚಿಕ್ಕ ವಯಸ್ಸಿನ ಸಂನ್ಯಾಸಿ ಇದ್ದನು. ಆತನು ಮುಂಡನ ಮಾಡಿಸಿಕೊಂಡಿದ್ದನು. ಅವನ ಸುತ್ತ ಹಲವು ಪುಸ್ತಕಗಳು ಹರಡಿದ್ದವು.

ರಾಮದಾಸನಿಗೆ ಪ್ರಿಯಮಿತ್ರ ಸಿಪಾಯಿ "ಇವರು ಸ್ವಾಮಿ ಕೈವಲ್ಯಾನಂದರು" ಎಂದು ಕಿವಿಯಲ್ಲಿ ಪಿಸುಮಾತಿನಲ್ಲಿ ಹೇಳಿದನು. ರಾಮದಾಸನು ಸಂನ್ಯಾಸಿಯ ಹತ್ತಿರ ಹೋಗಿ ಸಾಷ್ಟಾಂಗಪ್ರಣಾಮ ಮಾಡಿದನು.

ಸಂನ್ಯಾಸಿ ಆಶ್ಚರ್ಯವನ್ನು ಪ್ರದರ್ಶಿಸಿ "ಯಾರಿಗೆ ನೀವು ನಮಸ್ಕಾರ ಮಾಡುತ್ತಿದ್ದೀರಿ?" ಎಂದನು.

ರಾಮದಾಸನು "**ರಾಮನಿಗೆ**" ಎಂದು ಉತ್ತರ ಕೊಟ್ಟನು.

"ನೀವು ಯಾರು?"

"ರಾಮದಾಸ"

"ರಾಮದಾಸ! ರಾಮದಾಸ! ಇದು ತಮಾಷೆಯಲ್ಲವೆ? ಇರುವುದು ಒಂದೇ ಒಂದು ಸತ್ಯ. ಈ ದ್ವೈತಭ್ರಾಂತಿಯನ್ನು ಏಕೆ ಕಲ್ಪಿಸಿಕೊಳ್ಳುತ್ತೀರಿ?"

"ಇದು ರಾಮನೇ ಮಾಡಿರುವುದು. ಏಕ ಆಗಿದ್ದರೂ ಅವನು ಅನೇಕ ಆಗಿದ್ದಾನೆ."

ಸಂನ್ಯಾಸಿ "ತಪ್ಪು ತಿಳಿವಳಿಕೆ! ಅವನು ಎಂದೂ ಒಬ್ಬನೇ. ಅನೇಕ ಎಂಬುದು ಸುಳ್ಳು; ಭ್ರಾಂತಿ" ಎಂದನು

"ಸತ್ಯವೇ ಲೀಲೆಗೋಸ್ಕರ ದೇವರು ಮತ್ತು ಆತನ ಭಕ್ತ ಆಗಿದೆ."

ಸಂನ್ಯಾಸಿ "ಆಡಲೇಕೆ!" ಎಂದು ಕೇಳಿದನು.

ರಾಮದಾಸನು "ಪ್ರೀತಿಗಾಗಿ; ಆನಂದಕ್ಕಾಗಿ. ಆದುದರಿಂದ ರಾಮದಾಸನು ನಿಮಗೆ ಪ್ರಣಾಮಮಾಡಿದಾಗ ನೀವೇ ರಾಮದಾಸನ ರೂಪದಲ್ಲಿ ಪ್ರಣಾಮ ಮಾಡಿದಿರಿ" ಎಂದು ಪ್ರತಿ ಹೇಳಿದನು.

"ಬುರುಡೆ! ಇರುವುದು ಒಂದೇ; ಎರಡಲ್ಲ"

"ಹಾಗಾದರೆ ನೀವು ಯಾರ ಸಂಗಡ ಮಾತನಾಡುತ್ತಿದ್ದೀರಿ, ಸ್ವಾಮಿಜಿ?"

ಸಂನ್ಯಾಸಿ ಸ್ವಲ್ಪ ಆಲೋಚಿಸಿ "ನನ್ನ ಸಂಗಡವೇ" ಎಂದನು.

"ಅದೀಗ ಸರಿ. ಪರಮಾರ್ಥದಲ್ಲಿ ಒಬ್ಬನೇ ಇದ್ದರೂ ಇಬ್ಬರಿದ್ದಾರೆಂದು ಭಾವಿಸಿದ್ದೀರಿ."

"ಇಲ್ಲ, ಇಲ್ಲ! ಸಾಕ್ಷಾತ್ಕಾರವನ್ನು ಹೊಂದಿದವರ್ಯಾರೂ ದ್ವೈತವನ್ನು ನಂಬುವುದಿಲ್ಲ."

"ತುಲಸೀದಾಸ್, ಸೂರದಾಸ್, ಕಬೀರ್, ಸಮರ್ಥರಾಮದಾಸ್, ಇನ್ನೂ ಎಷ್ಟೋ ಜನ, ಇವರು?"

ಸಂನ್ಯಾಸಿ ನಕ್ಕನು. "ಓ! ಅವರಿನ್ನೂ ಜ್ಞಾನಿಗಳಾಗಿರಲಿಲ್ಲ. ಇನ್ನೂ ಕೆಳಗಿನ ಅಂತಸ್ತಿನಲ್ಲೇ ಒದ್ದಾಡುತ್ತಿದ್ದರು."

"ಆದರೆ ಅವರ ಬೋಧೆ ಮತ್ತು ಕೃತಿಗಳಿಂದ ಅವರಿಗೆ ತುಂಬಾ ಜ್ಞಾನ ವಿದ್ದುದು ವ್ಯಕ್ತಪಡುತ್ತದೆ. ಪರಾಭಕ್ತಿಯೇ ಮಹತ್ತಾದ ಸಾಕ್ಷಾತ್ಕಾರವೆಂದು ಅವರು ಸಾರಿದರು" ಎಂದು ರಾಮದಾಸನು ಪ್ರತಿಹೇಳಿದನು.

ಸಂನ್ಯಾಸಿ "ಅವರೆಲ್ಲ ಅಜ್ಞಾನಿಗಳೆಂದೇ ನನ್ನ ಮತ" ಎನ್ನುತ್ತಾ ಅಲ್ಲಿ ಬಿದ್ದಿದ್ದ ಪುಸ್ತಕಗಳ ರಾಶಿಯಿಂದ ಒಂದನ್ನು ಎತ್ತಿಕೊಂಡು "ಅವರನ್ನೆಲ್ಲಾ ಆಚೆ ನೂಕು. ಕೋ. ಈ ಪುಸ್ತಕವನ್ನು ಓದು, ವಿಷಯ ಸರಿಯಾಗಿ ತಿಳಿಯುತ್ತದೆ" ಎಂದನು.

"ರಾಮದಾಸನು ತಿಳಿದುಕೊಳ್ಳಬೇಕಾದ ಪ್ರಮೇಯವಿಲ್ಲ. ನನಗೇನೂ ತಿಳಿಯದೆಂಬ ತಿಳುವಳಿಕೆಯೇ ಜ್ಞಾನವೆಂದು ರಾಮದಾಸನಿಗೆ ಬೋಧೆಯಾಗಿದೆ."

"ಸರಿ; ಸರಿ. ಈ ಪುಸ್ತಕವನ್ನು ಓದು. ಇದು ನಾನೇ ಬರದದ್ದು."

ಸಂನ್ಯಾಸಿ ರಾಮದಾಸನನ್ನು ಪುಸ್ತಕವನ್ನು ತೆಗೆದುಕೊಳ್ಳಲು ಬಹಳ ಒತ್ತಾಯ ಮಾಡಿದನು. ಪುಸ್ತಕವನ್ನು ನೋಡಿದ್ದರಿಂದಲೇ ಅದರ ಹೆಸರು ಕರ್ತೃವಿನ ಪರಿಚಯ ವ್ಯಕ್ತವಾಯಿತು. "ಸ್ವಾಮಿ, ಕೈವಲ್ಯಾನಂದ, ಎಂ.ಎ. ಯವರಿಂದ ವಿರಚಿತ, ಸಚ್ಚಿದಾನಂದದ ಅನುಸಂಧಾನ." ರಾಮದಾಸನು ತನ್ನ ಪದ್ಧತಿಯಂತೆ ಪ್ರಣಾಮಮಾಡಿ ಪುಸ್ತಕವನ್ನು ತೆಗೆದುಕೊಂಡು ಹೊರಟನು.

ಇನ್ನೊಂದು ಸಲ ಆ ಸಿಪಾಯಿ ಗೆಳೆಯನ ಜೊತೆಯಲ್ಲಿಯೇ ರಾಮದಾಸನು ಆ ಸ್ಥಳದ ರಾಮಮಂದಿರಕ್ಕೆ ಹೋದನು. ಅಲ್ಲಿ ಅನೇಕ ವೈಷ್ಣವ ಸಾಧುಗಳ ಪರಿಚಯವಾಯಿತು. ಅವರೆಲ್ಲರೂ ರಾಮದಾಸನನ್ನು ಬಹು ಪ್ರೀತಿಯಿಂದ ಕಂಡರು. ಹಿಂದಕ್ಕೆ ಬರುವಾಗ ಇವರು ಒಂದು ದೊಡ್ಡ ತಟಾಕದ ಪಕ್ಕದ ದಾರಿಯಲ್ಲಿ ಹಾಯ್ದರು. ತಟಾಕದ ನೀರು ಸ್ವಚ್ಛವಾಗಿ ನೀಲವರ್ಣವಾಗಿ ಮಿನುಗುತ್ತಿದ್ದಿತು. ನೀರಿನ ಮೇಲೆ ವಿಹಾರದ ದೋಣಿಗಳಲ್ಲಿ ಸ್ನಾನದ ಉಡುಪನ್ನು ಧರಿಸಿದ್ದ ಆಂಗ್ಲರು ಕಾಣಿಸಿದರು. (ಆಬು ಪರ್ವತ ಸುಂದರವಾದ ಸ್ಥಳ ; ಬೇಸಿಗೆಯ ಮಧ್ಯಾಹ್ನದಲ್ಲೂ ತಂಪಾಗಿರುತ್ತದೆ) ಸುತ್ತಣ ಪ್ರಕೃತಿ ಸೌಂದರ್ಯ ಮನೋಹರವಾಗಿದೆ. ಗಾಳಿ ಶುದ್ಧವಾಗಿ ಆಪ್ಯಾಯಮಾನವಾಗಿದೆ.

## (iii) ಮಾತೆಯ ಪ್ರೀತಿ ಗೆದ್ದಿತು

ಮೂರನೆಯ ದಿವಸ ಬೆಳಗಿನ ಊಟದ ವೇಳೆ ರಾಮದಾಸನು ವಢ್ವಾನ್ ಮತ್ತು ಲಿಂಬ್ಡಿಗೆ ಹೊರಡಬೇಕೆಂಬ ಅಪೇಕ್ಷೆಯನ್ನು ತಿಳಿಸಿದನು. ಅಲ್ಲಿಂದ ಅವನಿಗೆ ಕಾಗದದ ಮೇಲೆ ಕಾಗದಗಳು ಬರುತ್ತಿದ್ದವು. ಕೊನೆಗೆ ಒಂದು ಆತುರದ ತಂತಿಯೂ ಬಂದಿದ್ದಿತು.

ಇದನ್ನು ಕೇಳಿ ಮಾತೆಗೆ ಬಹು ವ್ಯಥೆಯಾಯಿತು. ಇನ್ನು ಕೆಲವು ದಿವಸ ಇರಬೇಕೆಂದು ಆಕೆ ರಾಮದಾಸನನ್ನು ಬೇಡಿಕೊಂಡಳು ತನ್ನ ಇತರ ಅತಿಥಿಗಳು ತನ್ನ ಬೇಡಿಕೆಗೆ ಒತ್ತಾಸೆಯಾಗುವರೆಂದು ನಿರೀಕ್ಷಿಸಿದಳು. ಆಕೆಯ ಬಲವಂತದಂತೆ

ಅವರೂ ರಾಮದಾಸನನ್ನು ನಿಲ್ಲುವಂತೆ ಒಡಂಬಡಿಸಲು ಯತ್ನಮಾಡಿದರು. ಮಾತೆ "ರಾಮದಾಸರೇ, ಲಿಂಬ್ಡಿಯಲ್ಲಿ ಈಗ ಬಿಸಿಲು ಬಹಳ. ಪಕ್ಷಿಗಳು ಕೂಡ ತಡೆಯ ಲಾಗದ ಬಿಸಿಲಿನ ಕಾರಣ ಮರದಿಂದ ಬಿದ್ದು ಸಾಯುತ್ತಿವೆ ಎಂದು ವರ್ತಮಾನ ಬಂದಿದೆ. ನೀವು ಈ ತಂಪಾಗಿರುವ ಆಬೂ ಬೆಟ್ಟವನ್ನು ಬಿಟ್ಟು ಬಿಸಿಲು ಬೇಗೆಯ ಪ್ರದೇಶಕ್ಕೆ ಹೋಗಬಾರದು" ಎಂದಳು.

ರಾಮದಾಸನು "ತಾಯಿ, ಪ್ರೀತಿಗೆ ಯಾವ ಕಷ್ಟಗಳೂ ತೋರುವುದಿಲ್ಲ. ಲಿಂಬ್ಡಿ ಮತ್ತು ವಢ್ವಾನ್ ಜನಗಳು ರಾಮದಾಸನ ಸಂಸರ್ಗಕ್ಕೆ ಹಾತೊರೆಯು ತ್ತಿದ್ದಾರೆ. ಅವರ ಪ್ರೀತಿಯೇ ರಾಮದಾಸನನ್ನು ಅಲ್ಲಿಗೆ ಪ್ರಯಾಣ ಮಾಡುವಂತೆ ಹೀಗೆ ಒತ್ತಾಯಪಡಿಸುತ್ತಿದೆ" ಎಂದು ಹೇಳಿದನು.

"ಬೇಡ, ನೀವು ಹೋಗಲೇ ಕೂಡದು. ನಾನು ನಿಮ್ಮ ತಾಯಿ. ನಾನು ನಿಮ್ಮ ಈ ಅಶಕ್ತವಾದ ದೇಹವನ್ನು ಕಾಯಬೇಕು. ಅದಕ್ಕೆ ತಂಪಾದ ಸ್ಥಳದಲ್ಲಿ ವಿಶ್ರಾಂತಿ ಅವಶ್ಯಕ. ದಯವಿಟ್ಟು ಹೋಗುವುದು ಬೇಡ."

ರಾಮದಾಸನು ಸಗ್ಗಲಿಲ್ಲ.

ಊಟದ ಮೇಜನ್ನು ಬಿಟ್ಟು ಅವನು ಕೈಸಾಲೆಗೆ ಹೋದನು. ಮಾತೆ ಹಿಂದೆ ಓಡಿ ಬಂದು, ಕೈ ಜೋಡಿಸಿಕೊಂಡು, "ರಾಮದಾಸರೇ, ಇನ್ನು ನಾಲ್ಕು ದಿವಸ ಗಳಾದರೂ ನೀವು ನಮ್ಮೊಂದಿಗಿರಲೇಬೇಕು. ಆಗುವುದಿಲ್ಲವೆಂದು ಹೇಳಬೇಡಿ. ನೀವು ಒಪ್ಪಿಕೊಳ್ಳುವಿರೆಂದು ನನ್ನ ನಂಬಿಕೆ. ನನಗೆ ತುಂಬ ಉಪಕಾರ ಮಾಡಿದಂತಾಗು ತ್ತದೆ" ಎಂದು ಬೇಡಿಕೊಂಡಳು. ರಾಮದಾಸನು ನಿಂತು ವ್ಯಗ್ರವಾದ ಒಂದು ನಿಮಿಷ ಸುಮ್ಮನಿದ್ದನು. ಮಾತೆಯ ದೈನ್ಯದ ನೋಟ ತ್ರಾಸನ್ನು ವ್ಯತ್ಯಾಸ ಮಾಡಿತು.

ರಾಮದಾಸನು "ಆಗಲಿ, ತಾಯಿ. ಇನ್ನು ನಾಲ್ಕು ದಿವಸ" ಎಂದನು.

ಈ ಉತ್ತರವನ್ನು ಕೇಳಿ ಮಾತೆಗೆ ಅತ್ಯಾನಂದವಾಯಿತು. ಸಂತೋಷಭರದಲ್ಲಿ ಕುಣಿದಾಡುತ್ತ, ನಮಸ್ಕಾರ ಸೂಚಕವಾಗಿ ಎತ್ತಿದ್ದ ರಾಮದಾಸನ ಕೈಗಳನ್ನು ಹಿಡಿದು ಸವರಿದಳು. ಆಕೆಯ ಹೃದಯ ಎಂಥ ಶ್ರೇಷ್ಠವಾದುದು!

ಅಬು ಪರ್ವತಕ್ಕೆ ಬೇಸಿಗೆಯ ವಿಶ್ರಾಂತಿಗಾಗಿ ದಯಮಾಡಿಸಿದ್ದ ಅನೇಕ ಮಂದಿ ಮಹನೀಯರು, ರಾಮದಾಸನನ್ನು ಅವನ ಕೊಟಡಿಯಲ್ಲಿ ಸಂದರ್ಶಿಸಿ ಬಹಳ ಕಾಲ ಸಂಭಾಷಿಸಿದರು. ನಾನಾ ಕಡೆಗಳಿಂದಲೂ ಅವನ ಮೇಲೆ ಪ್ರೀತಿಯ ಮಳೆಯೇ ಸುರಿಯಿತು. ಇವರಲ್ಲಿ ಜಾಮ್ನಗರದ ರಾಮಪ್ರಸಾದನೆಂಬ ಸಾಧು ಒಬ್ಬನಿದ್ದನು. ಈತನು ಮಾತೆಯ ಬಂಗಲೆಯ ಪವಳಿಯಲ್ಲಿ ಬಂಗಲೆಯ ಸಮೀಪ ದಲ್ಲಿನ ಹೊರಚ್ಛಾದ ಸಣ್ಣ ಒಂದು ಕಟ್ಟಡದಲ್ಲಿದ್ದನು. ಈತನು ಜಾಮ್ನಗರದಲ್ಲಿ ದೀನ ಅನಾಥರಾದ ಮಕ್ಕಳಿಗೆ ಆಶ್ರಮವನ್ನು ಸ್ಥಾಪಿಸಿದ್ದನಂತೆ. ಅಲ್ಲಿ ಅವರಿಗೆ ಊಟ ಉಪಚಾರ ಮತ್ತು ವಿದ್ಯಾಭ್ಯಾಸ ದೊರೆಯುತ್ತಿದ್ದಿತು. ಅದಕ್ಕೆ ಭೇಟಿ ಕೊಡ

ಬೇಕೆಂದು ಸಾಧು ರಾಮದಾಸನನ್ನು ಕೇಳಿದ್ದನು. ಆದರೆ ರಾಮನು ಈ ಆಸೆ ಪೂರ್ಣವಾಗುವುದಕ್ಕೆ ಅವಕಾಶವನ್ನು ಕಲ್ಪಿಸಲಿಲ್ಲ.

ಪ್ರಯಾಣಕ್ಕೆ ನಿಷ್ಕರ್ಷೆಯಾಗಿದ್ದ ದಿವಸದ ಹಿಂದಿನ ದಿನ ರಾಜಾರಾಮರು, ತಾವು ಇನ್ನು ನಾಲ್ಕು ದಿವಸದಲ್ಲಿ ತಮ್ಮ ರಾಜ್ಯಕ್ಕೆ ಹೊರಡುವುದಾಗಿಯೂ, ರಾಮದಾಸನು ಜೊತೆಯಲ್ಲಿ ಪ್ರಯಾಣಮಾಡಲು ಅನುಕೂಲವೆಂದೂ ಹೇಳಿ, "ರಾಮದಾಸರೇ, ನಾನು ನನ್ನ ಸ್ವಂತ ಸ್ಪೆಷಲ್ ಸೆಲೂನಿನಲ್ಲಿ ಪ್ರಯಾಣ ಮಾಡುತ್ತೇನೆ. ನೀವೂ ಅದರಲ್ಲಿಯೇ ಬರಬಹುದು" ಎಂದು ಆಶೆಯನ್ನು ತೋರಿಸಿದರು.

ರಾಮದಾಸನು "ರಾಮದಾಸನ ಪ್ರಯಾಣ ಆಗಲೆ ನಿಷ್ಕರ್ಷೆಯಾಗಿದೆ. ಅದನ್ನು ಅವನು ಮಾರ್ಪಡಿಸಲಾರ. ರಾಮದಾಸನು ಯಾವಾಗಲೂ ಮೂರನೆಯ ತರಗತಿಯಲ್ಲಿ ಪ್ರಯಾಣ ಮಾಡುವವನು. ನೀವು ಪ್ರಯಾಣಮಾಡುವ ರೈಲಿನಲ್ಲೇ ಹೊರಟರೂ, ಸೊಗಸಾದ ಅನುಕೂಲ್ಯಗಳಿಂದ ತುಂಬಿರುವ ನಿಮ್ಮ ಸೆಲೂನಿನಲ್ಲಿ ಪ್ರಯಾಣ ಮಾಡುವುದಕ್ಕಿಂತ ಮೂರನೆಯ ತರಗತಿಯ ಗಾಡಿಯಲ್ಲಿ ಪ್ರಯಾಣ ಮಾಡುವುದೇ ರಾಮದಾಸನ ಇಷ್ಟ" ಎಂದು ಉತ್ತರ ಕೊಟ್ಟನು.

ರಾಜಾರಾಮರು ಸುಮ್ಮನಾದರು. ರಾಮದಾಸನ ಜೊತೆಗೆ ವರ್ಧ್ವಾನ್‌ವರೆಗೆ ಯಾರನ್ನಾದರೂ ಸಂಗಡ ಕಳುಹಿಸಬೇಕೆಂದು ಮಾತೆ ಅಪೇಕ್ಷಿಸಿದಳು. ರಾಮದಾಸನು ಜೊತೆಗೆ ಯಾರನ್ನೂ ಕಳುಹಿಸುವುದು ತೀರ ಅನಾವಶ್ಯಕ, ತಾನು ಫಕೀರ, ಒಬ್ಬಂಟಿಗನಾಗಿ ದೂರ ಪ್ರಯಾಣ ಮಾಡುವ ಅಭ್ಯಾಸವಿದೆ ಎಂದು ತಿಳಿಸಿದನು.

ಮಾತೆ "ರಾಮದಾಸರೆ, ಹಾಗಲ್ಲ. ನನ್ನ ತೃಪ್ತಿಗಾಗಿ, ನಿಮ್ಮ ಸಂಗಡ ರಾಜಾರಾಮರ ಸಿಪಾಯಿ ಇರಲಿ" ಎಂದಳು.

ರಾಜಾರಾಮರೂ ರಾಮದಾಸನಿಗೆ ಯಾರ ಜೊತೆಯೂ ಬೇಕಿಲ್ಲವೆಂದು ಒಪ್ಪಿದರು. ಆದರೆ ಎಲಿಜಬೆತ್ ಮಾತೆ ತನ್ನ ನಿರ್ಣಯದಿಂದ ಕದಲದಂತೆ ನಿಶ್ಚಯ ಮಾಡಿದ್ದಳು.

ಮಾರನೆಯ ದಿನ ಮಾತೆ ರಾಮದಾಸನನ್ನೂ ಸಿಪಾಯಿಯನ್ನೂ ಸ್ವಂತ ಮೋಟಾರಿನಲ್ಲಿ ಬಸ್ ನಿಲ್ದಾಣಕ್ಕೆ ಕರೆತಂದು ಬಸ್ಸಿನಲ್ಲಿ ಸರಿಯಾಗಿ ಸ್ಥಳಮಾಡಿ ರಾಮದಾಸನನ್ನು ಕುಳ್ಳಿರಿಸಿದಳು. ಬಸ್ ಹೊರಟಾಗ ಮಾತೆ ಮೋಟಾರಿನಲ್ಲಿ ಇವನ ಕಡೆಗೆ ತಿರುಗಿ ದೀರ್ಘವೂ ಸ್ಥಿರವೂ ಆದ ಕೊನೆಯ ನೋಟವನ್ನು ಬೀರಿದಳು. ಅವಳ ಕಣ್ಣು ತೇವವಾಗಿದ್ದಿತು. ರಾಮದಾಸನನ್ನು ಅಗಲುವುದರಿಂದ ಆಕೆ ಬಹಳ ನೊಂದಿರಬೇಕು. "ಓ ತಾಯೆ, ನಿನ್ನ ಹೃದಯದಲ್ಲಿ ನಿನ್ನ ಶಿಶು ರಾಮದಾಸನನ್ನು ಕುರಿತು ಎಂಥ ಅನಂತ ಪ್ರೇಮವಿದೆ!"

ಸಿಪಾಯಿ ಗೆಳೆಯನು, ಮಾತೆ ಎಲಿಜಬೆತ್ ರಾಮದಾಸನಿಗಾಗಿ ಕೊಟ್ಟಿದ್ದ ಒಂದು ಹಣ್ಣು ಬುಟ್ಟಿಯನ್ನು ಹಿಡಿದುಕೊಂಡು ರಾಮದಾಸನನ್ನು ಮೂರನೆಯ ತರಗತಿಯ ಗಾಡಿಗೆ ಕರೆದುಕೊಂಡು ಹೋದನು. ಅವನು ಬಾಗಿಲನ್ನು ತೆಗೆಯು

ವುದರಲ್ಲಿದ್ದಾಗ ಒಳಗಿದ್ದ ಒಬ್ಬ ಸಾಧು, ಗಾಡಿಯಲ್ಲಿ ಸ್ಥಳವಿಲ್ಲವೆಂದು ಕೂಗಿ, ಬಾಗಿಲನ್ನು ತೆಗೆಯದಂತೆ ಭದ್ರವಾಗಿ ಒಳಕ್ಕೆ ಎಳೆದುಕೊಂಡನು. ಸಿಪಾಯಿ ಗೆಳೆಯನು ಘಟ್ಟ ಮನುಷ್ಯನಾಗಿದ್ದುದರಿಂದ, ಅವನು ಅಡ್ಡಿ ಮಾಡಿದರೂ ಬಾಗಿಲನ್ನು ತೆರೆದು ರಾಮದಾಸನನ್ನು ಒಳಕ್ಕೆ ಹೋಗಲು ಹೇಳಿದನು. ಅವನು ಒಳಕ್ಕೆ ಹೋಗುವ ವೇಳೆ ಸಾಧು, ಒಳಕ್ಕೆ ಪ್ರವೇಶಿಸಲು ಅವಕಾಶ ಕೊಡದಂತೆ ತನ್ನ ಕೈಯನ್ನು ಚಾಚಿದನು. ಸಿಪಾಯಿ ಬಂದು ಸಾಧುವಿನ ಕೈಯನ್ನು ಹಿಂದಕ್ಕೆ ನೂಕಿ ರಾಮದಾಸನಿಗೆ ದಾರಿ ಮಾಡಿಕೊಟ್ಟನು. ಇಬ್ಬರೂ ಗಾಡಿಯಲ್ಲಿ ಕುಳಿತುಕೊಂಡರು. ಅದರಲ್ಲಿ ಇಬ್ಬರಿಗೆ ಮಾತ್ರವಲ್ಲದೆ, ಹತ್ತು ಜನ ಕುಳಿತುಕೊಳ್ಳುವುದಕ್ಕೂ ಸ್ಥಳವಿದ್ದಿತು.

ಗಾಡಿಯಲ್ಲಿ ಸುಮಾರು ಹನ್ನೆರಡು ಜನ ಸಾಧುಗಳಿದ್ದರು. ರೈಲು ಮುಂದಕ್ಕೆ ಸಾಗಿತು. ಒಂದು ಅರ್ಧ ಗಂಟೆಯ ಕಾಲ ನಿಲ್ಲಬೇಕಾದ ಒಂದು ಊಟದ ಸ್ಟೇಷನನ್ನು ಮುಟ್ಟಿತು. ಸಾಧುಗಳು ಇಲ್ಲಿ ರೈಲು ನಿಲ್ದಾಣದ ಹೋಟೆಲಿನಿಂದ ಪೂರಿಪಲ್ಯಗಳನ್ನು ತರಹೇಳಿದರು. ಅವರು ಅದನ್ನು ತಿನ್ನುವಾಗ ಒಬ್ಬ ಪ್ರಯಾಣಿಕನು ಪೂರಿ ಪಲ್ಯಗಳನ್ನು ತೆಗೆದುಕೊಂಡು ಗಾಡಿಯನ್ನು ಹತ್ತಿದನು. ಆ ಪೂರಿಪಲ್ಯ ಅವನ ಊಟಕ್ಕೆಂದು ಹೇಳಬೇಕಾಗಿಲ್ಲ. ಅವನು ಒಳಕ್ಕೆ ಬಂದನೋ ಇಲ್ಲವೋ ಸಾಧುಗಳೆಲ್ಲಾ ಒಂದಾಗಿ ತಮ್ಮ ಕೋಲುಗಳನ್ನೆತ್ತಿಕೊಂಡು ಅವನನ್ನು ಇಳಿದು ಹೋಗು ಎಂದು ಹೆದರಿಸಿದರು.

"ಹೊಲ ಪಾಪಿಷ್ಠ! ನಾವು, ಸಾಧುಗಳು ಊಟಮಾಡುತ್ತಿರುವ ಈ ಗಾಡಿಗೆ ನಿನ್ನ ಊಟವನ್ನು ತೆಗೆದುಕೊಂಡು ಬರಲು ನಿನಗೆಷ್ಟು ಧೈರ್ಯ? ಒಡನೆ ಇಳಿ, ಇಲ್ಲವಾದರೆ ದೊಣ್ಣೆಗಳಿಂದ ಬಡಿದು ಹಾಕುತ್ತೇವೆ" ಎಂದು ಗಲಾಟೆ ಮಾಡಿದರು.

ಆ ಬಡಪಾಯಿ ಹೆದರಿದ ಮೊಲದಂತೆ ಸ್ಟೇಷನ್ ಜಗಲಿಗೆ ಧುಮಿಕಿ ಇನ್ನೊಂದು ಗಾಡಿಯ ಕಡೆಗೆ ನಡೆದನು.

ಸಿಪಾಯಿ ಗೆಳೆಯನು "ಮಹರಾಜ್, ಇದು ಸಾಧುತನ" ಎಂದು ಟೀಕೆ ಮಾಡಿದನು.

---

# ಅಧ್ಯಾಯ ೨೧

## ವಧ್ವಾನ್—ರೈಲಿನಲ್ಲಿ

### (i) ಬಾಲಮಂದಿರ

ರಾಮದಾಸನು ಬರುವುದನ್ನು ತಂತಿವಾರ್ತೆ ಮೂಲಕ ಡಾಕ್ಟರ್ ಶುಕ್ಲಾಗೆ ತಿಳಿಸಿದ್ದಿತು. ಡಾಕ್ಟರೂ, ಚೂನಿಭಾಯ್, ಮಗನ್‌ಲಾಲ್ ಮತ್ತು ಇತರರೂ ವಧ್ವಾನ್ ಸ್ಟೇಷನ್ನಿನಲ್ಲಿ ರಾಮದಾಸನನ್ನು ಎದಿರುಗೊಂಡರು. ಈ ಸಲ ರಾಮದಾಸನು ಡಾಕ್ಟರ್ ಶುಕ್ಲಾ ಮನೆಯಲ್ಲಿ ಇಳಿದುಕೊಂಡನು. ಡಾಕ್ಟರೂ ಅವನ

ಪತ್ನಿಯೂ ರಾಮದಾಸನನ್ನು ನೋಡಿ ಹಿಗ್ಗಿಹೋದರು. ಇಲ್ಲಿ ಅವನು ಬರೀ ನಾಲ್ಕು ಐದು ದಿನ ಮಾತ್ರ ಇದ್ದನು. ಆ ಎಲ್ಲ ದಿನವೂ ಬಿಡುವು ಇಲ್ಲದಂತೆ ಕಾರ್ಯಕ್ರಮ ಇದ್ದಿತು.

ರಾಮದಾಸನನ್ನು ನೋಡಲು ಪ್ರೇಕ್ಷಕರು ಬಹು ಸಂಖ್ಯೆಯಿಂದ ಬಂದರು. ಅವರು ಅವನನ್ನು ಭಕ್ತಿ ಮತ್ತು ಭಗವನ್ನಾಮ ಮಹಿಮೆಗಳ ವಿಷಯವಾಗಿ ಪ್ರಶ್ನೆ ಕೇಳಿದರು. ರಾಮದಾಸನು ಅವರಿಗೆ ತನ್ನ ಅನುಭವಗಳನ್ನು ನಿವೇದಿಸುವುದರಲ್ಲಿ ನಿರತನಾಗಿದ್ದನು. ಒಂದು ಪ್ರಶ್ನೆಗೆ ಉತ್ತರವಾಗಿ ಹೀಗೆ ಹೇಳಿದನು.

"ಮನಸ್ಸನ್ನು ಅಧೀನದಲ್ಲಿಟ್ಟುಕೊಳ್ಳಲು ಅತಿ ಉತ್ತಮವಾದ ಮತ್ತು ಅತಿ ಸುಲಭವಾದ ಉಪಾಯ, ಸರ್ವದಾ ಭಗವನ್ನಾಮದ ಜಪ. ಭಗವನ್ನಾಮದ ನಾದದ ಮೇಲೆ ಮನಸ್ಸಿಟ್ಟರೆ ಚಿತ್ತೈಕಾಗ್ರತೆ ಉಂಟಾಗುತ್ತದೆ. ಮನಸ್ಸು ಸ್ಥಿರವಾದ ಹಾಗೆ ಭಗವಂತನ ಕಲ್ಯಾಣ ಗುಣಗಳನ್ನು ಕುರಿತು ಧ್ಯಾನಮಾಡಬೇಕು. ಭಗವನ್ನಾಮ ಸ್ಮರಣೆ ಮತ್ತು ಧ್ಯಾನದ ಸಂತತಾಭ್ಯಾಸ ಮನಸ್ಸಿನ ಚಾಂಚಲ್ಯವನ್ನು ನಿಲ್ಲಿಸಿ, ಅದನ್ನು ಆನಂದಮಯವಾದ, ಶಾಶ್ವತವಾದ, ಬ್ರಹ್ಮದಲ್ಲಿ ಲೀನ ಮಾಡುತ್ತದೆ. ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬ ಉತ್ಕಟೇಚ್ಛೆ ಇದ್ದ ಹೊರತು ಭಗವತ್ಸ್ಮರಣೆ ಸಾಧ್ಯವಿಲ್ಲ. ಈ ಉತ್ಕಟೇಚ್ಛೆಯೇ ಭಕ್ತಿ. ಈ ಇಚ್ಛೆ ಎಷ್ಟರ ಮಟ್ಟಿಗಿರಬೇಕೆಂದರೆ, ಸ್ವಾರ್ಥ ವಿಷಯಗಳ ಕಾರಣದಿಂದ ಭಗವನ್ನಾಮ ಸ್ಮರಣೆ ನಿಂತುಹೋದರೆ ಒಡನೆಯೇ ಮನಸ್ಸಿಗೆ ಅಸಹನೀಯ ಹಿಂಸೆಯ ಅನುಭವವಾಗ ಬೇಕು. ನಿಮ್ಮ ಕಾರ್ಯಗಳು ಕೂಡ ಮನಸ್ಸನ್ನು ಶುದ್ಧಮಾಡುವುದಕ್ಕೆ ಸಹಾಯ ವಾಗಿರಬೇಕು. ಎಂದರೆ ಎಲ್ಲ ಕೆಲಸವನ್ನು ನಿಷ್ಕಾಮದಿಂದ ಆಚರಿಸಬೇಕು. ಮನಸ್ಸಿನ ಪಾರಿಶುದ್ಧ್ಯವೆಂದರೆ, ಕಾಮ ಕ್ರೋಧ ಲೋಭಗಳಿಂದ ರಹಿತವಾಗಿರು ವುದು. ಏಕೆಂದರೆ, ಪರಿಶುದ್ಧವಾದ ಮನಸ್ಸು ಮಾತ್ರ, ಭಗವಂತನನ್ನು ನೋಡ ಬಲ್ಲದು. ಚಿತ್ತೈಕಾಗ್ರ್ಯವೇ ಪಾರಿಶುದ್ಧ್ಯ. ನೀವು ಹುಡುಕುತ್ತಿರುವ ದೇವರು ನಿಮ್ಮೊಳಗೇ ಇದ್ದಾನೆಂಬುದನ್ನು ಮರೆಯಕೂಡದು."

ಒಂದು ದಿನ ರಾಮದಾಸನನ್ನು ಸರ್ಕಾರಿ ಬಾಲಮಂದಿರಕ್ಕೆ ಕರೆದುಕೊಂಡು ಹೋದರು. ಇಲ್ಲಿ ಒಂದೂವರೆ ವರ್ಷ ವಯಸ್ಸಿನಿಂದ ನಾಲ್ಕು ವರ್ಷ ವಯಸ್ಸಿನ ವರೆಗೂ ಇರುವ ಮಕ್ಕಳಿಗೆ ಪಾಠ ಹೇಳುತ್ತಾರೆ. ರಾಮದಾಸನು ಈ ಪಾಠಶಾಲೆಗೆ ಹೋದಾಗ ನೂರಕ್ಕೂ ಹೆಚ್ಚು ಮಕ್ಕಳಿದ್ದರು. ಒಳಕ್ಕೆ ಹೋಗಿ ಮಕ್ಕಳನ್ನು ಕಂಡೊಡ ನೆಯೇ ರಾಮದಾಸನ ಹೃದಯ ಅನಿರ್ವಚನೀಯವಾದ ಆನಂದದಿಂದ ಹಾರಿತು. ಅವನು ನೇರವಾಗಿ ಹೋಗಿ ಅವರ ಮಧ್ಯೆ ಕುಳಿತನು. ಅಪರಿಚಿತನೆಂದು ಸಂಕೋಚ ಪಡದೆ ಮಕ್ಕಳು ಅವನನ್ನೂ ತಮ್ಮಲ್ಲಿ ಒಬ್ಬನೆಂದು ಒಪ್ಪಿಕೊಂಡವು. ರಾಮದಾಸನ ತೊಡೆಗಳ ಮೇಲೆ ಕುಳಿತುಕೊಂಡು ಅವನ ಭುಜಗಳ ಮೇಲೂ ಹತ್ತಿ ಸೀತಾರಾಮ್ ಸೀತಾರಾಮ್ ಎಂದು ದೇವರ ಹೆಸರನ್ನು ಉಚ್ಚರಿಸಿದವು. ಮಕ್ಕಳು ಸ್ನೇಹಪರ

ರಾಗಿಯೂ ಹರ್ಷಚಿತ್ತರಾಗಿಯೂ ಇದ್ದವು. ಆಮೇಲೆ ಬಹು ಸಂತೋಷದಿಂದ ಪದ್ಯಗಳನ್ನು ಹಾಡುತ್ತ ರಾಮದಾಸನ ಸುತ್ತ ಕುಣಿದಾಡಿದುವು. ಇದು ರಾಮದಾಸನಿಗೆ ಅಪೂರ್ವವಾದ ಆನಂದ ಪರಿಪೂರ್ಣವಾದ ಒಂದು ಅನುಭವವಾಯಿತು.

ಸಮಾಧಾನಿಯೂ ಪ್ರೀತಿವಂತನೂ ಆದ ಅವರ ಉಪಾಧ್ಯಾಯನು ಹೇಳಿದಂತೆ ಮಕ್ಕಳು ಕೈಗಳಲ್ಲಿ ಕೋಲು ಹಿಡಿದುಕೊಂಡು, ("ಓಂ ಶ್ರೀರಾಮ ಜಯರಾಮ ಜಯಜಯ ರಾಮ") ಎಂದು ಹಾಡುತ್ತ ವರ್ತುಳಾಕಾರವಾಗಿ ನರ್ತನ ಮಾಡಿದವು. ಮಕ್ಕಳಿಗೆ ತಮ್ಮ ಬರವಣಿಗೆ ಸಾಮಾನುಗಳನ್ನು ಇಟ್ಟುಕೊಳ್ಳಲು ತಗ್ಗಾದ ಮೇಜುಗಳನ್ನು ಕೊಟ್ಟಿದ್ದಾರೆ. ರಾಮದಾಸನು ಮಕ್ಕಳು ಆರಂಭದಲ್ಲಿ ಬರೆದಿದ್ದ ಅಕ್ಷರಗಳನ್ನೂ ಚಿತ್ರಗಳನ್ನೂ ನೋಡಿದನು. ಅಲ್ಲಿ ಕಿಂಡರ್‌ಗಾರ್ಟನ್ ಕ್ರಮದ ವಿಧವಿಧ ಆಟಗಳನ್ನು ಕಲಿಸಿದ್ದರು. ಅವುಗಳ ಆಟಗಾರಿಕೆಗೆ ಮತ್ತು ಹಸುಳೆತನಕ್ಕೆ ಅಡ್ಡಿ ಬರದಂತೆ, ಸರಳವಾಗಿ ಗದ್ದಲಮಾಡದಂತೆ ಕೆಲಸಗಳನ್ನು ಮಾಡುವುದನ್ನು ಕಲಿಸಿದ್ದರು. ಸುಮಾರು ಎರಡು ವರ್ಷದ ಪುಟ್ಟದೊಂದು ಹೆಣ್ಣುಮಗು ತಾನಾಗಿಯೇ ನೆಲವನ್ನು ಚೊಕ್ಕಟವಾಗಿ ಗುಡಿಸುತ್ತಿದ್ದುದನ್ನು ಇವನು ನೋಡಿದನು. ಅಲ್ಲಿಯ ಮಕ್ಕಳಲ್ಲೆಲ್ಲಾ ಅದೇ ಅತ್ಯಂತ ಬುದ್ಧಿಶಾಲಿಯೆಂದು ಉಪಾಧ್ಯಾಯರು ತಿಳಿಸಿದರು.

ಭೇಟಿಯ ಜ್ಞಾಪಕಾರ್ಥವಾಗಿ ಮಕ್ಕಳಿಗೆ ಹಾಲನ್ನೂ ಮಿಠಾಯಿಯನ್ನೂ ಹಂಚಲು ಚೂನಿಭಾಯ್ ಏರ್ಪಾಡು ಮಾಡಿದ್ದನು. ಆಹಾರ ತೆಗೆದುಕೊಳ್ಳಲು ಮಕ್ಕಳಿಗೆ ಪ್ರತ್ಯೇಕವಾದ ಕೊಟಡಿಯಿದೆ. ಹಿಂದೂ ಮನೆಗಳಲ್ಲಿಯ ವಾಡಿಕೆಯಂತೆ ಇಲ್ಲಿ ತಗ್ಗಾದ ಮಣೆಗಳನ್ನು ಸಾಲಾಗಿ ಹಾಕಿದ್ದಿತು. ಮಕ್ಕಳೆಲ್ಲವೂ ಬಂದು ಅವುಗಳ ಮೇಲೆ ಕುಳಿತವು. ತಿಂಡಿಯನ್ನು ಕೆಲವು ಮಕ್ಕಳು ಬಡಿಸಿದುವು. ಬಡಿಸುವ ಮಕ್ಕಳು ಪ್ರತಿ ಮಗುವಿನ ಮುಂದೆಯೂ ಒಂದು ಚೈನಾ ತಟ್ಟೆಯನ್ನು ತಂದಿಟ್ಟವು. ಅವುಗಳಲ್ಲಿ ಒಂದೊಂದು ಚೂರು ಮಿಠಾಯಿಯನ್ನು ಮಕ್ಕಳೇ ಮೆಲ್ಲನೆ ಬಡಿಸಿದುವು. ಈ ಕೆಲಸವೆಲ್ಲ ಸಾವಧಾನವಾಗಿ ನಡೆಯಿತು. ಸ್ವಲ್ಪವೂ ಗದ್ದಲವಾಗಲಿಲ್ಲ; ಹೆಚ್ಚು ಕಡಿಮೆಯಾಗಲಿಲ್ಲ; ಅವಸರವಾಗಲಿಲ್ಲ. ಒಂದೊಂದು ತಟ್ಟೆಯ ಜೊತೆಗೆ ಸಣ್ಣ ಒಂದು ಬಟ್ಟಲಿನಲ್ಲಿ ಹಾಲು ಇದ್ದಿತು.

ಎಲ್ಲ ಕ್ರಮವಾಗಿದ್ದಿತು; ನಿಶ್ಶಬ್ದವಾಗಿದ್ದಿತು. ಬಡಿಸುವುದು ಪೂರ್ತಿಯಾಗುವ ವರೆಗೂ ಮಕ್ಕಳು ತಮ್ಮ ಸ್ಥಳದಲ್ಲಿ ಗದ್ದಲಮಾಡದೆ ಕಾದಿದ್ದುವು. ಎಲ್ಲ ಸಿದ್ಧವಾದ ಮೇಲೆ ಉಪಾಧ್ಯಾಯರು ಒಂದು ಸ್ತೋತ್ರವನ್ನು ಪಠಿಸಿದರು. ಅವರೊಂದಿಗೆ ಮಕ್ಕಳೂ ಈ ಸ್ತೋತ್ರವನ್ನು ಹೇಳಿದವು. ಸ್ತೋತ್ರ ಪೂರೈಸಿದ ನಂತರ ತಿಂಡಿ ತಿನ್ನುವುದಕ್ಕೆ ಆರಂಭಿಸಿದವು. ಅವು ಬಟ್ಟಲನ್ನೂ ತಟ್ಟೆಯನ್ನೂ ಜೋಪಾನವಾಗಿ ತೆಗೆದಿಡುತ್ತಿದ್ದವು. ಈ ದೃಶ್ಯ ಮನೋಹರವಾಗಿದ್ದಿತು.

ಮಾರನೆಯ ಬೆಳಿಗ್ಗೆ ಉಪಾಧ್ಯಾಯರು ಮಕ್ಕಳನ್ನು ಡಾಕ್ಟರ್ ಶುಕ್ಲನ ಮನೆಗೆ ಕರೆತಂದು ರಾಮಭಜನೆಯ ಕೀರ್ತನೆಗೆ ಅನುಸಾರವಾಗಿ ಮಕ್ಕಳಿಂದ ಒಂದು

ನರ್ತನಗಳದಲ್ಲಿ ನರ್ತನ ಮಾಡಿಸಿದರು. ಇದಾದನಂತರ ಮಕ್ಕಳಿಗೆ ಮತ್ತೆ ಹಾಲು ಮಿಠಾಯಿ ಹಂಚಲಾಯಿತು. ಈ ಬಾಲಮಂದಿರ ವಢ್ವಾನ್ ಸಂಸ್ಥಾನದ ಸರ್ಕಾರದ ನೇರವಾದ ಆಡಳಿತ ಮತ್ತು ಮೇಲ್ವಿಚಾರಣೆಯಲ್ಲಿ ನಡೆಯುತ್ತಿದೆ. ಶಾಲೆಗಾಗಿ ಮೆತ್ತೆಗಳನ್ನು ಹಾಸಿರುವ ಕುದುರೆ ಗಾಡಿಗಳನ್ನು ಕೊಟ್ಟಿದ್ದಾರೆ. ಇವುಗಳಲ್ಲಿ ಮಕ್ಕಳನ್ನು ಮನೆಯಿಂದ ಕರೆತಂದು ಪಾಠಶಾಲೆ ಮುಗಿದನಂತರ ಹಿಂದಕ್ಕೆ ಕರೆದು ಕೊಂಡು ಹೋಗಿ ಬಿಡುತ್ತಾರೆ. ಪಾಠಶಾಲೆಯಲ್ಲಿ ಯಾವ ರುಸುಮನ್ನೂ ವಸೂ ಲ್ಮಾಡುತ್ತಿರಲಿಲ್ಲ. ಮಕ್ಕಳಿಗೆ ಕೊಡುವ ತಿಂಡಿಯ ಖರ್ಚನ್ನೂ ಸಂಸ್ಥಾನವೇ ವಹಿ ಸಿದೆ. ಪಾಠಗಳಕಾಲ ಬೆಳಗಿನ ಎಂಟು ಗಂಟೆಯಿಂದ ಹನ್ನೊಂದು ಗಂಟೆಯವರೆಗೆ.

ಇನ್ನೊಂದು ದಿನ ರಾಮದಾಸನು ಊರಾಚೆ ಇರುವ ಇನ್ನೊಂದು ಸಂಸ್ಥೆ ಯನ್ನು ನೋಡಲು ಹೋದನು. ಇದನ್ನು ಒಬ್ಬ ಶ್ರೀಮಂತನು ಮಹಾತ್ಮ ಗಾಂಧಿ ಯವರ ಹೆಸರಿನಲ್ಲಿ ಆರಂಭಿಸಿದ್ದನು. ಮಕ್ಕಳಿಗೆ ಪಾಠ ಹೇಳುತ್ತಿದ್ದುದು ಇಲ್ಲಿಯೂ ಸ್ವಲ್ಪ ಹೆಚ್ಚು ಕಡಮೆ ಬಾಲಮಂದಿರದಲ್ಲಿ ಹೇಳುತ್ತಿದ್ದ ಕ್ರಮದಲ್ಲಿಯೇ. ಈ ಎರಡು ಶಾಲೆಗಳಲ್ಲೂ ಒಂದು ವಿಶೇಷ ಸಂಗತಿ ಕಾಣುತ್ತಿದ್ದಿತು. ಉಪಾಧ್ಯಾಯರು ಮಕ್ಕಳ ಸಂಗಡ ಬಹು ನಯವಾಗಿ ಪಿಸುಮಾತಿನಲ್ಲಿ ಮಾತನಾಡುತ್ತಿದ್ದರು. ಒಂದು ಕಠಿಣವಾದ ಅಥವಾ ದಪ್ಪದ ದನಿಯ ಆಜ್ಞೆಗಳು ಅವರ ಬಾಯಿಂದ ಹೊರಡುತ್ತಿರ ಲಿಲ್ಲ. ಉಪಾಧ್ಯಾಯರು ರಾಮದಾಸನ ವಿಚಾರದಲ್ಲಿ ತುಂಬ ವಿಶ್ವಾಸಿಗಳೂ ಸ್ನೇಹ ಪರರೂ ಆಗಿದ್ದರು. ಮಕ್ಕಳಿಗೆ ತಿಂಡಿ ಹಂಚಿದ ಮೇಲೆ ರಾಮದಾಸನು ಪಾಠಶಾಲೆ ಯಿಂದ ಹೊರಟು ಬಂದನು.

ಜೀವರಾಜ್ ಬಾಲು ಎಂಬ ಸಾಧಕನು ರಾಮದಾಸನ ಬಳಿಗೆ ಸದಾ ಬಂದು ಹೋಗುತ್ತಿದ್ದನು. ಅವನು ಪ್ರಾಪಂಚಿಕ ವ್ಯಾಪಾರಗಳಿಂದ ವಿಶ್ರಾಂತಿ ಹೊಂದಿ ಸಾಧನೆಕ್ಕಾಗಿ ಒಂದು ನಿರ್ಜನ ಪ್ರದೇಶದಲ್ಲಿ ನಿಂತಿದ್ದನು. ಅದು ಊರಾಚೆ ಹೊಲಗಳ ಮಧ್ಯೆ ಇದ್ದಿತು. ಇಲ್ಲಿ ಇವನು ಸಣ್ಣ ಒಂದು ಗುಡಿಸಲನ್ನು ಕಟ್ಟಿಕೊಂಡು ಅದರಲ್ಲಿ ವಾಸಮಾಡುತ್ತಿದ್ದನು. ಇವನು ರಾಮದಾಸನನ್ನು ತನ್ನ ಗುಡಿಸಲಿಗೆ ಒಂದು ಸಲ ಭೇಟಿಕೊಡಬೇಕೆಂದು ಕೇಳಿಕೊಂಡನಲ್ಲದೆ ದಿವಾನ್ ಸಾಹೇಬರಿಗೂ ಆಹ್ವಾನವಿತ್ತನು. ಆದ್ದರಿಂದ ಇಬ್ಬರೂ ದಿವಾನರ ಗಾಡಿಯಲ್ಲಿ ಗುಡಿಸಲಿಗೆ ಹೋದರು. ಜೀವರಾಜ್ ಬಾಲು ರಾಮದಾಸನಿಗೆ ಆಲಿಂಗನವಿತ್ತನು. ರಾಮದಾಸನು ಅಲ್ಲಿಗೆ ಹೋದುದರಿಂದ ಅವನಿಗೆ ತುಂಬಾ ಸಂತೋಷವಾಯಿತು. ಅವನು ಆಮೇಲೆ ಅತಿಥಿಗಳಿಗೆ ಹಾಲನ್ನು ಸಮರ್ಪಿಸಿ, ರಾಮದಾಸನನ್ನು ಒಂದು ಉಪನ್ಯಾಸ ಕೊಡಬೇಕೆಂದು ಕೇಳಿ ಕೊಂಡನು. ರಾಮದಾಸನು ಸುಮಾರು ಅರ್ಧ ಗಂಟೆಯಕಾಲ ಮಾತನಾಡಿದನು. ನಂತರ ಸಂಗೀತವಾಯಿತು. ಜೀವರಾಜ್ ತಾನೇ ರಚಿಸಿದ್ದ ಕೆಲವು ಹಾಡುಗಳನ್ನು ಹಾಡಿದನು.

ಸಾಯಂಕಾಲದ ಹೊತ್ತಿನಲ್ಲಿ ಡಾಕ್ಟರ್ ಶುಕ್ಲನ ಮನೆಯಲ್ಲಿ ಚೋಟಾಭಾಯ್ ಅಲ್ಲಿ ನೆರೆದಿದ್ದ ಭಕ್ತರಿಗೆ ದಿಲ್‌ರುಬವನ್ನು ನುಡಿಸುತ್ತ ಹಾಡಿ ಮನರಂಜನೆ ಮಾಡುತ್ತಿದ್ದನು.

## (ii) ಪಾದರಕ್ಷೆಗಳ ಒದೆತದ ಪೂಜೆ

ರಾಮದಾಸನು ಲಿಂಬ್ಡಿಯಲ್ಲಿ ಹಿಂದಿನ ಸಲದಂತೆ ಕಾಂತಿಲಾಲನ ಮನೆಯಲ್ಲಿ ಇಳಿದುಕೊಂಡನು. ರಾಮದಾಸನನ್ನು ಪುನಃ ಸಂದರ್ಶಿಸಲು ಲಿಂಬ್ಡಿ ಜನಗಳ ಉತ್ಸುಕತೆ ಎಷ್ಟರಮಟ್ಟಿಗಿದ್ದಿತೆಂದರೆ, ರಾಮದಾಸನು ಬಂದಿಳಿದೊಡನೆಯೇ ನೂರಾರು ಜನ ದರ್ಶನಕ್ಕಾಗಿ ಬಂದರು. ಹತ್ತಿರ ಹತ್ತಿರ ಎಲ್ಲ ವಿವರದಲ್ಲಿಯೂ ಹಿಂದೆ ನಡೆದಿದ್ದಂತೆಯೇ ಕಾರ್ಯಕ್ರಮಗಳು ಜರುಗಿದುವು. ಡಾಕ್ಟರ್ ಶುಕ್ಲ, ಚುನಿಭಾಯ್, ಚೋಟಾಭಾಯ್ ಇವರು ಪ್ರತಿದಿನವೂ ರಾಮದಾಸನನ್ನು ನೋಡಲು ಮಧ್ಯಾನದಿಂದ ಬರುತ್ತಿದ್ದರು. ರಾಮದಾಸನು ಇನ್ನೂ ಕ್ಷೀರವ್ರತವನ್ನು ಪಾಲಿಸುತ್ತಿದ್ದನು. ಅವನನ್ನು ಲಿಂಬ್ಡಿಯ ಪ್ರಮುಖ ವರ್ತಕರಾದ ಉಗರ್‌ಚಂದ್ ಸೇಟ್ ಮತ್ತು ಮೋಹನ್ ಭಾಯಿಯವರು ತಮ್ಮ ಮನೆಗೆ ಕರೆದುಕೊಂಡು ಹೋದರು. ರಾಮದಾಸನು ಪುನಃ ತಮ್ಮಲ್ಲಿಗೆ ಬಂದುದರಿಂದ ಕಲ್ಲುಸಕ್ಕರೆಯ ಮಾತೆಯರ ಸಂತೋಷಕ್ಕೆ ಪಾರವೇ ಇರಲಿಲ್ಲ. ಗಂಗಾಮಾಯಿ ಎಂಬ ಮಾತೆಗೆ ಎಪ್ಪತ್ತು ವರ್ಷಕ್ಕೆ ಮೇಲ್ಪಟ್ಟ ವಯಸ್ಸಾಗಿದ್ದಿತು. ಈಕೆ ತೆವಳಿಕೊಂಡು ಕಷ್ಟದಿಂದ ಮೆಟ್ಟಲು ಹತ್ತಿ ಮಹಡಿಯ ಮೇಲಕ್ಕೆ ಬಂದು, ರಾಮದಾಸನ ಬಾಯಿಗೆ ಒಂದು ಚೂರು ಕಲ್ಲುಸಕ್ಕರೆಯನ್ನು ತುರುಕಿ ಅವನನ್ನು ಅಪ್ಪಿಕೊಳ್ಳುತ್ತಿದ್ದಳು. ಆಕೆಯ ಭಕ್ತಿ ನಿಜವಾಗಿಯೂ ಆಶ್ಚರ್ಯಕರವಾದುದು.

ಲಿಂಬ್ಡಿಯಲ್ಲಿ ಕೆಲವು ದಿನಗಳಿದ್ದನಂತರ ಝಾನ್ಸಿ ಮಾರ್ಗವಾಗಿ ಗೋಃಕಾರ್ ಪರ್ವತಕ್ಕೆ ಪ್ರಯಾಣಮಾಡಲು ರಾಮನ ಅಪ್ಪಣೆಯಾಯಿತು.

ರಾಮದಾಸನು ಝಾನ್ಸಿಗೆ ರೈಲಿನಲ್ಲಿ ಹೊರಟನು. ಉಜ್ಜಯಿನಿ ಮಾರ್ಗವಾಗಿ ಪ್ರಯಾಣಮಾಡುವಾಗ ಬಹಳ ಕಡೆ ಗಾಡಿಗಳನ್ನು ಬದಲಾಯಿಸಬೇಕಾಯಿತು. ಬೀನಾ ಸ್ಟೇಷನ್ನಿನಲ್ಲಿ ಝಾನ್ಸಿಗೆ ಹೋಗುವ ಗಾಡಿಯಲ್ಲಿ ಕುಳಿತುಕೊಳ್ಳಬೇಕಾಗಿದ್ದಿತು. ಆಗ ರಾತ್ರಿ ಸುಮಾರು ಹತ್ತು ಗಂಟೆ. ಗಾಡಿಯನ್ನು ಹತ್ತುವಾಗ ಒಬ್ಬ ಮುಸಲ್ಮಾನ ಪ್ರಯಾಣಿಕನು ಅಡ್ಡಿಮಾಡಿದನು. ಆದಾಗ್ಯೂ ರಾಮದಾಸನು ನುಸಿದು ಗಾಡಿಯೊಳಕ್ಕೆ ಹೋದನು. ರಾಮದಾಸನ ಮೈಮೇಲೆ ಎಂದಿನಂತೆ ಕಾವಿಯ ಒಂದೇ ಒಂದು ವಸ್ತ್ರವಿದ್ದು ಇದರ ಕೊನೆಯಲ್ಲಿ ಟಿಕೀಟನ್ನು ಕಟ್ಟಿಕೊಂಡಿದ್ದನು. ಗಾಡಿಯ ತುಂಬ ಮುಸಲ್ಮಾನ ಪ್ರಯಾಣಿಕರಿದ್ದರು. ಇವರು ಒಬ್ಬೊಬ್ಬರೂ ಇತರರಿಗೆ ಯಾರಿಗೂ ಸ್ಥಳವಿಲ್ಲದಂತೆ ಹಾಸಿಕೆಗಳನ್ನು ಹಾಕಿಕೊಂಡು ಕಾಲುಗಳನ್ನು ನೀಡಿಕೊಂಡು ಮಲಗಿದ್ದರು. ರಾಮದಾಸನು ಕುಳ್ಳಾಗಿದ್ದ ಒಬ್ಬ

ಮುಸಲ್ಮಾನ ಪ್ರಯಾಣಿಕನ ಕಾಲುಬಳಿ ಸ್ವಲ್ಪ ಸ್ಥಳಮಾಡಿಕೊಂಡು ಕುಳಿತನು. ರೈಲು ಹೊರಟು ಮುಂದಿನ ಸ್ಟೇಷನ್ನನ್ನು ಮುಟ್ಟಿತು. ಇಲ್ಲಿ ಅನೇಕ ಜನ ಪ್ರಯಾಣಿಕರು ಗಾಡಿಗೆ ನುಗ್ಗಿದರು. ಅವರೂ ಮುಸಲ್ಮಾನರೇ. ಇವರೆಲ್ಲರೂ ಬೆಂಚುಗಳ ಮಧ್ಯೆ ಇಕ್ಕಟ್ಟಾಗಿ ನಿಲ್ಲಬೇಕಾಯಿತು. ಮಲಗಿದ್ದವರಲ್ಲಿ ಒಬ್ಬನಾದರೂ ಎದ್ದು ಇವರಿಗೆ ಸ್ಥಳಕೊಡಲಿಲ್ಲ. ರಾಮದಾಸನಿಗೆ ತನ್ನ ಸ್ಥಳವನ್ನು ಒಬ್ಬನಿಗೆ ಬಿಟ್ಟುಕೊಡಬೇಕೆಂಬ ಭಾವನೆ ಉಂಟಾಗಿ, ಅವನು ತಾನು ಬೆಂಚಿನ ಮೇಲೆ ಕುಳಿತಿದ್ದ ಸ್ಥಳವನ್ನು ಬಿಟ್ಟು, ಜಾರಿ ಕೆಳಗೆ ಕುಳಿತನು. ಈ ರೀತಿ ಬರಿದಾದ ಸ್ಥಳ ಕೂಡಲೆ ಭರ್ತಿಯಾಯಿತು.

ಮುಂದಿನ ಸ್ಟೇಷನ್ನಿನಲ್ಲಿ ಇನ್ನಷ್ಟುಜನ ಪ್ರಯಾಣಿಕರು ನುಗ್ಗಿದರು. ಪುನಃ ಎಲ್ಲರೂ ಮುಸಲ್ಮಾನರೇ. ಕಾಲಿಡಲು ಎಡೆಯಿಲ್ಲದೆ, ಸ್ಥಳಮಾಡಿಕೊಳ್ಳಲು ಬೆಂಚುಗಳ ಮಧ್ಯೆ ಓಡಾಡಲು ಪ್ರಾರಂಭಿಸಿದರು. ಇವರ ಕಾಲುಗಳಲ್ಲಿ ಭಾರವಾದ ಬೂಟ್ಸುಗಳಿದ್ದುವು. ರಾಮದಾಸನು ಮೊಲದಂತೆ ನೆಲದಮೇಲೆ ಅಡಗಿಕೊಂಡು ಕುಳಿತಿದ್ದನು. ಇವರ ಬೂಟ್ಸಿನ ತಾಡನವನ್ನು ರಾಮದಾಸನ ಬಹು ಆನಂದದಿಂದ ಸ್ವೀಕರಿಸಿದನು. ರಾಮದಾಸನು ಸಾಧ್ಯವಾದಷ್ಟು ಕಡಮೆ ಸ್ಥಳದಲ್ಲಿರಲು, ಉರುಳಿಕೊಂಡು '8' ರ ಆಕಾರದಂತೆ ತನ್ನ ಮೈಯನ್ನು ಮುದುರಿಕೊಂಡನು. ಪ್ರತಿ ಸ್ಟೇಷನ್ನಿನಲ್ಲೂ ಪ್ರಯಾಣಿಕರು ನುಗ್ಗಿದರು. ಉಸಿರಾಡುವುದೂ ಕಷ್ಟವಾಗುವಂತೆ ಭರ್ತಿಯಾಗಿ ತುಂಬಿಕೊಂಡರು. ಮಲಗಿದ್ದವರಲ್ಲಿ ಕೆಲವರು ಯತ್ನವಿಲ್ಲದೆ ಎದ್ದು ಕುಳ್ಳಿರಬೇಕಾಯಿತು. ಆದುದರಿಂದ ರಾಮದಾಸನಿಗೆ ನಾಲ್ಕು ದಿಕ್ಕುಗಳಿಂದಲೂ ಪಾದರಕ್ಷಾತಾಡನೆಗಳಾದುವು. ಕುಳಿತಿದ್ದ ಮುಸಲ್ಮಾನ ಪ್ರಯಾಣಿಕರು ಕಾಲುಗಳನ್ನು ಬೇರೆ ರೀತಿ ಇಟ್ಟುಕೊಳ್ಳಬೇಕಾದಾಗ ರಾಮದಾಸನನ್ನು ಒದೆಯಲೇಬೇಕಾಗಿದ್ದಿತು. ಇವನ ಬಳಿ ದಾರಿಯಲ್ಲಿ ನಿಂತಿದ್ದ ಮಿತ್ರರು ತಮ್ಮ ಭಾಗದ ತಾಡನವನ್ನೂ ಸೇರಿಸಿ ಕೊಟ್ಟರು. ರಾಮದಾಸನಲ್ಲಿದ್ದ ಒಂದೇ ಒಂದು ಬಟ್ಟೆ ಅವನನ್ನು ತಲೆಯಿಂದ ಕಾಲಿನವರೆಗೂ ಮುಚ್ಚಿದ್ದಿತು. ರಾಮದಾಸನು ನೆಲದಮೇಲೆ ಬಿದ್ದಿದ್ದ ಬಟ್ಟೆಯ ಚೀಲದಹಾಗಿದ್ದನು.

ರಾಮದಾಸನು "ರಾಮದಾಸ, ನಿನಗೆ ಅನೇಕ ಭಕ್ತರ ಮನೆಯಲ್ಲಿ ಹೂವಿನ ಹಾರ, ಗಂಧ, ಆರತಿ ಇವುಗಳಿಂದ ಪೂಜೆ ದೊರೆಯುತ್ತಿದ್ದಿತು. ಅದು ಒಂದು ವಿಧವಾದ ಪೂಜೆ. ಇಲ್ಲಿ ನಿನಗೆ ಬೇರೆ ರೀತಿಯ ಪೂಜೆ, ಪಾದರಕ್ಷಾತಾಡನದ್ದು ಆಗುತ್ತಿದೆ. ಎರಡೂ ನಿನಗೆ ಸಮ" ಎಂದು ತರ್ಕಮಾಡಿಕೊಂಡನು.

ರಾಮದಾಸನು ಈ ವಿನೋದದಿಂದ ಆನಂದಿಸಿದನು. ಬೆಳಕು ಹರಿಯಿತು. ಪ್ರಯಾಣಿಕರ ಗುಂಪು ಕಡಮೆಯಾಯಿತು. ತಾನು ಮೊದಲು ಕುಳಿತಿದ್ದ ಬೆಂಚಿನ ಸ್ಥಳ ಬಿಡುವಾದ ಕೂಡಲೇ ರಾಮದಾಸನು ಅದನ್ನು ಹಿಡಿದು ಕುಳಿತನು. ಎದುರು ಬೆಂಚಿನ ಮೇಲೆ ಕುಳಿತಿದ್ದ, ಕೆಂಪಾದ ಕಣ್ಣಿನ, ಒರಟಾದ ಗಡ್ಡದ, ತಿರುವಿದ ಮೀಸೆಯ ಮುಸಲ್ಮಾನ ಮುಖಕನು ರಾಮದಾಸನ ತೋಳನ್ನು ಹಿಡಿದು ಎಳೆದು,

ಅಧಿಕಾರ ವಾಣಿಯಿಂದ "ಇಳಿ. ನೆಲದ ಮೇಲೆ ಕುಳಿತುಕೋ" ಎಂದು ಹೇಳಿದನು.

ರಾಮದಾಸನು ತನ್ನ ಸ್ಥಳದಲ್ಲಿ ಭದ್ರವಾಗಿ ಕುಳಿತಿದ್ದನು. ಮಗ್ಗುಲಲ್ಲಿ ಕುಳಿತಿದ್ದ ಇನ್ನೊಬ್ಬ ಮುಸಲ್ಮಾನನು ರಾಮದಾಸನ ಪಕ್ಷವನ್ನು ವಹಿಸಿ, ಈ ರೀತಿ ನಿಷ್ಕಾರಣವಾಗಿ ಅವಮಾನ ಮಾಡಿದುದಕ್ಕೆ ವೃದ್ಧ ಮುಹಮ್ಮದೀಯನನ್ನು ಆಕ್ಷೇಪಿಸಿದನು. "ಸಾಧು, ನೀನು ಅಲ್ಲಿಯೇ ಕುಳಿತುಕೋ. ಕದಲಬೇಡ. ಆ ಮುದುಕನಿಗೆ ಎಲ್ಲೋ ಹುಚ್ಚಿರಬೇಕು" ಎಂದು ಹೇಳಿದನು. ಮುದುಕನೂ ಶಾಂತನಾದನು.

---

# ಅಧ್ಯಾಯ ೨೨

## ಗೋಃಕಾರ್ ಪರ್ವತ

### (i) ಅತಿ ಸಾಹಸದ ಚಟುವಟಿಕೆ.

ರಾಮದಾಸನು ಝಾನ್ಸಿಯನ್ನು ಮುಟ್ಟಿದನು; ಸ್ಟೇಷನ್ನಿನಲ್ಲಿ ರಾಮಕಿಂಕರ ಮಹದೇವ ಪ್ರಸಾದರು ಕಾದಿದ್ದರು. ಮಹದೇವ ಪ್ರಸಾದನು ರಾಮದಾಸನನ್ನು ಅಪ್ಪಿಕೊಂಡು ಪುನಃ ಸಂದರ್ಶಿಸಿದ ಆನಂದದಿಂದ ಅತ್ತನು. ರಾಮದಾಸನು ಮರಳಿ ಆಟ್ಕಂಬದಲ್ಲಿ ನಿಂತನು. ಅಲ್ಲಿ ಎರಡು ಮೂರು ದಿನ ಇದ್ದು, ರಾಮಕಿಂಕರ ಮತ್ತು ಛೇದಿಲಾಲ್ ಇವರ ಜೊತೆಯಲ್ಲಿ ಝಾನ್ಸಿಯಿಂದ ಪ್ರಯಾಣಮಾಡಿದನು. ಛೇದಿಲಾಲನು, ಇನ್ನೊಬ್ಬ ಶ್ರದ್ಧಾಳು ಮತ್ತು ಸ್ನೇಹಪರನಾದ ಮನುಷ್ಯ. ರಾಮದಾಸನು ಬರುವದಾಗಿ ಮಹೋಬದ ಸ್ನೇಹಿತರಿಗೆ ತಂತಿ ಮೂಲಕ ವರ್ತಮಾನ ಹೋಗಿದ್ದಿತು. ಆದ್ದರಿಂದ ರಾಮಚರಣದಾಸ ಮತ್ತು ಹತ್ತು ಹನ್ನೆರಡು ಜನರು ಮಹೋಬ ಸ್ಟೇಷನ್ನಿನಲ್ಲಿ ರೈಲು ಬರುವುದನ್ನು ಆತುರದಿಂದ ಎದುರುನೋಡುತ್ತಿದ್ದರು. ರಾಮದಾಸನೂ ಜೊತೆಗಾರರೂ ಇಳಿದಾಗ ಇವರನ್ನು ಬಹು ಸಂತೋಷದಿಂದ ಸ್ವಾಗತಿಸಿ ಊರೊಳಕ್ಕೆ ಕರೆದುಕೊಂಡು ಹೋದರು. ಇವರು ಆ ರಾತ್ರಿ ಗೋಃಕಾರ್ ಪರ್ವತದ ದಾರಿಯಲ್ಲಿ ಊರ ಹೊರಗಿರುವ ಮಹವೀರನ ದೇವಸ್ಥಾನದಲ್ಲಿ ಇಳಿದರು. ಬೆಳಿಗ್ಗೆ ಬೆಟ್ಟವನ್ನು ಹತ್ತಿ ರಾಮದಾಸನು ಹಿಂದೆ ವಾಸವಿದ್ದ ಗುಹೆಯನ್ನು ಸೇರಿದರು.

ಕಲ್ಲೂ ಎಂಬ ಬ್ರಾಹ್ಮಣ ಹುಡುಗನು ರಾಮದಾಸನಿಗಾಗಿ ಅಡಿಗೆಮಾಡಲು ಒಪ್ಪಿಕೊಂಡನು. ಜಗನ್ನಾಥನು ಸಾಮಾನನ್ನು ತಂದುಕೊಡುತ್ತಿದ್ದನು. ಎರಡು ಮೂರು ದಿನಗಳ ನಂತರ ಹಿಂದೆ ಚಿತ್ರಕೂಟದ ಪಿಳಿಕೋಟಿ ಆಶ್ರಮದಲ್ಲಿ ರಾಮನವಮಿ ಉತ್ಸವಕಾಲದ ಸಂನ್ಯಾಸಿಗಳ ಮೇಳದಲ್ಲಿ ಸಂಧಿಸಿದ್ದ ಭಗವಾನ್ ಎಂಬ ಸಂನ್ಯಾಸಿ ಬಂದು ಸೇರಿದನು. ಈತ ಪರಿಶುದ್ಧ ಹೃದಯ ಮತ್ತು ಸರಳಸ್ವಭಾವ

ದವನು; ತೀರಾ ಶಾಂತನು ಮತ್ತು ಮಿತಭಾಷಿ. ರಾಮದಾಸನ ಮೇಲಣ ಬಹು ಪ್ರೇಮ ಅವನನ್ನು ಅಲ್ಲಿ ನಿಲ್ಲುವಂತೆ ಮಾಡಿತು. ರಾಮಚರಣದಾಸನಂತು ಸಂಗಡ ಇದ್ದೇ ಇದ್ದನು. ರಾಮದಾಸನು ಹತ್ತಿರ ಹತ್ತಿರ ನಾಲ್ಕು ತಿಂಗಳಕಾಲ ಆ ಬೆಟ್ಟದ ಮೇಲೆ ನಿಂತನು.

ರಾಮದಾಸನನ್ನು ನೋಡಲು ಸುತ್ತಣ ಹಳ್ಳಿಗಳಿಂದ ಅನೇಕರು ಬರುತ್ತಿದ್ದರು. ರಾಮದಾಸನು ಅವರೊಂದಿಗೆ ಸೇರಿ ರಾಮಮಂತ್ರವನ್ನು ಗಟ್ಟಿಯಾಗಿ, ತಾಳಕ್ಕೆ ಸರಿಯಾಗಿ ಉಚ್ಚರಿಸುತ್ತ ಭಜನೆಮಾಡುತ್ತ ನರ್ತಿಸುತ್ತಿದ್ದನು. ಇಲ್ಲಿದ್ದಷ್ಟು ಕಾಲವೂ ಅಸಾಧಾರಣ ದಿವ್ಯಾನಂದದ ಕಾಲವಾಗಿದ್ದಿತು. ಸುಮಾರು ಐವತ್ತು ಜನರು ಭಗವನ್ನಾಮ ಮಧುರಗಾಯನಕ್ಕೆ ಸರಿಯಾಗಿ ನರ್ತನ ಮಾಡುತ್ತಿದ್ದರೆ, ಇಡೀ ಪ್ರಪಂಚ ನರ್ತನಮಾಡುತ್ತಿದ್ದಂತೆ ರಾಮದಾಸನಿಗೆ ಭಾಸವಾಗುತ್ತಿದ್ದಿತು. ಗಂಟೆಗಟ್ಟಲೆ ನರ್ತನ ಮಾಡಿದರೂ ಅವನಿಗೆ ಸ್ವಲ್ಪವೂ ಆಯಾಸವಾಗುತ್ತಿರಲಿಲ್ಲ. ಭಗವಾನನು ನರ್ತನ ಪದ್ಧತಿಗೆ ಹೊಸಬನಾದರೂ ತಾನೂ ನರ್ತನದಲ್ಲಿ ಸೇರುತ್ತಿದ್ದನು. ಯಾರೇ ಹೊಸದಾಗಿ ಬೆಟ್ಟಕ್ಕೆ ಬಂದರೂ ಅವರಿಗೆ ನರ್ತನಮಾಡದೆ ಇರಲು ಸಾಧ್ಯವೇ ಇರಲಿಲ್ಲ. ಭಗವನ್ನಾಮ ಬೆಟ್ಟದಲ್ಲೆಲ್ಲಾ ಮೊಳಗಿ ಆನಂದ ಪುಳಕದಿಂದ ತುಂಬಿದ ವಾತಾವರಣವನ್ನುಂಟುಮಾಡಿತು.

ರಾತ್ರಿಯ ಹೊತ್ತು ಇಂಪಾದ ಕಂಠವುಳ್ಳ ಭಕ್ತರು ಕೈತಮಟೆಯನ್ನು ಬಡಿಯುತ್ತ ಕಬೀರ್‌ಮಹಾರಾಜ್ ಮತ್ತು ಬನಾರಸಿಯ ಹಾಡುಗಳನ್ನು ಹಾಡುತ್ತಿದ್ದರು. ಕೀರ್ತನೆ ಸಮರಾತ್ರಿ ಎಂದರೆ ಬೆಳಗಿನ ಜಾವದ ಎರಡು ಮೂರು ಗಂಟೆಯವರೆಗೂ ನಡೆಯುತ್ತಿದ್ದಿತು. ರಾಮಕಿಂಕರನಿಗೆ ಬೆಟ್ಟ ಭೀಕರವೆನಿಸಿತು. ಅದರಲ್ಲೂ ರಾತ್ರಿಯ ಹೊತ್ತು ಹುಲಿಗಳ ಓಡಾಟವಿರುತ್ತೆಂದು ತಿಳಿದಮೇಲೆ ಅವನು ಅಲ್ಲಿರಲು ಒಪ್ಪಲಿಲ್ಲ. ರಾತ್ರಿಯ ಹೊತ್ತು ಊರೊಳಕ್ಕೆ ಪ್ರೇಕ್ಷಕರೊಂದಿಗೆ ಹೊರಟುಹೋಗುತ್ತಿದ್ದನು. ಮೂರು ನಾಲ್ಕು ದಿನಗಳಲ್ಲಿ ಅವನ ರಜ ಪೂರೈಸಿದುದರಿಂದ ಅವನು ಝಾನ್ಸಿಗೆ ಪ್ರಯಾಣಮಾಡಿದನು. ಛೇದಿಲಾಲನು ಒಂದು ವಾರವಿದ್ದನು. ಅನಂತರ ಅವನು ಝಾನ್ಸಿಗೆ ಹೊರಟುಹೋದನು. ಅವನು ಹಗಲೂ ರಾತ್ರಿಯೂ ಬೆಟ್ಟದ ಮೇಲೆಯೇ ಇರುತ್ತಿದ್ದನು.

ಹಗಲೆಲ್ಲ ರಾಮದಾಸನು ಲವಲವಿಕೆಯ ಮಂಗನಂತೆ ಇರುತ್ತಿದ್ದನು. ಅವನಿಗೆ ಸುಮ್ಮನೆ ಇರುವುದಕ್ಕೆ ಆಗುತ್ತಲೇ ಇರಲಿಲ್ಲ. ಇಲ್ಲ ನರ್ತನ ಮಾಡುವನು, ಇಲ್ಲ ಓಡುವನು. ನರ್ತನ ಮಾಡದೆ ಇದ್ದ ಕಾಲದಲ್ಲಿ ಸುತ್ತಣ ಎತ್ತರವಾದ ಬೆಟ್ಟಗಳ ಮೇಲೆ ಅಳಿಲಿನಂತೆ ಹತ್ತಿ ಹೋಗುತ್ತಿದ್ದನು. ಅವನಿಗೆ ದೇಹ ಬಹು ಹಗುರವಾಗಿ ಕಾಣುತ್ತಿದ್ದಿತು. ಅದರ ತಡಿಕೆಯಲ್ಲಿ ದೈವಿಕಶಕ್ತಿ ವಿದ್ಯುಚ್ಛಕ್ತಿಯಂತೆ ಪ್ರವಹಿಸುತ್ತಿದ್ದಿತು. ಬೆಟ್ಟದ ತುದಿಯನ್ನು ಸೇರಿ ಅವನು "ಹರಿಃ ಓಂ!" ಎಂದು ಗಟ್ಟಿಯಾಗಿ ಕೂಗುತ್ತಿದ್ದನು. ಈ ಪವಿತ್ರಾಕ್ಷರಗಳು ಬೆಟ್ಟದಲ್ಲಿ ಪ್ರತಿಧ್ವನಿಯಾಗುತ್ತಿದ್ದವು. ಪ್ರತಿ

ಯೊಂದು ಬೆಟ್ಟವೂ ಒಂದಾಗುತ್ತಲೊಂದರಂತೆ "ಹರಿಃ ಓಂ !'' ಎಂದು ತಡಮಾಡದೆ ಸ್ಪಷ್ಟವಾಗಿ ಪ್ರತಿಧ್ವನಿಕೊಡುತ್ತ, ವಾಯುಮಂಡಲವನ್ನೆಲ್ಲಾ ಆನಂದದಾಯಕವಾದ ಸುಸ್ವರದಿಂದ ತುಂಬುತ್ತಿದ್ದಿತು.

ರಾಮದಾಸನು ಬೆಟ್ಟದ ಮೇಲಕ್ಕೆ ಹತ್ತಿ ಓಡಿಹೋಗುವಾಗ, ರಾಮಚರಣ ದಾಸ, ಜಗನ್ನಾಥ, ಇನ್ನು ಒಬ್ಬರಿಬ್ಬರು ಜೊತೆಯಾಗುತ್ತಿದ್ದರು. ಆ ಏರುಗಳು ಬಹಳ ಅಪಾಯಕರವಾಗಿದ್ದವು. ಕೆಲವರು ಮಾತ್ರ ಅವನ ಜೊತೆಗೆ ಹತ್ತುವ ಧೈರ್ಯ ಮಾಡುತ್ತಿದ್ದರು. ಕೆಳಕ್ಕೆ ಇಳಿಯುವಾಗ ರಾಮದಾಸನು ಜಾರಿಕೊಂಡು ಬರುತ್ತಿರ ಲಿಲ್ಲ. ಬಂಡೆಯಿಂದ ಬಂಡೆಯ ಮೇಲಕ್ಕೆ ಹಾರುತ್ತಿದ್ದನು. ರಾಮದಾಸನು ಒಂದೊಂದು ಸಂದರ್ಭದಲ್ಲಿ ಐವತ್ತುಅಡಿ ಕೆಳಕ್ಕೂ ವಿವೇಚನೆಯಿಲ್ಲದೆ ಧುಮುಕು ತ್ತಿದ್ದನು. ಇಷ್ಟಾದರೂ ಕೆಳಗಿನ ಕಲ್ಲಿನಮೇಲೆ ಕಪಿಯಂತೆ ಸುಕ್ಷೇಮವಾಗಿ ಕೈ ಕಾಲುಗಳನ್ನು ಊರುತ್ತಿದ್ದನು. (ದೇಹವೂ ಪ್ರಾಣವೂ ಅವನಿಗೆ ತೃಣಸಮಾನ ವಾಗಿದ್ದುವು.) ಇಷ್ಟು ಸಂತತವಾಗಿ ದೇಹದಂಡನೆ ಮಾಡಿದರೂ ಅವನಿಗೆ ಆಯಾಸ ತೋರಲಿಲ್ಲ. ಎಂದಿನಂತೆ ಶಕ್ತಿಯೂ ಹುರುಪೂ ಇರುತ್ತಿದ್ದುವು.

ಗೆಳೆಯರೊಂದಿಗೆ ಬೆಟ್ಟದಮೇಲೆ ಸಂಚಾರಮಾಡುತ್ತಿದ್ದಾಗ, ರಾಮದಾಸನಿಗೆ ಒಂದುಸಲ ಒಂದು ಮೂರು ತಲೆಯ ದೇವರ ದೊಡ್ಡಕಲ್ಲಿನ ವಿಗ್ರಹ ಕಾಣಿಸಿತು. ಇದನ್ನು ಒಂದು ಗುಡ್ಡದ ಪಕ್ಕಕ್ಕೆ ಒರಗಿಸಿದ್ದಿತು. ಸುತ್ತಣ ಅವಶೇಷಗಳಿಂದ ಹಿಂದೆ ಈ ಬೃಹದ್ವಿಗ್ರಹಕ್ಕೆ ಇಲ್ಲಿ ಒಂದು ದೇವಸ್ಥಾನವಿದ್ದಿತೆನ್ನುವುದು ಕಾಣು ತ್ತಿದ್ದಿತು. ರಾಮದಾಸನಿಗೆ ವಿಗ್ರಹದ ತಲೆಯ ಮೇಲೆ ಹತ್ತಿಹೋಗಬೇಕೆಂಬ ಪ್ರೇರಣೆ ಯಾಯಿತು. ಅವನು ಕೂಡಲೆ ಮಿಂಚಿನ ವೇಗದಲ್ಲಿ ಅದನ್ನು ಏರಿ, ವಿಗ್ರಹದ ಅಗಲವಾದ ನೆತ್ತಿಯಮೇಲೆ ನಿಂತು, ಅತಿ ಸಂತೋಷದಿಂದ ನರ್ತನ ಮಾಡಿದನು.

ಇನ್ನೊಬ್ಬ ಸಾಧು ವೈಷ್ಣವನು, ಇವರ ಗುಂಪನ್ನು ಸೇರಿದನು. ಇವನ ಹೆಸರು ವೈಜನಾಥ. ಈತನು ಗುಹೆಯ ತಳದಲ್ಲಿ ಒಂದು ಅಗ್ನಿಕುಂಡದ ಎದುರಿಗೆ ರಾತ್ರಿಯೆಲ್ಲಾ ಜಪಮಣಿಯನ್ನು ತಿರುವುತ್ತ ಕುಳಿತಿರುತ್ತಿದ್ದನು. ಈತನ ಒಬ್ಬ ಶಿಷ್ಯಳಾದ ಒಬ್ಬ ವಯಸ್ಕಮಾತೆ ಮಧ್ಯಾಹ್ನದ ಹೊತ್ತು ಬಂದು, ಮೀರಾಬಾಯಿಯ ಅಂದವಾದ ಹಾಡುಗಳನ್ನು ಹಾಡಿ, ಸಾಧುಗಳನ್ನು ಸಂತೋಷಪಡಿಸುತ್ತಿದ್ದಳು. ಆಕೆಯ ಭಕ್ತಿ ಎಷ್ಟು ವಿಶೇಷವಾಗಿತ್ತೆಂದರೆ, ಆಕೆ ಹಾಡುವಾಗ, ಕಣ್ಣುಗಳಿಂದ ಅಶ್ರುಧಾರೆಗಳು ಕೆನ್ನೆಗಳ ಮೇಲೆ ಹರಿಯುತ್ತಿದ್ದುವು; ಆಕೆಯ ಮುಖ ಅಪೂರ್ವ ತೇಜಸ್ಸಿನಿಂದ ಹೊಳೆಯುತ್ತಿದ್ದಿತು.

ರಾಮದಾಸನಿದ್ದ ಗುಡ್ಡದಮೇಲೆ ಭಕ್ತರು ''ಓಂ ಶ್ರೀರಾಮ ಜಯರಾಮ ಜಯಜಯ ರಾಮ" ಎಂದು ರಾಮಮಂತ್ರವನ್ನು ದಪ್ಪನಾದ ಹಿಂದೀ ಅಕ್ಷರದಲ್ಲಿ ಬರೆ ದಿದ್ದ ಹತ್ತು ಅಡಿ ಚಚ್ಚೌಕದ ದೊಡ್ಡ ಪತಾಕೆಯನ್ನು ಹಾರಿಸಿದ್ದರು. ಈ ಪತಾಕೆ ಬೆಟ್ಟದಿಂದ ಎಷ್ಟೋ ಮೈಲಿಗಳ ದೂರಕ್ಕೂ ಕಾಣಿಸುತ್ತಿದ್ದಿತು.

ಒಂದು ಕತ್ತಲೆ ರಾತ್ರಿ ಮಳೆ ಹೊಯ್ಯುತ್ತಿದೆ, ಗಾಳಿ ಕೊರೆಯುತ್ತಿದೆ. ಸುಮಾರು ಹತ್ತು ಗಂಟೆಯ ಸಮಯ. ಕೀರ್ತನೆಯ ಭಕ್ತರು ಗಾನದಲ್ಲಿ ಮಗ್ನರಾಗಿದ್ದಾರೆ. ರಾಮದಾಸನು ಒಳಗಡೆಯ ಸಣ್ಣ ಗುಹೆಯಲ್ಲಿದ್ದನು. ಆಗ ಒಳ್ಳೆಯ ವಸ್ತ್ರಗಳನ್ನು ಧರಿಸಿದ್ದ ಸುಶಿಕ್ಷಿತನಾದ ಯುವಕನೊಬ್ಬನು ಹಾದಿ ತೋರಿಸುವವರ ಸಂಗಡ ಬಂದನು. ರಾಮದಾಸನಿದ್ದ ಕಡೆಗೆ ಬಂದು, ಅವನ ಕಾಲಿಗೆರಗಿ "ಸ್ವಾಮಿಜಿ ಛತ್ತರಪುರದಿಂದ ಕಾನ್ಪುರಕ್ಕೆ ಪ್ರಯಾಣಮಾಡುತ್ತಿದ್ದೆ. ತಾವು ಇಲ್ಲಿರುವುದನ್ನು ಕೇಳಿ ಮಹೋಬದಲ್ಲಿಳಿದು ತಮ್ಮ ದರ್ಶನಕ್ಕಾಗಿ ಬಂದಿದ್ದೇನೆ. ದಯವಿಟ್ಟು ನನ್ನಮೇಲೆ ಅನುಗ್ರಹ ಮಾಡಬೇಕು" ಎಂದು ಕೇಳಿಕೊಂಡನು.

ಒಡನೆಯೆ ರಾಮದಾಸನು ಅವನಿಗೆ ರಾಮಮಂತ್ರವನ್ನು ಉಪದೇಶಿಸಿದನು. ಎಲ್ಲರೂ ಮೌನವಾಗಿ ಕುಳಿತಿದ್ದರು. ಆಗ ಮೂರು ಲಕ್ಷ್ಮೀ ಚೇಳುಗಳು ಕಂಡವು. ಅವು ಅಲ್ಲಿ ಧಾರಾಳವಾಗಿ ಓಡಾಡಲಾರಂಭಿಸಿದುವು. ಗುಂಪಿನ ಮಧ್ಯೆ ಒಂದು ಲಾಂದ್ರ ಉರಿಯುತ್ತಿದ್ದಿತು. ಒಂದು ಚೇಳು ಗುಂಪಿನ ಒಬ್ಬನ ಬಳಿಗೆ ಬಂದಿತು. ಅವನ ಹೆಸರು ರಾಮಚಂದ್ರಗುಪ್ತ. ಅವನು ಹೆದರಿ ಮೈ ಮುದುರಿಕೊಂಡನು. ಹೆದರಬೇಡವೆಂದೂ ಅದು ಏನೂ ತೊಂದರೆ ಮಾಡುವುದಿಲ್ಲವೆಂದೂ ರಾಮದಾಸನು ಅವನಿಗೆ ಧೈರ್ಯ ಹೇಳಿದನು. ಒಂದು ಚೇಳು ತೀರಾ ಸ್ನೇಹದಿಂದ ರಾಮದಾಸನ ತೊಡೆಯ ಮೇಲೆ ಹರಿದುಹೋಯಿತು. ಸ್ವಲ್ಪ ಹೊತ್ತಾದ ಮೇಲೆ ರಾಮಚಂದ್ರನೂ ಹೊರಟುಹೋದನು.

### (ii) ಭಯಂಕರವಾದ ಬೆಟ್ಟದ ಮೇಲೆ ಒಬ್ಬಂಟಿಗನಾಗಿ

ರಾಮಕಿಂಕರನು ಗೋಃಕಾರ್ ಪರ್ವತದ ಮೇಲೆ ರಾಮದಾಸನಿಗೆ ಒಂದು ಆಶ್ರಮವನ್ನು ಕಟ್ಟಕೊಡಬೇಕೆಂಬ ಉದ್ದೇಶದಿಂದಲೇ ರಾಮದಾಸನೊಂದಿಗೆ ಬಂದಿದ್ದನು. ಅವನು ಅದಕ್ಕಾಗಿ ಇನ್ನೂರು ರೂಪಾಯಿಗಳಿಗಿಂತ ಹೆಚ್ಚಾಗಿ ಚಂದಾಹಣವನ್ನು ಶೇಖರಿಸಿದ್ದನು. ಲಿಂಬ್ಡಿಯ ಉಗರ್‌ಚಂದ್ ಸೇಟ್ ಕೂಡ ಇದಕ್ಕಾಗಿ ಹಣಕೊಟ್ಟಿದ್ದನು. ಈ ಭೀಕರ ಪರ್ವತಗಳಲ್ಲಿ ಆಶ್ರಮವನ್ನು ಕಟ್ಟುವುದೆನ್ನುವುದು ರಾಮಕಿಂಕರನಿಗೆ ರುಚಿಸಲಿಲ್ಲ. ಆದರೆ, ರಾಮದಾಸನು ಸ್ಥಳವನ್ನು ಗೊತ್ತುಮಾಡಿದ್ದುದರಿಂದ ಅವನು ಪ್ರತಿಹೇಳಲಾರದಿದ್ದನು. ಅವನು ಜಗನ್ನಾಥನಿಗೆ ಸ್ವಲ್ಪ ಹಣವನ್ನು ಕೊಟ್ಟು ಮೊದಲು ಒಂದು ಕೊಳವನ್ನು ತೋಡಿಸುವಂತೆ ಹೇಳಿದ್ದನು.

ಬಾಲಕ್‌ರಾಮನು ಇಲ್ಲಿ ವಾಸವಾಗಿದ್ದಾಗ ಒಂದು ಸಣ್ಣ ಕೊಳವನ್ನು ತೋಡಿಸಲು ಪ್ರಯತ್ನಮಾಡಿದ್ದನು. ಅದಕ್ಕೆ ತಕ್ಕ ಬೆಂಬಲ ದೊರೆಯದಿದ್ದುದರಿಂದ ಕೆಲಸವನ್ನು ನಿಲ್ಲಿಸಬೇಕಾಗಿ ಬಂದಿದ್ದಿತು. ಈಗ ಇದೇ ಕೊಳವನ್ನು ಆಳಪಡಿಸಿ, ಸುತ್ತಲೂ ಕಲ್ಲು ಮತ್ತು ಗಾರೆಯಿಂದ ಗೋಡೆ ಕಟ್ಟಬೇಕೆಂದು ನಿಷ್ಕರ್ಷೆಯಾಯಿತು.

ಈ ಕೆಲಸಕ್ಕೆ ಕೂಲಿಯವರನ್ನು ಗೊತ್ತುಮಾಡಲಾಯಿತು. ಕೆಲವು ಅಡಿ ತೋಡುವು ದರಲ್ಲಿಯೇ ಒಂದು ನೀರಿನ ಬುಗ್ಗೆ ದೊರೆಯಿ:ತು. ಇದರಿಂದ ಕೊಳಕ್ಕೆ ನೀರು ಒದಗಿತು. ಕೆಲಸ ನಡೆಯುತ್ತಿರುವಾಗ ಕೂಲಿಯ ದರದ ವಿಚಾರದಲ್ಲಿ ಇನ್ನೊಬ್ಬ ಸ್ನೇಹಿತನು ಜಗನ್ನಾಥನೊಡನೆ ಜಗಳಮಾಡಿದನು. ಇದರಿಂದ ಕೆಲಸ ನಿಂತು ಹೋಯಿತು. ಮತ್ತೆ ಅದನ್ನು ಆರಂಭಿಸಲಿಲ್ಲ. ಇಲ್ಲಿ ಆಶ್ರಮವನ್ನು ಕಟ್ಟುವ ಯೋಚನೆಯನ್ನು ರಾಮದಾಸನು ಬಿಟ್ಟುಬಿಟ್ಟನು.

ರಾಮುಚರಣದಾಸನು ಆಗ ಸುಮಾರು ಹದಿನೆಂಟು ವರ್ಷದ ತರುಣ. ಅವನಿಗೆ ಹೆದರಿಕೆ ಎಂಬುದು ಇಲ್ಲವೇ ಇಲ್ಲ. ಒಂದು ಸಾಯಂಕಾಲ ಸೂರ್ಯನು ಅಸ್ತಂಗತನಾಗುವಾಗ ರಾಮದಾಸನು ಅವನನ್ನು ಕರೆದು, ಸಾಲಿನಲ್ಲೆಲ್ಲಾ ಅತ್ಯಂತ ಎತ್ತರವಾದ ಎದುರಿನ ಬೆಟ್ಟದಲ್ಲಿದ್ದ ಒಂದು ಗುಹೆಯಲ್ಲಿ ಆ ರಾತ್ರಿ ಕುಳಿತಿರುವಂತೆ ಹೇಳಿದನು. ಚಿರತೆಗಳೂ ಹುಲಿಗಳೂ ಈ ಬೆಟ್ಟದ ಗುಹೆಗಳಲ್ಲಿ ಮನೆಮಾಡಿ ಕೊಂಡಿವೆ. ರಾಮುಚರಣದಾಸನು ಸಂತೋಷದಿಂದ ರಾಮದಾಸನ ಆಜ್ಞೆಯನ್ನು ನಡೆಸಿದನು.

ರಾಮದಾಸನು, "ಇಲ್ಲಿ ನೋಡು ರಾಮು, ನೀನು ಹುಲಿ ಇರುವ ಗುಹೆಯಲ್ಲಿ ರಾತ್ರಿಯಲ್ಲಾ ಕತ್ತಲೆಯಲ್ಲೇ ಕುಳಿತಿರಬೇಕಾಗುತ್ತದೆ. ರಾತ್ರಿಯಲ್ಲಾ ನೀನು ಕಣ್ಣನ್ನು ಮುಚ್ಚಲೇಕೂಡದು. ರಾಮಮಂತ್ರವನ್ನು ನಿಲ್ಲಿಸದೆ ಪಠಿಸುತ್ತಿರು. ಹಾಗೆ ಮಾಡುತ್ತಿದ್ದರೆ ನಿನಗೆ ಯಾವ ಹೆದರಿಕೆಯೂ ಆಗುವುದಿಲ್ಲ. ಹೋಗು" ಎಂದನು. ರಾಮುಚರಣದಾಸನು ಹೊರಟುಹೋದನು.

ರಾತ್ರಿ ಕಳೆಯಿತು. ಬೆಳಕು ಹರಿಯುತ್ತಿರುವಾಗ ರಾಮದಾಸನು ತನ್ನ ಗುಹೆಯಿಂದೀಚೆಗೆ ಬಂದಾಗ ರಾಮುಚರಣದಾಸನು ತಾನು ರಾತ್ರಿ ಉಳಿದಿದ್ದ ಬೆಟ್ಟ ದಿಂದ ಇಳಿದು ಬರುತ್ತಿರುವುದು ಕಾಣಿಸಿತು. ಹತ್ತಿರಕ್ಕೆ ಬಂದೊಡನೆಯೇ ರಾಮ ದಾಸನು ಅವನನ್ನು "ರಾಮು, ರಾತ್ರಿ ನಿನಗೆ ಭಯವಾಗಲಿಲ್ಲವೆ?" ಎಂದು ಕೇಳಿದನು.

ಅವನು "ಸ್ವಲ್ಪವೂ ಇಲ್ಲ" ಎಂದು ಉತ್ತರ ಕೊಟ್ಟನು.

"ಅದು ಹೇಗೆ? ಬಹುಶಃ ರಾಮಮಂತ್ರಜಪವನ್ನು ನಿಲ್ಲಿಸಿಯೇ ಇರಲಿಲ್ಲ, ಅಲ್ಲವೆ?"

ರಾಮುಚರಣದಾಸನು "ಅದೊಂದೇ ಅಲ್ಲ. ನಾನು ಅಲ್ಲಿದ್ದದ್ದು ನಿಮ್ಮ ಅಪ್ಪಣೆ ಮೇರೆ. ಆದುದರಿಂದ ನನಗೆ ಏನು ತೊಂದರೆಯೂ ಆಗುವುದಿಲ್ಲವೆಂದು ನನಗೆ ಪೂರಾ ಭರವಸೆ ಇದ್ದಿತು" ಎಂದನು. ಹುಡುಗನ ನಂಬಿಕೆಯ ದಾರ್ಢ್ಯ ಆಶ್ಚರ್ಯ ಕರವಾಗಿದ್ದಿತು.

ಈ ಸುಮಾರಿನಲ್ಲಿ ರಾಮುಚರಣದಾಸನು ವೇದಾಂತ ಗ್ರಂಥಗಳ ಒಂದು ಕನ್ನಡ ಭಾಷಾಂತರವನ್ನು ಓದುತ್ತಿದ್ದನು. ಒಂದು ದಿವಸ ಅವನು ರಾಮದಾಸನ ಬಳಿಗೆ ಬಂದು,

"ಸ್ವಾಮಿಜಿ, ಸಕಲವೂ ಬ್ರಹ್ಮವೆಂದು ವೇದಾಂತದಲ್ಲಿ ಹೇಳಿದೆ. ಆದುದರಿಂದ ನಾನೂ ಬ್ರಹ್ಮನೇ ಆಗಿರುವಾಗ, ನೀವು ಒತ್ತಿ ಒತ್ತಿ ಹೇಳುವ ಸಾಧನದ ಅವಶ್ಯಕತೆಯೇನು?" ಎಂದು ಕೇಳಿದನು.

ರಾಮದಾಸನು "ನಿಜ, ರಾಮ. ಸಕಲವೂ ಬ್ರಹ್ಮವೆ. ಆದರೆ ಇದನ್ನು ಸಿದ್ಧಿಮಾಡಿಕೊಳ್ಳಬೇಕು. ನೀನು ಬ್ರಹ್ಮನೆಂದು ಸುಮ್ಮನೆ ಹೇಳಿಕೊಂಡರೆ ಬ್ರಹ್ಮನನ್ನು ತಿಳಿದಂತಾಗುವುದಿಲ್ಲ. (ಮಾಯಾತೀತನಾಗಿ, ದ್ವಂದ್ವಭಾವವನ್ನತಿಕ್ರಮಿಸಿ, ಬ್ರಹ್ಮಾನಂದದ ಸೌಖ್ಯವನ್ನನುಭವಿಸಬೇಕು.) "ನಾನು" ಎಂಬ ನಿನ್ನ ಭಾವನೆ, ಸಂಕುಚಿತವಾದ, ಕಾಲದೇಶವರ್ತಮಾನಕ್ಕೆ ಅಧೀನವಾದ, ನಿನ್ನ ದೇಹಬುದ್ಧಿಯಾಗಿರದೆ, ದೇಶಕಾಲಾತೀತವಾದ ಶಾಶ್ವತವಾದ, ವಿರುಡ್ರೂಪಿ "ನಾನು" ಆಗಬೇಕು. (ಅನಿರ್ವಚನೀಯವಾದ ಈ ಪರಮಪದವನ್ನು ಅನುಭವಿಸಬೇಕಾದರೆ ಸಾಧನ ಆವಶ್ಯಕ. ಮನಸ್ಸು ಮತ್ತು ಆದರ ಅಭಿಲಾಷೆಗಳನ್ನು ಏಕಾಗ್ರಚಿತ್ತ ಮತ್ತು ಪರಿಶುದ್ಧ ವರ್ತನೆಯಿಂದ ಜಯಿಸಬೇಕು") ಎಂದು ವಿವರಿಸಿದನು.

ರಾಮಚರಣದಾಸನು "ಬ್ರಹ್ಮವಲ್ಲದೆ ಬೇರೆ ಯಾವದೂ ಇಲ್ಲದಿರುವಾಗ ಸಾಧನ ಮಾಡುವವರು ಯಾರು?" ಎಂದನು.

ರಾಮದಾಸನು "ನಿನಗೆ ಮುಂದೆ ಗೊತ್ತಾಗುತ್ತದೆ. ಜೀವಕ್ಕೆ ಒಂದು ಭ್ರಾಂತಿಯ ಅಸ್ತಿತ್ವ ಇರುವುದು. ನಿನಗೆ ಅನುಭವದಿಂದ ತಿಳಿಯುತ್ತದೆ. ಆದರೂ ಅದು ಇರುತ್ತದೆ. ಅದನ್ನು ಕತ್ತಲೆಯೂ ಅಜ್ಞಾನವೂ ಆವರಿಸಿಕೊಂಡಿರುತ್ತವೆ" ಎಂದನು.

ಈ ಉತ್ತರದಿಂದ ರಾಮಚರಣದಾಸನಿಗೆ ತೃಪ್ತಿಯಾಗಲಿಲ್ಲ. ಆದರೆ ಈ ನಂಬಿಕೆ ಉಂಟಾಗುವುದಕ್ಕೆ ಹೆಚ್ಚುಕಾಲ ಬೇಕಾಗಲಿಲ್ಲ. ಅವನು ನಾಮಸ್ಮರಣೆ ಮಾಡುವುದನ್ನೂ ಜಾಗ್ರತೆ ಏಳುವುದನ್ನೂ ಬಿಟ್ಟನು. ಬೆಳಗಾಗಿ ಬಹು ಹೊತ್ತಿನವರೆಗೂ ಮರದ ದಿಮ್ಮಿಯಂತೆ ಬಿದ್ದುಕೊಂಡು ನಿದ್ರೆಮಾಡುತ್ತಿದ್ದನು. ಹಾಗೆಯೇ ಮಧ್ಯಾಹ್ನವೂ ಬಹು ಹೊತ್ತು ಮರಳಿ ನಿದ್ರೆಮಾಡುವನು. ಇದರ ಫಲವಾಗಿ ಅವನಿಗೆ ಹಸಿವು ಅತಿ ಹೆಚ್ಚಾಯಿತು. ಕೆಳಗಿನ ಗುಹೆಯಲ್ಲಿ ಪದಾರ್ಥಗಳಿರುತ್ತಿದ್ದುವು. ಕಳ್ಳತನದಲ್ಲಿ ಅಲ್ಲಿಗೆ ಹೋಗಿ, ಅವನು ಸತುವ ಎಂಬ ಮಿಶ್ರಪದಾರ್ಥವನ್ನು ನೀರಿನಲ್ಲಿ ಕಲೆಸಿ ಸುಮ್ಮನೆ ಅದನ್ನು ತಿನ್ನುವನು. ಇದು ವಾಡಿಕೆಯಾಗಿ ತೆಗೆದುಕೊಳ್ಳುತ್ತಿದ್ದ ಆಹಾರದ ಜೊತೆಗೆ. ವಾಡಿಕೆಯ ಆಹಾರದ ವಿಚಾರವಾಗಿ ಕೂಡ ಇವನಿಗೂ ಅಡಿಗೆಯವ ಕಲ್ಲುವಿಗೂ ವ್ಯವಹಾರ ಹುಟ್ಟಿತು. ತನಗೇನನ್ನೂ ಉಳಿಸದೆ ರಾಮಚರಣದಾಸನೇ ಎಲ್ಲ ರೊಟ್ಟಿಗಳನ್ನೂ ತಿಂದುಬಿಡುತ್ತಾನೆಂದು ಕಲ್ಲೂ ದೂರಿದನು. ಒಂದು ದಿನ ಬೆಳಗ್ಗೆ ರಾಮಚರಣದಾಸನು ಬಂದಾಗ, ಅವನ ಮುಖದ ಮೇಲೆಲ್ಲಾ ಕೆಂಪು ಗುಳ್ಳೆಗಳು ಕಾಣಿಸಿದುವು.

"ನಿನಗೇನಾಗಿದೆ ರಾಮ?" ಎಂದು ರಾಮದಾಸನು ಕೇಳಿದನು.

ರಾಮುಚರಣದಾಸನು ಮುಖವನ್ನು ಹಿಂಡುತ್ತಾ, "ಗೊತ್ತಿಲ್ಲ. ಜ್ವರ ಬರುವಹಾಗೂ ಇದೆ" ಎಂದು ಉತ್ತರವಿತ್ತನು.

ರಾಮುದಾಸನು ನಗುತ್ತಾ, "ತಿಂಡಿ ಹೆಚ್ಚಾಗಿ ಹೀಗಾಗಿದೆ. ನಿನ್ನ ಮುಖದಲ್ಲಿ ಸತುವ ಕಾಣಿಸಿಕೊಂಡಿದೆ. ಅಲ್ಲವೆ?" ಎಂದನು.

ರಾಮುಚರಣದಾಸನು ಮಾತನಾಡಲಿಲ್ಲ. ಗೊಂಬೆಯಂತೆ ಮೌನವಾಗಿದ್ದನು. ರಾಮುದಾಸನು ವಾಸವಾಗಿದ್ದ ಸಣ್ಣ ಗುಹೆಯಲ್ಲಿ, ರಾಮುದಾಸನ ಮಗ್ಗುಲಲ್ಲಿ, ತನ್ನ ಬಟ್ಟೆಯನ್ನು ತುಂಬಾ ಹೊದ್ದುಕೊಂಡು ಮುದುರಿಕೊಂಡನು. ಜ್ವರದ ತಾಪದಿಂದ ನಡುಗುತ್ತಿದ್ದನು.

ರಾಮುದಾಸನು "ರಾಮು, ನೀನು ಬ್ರಹ್ಮನಲ್ಲವೆ?" ಎಂದು ಕೇಳಿದನು.

"ಸ್ವಾಮಿಜಿ, ಈಗ ಮನದಟ್ಟಾಯಿತು ನಾನು ಬ್ರಹ್ಮನಲ್ಲವೆನ್ನುವುದು. ಬುದ್ಧಿ ಕಲಿಸುವುದಕ್ಕೆ ನೀವು ಒಳ್ಳೊಳ್ಳೆ ದಾರಿ ಹುಡುಕುತ್ತೀರಿ."

"ರಾಮುದಾಸನೇನೂ ನಿನಗೆ ಬುದ್ಧಿಕಲಿಸುತ್ತಿಲ್ಲ. (ನಿನಗೆ ಬುದ್ಧಿ ಕಲಿಸುವವನು ರಾಮ. ರಾಮುಭಜನೆ ಮಾಡು. ಎಲ್ಲ ಸರಿಹೋಗುತ್ತದೆ)" ಎಂದು ರಾಮುದಾಸನು ಧೈರ್ಯ ಹೇಳಿದನು.

ಮಾರನೆಯ ದಿನ ರಾಮುಚರಣದಾಸನು ಉಪವಾಸಮಾಡಿದನು. ಮೂರನೆಯ ದಿನ ಅವನಿಗೆ ಗುಣವಾಯಿತು. ಅವನು ಮರಳಿ ರಾಮುಮಂತ್ರ ಜಪಕ್ಕಾರಂಭಿಸಿದನು. ಒಂದು ದಿನ ಕಲ್ಲೂ ಬಂದು, ತಾನು ಒಂದು ಹಿತ್ತಾಳೆ ಬಟ್ಟಲನ್ನು ಎಲ್ಲಿಯೋ ಇಟ್ಟು ಮರೆತಿರುವುದಾಗಿಯೂ, ರಾಮುಚರಣದಾಸನು ಅದಕ್ಕಾಗಿ ತನ್ನನ್ನು ಪೀಡಿಸುತ್ತಿರುವುದಾಗಿಯೂ ದೂರು ಹೇಳಿದನು.

ರಾಮುಚರಣದಾಸನು ಗೊಣಗುಟ್ಟುತ್ತಾ, "ಹೌದು ಸ್ವಾಮಿಜಿ, ಆ ಬಟ್ಟಲು ನನ್ನ ಲೋಟಕ್ಕೆ ಸರಿಯಾಗಿ ಹಿಡಿಸುತ್ತಿದ್ದಿತು. ಅದು ನನಗೆ ಬೇಕು" ಎಂದನು.

"ರಾಮು, ಬಟ್ಟಲು ಯಾರದು?" ಎಂದು ರಾಮುದಾಸನು ಪ್ರಶ್ನಿಸಿದನು.

ರಾಮುಚರಣದಾಸನು "ನನ್ನದು" ಎಂದು ಉತ್ತರವಿತ್ತನು.

ರಾಮುಧಾಸನು "ರಾಮು, ಯಾವದೂ ನಿನ್ನದಲ್ಲ. ಎಲ್ಲವೂ ದೇವರದೇ. ಅವನಿಂದ ಬಂದಿತು; ಅವನಲ್ಲಿಗೆ ಹಿಂದಕ್ಕೆ ಹೋಗಿದೆ; ಆದುದರಿಂದ ವ್ಯಾಕುಲವನ್ನು ಬಿಡು" ಎಂದನು.

ನಷ್ಟಕ್ಕಾಗಿ ಲೇಶ ವಿಷಾದವನ್ನು ತೋರಿಸುತ್ತಾ, "ಬಹಳ ಒಳ್ಳೆ ಸಮಾಧಾನ!" ಎಂದು ರಾಮುಚರಣದಾಸನು ಗೊಣಗಿದನು.

ಅನಂತರ ಅವನು ಈ ವಿಷಯವನ್ನು ಮರೆತನು. ಒಂದು ದಿನ ಬಾಲಕ್ ರಾಮನ ಸಂಗಡ ಕೆಲವು ದಿನ ನಿಲ್ಲಲು ಅವನು ಛತ್ತರಪುರಕ್ಕೆ ಹೋಗುವುದಾಗಿ ತಿಳಿಸಿದನು. ಬಾಲಕ್‌ರಾಮನು ಆಗ ಛತ್ತರಪುರ ಸಂಸ್ಥಾನದ ಬೆಟ್ಟಗಳಲ್ಲಿ ಒಂದರ ಮೇಲೆ ತನ್ನ ದರ್ಬಾರನ್ನು ನಡೆಯಿಸುತ್ತಿದ್ದನು. ಅವನಿಂದ ರಾಮುದಾಸ

ನಿಗೆ ಅನೇಕ ಸಲ ಆಹ್ವಾನ ಬಂದಿದ್ದಿತು. ರಾಮುಚರಣದಾಸನು ಬಾಲಕ್ ರಾಮುನ ವಿಚಾರಗಳನ್ನು ಕೇಳಿ ತಿಳಿದಿದ್ದನು. ಆದ್ದರಿಂದ ಅವನು ತನಗೆ ಅಷ್ಟು ಇಷ್ಟವಾದ ಹೊಸ ಲೋಟವನ್ನು ತನ್ನೊಂದಿಗೆ ತೆಗೆದುಕೊಂಡು ಹೋಗುವುದಕ್ಕೆ ಇಷ್ಟಪಡಲಿಲ್ಲ.

ಅವನು "ಸ್ವಾಮಿಜಿ, ಲೋಟವನ್ನು ನಿಮ್ಮಲ್ಲಿ ಬಿಟ್ಟುಹೋಗುತ್ತೇನೆ. ಕೆಲವು ದಿನಗಳಲ್ಲೆ ಬರುತ್ತೇನೆ" ಎಂದು ಹೇಳಿ ಹೊರಟುಹೋದನು.

ಈ ಮಧ್ಯೆ ಅವನು ಇಲ್ಲದಿರುವಾಗ ಇಬ್ಬರು ಸಾಧು ತರುಣರು ರಾಮುದಾಸನನ್ನು ನೋಡಲು ಬಂದರು. ಅವರಲ್ಲಿ ಒಬ್ಬನಿಗೆ ನೀರಿಗೆ ಪಾತ್ರೆಯಿದ್ದಿತು; ಇನ್ನೊಬ್ಬನಿಗೆ ಇರಲಿಲ್ಲ. ಅವನು ರಾಮುದಾಸನನ್ನು ತನಗೆ ಒಂದು ಲೋಟವನ್ನು ಕೊಡಬೇಕೆಂದು ಕೇಳಿಕೊಂಡನು. ಸಾಧುಗಳು ನೀರಿನ ಪಾತ್ರೆಯಿಲ್ಲದೆ ಪ್ರಯಾಣ ಮಾಡಬಾರದು ನೋಡಿ, ಎಂದನು. ರಾಮುಚರಣದಾಸನ ಲೋಟ ರಾಮುದಾಸನ ಹತ್ತಿರ ಇದ್ದಿತು. ಅದನ್ನು ರಾಮುದಾಸನು ಆ ತರುಣನಿಗೆ ಕೊಟ್ಟನು. ಆ ಇಬ್ಬರು ತರುಣರೂ ಹೊರಟುಹೋದರು. ಲೋಟ ಪಡೆದ ಹುಡುಗನಿಗೆ ತುಂಬ ಸಂತೋಷ.

ನಾಲ್ಕು ದಿನಗಳ ನಂತರ ರಾಮುಚರಣದಾಸನು ಬಂದನು. ಮುಖದಲ್ಲಿ ಸಂತೋಷವಿರಲಿಲ್ಲ. ಬಾಲಕ್‌ರಾಮುನ ಸಹವಾಸ ಅವನಿಗೆ ಹಿತಕರವಾಗಿಯೇನೂ ಇದ್ದಿರಲಿಲ್ಲ.

ಅವನನ್ನು ಕಂಡೊಡನೆಯೇ, ರಾಮುದಾಸನು "ರಾಮುನು ನಿನಗೆ ಕೊಟ್ಟದ್ದು ನಿನ್ನಲ್ಲಿದ್ದ ಲೋಟವನ್ನು ರಾಮುನು ತೆಗೆದುಕೊಂಡು ಹೋದನು. ಏನು ಹೇಳುತ್ತೀ?" ಎಂದನು.

ರಾಮುಚರಣದಾಸನು ಕಣ್ಣುಕಣ್ಣು ಬಿಟ್ಟನು; ನಂತರ ಮೆಲ್ಲನೆ ನಕ್ಕನು. ರಾಮುದಾಸನ ತೀರ್ಮಾನಗಳು ಖಂಡಿತವಾದವುಗಳೆಂದೂ ಅವನ್ನು ಪ್ರತಿಭಟಿಸಲಾಗುವುದಿಲ್ಲವೆಂದೂ ಅವನು ತಿಳಿದುಕೊಂಡಿದ್ದನು. ಅವನು ರಾಮುದಾಸನ ಮಾತಿಗೆ ಪ್ರತಿ ಹೇಳದೆ ಸದಾ ಒಪ್ಪಿದ್ದನು. ಊರೊಳಗೆ ಅವನಿಗೆ ಕೆಲವರು ಸ್ನೇಹಿತರಿದ್ದರು. ಅವರಲ್ಲೊಬ್ಬ ಹಣಗಾರನಾದ ವ್ಯಾಪಾರಿ. ರಾಮುಚರಣದಾಸನು ಆ ದಿನವೇ ಅವನಲ್ಲಿಗೆ ಹೋಗಿ, ಸಾಯಂಕಾಲ ಬರುವಾಗ, ಒಂದು ಹಿತ್ತಾಳೆ ಕಮಂಡಲುವನ್ನೂ ಅದರ ಬಾಯಿಗೆ ಸರಿಯಾಗಿ ಹೊಂದುವ ಒಂದು ದೊಡ್ಡ ಬಟ್ಟಲನ್ನೂ ತಂದನು.

ಕಮಂಡಲುವನ್ನು ಅಂಗೈಮೇಲೆ ವರಸೆಯಾಗಿಟ್ಟುಕೊಂಡು ತೋರಿಸುತ್ತಾ, "ಇದು ಹೇಗಿದೆ ಸ್ವಾಮಿಜಿ?" ಎಂದು ಕೇಳಿದನು.

ರಾಮುದಾಸನು ನಗುತ್ತ "ದಿವ್ಯವಾಗಿದೆ. ದಿವ್ಯ ಎಂದರೆ ದಿವ್ಯ" ಎಂದು ಉತ್ತರಕೊಟ್ಟನು.

ಪ್ರತಿದಿನವೂ ಬರುತ್ತಿದ್ದವರಲ್ಲಿ ಇಬ್ಬರು ನೆಯ್ಗೆಯವರು ಇದ್ದರು. ಇವರು ರಾಮುದಾಸನಿಗೆ ಶುದ್ಧ ಖಾದಿ ಬಟ್ಟೆಯ ತುಂಡೊಂದನ್ನು ಕೊಟ್ಟರು. ಅವರಲ್ಲೊ

ಬ್ಬನು ಸಾಯಂಕಾಲ ಬಂದು ಹೆಚ್ಚು ಹೊತ್ತು ನಿಂತನು. ಕೀರ್ತನೆ ನಡೆಯುತ್ತಿದ್ದಿತು. ಭಕ್ತಿವಂತನಾದ ಆತನು ಕೀರ್ತನೆಯಲ್ಲಿ ಮಗ್ನನಾಗಿ ಎಷ್ಟುಕಾಲ ಕಳದಿದೆ ಎಂಬುದನ್ನು ಕಾಣಲಿಲ್ಲ. ನಮರಾತ್ರಿ ಮೀರಿರಬಹುದು, ಆಗ ಅವನಿಗೆ ಹಠಾತ್ತಾಗಿ ಜ್ಞಾಪಕವಾಯಿತು. "ಅಯ್ಯೋ! ಹೊತ್ತಿಗೆ ಮುಂಚೆಯೇ ಊರಿಗೆ ಹೋಗಬೇಕೆಂದಿದ್ದೆ. ರಾತ್ರಿ ಇಲ್ಲಿಯೇ ನಿಂತುದರಿಂದ ಈಗ ಮನೆಯವರೆಲ್ಲರೂ ಕಳವಳ ಪಡುತ್ತಿರುತ್ತಾರೆ. ಅವರಿಗೆ ತಿಳಿಸದೆ ನಾನು ಯಾವಾಗಲೂ ಕತ್ತಲಾದ ಮೇಲೆ ಹೊರಗಿರುತ್ತಿರಲಿಲ್ಲ" ಎಂದು ಗಾಬರಿಪಟ್ಟನು.

"ಒಳ್ಳೆಯದು, ನೀನು ಕೂಡಲೆ ಮನೆಗೆ ಹೋಗಬಹುದು" ಎಂದು ರಾಮದಾಸನು ಅವನಿಗೆ ತಿಳಿಸಿದನು.

ಅವನ ಮನೆ ಬೆಟ್ಟದಿಂದ ಸುಮಾರು ಮೂರು ಮೈಲಿ ದೂರ; ದಾರಿ ಇದ್ದುದು ಕಾಡಿನಲ್ಲಿ; ಆಗ ಕಗ್ಗತ್ತಲು. ಆ ಹೊತ್ತಿನಲ್ಲಿ ದುಷ್ಟ ಪ್ರಾಣಿಗಳು ಕಾಡಿನಲ್ಲಿ ಸ್ವೇಚ್ಛೆಯಾಗಿ ತಿರುಗುತ್ತವೆ. ಅವನು ಒಬ್ಬನೇ ಹೋಗಲು ಅನುಮಾನಿಸಿದನು. ರಾಮನಾಮವನ್ನು ಜಪಿಸುತ್ತಿದ್ದರೆ ಯಾವ ತೊಂದರೆಯೂ ಸಂಭವಿಸುವುದಿಲ್ಲವೆಂದು ರಾಮದಾಸನು ಅವನಿಗೆ ಭರವಸೆಕೊಟ್ಟನು. ನೇಯ್ಗೆಯವನಿಗೆ ತುಂಬ ನಂಬಿಕೆ. ಅವನು ರಾಮದಾಸನ ಮಾತಿನಂತೆ ಧೈರ್ಯತಾಳಿ ಹೊರಟುಹೋದನು.

ಅವನು ಮಾರನೆಯ ದಿನ ಸಂಜೆಗೆ ಬಂದು ಹಿಂದಿನ ರಾತ್ರಿ ರಾಮನಾಮ ಸ್ಮರಣೆಯಿಂದ ತಾನು ನಿರ್ಭೀತನಾಗಿದ್ದೆನೆಂದೂ, ದಾರಿಯಲ್ಲಿ ಯಾವ ತೊಂದರೆಯೂ ಇಲ್ಲದೆ ಮನೆ ಸೇರಿದೆನೆಂದೂ ತಿಳಿಸಿದನು.

### (iii) ಕೊಡುವವನೂ ದೇವರೆ! ಕೊಳ್ಳುವವನೂ ದೇವರೆ!

ರಾತ್ರಿ ಕಾಲದಲ್ಲಿ ಗವಿಯಸುತ್ತಿನ ಕಾಡುಗಳಲ್ಲಿ ಹುಲಿಗಳು ಸ್ವೇಚ್ಛೆಯಾಗಿ ಓಡಾಡುತ್ತಿದ್ದುವು. ಮಾರನೆಯ ದಿನ ರಾಮದಾಸನು ಕೆಲವೇ ಮಂದಿ ತಕ್ಕ ಜನರೊಡನೆ ಹುಲಿಗಳನ್ನು ಅವು ಗುಹೆಗಳಲ್ಲಿರುವ ವೇಳೆ ಎದರುಎದುರಾಗಿ ನೋಡಬೇಕೆಂಬ ಉದ್ದೇಶದಿಂದ ಹುಡುಕಿಕೊಂಡು ಹೊರಟನು. ಅವನು ಗವಿಯಾದ ಮೇಲೆ ಗವಿಯನ್ನು ಸುತ್ತಿ ನೋಡಿದನು. ಹುಲಿಗಳು ಹತ್ತಿರವೇ ಇರುವ ಚಿನ್ಹೆಗಳು ಕಂಡವು; ಹೊರತು ಹುಲಿಗಳು ಕಾಣಿಸಲಿಲ್ಲ. ರಾಮದಾಸನು ಗುಹೆಗಳ ಕತ್ತಲೆಯ ಆಳಕ್ಕೆ ಧೈರ್ಯದಿಂದ ನುಗ್ಗಿ, "ಹರಿಃ ಓಂ!" ಎಂದು ಗಟ್ಟಿಯಾಗಿ ಕೂಗುವನು. ಈ ಶಬ್ದವನ್ನು ಕೇಳಿ ಹುಲಿ ಹೊರಕ್ಕೆ ಬಂದು ದರ್ಶನ ಕೊಡಲೆಂದು ಅವನ ಆಶೆ. ಆದರೆ ಹುಲಿಗಳು ಬರಲೇ ಇಲ್ಲ. ಕೊನೆಗೆ ಈ ಪ್ರಯತ್ನವನ್ನು ಬಿಡಬೇಕಾಯಿತು.

ಈಗ ಆಹಾರ ತೆಗೆದುಕೊಳ್ಳದೆ ಮೌನವ್ರತವನ್ನಾಚರಿಸಬೇಕೆಂದು ರಾಮನ ಪ್ರೇರಣೆಯಾಯಿತು. ರಾಮದಾಸನು ಹಾಲನ್ನು ಮಾತ್ರ ತೆಗೆದುಕೊಂಡು ಒಂದು ವಾರ ಇದ್ದನು. ಇವನ ಮೌನವ್ರತದಿಂದ ಸಾಧು ಭಗವಾನನು ಬಹು ಅಸಂತುಷ್ಟ

ನಾದನು. ತಾನು ವಾಡಿಕೆಯಾಗಿ ಬಹು ಕಡಮೆ ಮಾತನಾಡುವನು ಆದರೂ, ಅವನಿಗೆ ಯಾವಾಗಲೂ ರಾಮದಾಸನ ಮಾತನ್ನು ಕೇಳುತ್ತಿರಬೇಕೆಂಬ ಆಸೆ. ಅವನು ರಾಮದಾಸನನ್ನೂ ಆ ಬೆಟ್ಟವನ್ನೂ ಬಿಟ್ಟುಹೋಗಬೇಕೆಂದು ಹಠಾತ್ತಾಗಿ ನಿಶ್ಚಯಿಸಿ ಹೊರಟೇ ಹೋದನು. (ಸಾಧುಗಳು ಇಚ್ಛೆಬಂದಾಗ ಬರುತ್ತಾರೆ; ಇಚ್ಛೆಬಂದಾಗ ಹೊರಟು ಹೋಗುತ್ತಾರೆ. ಅವರು ಭಗವಂತನ ಮುಕ್ತ ಪುತ್ರರು.)

ಈ ಮೌನಉಪವಾಸದ ಕಾಲದಲ್ಲಿ ಇಬ್ಬರು ಸಂನ್ಯಾಸಿಗಳು ರಾಮದಾಸನ ಭೇಟಿಗಾಗಿ ಬಂದರು. ಅವರಲ್ಲಿ ಒಬ್ಬನು ಎತ್ತರವಾಗಿದ್ದನು; ಅರವತ್ತು ವರ್ಷಕ್ಕೆ ಮೇಲ್ಪಟ್ಟ ವೃದ್ಧ. ಇಷ್ಟು ವಯಸ್ಸಾಗಿದ್ದರೂ, ಅವನು ರಾಮದಾಸನನ್ನು ನೋಡಲು ಮಹೋಬದಿಂದ ಮೂರು ಮೈಲಿ ದೂರ ಬೆಟ್ಟಗಳ ಮೇಲೆ ಹತ್ತಿ, ಕಾಡಿನಲ್ಲಿ ನಡೆದು ಬಂದಿದ್ದನು. ಭಗವಂತನ ಈ ಶಿಶುವಿನ ಮೇಲೆ ಇವರಿಗೆಷ್ಟು ಕರುಣ ! ಇನ್ನೊಬ್ಬನು ವರ್ಚಸ್ವಿಯಾದ ಸ್ಥೂಲಕಾಯದ ತರುಣ. ಬರುತ್ತ ಅವನು ಊರಿನಿಂದ ತಬಲ, ಹಾರ್ಮೋನಿಯಂಗಳ ಸಮೇತ ಕೀರ್ತನಕಾರರನ್ನು ಕರೆತಂದಿದ್ದನು.

ಕೀರ್ತನಾರಂಭಕ್ಕೆ ಮುಂಚೆ, " ಈ ವಿಧವಾದ ತಪಸ್ಸಿನಲ್ಲೂ ಆಚರಣೆಗಳಲ್ಲೂ ನನಗೆ ನಂಬಿಕೆ ಇಲ್ಲ. ದೇವರ ಸ್ತೋತ್ರ ಸಂಬಂಧವಾದ ಸಂಗೀತ ನನಗೆ ಇಷ್ಟ. ಇದನ್ನು ಕೇಳಿದಾಗ ನಾನು ಆನಂದಪರವಶನಾಗುತ್ತೇನೆ. ಇದೇ ನಿಜವಾದ ಆನಂದ" ಎಂದು ತಿಳಿಸಿದನು.

ಭಕ್ತರು ಕೆಲವು ಒಳ್ಳೊಳ್ಳೆಯ ದೇವರ ನಾಮಗಳನ್ನು ಹಾಡಿದರು. ಊಟ ವಾದ ಮೇಲೆ ಈ ಸಂನ್ಯಾಸಿ ಹೊರಟುಹೋದನು.

ಪ್ರೇಕ್ಷಕರಲ್ಲಿ ವಿಚಿತ್ರಾನಂದನೆಂಬ ಸಾಧುವಿದ್ದನು. ಇವನು ಸರಳ; ಹಸು ಗೂಸಿನಂಥ ಸಂತ. ಆದರೆ ಮಿತಿಮೀರಿದ ಗಾಂಜಾ ಸೇವನೆಯಿಂದ ಇವನ ದೇಹ ಒಣಗಿ ಕೃಶವಾಗಿದ್ದಿತು. ಈತನು ಮನಮುಟ್ಟುವ ಹಿಂದೀ ಭಕ್ತಿಗೀತೆ ಕೆಲವನ್ನು ರಚಿಸಿದ್ದನು. ಅವು ಮಹೋಬದಲ್ಲಿ ಜನ ಪ್ರಿಯವಾಗಿವೆ. ಇವನು ಊರ ಹೊರಗೆ ಒಂದು ಪರ್ಣಶಾಲೆಯಲ್ಲಿ ವಾಸಿಸುತ್ತ ಗೋಃಕಾರ್ ಪರ್ವತಕ್ಕೆ ಅನೇಕ ಸಲ ಬರು ತ್ತಿದ್ದನು.

ಒಂದು ದಿನ ಮಧ್ಯಾಹ್ನ ಭಕ್ತಿವಂತ ಮಹಿಳೆಯರು ಗುಂಪುಗುಂಪೇ ಗುಹೆಯ ಕೆಳಗಿನ ಬಂಡೆಯ ಸಮೀಪಕ್ಕೆ ಬಂದು ರಾಮದಾಸನನ್ನು ನೋಡಬೇಕೆಂದು ಗದ್ದಲ ಮಾಡಿದರು. ಇವರ ಇಷ್ಟಾನುಸಾರ ರಾಮದಾಸನು ಗುಹೆಯಿಂದ ಕೆಳಕ್ಕೆ ಇಳಿದು ಬಂದನು. ರಾಮದಾಸನನ್ನು ಕಂಡಕೂಡಲೆ ಅವರಿಗೆ ಅಪಾರ ಆನಂದವಾಯಿತು. ಕೆಲವರು ಮೇರೆಮೀರಿಯುವ ಪ್ರೀತಿಯಿಂದ ಅವನ ಕಾಲುಗಳನ್ನು ಹಿಸುಕಿದರು. ಅವರು ತಿಂಡಿಯನ್ನೂ ಹಾಲನ್ನೂ ತಂದಿದ್ದರು. ಅದರಿಂದ ರಾಮದಾಸನಿಗೆ ಭೋಜನ ಮಾಡಿಸಿದರು. ಒಂದು ಗಂಟೆಯ ಹೊತ್ತು ಇದ್ದು ನಂತರ ಹೊರಟು ಹೋದರು.

ಇನ್ನೊಂದು ದಿನ ಇಬ್ಬರು ಆಂಗ್ಲ ಮತಪ್ರಚಾರಕರು ರಾಮದಾಸನನ್ನು ಹುಡುಕಿಕೊಂಡು ಬಂದರು. ರಾಮದಾಸನಿರುವ ಸ್ಥಳವನ್ನು ಪತ್ತೆ ಮಾಡಬೇಕಾದರೆ ಅವರು ಬಹಳ ಶ್ರಮಪಟ್ಟರು. ಅವರ ಸಂಭಾಷಣೆಯಲ್ಲಿ ದೇವರು ಸಗುಣನೆನ್ನುವುದೇ ಪೂರ್ಣ ಸತ್ಯವೆಂದು ಒತ್ತಿ ಹೇಳಿದರು. ಭಗವಂತನು ಸಗುಣ ಮಾತ್ರವೇ ಅಲ್ಲದೆ ನಿರ್ಗುಣನೂ ಹೌದೆಂಬ ತನ್ನ ನಂಬಿಕೆಯನ್ನು ರಾಮದಾಸನು ಅವರಿಗೆ ತಿಳಿಸಿದನು. (ಭಗವಂತನ ನಿರ್ಗುಣತತ್ವವನ್ನು ಅರಿಯದಿದ್ದರೆ, ಆ ಪುರುಷೋತ್ತಮನ ಉಜ್ವಲ ಮಹಿಮೆ ಸಂಪೂರ್ಣವಾಗಿ ಗೋಚರವಾಗುವುದಿಲ್ಲವೆಂದೂ ಹೇಳಿದನು.) ಅವನ ಮಾತಿನ ನಿಜವನ್ನು ಕುರಿತು ಅವರು ಸಂಶಯವನ್ನು ವ್ಯಕ್ತಪಡಿಸಿದರು. ಈ ವಿಚಾರವನ್ನು ಅಷ್ಟಕ್ಕೇ ನಿಲ್ಲಿಸಿ ಬೀಳ್ಕೊಂಡು ಊರಿಗೆ ಹೋದರು

ಆ ಕಾಲದಲ್ಲಿ ನಡೆದ ಒಂದು ಘಟನೆಯಿಂದ ಸ್ನೇಹಿತರಿಗೆಲ್ಲ ಬಹಳ ಕಳವಳ ಉಂಟಾಯಿತು. ಒಂದು ದಿನ ಅಡಿಗೆಯವನಾದ ಕಲ್ಲೂ ಅಡಿಗೆಯ ಪಾತ್ರೆಗಳನ್ನು ತರಲು ಎಂದಿನಂತೆ ಕೆಳಗಿನ ಗುಹೆಗೆ ಹೋದನು. ಪಾತ್ರೆಗಳು ಹೊಸವು; ಕೊಂಡುಕೊಂಡು ಇನ್ನೂ ಕೆಲ ಕಾಲವೂ ಆಗಿರಲಿಲ್ಲ. ಅವನ್ನು ಕೆಳಗಿನ ಗುಹೆಯಲ್ಲಿ ಇಡುತ್ತಿದ್ದಿತು; ಅದಕ್ಕೆ ಬಾಗಿಲಿರಲಿಲ್ಲ. ಸಾಧುಗಳೂ ಭಕ್ತರೂ ರಾತ್ರಿಯ ಹೊತ್ತು ಮೇಲಿನ ಗುಹೆಯಲ್ಲಿರುತ್ತಿದ್ದರು. ಕಲ್ಲೂ ಒಳಗೆ ಹೋದಾಗ ಪಾತ್ರೆಗಳು ಮಾಯವಾಗಿದ್ದುದನ್ನು ಕಂಡನು. ಅವನು ರಾಮದಾಸನ ಬಳಿಗೆ ಗಾಬರಿಯಿಂದ ಓಡಿಬಂದು, "ಮಹರಾಜ್, ಅಡಿಗೆ ಪಾತ್ರೆಗಳು ಮಾಯವಾಗಿವೆ. ಯಾರೋ ಕದ್ದುಕೊಂಡು ಹೋಗಿದ್ದಾರೆ" ಎಂದು ತಿಳಿಸಿದನು.

ರಾಮದಾಸನು "ಒಳ್ಳೆಯದು. ಅವು ನಮಗೆ ಬೇಕಾಗಿರುವುದಕ್ಕಿಂತ ಅವುಗಳನ್ನು ತೆಗೆದುಕೊಂಡು ಹೋದವನಿಗೆ ಹೆಚ್ಚಿಗೆ ಬೇಕಾಗಿವೆ. ಇದು ಸ್ಪಷ್ಟ ; ಸರಿ ಹೋಯಿತು. ರಾಮ ಕೊಟ್ಟ, ರಾಮ ತೆಗೆದುಕೊಂಡು ಹೋದ!'' ಎಂದು ನಿದಾನವಾಗಿ ಉತ್ತರಕೊಟ್ಟನು.

ಈ ಮೆತ್ತನೆಯ ಮಾತನ್ನು ಕೇಳಿ ಕಲ್ಲೂ ಅಪ್ರತಿಭನಾದನು. ರಾಮದಾಸನನ್ನು ದುರುಗುಟ್ಟಿ ನೋಡಿ, ಕೂಡಲೆ ಬೆಟ್ಟದಿಂದಿಳಿದು ಓಡಿ ಮಹೋಬಕ್ಕೆ ಹೋಗಿ, ಈ ಕಳವಿನ ಸಮಾಚಾರವನ್ನೂ ಮತ್ತು ರಾಮದಾಸನ ಉತ್ತರವನ್ನೂ ಅಲ್ಲಿ ಹರಡಿದನು. ಪಾತ್ರೆಗಳನ್ನು ಕೊಡಿಸಿದ್ದ ಸ್ನೇಹಿತರು ಈ ಮಾತನ್ನು ಅರ್ಥಮಾಡಿಕೊಂಡು ಕಳದುಹೋದ ಪಾತ್ರೆಗಳಿಗೆ ಪ್ರತಿಯಾಗಿ ತಮ್ಮ ಮನೆಯಿಂದ ಕೆಲವು ಪಾತ್ರೆಗಳನ್ನು ತತ್ಕಾಲಕ್ಕಾಗಿ ಕಳುಹಿಸಿದರು. ಒಬ್ಬ ಪೋಲೀಸ್ ಸಬ್ ಇನ್ಸ್ಪೆಕ್ಟರಿಗೆ ರಾಮದಾಸನ ಮೇಲೆ ತುಂಬ ಪ್ರೀತಿ. ಅವನು ಆಗಾಗ್ಗೆ ಬಂದು ರಾಮದಾಸನನ್ನು ನೋಡಿಕೊಂಡು ಹೋಗುತ್ತಿದ್ದನು. ಅವನಿಗೂ ಪಾತ್ರೆಗಳ ಕಳವಿನ ಸಮಾಚಾರ ತಿಳಿಯಿತು. ಆ ಮಧ್ಯಾಹ್ನ ಆತನು ಅದೇ ಕೆಲಸಕ್ಕಾಗಿ ಬಂದನು. ಆ ವಿಷಯವಾಗಿ ರಾಮದಾಸನನ್ನು ಪ್ರಶ್ನಿಸಿದನು.

“ರಾಮುಜಿ, ಯಾವದೂ ಹೋಗಿಲ್ಲ. ಏನೂ ಕಳವಾಗಿಲ್ಲ. ಆ ಪಾತ್ರೆಗಳನ್ನು ಕೊಟ್ಟಿದ್ದವನು ರಾಮು. ಅವುಗಳನ್ನು ಹಿಂದಕ್ಕೆ ತೆಗೆದುಕೊಂಡು ಹೋಗಿರುವವನೂ ರಾಮು. ಅವನ ಪದಾರ್ಥಗಳನ್ನು ಅವನು ತೆಗೆದುಕೊಂಡು ಹೋದನು. ಆದುದರಿಂದ ಪಾತ್ರೆಗಳು ಹೋದುವೆಂಬ ಅಥವ ಕಳವಾದುವೆಂಬ ಮಾತು ಇಲ್ಲ. ಆದುದರಿಂದ ಯಾರ ಮೇಲೂ ಮೊಕದ್ದಮೆ ಇಲ್ಲ” ಎಂದು ರಾಮುದಾಸನು ಉತ್ತರವಿತ್ತನು. ಇದನ್ನು ಕೇಳಿ ಪೋಲೀಸ್ ಇನ್ಸ್ಪೆಕ್ಟರಿಗೆ ಆಶ್ಚರ್ಯವಾಯಿತು. ಅವನು ನಗುತ್ತ, “ಎಲ್ಲರೂ ನಿಮ್ಮ ತತ್ವವನ್ನೇ ಅನುಸರಿಸುತ್ತ ಹೋದರೆ ನನಗೆ ಕೆಲಸ ಇಲ್ಲ” ಎಂದನು.

ರಾಮುದಾಸನು ಇಲ್ಲಿಂದ ಹೊರಡುವ ಕಾಲ ಸಮೀಪಿಸಿತು. ಅವನ ಕೈಯಲ್ಲಿ ಛತ್ತರಪುರದಿಂದ ಒಂದು, ಲಲಿತಪುರದ ತ್ರಿವೇಣೀ ಪ್ರಸಾದನಿಂದ ಒಂದು, ಕಾನ್ಪುರದ ರಾಮುಚಂದ್ರಗುಪ್ತನಿಂದ ಒಂದು, ಮೂರು ಆಹ್ವಾನಗಳು ಇದ್ದುವು.

ರಾಮುದಾಸನು ಗೋಃಕಾರ್ ಪರ್ವತದಿಂದ ಪ್ರಯಾಣಮಾಡಿದ ದಿನ ಗಮನೀಯವಾದುದು. ಬಂಡೆಗಳ ಬುಡದಲ್ಲಿ ಸಮಾಧಿಸ್ತನಾಗಿದ್ದ ಒಬ್ಬ ಮುಸ್ಲಿಂ ವೀರನ ಸ್ಮಾರಕೋತ್ಸವವು ಬೆಟ್ಟದ ಮೇಲೆ ನಡೆಯುತ್ತಿದ್ದಿತು. ಆ ದಿನ ಗುಹೆಯನ್ನು ಒಬ್ಬ ಮುಸ್ಲಿಂ ಸಾಧು ಆವಾಸಿಸಿದನು. ಈ ಸಾಧುವಿನ ದರ್ಶನಕ್ಕಾಗಿ ಸಾವಿರಾರು ಜನ ಹಿಂದೂಗಳೂ ಮಹಮ್ಮದಿಯರೂ ಪ್ರವಾಹವಾಗಿ ಬಂದರು. ಪರಿಷೆಗಳು ನಡೆದುವು. ಅವುಗಳದು ತುಂಬ ಸಂಭ್ರಮಗೊಂದಲ. ಎಲ್ಲರೊಂದಿಗೆ ರಾಮುದಾಸನು ಈ ಸಾಧುವಿನ ದರ್ಶನವನ್ನು ಪಡೆದನು. ಮುಸಲ್ಮಾನರು ರಾಮುದಾಸನನ್ನು ಆಲಂಗಿಸಿ ಅವನ ಮೇಲೆ ಪ್ರೀತಿಯನ್ನು ಕರೆದರು.

---

# ಅಧ್ಯಾಯ ೨೩

## ಲಲಿತಪುರ—ರಾಜಘಾಡ್—ಛತ್ತರಪುರ

### (i) ದೇವರಲ್ಲಿ ನಂಬಿಕೆ

ರಾಮುದಾಸನು ಗೋಃಕಾರ್‌ನಿಂದ ಪ್ರಯಾಣಮಾಡಿ ಕೋಟೇಶ್ವರಕ್ಕೆ ಬಂದನು. ಇದಕ್ಕೆ ಕಾರಣ ಸೇಟ್ ಜವಹರಿಲಾಲನ ಆಹ್ವಾನ. ಕೋಟೇಶ್ವರದ ಮಹದೇವ ದೇವಾಲಯ ಈತನಿಗೆ ಸೇರಿದೆ. ದೇವರ ಮೂರ್ತಿ ವಿಶಾಲವಾದ ಸಹಜ ಗುಹೆಯ ಮಧ್ಯೆ ಪ್ರತಿಷ್ಠಿಸಲ್ಪಟ್ಟಿದೆ. ಇದರ ಸುತ್ತಲೂ ಸಾಧುಗಳ ಮತ್ತು ಪ್ರೇಕ್ಷಕರ ಅನುಕೂಲಕ್ಕಾಗಿ ಕಟ್ಟಡಗಳಿವೆ. ಇದು ಮಹೋಬಕ್ಕೆ ಎರಡು ಫರ್ಲಾಂಗ್ ಹತ್ತಿರದಲ್ಲಿದೆ. ರಾಮಚರಣದಾಸನು ಹಿಂದೆ ಇಲ್ಲಿ ಜವಹರಿಲಾಲನ ಪೋಷಣೆಯಲ್ಲಿ

ಕೆಲವು ತಿಂಗಳು ವಾಸವಾಗಿದ್ದನು. ರಾಮುದಾಸನು ಇಲ್ಲಿ ಒಂದು ರಾತ್ರಿ ಒಂದು ಮಧ್ಯಾಹ್ನ ನಿಂತನು. ಜವಹರಿಲಾಲನು ಈ ಮಂದಿರದಲ್ಲಿ ಮೂವತ್ತು ಜನಕ್ಕೆ ಸಮಾರಾಧನೆ ಮಾಡಿಸಿದನು. ಇದು ಆನಂದದಾಯಕವಾದ ಸಮಾರಂಭವಾಗಿದ್ದಿತು.

ಸಾಯಂಕಾಲ ಮಹೋಬದ ಬೀದಿಗಳಲ್ಲಿ ರಾಮಭಜನೆ ಮಾಡುತ್ತ ರಾಮುದಾಸನನ್ನು ಮೆರವಣಿಗೆಯಲ್ಲಿ ಕರೆದುಕೊಂಡು ಹೋದರು. ಕೆಲವರು ಸ್ನೇಹಿತರು ರಾಮುದಾಸನನ್ನು ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ ಅವನನ್ನು ಬಹು ಆದರದಿಂದ ಕಂಡರು. ಕೊನೆಯಲ್ಲಿ ರಾಮುದಾಸನು ಜಗನ್ನಾಥನ ಮನೆಗೆ ಹೋದನು.

ಮಹೋಬದಿಂದ ಹೊರಟು ರಾಮುದಾಸನು ಲಲಿತಪುರಕ್ಕೆ ಬಂದನು. ತ್ರಿವೇಣೀ ಪ್ರಸಾದನು ಅವನನ್ನು ಸ್ಟೇಷನ್ನಿನಲ್ಲಿ ಕಂಡು ಊರೊಳಗಿರುವ ವಿಶಾಲವಾದ ತನ್ನ ಮನೆಗೆ ಕರೆದೊಯ್ದನು. ಇಲ್ಲಿ ರಾಮುದಾಸನು ನಾಲ್ಕುದಿನ ಇದ್ದನು. ಸ್ನೇಹಿತರು ಗುಂಪು ಗುಂಪಾಗಿ ಬಂದು ರಾಮುದಾಸನನ್ನು ಸಂದರ್ಶಿಸಿ ಮಾತನಾಡಿಸಿ ಹೋಗುತ್ತಿದ್ದರು. ಒಂದು ದಿನ ಮನೆಯಲ್ಲಿ ರಾಮಲೀಲಾ ಉತ್ಸವ ನಡೆಯಿತು. ಸಾಯಂಕಾಲಗಳಲ್ಲಿ ರಾಮುದಾಸನೂ ಜೊತೆಯಲ್ಲಿ ರಾಮುಚರಣದಾಸನೂ ಮುಂಭಾಗದ ಮಹಡಿಯ ಮಾಳಿಗೆಯ ಮೇಲೆ, ಭಜನೆ ಮಾಡುತ್ತ, ನರ್ತನ ಮಾಡುತ್ತಿದ್ದರು

ಒಂದು ದಿನ ಇಬ್ಬರೂ ಹತ್ತಿರದಲ್ಲಿದ್ದ ನದಿಗೆ ಹೋಗಿದ್ದರು. ಈ ನದಿಯ ದಡಗಳ ಮೇಲೆ ಸೀತಾಪಹಾಡ್ ಎಂಬ ದೊಡ್ಡ ಚಪ್ಪಟೆ ಬಂಡೆಗಳಿವೆ. ನದಿಯ ನೀರು ಇಲ್ಲಿ ಬಹಳ ಇಳಿಜಾರಿನಲ್ಲಿ ಓಡಬೇಕಾಗಿದೆ. ಆದಕಾರಣ ಅದರ ಸೆಳವು ಬಹು ವೇಗವಾಗಿದ್ದಿತು. ದಂಡೆಯ ಬಳಿ ಹೆಚ್ಚು ಓಟವಿರಲಿಲ್ಲ. ಇವರಿಬ್ಬರೂ ಇಲ್ಲಿ ಸ್ನಾನಕ್ಕೆ ಇಳಿದರು.

ರಾಮುಚರಣದಾಸನು "ಸ್ವಾಮಿಜಿ! ನಾವಿಬ್ಬರೂ ನದಿಯನ್ನು ದಾಟುವ ಪ್ರಯತ್ನ ಮಾಡೋಣ, ಒಬ್ಬರ ಕೈ ಇನ್ನೊಬ್ಬರು ಹಿಡಿದುಕೊಂಡು ನಡೆಯೋಣ" ಎಂದು ಸೂಚಿಸಿ ರಾಮುದಾಸನ ಕೈಯನ್ನು ಹಿಡಿದು ಅವನನ್ನು ತನ್ನ ಜೊತೆಗೆಳೆದನು. ರಾಮುದಾಸನು ಈ ಎಳತಕ್ಕೆ ಸಗ್ಗಿದನು. ಪ್ರವಾಹದ ಮಧ್ಯೆ ಹೋದಾಗ, ಜಾರದಂತೆ ಕಾಲಿನ ಮೇಲೆ ನಿಂತುಕೊಳ್ಳುವುದೇ ಪ್ರಯಾಸವಾಯಿತು. ಕೆಳಗೆ ನೀರಿನ ಸೆಳವು ಕಾಲನ್ನು ಎತ್ತಿ ಹಾಕುತ್ತಿದ್ದಿತು. ಆದರೂ ಇವರು ಮುಂದು ಮುಂದಕ್ಕೆ ಹೋದರು. ಕೊನೆಗೆ ಕೊಚ್ಚಿಕೊಂಡು ಹೋಗುವಂತಾಯಿತು. ರಾಮುದಾಸನು ನಿಂತನು.

ಅವನು ರಾಮುಚರಣದಾಸನಿಗೆ "ರಾಮು, ರಾಮುದಾಸನಿಗೆ ತನ್ನ ದೇಹ ನಾಶವಾಗುವುದೆಂಬ ಹೆದರಿಕೆ ಇಲ್ಲ. ಆದರೆ, ಇನ್ನು ಮುಂಚೆ ಹೋದರೆ ನೀರಿನಲ್ಲಿ ಮುಳುಗಿ ಸಾಯುವುದು ಖಂಡಿತ. ಈ ಕಾಲ ಇನ್ನೂ ಒದಗಿಲ್ಲವೆಂದು ರಾಮನು ಪ್ರೇರೇಪಿಸುತ್ತಿದ್ದಾನೆ. ರಾಮುದಾಸನು ತನ್ನ ದೇಹವನ್ನು ರಾಮನ ಸೇವೆಗೆ ಅರ್ಪಿಸಿದ್ದಾನೆ. ಅವನು ಮಾಡಬೇಕಾದ ಸೇವೆ ಇನ್ನೂ ಇದೆ. ಅದರಂತೆಯೇ ನೀನು ಮಾಡಬೇಕಾದುದೂ ಇದೆ. ಹಿಂತಿರುಗೋಣ ನಡಿ" ಎಂದು ಹೇಳಿದನು.

"ಇಲ್ಲ, ಸ್ವಾಮಿಜಿ! ದಾಟಿಯೇ ಹೋಗೋಣ" ಎಂದನು ಆ ನಿರ್ಭೀತ ತರುಣ. ಅವನಿಗೆ ಮರಣವೆಂಬುದು ಲಕ್ಷ್ಯವೇ ಇಲ್ಲ. ಅವನ ಧೈರ್ಯ ಶ್ಲಾಘ್ಯವಾದುದು. ಆದರೆ ಆ ಸೆಳೆತದಲ್ಲಿ ಮುಂದೆ ಹೋಗುವುದಕ್ಕೆ ರಾಮದಾಸನು ಅವನಿಗೆ ಅವಕಾಶ ಕೊಡಲಿಲ್ಲ.

ರಾಮಚರಣದಾಸನು "ನೀವು ಹಿಂದಿರುಗಬಹುದು ಸ್ವಾಮಿಜಿ. ನಾನು ಧೈರ್ಯಮಾಡಿ ಆ ಕಡೆ ದಡವನ್ನು ಸೇರುತ್ತೇನೆ" ಎಂದನು.

ರಾಮದಾಸನು ಈ ಸಾಹಸ ಕಾರ್ಯವನ್ನು ನಿರೋಧಿಸಿದನು. ಇಬ್ಬರೂ ಹಿಂತಿರುಗಿ ದಡದ ಚಪ್ಪಡಿಗಳನ್ನು ಸೇರಿದರು. ತ್ರಿವೇಣೀಪ್ರಸಾದನೂ ಇತರರೂ ಈ ಸನ್ನಿವೇಶವನ್ನು ಕುತೂಹಲದಿಂದ ಈಕ್ಷಿಸುತ್ತಿದ್ದರು.

ರಾಮದಾಸನು ಲಲಿತಪುರದಲ್ಲಿದ್ದಾಗ ಮಳೆಗಾಲ. ಕರ್ತಾರ್‌ಕೃಷ್ಣನೆಂಬ ಒಬ್ಬ ಭಕ್ತನು ದಿನವೂ ಅವನ ಬಳಿಗೆ ಬರುತ್ತಿದ್ದನು. ಅವನು ಒಂದು ದಿನ ರಾಮದಾಸನನ್ನೂ ರಾಮಚರಣದಾಸನನ್ನೂ ತ್ರಿವೇಣೀಪ್ರಸಾದನನ್ನೂ ತನ್ನ ಮನೆಗೆ ಮಧ್ಯಾಹ್ನದ ಊಟಕ್ಕೆ ಕರೆದನು. ಕೆಲವು ದಿನಗಳಿಂದ ಮಳೆ ಬಲವಾಗಿ ಹೊಯ್ಯುತ್ತಿದ್ದಿತು. ಆ ಬೆಳಿಗ್ಗೆ ಎಂದೂ ಇಲ್ಲದಷ್ಟು ಸುರಿಯುತ್ತಿದ್ದಿತು. ರಸ್ತೆಗಳೆಲ್ಲಾ ಕೆಸರಾಗಿದ್ದುವು. ಚಳಿ ಗಾಳಿ ಭರೋ ಎಂದು ಬೀಸುತ್ತಿದ್ದಿತು. ಅನೇಕ ಸಂದಿಗೊಂದಿಗಳನ್ನು ಸುತ್ತಿ, ಇವರು ಕೊನೆಗೆ ಕತ್ತಲಾಗಿದ್ದ ಒಂದು ಸಂದಿಯಲ್ಲಿ ಅವನ ಮನೆಯನ್ನು ಮುಟ್ಟಿದರು.

ಕರ್ತಾರ್‌ಕೃಷ್ಣ ತರುಣ. ಅವನು ಅವನ ಸಂಸಾರದೊಂದಿಗೆ ರಸ್ತೆಯ ಮಗ್ಗುಲಿನ ಚಿಕ್ಕ ಅಂಗಡಿಗಳ ಸಾಲಿನ ಮೇಲೆ ಮಾಳಿಗೆಯ ಕೊಟಡಿಗಳಲ್ಲಿ ವಾಸವಾಗಿದ್ದನು. ಒರಟೊರಟಾದ ಮೆಟ್ಟಲುಗಳನ್ನು ಹತ್ತಿ, ಅವರು ಒಂದು ಇಕ್ಕಟ್ಟಾದ ಮಚ್ಚನ್ನು ಸೇರಿದರು. ಅಲ್ಲಿಂದ ಒಂದು ತಗ್ಗಾದ ಬಾಗಿಲು ಒಂದು ಚೌಕವಾದ ಕೋಣೆಯೊಳಕ್ಕೆ ತೆರೆದಿದ್ದಿತು. ಒಳಗೆ ಬಂದ ಕೂಡಲೆ ಛಾವಣಿ ಇದ್ದ ಭಾಗ ಗಾಜಿನದೋ ಎಂಬ ಭ್ರಾಂತಿ ಹುಟ್ಟಿಸುವಂತೆ, ಮೇಲಿನಿಂದ ಸೂರ್ಯನ ಬೆಳಕಿನ ಹೊಳೆ ಬೀಳುತ್ತಿದ್ದಿತು. ಮೇಲೆ ನೋಡಿದರೆ, ಆ ಛಾವಣಿ ಬಹಳ ಹಳೆಯದಾಗಿ, ದೊಡ್ಡ ದೊಡ್ಡ ಕಂಡಿಗಳು ಇದ್ದು, ಆ ಮೂಲಕ ಬಿಸಿಲು ಮಳೆ ಧಾರಾಳವಾಗಿ ಮನೆಯೊಳಕ್ಕೆ ನುಗ್ಗುತ್ತಿದ್ದುದು ವ್ಯಕ್ತಪಟ್ಟಿತು. ಬೆಳಗಿನ ಮಳೆಯಿಂದ ನೆಲವೆಲ್ಲಾ ನೆನೆದು ಒಂದು ಅಂಗುಲ ನೀರು ನಿಂತಿದ್ದಿತು. ಛಾವಣಿ ಸ್ವಲ್ಪ ಸರಿಯಾಗಿದ್ದ ಒಂದು ಮೂಲೆಯಲ್ಲಿ ಗೋಡೆಗೆ ಒರಗಿದಂತೆ ಒಂದು ಹಗ್ಗದ ಮಂಚವಿದ್ದಿತು. ಅದರ ಮೇಲೆ ಸುಮಾರು ಆರು ವರ್ಷ ವಯಸ್ಸಿನ ಹುಡುಗನೊಬ್ಬನು ದಪ್ಪವಾದ ಹತ್ತಿಬಟ್ಟೆಯನ್ನು ಹೊದ್ದುಕೊಂಡು ಮಲಗಿದ್ದನು. ಹತ್ತಿರದಲ್ಲಿ ಒಂದು ಚಿಕ್ಕ ಹುಡುಗಿ ಶುಶ್ರೂಷೆ ಮಾಡುತ್ತಿದ್ದಿತು.

ರಾಮದಾಸನು ನೇರವಾಗಿ ಮಂಚದ ಹತ್ತಿರ ಹೋಗಿ ಅದರ ಕಾಲಬಳಿ ಕುಳಿತು ಹುಡುಗನ ಹಣೆಯಮೇಲೆ ಕೈಯಿಟ್ಟನು. ಅದು ಕೆಂಡದಂತಹ ಜ್ವರದಿಂದ ಕಾಯುತ್ತಿದ್ದಿತು. ಹುಡುಗನು ಸನ್ನಿಮುಚ್ಚಿಕೊಂಡು ಪಕ್ಕದಿಂದ ಪಕ್ಕಕ್ಕೆ ಹೊರ ಳಾಡುತ್ತಿದ್ದನು. ಛಾವಣಿಯ ಕಂಡಿಗಳಿಂದ ನೀರುಬೆರತ ಚಳಿಯಗಾಳಿ ಅವನ ಮೇಲೆ ಹೊಡೆಯುತ್ತಿದ್ದಿತು. ಅವರ ವಾಸಕ್ಕೆ ಇದ್ದುದು ಆದೊಂದೇ ಕೊಟಡಿ. ಇದರ ಜೊತೆಗೆ ಈ ಸಂಸಾರಕ್ಕೆ ಐದು ಅಡಿ ಚಚ್ಚೌಕದ ಕತ್ತಲ ಸಂದಿ ಒಂದು ಇದ್ದಿತು. ಅದನ್ನು ಅವರು ಅಡಿಗೆ ಮನೆಯಾಗಿ ಮಾಡಿಕೊಂಡಿದ್ದರು.

ಆಗ ಅಡಿಗೆ ಮನೆಯಿಂದ ಕೆಲವು ತಿಂಗಳ ಒಂದು ಮಗುವನ್ನು ಎತ್ತಿಕೊಂಡು ಪೂರ್ವ ವಯಸ್ಸಿನ ಮಾತೆಯೊಬ್ಬಳು ಬಂದಳು. ಅವಳು ಕರ್ತಾಕೃಷ್ಣನ ಹೆಂಡತಿ; ಎಳೆಯ ಮಗು ಖಾಯಿಲೆಯ ಹುಡುಗ ಈ ಎರಡರ ತಾಯಿ. ಶುಶ್ರೂಷೆ ಮಾಡು ತ್ತಿದ್ದ ಹುಡುಗಿ ಆಕೆಯ ತಂಗಿ. ಖಾಯಿಲೆ ಹುಡುಗನ ವಿಷಯವಾಗಿ ಆಕೆಗೆ ಸಹಜವಾಗಿ ಬಹಳ ಕಳವಳವಿದ್ದಿತು. ಅವಳು ರಾಮದಾಸನ ಹತ್ತಿರ ಬಂದು ಪಾದಗಳಿಗೆರಗಿದಾಗ ತುಂಬ ಅತ್ತುಬಿಟ್ಟಳು. ಆಕೆಯ ದುಃಖವನ್ನು ಇದಕ್ಕಿಂತ ಚನ್ನಾಗಿ ತಿಳಿಸುವುದು ಸಾಧ್ಯವಲ್ಲ. ರಾಮದಾಸನು ತನ್ನಲ್ಲಿಯೇ, "ಹೇ ಸ್ವಾಮಿ! ನಿನ್ನ ಕೃಪೆ ಇಲ್ಲಿ ಬೇಕಾಗಿದೆ. ನೀನೇ ಅನಾಥ ಬಂಧು! ಬೇಗ ಬಾ, ದೇವ, ಬೇಗ ಬಾ, ರಕ್ಷಿಸು" ಎಂದುಕೊಂಡನು.

ಅನಂತರ ರಾಮದಾಸನು "ಅಮ್ಮಾ, ದೇವರಲ್ಲಿ ನಂಬಿಕೆ ಇಡು. ಭಗವಂತನು ನಾನಾ ಕಷ್ಟಗಳನ್ನು ಕೊಟ್ಟು ಪರೀಕ್ಷೆ ಮಾಡಬಹುದು. ಆದರೆ ಅವನು ಎಂದಿಗೂ ಕೈ ಬಿಡುವುದಿಲ್ಲ. ಆತನ ಮೇಲೆ ಭಾರ ಹಾಕು. ನಿನ್ನ ದುಃಖವನ್ನು ಬಿಡು." ಎಂದು ಧೈರ್ಯ ಹೇಳಿದನು.

ಈ ಉತ್ತೇಜನ ವಾಕ್ಯಗಳು ಕ್ಷತವಿಕ್ಷತವಾಗಿದ್ದ ಆಕೆಯ ಹೃದಯಕ್ಕೆ ಅಂಜನದಂತೆ ಆಪ್ಯಾಯಮಾನವಾದವು. ಆಕೆ ಎದ್ದು ರಾಮದಾಸನನ್ನು ಮುಗುಳ್ನಗೆ ಯೊಡನೆ ನೋಡಿದಳು.

"ಓ ಸ್ವಾಮಿಜಿ! ನಿಮ್ಮ ಮಾತಿನಲ್ಲಿ ಸಂಪೂರ್ಣ ಭರವಸೆಯನ್ನಿಡುತ್ತೇನೆ. ನಮ್ಮ ಗೋಳನ್ನು ಕೇಳಿ, ನಮ್ಮ ಸಂಕಟದಲ್ಲಿ ಅದನ್ನು ಪರಿಹಾರಮಾಡಲು ಬಂದಿರುವ ನೀವು ದೇವರೆಂದೇ ತಿಳಿಯುತ್ತೇನೆ" ಎಂದು ಮೊರೆದಳು.

ಕರ್ತಾಕೃಷ್ಣನಿಗೆ ಅಲ್ಪ ಸಂಬಳದ ಸರ್ಕಾರಿ ಚಾಕರಿ. ಆ ಸಂಬಳದಿಂದ ಅವನು ತನ್ನ ಮನೆಯವರನ್ನು ಸರಿಯಾದ ಸ್ಥಿತಿಯಲ್ಲಿಟ್ಟುಕೊಂಡಿರಲು ಆಗು ತ್ತಿರಲಿಲ್ಲ. ತಿಂಗಳಿಗೆ ಮೂರು ರೂಪಾಯಿ ಬಾಡಿಗೆ ಕೊಡುತ್ತಿದ್ದನು. ಇದಕ್ಕಿಂತ ಒಳ್ಳೆಯ ಮನೆಗೆ ಹೆಚ್ಚು ಬಾಡಿಗೆ ಕೊಡಲು ಶಕ್ತಿಸಾಲದು. ಛಾವಣಿಯನ್ನು ಸರಿಪಡಿ ಸಿಕೊಡಬೇಕೆಂದು ಎಷ್ಟೋ ಸಲ ಕೇಳಿಕೊಂಡಿದ್ದರೂ, ಮನೆಯ ಮಾಲೀಕ ಕಿವಿಯ ಮೇಲೆ ಹಾಕಿಕೊಂಡಿರಲಿಲ್ಲ. ವೈದ್ಯ? ಆ ಅಮೂಲ್ಯ ಸಹಾಯ ಪಡೆಯುವುದಕ್ಕೆ

ಹಣ ಎಲ್ಲಿಂದ ಬರಬೇಕು? ಪ್ರಪಂಚಕ್ಕೆ ದೇವರು ದೊಡ್ಡ ವೈದ್ಯ. ಅವನೇನೂ ಫೀಜನ್ನು ಕೇಳುವುದಿಲ್ಲ. ಅವನಿಗೆ ಬೇಕಾದುದು ಮಕ್ಕಳಿಗಿರುವಂತಹ ಭಕ್ತಿ. ಅದಕ್ಕಾಗಿ ಏನೂ ವೆಚ್ಚವಾಗುವುದಿಲ್ಲ. ಇದನ್ನು ನಾವು ಕೊಟ್ಟರೆ ಅವನು ನಮ್ಮನ್ನು ಲೋಕದ ಎಲ್ಲ ಕಷ್ಟಗಳಿಂದಲೂ ಪಾರುಮಾಡುತ್ತಾನೆ.

ಮಾತೆ ರಾಮದಾಸನಿಗಾಗಿ ರುಚಿಯಾದ ಕೆಲವು ಪದಾರ್ಥಗಳನ್ನು ಮಾಡಿದ್ದಳು. ರಾಮದಾಸ, ರಾಮಚರಣದಾಸ, ಮತ್ತು ತ್ರಿವೇಣೀ ಪ್ರಸಾದ್ ಭೋಜನ ಮಾಡಿಕೊಂಡು ಹೊರಟರು. ಮಾರನೆಯ ದಿನ ರಾಮದಾಸನು ಲಲಿತಪುರದಿಂದ ಪ್ರಯಾಣ ಮಾಡಿದನು. ಹೊರಡುವ ಮುನ್ನ ಹುಡುಗನಿಗೆ ಜ್ವರ ಬಿಟ್ಟಿತ್ತು ಎಂದು ತಿಳಿಯಿತು. ಭಗವಂತನು ಎಷ್ಟು ದಯಾಮಯ! ಎಷ್ಟು ಕೃಪೆ ತೋರಿಸುತ್ತಾನೆ!

ಈ ದುಃಖದ ಕತೆಯ ಮುಂದಣಪ್ರಸಂಗ ಕಾಲಕ್ರಮದಿಂದ ಅದು ಬೇರೆ ಕಡೆ ಬರತಕ್ಕದಾದರೂ, ಇಲ್ಲಿ ಹೇಳತಕ್ಕದಾಗಿದೆ.

ಒಂದು ವರ್ಷ ಕಳೆಯಿತು. ಹಿಂದೂಸ್ಥಾನದ ಬಹು ಭಾಗಗಳಲ್ಲೆಲ್ಲಾ ಸಂಚರಿಸಿ, ರಾಮದಾಸನು ಮರಳಿ ಝಾನ್ಸಿಗೆ ಬಂದನು. ಅವನು ಅಲ್ಲಿಯ ರಾಮಮಂದಿರದಲ್ಲಿಳಿದಿದ್ದಾಗ ಕರ್ತಾರ್‌ಕೃಷ್ಣನು ಅಲ್ಲಿದ್ದನು. ರಾಮದಾಸನ ಆಗಮನವನ್ನು ಕೇಳಿದೊಡನೆಯೇ ಈ ಭಕ್ತನು ಇಲ್ಲಿಗೆ ಓಡಿ ಬಂದು, ತನ್ನ ಮನೆಗೆ ಬರಬೇಕೆಂದೂ, ತನ್ನ ಹೆಂಡತಿ ಆತುರದಿಂದ ಕಾಯುತ್ತಿದ್ದಾಳೆಂದೂ, ರಾಮದಾಸನಿಗೆ ತಿಳಿಸಿದನು. ರಾಮದಾಸನು ಅವನ ಮನೆಗೆ ಹೋದನು.

ರಾಮದಾಸನು ಮಾತೆಯನ್ನು ಅನುಕೂಲವಾಗಿದ್ದ ಒಂದು ಸಣ್ಣ ಮನೆಯ ಬಾಗಿಲಿನಲ್ಲಿ ಕಂಡನು. ಆಕೆಯ ಕೈಕೂಸು ಬೆಳೆದು ಆರೋಗ್ಯವಾಗಿದ್ದಿತು; ಅಂಬೆಗಾಲಿಡುತ್ತಿದ್ದಿತು. ಅವಳ ಮಗನು ದೃಢಾಂಗನಾಗಿ ಚಟುವಟಿಕೆಯಿಂದ ಕುಣಿದಾಡುತ್ತಿದ್ದನು. ಆಕೆಯ ಮುಖದಲ್ಲಿ ಹರ್ಷವೂ ತೃಪ್ತಿಯೂ ಮೂಡಿದ್ದುವು. ಅವಳು ರಾಮದಾಸನನ್ನು ನಿಷ್ಕಲ್ಮಷವಾದ ಸಂತೋಷದಿಂದ ಸ್ವಾಗತಿಸಿದಳು. ಮಕ್ಕಳು ರಾಮದಾಸನ ತೊಡೆಯ ಮೇಲೆ ಕುಳಿತು ಆಟವಾಡುತ್ತ ನಗಲಾರಂಭಿಸಿದುವು. ಅವರಿದ್ದ ಮನೆ ಹಿಂದಿನ ಮನೆಗಿಂತ ವಿಶಾಲವಾಗಿದ್ದಿತು. ಮಳೆ ಮತ್ತು ಬಿಸಿಲಿನಿಂದ ಯಾವ ತೊಂದರೆಯೂ ಇರಲಿಲ್ಲ. ಇಷ್ಟಾದರೂ ಕರ್ತಾರ್‌ಕೃಷ್ಣನಿಗೆ ಏನೋ ದುಗುಡವಿದ್ದಂತೆ ಕಾಣಿಸುತ್ತಿದ್ದಿತು. ಈ ಪ್ರಪಂಚವೇ ವಿಚಿತ್ರವಾದ ಸ್ಥಳ! ಮನುಷ್ಯನ ಮನಸ್ಸು ಇನ್ನೂ ವಿಚಿತ್ರವಾದುದು! ಮನಸ್ಸಿನಲ್ಲಿ ಕೋಪದ ಆವೇಶ ಇರುವವರೆಗೂ, ಅವನಿಗೆ ಸಂಪೂರ್ಣ ತೃಪ್ತಿಯೂ, ಮನಸ್ಸಿನ ನಿರಾಳವೂ ದೊರೆಯುವುದಿಲ್ಲ.

ಮಾರನೆಯ ಬೆಳಗ್ಗೆ ಮುಂಜಾನೆ ಕರ್ತಾರ್‌ಕೃಷ್ಣನು ರಾಮದಾಸನನ್ನು ಮಂದಿರದಲ್ಲಿ ಕಂಡನು. ಅವನ ಮನಸ್ಸಿನಲ್ಲಿ ಏನೋ ಯೋಚನೆ ಇರುವ ಹಾಗೆ ಕಾಣಿಸಿತು.

"ಮಹರಾಜ್, ನಾನು ತಮ್ಮನ್ನು ಬೇಡಿಕೊಳ್ಳುತ್ತೇನೆ. ಇಲ್ಲಿಂದ ನನಗೆ ಬೇರೆ ಕಡೆಗೆ ವರ್ಗಮಾಡಿಸಿ. ಈಗಿನ ಕೆಲಸದಿಂದ ಬೇಜಾರಾಗಿದೆ" ಎಂದನು.

ಅವನು ಕೇಳಿಕೊಂಡ ರೀತಿಯನ್ನು ನೋಡಿದರೆ ಪ್ರಪಂಚದಲ್ಲಿ ಎಲ್ಲವೂ ರಾಮದಾಸನ ಆಜ್ಞೆಯಂತೆಯೇ ನಡೆಯುತ್ತದೆ ಎನ್ನುವುದು ಅವನ ದೃಢವಾದ ನಂಬಿಕೆ ಎಂದು ಕಾಣಿಸಿತು. ರಾಮದಾಸನು ಅವನ ಮಾತನ್ನು ತಡೆದು ಸ್ಪಷ್ಟವಾದ ಮಾತಿನಲ್ಲಿ "ಇಲ್ಲಿ ನೋಡು, ರಾಮ, ರಾಮದಾಸನು ಭಗವಂತನ ದೀನ ಸೇವಕ ಮಾತ್ರ. ಎಲ್ಲವೂ ರಾಮನ ಇಚ್ಛಾನುಸಾರ ನಡೆಯುತ್ತದೆ. ಭಗವಂತನು ಈ ದಾಸನ ಹೃದಯದಲ್ಲೇನೋ ಇದ್ದಾನೆ. ಆದರೆ ಈ ಸೇವಕನನ್ನು ಧಣಿಯೆಂದು ತಪ್ಪು ತಿಳಿದುಕೊಳ್ಳಬೇಡ. (ಭಗವಂತನ ಅನುಗ್ರಹವಾದರೆ ಯಾವುದೂ ಅಸಾಧ್ಯವಲ್ಲ.) ಅದು ಹಾಗಿರಲಿ, ನಿನಗೆ ಇರುವ ತೊಂದರೆ ಏನು?" ಎಂದು ಕೇಳಿದನು.

ಕರ್ತಾಕೃಷ್ಣನು, "ವಿಷಯ ಇಷ್ಟೆ. ನನ್ನ ಮೇಲ್ಪಟ್ಟ ಅಧಿಕಾರಿಗಳೂ ಸಹೋದ್ಯೋಗಿಗಳೂ ನನಗೆ ಬಹಳ ತೊಂದರೆ ಕೊಡುತ್ತಿದ್ದಾರೆ. ಎಲ್ಲರೂ ಒಂದಾಗಿ ನನ್ನ ಬಾಳನ್ನು ಹದಗೆಡಿಸುತ್ತಿದ್ದಾರೆ" ಎಂದು ಕಥೆಯನ್ನು ಮುಂದುವರಿಸಿದನು.

ರಾಮದಾಸನು ಸ್ವಲ್ಪ ಯೋಚಿಸಿ, "ರಾಮ, ಕೇಳು. ಒಂದು ವರ್ಷದ ಕೆಳಗೆ ನೀನು ಲಲಿತಪುರದಲ್ಲಿದ್ದ ಕಾಲವನ್ನು ಜ್ಞಾಪಿಸಿಕೊ. ನಿನ್ನ ಸ್ಥಿತಿ ಆಗ ಹೇಗಿದ್ದಿತು? ಸಹಿಸಲಸಾಧ್ಯವಾಗಿದ್ದಿತಲ್ಲವೆ? ಭಗವಂತನು ಕೃಪೆಮಾಡಿ ಅದರಿಂದ ನಿನ್ನನ್ನು ಉದ್ಧಾರಮಾಡಿದ. ನಿನ್ನನ್ನು ಇಲ್ಲಿಗೆ ಕರೆತಂದು ಒಳ್ಳೆಯ ಮನೆಯನ್ನು ಕೊಟ್ಟ; ನಿನ್ನ ಮಕ್ಕಳು ಆರೋಗ್ಯದಿಂದಿರುವಂತೆ ಮಾಡಿದ ಈಗ ನಿನ್ನ ಕಛೇರಿಯ ಕಷ್ಟಗಳನ್ನು ಹೇಳುತ್ತೀಯೆ. ಅಲ್ಲಿ ಏನೂ ತಪ್ಪಿಲ್ಲ. ಜನರಿಗೆ ನಮ್ಮನ್ನು ಕಂಡರೆ ಆಗದಿರುವುದಕ್ಕೆ ಕಾರಣ, ನಮ್ಮ ಮನಸ್ಸು ಅವರ ವಿಷಯದಲ್ಲಿ ಸರಿಯಾಗಿಲ್ಲದಿರುವುದು. ಪ್ರೀತಿಗೆ ಪ್ರತಿಯಾಗಿ ಎಂದಿಗೂ ದ್ವೇಷ ದೊರೆಯುವುದಿಲ್ಲ. ಅಪನಂಬಿಕೆ ಮತ್ತು ದ್ವೇಷದಿಂದಲೇ ಎಲ್ಲ ಕಷ್ಟಗಳೂ ಉಂಟಾಗುತ್ತವೆ. ವ್ಯಾಕುಲವನ್ನು ಬಿಟ್ಟುಬಿಡು. ಭಗವಂತನು ನಿನ್ನನ್ನು ಇಟ್ಟಿರುವ ಸ್ಥಿತಿಯಲ್ಲಿ ಸಮಾಧಾನದಿಂದಿರು. ಸಹನೆ ಇರಲಿ; ತಾಳ್ಮೆ ಇರಲಿ. ಇದೆಲ್ಲಕ್ಕಿಂತಲೂ ಮೇಲಾಗಿ ನಿನ್ನ ಕಛೇರಿಯವರೆಲ್ಲರ ವಿಷಯಕ್ಕೆ, ಅಷ್ಟೇ ಅಲ್ಲದೆ ಪ್ರಪಂಚದಲ್ಲಿ ಎಲ್ಲರ ವಿಚಾರಕ್ಕೆ ನಮ್ರನಾಗಿಯೂ ವಿಶ್ವಾಸಿಯಾಗಿಯೂ ಕ್ಷಾಂತನಾಗಿಯೂ ನಡೆದುಕೊ. ರಾಗದ್ವೇಷಗಳ ಸಂಯಮವಿಲ್ಲದ ಮನಸ್ಸಿನಲ್ಲಿ ನೀನು ಎಲ್ಲಿಗೇ ಹೋದರೂ ಶಾಂತಿಯನ್ನು ಪಡೆಯಲಾರೆ. ನೀನು ಪ್ರಪಂಚದೊಂದಿಗೆ ಕೊನೆಯಿಲ್ಲದೆ ಕಾದಾಡುತ್ತಿರುವೆ. ಶಾಂತಿ ಅಥವ ತೃಪ್ತಿಯ ರೇವನ್ನು ಸೇರಲಾರೆ. ನಿನ್ನೊಳಗೆ ವಿಚಾರಿಸಿ ನೋಡಿಕೊ. (ಸರ್ವಶಕ್ತನ ಇಚ್ಛೆಗೆ ಅಧೀನನಾಗು.) ಆತನ ಮುಂದೆ ವಿನೀತನಾಗಿರು. ಎಲ್ಲ ಪ್ರಾಣಿಗಳನ್ನೂ ಪ್ರೀತಿ ಮತ್ತು ಕನಿಕರದಿಂದ ಕಾಣು.

(ದೇವರು ಮಾಡುವುದೆಲ್ಲ ಒಳ್ಳೆಯದಕ್ಕೇ) ಎನ್ನುವುದನ್ನು ಗ್ರಹಿಸು. ನಿನ್ನ ಮೇಲ್ಪಟ್ಟವರ ಆಜ್ಞಾನುವರ್ತಿಯಾಗಿಯೂ, ಸಹೋದ್ಯೋಗಿಗಳ ವಿಚಾರದಲ್ಲಿ ವಿಶ್ವಾಸಿಯಾಗಿಯೂ ಇದ್ದರೆ, ನಿನ್ನ ವಿಷಯದಲ್ಲಿ ಅವರು ತಮ್ಮ ವರ್ತನೆಯನ್ನು ಮಾರ್ಪಡಿಸಲೇ ಬೇಕಾಗುತ್ತದೆ. ಆಗ ನೀನು ಯಾವ ಕಛೇರಿಯಿಂದ ಓಡಿಹೋಗಬೇಕೆಂದು ಆಸೆ ಪಡುತ್ತೀಯೋ, ಆ ಕಛೇರಿಯೇ ಕೆಲಸ ಮಾಡಲು ಸುಖಮಯವಾದ ಸ್ಥಳವಾಗುತ್ತದೆ. ನೀನು ದಯವಿಟ್ಟು ನಾಡಿದ್ದು ಬಂದು, ಪರಿಸ್ಥಿತಿ ಹೇಗಿದೆಯೆಂಬುದನ್ನು ತಿಳಿಸು. ಆದರೆ ರಾಮುದಾಸನು ಹೇಳಿದಂತೆ ದಯವಿಟ್ಟು ನಡೆಸು" ಎಂದು ಬುದ್ಧಿವಾದ ಹೇಳಿದನು. ಕರ್ತಾರ್‌ಕೃಷ್ಣನು ಹೊರಟುಹೋದನು.

ಕಛೇರಿಯಲ್ಲಿ ಕೆಲಸಮಾಡುತ್ತಿದ್ದ ಇತರ ನೌಕರರು ರಾಮುದಾಸನ ಬಳಿಗೆ ಬರುತ್ತಿದ್ದರು. ಕರ್ತಾರ್‌ಕೃಷ್ಣನು ಬಹು ಸಿಟ್ಟುಗಾರನೆಂದೂ, ಕಛೇರಿಯಲ್ಲಿ ಪ್ರತಿ ಒಬ್ಬರೊಂದಿಗೂ ಯಾವಾಗಲೂ ಜಗಳಕ್ಕೆ ಕಾಲ್ಕೆರೆಯುತ್ತಿರುವನೆಂದೂ, ದೂರು ಹೇಳಿದರು. ಕರ್ತಾರ್‌ಕೃಷ್ಣನು ಆ ನಿಯಮಿತ ದಿವಸ ಬಂದನು. ಅವನ ಮುಖ ಹರ್ಷವಾಗಿಯೂ ಸಂತೋಷಯುಕ್ತವಾಗಿಯೂ ಇದ್ದಿತು.

ರಾಮುದಾಸನು ಅವನನ್ನು "ಹೇಗಿದ್ದೀಯೆ?" ಎಂದು ಕೇಳಿದನು.

ಆತನು "ಮಹರಾಜ್, ನಿಮ್ಮ ಬುದ್ಧಿವಾದದಂತೆ ನಡೆದೆ. ಅದರ ಫಲ ಆಶ್ಚರ್ಯಕರವಾಗಿದೆ. ನನ್ನ ವಿಷಯದಲ್ಲಿ ಸಹೋದ್ಯೋಗಿಗಳ ನಡತೆ ಸಂಪೂರ್ಣವಾಗಿ ಬೇರೆಯಾಗಿದೆ. ಮೇಲಿನ ಅಧಿಕಾರಿಗಳು ದಯಾಳುಗಳೂ, ಒಳ್ಳೆಯವರೂ ಆಗಿದ್ದಾರೆ. ನನ್ನ ಸಹೋದ್ಯೋಗಿಗಳು ಸ್ನೇಹಪರರೂ, ಸಹಾಯಕರೂ ಆಗಿದ್ದಾರೆ. ಓ! ನಾನು ಎಷ್ಟು ಸುಖವಾಗಿದ್ದೇನೆ. ನನಗೆ ವರ್ಗಬೇಕಿಲ್ಲ" ಎಂದನು.

ರಾಮುದಾಸನು "ರಾಮ! ಮಾರ್ಪಾಡು ನಿನ್ನಲ್ಲೇ ಇದೆ. (ನಾವು ಒಳ್ಳೆಯವರಾಗಿದ್ದರೆ ಪ್ರಪಂಚವೇ ನಮಗೆ ಒಳ್ಳೆಯದಾಗಿರುತ್ತದೆ.) (ನಾವು ಪ್ರಪಂಚವನ್ನು ಪ್ರೀತಿಸಿದರೆ, ನಮಗೆ ಸಂದೇಹಬೇಡ, ಪ್ರತಿಫಲವಾಗಿ ಈ ಪ್ರಪಂಚದಿಂದ ಪ್ರೀತಿಯೇ ಲಭಿಸುತ್ತದೆ") ಎಂದನು.

ಈಗ ಕಥೆಯ ಸೂತ್ರವನ್ನು ಮತ್ತೆ ಎತ್ತಿಕೊಳ್ಳೋಣ. ರಾಮುಚರಣದಾಸನಿಗೆ ತನ್ನ ಹೊಸ ಹಿತ್ತಾಳೆ ಕಮಂಡಲುವಿನ ಮೇಲೆ ಅತಿ ಮಮತೆ. ಅಲ್ಲದೆ ಅವನು ಸ್ನೇಹಿತರು ಕೊಟ್ಟಿದ್ದ ಹಲವು ಹೆಚ್ಚಿನ ಬಟ್ಟೆಗಳನ್ನೂ ಮತ್ತು ಸ್ವಲ್ಪ ದುಡ್ಡನ್ನೂ ಹೊತ್ತುಕೊಂಡು ತಿರುಗುತ್ತಿದ್ದನು. ರಾಮುದಾಸನು ಅವನಿಗೆ ಅನೇಕವೇಳೆ ದುಡ್ಡನ್ನೂ ಇತರ ಅನಾವಶ್ಯಕ ಪದಾರ್ಥಗಳನ್ನೂ ಇಟ್ಟುಕೊಳ್ಳಬಾರದೆಂದು ಬುದ್ಧಿವಾದ ಹೇಳಿದ್ದನು ಆದರೆ ಅವನ ಸಂಗ್ರಹಣಬುದ್ಧಿ ಅಡಗಿಸುವುದಕ್ಕೆ ಆಗದಂತೆ ಪ್ರಬಲವಾಗಿದ್ದಿತು. ರಾಮುದಾಸನಿಗೆ ಛತ್ತರಪುರದಿಂದ ಒಂದು ಆಹ್ವಾನ ಬಂದಿದ್ದಿತು. ಅವನು ಹೊರಡುವುದರಲ್ಲಿದ್ದನು. ಆಗ ಅವನು ರಾಮುಚರಣ

ದಾಸನಿಗೆ ಅವನಲ್ಲಿದ್ದ ಕಮಂಡಲುವನ್ನೂ ಹೆಚ್ಚಿನ ಬಟ್ಟೆಗಳನ್ನೂ ಬಿಡಬೇಕೆಂದೂ, ಬಿಟ್ಟರೆ ಮಾತ್ರ ತನ್ನೊಡನೆ ಬರಬಹುದೆಂದೂ ತಿಳಿಸಿದನು. ರಾಮಚರಣದಾಸನಿಗೆ ಅದು ಸಮ್ಮತವಿಲ್ಲ. ಆದರೂ ಅವನು ಆ ಮಾತನ್ನು ನಡೆಸಿದನು.

ಇವರು ಮಹೋಬಕ್ಕೆ ಹೋಗುವ ರೈಲಿನಲ್ಲಿ ಹತ್ತಿದರು. ಛತ್ತರಪುರಕ್ಕೆ ಮಹೋಬದ ಮೇಲೆ ದಾರಿ. ರಾಮಚರಣದಾಸನಲ್ಲಿ ಸ್ವಲ್ಪ ದುಡ್ಡು ಇತ್ತೆಂದು ಹಿಂದೆಯೇ ಹೇಳಿದೆಯಷ್ಟೆ. ದಾರಿಯಲ್ಲಿ ಅವನು ಪ್ರತಿ ಸ್ಟೇಷನ್ನಿನಲ್ಲೂ ತಿಂಡಿಯನ್ನು ಕೊಂಡುಕೊಂಡು ತಿನ್ನಲಾರಂಭಿಸಿದನು. ರಾಮನಾಮದ ಜಪ ನಿಂತುಹೋಯಿತು. ರಾಮದಾಸನಿಗೆ ಎದುರಲ್ಲಿ ಆಹಾರವಿಲ್ಲದೆ ಕೃಶನಾದಂತಿದ್ದ ಒಬ್ಬ ಸಾಧು ಕುಳಿತಿದ್ದುದು ಕಂಡಿತು.

ರಾಮದಾಸನು ರಾಮಚರಣದಾಸನ ಕಡೆಗೆ ತಿರುಗಿ "ನಿನ್ನಲ್ಲಿ ದುಡ್ಡೆಷ್ಟಿದೆ, ರಾಮು ?" ಎಂದು ಪ್ರಶ್ನಿಸಿದನು.

ಇದನ್ನು ಕೇಳಿ ಅವನಿಗೆ ಗಾಬರಿಯಾಯಿತು. ಏಕೆಂದರೆ ಅವನಿಗೆ ಪ್ರಶ್ನೆಯ ಅಭಿಪ್ರಾಯ ಏನೆಂದು ಅರ್ಥವಾಯಿತು.

ಅವನು ತನ್ನ ಬಟ್ಟೆಯಲ್ಲಿ ಒಂದು ಗಂಟನ್ನು ಬಿಚ್ಚಿ "ಇಕೋ ನೋಡಿ" ಎಂದನು. ಮೂರು ರೂಪಾಯಿ ಕೆಲವು ಆಣೆಗಳು ಇದ್ದುವು.

"ಎದುರಿಗಿರುವ ಸಾಧುವಿಗೆ ಅದನ್ನು ಕೊಡು" ಎಂದು ರಾಮದಾಸನು ಹೇಳಿದನು. ರಾಮಚರಣದಾಸನು ಕೂಡಲೆ ಹಾಗೆ ಮಾಡಿದನು. ದುಡ್ಡು ಯಾವಾಗ ಕೈಬಿಟ್ಟಿತೋ ಆಗ ಅವನು ಮುಕ್ತನಾದನು.

ರಾಮದಾಸನು ಅವನಿಗೆ "ಇನ್ನು ನಿನ್ನ ಹೊಟ್ಟೆಗೆ ಸ್ವಲ್ಪ ವಿಶ್ರಾಂತಿ ಕೊಡು. ರಾಮನಾಮದ ಜಪದಿಂದ ನಿನ್ನ ನಾಲಗೆಯನ್ನು ಚುರುಕಾಗಿ ದುಡಿಸು" ಎಂದು ಸಲಹೆ ಕೊಟ್ಟನು. ಮಹೋಬಕ್ಕೆ ಸೇರುವವರೆಗೂ ಅವನ ನಾಲಗೆಯ ಮೇಲೆ ರಾಮನಾಮ ಅವಿರತವಾಗಿ ನಲಿದಾಡಿತು.

### (ii) ಶಿವನ ಮೇಲೆ ಬಾಲಕ್‌ರಾಮನ ಆಕ್ರೋಶ

ಛತ್ತರಪುರದ ರಾಮಚಂದ್ರಗುಪ್ತನ ತಂದೆ ಭವಾನೀಪ್ರಸಾದನು, ರಾಮದಾಸನನ್ನು ತಮ್ಮಲ್ಲಿಗೆ ಕರೆದುಕೊಂಡು ಹೋಗಲು ಏರ್ಪಾಡು ಮಾಡಿದ್ದನು. ರಾಮದಾಸನು ಮೋಟಾರ್ ಬಸ್ಸಿನಲ್ಲಿ ಹೊರಟನು. ಮಹೋಬದಿಂದ ವೈಜನಾಥನೂ ಬೇರೆ ಏಳು ಜನರೂ ಜೊತೆಗೆ ಹೊರಟರು. ಛತ್ತರಪುರದಲ್ಲಿ ಊರಹತ್ತಿರದ ರಾಧಾಕೃಷ್ಣ ದೇವಾಲಯದೊಳಗೆ ಇವರಿಗೆ ಸ್ಥಳಮಾಡಿದ್ದಿತು. ಭವಾನೀಪ್ರಸಾದನು ವೃದ್ಧ; ರಾಮದಾಸನನ್ನು ಹೇಳಲಾಗದ ಆದರದಿಂದ ಸ್ವಾಗತಿಸಿದನು, ಮತ್ತು ಅತಿಥಿಗಳಿಗೆ ಎಲ್ಲ ಅನುಕೂಲವನ್ನೂ ಒದಗಿಸಿದನು. ರಾಮದಾಸನು ಕ್ಷೀರವ್ರತದಲ್ಲಿರಲು ಇಷ್ಟಪಟ್ಟನು.

ಭವಾನೀ ಪ್ರಸಾದನು ಸರ್ಕಾರಿ ಅಧಿಕಾರದಿಂದ ವಿಶ್ರಾಂತಿ ಪಡೆದವನು. ಅವನೊಬ್ಬ ಶ್ರದ್ಧಾಳು. ದೈವಸಾಕ್ಷಾತ್ಕಾರಕ್ಕಾಗಿ ಉತ್ಕಟವಾಗಿ ಶ್ರಮಿಸುತ್ತಿದ್ದನು. ಅವನ ಪ್ರಿಯವಾದ ಪಾರಾಯಣ ಭಗವದ್ಗೀತೆ. ಪ್ರತಿದಿನವೂ ಅದನ್ನು ಪೂರ್ಣ ಭಕ್ತಿಯಿಂದ ಎರಡು ಸಲ ಪಾರಾಯಣ ಮಾಡುವನು; ಅಲ್ಲದೆ ಸದಾ ಜಪ ಮಾಡುವನು. ಆತನ ಹೆಂಡತಿಗೂ ಸಾಧುಗಳನ್ನು ಕಂಡರೆ ಬಹು ಪ್ರೀತಿ. ಅವನ ದೊಡ್ಡ ಮಗ ಗುಲಾಬ್‌ರಾಯ್ ಛತ್ತರಪುರದ ಮಹಾರಾಜರ ಕಾರ್ಯದರ್ಶಿಯಾಗಿದ್ದನು.

ಮಂದಿರಕ್ಕೆ ಬಂದ ಎರಡನೆಯ ಅಥವಾ ಮೂರನೆಯ ದಿವಸದ ರಾತ್ರಿ ರಾಮದಾಸನಿಗೆ ಮಲೇರಿಯಾ ಜ್ವರ ಬಂದಿತು. ಜ್ವರ ಹೆಚ್ಚಾಗಿ ಕಾಯುತ್ತಿದ್ದಾಗ ಅವನಿಗೆ ಅಪೂರ್ವವಾದ ಆನಂದ ಉಂಟಾಗುತ್ತಿದ್ದಿತು. ತನ್ನನ್ನು ತಾನೆ ತಡೆಯಲಾರದೆ ಹೋಗುತ್ತಿದ್ದನು. ಭಗವನ್ನಾಮವನ್ನು ಉಚ್ಚರಿಸುತ್ತ, ಹುಚ್ಚಾಬಟ್ಟೆ ನರ್ತನ ಮಾಡುತ್ತಿದ್ದನು. ಭವಾನೀ ಪ್ರಸಾದನು ಮತ್ತು ರಾಮಚರಣದಾಸನು ಆ ಸ್ಥಿತಿಯಲ್ಲಿ ಶ್ರಮಮಾಡಿಕೊಳ್ಳಬಾರದೆಂದು ಅವನನ್ನು ಬೇಡಿಕೊಳ್ಳುವರು; ರಾಮದಾಸನನ್ನು ಅವನಿಗೋಸ್ಕರ ಹಾಕಿದ್ದ ಮಂಚದಮೇಲೆ ಬಲವಂತದಿಂದ ಮಲಗಿಸುವರು. ಜ್ವರ ಎರಡು ದಿನ ಇದ್ದಿತು.

ಛತ್ತರಪುರಕ್ಕೆ ಹದಿನಾಲ್ಕು ಮೈಲಿ ದೂರದಲ್ಲಿರುವ ನವಗಾಮಿನಿಂದ ಒಬ್ಬ ಭಕ್ತನು ಬಂದು, ಖಾಯಿಲೆ ಇದ್ದ ತನ್ನ ಸಹೋದರನಿಗೆ ಪರಿಚಯಮಾಡಿಕೊಡಲು ರಾಮದಾಸನನ್ನು ಕರೆದುಕೊಂಡು ಹೋದನು ರಾಮದಾಸನು ರೋಗಿಯನ್ನು ಕಂಡಾಗ ಅವನು ಕ್ಷಯರೋಗದ ಅಂತಿಮ ಅವಸ್ಥೆಯಲ್ಲಿದ್ದನು. ಅವನ ದೇಹ ಬರಿಯ ಅಸ್ಥಿಪಂಜರವಾಗಿದ್ದಿತು. ಅವನ ಸಂಬಂಧಿಗಳು, ಅವನಿಗೆ ವಾಸಿಯಾದೀತೆಂಬ ಆಸೆಯನ್ನು ತೊರೆದು, ಅವನಿಗೆ ಸಾವಿಗೆ ಮುನ್ನ ರಾಮದಾಸನ ದರ್ಶನವನ್ನು ಕೊಡಿಸಬೇಕೆಂದು ಬಯಸಿದ್ದರು. ರಾಮದಾಸನು ನವಗಾಮಿನಲ್ಲಿ ಒಂದು ರಾತ್ರಿ ಇದ್ದು ಛತ್ತರಪುರಕ್ಕೆ ಹಿಂದಿರುಗಿದನು.

ಬಾಲಕ್‌ರಾಮನು ಛತ್ತರಪುರದಲ್ಲಿ ಕೆಲಕಾಲ ಇದ್ದನಂತರ ಆ ಸ್ಥಳವನ್ನು ಬಿಟ್ಟು, ಅಲ್ಲಿಗೆ ಸುಮಾರು ಇಪ್ಪತ್ತಾರು ಮೈಲಿ ದೂರದ ಒಳನಾಡಿನಲ್ಲಿ ರಾಜಘಡ್ ಎಂಬ ಬೆಟ್ಟದಮೇಲೆ ಇರಲು ಹೊರಟು ಹೋಗಿದ್ದನು. ರಾಮದಾಸನಿಗೆ ಕಾನ್ಪುರಕ್ಕೆ ಬರಬೇಕೆಂದು ರಾಮಚಂದ್ರಗುಪ್ತನಿಂದ ಒಂದು ಕಾಗದ ಬಂದಿತು. ಇದೆಲ್ಲದರ ಮೇಲೆ ಲಲಿತಪುರಕ್ಕೆ ಮತ್ತೆ ಒಂದು ದಿನ ಮಟ್ಟಿಗೆ ಬಂದು ಹೋಗಬೇಕೆಂದು ತ್ರಿವೇಣೀ ಪ್ರಸಾದನಿಂದ ಒಂದು ತಂತಿ ಬಂದಿತು.

ಒಂದು ದಿನ ಮಧ್ಯಾಹ್ನದ ಸುಮಾರಿಗೆ ರಾಮದಾಸನು ಹಠಾತ್ತಾಗಿ ರಾಜಘಡಕ್ಕೆ ಪ್ರಯಾಣಮಾಡಲು ಉದ್ದೇಶಿಸಿದನು. ಮೋಡ ಕವಿದು ಆಕಾಶ ಕತ್ತಲಾಗಿದ್ದಿತು; ಸಣ್ಣದಾಗಿ ಮಳೆಯೂ ಬೀಳುತ್ತಿದ್ದಿತು. ರಾಮದಾಸನು ನೆಟ್ಟಗೆ ದೇವಸ್ಥಾನ

ದಿಂದ ಹೊರಬಿದ್ದನು. ಪ್ರಯಾಣವನ್ನು ಕಾಲುನಡಗೆಯಲ್ಲಿ ಮಾಡುವುದೆಂದು ಯೋಚಿಸಿದನು. ರಾಮಚರಣದಾಸನೂ ಸಿದ್ಧನಾದನು. ಮಿಕ್ಕವರು ಏನುಮಾಡ ಬೇಕು? ಅವರು ಒಬ್ಬರ ಮುಖವನ್ನು ಒಬ್ಬರು ನೋಡುತ್ತ ಹಿಂತೆಗೆದರು. ನಡೆಯುವುದು ರುಚಿಯಾಗಿ ಕಾಣಲಿಲ್ಲ. ದಾರಿ ದಟ್ಟವಾದ ವಿಸ್ತಾರವಾದ ಕಾಡಿನಲ್ಲಿ ದ್ದಿತು. ಮಧ್ಯೆ ನಿಲ್ಲುವುದಕ್ಕೆ ಹಳ್ಳಿಗಳಿಲ್ಲ. ವೈಜನಾಥನೂ ಇತರ ಮಿತ್ರರೂ ಈ ಉದ್ಯಮದಿಂದ ಹಿಂಜರಿದು ತಾವು ಹಿಂದೆ ನಿಂತುಬಿಡುವುದಾಗಿ ತಮ್ಮ ತೀರ್ಮಾನ ವನ್ನು ತಿಳಿಸಿದರು.

ಭವಾನೀ ಪ್ರಸಾದನಿಗೆ ರಾಮದಾಸನ ನಿರ್ಧಾರದ ವಿಷಯ ತಿಳಿದು, ಅವನು ಆ ಸಮಯದಲ್ಲಿ ಹೊರಡುವುದು ಬೇಡವೆಂದು ನಿಲ್ಲಿಸಲು ಗುಲಾಬ್‌ರಾಯ್‌ನನ್ನು ಕಳುಹಿಸಿದನು. ಗುಲಾಬ್‌ರಾಯ್ ರಾಮದಾಸನು ತನ್ನ ನಿರ್ಧಾರದಲ್ಲಿ ದೃಢನಾಗಿ ರುವುದನ್ನೂ ಅದರಿಂದ ಕದಲುವಂತಿಲ್ಲವೆಂಬುದನ್ನೂ ಕಂಡನು.

ಆಗ ಅವನು, "ಐದು ನಿಮಿಷ ದಯವಿಟ್ಟು ನಿಂತಿರಿ, ಈಗಲೇ ಬಂದು ಬಿಟ್ಟೆ" ಎಂದು ಹೇಳಿ ಹೊರಟುಹೋದನು.

ಐದು ನಿಮಿಷಗಳೊಳಗಾಗಿ ಒಂದು ಹೊಚ್ಚ ಹೊಸ ಮೋಟಾರುಕಾರು ದೇವ ಸ್ಥಾನದ ಬಾಗಿಲಲ್ಲಿ ಬಂದು ನಿಂತಿತು. ಭಗವಂತನ ವ್ಯಾಪಾರಗಳೇ ಅದ್ಭುತ! ರಾಮದಾಸನು ಕಾರಿನಲ್ಲಿ ಕುಳಿತನು. ಕೇಳಿದವರು ನಗಬೇಕು, ನಡೆದು ಹೋಗುವು ದೆಂದಾಗ ಹಿಂಜರಿದಿದ್ದ ವೈಜನಾಥನೂ ಉಳಿದೆಲ್ಲ ಸ್ನೇಹಿತರೂ ಕಾರಿನೊಳಗೆ ತುಂಬಿದರು. ಗುಲಾಬ್‌ರಾಯ್, ಕಾರಿನ ಒಡೆಯನು ಆ ವೇಳೆ ಕ್ರೂರವಾದ ವಿಷಮ ಶೀತ ಜ್ವರದಿಂದ ನರಳುತ್ತಿರುವುದಾಗಿ ತಿಳಿಸಿ, ಅವನಿಗೆ ರಾಮದಾಸನು ದರ್ಶನ ಕೊಡಬೇಕೆಂದು ಕೇಳಿಕೊಂಡನು. ರಾಮದಾಸನು ಸಮ್ಮತಿಸಿದನು. ಕಾರು ರೋಗಿಯ ಮನೆಯ ಬಾಗಿಲಲ್ಲಿ ನಿಂತಿತು. ರಾಮದಾಸನು ಜೊತೆಯವರೊಡನೆ ಒಳಗೆ ಹೋದನು. ರೋಗಿ ಸನ್ನಿಯಲ್ಲಿ ಹುಚ್ಚು ಹುಚ್ಚು ಮಾತನಾಡುತ್ತಿದ್ದುದು ಕಂಡಿತು. ರಾಮದಾಸನು ಹಾಸಿಗೆಯ ಮಗ್ಗುಲಲ್ಲಿ ಕುಳಿತು ರೋಗಿಯ ತಲೆ ಮೈಯನ್ನು ತನ್ನ ಕೈಯಿಂದ ಸವರಿ, ಎಲ್ಲ ಸರಿಹೋಗುತ್ತದೆ ಎಂದು ಭರವಸೆ ಇತ್ತನು. ಮನೆಯವರು ರಾಮದಾಸನಿಗೆ ಕುಡಿಯುವುದಕ್ಕೆ ಹಾಲನ್ನು ನೀಡಿದರು. ಅವನು ಅದರಲ್ಲಿ ಕೊಂಚವನ್ನು ಕುಡಿದು ಉಳಿದುದನ್ನು ರೋಗಿಗೆ ಕುಡಿಸಿದನು. ಆಮೇಲೆ ಅವನು ಮನೆಯಿಂದ ಹೊರಬಿದ್ದನು. ಎಲ್ಲರೂ ಈಚೆಗೆ ಬಂದು ಮರಳಿ ಕಾರಿನಲ್ಲಿ ಕುಳಿತರು. ಅದು ಅಲ್ಲಿಂದ ಹೊರಟು ಊರಹೊರಗೆ ನಿರ್ಜನವಾದ ಮಾರ್ಗಕ್ಕೆ ಬಂದಮೇಲೆ ಕಾಡುದಾರಿ ಹಳ್ಳತಿಟ್ಟಾಗಿದ್ದರೂ ವಾಯುವೇಗದಲ್ಲಿ ಹೋಯಿತು.

ಕಾರು ಮೂರು ಗಂಟೆಯ ಹೊತ್ತಿಗೆ ರಾಜಘಡ್ ಎಂಬ ಹೆಸರಿನ ಪರ್ವತ ಶ್ರೇಣಿಯ ಬುಡವನ್ನು ಮುಟ್ಟಿತು. ಇವರು ಕಾರಿನಿಂದ ಇಳಿದು ಬಾಲಕ್‌ರಾಮನು

ವಾಸವಾಗಿದ್ದ ಸ್ಥಳಕ್ಕೆ ಹೊರಟರು. ಬಾಲಕ್‌ರಾಮನು ಮನೆ ಮಾಡಿಕೊಂಡಿದ್ದ ಬೆಟ್ಟದ ಸಮನೆಲ ಸಿಕ್ಕಬೇಕಾದರೆ ಇವರು ನೂರಾರು ಮೆಟ್ಟಲು ಹತ್ತಿ ಹೋಗ ಬೇಕಾಯಿತು. ಬಾಲಕ್‌ರಾಮನು ರಾಮದಾಸನನ್ನು ಕಂಡನೋ ಇಲ್ಲವೋ, ಸಂತೋಷಾತಿಶಯದಿಂದ ಅಳುತ್ತ ಅವನ ಪಾದಗಳಲ್ಲಿ ಬಿದ್ದನು. ರಾಮದಾಸನನ್ನು ಪುನಃ ಪುನಃ ಆಲಂಗಿಸಿದನು. ಅವನು ನೆಲದಮೇಲೆ ಹತ್ತು ಅಡಿ ಕಂಬಗಳನ್ನು ನೆಟ್ಟು ಅದರ ಮೇಲೆ ಹೊಲದ ಕಾವಲಿಗೆ ಮಾಡಿರುವ ಮಚ್ಚಣಿಕೆಯಂತೆ ಕಟ್ಟಿದ ಸಣ್ಣ ಒಂದು ಗುಡಿಸಿಲಿನಲ್ಲಿ ಇರುತ್ತಿದ್ದನು.

ಬೆಟ್ಟ ಈ ಸಮನೆಲದಿಂದ ಬಹಳ ಎತ್ತರಕ್ಕೆ ಹಾಯ್ದಿದ್ದಿತು. ಅದರ ಕಡೆಗೆ ಅಂಚಿನಲ್ಲಿ ಒಂದು ಶಿವಲಿಂಗವಿದ್ದಿತು. ಅದು ಅರ್ಧ ಬೆಟ್ಟದ ಬದಿಯ ಒಂದು ಗೂಡಿಯಲ್ಲಿದ್ದಿತು. ಬೆಟ್ಟದ ಮೇಲಿನ ಹರಡಿದ ಒಂದು ಚಿಲುಮೆಯ ನೀರು ಅದರ ಅಂಚುಗಳಿಂದ ಸಣ್ಣಸಣ್ಣ ಧಾರೆಯಾಗಿ ಸೋರಿ ತಕ್ಕನುಟ್ಟಿಗೆ ದಪ್ಪನಾದ ಬುಗ್ಗೆ ಯಾಗಿ ನೀರು ಅಭಿಷೇಕಮಾಡುವಂತೆ ಲಿಂಗದಮೇಲೆ ಹಗಲೂ ರಾತ್ರಿ ನಿರಂತರವಾಗಿ ಸುರಿಯುತ್ತಿದ್ದಿತು. ಗುಡಿಸಿಲಿದ್ದ ಸಮಭೂಮಿಯ ಹೊರ ಅಂಚಿನಲ್ಲಿ ಕಲ್ಲಿನ ಒಂದು ಒರಗು ಬೆಂಚಿದ್ದಿತು.

ಬಾಲಕ್‌ರಾಮನು, "ಸ್ವಾಮಿಜಿ! ನನಗೆ ನಿನ್ನೆ ರಾತ್ರಿ ದುಸ್ಸಹವಾದ ಸಮಯ. ನಾನು ತೀರಾ ನಿರಾಶನಾಗಿದ್ದೆ. ನಾನು ಭಗೀರಥ ಪ್ರಯತ್ನಮಾಡಿದರೂ ದೇವರು ದರ್ಶನಕೊಡಲಿಲ್ಲ. ಶಿವನಮೇಲೆಷ್ಟು ಕೋಪ ಬಂದಿತೆಂದರೆ ನಾನು ಉನ್ಮತ್ತನಾದೆ. ಶಿವಲಿಂಗವನ್ನು ಹುಚ್ಚು ಹುಚ್ಚು ಒದೆದೆ. ಅದನ್ನು ಪೀಠದಿಂದ ಕಿತ್ತು ಬೆಟ್ಟದ ಕೆಳಕ್ಕೆ ಉರುಳಿಸಲು ಎಷ್ಟೋ ಪ್ರಯತ್ನಮಾಡಿದೆ. ಆದರೆ ಅದನ್ನು ಕದಲಿಸಲಾಗಲಿಲ್ಲ. ಅದು ಭೂಮಿಯಲ್ಲಿ ಅಷ್ಟು ಭದ್ರವಾಗಿ ನೆಟ್ಟಿದೆ. ಆಗ ನಿಮ್ಮ ಜ್ಞಾಪಕ ಬಂದು, "ರಾಮದಾಸ್! ರಾಮದಾಸ್! ರಾಮದಾಸ್!" ಎಂದು ಘಟ್ಟಿ ಯಾಗಿ ಕೂಗಿದೆ. ನನ್ನ ದನಿ ಏಳುವಷ್ಟು ಎತ್ತರದಲ್ಲಿ ಅರ್ಧ ಗಂಟೆ ಕಿರಿಚಿದೆ, ಕಿರಿಚಿ ಸೋತು ಸುಮ್ಮನಾದೆ. ಕೊನೆಗೆ ನನ್ನ ಒತ್ತಾಯದ ಕರೆಯನ್ನು ಮನ್ನಿಸಿ ಬಂದಿದ್ದೀರಿ. ನೀವು ನನ್ನ ಭಾಗದ ದೇವರು" ಎಂದು ಕಥೆಯನ್ನು ಹೇಳಿದನು.

"ರಾಮದಾಸನು ನಮ್ಮೆಲ್ಲರ ಅಂತರ್ಯದಲ್ಲಿ ನಿವಾಸಿಸುವ ಪರಮಾತ್ಮನ ಒಬ್ಬ ಭೃತ್ಯನು ಮಾತ್ರ. ಅವನ ಅಪ್ಪಣೆ ಮೇರೆಗೇ ರಾಮದಾಸನು ಸ್ಥಳದಿಂದ ಸ್ಥಳಕ್ಕೆ ಸಂಚರಿಸುತ್ತಾನೆ" ಎಂದು ರಾಮದಾಸನು ಅವನನ್ನು ಸಮಾಧಾನಪಡಿಸಿದನು.

### (iii) ಭಗವದ್ವ್ಯಾಪಾರ—ಆಶ್ಚರ್ಯಕರವಾದ ರೋಗನಿವಾರಣೆ

ಸಂಜೆಯ ಮುಸುಕು ಆ ಪ್ರದೇಶವನ್ನು ವ್ಯಾಪಿಸಿದಂತೆ, ವೈಜನಾಥ ಮತ್ತು ರಾಮಚರಣದಾಸ ಹೊರತು, ಉಳಿದ ಸ್ನೇಹಿತರು ರಾತ್ರಿ ಬೆಟ್ಟದ ಕೆಳಗಿನ ಹಳ್ಳಿ ಯಲ್ಲಿ ತಂಗಲು ಬೆಟ್ಟದಿಂದ ಇಳಿದರು. ಬಾಲಕ್‌ರಾಮನ ಹತ್ತಿರ ಒಂದು ಲಾಂದ್ರ

ವಿದ್ದಿತು. ಕತ್ತಲಾಗುತ್ತಲು ಅವನು ಅದನ್ನು ಹಚ್ಚಿದನು. ದಟ್ಟವಾಗಿ ಬೆಳೆದಿದ್ದ ದೊಡ್ಡ ಮರಗಳ ಕಾಡು ಬೆಟ್ಟವನ್ನು ಹೊದೆದಿದ್ದಿತು. ಕ್ರೂರ ಪ್ರಾಣಿಗಳು ತಮ್ಮ ಗವಿಗಳಿಂದ ಹೊರಗೆ ಬಂದು ಹಸಿವಿನ ಬಾಧೆಯಿಂದ ಕೂಗು ಹಾಕುತ್ತಿದ್ದವು. ಇದು ಎಲ್ಲಾ ಕಡೆಯಿಂದಲೂ ಸ್ಪಷ್ಟವಾಗಿ ಕೇಳಿಸುತ್ತಿದ್ದಿತು.

ಕತ್ತಲಾಗುವುದಕ್ಕೆ ಮುಂಚೆ ನಾಲ್ಕು ಜನರೂ ಬೆಟ್ಟದ ಮೇಲೆ ಇನ್ನೂ ಎತ್ತರದ ಸ್ಥಳಕ್ಕೆ ಹತ್ತಿ ಹೋಗಿದ್ದರು ದಾರಿ ಒಳ್ಳೆಯ ಜಾರಿಕೆಯದಾಗಿ ಮತ್ತು ಅಪಾಯಕರವಾಗಿದ್ದಿತು. ಅಲ್ಲಿ ಇಟ್ಟಿಗೆಯಿಂದ ಕಟ್ಟಿದ್ದ ಗುಹೆಯ ಒಂದು ಕೊಟಡಿ ಇದರ ಮುಂದೆ ಒಂದು ಇಕ್ಕಟ್ಟಾದ ಓಣಿ ಇದ್ದುವು. ಇವರು ನಿಲ್ಲುವುದಕ್ಕೆ ಇದ್ದ ಸ್ಥಳ ಇಷ್ಟೇ.

ಬಾಲಕ್‌ರಾಮನು. "ಸ್ವಾಮಿಜಿ! ನೀವು ಬರುತ್ತೀರೆಂಬ ನಂಬಿಗೆ ದೃಢವಾಗಿ, ನೀವು ನಿಲ್ಲುವುದಕ್ಕೆಂದು ಈ ಗವಿಯನ್ನು ಒಳಗೆಲ್ಲಾ ಸಗಣಿಯಿಂದ ಸಾರಿಸಿದ್ದೇನೆ" ಎಂದು ಹೇಳುತ್ತಾ, "ಸ್ವಾಮಿಜಿ, ನೀವು ನನ್ನ ಸಂಗಡ ಕೆಲವು ದಿವಸ ನಿಲ್ಲಬೇಕೆಂದು ಬೇಡಿಕೊಳ್ಳುತ್ತೇನೆ" ಎಂದನು.

ರಾಮದಾಸನು, "ಇಲ್ಲ ರಾಮು, ಅದು ಸಾಧ್ಯವಲ್ಲ. ರಾಮದಾಸನನ್ನು ಕರೆದುಕೊಂಡು ಹೋಗಲು ಇಷ್ಟುಜನ ಸ್ನೇಹಿತರು ಬಂದಿರುವುದನ್ನು ನೀನೆ ನೋಡುತ್ತಿದ್ದೀಯೆ. ಮೋಟಾರು ಕಾರು ಅವನು ಹಿಂದಿರುಗುವುದಕ್ಕಾಗಿಯೇ ಕಾದಿದೆ" ಎಂದು ಉತ್ತರವಿತ್ತನು.

ಬಾಲಕ್ ರಾಮನು "ನೀವು ಹೋಗಕೂಡದು. ಸ್ನೇಹಿತರು ಹಿಂದಿರುಗಿ ಹೋಗಲಿ. ನನ್ನ ಜೊತೆಗೆ ನೀವೊಬ್ಬರೇ ಇರುವಿರಿ. ಕೆಲವು ದಿನಗಳ ನಂತರ ಹಿಂದಕ್ಕೆ ಹೋಗಲು ನಿಮಗೆ ಮೋಟಾರುಕಾರು ತರಿಸುತ್ತೇನೆ" ಎಂದು ಅಂಗಲಾಚಿ ಅತ್ತು ರಾಮದಾಸನ ಕಾಲುಗಳ ಮೇಲೆ ಬಿದ್ದನು.

ಆಗ ರಾಮದಾಸನು ಕೆಲವು ಒಪ್ಪಂದಗಳಮೇಲೆ ನಿಲ್ಲುವುದಾಗಿಯೂ ಅವುಗಳಲ್ಲಿ ಯಾವುದೊಂದು ತಪ್ಪಿದರೂ ಹೊರಟುಹೋಗುವುದಾಗಿಯೂ ಹೇಳಿದನು.

"ನೀವು ನಿಯಮಿಸುವ ಒಪ್ಪಂದಗಳು ತಪ್ಪದೆ ನಡೆಯುವಂತೆ ನನ್ನ ಭಾಗಕ್ಕೆ ನೋಡಿಕೊಳ್ಳುತ್ತೇನೆ" ಎಂದು ಬಾಲಕ್ ರಾಮನು ಮಾತು ಕೊಟ್ಟನು.

"ಒಪ್ಪಂದ ಇವು: ಮೊದಲನೆಯದು, ರಾಮದಾಸನು ನಿನ್ನೊಡನೆ ಇರುವಷ್ಟು ಕಾಲವೂ ಈ ಎತ್ತರ ಪ್ರದೇಶವನ್ನು ಬಿಟ್ಟು ಇಳಿಯುವುದಿಲ್ಲ. ಎರಡನೆಯದು, ರಾತ್ರಿಯ ಹೊತ್ತು ಗುಹೆಯ ಒಳಗೆ ಇರುವನು. ಮೂರನೆಯದು, ನೀರನ್ನು ಮಾತ್ರ ತೆಗೆದುಕೊಳ್ಳುವನು. ನಾಲ್ಕನೆಯದು ಮೌನವತ್ರವನ್ನಾಚರಿಸುವನು. ಇವಕ್ಕೆ ಒಪ್ಪುತ್ತೀಯೋ?" ಎಂದು ರಾಮದಾಸನು ಪ್ರಶ್ನೆ ಹೂಡಿದನು.

ಬಾಲಕ್‌ರಾಮನು ಸಂತೋಷದಿಂದ ಒಪ್ಪಿಕೊಂಡನು. ಏಕೆಂದರೆ ರಾಮದಾಸನ ತಪಃಪ್ರಭಾವದಿಂದ, ದಮವಿಲ್ಲದ ತನ್ನ ಮನಸ್ಸಿಗೆ ಶಾಂತಿ ದೊರೆಯುತ್ತದೆಂದು ಅವನು ನಂಬಿದ್ದನು. ಇಬ್ಬರೂ ರಾತ್ರಿ ಬಹಳ ಹೊತ್ತಿನವರೆಗೂ ಮಾತನಾಡುತ್ತಿದ್ದರು. ಬೆಳಗಿನ ಜಾಮದಲ್ಲಿ ಕೇವಲ ಎರಡು ಮೂರು ಗಂಟೆಗಳ ವಿಶ್ರಾಂತಿ ದೊರೆಯಿತು. ರಾಮದಾಸನು ಗುಹೆಯಲ್ಲಿ ಮಲಗಿಕೊಂಡನು.

ಎಲ್ಲರೂ ಮಾರನೆ ದಿನ ಶಿವಲಿಂಗ ಪ್ರತಿಷ್ಠೆಯಾಗಿದ್ದ ಕೆಳಗಿನ ಅಂತಸ್ತಿಗೆ ಹೋದರು. ರಾಮದಾಸನು ಗುಹೆಯ ಬಳಿ ನಿಂತನು. ಎಂಟು ಗಂಟೆಯ ಹೊತ್ತಿಗೆ ಭವಾನೀ ಪ್ರಸಾದನೊಂದಿಗೆ ಹಳ್ಳಿಯಲ್ಲಿ ಉಳಿದಿದ್ದವರು ಬಂದರು. ಭವಾನೀ ಪ್ರಸಾದನು ಎಲ್ಲರಿಗೂ ಸಾಕಾಗುವಷ್ಟು ಪೂರಿ ಪಲ್ಯ ಹಾಲನ್ನು ತಂದಿದ್ದನು. ರಾಮದಾಸನ ಸಂಜ್ಞೆಯಂತೆ ಬಾಲಕ್‌ರಾಮನು ಅವರಿಗೆ ರಾಮದಾಸನು ತನ್ನೊಂದಿಗೆ ಕೆಲವು ನಿಯಮಗಳ ಮೇಲೆ ಕೆಲವು ಕಾಲವಿರುವುದೆಂಬ ನಿರ್ಧರವನ್ನೂ ಆ ನಿಯಮಗಳೇನೆಂಬುದನ್ನೂ ತಿಳಿಸಿ, ರಾಮದಾಸನನ್ನು ಬಿಟ್ಟು ಹಿಂದಿರುಗಿ ಹೋಗುವಂತೆ ಹೇಳಿದನು. ಆ ಸ್ನೇಹಿತರು ಆಗದೆಂದರು. ರಾಮದಾಸನನ್ನು ಬಿಟ್ಟು ಹೋಗುವುದಿಲ್ಲವೆಂದೂ, ಅವನು ತಮ್ಮೊಂದಿಗೆ ಆಹಾರ ತೆಗೆದುಕೊಳ್ಳದಿದ್ದರೆ ತಾವೂ ಆಹಾರ ತೆಗೆದುಕೊಳ್ಳುವುದಿಲ್ಲವೆಂದೂ ಏಕ ಕಂಠದಿಂದ ಹೇಳಿದರು. ಅವರ ಮಾತುಗಳು ರಾಮದಾಸನಿಗೆ ಕೇಳಿಸುತ್ತಿದ್ದುದಲ್ಲದೆ ಅವರೂ ಕಾಣಿಸುತ್ತಿದ್ದರು. ಅವರು ಬಾಲಕ್‌ರಾಮನಿಗೆ ರಾಮದಾಸನನ್ನು ಕೆಳಕ್ಕೆ ಕರೆದುಕೊಂಡುಬರುವಂತೆ ಒತ್ತಾಯದಿಂದ ಹೇಳಿದರು. ಬಾಲಕ್‌ರಾಮನು ಸಂಕಟದಲ್ಲಿ ಸಿಕ್ಕಿಕೊಂಡನು. ಪ್ರತಿಜ್ಞೆಗಳನ್ನು ಮುರಿಯುವುದಕ್ಕೆ ತಾನು ಸಹಾಯಕನಾಗುವುದಿಲ್ಲವೆಂದು ಅವನು ಮಾತುಕೊಟ್ಟಿದ್ದನು. ಈ ಸನ್ನಿವೇಶ ಅವನಿಗೆ ತುಂಬ ವಿಷಮವಾಗಿದ್ದಿತು. ಕೊನೆಗೆ ಅವನು ಅವರ ಮಾತಿಗೆ ಸಮ್ಮತಿಸಬೇಕಾಯಿತು. ಮೇಲಕ್ಕೆ ಬಂದು, ರಾಮದಾಸನನ್ನು ಕೆಳಕ್ಕೆ ಕರೆದುಕೊಂಡು ಹೋದನು. ಎಲ್ಲರೂ ಭೋಜನಕ್ಕೆ ಕುಳಿತರು. ಬಾಲಕ್‌ರಾಮನೇ ಒಂದು ಪೂರಿಯನ್ನು ಹಾಲು ಸಕ್ಕರೆಯಲ್ಲದ್ದಿ ಅದನ್ನು ರಾಮದಾಸನಿಗೆ ನೀಡಿದನು. ರಾಮದಾಸನು ಅದನ್ನು ತಿಂದನು. ನಾಲ್ಕರಲ್ಲಿ ಮೂರು ಪ್ರತಿಜ್ಞೆಗಳು ಮುರಿದಂತಾಯಿತು.

ರಾಮದಾಸನು ನಾಲ್ಕನೆಯ ಪ್ರತಿಜ್ಞೆಯನ್ನು ಮುರಿದು “ರಾಮ, ಎಲ್ಲಾ ಪ್ರತಿಜ್ಞೆಗಳೂ ಮುರಿದುಹೋದುವು. ಅದಕ್ಕೆ ನೀನೇ ಕಾರಣ. ಆದುದರಿಂದ ತಾನು ಈ ಮಿತ್ರರೊಡನೆ ಹೊರಡುವುದಕ್ಕೆ ಯಾವ ಅಭ್ಯಂತರವೂ ಇಲ್ಲವೆಂದು ರಾಮದಾಸನು ತಿಳಿಯುತ್ತಾನೆ” ಎಂದು ಹೇಳಿದನು.

ಬಾಲಕ್‌ರಾಮನು ಹೆದರಿದ ಮತ್ತು ನೊಂದ ಧ್ವನಿಯಿಂದ “ಇಲ್ಲ ಇಲ್ಲ, ಸ್ವಾಮಿಜಿ, ಅವರು ಹೊರಟುಹೋದಮೇಲೆ ಪ್ರತಿಜ್ಞೆಗಳನ್ನು ಪಾಲಿಸಬಹುದು” ಎಂದು ಕೂಗಿಕೊಂಡನು.

ರಾಮಚರಣದಾಸನಿಗೆ ರಾಮದಾಸನು ಬಾಲಕ್‌ರಾಮನ ಸಂಗಡ ಇರುವುದು ತೀರಾ ಇಷ್ಟವಿಲ್ಲ. ಅವನು ಆಗ ರಾಮದಾಸನಿಗೆ ಬಾಲಕ್‌ರಾಮನ ಸಲಹೆಗೆ ಒಪ್ಪ ಕೂಡದೆಂದು ಸಂಜ್ಞೆಮಾಡಿದನು. ಬಾಲಕ್‌ರಾಮನಿಗೆ ಅವನಮೇಲೆ ವಿಪರೀತ ಸಿಟ್ಟು ಬಂದಿತು. ಅವನು "ಸ್ವಾಮಿಜಿಗೆ ಇಲ್ಲಿರಕೂಡದೆಂದು ಎತ್ತಿಕಟ್ಟಲು ನಿನಗೆಷ್ಟು ಧೈರ್ಯ! ಶಿವನ ಶಾಪ ನಿನ್ನ ತಲೆಯ ಮೇಲಿರಲಿ!" ಎಂದು ಗಟ್ಟಿಯಾಗಿ ಕಿರಿಚಿದನು.

ಕೂಡಲೆ ರಾಮದಾಸನು, "ಶಿವನ ಶಾಪ ರಾಮದಾಸನ ತಲೆಯ ಮೇಲಿರಲಿ! ರಾಮಚರಣದಾಸನ ತಲೆಯಮೇಲೆ ಬೇಡ. ರಾಮದಾಸನ ತಲೆ ನುಣ್ಣಗೆ ಬೋಳಾಗಿದೆ. ಅದರಲ್ಲಿ ಎಷ್ಟು ಶಾಪಕ್ಕೆ ಬೇಕಾದರೂ ಎಡೆ ಇದೆ" ಎಂದವನು ಹೊರಡಲುದ್ಯುಕ್ತನಾದನು. ಬಾಲಕ್‌ರಾಮನು ಅಳುತ್ತ ರಾಮದಾಸನ ಪ್ರಯಾಣ ವನ್ನು ನಿಲ್ಲಿಸಲು ನೆಲದಮೇಲೆ ಬಿದ್ದು ಹೊರಳಾಡಿದನು.

ರಾಮದಾಸನು, "ರಾಮ, ಕೋಪವನ್ನು ಹಿಡಿತದಲ್ಲಿಟ್ಟುಕೊ. ರಾಮಮಂತ್ರ ವನ್ನು ಜಪಿಸು" ಎಂದು ಹೇಳಿದನು.

ಎಲ್ಲರೂ ಬೆಟ್ಟದಿಂದಿಳಿದು ಮೋಟಾರುಕಾರನ್ನು ಸೇರಿದರು. ಮಧ್ಯಾಹ್ನಕ್ಕೆ ಛತ್ತರಪುರಕ್ಕೆ ಬಂದರು. ಕಾರು ಖಾಯಿಲೆಯಾಗಿದ್ದ ಯಜಮಾನನ ಮನೆಯ ಹತ್ತಿರಕ್ಕೆ ನೇರವಾಗಿ ಬಂದಿತು. ರಾಮದಾಸನು ಅವನನ್ನು ನೋಡಲು ಒಳಗೆ ಹೋದನು. ರೋಗಿ ಹಾಸಿಗೆಯ ಮೇಲೆ ಕುಳಿತಿದ್ದನು.. ಅವನಿಗೆ ತುಂಬ ನಿಶ್ಶಕ್ತಿ, ಆದರೂ ಜ್ವರ ಸಂಪೂರ್ಣವಾಗಿ ಬಿಟ್ಟಿದ್ದಿತು. ರಾಮದಾಸನನ್ನು ಕಂಡು ಅವನಿಗೆ ಭಾವನೆಯ ವೇಗದಿಂದ ಮೈ ನಡುಗಿತು. ಮನೆಯವರು ರಾಮದಾಸನಿಗೆ ಸ್ವಲ್ಪ ಹಾಲನ್ನು ಕೊಟ್ಟರು. ಅವನು ಮತ್ತೆ ಅದನ್ನು ರೋಗಿಯೊಂದಿಗೆ ಹಂಚಿ ಕೊಂಡನು. ರಾಮದಾಸನು ಹೊರಡುವುದರಲ್ಲಿದ್ದನು. ಆ ಸಮಯದಲ್ಲಿ ಯಜ ಮಾನನು ಡ್ರೈವರನ್ನು ಕರೆದು ರಾಮದಾಸನು ಛತ್ತರಪುರದಲ್ಲಿ ಇರುವಷ್ಟು ಕಾಲವೂ ಕಾರನ್ನು ಕೇವಲ ಅವನ ಉಪಯೋಗಕ್ಕಾಗಿ ಅವನ ಬಳಿ ಇಟ್ಟುಕೊಂಡಿರ ಬೇಕೆಂದು ಆಜ್ಞೆಮಾಡಿದನು. ಅಲ್ಲದೆ ರಾಜಘಡಕ್ಕೆ ಹೋಗಿಬರಲು ಕಾರನ್ನು ಕಳುಹಿಸಿದುದಕ್ಕೆ ಭವಾನೀ ಪ್ರಸಾದನಿಂದ ಬಾಡಿಗೆಯನ್ನು ತೆಗೆದುಕೊಳ್ಳುವುದಿಲ್ಲ ವೆಂದನು.

ಅದುವರೆಗೆ ತನ್ನೊಂದಿಗೆ ಬಂದಿದ್ದ ಸ್ನೇಹಿತರನ್ನು ಅವರವರ ಸ್ಥಳಗಳಿಗೆ ಹಿಂದಿರುಗಬೇಕೆಂದೂ, ತನ್ನನ್ನೂ ರಾಮಚರಣದಾಸನನ್ನೂ ಕಾನ್ಪುರಕ್ಕೆ ಪ್ರಯಾಣ ಮಾಡಲು ಬಿಡಬೇಕೆಂದೂ ರಾಮದಾಸನು ಬೇಡಿದನು. ಅದೇ ಕಾರು ಇವರನ್ನು ಹರ್‌ಪಾಲ್ಪುರ ಸ್ಟೇಷನ್ನಿಗೆ ಕರೆದುಕೊಂಡು ಹೋಯಿತು. ಅಲ್ಲಿ ಇವರು ರೈಲನ್ನು ಏರಿ ವಿಶುದ್ಧಾನಂದರ ಭೇಟಿ ಪಡೆಯಲು ಬಾಂದಕ್ಕೆ ಪ್ರಯಾಣಮಾಡಿದರು.

# ಅಧ್ಯಾಯ ೨೪

## ಕಾನ್ಪುರ—ಉಗಿ ದೋಣಿಯಲ್ಲಿ

### (i) ದೇವರು ಉಂಟು ಎಂಬುದನ್ನು ಚರ್ಚೆಯಿಂದ ಸ್ಥಾಪಿಸಲು ಸಾಧ್ಯವಿಲ್ಲ

ರಾಮುದಾಸನು ಬಾಂದದಲ್ಲಿ ಸಾಧು ವಿಶುದ್ಧಾನಂದರೊಂದಿಗೆ ಸುಮಾರು ಐದು ದಿನ ಇದ್ದನು. ರಾಮುದಾಸನನ್ನು ನೋಡಿ ವಿಶುದ್ಧಾನಂದರಿಗೆ ಅತ್ಯಂತ ಸಂತೋಷವಾಯಿತು. ಅವರು ರಾಮುದಾಸನನ್ನು ತಾವು ಬಳಸುತ್ತಿದ್ದ ಉನ್ನತಾಸನದಲ್ಲಿ ಕುಳ್ಳಿರಿಸಿ, ತಾವು ಎದುರಿಗೆ ನೆಲದಮೇಲೆ ಕುಳಿತು, ಯೋಗವಾಸಿಷ್ಠ ಗ್ರಂಥದ ಕೆಲವು ಭಾಗಗಳನ್ನು ಓದಿ, ಬಂಧವಿಮುಕ್ತನಾದ ಜೀವನ ಸ್ಥಿತಿಯ ಅದರಲ್ಲಿಯ ವರ್ಣನೆಯನ್ನು ರಾಮುದಾಸನ ಸ್ಥಿತಿಯೊಂದಿಗೆ ಹೋಲಿಸುತ್ತಿದ್ದರು, ಮತ್ತು "ಈ ಗ್ರಂಥದಲ್ಲಿ ವಿವರಿಸಿರುವ ಜೀವನ್ಮುಕ್ತನ ಬಾಳಿನ ಅಚ್ಚಿನಲ್ಲಿಯೇ ನಿಮ್ಮ ಬಾಳು ಬೆಳೆದಿದೆ'' ಎಂದು ಅತ್ಯಂತ ಹರ್ಷದಿಂದ ಉದ್ಗರಿಸುವರು. ಅವರು ರಾಮುದಾಸನನ್ನು ಊರೊಳಗೆ ಕರೆದುಕೊಂಡು ಹೋಗಿ ತಮ್ಮ ಶಿಷ್ಯರಿಗೆ ಪರಿಚಯಮಾಡಿಕೊಟ್ಟರು. ಮಹೋಬದ ಜಗನ್ನಾಥನು ರಾಮುದಾಸನನ್ನು ಕಾಣಲು ಅಲ್ಲಿಗೆ ಬಂದನು. ಮೂರನೆಯ ದಿವಸ ಮತ್ತೊಮ್ಮೆ ರಾಮುದಾಸನಿಗೆ ಜ್ವರ ಬಂದು ಒಂದು ರಾತ್ರಿ ಕಾಡಿಸಿತು.

ಒಂದು ಸಂಜೆ ಒಬ್ಬನು ಗುಡಿಸಿಲಿಗೆ ಓಡಿಬಂದು ಬಾಂದದಲ್ಲಿ ಆ ರಾತ್ರಿ ರಕ್ತಪಾತವಾಗುವ ಸಂಭವವಿದೆಯೆಂದು ಸಾಧುವಿಗೆ ತಿಳಿಸಿದನು. ಒಂದು ಮಹಮ್ಮದೀಯರ ಉತ್ಸವ, ಇನ್ನೊಂದು ಸ್ವಾಮಿ ಸತ್ಯದೇವ್ ಎಂಬುವರಿಂದ ಏರ್ಪಾಡಾದ ಹಿಂದೂ ಉತ್ಸವ, ಎರಡೂ ಒಂದೇ ಬೀದಿಯಲ್ಲಿ ಎದುರುಬದಿರಿಗೆ ಹೋಗಬೇಕಾಗಿದ್ದಿತು. ಎರಡು ಗುಂಪಿನಲ್ಲೂ ಹೋರಾಟಕ್ಕೆ ಸಿದ್ಧತೆ ನಡೆದಿದ್ದಿತು. ಎರಡು ಗುಂಪುಗಳೂ ದೊಣ್ಣೆಗಳನ್ನು ಸೇರಿಸಿದ್ದುವು. ಈ ಭಯಕಾರಕ ವರ್ತಮಾನವನ್ನು ಕೇಳಿ, ಸಾಧುವಿನ ಮೃದುಹೃದಯ ಕಲಕಿತು. ಅವರು ದೊಡ್ಡದೊಂದು ನಿಟ್ಟುಸಿರನ್ನು ಬಿಟ್ಟರು.

ಆಗ್ಗೆ ರಾಮುದಾಸನು ಹೇಳಿದನು: "ಮಹರಾಜ್! ವ್ಯಾಜ್ಯವೂ ಆಗುವುದಿಲ್ಲ, ರಕ್ತಪಾತವೂ ಆಗುವುದಿಲ್ಲ."

ಸಾಧು ರಾಮುದಾಸನ ಕಡೆ ತಿರುಗಿ ಮಂದಹಾಸದಿಂದ "ತಥಾಸ್ತು" ಎಂದರು. ಮತ್ತೆ ಮೊದಲಿನಂತೆ ಹರ್ಷಚಿತ್ತರಾದರು. ಹನ್ನೊಂದು ಗಂಟೆ ಸಮಯದಲ್ಲಿ ಊರಿನಿಂದ ಒಬ್ಬ ಸುದ್ದಿಗಾರನು ಬಂದು, ಉತ್ಸವಗಳು ಚೆನ್ನಾಗಿ ನಡೆದವೆಂದು ವರ್ತಮಾನ ತಂದನು. ಪಂಗಡಗಳಿಗೆ ಜಗಳವಾಗಲಿಲ್ಲ. ಅವರು ವ್ಯಾಜ್ಯಮಾಡದೆ ಒಂದೇ ದಾರಿಯಲ್ಲಿ ಒಬ್ಬರ ಪಕ್ಕದಲ್ಲೊಬ್ಬರು ಉತ್ಸವಮಾಡಿಕೊಂಡು ಹೋದರು.

ಆ ಕರುಣಾಳುವಾದ ಸಾಧು " ದೇವರು ದೊಡ್ಡವನು " ಎಂದು ಉಸುರಿದರು. ರಾಮದಾಸನು ಸಾಧುವಿನಿಂದ ಅಪ್ಪಣೆ ಪಡೆದು ರಾಮಚರಣದಾಸನೊಂದಿಗೆ ಬಾಂದಾವನ್ನು ಬಿಟ್ಟು ಕಾನ್ಪುರವನ್ನು ಸೇರಿದನು. ಅಲ್ಲಿ ರಾಮಚಂದ್ರಗುಪ್ತನು ಇವರನ್ನು ರೈಲ್ವೆ ಸ್ಟೇಷನ್ನಿನಲ್ಲಿ ಎದುರುಗೊಂಡನು. ಅವನು ಇವರಿಗೆ ಗಂಗಾ ತೀರದ ಒಂದು ಶಿವಮಂದಿರದಲ್ಲಿ ಬಿಡಾರಮಾಡಿದ್ದನು. ಇಲ್ಲಿ ರಾಮದಾಸನಿಗೆ ಪುನಃ ಜ್ವರ ಬಂದಿತು. ಗುಪ್ತನು ಆ ಸ್ಥಳದ ವಾಣಿಜ್ಯ ಶಿಕ್ಷಣದ ಕಾಲೇಜಿನಲ್ಲಿ ವಿದ್ಯಾರ್ಥಿ. ಈ ಕಾಲೇಜಿನಿಂದ ನೂರಾರು ವಿದ್ಯಾರ್ಥಿಗಳು ರಾಮದಾಸನನ್ನು ನೋಡಲು ಬಂದರು. ಅವನು ಅವರೊಡನೆ ಮಾತನಾಡುವುದಕ್ಕೆ ಜ್ವರ ಅಡ್ಡಿ ಯಾಗಲಿಲ್ಲ. ಅವರು ಅವನಿಗೆ ನಾನಾವಿಧವಾದ ಪ್ರಶ್ನೆಗಳನ್ನು ಹಾಕುತ್ತಿದ್ದರು. ರಾಮದಾಸನು ಅವರಿಗೆ ಕೂಡಲೆ ಉತ್ತರ ಕೊಡುತ್ತಿದ್ದನು.

ಒಂದು ರಾತ್ರಿ ಕೆಲವರು ವಿದ್ಯಾರ್ಥಿಗಳು ಒಬ್ಬನನ್ನು ಮುಖಂಡನನ್ನಾಗಿ ಮಾಡಿಕೊಂಡು ರಾಮದಾಸನನ್ನು ನೋಡಲು ಬಂದರು. ಅವರು ಅನಾತ್ಮವಾದದ ರೀತಿಯ ಚಾರ್ವಾಕ ಎಂಬ ಒಂದು ಮತದವರು. ಅವರ ಮುಖಂಡನು ರಾತ್ರಿ ಒಂದು ಗಂಟೆಯವರೆಗೂ " ದೇಹವೇ ಸರ್ವವೂ. ದೇಹಧಾರಣೆಯ ಉದ್ದೇಶ ಪ್ರಪಂಚದ ಸೌಖ್ಯಾನುಭವ. ಎಲ್ಲವೂ ಪ್ರಕೃತಿ ಮತ್ತು ಅದರ ಕಾರ್ಯ. ಜೀವ, ಆತ್ಮ ಅಥವ ಪ್ರಪಂಚವನ್ನು ನಡೆಯಿಸುವ ದೇವರು ಎಂಬ ವಸ್ತುವೇ ಇಲ್ಲ " ಎಂದು ವಾದಿಸಿದನು.

ರಾಮದಾಸನು ಅವನಿಗೆ ಕೊನೆಗೆ "ಅಯ್ಯಾ ಸ್ನೇಹಿತನೆ, ದೇವರು ಉಂಟು ಎಂಬುವ ವಿಚಾರವನ್ನು ನಿನಗೆ ರಾಮದಾಸನು ಬರಿಯ ಚರ್ಚೆಯ ಮೂಲಕ ತೋರಿಸಿಕೊಡಲಾರನು. ಅದು ಯಾರಿಂದಲೂ ಸಾಧ್ಯವಿಲ್ಲ. ರಾಮದಾಸನು ತನ್ನ ಸ್ವಾನುಭವದಿಂದ ದೇವರು ಇದ್ದೇ ಇದ್ದಾನೆಂಬುದನ್ನು ಧೈರ್ಯವಾಗಿ ಹೇಳಬಲ್ಲನು. ಆ ಅನುಭವ ನಿನಗೇ ದೊರೆಯುವವರೆಗೂ ನೀನು ದೇವರು ಇಲ್ಲ ಎನ್ನುವುದು ಸಹಜ. ಆದರೆ ನಿನಗೂ ದೇವರಲ್ಲಿ ನಂಬಿಕೆ ಉಂಟಾಗುವ ಕಾಲ ಬಂದೇ ಬರುತ್ತದೆ" ಎಂದನು.

ರಾಮದಾಸನು ಕಾನ್ಪುರದಲ್ಲಿ ಇದ್ದುದು ನಾಲ್ಕು ದಿವಸ ಮಾತ್ರ. ಲಲಿತಪುರ ದಿಂದ ತ್ರಿವೇಣೀ ಪ್ರಸಾದ ಒಂದು ಕಾಗದ ಬರೆದನು. ರಾಮದಾಸನು ಲಲಿತಪುರಕ್ಕೆ ಹಿಂದಿನಸಲ ಬಂದಾಗ ಆ ವಿಚಾರ ಅಲ್ಲಿಯ ಮುನಸೀಫರಿಗೆ ಗೊತ್ತಾಗದೆ ಅವರು ರಾಮದಾಸನ ದರ್ಶನ ಪಡೆಯಲಾಗಲಿಲ್ಲ, ಅವರು ರಾಮದಾಸನನ್ನು ಕಾಣಲು ಬಹಳ ಕುತೂಹಲರಾಗಿದ್ದಾರೆ, ಆದ್ದರಿಂದ ರಾಮದಾಸನು ಲಲಿತಪುರಕ್ಕೆ ಮತ್ತೆ ಬರಬೇಕೆಂದು ಕರೆಯುವುದಾಗಿದೆ, ಹೊರಟುಬರಬೇಕು, ಎಂದು ತ್ರಿವೇಣೀ ಪ್ರಸಾದನು ಅದರಲ್ಲಿ ವಿವರಿಸಿದ್ದನು. ಆದುದರಿಂದ ರಾಮಚರಣದಾಸನನ್ನು ಕರೆದು ಕೊಂಡು ರಾಮದಾಸನು ಮತ್ತೆ ಲಲಿತಪುರಕ್ಕೆ ಹೋದನು.

ರಾಮದಾಸನಿಗೆ ಜ್ವರ ಬರುತ್ತಲೇ ಇದ್ದಿತು. ಈ ಸಲ ಇವರು ಮುನಸೀಫರ ಮನೆಯಲ್ಲಿಳಿದುಕೊಂಡರು. ಅವರೂ ಅವರ ಪತ್ನಿಯೂ ಬಹಳ ಆದರವಂತರು. ಅವರು ರಾಮದಾಸನಿಗೆ ತಮ್ಮ ಮಗು ಎಂಬಂತೆ ಆರೈಕೆಮಾಡಿದರು. ಇಲ್ಲಿ ರಾಮದಾಸನು ಝಾನ್ಸಿಯ ರಾಮಕಿಂಕರನನ್ನೂ ಕಂಡನು.

ಎರಡು ದಿನಗಳನಂತರ ಇವರು ಲಲಿತಪುರವನ್ನು ಬಿಟ್ಟು ನೇರವಾಗಿ ಬೊಂಬಾಯಿಗೆ ಹೊರಟರು. ರೈಲಿನಲ್ಲಿ ಇವರಿಗೆ ತಾನೂ ಬೊಂಬಾಯಿಗೆ ಪ್ರಯಾಣ ಮಾಡುತ್ತಿದ್ದ ಒಬ್ಬ ಸಿಖ್‌ರವನು ದೊರೆತನು. ದಾರಿಯುದ್ದಕ್ಕೂ ಈತನು ರಾಮದಾಸನಿಗೆ ಬೇಕಾದದ್ದನ್ನೆಲ್ಲ ನೋಡಿಕೊಂಡು ಬಹಳ ಪ್ರೀತಿಯಿಂದ ಶುಶ್ರೂಷೆ ಮಾಡಿದನು. ಬೊಂಬಾಯಿ ಹತ್ತಿರ ಬರುವಾಗ್ಗೆ ಇವರು ಕುಳಿತಿದ್ದ ಗಾಡಿ ಈ ಮೂವರು ಹೊರತಾಗಿ ಬರಿದಾಗಿದ್ದಿತು. ರಾಮದಾಸನು ಒಂದು ಮೂಲೆಯಲ್ಲಿ ಕುಳಿತಿದ್ದನು. ರಾಮಚರಣದಾಸನು ಒಂದು ಕಿಟಕಿಯಲ್ಲಿ ಬಗ್ಗಿನೋಡುತ್ತಿದ್ದನು. ಗಾಡಿಯಲ್ಲಿ ಮೌನ. ಇದ್ದದಿದ್ದಹಾಗೆ, ರಾಮಚರಣದಾಸನು ರಾಮದಾಸನ ಬಳಿಗೆ ಹಾರಿಬಂದು ಆಶ್ಚರ್ಯವನ್ನು ತೋರ್ಪಡಿಸುತ್ತಾ,

“ಸ್ವಾಮಿಜಿ, ನನ್ನ ಕಿವಿಯಲ್ಲಿ ಯಾರೋ ಈಗತಾನೇ ರಾಮನಾಮವನ್ನು ಉಸುರಿದರು. ನನಗೆ ಸ್ಪಷ್ಟವಾಗಿ ಕೇಳಿಸಿತು. ಇದನ್ನು ಮಾಡಿದವರು ಯಾರು?'' ಎಂದು ಕೇಳಿದನು.

ರಾಮದಾಸನು “ರಾಮ, ರಾಮದಾಸನು ತನ್ನ ಸ್ಥಳವನ್ನು ಬಿಟ್ಟು ಕದಲಿಯೇ ಇಲ್ಲ. ಸಿಖ್ ಸ್ನೇಹಿತನೂ ಅಷ್ಟೇ. ನಾಮವನ್ನು ಉಸುರಿದ್ದು ರಾಮನೇ ಇರಬೇಕು. ಅವನ ವಿನಾ ಯಾರಿದ್ದಾರೆ?” ಎಂದು ಉತ್ತರಕೊಟ್ಟನು.

ಇವರು ವಿಕ್ಟೋರಿಯ ಟರ್ಮಿನಸ್‌ನಲ್ಲಿ ಸಂಜೀವರಾಯರನ್ನು ಕಂಡರು. ಆತ ಇವರಿಗಾಗಿ ಕಾದಿದ್ದರು. ಅಲ್ಲಿಂದ ಇವರು ಗಾಮ್‌ದೇವಿಯಲ್ಲಿ ಸಂಜೀವರಾಯರ ಮನೆಗೆ ಕುದುರೆಯ ಗಾಡಿಯಲ್ಲಿ ಹೋದರು.

## (ii) ದೇವರು ರಕ್ಷಕ

ಜ್ವರ ಪ್ರತಿ ಮೂರನೆಯ ದಿವಸವೂ ಸಾಯಂಕಾಲ ನಾಲ್ಕು ಗಂಟೆಯಿಂದ ರಾತ್ರಿ ಎಂಟು ಒಂಬತ್ತು ಗಂಟೆಯವರೆಗೂ ನಾಲ್ಕೈದು ಗಂಟೆ ಕಾಲ ಬರುತ್ತಲೇ ಇದ್ದಿತು. ಸಂಜೀವರಾಯರೂ ಅವರ ಕುಟುಂಬವೂ ರಾಮದಾಸನ ವಿಷಯವಾಗಿ ಕಳವಳಗೊಂಡರು. ಅನೇಕ ಸಲ ಜ್ವರದ ಗಡುವಿನ ದಿನ ಸಾಯಂಕಾಲದಲ್ಲಿ, ಅಲ್ಲಿ ಸೇರಿರುವ ಮಹಿಳೆಯರಿಗೆ ಭಕ್ತಿ ಮತ್ತು ವೈರಾಗ್ಯದ ವಿಚಾರವಾಗಿ ರಾಮದಾಸನು ಉಪನ್ಯಾಸ ಮಾಡುವನು. ಬಿ. ಆರ್. ರಾಜಮ್ ಅಯ್ಯರಿಂದ ರಚಿತವಾದ “ವೇದಾಂತ ವಿಹಾರ” (Rambles in Vedanta) ಎಂಬ ಗ್ರಂಥದಿಂದ ಭಾಗಗಳನ್ನು ಓದಿ ಹೇಳುವನು. ಈ ಪುಸ್ತಕದಿಂದ ಅಂತ್ಯಜ ಸಂತ ನಂದನ ಚರಿತ್ರೆ

ಯನ್ನು ಹೇಳುವಾಗ ರಾಮದಾಸನು ಆನಂದಪರವಶನಾಗುವನು. ನಂದನ ಚರಿತ್ರೆ ದೈವಜ್ಞಾನದಲ್ಲಿ ತೀರಾ ಮುಳುಗಿದ ಹರಿಜನ ಪಂಗಡದ ಸಂತನೊಬ್ಬನ ಅತುಲ ಭಕ್ತಿಯನ್ನು ವರ್ಣಿಸುತ್ತದೆ. ಈ ಚರಿತ್ರೆಯನ್ನು ಕೇಳಿದವರೂ ಆನಂದಪಡುತ್ತಿದ್ದರು.

ರಾತ್ರಿ ಕಾಲದಲ್ಲಿ ಜ್ವರ ಕಾಯುತ್ತಿದ್ದಾಗಲೂ, ರಾಮದಾಸನು ಪ್ರಯಾಸ ಪಡದೆ ದೀರ್ಘಕಾಲ ಭಕ್ತಿಯಮಹಿಮೆ ಮತ್ತು ಭಗವನ್ನಾಮದ ಅಮೇಯವಾದ ಶಕ್ತಿಯ ವಿಚಾರವನ್ನು ವಿವರಿಸುತ್ತಿದ್ದನು. ರಾಮದಾಸನಮೇಲೆ ವಿಶೇಷ ಪ್ರೀತಿ ಇದ್ದ ಒಬ್ಬ ಡಾಕ್ಟರು ಮಿತ್ರರು ಇವನಲ್ಲಿಗೆ ಬರುತ್ತಿದ್ದರು. ರಾಮದಾಸನ ಜ್ವರವನ್ನು ನಿಲ್ಲಿಸಲು ಒಂದು ಇಂಜಕ್ಷನ್ ಕೊಡುವುದಾಗಿ ಸೂಚಿಸಿದರು. ಇದು ರಾಮದಾಸನಿಗೆ ಇಷ್ಟವಾಗಲಿಲ್ಲ. ಆದರೆ ಸಂಜೀವರಾಯರೂ ಅವರ ಹೆಂಡತಿಯೂ ಒತ್ತಾಯ ಪಡಿಸಿದರು. ಅವನು ಏನಾದರೂ ಔಷಧ ತೆಗೆದುಕೊಳ್ಳಬೇಕೆಂದು ಅವರ ಅಪೇಕ್ಷೆ. ಅವರ ಬಲವಂತಕ್ಕೋಸ್ಕರ ಇವನು ಪ್ರತಿ ದಿವಸವೂ, ಎರಡು ಹೊತ್ತು ಒಂದು ಕಹಿ ಔಷಧವನ್ನು ಕುಡಿದನು. ಕುಡಿದ ಒಂದೊಂದು ಸಲವೂ ಔಷಧವು ಎಷ್ಟು ಸಿಹಿಯಾಗಿದೆ ಎಂದು ಹೇಳುತ್ತಿದ್ದನು. ಇದನ್ನು ಕೇಳಿ ಸಂಜೀವರಾಯರ ಪತ್ನಿಗೆ ಆಶ್ಚರ್ಯವಾಗುತ್ತಿದ್ದಿತು. ರಾಮದಾಸನು ಸುಮ್ಮನೆ ನಕ್ಕುಬಿಡುತ್ತಿದ್ದನು. ಜ್ವರ ಬರುವುದೇನೋ ತಪ್ಪಲಿಲ್ಲ.

ರಾಮದಾಸನು "ಜ್ವರ ಬಿಡುವುದಿಲ್ಲವೆನ್ನುತ್ತಿದೆ. ನೀವು ಅದನ್ನು ಆದರದ ಅತಿಥಿಯಾಗಿ ಮಾಡಿ ಒಳ್ಳೆಯ ತಿಂಡಿ ತಿನ್ನುಸುತಿದೀರಿ. ದಿನಕ್ಕೆ ಮೂರು ನಾಲ್ಕು ಸಲ ರುಚಿರುಚಿಯಾದ ಮಿಠಾಯಿ ಮತ್ತು ಇತರ ಆಹಾರವನ್ನು ಕೊಡುತ್ತಿರುವಷ್ಟು ಕಾಲ ಕಹಿಯಾದ ಸ್ವಲ್ಪ ಔಷಧದಿಂದ ಜ್ವರಕ್ಕೆ ಏನೂ ಆಗುವುದಿಲ್ಲ. ನಿಮಗೆ ಬೇಡದ ಅತಿಥಿಗೆ ತಿಂಡಿ ಕೊಡುತ್ತಿರುವಷ್ಟು ಕಾಲವೂ ಅವನು ಖಂಡಿತ ಇದ್ದೇ ಇರುತ್ತಾನೆ. ಆಹಾರವನ್ನು ತಪ್ಪಿಸಿದ ಕೂಡಲೇ ನೀವು ಹೇಳದೆಯೇ ಮಾಯವಾಗುತ್ತಾನೆ. ಆದುದರಿಂದ ರಾಮದಾಸನಿಗೆ ಕೆಲವು ಕಾಲ ಉಪವಾಸ ಮಾಡಲು ಅವಕಾಶ ಕೊಡಿ. ಅವನು ಬರಿ ಹಾಲಿನಲ್ಲಿ ಜೀವಿಸಿರುತ್ತಾನೆ" ಎಂದನು. ವಾತ್ಸಲ್ಯವಂತರಾದ ಆ ದಂಪತಿಗಳು ಮೊದಲು ಇದಕ್ಕೆ ಒಪ್ಪಲಿಲ್ಲ. ಕೊನೆಗೆ ಸಮ್ಮತಿಸಿದರು. ನಾಲ್ಕು ದಿವಸ ಉಪವಾಸವಾಯಿತು. ಅತಿಥಿಜ್ವರ ಪಲಾಯನ ಮಾಡಿದನು.

ಸೊಲ್ಲಾಪುರದ ಜಿಲ್ಲೆಯಿಂದ ರಾಮದಾಸನಿಗೆ ಆಹ್ವಾನಗಳು ಬಂದುವು. ಆದರೆ ರಾಮದಾಸನು ಮಂಗಳೂರು ಕಡೆ ಪ್ರಯಾಣಮಾಡಬೇಕೆಂದು ರಾಮನ ಇಚ್ಛೆ ಇದ್ದಿತು. ಆದ್ದರಿಂದ ರಾಮದಾಸನು ರಾಮಚರಣದಾಸನೊಂದಿಗೆ ಮಂಗಳೂರ ರೇವಿಗೆ ಪ್ರಯಾಣಮಾಡುವ ಹಡಗನ್ನೇರಿದನು. ರಾಮಚರಣದಾಸನು ಹಡಗಿನಲ್ಲಿ ತಿಂಡಿಯ ಅಂಗಡಿಗಳನ್ನು ಹುಡುಕುವುದರಲ್ಲಿ ನಿರತನಾಗಿದ್ದನು. ಒಂಭತ್ತು ಗಂಟೆ ಹೊತ್ತಿಗೆ ಹಸನ್ಮುಖಿಯಾಗಿ ಬಂದು ಹೀಗೆಂದನು.

"ಸ್ವಾಮೀಜಿ, ಹಡಗಿನ ಮೇಲೆ ಕಾಫಿ ಹೋಟೆಲಿದೆ. ಅದರಲ್ಲಿ ಎಲ್ಲ ರೀತಿಯ ತಿಂಡಿ ಸಿಕ್ಕುತ್ತವೆ. (ಹೀಗೆ ಹೇಳುವಾಗ ಅವನ ಬಾಯಲ್ಲಿ ತಾನಾಗಿ ನೀರೂರಿತು; ಮುಂದೆ ಮಾತು ಹೊರಡುವುದಕ್ಕೆ ಮುಂಚೆ ಅವನು ಆ ಅಮೃತವನ್ನು ನುಂಗ ಬೇಕಾಯಿತು) ಮುಂಚೆಯೇ ತಿಳಿಸಿದರೆ ಊಟವನ್ನೂ ಹಾಕುವುದಾಗಿ ಹೋಟೆಲಿ ನವನು ಹೇಳುತ್ತಾನೆ. ಒಂದು ಊಟಕ್ಕೆ ಆರು ಆಣೆ ಮಾತ್ರವೆ."

ರಾಮುಚರಣದಾಸನಲ್ಲಿ ಸಂಜೀವರಾಯರು ದಾರಿಯಲ್ಲಿ ಮತ್ತು ಇಳಿದ ವೇಳೆಯ ಖರ್ಚಿಗಾಗಿ ಕೊಟ್ಟಿದ್ದ ಹಣವಿದ್ದಿತು. ದುಡ್ಡಿಗೇನೂ ಅಭಾವವಿಲ್ಲವೆಂದು ತೋರಿಸುವುದಕ್ಕೆ ಅವನು ನಾಣ್ಯಗಳ ಶಬ್ದಮಾಡಿದನು. ರಾಮುದಾಸನು ನಗುತ್ತಾ "ಸರಿ, ಹಾಗಾದರೆ ಮಧ್ಯಾಹ್ನಕ್ಕೆ ಎರಡು ಊಟಕ್ಕೆ ಹೇಳು, ಬಜಾಯಿಸು" ಎಂದು ಉತ್ತರಕೊಟ್ಟನು.

ರಾಮುಚರಣದಾಸನು ಸಂತೋಷದಿಂದ ಹಾರುತ್ತಾ ಹೋಟೆಲ್ ಕಡೆ ಹೋದನು. ಅಡಿಗೆಯ ವಿಷಯ ಸ್ವಂತವಾಗಿ ಮೇಲ್ವಿಚಾರಣೆ ತೆಗೆದುಕೊಂಡನು. ಅಡಿಗೆಯಲ್ಲಿ ರಾಮುಚರಣದಾಸನು ಸ್ವಲ್ಪ ಚತುರ ಪಂಕ್ತಿಗೆ ಸೇರಿದವನು. ರಾಮು ದಾಸನೊಂದಿಗೆ ದೂರದ ಪ್ರಯಾಣ ಮಾಡುವ ವೇಳೆ ಅವನು ರಾಮುದಾಸನ ಮೇಲೆ ಅವನ ಪಾಕಕಲೆಯ ಪ್ರಯೋಗವನ್ನು ಮಾಡುತ್ತಿದ್ದನು.

ಹನ್ನೆರಡು ಗಂಟೆಯ ಹೊತ್ತಿಗೆ ಅವನು ರಾಮುದಾಸನನ್ನು ಊಟಕ್ಕೆ ಕರೆ ಯಲು ಬಂದನು. ಊಟ ಸಾಮಾನ್ಯವಾಗಿದ್ದಿತು. ಆದರೂ ಆರೋಗ್ಯಕರವಾಗಿ ದ್ದಿತು. ಊಟವಾದನಂತರ ರಾಮುದಾಸನು ಹಿಂತಿರುಗಿದನು. ರಾಮುಚರಣದಾಸನು ಯಾರ ಸಂಗಡಲೋ ಮಾತನಾಡುತ್ತ ಹಿಂದೆ ನಿಂತನು. ಸ್ವಲ್ಪ ಹೊತ್ತಿನ ಮೇಲೆ ಅವನು ಬಂದನು. ಆದರೆ ಅವನ ಮುಖ ಈಗ ಚಿಂತೆಯಿಂದ ಕೂಡಿದ್ದಿತು.

"ನಿನಗೇನಾಗಿದೆ?" ಎಂದು ರಾಮುದಾಸನು ಕೇಳಿದನು. ರಾಮುಚರಣ ದಾಸನು "ತಿಂಡಿ ಅಂಗಡಿ ಹತ್ತಿರ ನಿಂತಿದ್ದ ಕೆಲವರು ನಾವು ಊಟಮಾಡಿದ್ದನ್ನು ನೋಡಿ 'ನೀವು ಸಾಧುಗಳಾಗಿದ್ದರೂ ಊಟದ ವಿಚಾರದಲ್ಲಿ ಬಹಳ ಶ್ರದ್ಧೆವಹಿಸುವಿರಿ. ನಿಮ್ಮ ಸಾಧು ಜೀವನದಲ್ಲಿ ಊಟ ಪ್ರಧಾನವಾದ ಸಾಧನವಾಗಿ ಕಾಣುತ್ತದೆ' ಎಂದು ಹೇಳಿದರು" ಎಂದನು.

ರಾಮುದಾಸನಿಗೆ ತಡೆಯಲಾರದ ನಗು ಬಂದಿತು. ಅವನು "ರಾಮು, ಊಟ ರುಚಿಯಾಗಿದ್ದಿತು. ಅದೇ ರುಚಿಯನ್ನು ಅವರ ಮಾತಿನಲ್ಲೂ ಏಕೆ ಕಾಣಬಾರದು" ಎಂದು ಸಮಾಧಾನ ಹೇಳಿದನು.

ರಾಮುಚರಣದಾಸನು ಪುನಃ ಊಟಕ್ಕೆ ಹೇಳಲಿಲ್ಲ. ಬಹುಶಃ ಆ ಜನರ ಮಾತಿನ ಕಹಿ, ಊಟದ ರುಚಿಗಿಂತ ಹೆಚ್ಚೆನ್ನಿಸಿತು.

ದಾರಿಯಲ್ಲಿ ಹಡಗು ಇನ್ನೂ ಹೋಗುತ್ತಿದ್ದಾಗ ಇಬ್ಬರು ಮಾತೆಯರು ಅವಳಿ ಜವಳಿ ಮಕ್ಕಳನ್ನು ಹಡೆದರು. ಅವರು ಮೂರನೆಯ ತರಗತಿ ಪ್ರಯಾಣಿಕರು.

ಹೆರಿಗೆ ಹಡಗಿನ ಕೆಳಗಿನ ಅಂತಸ್ತಿನಲ್ಲಿಯೇ ಆಯಿತು. ಪ್ರಯಾಣಿಕರಲ್ಲಿ ಒಬ್ಬ ಡಾಕ್ಟರೂ ಮತ್ತು ಸೂಲಗಿತ್ತಿಯೂ ಇದ್ದರು. ಅವರು ಆ ಮಾತೆಯರನ್ನು ನೋಡಿಕೊಂಡರು. ಸಮುದ್ರ ಮಧ್ಯದಲ್ಲಿ ಅಂತಹ ಸನ್ನಿವೇಶಗಳಲ್ಲಿ ಕೂಡ ಭಗವಂತನು ಅವಶ್ಯಕವಾದ ಸಹಾಯವನ್ನು ಒದಗಿಸುತ್ತಾನೆ. ಆದುದರಿಂದಲೇ ಅವನಿಗೆ ರಕ್ಷಕನೆಂಬ ಬಿರುದು ಬಂದಿದೆ.

ಮಂಗಳೂರನ್ನು ಮುಟ್ಟಿ ರಾಮದಾಸನೂ ರಾಮಚರಣದಾಸನೂ ಸೀತಾರಾಮರಾಯರ ಮನೆಯಲ್ಲಿಳಿದುಕೊಂಡರು. ಕಾಸರಗೋಡಿನಿಂದ ರಾಮದಾಸನ ಪೂರ್ವಾಶ್ರಮದ ಸಂಬಂಧಿ ಭವಾನೀ ಶಂಕರರಾಯರ ಮನೆಯಲ್ಲಿ ನಡೆಯುವ ನಾಮ ಸಪ್ತಾಹದ ಕೊನೆಯ ದಿವಸಕ್ಕೆ ಬರಬೇಕೆಂದು ಆಹ್ವಾನ ಬಂದಿತು. ಅವರೂ ಅವರ ಕುಟುಂಬದವರೂ ಒಂದು ವಾರದಲ್ಲಿ ರಾಮಮಂತ್ರವನ್ನು ಹದಿಮೂರು ಲಕ್ಷ ಸಲ ಜಪ ಮಾಡಬೇಕೆಂದು ನಿರ್ಧರಿಸಿದ್ದರು. ಜಪದಲ್ಲಿ ಮಕ್ಕಳೂ ಸೇವಕರೂ ಭಾಗಿಗಳಾಗಿದ್ದರು.

ಈ ಸಮಯದಲ್ಲಿ ಮಂಗಳೂರಿನಲ್ಲಿ ರಾಮದಾಸನ ಬಳಿಗೆ ಸವೂರ ಶಂಕರರಾಯರು ಬಂದರು. ಇವರು ಆಂಗ್ಲ ಪದವೀಧರರು; ಆಗ ಮದರಾಸು ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ಇಷ್ಟು ವಿದ್ಯಾವಂತರೂ ಸಂಪನ್ನರೂ ಆಗಿದ್ದರೂ ಇವರು ಸರಳ ನಮ್ರ ಭಕ್ತಜೀವರು. ಇವರಿಗೆ ಪ್ರಥಮ ಸಂದರ್ಶನದಲ್ಲಿಯೇ ರಾಮದಾಸನ ಮೇಲೆ ಪ್ರೀತಿಯುಂಟಾಗಿ, ಇವರು ಅನೇಕ ಸಲ ಅವನ ಸಹವಾಸವನ್ನು ಇಚ್ಛಿಸಿದರು. ದೇವರ ವಿಚಾರವನ್ನು ಎತ್ತಿದ ಕೂಡಲೇ ಇವರಿಗೆ ಉದ್ರೇಕ ಉಂಟಾಗಿ ಕಣ್ಣಿನಲ್ಲಿ ನೀರು ಬರುತ್ತಿದ್ದಿತು. ಇವರು ನಾಮ ಸಪ್ತಾಹದಲ್ಲಿ ರಾಮದಾಸನೊಂದಿಗೆ ಭಾಗಿಯಾದರು. ಈ ಸಂದರ್ಭದಲ್ಲಿ ರಾಮದಾಸನು ಎರಡು ಮೂರು ದಿವಸ ಕಾಲ ಅತ್ಯಂತ ಆನಂದದಲ್ಲಿ ಇದ್ದನು. ಜಪ ಹದಿನೈದು ಲಕ್ಷಕ್ಕೆ ಮೀರಿತು. ಜಪದ ಸಂಖ್ಯೆಯನ್ನು ಸಾಧ್ಯವಾದ ಮಟ್ಟಿಗೂ ಏರಿಸಲು ಚಿಕ್ಕಮಕ್ಕಳು ಕೂಡ ತೋರಿಸಿದ ಶ್ರದ್ಧೆ ಸ್ತೋತ್ರಾರ್ಹವಾಗಿದ್ದಿತು.

ನಾಮಸಪ್ತಾಹದ ಕಾಲದಲ್ಲಿ ರಾಮಚರಣದಾಸನೂ ಇದ್ದನು. ರಾಮದಾಸನು ಅವನಿಗೆ ಮಂಗಳೂರಿಗೆ ಹೋಗಿ ನಿರ್ಜನ ಪ್ರದೇಶದಲ್ಲಿ ಜಪವನ್ನೂ ಧ್ಯಾನವನ್ನೂ ಮಾಡುವಂತೆ ತಿಳಿಸಿದನು. ಆವನು ಆ ಪ್ರಕಾರ ಮಂಗಳೂರಿಗೆ ಹೊರಟು ಹೋದನು.

ಕಲ್ಯಾಣಪುರದ ಒಬ್ಬ ಧರ್ಮಾತ್ಮನು ತನ್ನ ಮೊಮ್ಮಗಳಿಗೆ ಖಾಯಿಲೆಯಾಗಿದ್ದುದರಿಂದ ಈ ಕಾಲದಲ್ಲಿ ಕಾಸರಗೋಡಿನಲ್ಲಿ ಇದ್ದನು. ಅವನು ರಾಮದಾಸನನ್ನು ಆ ಮಗುವನ್ನು ನೋಡಲು ಕರೆದುಕೊಂಡು ಹೋದನು. ಆ ಚಿಕ್ಕ ಹುಡುಗಿಗೆ ರಾಮದಾಸನ ಮೇಲೆ ತುಂಬಾ ಪ್ರೀತಿ. ಅದು ರಾಮದಾಸನನ್ನು ನೋಡಿ ತುಂಬಾ ಆನಂದಪಟ್ಟಿತು. ಅದು ತನ್ನ ಅನುಭವವಾದ ರೀತಿಯಲ್ಲಿ ಹಿಂದಣ ರಾತ್ರಿ

ಕನಸಿನಲ್ಲಿ ರಾಮದೇವರ ಮತ್ತು ಸೀತಾಮ್ಮನವರ ದರ್ಶನವಾಯಿತೆಂದು ತಿಳಿಸಿತು. ಈ ಮಗುವಿಗೆ ಆಮೇಲೆ ಕೆಲ ದಿನದಲ್ಲಿಯೇ ಗುಣವಾಯಿತು.

ರಾಮದಾಸನು ಆಗಾಗ್ಗೆ ಗುರುದೇವನ ಬಳಿಗೆ ಹೋಗುತ್ತಿದ್ದನು. ವಯಸ್ಸಿನ ದೌರ್ಬಲ್ಯದಿಂದ ಗುರುದೇವನ ದೇಹನಿತ್ರಾಣ ಮತ್ತು ಕೃಶ ಆಗಿದ್ದಿತು. ಅವನು ತನ್ನ ಮಗ ಆನಂದರಾಯನೊಂದಿಗೆ ವಾಸಮಾಡುತ್ತಿದ್ದನು. ಆಗ್ಗೆ ಗುರುದೇವನಿಗೆ ಎಂಬತ್ತು ವರ್ಷಕ್ಕೆ ಮೇಲ್ಪಟ್ಟ ವಯಸ್ಸಾಗಿದ್ದಿತು. ಅವನ ಮನಸ್ಸು ತುಂಬ ಶಾಂತವಾಗಿ ಸಮಾಧಾನವಾಗಿದ್ದಿತು. ಅವನ ಪಾಲಿಗೆ ಜೀವನದ ಚಿಂತೆಗಳು ಮುಗಿದಿದ್ದವು. ರಾಮದಾಸನಿಗೆ ಎರ್ನಾಕುಲಂ ಸಂಜೀವರಾಯನಿಂದ ಒಂದು ಆಹ್ವಾನ ಬಂದು ಅವನು ಕಾಸರಗೋಡಿನಿಂದ ಆ ಸ್ಥಳವನ್ನು ಕುರಿತು ಪ್ರಯಾಣ ಮಾಡಿದನು.

---

# ಅಧ್ಯಾಯ ೨೫.

## ಎರ್ನಾಕುಲಂ

### (i) ಪಶುಪಕ್ಷಿಗಳ ಸ್ನೇಹಿತ

ರಾಮದಾಸನು ಷೋರನೂರುನಲ್ಲಿ ಸಂಜೀವರಾಯನನ್ನುಕಂಡನು. ಆತನು ರಾಮದಾಸನನ್ನು ಕರೆದುಕೊಂಡು ಹೋಗಲು ಬಂದಿದ್ದನು. ಮೊದಲು ಕೆಲವುದಿವಸ ರಾಮದಾಸನು ಅವರ ಮನೆಯಲ್ಲಿ ನಿಂತನು. ಆಗ ಅಂಜನ್‌ಗಾಮಿನ ಮಾಧವ ರಾವ್ ಕುಲಕರ್ಣಿಯಿಂದ ಪ್ರಯಾಣದ ಖರ್ಚಿಗೆ ದುಡ್ಡು ಮತ್ತು ತಂತೀ ವಾರ್ತೆ ಬಂದುವು. ಮಾಧವರಾಯನು ತನ್ನ ಮನೆಯಲ್ಲಿ ವರ್ಷವರ್ಷ ನಡೆಯುವ ಉತ್ಸವಕ್ಕೆ ಬರಬೇಕೆಂದು ಪ್ರಾರ್ಥಿಸಿದ್ದನು. ಎರ್ನಾಕುಲಂಗೆ ಸೇರಿದ ಮೇಲೆಯೂ ಮಲೇರಿಯ ಜ್ವರ ಮತ್ತೆ ಮತ್ತೆ ಬರುತ್ತಿದ್ದುದರಿಂದ ರಾಮದಾಸನಿಗೆ ಆರೋಗ್ಯ ಅಷ್ಟೇನೂ ಚೆನ್ನಾಗಿರಲಿಲ್ಲ. ಆದ್ದರಿಂದ ಇಲ್ಲಿಯ ಮಿತ್ರರೆಲ್ಲ ದೂರದೇಶವಾದ ಸೊಲ್ಲಾಪುರಕ್ಕೆ ರಾಮದಾಸನು ಪ್ರಯಾಣಮಾಡಕೂಡದೆಂದು ಹಟಮಾಡಿ ತಡೆದರು. ರಾಮದಾಸನು ಅವರ ತೀರ್ಮಾನಕ್ಕೆ ತಲೆಬಾಗಬೇಕಾಯಿತು. ದುಡ್ಡನ್ನು ಹಿಂದಕ್ಕೆ ಕಳುಹಿಸಿದ್ದಾಯಿತು. ಮತ್ತು ರಾಮದಾಸನ ದೇಹಸ್ಥಿತಿ ಸರಿಯಾಗಿರಲಿಲ್ಲವಾದುದರಿಂದ ಅವನು ಪ್ರಯಾಣಮಾಡಲು ಸಾಧ್ಯವಿಲ್ಲ, ಸಂಪೂರ್ಣ ವಿಶ್ರಾಂತಿ ಅವಶ್ಯಕವಾಗಿದೆ ಎಂದು, ಸ್ನೇಹಿತರು ಮಾಧವರಾಯನಿಗೆ ಒಟ್ಟಾಗಿ ಒಂದು ಕಾಗದವನ್ನು ಬರೆದು ಹಾಕಿದರು.

ರಾಮದಾಸನು ತನ್ನನ್ನು ನೋಡಬಯಸುವ ಜನರು ಬಂದು ತನ್ನ ಸಂಗಡ ಮಾತನಾಡಲು ಅನುಕೂಲಿಸುವಂತೆ ಊರ ಹೊರಗೆ ಒಂದು ಮನೆಯನ್ನು ಮಾಡಿ ಕೊಡಬೇಕೆಂದು ಸಂಜೀವರಾಯನಿಗೆ ತಿಳಿಸಿದನು. ಬೇಗನೆಯೇ ಊರಾಚೆ ಒಂದೂ ವರೆ ಮೈಲಿಯ ದೂರದಲ್ಲಿ ಒಂದು ಮನೆ ಗೊತ್ತಾಯಿತು. ಈ ಮನೆಗೆ ಹೋಗಲು ನಿಶ್ಚಯವಾಗಿದ್ದದರ ಹಿಂದಣ ದಿನ ಒಬ್ಬ ನಿಷ್ಠನಾದ ಬ್ರಾಹ್ಮಣ ಮಿತ್ರನು ರಾಮ ದಾಸನನ್ನು ನೋಡಲು ಸಂಜೀವರಾಯನ ಮನೆಗೆ ಬಂದನು. ರಾಮದಾಸನು ಮುಂದಣ ಕೊಟಡಿಯಲ್ಲಿ ಬಾಗಿಲಕಡೆ ಮುಖಮಾಡಿಕೊಂಡು ಒಂದು ಕುರ್ಚಿಯ ಮೇಲೆ ಕುಳಿತಿದ್ದನು. ಆಗ ಬೆಳಗಿನ ಸುಮಾರು ಎಂಟು ಗಂಟೆ. ಆ ಬ್ರಾಹ್ಮಣನು ಒಂದು ಮೆಟ್ಟಲನ್ನು ಹತ್ತಿ, ತಟ್ಟನೆ ತಡೆದು ರಾಮದಾಸನನ್ನು ನೆಟ್ಟಿಸಿ ನೋಡುತ್ತಾ ಬೊಂಬೆಯ ಹಾಗೆ ನಿಂತನು. ಅವನ ಕಣ್ಣೇ ದೊಡ್ಡವು. ಅವು ರೆಪ್ಪೆ ಹೊಡೆಯದೆ ರಾಮದಾಸನ ಕಡೆ ನೆಟ್ಟು ನೋಡುತ್ತಿದ್ದುವು. ಒಂದೆರಡು ನಿಮಿಷದ ಮೇಲೆ ಆತನು ಒಳಕ್ಕೆ ಬಂದು, ರಾಮದಾಸನ ಬಳಿ ಕುರ್ಚಿಯ ಮೇಲೆ ಕುಳಿತನು. ಇನ್ನೂ ರಾಮದಾಸನ ಕಡೆ ದೃಷ್ಟಿಸಿ ನೋಡುತ್ತಲೇ ಇದ್ದನು. ಐದು ನಿಮಿಷಗಳ ಕಾಲ ಮಾತಿರಲಿಲ್ಲ. ನಂತರ ಆತನು ಬಾಯಿ ತೆರೆದನು.

"ಈಗ ನಾನು ಮೆಟ್ಟಲುಮೇಲೆ ನಿಂತು ನಿಮ್ಮನ್ನು ದೃಷ್ಟಿಸಿ ನೋಡುತ್ತ ಇದ್ದ ಕಾರಣ ಗೊತ್ತೆ? ಹೇಳುತ್ತೇನೆ ಕೇಳಿ. ನನಗೆ ಒಂದು ವಿಚಿತ್ರ ದೃಶ್ಯ ಕಾಣಿಸಿತು. (ನನ್ನ ದೃಷ್ಟಿ ನಿಮ್ಮ ಮೂರ್ತಿಯ ಮೇಲೆ ಬಿದ್ದೊಡನೆ ನಿಮ್ಮ ದೇಹದ ಸುತ್ತ ಒಂದು ಪ್ರಕಾಶವಾದ ಜ್ಯೋತಿಯನ್ನು ಕಂಡೆನು. ಈ ಬೆಳಕು ಸ್ವಚ್ಛವಾಗಿ ಕಣ್ಣನ್ನು ಕೋರೈಸುತ್ತಿದ್ದಿತು.) ಇದನ್ನು ನೋಡಿ ಸ್ತಬ್ಧನಾದೆ. ಪ್ರಭೆ ಕೆಲವು ಕ್ಷಣಮಾತ್ರ ವಿದ್ದು ಅದೃಶ್ಯವಾಯಿತು. ಅನಂತರ ನಾನು ಒಳಕ್ಕೆ ಬಂದೆ" ಎಂದು ಹೇಳಿದನು.

ರಾಮದಾಸನು ಊರಹೊರಗಿನ ಮನೆಗೆ ಹೋದನು. ಅದರಲ್ಲಿ ಮೂರು ಕೊಟಡಿ, ಮುಂದುಗಡೆ ಒಂದು ಕೈಸಾಲೆ ಇದ್ದುವು. ಮನೆ ಒಂದು ತೆಂಗಿನ ತೋಟದ ಮಧ್ಯದಲ್ಲಿದ್ದಿತು. ಎರ್ನಾಕುಲಂ ಗ್ರಾಮ ಮರಳು ಪ್ರದೇಶ; ಅರಬ್ಬೀ ಸಮುದ್ರದ ಪಕ್ಕದಲ್ಲಿದೆ. ಈ ತೀರ ಅಂದವಾದ ತೆಂಗಿನ ತೋಟಗಳಿಂದ ಚಿತ್ರಿತವಾಗಿದೆ. ಇಲ್ಲಿ ತೆಂಗೇ ಮುಖ್ಯವಾದ ಬೆಳೆ. ಇದರಿಂದ ಎಣ್ಣೆಯನ್ನೂ ಇತರ ಆಹಾರ ಪದಾರ್ಥಗಳನ್ನೂ ತೆಗೆದು ಹೆಚ್ಚು ಪ್ರಮಾಣದಲ್ಲಿ ಹೊರಗಡೆಗೆ ಕಳುಹಿಸಿಕೊಡುತ್ತಾರೆ.

ಸಂಜೆಯಲ್ಲೂ ಬೆಳಗಾಗಲೂ ಅನೇಕರು ರಾಮದಾಸನ ಆಶ್ರಮಕ್ಕೆ ಅವನನ್ನು ನೋಡುವುದಕ್ಕೂ ಅವನೊಡನೆ ಸಂಭಾಷಣೆ ಮಾಡುವುದಕ್ಕೂ ಬರುತ್ತಿದ್ದರು. ಅವರು ಧರ್ಮದ ವಿಷಯವಾಗಿ ಪ್ರಶ್ನೆ ಹಾಕುತ್ತಿದ್ದರು. ರಾಮದಾಸನು ತನ್ನ ಅನುಭವದ ಸಹಾಯದಿಂದ ಆ ಸಂಗತಿಗಳನ್ನು ವಿವರಿಸಲು ಯತ್ನಿಸುತ್ತಿದ್ದನು. ದೊಡ್ಡ ದೊಡ್ಡ ಸರ್ಕಾರಿ ಅಧಿಕಾರಿಗಳು, ವಕೀಲರು, ಅಧ್ಯಾಪಕರು ಅವನಿಗೆ ತಮ್ಮ ಸಹವಾಸ ಸುಖವನ್ನು ನೀಡುತಲಿದ್ದರು. ರಾಮದಾಸನಿದ್ದುದು ಕ್ರೈಸ್ತರು ವಾಸಿಸುವ ಸ್ಥಳ.

ಆ ಜನರ ಕೋಳಿಗಳು, ಮೇಕೆಗಳು ಆ ಸುತ್ತ ಓಡಾಡುತ್ತ ನಿರಾತಂಕವಾಗಿ ಇವನಿದ್ದ ಮನೆಯೊಳಕ್ಕೆ ಬರುತ್ತಿದ್ದುವು. ಅವನು ಪ್ರೇಕ್ಷಕರು ತನಗೆ ಕೊಟ್ಟು ಹೋಗುವ ಬಾಳೆಹಣ್ಣು ಧಾನ್ಯಗಳನ್ನು ಅವಕ್ಕೆ ತಿನ್ನಿಸುತ್ತಿದ್ದನು. ಗರ್ಭವಾಗಿದ್ದ ಕೋಳಿಗಳು ಮಧ್ಯಾಹ್ನದ ಹೊತ್ತು ಅವನ ಹಾಸಿಗೆಯ ಮೇಲೆ ಮೊಟ್ಟೆಗಳನ್ನಿಡುತ್ತಿದ್ದುವು. ಆ ಸ್ಥಳ ಭದ್ರವಾದದ್ದೆಂದು ಅವುಗಳ ನಂಬಿಕೆ. ತಮ್ಮ ಮರಿಗಳನ್ನು ಮೊಟ್ಟೆಯಲ್ಲಿದ್ದಾಗಲೇ ತಮ್ಮಿಂದ ಕಸಿದುಕೊಳ್ಳುವ ತಮ್ಮ ದರೋಡೆಗಾರ ಯಜಮಾನರ ಕಾಟದಿಂದ ತಮ್ಮ ಮರಿಗಳನ್ನು ಉಳಿಸಿ ಕಾಪಾಡಿಕೊಳ್ಳಬೇಕೆಂಬ ಅವುಗಳ ಆಸೆ ಇದರಿಂದ ಸ್ಪಷ್ಟವಾಗಿ ವ್ಯಕ್ತವಾಗುತ್ತಿದ್ದಿತು. ಆದರೆ ಆ ಯಜಮಾನರ ಮಕ್ಕಳು ಮನೆಗೆ ಬಂದು ಮೊಟ್ಟೆಗಳನ್ನು ಹೊತ್ತುಕೊಂಡು ನಡೆಯುತ್ತಿದ್ದರು. ಒಂದು ದಿನ ಒಂದು ಬಡ ಕೋಳಿ ತಾನು ರಾಮದಾಸನ ಹಾಸಿಗೆಯ ಮೇಲೆ ಇಟ್ಟಿದ್ದ ಮೊಟ್ಟೆ ಮಾಯವಾಗಿದ್ದುದನ್ನು ಕಂಡಿತು. ರಾಮದಾಸನು ಆಗ ಹೊರಗಡೆ ಕೈಸಾಲೆಯಲ್ಲಿ ಒಬ್ಬನೇ ಕುಳಿತಿದ್ದನು. ತಾಯಿಕೋಳಿ ನೇರವಾಗಿ, ಏನಿದು ಎಂದು ಕೇಳುವಂತಿರುವ ದೃಷ್ಟಿಯೊಡನೆ ರಾಮದಾಸನ ಹತ್ತಿರಕ್ಕೆ ಬಂದು "ಕೊ, ಕೊ, ಕೊ" ಎಂದು ಕೂಗಿತು. "ನಾನು ನಿನ್ನ ಹಾಸಿಗೆಯ ಮೇಲಿಟ್ಟಿದ್ದ ಮೊಟ್ಟೆ ಏನಾಯಿತು?" ಎಂದು ಅದರ ಅರ್ಥ.

ರಾಮದಾಸನು "ತಾಯಿ, ರಾಮದಾಸನೇನು ಮಾಡಬಲ್ಲ? ನೀನಿಲ್ಲದಿರುವಾಗ ನಿನ್ನ ಯಜಮಾನರ ಮಕ್ಕಳು ಬಂದು ನಿನ್ನ ಮೊಟ್ಟೆಗಳನ್ನು ತೆಗೆದುಕೊಂಡು ಹೋಗುತ್ತಾರೆ" ಎಂದು ಉತ್ತರ ಕೊಟ್ಟನು.

ಪ್ರತಿ ದಿನವೂ ಇದೇ ಕಥೆ ಮತ್ತೆ ಮತ್ತೆ ನಡೆಯುತಿದ್ದಿತು. ಒಂದು ದಿನ ಬೆಳಿಗ್ಗೆ ರಾಮದಾಸನು ಕೆಲವು ಮೇಕೆಗಳಿಗೆ ತಿಂಡಿಕೊಟ್ಟು ಅವುಗಳೊಡನೆ ಮಾತನಾಡುತ್ತಿದ್ದಾಗ ಇಬ್ಬರು ಕ್ರೈಸ್ತ ಪಾದ್ರಿಗಳು ಅವನನ್ನು ನೋಡಲು ಬಂದರು. ರಾಮದಾಸನು ಪ್ರಾಣಿಗಳೊಂದಿಗೆ ಸ್ನೇಹದಿಂದ ವರ್ತಿಸುತ್ತಿದ್ದುದನ್ನು ನೋಡಿ ಅವರು ಅಸ್ಸೀಸಿಯ ಪ್ರಸಿದ್ಧ ಸಂತ ಫ್ರಾನ್ಸಿಸ್ ಮಹಾತ್ಮನ ವಿಷಯವನ್ನು ವರ್ಣಿಸಿ ಆತನ ಜೀವನ ರಾಮದಾಸನು ನಡೆಸುತ್ತಿದ್ದ ಜೀವನವನ್ನು ಹೋಲುವುದಾಗಿ ಹೇಳಿದರು.

ರಾಮದಾಸನು "ಪರಮಾತ್ಮನ ಶೋಧನೆಯಲ್ಲಿ" (In Quest of God) ಎಂಬ ಗ್ರಂಥದ ಮುಂದಣ ಈ ಚರಿತ್ರೆಯನ್ನು ಬರೆಯಬೇಕೆಂದು ಭಗವಂತನು ಎರ್ನಾಕುಲಂ ಸ್ನೇಹಿತರ ಮೂಲಕ ಸಂಕಲ್ಪಿಸಿದನು. ರಾಮದಾಸನಿಗೆ ಬರವಣಿಗೆಯ ಸಾಧನಗಳು ಒದಗಿದುವು. ರಾಮದಾಸನು ತನ್ನ ಬಾಳಿನ ಕಥೆಯನ್ನು ಬರೆಯಲು ಪ್ರಾರಂಭಿಸಿದನು. ಕೆಲವು ಪುಟಗಳನ್ನು ಬರೆದಮೇಲೆ ಅದನ್ನು ನಿಲ್ಲಿಸಿದನು. ಆಗ ಅವನು ಮೊದಲಲ್ಲಿ ಒಂದು ಸಣ್ಣ ಪುಸ್ತಕದಲ್ಲಿ ಆ ಕಥೆಯ ಮುಖ್ಯ ವಿಷಯಗಳನ್ನು ಟಿಪ್ಪಣಿ ಹಾಕಿಟ್ಟಿದ್ದನು. ಆ ಟಿಪ್ಪಣಿಗಳು ಜೋಪಾನವಾಗಿದ್ದು ಈಗ ನೆನಪಿಗೆ ಪ್ರಯೋಜನಕ್ಕೆ ಬಂದಿವೆ.

ರಾಮದಾಸನಿಗೆ ಪ್ರಾಣಾಯಾಮವನ್ನು ಕಲಿಸಿಕೊಟ್ಟ ರಾಜಯೋಗಿ ಇಲ್ಲಿ ಪುನಃ ದರ್ಶನ ಕೊಟ್ಟನು. ರಾಮದಾಸನನ್ನು ನೋಡಲು ಬರುವವರಲ್ಲಿ ನಾರಾಯಣ ಮೇನನ್ ಎಂಬ ಪ್ರಮುಖ ಮಲಯಾಳಿ ವಕೀಲನಿದ್ದನು. ಇವನಿಗೆ ಸಂನ್ಯಾಸ ತೆಗೆದುಕೊಳ್ಳಬೇಕೆಂಬ ಚಟ ಉಂಟಾಯಿತು. ಇವನು ಶ್ವಾಸಧಾರಣೆಯ ಅಭ್ಯಾಸ ದಲ್ಲಿ ಉಪದೇಶವನ್ನು ಪಡೆದನು. ರಾಜಯೋಗಿ ಚಿತ್ತಸ್ಥೈರ್ಯದ ಇತರ ಸಾಧನ ಗಳನ್ನು ಹೀಯಾಳಿಸತೊಡಗಿದನು. (ರಾಮದಾಸನು ದೈವಸಾಕ್ಷಾತ್ಕಾರಕ್ಕೆ ನಾಮ ಸ್ಮರಣೆಯೇ ಅತ್ಯಂತ ಸುಲಭವಾದ ಮತ್ತು ಉತ್ತಮವಾದ ಮಾರ್ಗವೆಂದು ಎತ್ತಿ ಹಿಡಿಯುತ್ತಿದ್ದನು.) ರಾಜಯೋಗಿಯಾದರೋ ಎಲ್ಲರೂ ಕೇಳುವಂತೆ ಇದನ್ನು ಖಂಡಿ ಸುವನು ಮತ್ತು ರಾಮದಾಸನು ಇದರ ಮಹಿಮೆಯನ್ನು ಯಾವ ಮಿತ್ರರಿಗೆ ಸಾರಿ ಹೇಳುತ್ತಿದ್ದನೋ ಅವರೆದುರಿಗೆ ಅದನ್ನು ಹೀಯಾಳಿಸಿ ನುಡಿಯುತ್ತಿದ್ದನು. ಇದ ರಿಂದ ಘರ್ಷಣೆಯಾಯಿತು. ಸಭಿಕರ ಮನಸ್ಸು ಡೋಲಾಯಮಾನವಾಯಿತು. ರಾಮದಾಸನಿಗೆ ಏನು ಮಾಡಬೇಕೆಂದು ತೋಚದಾಯಿತು. ಅವನು ಎಲ್ಲವನ್ನೂ ಭಗವಂತನ ಇಚ್ಛೆಗೆ ಬಿಟ್ಟು ಸುಮ್ಮನಿದ್ದನು. ಭಗವಂತನು ಮಾನವರು ಅರಿಯ ಲಾಗದ ತನ್ನದೇ ರೀತಿಯಲ್ಲಿ ಸಮಸ್ಯೆಯನ್ನು ಬಗೆಹರಿಸಿದನು. ರಾಜಯೋಗಿಯು ರಾಮದಾಸನು ಬರುವುದಕ್ಕೆ ಮುಂಚೆ ಎರ್ನಾಕುಲಂನಲ್ಲಿ ತಕ್ಕಷ್ಟು ಕಾಲವಿದ್ದು ಯುಕ್ತಾಯುಕ್ತ ವಿವೇಚನೆ ಇಲ್ಲದೆ ಸಿಕ್ಕಾಬಟ್ಟೆ ಅನೇಕರಿಗೆ ಸಾಧನೆಯನ್ನು ಹೇಳಿ ಕೊಟ್ಟಿದ್ದನು. ಇದರಿಂದ ಅನೇಕರಿಗೆ ಬೇಕಾದಷ್ಟು ತೊಂದರೆಗಳುಂಟಾಗಿದ್ದುವು. ಈ ಬಡಪಾಯಿ ಅನಕ್ಷರಸ್ಥ ಮಂದಿ ರಾಜಯೋಗಿ ಈ ಮನೆಯಲ್ಲಿರುವುದನ್ನು ಕೇಳಿ ಎಲ್ಲ ಈ ಮನೆಗೆ ನುಗ್ಗಿದರು. ಅವರು ಹೃದಯ ಡವಗುಟ್ಟುವುದು, ಕೆಮ್ಮು, ಮುರವು, ದೇಹ ಸವೆಯುವುದು ಇನ್ನೂ ಎಷ್ಟೆಷ್ಟೋ ತೊಂದರೆಗಳುಂಟಾಗಿರುವು ದನ್ನು ಅವನ ಮುಂದಿಟ್ಟರು. ಈ ದೂರುಗಳ ಸುರಿಮಳೆಯಿಂದ ರಾಜಯೋಗಿಯ ಉತ್ಸಾಹ ಕುಗ್ಗಿತು. ಆತನು ತನ್ನ ಆ ಪ್ರಿಯಸಾಧನದ ಪ್ರಚಾರವನ್ನೂ ಮತ್ತು ಪ್ರಾಣಾಯಾಮವನ್ನು ಕಲಿಸುವುದನ್ನೂ ನಿಲ್ಲಿಸಿದನು.

## (ii) ಸಾಧುವಿನ ಗುಣಗಳು

ಇದೇ ಸಮಯದಲ್ಲೇ ಮತ್ತೊಬ್ಬ ಸಂನ್ಯಾಸಿ ಬಂದುಸೇರಿದನು. ಮನೆಯನ್ನು ಹೊಕ್ಕವನೇ ಗೋಡೆಯ ಬೀರುವಿನಲ್ಲಿ ಕೆಲವು ಬಾಳೆಯಹಣ್ಣು ಇದ್ದುದನ್ನು ನೋಡಿ, ಅವುಗಳನ್ನು ತಿಂದು, ರಾಮದಾಸನ ಬಳಿಗೆ ಬಂದು, "ನಾನು ಸ್ನಾನ ಮಾಡಬೇಕು, ಸ್ವಲ್ಪ ಬಿಸಿನೀರು ತರಿಸು, ಬೇಗನೆ" ಎಂದನು. ನೀರು ಕಾಯಿಸುವುದಕ್ಕೆ ಮನೆ ಯಲ್ಲಿ ಸಲಕರಣೆ ಇರಲಿಲ್ಲ. ರಾಮದಾಸನೂ ಯೋಗಿಯೂ ತಣ್ಣೀರಿನಲ್ಲೇ ಸ್ನಾನ ಮಾಡುತ್ತಿದ್ದರು. ರಾಮದಾಸನು ಸಂನ್ಯಾಸಿಗೆ ಈ ವಿಷಯವನ್ನು ತಿಳಿಸಿದನು.

ಸಂನ್ಯಾಸಿ "ಅದನ್ನೆಲ್ಲಾ ಕೇಳುವುದಿಲ್ಲ. ಬಿಸಿನೀರು ಕೊಡಬೇಕು ಜಾಗ್ರತೆ, ಬಹು ದಿನದಿಂದ ನಾನು ಮೈ ತೊಳೆದಿಲ್ಲ. ಈಗಲೇ, ಇಲ್ಲಿಯೇ, ಸ್ನಾನದ ನೀರನ್ನು ಒದಗಿಸಬೇಕು, ಗೊತ್ತಾಯಿತೇ?" ಎಂದನು.

ಮಣ್ಣಿನ ಗಡಿಗೆ ಒಂದು ಇದ್ದಿತು. ಯೋಗಿ ಅಂಗಳದಿಂದ ತಂದ ಮೂರು ಕಲ್ಲಿನಮೇಲೆ ಅದನ್ನಿಟ್ಟು ಒಣಗಿದ ತೆಂಗಿನ ಗರಿಯನ್ನು ಹೊತ್ತಿಸಿದನು. ನೀರು ಕಾಯಿತು. ರಾಮದಾಸನೂ ಯೋಗಿಯೂ ಸೇರಿ ಸಂನ್ಯಾಸಿಗೆ ಸ್ನಾನ ಮಾಡಿಸಿದರು. ಅವನ ಕೊಳಕು ಬಟ್ಟೆಗಳನ್ನು ಯೋಗಿ ಒಗೆದನು. ಇಷ್ಟೆಲ್ಲವನ್ನೂ ಇಬ್ಬರೂ ಹರ್ಷ ಚಿತ್ತರಾಗಿಯೇ ಮಾಡಿದರು. ಸ್ನಾನವಾದನಂತರ ಸಂನ್ಯಾಸಿ "ಊಟವೆಲ್ಲಿ? ನನಗೆ ಹಸಿವಾಗಿದೆ" ಎಂದು ದಿಟ್ಟವಾಗಿ ಕೇಳಿದನು.

ರಾಮದಾಸನಿಗೂ ಯೋಗಿಗೂ ಊಟಬರುತ್ತಿದ್ದುದು ಮಧ್ಯಾಹ್ನ ಹನ್ನೆರಡು ಗಂಟೆಗೆ. ಆಗ ಇನ್ನೂ ಹತ್ತು ಗಂಟೆ. ಊಟ ಬರುವ ಸಮಯವನ್ನು ಅವನಿಗೆ ತಿಳಿಸಿದ್ದಾಯಿತು. ಆ ದಿವಸ ತನ್ನ ಪಾಲಿನ ಊಟವನ್ನು ಆ ಸಂನ್ಯಾಸಿಗೆ ಕೊಡಲು ರಾಮದಾಸನು ಸಿದ್ಧನಾಗಿದ್ದನು. ಊಟ ಬರುವವರೆಗೂ ಕಾಯಬೇಕೆಂದು ಅವನನ್ನು ಕೇಳಿಕೊಂಡನು.

ಸಂನ್ಯಾಸಿ "ನಾನು ಕಾಯಲಾರೆ. ಹೋಗುತ್ತೇನೆ. ಊರೊಳಗೆಲ್ಲಾದರೂ ದೊರೆಕಿಸಿಕೊಳ್ಳಲು ನೋಡುತ್ತೇನೆ" ಎಂದು ಹೇಳಿ ಹೊರಟುಹೋದನು. ಹನ್ನೆರಡು ಗಂಟೆಯ ಹೊತ್ತಿಗೆ ಊಟ ಬಂದಿತು. ಸಂನ್ಯಾಸಿ ಬಂದರೂ ಬರಬಹುದು, ಸ್ವಲ್ಪ ನಿಧಾನಿಸಿ ನೋಡೋಣ ಎಂದು ರಾಮದಾಸನು ಯೋಗಿಗೆ ಸಲಹೆ ಮಾಡಿದನು. ಅರ್ಧ ಗಂಟೆ ಕಾದದ್ದಾಯಿತು. ಸಂನ್ಯಾಸಿಯ ಸುಳಿವು ಕಾಣಲಿಲ್ಲ. ಊಟ ತಂದ ವನನ್ನು ಪಾತ್ರೆಗಳಿಗಾಗಿ ಹೆಚ್ಚು ಕಾಲ ಕಾಯಿಸದಂತೆ ಊಟ ಮುಗಿಸೋಣ ವೆಂದು ಸೂಚಿಸಿ ರಾಜಯೋಗಿ ಸಂನ್ಯಾಸಿಗೆ ಊರೊಳಗೆ ಊಟ ದೊರೆತಿರಬಹುದು ಎಂದು ಹೇಳಿದನು. ಇಬ್ಬರೂ ಊಟ ಮಾಡಿದರು.

ಊಟ ಮುಗಿದು ಆಗತಾನೆ ಪಾತ್ರೆಗಳನ್ನು ತೊಳೆಯುತ್ತಿದ್ದಾಗ ಸಂನ್ಯಾಸಿ ಆತುರವಾದ ಆಶೆಯ ಹೆಜ್ಜೆಗಳಿಂದ ಮನೆಯನ್ನು ಹೊಕ್ಕು ಊಟ ಬಡಿಸಿದ ಕೊಟಡಿಗೆ ನೇರವಾಗಿ ಪ್ರವೇಶಿಸಿದನು. ಅಲ್ಲಿ ಭೋಜನ ಸಾಮಗ್ರಿ ಕಾಣದೆ ಮನಸ್ಸನ್ನು ಕೆದಕುವ ಭೋಜನಾನಂತರದ ವಾಸನೆ ದೊರೆಯಿತು. ಅವನು ಅದನ್ನು ಮೂಗಿ ನೊಳಕ್ಕೆ ತೆಗೆದುಕೊಂಡನು.

"ನನಗೆಲ್ಲಿ ಊಟ?" ಎಂದು ಕೂಗಿದನು.

ಆಮೇಲೆ ರಾಮದಾಸನ ಕಡೆ ಕ್ರೂರವಾದ ನೋಟವನ್ನು ಬೀರಿದನು. ನೋಟದಿಂದ ರಾಮದಾಸನನ್ನು ನುಂಗಲು ಸಾಧ್ಯವಿದ್ದರೆ ಅವನು ಇವನನ್ನು ಆ ಕ್ಷಣವೇ ನುಂಗಿಬಿಡುತ್ತಿದ್ದನು.

"ಒಳ್ಳೇ ಯೋಗ್ಯರು ! ನನಗೆ ಏನೂ ಉಳಿಸದೆ ನೀವೇ ಎಲ್ಲವನ್ನೂ ನುಂಗಿ ಬಿಟ್ಟಿದ್ದೀರಿ" ಎಂದು ದಹಿಸುವ ಹಂಗಿನಿಂದ ಹೀಯಾಳಿಸಿದನು.

ರಾಮದಾಸನು "ನೀವೂ ಊಟ ಮಾಡುವಿರಂತೆ ಸ್ವಾಮಿ; ಆದರೆ ನೀವು ಹೊತ್ತಿಗೆ ಬರಲಿಲ್ಲವಾಗಿ ಇನ್ನರ್ಧ ಗಂಟೆ ಕಾಯಬೇಕು" ಎಂದು ಹೇಳಿ, ಊಟ ತಂದವನಿಗೆ ಊರೊಳಗೆ ಒಬ್ಬ ಸ್ನೇಹಿತರ ಮನೆಗೆ ಬೇಗನೆ ಓಡಿ ಅಲ್ಲಿಂದ ಇಬ್ಬರಿಗೆ ಆಗುವಷ್ಟು ಊಟವನ್ನು ತರಲು ಹೇಳಿದನು. ದಾಕ್ಷಿಣ್ಯವಂತನಾದ ಆ ತರುಣನು ಅರ್ಧ ಗಂಟೆಯಲ್ಲಿ ಯಥೇಷ್ಟ ಭೋಜನವನ್ನು ತಂದನು. ಹಸಿದಿದ್ದ ಸಂನ್ಯಾಸಿಗೆ ಹೊಟ್ಟೆತುಂಬಾ ಊಟವಾಯಿತು.

ಸಂನ್ಯಾಸಿ ಆ ದಿನ ಅಲ್ಲೇ ನಿಂತನು. ಸಾಯಂಕಾಲ ಪ್ರೇಕ್ಷಕರು ಎಂದಿನಂತೆ ಬಂದರು. ಆದರೆ ಈ ಸಂನ್ಯಾಸಿಯನ್ನು ಕಂಡು ಅಸಮಾಧಾನ ಕಳವಳಗಳನ್ನು ಸೂಚಿಸಿದರು. ಮೊದಲಲ್ಲಿ ಬಂದ ಇಬ್ಬರು ಅವನ ಎದುರಿಗೇ ತಮ್ಮ ಮನಸ್ಸನ್ನು ಬಿಚ್ಚಿ ನುಡಿದರು. "ಈ ಸಂನ್ಯಾಸಿ ಒಂದು ಶತಪೀಡೆ. ನಮ್ಮ ಮನೆಗಳಿಗೆ ಬಂದು ನಮ್ಮ ಪ್ರಾಣವನ್ನೇ ಹಿಂಡುತ್ತಾನೆ. ಇವನಿಗೆ ಬರಿಯ ಊಟ ಸಾಲದು. ಇವನಿಗೆ ದುಡ್ಡು ಬೇರೆ ಬೇಕು, ನಾವು ಬಡವರು. ಇವನು ಕೇಳಿದ್ದನ್ನೆಲ್ಲಾ ಮಾಡಲಾರೆವು. ಸಾಲದ್ದಕ್ಕೆ ನನುಗೆ ಶಾಪಕೊಡುವುದಾಗಿ ಹೆದರಿಸುತ್ತಾನೆ. ಇವನ ಶಾಪಕ್ಕೇನೂ ನಾವು ಬಹಳ ಬೆಲೆ ಹಚ್ಚುವುದಿಲ್ಲ. ಆದರೆ ಅವನ ನಡತೆ ತೀರ ಅಸಹ್ಯ. ಅವನಿಗೆ ತಕ್ಕ ಶಾಸ್ತಿ ಮಾಡುತ್ತಿದ್ದೆವು. ಆದರೆ ಅವನು ತೊಟ್ಟ ಬಟ್ಟೆಯ ಬಣ್ಣಕ್ಕೆ ಮರ್ಯಾದೆ ಕೊಟ್ಟದ್ದೇವೆ."

ಈ ರೀತಿ ಎದುರಿಗೇ ಆಪಾದನೆ ಆಗುತ್ತಿರುವಾಗ ಸಂನ್ಯಾಸಿ ಅಟ್ಟಹಾಸದಿಂದ ಕಾಲುಮೇಲೆ ಕಾಲು ಹಾಕಿಕೊಂಡು, ಬಲಗೈಯಲ್ಲಿ ಒಂದು ಕಡೆಯ ಮೀಸೆಯನ್ನು ಹುರಿಮಾಡುತ್ತಾ, ತಾನೊಬ್ಬ ವೀರನಾಗಿ ತನ್ನ ಸಂಬಂಧವಾದ ಮಹತ್ತರವಾದ ಸಾಹಸಕಾರ್ಯಗಳ ವಿವರಣೆಯನ್ನು ಆಲಿಸುವವನಂತೆ ಬಹು ಒಪ್ಪಿಗೆಯಿಂದ ಮುಗುಳ್ನಗೆ ಬೀರುತ್ತಾ ಕುಳಿತಿದ್ದನು. ಆಗ ರಾಮದಾಸನು ಅವನಿಗೆ ಸಾಧುವಿನ ನಿಜವಾದ ಗುಣಗಳು ಏನಿರಬೇಕೆಂಬ ವಿಷಯವನ್ನು ಸೂಕ್ಷ್ಮವಾಗಿ ತಿಳಿಸಿದನು.

"ಯಾವನಾದರೂ ಸಾಧು ಹೆಚ್ಚು ಕಾಲ ಒಂದು ಸ್ಥಳದಲ್ಲಿ ನಿಲ್ಲಬೇಕಾಗಿದ್ದರೆ, ಊರಹೊರಗೆ ಇರಬೇಕು. ಭಿಕ್ಷಕ್ಕೆ ಮಾತ್ರ ಊರೊಳಕ್ಕೆ ಹೋಗಬೇಕು. ಜನರಿಗೆ ಎಂದೂ ತೊಂದರೆ ಕೊಡಬಾರದು. (ಸಹನೆ ಮತ್ತು ಕ್ಷಮೆಯನ್ನು ಬೆಳಸಿಕೊಳ್ಳ ಬೇಕು.) ಯಜಮಾನನ ಅಪ್ಪಣೆ ಇಲ್ಲದೆ ಜನರ ಮನೆಗಳನ್ನು ಪ್ರವೇಶ ಮಾಡ ಬಾರದು. (ದುಡ್ಡನ್ನು ಕೇಳಬಾರದು.) ನೀಡಿದ ಭೋಜನದಿಂದಲೇ ತೃಪ್ತಿಪಡಬೇಕು. ಯಾರಿಗೇ ಆಗಲಿ ಕೆಟ್ಟದನ್ನು ಹಾರೈಸುವುದು, ಯಾರಿಗಾದರೂ ಶಾಪ ಕೊಡುವುದು ಸಾಧು ವ್ರತದ ಸೂತ್ರಕ್ಕೆ ವಿರೋಧ. ಸಂನ್ಯಾಸಿಯ ಉಡುಪನ್ನು ಧಾರಣೆ ಮಾಡಿದ ಮೇಲೆ ತನ್ನ ನಡತೆಯಿಂದ ಎಂದೂ ಆ ಬಟ್ಟೆಗೆ ಅವಮಾನ ತರಬಾರದು. ಆ ಬಟ್ಟೆ

ಸಂಪೂರ್ಣ ತ್ಯಾಗದ ಲಾಂಛನ. ಅದಕ್ಕೆ ತಕ್ಕ ಯೋಗ್ಯತೆ ತನಗೆ ಇಲ್ಲವೆಂದು ಕಂಡರೆ ಅದನ್ನು ಧರಿಸಲೇಬಾರದು. ತಪ್ಪು ತಿಳುವಳಿಕೆಯಿಂದಲೇನಾದರೂ ಅದನ್ನು ಧಾರಣೆ ಮಾಡಿದ್ದರೆ ಆ ತಪ್ಪು ತಿಳಿದಕೂಡಲೇ ಆ ವಸ್ತ್ರವನ್ನು ತ್ಯಜಿಸಬೇಕು; ಇಲ್ಲದಿದ್ದರೆ ಇವನ ವೇಷದಿಂದ ಜನ ಮೋಸಹೋಗುವರು.

"ಸಾಧು ಅಂಗಡಿಗಳಿಗೆ ಹೋಗಬಾರದು. ನಿರ್ಜನವಾದ ತನ್ನ ಆವಾಸಕ್ಕೆ ಅಂಟಿಕೊಂಡು ಅವಶ್ಯಕವಾದ ಸಾಧನೆ ಮಾಡಬೇಕು. ಅಧ್ಯಾತ್ಮ ಸಹಾಯಕ್ಕಾಗಿ ತನ್ನ ಬಳಿ ಬಂದವರಿಗೆ ತಕ್ಕ ತಿಳುವಳಿಕೆ ಕೊಡಬೇಕು. ಅವನಿಗೆ ಪರಾತ್ಪರ ತತ್ವದಲ್ಲಿ ನಂಬಿಕೆಯೂ ತನ್ನ ನಿಷ್ಕಾಮ ಪ್ರಯತ್ನದಲ್ಲಿ ವಿಶ್ವಾಸವೂ ದುರ್ಬಲವಾಗಿದ್ದು ಇದರ ಫಲವಾಗಿ ಅವನು ಆತ್ಮಸಮೃದ್ಧವೂ ಸ್ವತಂತ್ರವೂ ಆದ ಜೀವನದ ಕಡೆಗೆ ಅವನು ಮುಂದುವರಿಯಲಾಗದೆ ಹೋದರೆ, ಅವನು ಸಾಧುವಿನ ವಸ್ತ್ರವನ್ನೂ ಜೀವನವನ್ನೂ ತೊರೆದು, ತನ್ನ ಸ್ವಭಾವಕ್ಕೆ ಸರಿಹೋಗುವ ಯಾವುದಾದರೂ ಒಂದು ಸರಿಯಾದ ವೃತ್ತಿಯನ್ನು ಅವಲಂಬಿಸುವುದು ಒಳ್ಳೆಯದು. ಜನರ ಪೀಡೆಯೂ ಹೊರೆಯೂ ಆಗುವುದು ತನಗೇ ಕೆಡಕು; ಜೊತೆಗೆ ತನ್ನ ಸಂಪರ್ಕಕ್ಕೆ ಬರುವವರಿಗೂ ಬೇಸರವನ್ನುಂಟುಮಾಡುವುದಾಗುತ್ತದೆ."

ಸಂನ್ಯಾಸಿ ರಾಮುದಾಸನ ಮಾತನ್ನು ಶ್ರದ್ಧೆಯಿಂದಲೂ ಏಕಾಗ್ರಚಿತ್ತದಿಂದಲೂ ಕೇಳಿದನು. ಅವನ ತುಟಿಯಲ್ಲಿ ಮಂದಹಾಸ ಮಿನುಗುತ್ತಿದ್ದಿತು. ರಾತ್ರಿ ಅವನಿಗೆ ಹೊದೆದುಕೊಳ್ಳುವುದಕ್ಕೆ ಒಂದು ವಸ್ತ್ರವನ್ನು ಕೊಡಲಾಯಿತು. ಮಾರನೆಯ ಬೆಳಿಗ್ಗೆ ಅವನು ತಾನು ಮಲಗಿದ್ದ ಚಾಪೆಯ ಮೇಲಿಂದ ಎದ್ದವನು, ತಾನು ಅ ದಿನ ಎರ್ನಾಕುಲಂ ಬಿಟ್ಟು ಹೋಗುವುದಾಗಿ ತಿಳಿಸಿ, ಆ ವಸ್ತ್ರವನ್ನೂ ತೆಗೆದುಕೊಂಡು ಹೊರಟು ಹೋದನು. ಅವನು ಮರಳಿ ಬರಲಿಲ್ಲ.

## (iii) ನಿನ್ನ ದೇಹ ಭಗವಂತನ ಅಭಿವ್ಯಂಜನ.

ಈ ವೇಳೆಗೆ ರಾಮುಚರಣದಾಸನು ಕೆಲವುಕಾಲ ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಗ್ರಾಮಗಳಲ್ಲಿ ಅಲೆಯುತ್ತಿದ್ದವನು, ಉತ್ತರ ಹಿಂದೂದೇಶದ ಕಡೆ ಸಂಚಾರ ಮಾಡಬೇಕೆಂದು ಯೋಚಿಸಿದನು. ದಕ್ಷಿಣ ದೇಶವನ್ನು ಬಿಟ್ಟು ಹೊರಡುವ ಮುಂಚೆ ರಾಮುದಾಸನನ್ನು ನೋಡಲಪೇಕ್ಷಿಸಿ ಅವನು ಒಂದು ದಿನ ಹಠಾತ್ತಾಗಿ ರಾಮುದಾಸ ನಿದ್ದ ಮನೆಗೆ ಬಂದನು. ಅವನನ್ನು ನೋಡಿ ರಾಮುದಾಸನಿಗೆ ಸಂತೋಷವಾಯಿತು.

ಅವನೊಂದಿಗೆ ಮಾತನಾಡುತ್ತಾ, ರಾಮುದಾಸನು ಅವನಿಗೆ ದೈವಸಾಕ್ಷಾತ್ಕಾರದ ವಿಷಯವಾಗಿ ಹೀಗೆಂದನು.

"ದೈವಸಾಕ್ಷಾತ್ಕಾರವೆಂಬುದು, ಭಗವಂತನು ಅಂತರ್ಯಾಮಿಯಾಗಿ ತನ್ನಲ್ಲಿಯೂ, ತನ್ನ ಸುತ್ತ ಎಲ್ಲೆಲ್ಲಿಯೂ ಇರುವುದನ್ನು ಮನಗಂಡು, ಅನುಭವಿಸುವುದಲ್ಲದೆ

ಬೇರೆ ಏನೂ ಅಲ್ಲ.) ಏಕೆಂದರೆ ಅವನು ಸರ್ವವ್ಯಾಪಿಯಾದ ಆತ್ಮತತ್ವ; ಇಡೀ ವಿಶ್ವದಲ್ಲಿ ತಾನಾಗಿದ್ದಾನೆ. ದೃಗ್ಗೋಚರವಾಗಿರುವ ಪ್ರಪಂಚಗಳು ಅವನಿಂದ ಪ್ರತ್ಯೇಕವಲ್ಲ. ಎಲ್ಲವೂ ನಾಮರೂಪರೀತ್ಯಾ ಆಗಿರುವ ಅವನನೇ ಅಭಿವ್ಯಂಜನ."

ಸತ್ಯದ ಈ ವಿವರಣೆ ಹುಡುಗನ ಮನಸ್ಸಿಗೆ ಹಿಡಿಯಲಿಲ್ಲ. ಅವನು ತುಂಬಾ ಅಸಮಾಧಾನದ ಧ್ವನಿಯಿಂದ ಹೀಗೆ ಹೇಳಿದನು:

"ಸ್ವಾಮಿಜಿ, ನಿಮ್ಮ ನಿರ್ಗುಣಸ್ವರೂಪದ ಅಥವ ನಿರಾಕಾರದ ಭಗವಂತ ನನಗೆ ಬೇಕಾಗಿಲ್ಲ. ನಾನು ಅವನನ್ನು ಸಗುಣ ರೂಪದಲ್ಲಿ ಕಾಣಲು ಬಯಸು ತ್ತೇನೆ. ನನಗೆ (ರಾಮಪಂಚಾಯತನದ ಎಂದರೆ ರಾಮ, ಸೀತಾದೇವಿ, ಲಕ್ಷ್ಮಣ, ಭರತ, ಮತ್ತು ಆಂಜನೇಯ ಇದರ ದರ್ಶನದ ಬಯಕೆ.) ನೀವು ಯಾವಾಗಲೂ ದೇವರ ನಿರಾಕಾರದ ತತ್ವದ ಆ ಒಂದೇ ಹಾಡನ್ನು ಹಾಡುತ್ತೀರಿ."

ರಾಮದಾಸನು ಮುಗುಳ್ನಗೆಯಿಂದ ಹೇಳಿದನು :

"ನೀನು ಅರಸುವ ಸಗುಣವು ನಿನ್ನ ಮನಸ್ಸಿನ ಪ್ರತಿಬಿಂಬ; ಅದರಿಂದ ನಿನಗೆ ತೃಪ್ತಿಯಾಗಲಾರದು. ನೀನು ನೇತ್ರೇಂದ್ರಿಯ ಅಥವ ಮನಸ್ಸಿನ ಎಲ್ಲ ಆಕೃತಿ ಗಳನ್ನು ಮೀರಿ ಏರಬೇಕು. ಭಗವಂತನ ನಿಜವಾದ ಸಗುಣ ಅಥವಾ ಶರೀರ ಪ್ರಪಂಚವೇ. (ಅವನು ಆದರಲ್ಲಿ ಅಂತರ್ಯಾಮಿಯಾಗಿ ತನ್ನ ಶಕ್ತಿಯಿಂದ ಈ ಆವಿ ಷ್ಕರಣದಲ್ಲಿ ಸರ್ವ ಪ್ರಾಣಿಗಳ ಮತ್ತು ಪದಾರ್ಥಗಳ ಸೃಷ್ಟಿ ಸ್ಥಿತಿ ಲಯಗಳನ್ನು ನಡೆ ಸುತ್ತಿದ್ದಾನೆ.) ಹಾಗೆಯೇ (ಅವನು ಶುದ್ಧ ಆತ್ಮತತ್ವವಾಗಿ ಇದರಿಂದ ಅತೀತನಾಗಿ ದ್ದಾನೆ.) ನಿನ್ನ ಶರೀರವೂ ಅವನ ಅಭಿವ್ಯಂಜನಗಳಲ್ಲಿ ಒಂದು. ನೀನು ಮಾಡುವ ಕಾರ್ಯ ಪರಮಾತ್ಮನ ಅಪಾರ ಶಕ್ತಿಯಲ್ಲೇ ಮೊಳೆತಿದೆ. ಅವಸ್ಥಿತಗಳೂ ಕ್ಷಣ ಭಂಗುರಗಳೂ ಆದ ವಸ್ತುಗಳನ್ನು ಕಾಣುವ ಇಚ್ಛೆಯಿಂದ ಮೋಸಹೋಗಬೇಡ ಅವು ನಿನ್ನ ಮನಸ್ಸಿನಲ್ಲಿ ಉದ್ಭವಿಸುವ ವಿಕಾರಮಾತ್ರಗಳು. ನಿನ್ನ ಅಮರ್ತ್ಯ ಸ್ವರೂಪವನ್ನೂ ಮತ್ತು ಸರ್ವಶಕ್ತನಾದ, ಸರ್ವವ್ಯಾಪಿಯಾದ, ಲೋಕೇಶ ಭಗ ವಂತನಲ್ಲೇ ನೀನು ಐಕ್ಯವಾಗಿರುವೆ, ಎಂಬ ಭಾವನೆಯನ್ನೂ, ಅನುಭವಮಾಡಿ ಕೊಳ್ಳುವ ಸರಿಯಾದ ಆಶೆಯನ್ನು ಹೊಂದು. (ನಿನ್ನ ಮನಸ್ಸನ್ನೂ ಹೃದಯವನ್ನೂ ಸರಿಯಾದ ಸಾಧನೆಗಳಿಂದ ಪರಿಶುದ್ಧಮಾಡಿಕೊಂಡು, ಈ ಅಸದೃಶ ದರ್ಶನವನ್ನು ಅನುಭವಿಸುವ ಅಧಿಕಾರವನ್ನು ಹೊಂದು. ಪೂರ್ಣ ಮುಕ್ತಿಯನ್ನೂ ಶಾಶ್ವತವಾದ ಆನಂದವನ್ನೂ ಸಂಪಾದಿಸು.")

ರಾಮಚರಣದಾಸನು ಸುಮ್ಮನೆ ಇದ್ದನು. ಸ್ವಲ್ಪ ಹೊತ್ತಿನ ನಂತರ ರಾಮ ದಾಸನ ಅಪ್ಪಣೆ ಪಡೆದು ಹೊರಟುಹೋದನು.

# ಅಧ್ಯಾಯ ೨೬.

## ಎರ್ನಾಕುಲಂ—ಎಲ್ಲೆಪ್ಪಿ

### (i) ಇದು ನಿಮಗೆ ಏನೆಂದು ತೋರುತ್ತದೆ?

ಎರ್ನಾಕುಲಮಿನ ಒಬ್ಬ ದೊಡ್ಡ ಅಧಿಕಾರಿಯ ಜೀವನದ ನಗುಸಾರವಾದ ಮತ್ತು ನೀತಿಯುಕ್ತವಾದ ಒಂದು ಸಂಗತಿಯನ್ನು ಇಲ್ಲಿ ಹೇಳಬಹುದಾಗಿದೆ. ಈ ಸಂಗತಿಯನ್ನು ಸರಳನಾದ ಮತ್ತು ಭಗವದ್ಭಕ್ತನಾದ ಆ ಅಧಿಕಾರಿಯೇ ಹೇಳಿದನು. ಆತನ ಮಾತು:

"ನನ್ನ ಸಂಸಾರದ ನಿರ್ವಹಣೆಗೆ ಸಾಕಾದಷ್ಟು ದೊಡ್ಡ ಸಂಬಳವೇ ಬರುತ್ತಿದೆ. ಆದರೆ ಈ ಮಾನವಸ್ವಭಾವವನ್ನು ಸ್ವಾಧೀನಪಡಿಸಿಕೊಂಡಿರುವ ಅತಿದೊಡ್ಡ ಕುಂದು ಗಳಲ್ಲಿ ಆಸೆ ಒಂದು. ದ್ರವ್ಯಾರ್ಜನೆಯ ಆಶೆ ತೃಪ್ತಿಪಡಿಸಲಾಗದ ಬೆಂಕಿ. ಆ ಬೆಂಕಿಗೆ ಆಹುತಿ ಹಾಕಿದ ಹಾಗೆಲ್ಲಾ ಅದು ಇನ್ನೂ ಉಜ್ವಲವಾಗುತ್ತದೆ. ನನ್ನ ಹೆಂಡತಿ ಭಕ್ತಿ ವಂತ ಜೀವ. ಅವಳು ಯಾವಾಗಲೂ ನನಗೆ ಈಗ ಇರುವುದಕ್ಕಿಂತ ದೊಡ್ಡ ಕೆಲಸ ವಾಗಲಿ; ನನಗೆ ಇನ್ನೂ ಹೆಚ್ಚಿನ ಸಂಬಳ ದೊರೆಯಲಿ ಎಂದು ದೇವರನ್ನು ಪ್ರಾರ್ಥಿಸು ತ್ತಿದ್ದಳು. ಆದರೆ ಅವಳ ಮೊರೆ ಸಾರ್ಥಕವಾಗಲಿಲ್ಲ. ಆದ್ದರಿಂದ ಅವಳು ಒಂದು ದಿನ ಲಕ್ಷ್ಮೀದೇವಿ ಅನುಗ್ರಹಿಸುವಂತೆ ಮಾಡುವುದಕ್ಕಾಗಿ ಒಂದು ವಿಶೇಷ ಪೂಜೆ ಮಾಡಬೇಕೆಂದು ಉದ್ದೇಶಿಸಿದಳು; ಮಣ್ಣಿನಲ್ಲಿ ಲಕ್ಷ್ಮೀದೇವಿಯ ವಿಗ್ರಹ ಒಂದನ್ನು ಮಾಡಿಸಿ ಅದನ್ನು ಮನೆಯದೇವರ ಮಂದಿರದಲ್ಲಿಟ್ಟಳು. ನಾನು ಕಾರಣವನ್ನು ಕೇಳಿದಾಗ, ನನಗೆ ಇನ್ನೂ ಹೆಚ್ಚು ಸಂಬಳವನ್ನು ದಯಪಾಲಿಸಲು ಹೊಸ ಮೂರ್ತಿ ಯನ್ನು ಪೂಜೆಮಾಡುವುದಾಗಿ ಹೇಳಿದಳು. ಒಂದು ತಿಂಗಳೊಳಗಾಗಿ ಆಸೆ ಸಲ್ಲದಿದ್ದರೆ, ದೇವಿಯ ಪೂಜೆಯನ್ನು ಬಿಟ್ಟುಬಿಡುವುದಾಗಿ ದೇವಿಗೆ ಎಚ್ಚರಿಕೆ ಕೊಟ್ಟದ್ದಂತೆಯೂ ಹೇಳಿದಳು. ಅಯ್ಯೋ! ಆ ಬಡದೇವತೆಗೆ ಒಂದು ತಿಂಗಳ ಅವಧಿ ಮತ್ತು ಎಚ್ಚರಿಕೆಯೇ! ದಿನಂಪ್ರತಿ ಚಚ್ಚರದಿಂದ ಪೂಜೆ ಪುರಸ್ಕಾರಗಳೂ ಉತ್ತಮ ತರಹೆ ರುಚಿಕರವಾದ ಪ್ರಸಾದ ನೈವೇದ್ಯವೂ ನಡೆದುವು. ಹೆಂಡತಿ ಎಷ್ಟು ದಿನ ಪೂಜೆ ನಡೆಸಿದಳೆಂಬುದು ನನಗೆ ನೆಪ್ಪಿಲ್ಲ. ಒಂದು ದಿನ ಪೂಜೆಯ ಕೊಟಡಿ ಬರಿದಾಗಿದ್ದಿತು. ವಿಗ್ರಹ ಅಲ್ಲಿರಲಿಲ್ಲ. ನನ್ನ ಹೆಂಡತಿಯನ್ನು ಕರೆದು ದೇವಿಯ ವಿಗ್ರಹವಿಲ್ಲದಿರುವುದಕ್ಕೆ ಕಾರಣವನ್ನು ಕೇಳಿದೆ.

ಆಕೆ ಅಸಮಾಧಾನವನ್ನು ತೋರ್ಪಡಿಸುತ್ತಾ, "ದೇವಿಯನ್ನು ತೊರೆದು ಬಿಟ್ಟೆ. ಆಕೆಯನ್ನು ಒಲಿಸುವುದಕ್ಕೆ ನನ್ನ ಕೈಯಲ್ಲಾದುದನ್ನೆಲ್ಲಾ ಮಾಡಿದು ದಾಯಿತು. ಅವಳು ನನ್ನ ಪ್ರಾರ್ಥನೆಯನ್ನು ಸಲ್ಲಿಸಲಿಲ್ಲ. ತಿಂಗಳು ಮುಗಿದರೂ, ಸಂಬಳವೇನೂ ಹೆಚ್ಚಾಗುವ ಲಕ್ಷಣ ಕಾಣಲಿಲ್ಲ. ವಿಗ್ರಹವನ್ನು ಎಸೆದುಬಿಟ್ಟೆ" ಎಂದಳು.

ನಂತರ ಮನೆಯ ಹಿಂದೆ ಒಂದು ಹಳ್ಳದಲ್ಲಿ ತಿಪ್ಪೆಯ ರಾಶಿಯ ಮೇಲೆ ಆ ಎಸೆದ ವಿಗ್ರಹ ಕೇಳುವರಿಲ್ಲದೆ ಬಿದ್ದಿರುವುದನ್ನು ಕಂಡೆ. ಆಕೆಯ ಭಕ್ತಿ ವಿಚಿತ್ರ ವಾದುದು! ಇದು ನಿಮಗೆ ಏನೆಂದು ತೋರುತ್ತದೆ?" ಕೇಳುತ್ತಿದ್ದವರೆಲ್ಲಾ ಘೊಳ್ಳೆಂದು ನಕ್ಕರು.

ಪ್ರಾಣಾಯಾಮ ಅಭ್ಯಾಸದಿಂದ ನೊಂದಿದ್ದವರ ಸಂಖ್ಯೆ ಪ್ರತಿದಿನವೂ ಏರುತ್ತಿದ್ದುದರಿಂದ ರಾಜಯೋಗಿಯ ಆಸಕ್ತಿ ತಣ್ಣಗಾಗುತ್ತಿದ್ದಿತು. ಅವರು ರಾಮದಾಸನ ಸಲಹೆಯನ್ನು ಕೇಳಿದರು. ಆ ಸಾಧನೆಯನ್ನು ಸಂಪೂರ್ಣವಾಗಿ ತ್ಯಜಿಸಬೇಕೆಂದು ಆವನು ಕಟ್ಟುನಿಟ್ಟಾದ ಬುದ್ಧಿವಾದವನ್ನು ಹೇಳಿದನು. ಇದೇ ರೀತಿಯಾದ ಇತರ ಯೋಗಿಗಳಿಂದ ಪ್ರಾಣಾಯಾಮದ ಪ್ರಚಾರ ಬಹಳವಾಗಿ ನಡೆದಿದ್ದ ಬೆಂಗಳೂರು ಮತ್ತು ದಕ್ಷಿಣ ಕನ್ನಡ ಜಿಲ್ಲೆಯವರ ದೂರುಗಳೂ ಅದೇಕಾಲದಲ್ಲಿ ರಾಮದಾಸನಿಗೆ ಬಂದುವು. ರಾಮದಾಸನು ಇನ್ನು ಸುಮ್ಮನಿರಲು ಆಗಲಿಲ್ಲ. ಈ ಯೋಗದ ಇತರ ನಿಯಮಗಳನ್ನು ಸರಿಯಾಗಿ ಅನುಸರಿಸಲಾರದವರು ಇದನ್ನು ಪ್ರಾರಂಭಿಸಬಾರದು, ಪ್ರಾರಂಭಿಸಿದ್ದರೆ ಮುಂದುವರಿಸಬಾರದು, ಹೀಗೆ ಆರಂಭಿಸುವುದು ಅಥವ ಮುಂದುವರಿಸುವುದು, ಅವರಿಗೆ ಹೇಳಲಾಗದಷ್ಟು ಕಷ್ಟವನ್ನು ತರುವುದೆಂದು ಎಚ್ಚರಿಸಿ ರಾಮದಾಸನು ಒಂದು ಕಠಿನ ಲೇಖನವನ್ನು ಬರೆದು ವೃತ್ತಪತ್ರಿಕೆಗಳಲ್ಲಿ ಪ್ರಕಟಿಸಬೇಕಾಯಿತು. ಅವನು ಈ ವಿಷಯದಲ್ಲಿ ರಾಜಯೋಗಿಯೊಡನೆಯೂ ಸಂಭಾಷಣೆ ಮಾಡಿದನು.

"ರಾಮಜಿ, ನೀವು ಅನುಷ್ಠಾನಮಾಡಿರುವ ಪ್ರಾಣಾಯಾಮ ಅದರ ಸಾಧನೆಯ ಅವಶ್ಯ ಅಂಗಗಳಾದ ಇತರ ನಿಯಮಗಳನ್ನು ಅನುಸರಿಸದಿರುವವರಿಗೆ ಎಷ್ಟು ಅನರ್ಥವನ್ನು ಮಾಡಿದೆಯೆಂದು ನೋಡಿದ್ದೀರಿ. ಇನ್ನುಮುಂದೆ ಈ ಸ್ತ್ರೀಗೆ ಈ ಪುರುಷನಿಗೆ ಈ ಸಾಧನೆಗೆ ಅರ್ಹತೆ ಇದೆಯೆ ಇಲ್ಲವೆ ಎಂಬುದನ್ನು ದೃಢಪಡಿಸಿಕೊಳ್ಳದೆ ಹತ್ತಿರ ಬಂದವರಿಗೆಲ್ಲಾ ಸಿಕ್ಕಿದಂತೆ ಉಪದೇಶ ಕೊಡದಿರುವುದು ಒಳ್ಳೆಯದು'' ಎಂದು ರಾಮದಾಸನು ಬುದ್ಧಿವಾದ ಹೇಳಿದನು.

ಇನ್ನು ಸಂನ್ಯಾಸಕ್ಕೆ ಸಿದ್ಧನಾಗುತ್ತಿದ್ದ ವಕೀಲನ ಕಥೆ. ಆತನು ಈ ವಿಚಾರವನ್ನು ರಾಮದಾಸನೊಂದಿಗೆ ಪ್ರಸ್ತಾಪಿಸಿದನು. ರಾಮದಾಸನು ಅದು ಬೇಡವೆಂದು ಸೂಚಿಸಿ ಹೀಗೆಂದನು.

"ದೇವರ ಸೇವೆಗೆ ಜೀವನವನ್ನು ಮೀಸಲು ಮಾಡಬೇಕೆಂದು ನಿಮಗೆ ಅಷ್ಟು ಆಸೆ ಇದ್ದರೆ ಪ್ರಾಪಂಚಿಕ ಉದ್ಯೋಗದಿಂದ ನಿವೃತ್ತರಾಗಿ ನಿಮ್ಮ ಭೂಮಿಯಲ್ಲಿ ಎಲ್ಲಿಯಾದರೂ ಒಂದು ಗುಡಿಸಲನ್ನು ಕಟ್ಟಿಕೊಂಡು ಚಿಂತನ ಮತ್ತು ದೇವರ ಧ್ಯಾನದಲ್ಲಿ ಕಾಲ ಕಳೆಯಿರಿ. ಬರಿ ಕಾವಿಯ ಬಟ್ಟೆಯನ್ನು ಧಾರಣೆ ಮಾಡುವುದರಿಂದಲೇ ದೇವರನ್ನು ಕಾಣಬಹುದೆಂದು ಎಣಿಸಬೇಡಿ.''

ಆತನು ತಾನು ಕೊನೆಯ ಮಾತಾಗಿ ಸಂನ್ಯಾಸವನ್ನು ತೆಗೆದುಕೊಳ್ಳಲು

ನಿರ್ಧರಿಸಿರುವೆನೆಂದೂ ಆ ವಿಷಯದಲ್ಲಿ ನಿಶ್ಚಯ ಮಾಡಿಕೊಂಡಿರುವುದಾಗಿಯೂ ಹೇಳಿದನು.

"ದೈವೇಚ್ಛೆಯಂತೆ ನಡೆಯಲಿ" ಎಂದು ರಾಮದಾಸನು ಸುಮ್ಮನಾದನು.

ಆತನು ಅನುಕೂಲವಂತನಾದ ಸಂಸಾರವೊಂದಿಗ ವೃದ್ಧ. ಒಂದು ರಾತ್ರಿ ಅವನು ಕಾಷಾಯವಸ್ತ್ರಗಳನ್ನು ತೆಗೆದುಕೊಂಡು ಬಂದು,

"ಸ್ವಾಮಿಜಿ, ನನ್ನ ಕುಟುಂಬದ ರಕ್ಷಣೆಗೆ ಎಲ್ಲಾ ಏರ್ಪಾಡುಗಳನ್ನೂ ಮಾಡಿದ್ದೇನೆ. ನನ್ನ ಆಸ್ತಿಗಳ ಅಧಿಕಾರವನ್ನೆಲ್ಲಾ ಸರಿಯಾದವರಿಗೆ ವಹಿಸಿದ್ದೇನೆ. ಈಗ ನಾನು ಬಂಧನರಹಿತನಾಗಿದ್ದೇನೆ. ನಾಳೆ ಎರ್ನಾಕುಲದಿಂದ ಹೊರಟು, ನಿಮ್ಮ "ಪರಮಾತ್ಮನ ಶೋಧನೆಯಲ್ಲಿ" ಎಂಬ ಪುಸ್ತಕದಲ್ಲಿ ವರ್ಣಿಸಿರುವ ಮೇರೆಗೆ, ನೀವು ನಿಮ್ಮ ಮೊದಲನೆ ವರ್ಷದ ಪರಿವ್ರಾಜಕ ಜೀವನದಲ್ಲಿ ಮಾಡಿದಂತೆ, ದುಡ್ಡನ್ನಿಟ್ಟುಕೊಳ್ಳದೆ ಊರಿಂದೂರಿಗೆ ಸಂಚರಿಸಬೇಕೆಂದು ನನ್ನ ಅಭಿಲಾಷೆ" ಎಂದನು.

ಅವನು ಮಾರನೆಯ ದಿನ ಎರ್ನಾಕುಲಂ ಬಿಟ್ಟು ಹೊರಟನು. ರಾಜಯೋಗಿ ಅವನ ಜೊತೆಯಲ್ಲಿ ಹೊರಟನು. ಆಗ್ಗೆ ತನಗೆ ಸಂಭವಿಸಿದ್ದ ಅನಾನುಕೂಲ ಸಂದರ್ಭದಿಂದ ಪಾರಾಗಲು ದೊರೆತ ಈ ಸುಸಮಯವನ್ನು ಕಳೆದುಕೊಳ್ಳಲು ರಾಜಯೋಗಿಗೆ ಸಾಧ್ಯವಿರಲಿಲ್ಲ. ಅನಂತರ ಕೇಳಿದ್ದರಲ್ಲಿ ವಕೀಲನು ಕೆಲವು ತಿಂಗಳ ಪ್ರವಾಸದ ನಂತರ ತನ್ನ ವಕೀಲವೃತ್ತಿಗೆ ಹಿಂತಿರುಗಿದುದಾಗಿ ತಿಳಿಯಿತು. ಈತನು ಈಗ ಆನಂದಾಶ್ರಮದ ಕಾರ್ಯಗಳಲ್ಲಿ ಆಪ್ತನಾಗಿ ಬೆರೆತಿದ್ದಾನೆ.

ಕೆಲವು ತಿಂಗಳ ಕಾಲ ರಾಮದಾಸನನ್ನು ಬಿಟ್ಟಿದ್ದ ಹಳೆಯ ಮಲೇರಿಯ ಜ್ವರ ಪುನಃ ತಲೆ ಹಾಕಿತು. ಅವನಿಗೆ ವಾಯಿದೆ ಜ್ವರ ಬರಲು ಆರಂಭವಾಯಿತು.

ಸಂಜೀವರಾಯನೂ ಅವನ ಪತ್ನಿಯೂ ರಾಮದಾಸನ ವಿಚಾರದಲ್ಲಿ ತೀರ ಪ್ರೀತಿ ಆದರದಿಂದ ವರ್ತಿಸಿದರು. ರಾಮಮಂತ್ರ ಸಂಜೀವರಾಯನನ್ನು ಹೇಗೆ ವಶಪಡಿಸಿಕೊಂಡಿತೆಂದರೆ, ಆತ ಒಂದು ನಿಮಿಷವಾದರೂ ಅದನ್ನು ಮರೆಯನು. ಅದು ಒಂದು ಸಲ ಮನಸ್ಸಿಗೆ ಹಿಡಿಯಿತೆಂದರೆ ಹೀಗೆಯೇ ಆಗುತ್ತದೆ. (ಕೆಲಸ ಮಾಡುತ್ತಿರುವಾಗಲೂ ತನ್ನನ್ನೇ ಅರಿಯದೆ ಮಂತ್ರ ಮನಸ್ಸಿನ ಆಳದಲ್ಲಿ ತನ್ನಷ್ಟಕ್ಕೆ ತಾನೆ ಉಚ್ಚಾರವಾಗುತ್ತಿರುತ್ತದೆ.) ಆಗ ಅವನಿಗೆ ಹೀಗೆ ಆಗುತ್ತಿದ್ದಿತು. ಅವನು ತನ್ನ ಒಳಗೆ ಸಂತೋಷ ಮತ್ತು ಶಾಂತಿಯ ಚಿಲುಮೆ ಉಕ್ಕುವುದನ್ನು ಅನುಭವಿಸುತ್ತಿದ್ದನು. ಪ್ರಶಾಂತಭಾಸ್ವರ, ಆನಂದದ್ಯೋತಕವಾದ ಅವನ ಮುಖದಲ್ಲಿ ಆ ಸುಖಾನುಭವ ಕಂಡುಬರುತ್ತಿದ್ದಿತು.

ರಾಮದಾಸನ ಪೂರ್ವಾಶ್ರಮದ ಪುತ್ರಿ ರಮಾಬಾಯಿಯನ್ನು ರಾಮದಾಸನ ಅಕ್ಕನ ಮಗ ಚಂದ್ರಶೇಖರರಾಯನಿಗೆ ಕೊಟ್ಟು ಮದುವೆ ಮಾಡುವಂತೆ ನಿಶ್ಚಯವಾಯಿತೆಂದೂ ಮದುವೆ ಸ್ವಲ್ಪಕಾಲದಲ್ಲೇ ಕಾಸರಗೋಡಿನಲ್ಲಿ ನಡೆಯುವುದೆಂದೂ ರಾಮದಾಸನಿಗೆ ಸುದ್ದಿ ಬಂದಿತು.

## (ii) ಕ್ರೈಸ್ತ ಸಾಧು

ಮಾರ್ಕ್ ಸಂಜೀವರಾಯರು ರಾಮದಾಸನ ಪೂರ್ವಾಶ್ರಮದ ಸೋದರತ್ತೆಯ ಮಗ. ಚಿಕ್ಕಂದಿನಿಂದಲೂ ಇವರಿವರಿಗೆ ಬಹಳ ಸ್ನೇಹ. ಚಿಕ್ಕವಯಸ್ಸಿನಲ್ಲಿಯೇ ಈತ ಹಿಂದೂಮತವನ್ನು ಬಿಟ್ಟು ಕ್ರೈಸ್ತ ಮತವನ್ನು ಅವಲಂಬಿಸಿದರು. ಮಹನೀಯ ಕ್ರೀಸ್ತನ ಉಚ್ಚ ಆದರ್ಶ ಅವರನ್ನು ಮೋಹಗೊಳಿಸಿ ಸೆರೆಹಿಡಿಯಿತು. ಶಾಶ್ವತ ಜೀವನದ ಶ್ರದ್ಧಾವಂತ ಅನ್ವೇಷಕರಾಗಿ ಇವರು ಕ್ರೀಸ್ತನ ಅನುಯಾಯಿಯಾದರು. ಇವರ ರಾಮದಾಸನ ಸ್ನೇಹ ಕುಂದದೆ ಇದ್ದಿತು. ದೂಷಣೆಗೆ ಗುರಿಮಾಡಿ ಹಿಂದೂ ಜನಗಳ ಅಪಹಾಸ್ಯ ವಸ್ತುವಾಗಿ ಮಾಡುವ ಒಂದು ಮಾರ್ಪಾಡನ್ನು ಮಾಡುವುದರಲ್ಲಿ ಆತನು ಪ್ರಕಟಿಸಿದ ಮನಃಸ್ಥೈರ್ಯವನ್ನು ರಾಮದಾಸನು ಮೆಚ್ಚಿದ್ದನು. ನಂಬಿಕೆ ಯಂತೆ ನಡೆಯುವ ಧೀರನಾದ ಕಾರಣ ಇವರು ಜನರ ಕಿರುಕುಳದ ಹಿಂಸೆ ಯನ್ನು ತಾಳ್ಮೆಯಿಂದ ಸಹಿಸಿದರು. ಕ್ರೈಸ್ತ ಮಿಷನರಿಗಳಲ್ಲಿ ಪರಿಶುದ್ಧರಾದ ಸಾತ್ವಿಕರೊಡನೆ ಒಡನಾಡಿ, ಅವರಿಂದ ಆತ್ಮಸಮರ್ಪಣೆಯ ಜೀವನದ ನಡತೆಯನ್ನು ಗ್ರಹಿಸಿದರು.

ರಾಮದಾಸನ ಹೊಸ ಜನ್ಮವೂ, ಪರಿಷ್ಕೃತ ದೃಷ್ಟಿಯೂ, ಅವನ ಜೀವನದಲ್ಲಿ ದೊಡ್ಡ ಮಾರ್ಪಾಡನ್ನುಂಟುಮಾಡಿದ್ದುವು. ದಕ್ಷಿಣ ಕನ್ನಡ ಜಿಲ್ಲೆಯ ಒಂದು ವರ್ಷದ ಪ್ರವಾಸವನ್ನು ಮುಗಿಸಿಕೊಂಡು ಬಂದನಂತರ ಮಾರ್ಕ್ ಸಂಜೀವರಾಯರು ರಾಮದಾಸನನ್ನು ಭೇಟಿ ಮಾಡಿದರು. ಅವರನ್ನು ನೋಡಿ ರಾಮದಾಸನಿಗೆ ತುಂಬ ಸಂತೋಷವಾಯಿತು. ಈಗ ಆತನಿಗೆ ರಾಮದಾಸನ ಮೇಲಣ ಪ್ರೇಮ ನೂರು ಪಾಲು ಹೆಚ್ಚಿದ್ದಿತು. "ಹೊಸ ಒಡಂಬಡಿಕೆ" (New Testament) ಗ್ರಂಥದ ಕ್ರೀಸ್ತನ ಉದಾತ್ತ ಉಪದೇಶಗಳನ್ನು, ರಾಮದಾಸನಿಗೆ ಮನಮುಟ್ಟಿ ಅರಿಯಿಸಲು ಇವರು ಕಾರಣರಾಗಿದ್ದರು. ರಾಮದಾಸನಿಗೆ ಯಾವ ಒಂದು ಸೂತ್ರ ಒಂದು ಮತವನ್ನು ಕುರಿತು ಪಕ್ಷಪಾತವಿಲ್ಲ. ಅವನು ಲೋಕದ ಹಿರಿಯ ಮತಗಳ ಸ್ಥಾಪಕ ರಾದ ಶ್ರೀ ಕೃಷ್ಣ, ಯೇಸುಕ್ರೀಸ್ತ, ಬುದ್ಧ, ಮಹಮ್ಮದ್, ಇವರೆಲ್ಲರನ್ನೂ ಒಂದೇ ಸಮನಾದ ಗೌರವದಿಂದ ಕಾಣುತ್ತಿದ್ದನು. ಈ ಮಹನೀಯರೆಲ್ಲರೂ ಪರಾತ್ಪರ ತತ್ತ್ವದ ದಾರಿಯನ್ನು ಮೂಢಾತ್ಮರಿಗೆ ತೋರಿಸಲೋಸುಗ ಪಂಜನ್ನು ಎತ್ತಿ ಹಿಡಿದಿರುವ ಮಹಾತ್ಮರು. ಆ ಪರತತ್ತ್ವ ಇವರ ರೂಪದಲ್ಲಿ ಪ್ರತ್ಯಕ್ಷವಾಗಿದೆ. ರಾಮದಾಸನು ಇದನ್ನು ಬಲ್ಲನು.

ಮಾರ್ಕ್ ಸಂಜೀವರಾಯರು ಕ್ರೀಸ್ತನ ಸಂದೇಶದ ಪ್ರಚಾರಕರಾಗಿದ್ದರು. ಅವರ ಕೆಲಸ ವಿಶಾಲವಾದ ಕ್ಷೇತ್ರವನ್ನು ವ್ಯಾಪಿಸಿದ್ದಿತು. ತಿರುವಾಂಕೂರು ದೇಶದ ಎಲ್ಲೆಪ್ಪಿ ಕೊಟ್ಟಾಯಂ ನಗರಗಳಿಗೆ ಹೋಗುತ್ತ ಅವರು ಎರ್ನಾಕುಲಂಗೆ ಬಂದಿದ್ದರು. ಅವರು ರಾಮದಾಸನ ಆವಾಸಕ್ಕೆ ಭೆಟ್ಟಿ ಕೊಟ್ಟು, ಅವನನ್ನು ಈ ಸ್ಥಳಗಳಿಗೆ ಕರೆದು

ಕೊಂಡು ಹೋಗುವುದಾಗಿ ತಿಳಿಸಿದರು. ರಾಮದಾಸನು ಒಡನೆ ಈ ಯೋಚನೆಗೆ ಸಮ್ಮತಿಸಿದನು.

ಇಬ್ಬರೂ ಹೊರಟು ಸಕಾಲದಲ್ಲಿ ಎಲ್ಲೆಪ್ಪಿಯನ್ನು ಸೇರಿದರು. ಅಲ್ಲಿ "ಕ್ರಿಶ್ಚಿಯನ್ ಇನ್ಸ್ಟಿಟ್ಯೂಟ್" ಎಂಬ ವಿಶಾಲವಾದ ಕಟ್ಟಡದಲ್ಲಿ ಇಳಿದುಕೊಂಡರು. ಈ ಸಂಸ್ಥೆಯಲ್ಲಿ ರಾಮದಾಸನು ಆತ್ಮಸಮರ್ಪಣೆ ಮಾಡಿಕೊಂಡಿದ್ದ ಇಬ್ಬರು ಕ್ರೈಸ್ತರನ್ನು ಕಂಡನು. ಸಾಧು ಮತ್ತಾಯ್ ವಯಸ್ಸಾದ ಮನುಷ್ಯ, ಕಾವಿ ಬಟ್ಟೆಯನ್ನು ಧರಿಸಿದ್ದನು. ಥಾಮಸ್ ಚಿಕ್ಕವಯಸ್ಸಿನವನು. ಇಬ್ಬರೂ ರಾಮದಾಸನಿಗೆ ತುಂಬ ಪ್ರೀತಿ ತೋರಿಸಿದರು. ಥಾಮಸನ ಪ್ರಕೃತಿ ಸಮಾಧಾನವಾದದ್ದು. ಮತ್ತಾಯಿಯ ಸ್ವಭಾವ ಬೇರೆ ತರ. ಅವನು ಕ್ರಿಸ್ತನ ಉಪದೇಶವೊಂದೇ ದೇವರಿಂದ ಪ್ರಕಟವಾದ ಸತ್ಯವೆಂದು ಅದನ್ನು ರಾಮದಾಸನಿಗೆ ಕಲಿಸಲು ಕೊಡತಿಯ ಪೆಟ್ಟಿನಂತೆ ಮಾತುಗಳನ್ನಾಡತೊಡಗಿದನು. ಕ್ರೈಸ್ತ ಪ್ರಸಾರಕನಿಗೆ ಇರಬೇಕಾದ ಎಲ್ಲ ಆಸಕ್ತಿಯಿಂದ, ಕಾಲ ಅಕಾಲವೆನ್ನದೆ ಸ್ವಮತ ವಿಸ್ತರಣಕ್ಕಾಗಿ ದುಡಿದನು.

ಕೊನೆಗೆ ರಾಮದಾಸನು ಅವನಿಗೆ ಹೀಗೆಂದನು :

"ಭಗವಂತನು ರಾಮದಾಸನ ತಲೆಗೆ ಒಂದು ಸ್ಥಾಯಿಯಾದ ಆಕಾರವನ್ನು ಕೊಟ್ಟಿದ್ದಾನೆ. ನೀವು ಎಷ್ಟು ಸಲ ಬೇಕಾದರೂ ಬಡಿಯಬಹುದು. ನಿಮ್ಮ ಇಷ್ಟಪಡುವ ರೀತಿಗೆ ಅದನ್ನು ತಿದ್ದಲಾರಿರಿ"

ಇದನ್ನು ಕೇಳುತ್ತಿದ್ದ ಮಾರ್ಕ್ ಸಂಜೀವರಾಯರು ಬಿದ್ದುಬಿದ್ದು ನಕ್ಕರು. ಹಾಸ್ಯಕ್ಕಾಗಿ,

"ನಿನ್ನ ತಲೆಯ ಆಕಾರವನ್ನು ಬದಲಾಯಿಸಲು ಮತ್ತಾಯ್‌ಗೆ ಸಾಧ್ಯವಾಯಿತೆ?" ಎಂದು ಕೇಳುವರು.

"ಅಸಾಧ್ಯವಾದುದನ್ನು ಮತ್ತಾಯ್ ಮಾಡಲಾರ. ರಾಮದಾಸನ ತಲೆಯನ್ನು ಒಂದು ಪಡಿಅಚ್ಚಿನಲ್ಲಿ ಮಾಡಿದೆ. ಅದರಿಂದ ಅದಕ್ಕೆ ಸ್ಥಾಯಿಯಾದ ಒಂದು ಆಕಾರವಿದೆ'' ಎಂದು ರಾಮದಾಸನು ಉತ್ತರ ಕೊಡುವನು. ಇಬ್ಬರೂ ನಗುವರು. ಮತ್ತಾಯ್ ಬಂದಾಗಲೆಲ್ಲಾ ರಾಮದಾಸನು "ಅಗೋ, ಸುತ್ತಿಗೆ ಬಂದಿತು!" ಎನ್ನುವನು. ಕೊನೆಗೆ ಮತ್ತಾಯ್ ತನ್ನ ನಿರರ್ಥಕವಾದ ಉದ್ಯಮವನ್ನು ಬಿಟ್ಟನು. ರಾಮದಾಸನು ಸುತ್ತಿಗೆ ಮುರಿದುಹೋಯಿತೆಂದು ತಿಳಿದನು.

ರಾಮದಾಸನು ಆ ಇನ್‌ಸ್ಟಿಟ್ಯೂಟಿನಲ್ಲಿ ಕಳೆದ ಆ ದಿನಗಳೆಲ್ಲಾ ಆನಂದಮಯವಾದ ದಿನಗಳು. ಆ ಕಟ್ಟಡದ ಮಹಡಿಯ ಮೇಲಿನ ವಿಶಾಲವಾದ ಕೊಟಡಿಗಳಲ್ಲಿ ರಾಮದಾಸನು ವಿಲಾಸಿಯಾದ ಒಂದು ಆಡಿನಮರಿಯಂತೆ ನಿರಾತಂಕವಾಗಿ ಕುಣಿದು ಕುಪ್ಪಳಿಸಿ ಹಾರಿ ಓಡಾಡುತ್ತಿದ್ದನು. ಸಂಜೀವರಾಯರು, ರಾಮದಾಸನು ಮತ್ತೆ ಮತ್ತೆ ಹೇಳುತ್ತಿದ್ದ 'ಹರ್ಷೋನ್ಮಾದ' ಎಂಬ ಪದವನ್ನು ಜ್ಞಾಪಿಸಿಕೊಂಡರು.

ಸಂಜೀವರಾಯರು ಇನ್‌ಸ್ಟಿಟ್ಯೂಟನಲ್ಲಿ "ನಾನು ಏಕೆ ಕ್ರೀಸ್ತನ ಅನುಯಾಯಿಯಾದೆ?" ಎಂಬ ವಿಷಯವಾಗಿ ಎರಡು ಭಾಷಣಗಳನ್ನು ಮಾಡಿದರು. ಕೆಲವು ದಿವಸಗಳನಂತರ ರಾಮದಾಸನು ಸಂಜೀವರಾಯರು ಮತ್ತು ಥಾಮಸ್‌ರೊಡನೆ ಕೊಟ್ಟಾಯಂಗೆ ಹೊರಟನು. ಆ ಊರನ್ನು ಸೇರಿದ ದಿನ ಅವನಿಗೆ ಮಲೇರಿಯ ಜ್ವರ ಬಂದಿತು. ಅವನನ್ನು ಒಬ್ಬ ಕ್ರೈಸ್ತ ಧರ್ಮಿಷ್ಠನ ಮನೆಯಲ್ಲಿಳಿಸಿದರು. ಆತನು ಪ್ರೇಮ ಆದರಗಳ ಮೂರ್ತಿ. ಜ್ವರ ಒಂದು ರಾತ್ರಿ ಮಾತ್ರ ಇದ್ದಿತು.

ಮಾರನೆಯ ದಿನ ಸಂಜೀವರಾಯರು ಉಪನ್ಯಾಸ ಮಾಡುವರೆಂದು ಪ್ರಕಟವಾಯಿತು. ಅದು ಆ ಸ್ಥಳದ Y. M. C. A. ಕಟ್ಟಡದಲ್ಲಿ ನಡೆಯತಕ್ಕದ್ದೆಂದು ಗೊತ್ತಾಗಿದ್ದಿತು. ಸ್ಥಳೀಯ ಮಿಷನರಿ ಒಬ್ಬರು ಅಗ್ರಾಸನವನ್ನು ವಹಿಸಿದ್ದರು. ಉಪನ್ಯಾಸವನ್ನು ಕೇಳಲು ಜನ ಗುಂಪುಸೇರಿದ್ದಿತು. ಮಾರನೆ ಬೆಳಿಗ್ಗೆ ರಾಮದಾಸನು ಸಂಜೀವರಾಯರ ಸಂಗಡ—ಇದನ್ನು ಬೇರೆಯಾಗಿ ತಿಳಿಸಬೇಕಾದ್ದಿಲ್ಲ—ಕ್ರಿಶ್ಚಿಯನ್ ಹೈಸ್ಕೂಲಿಗೆ ಭೇಟಿಕೊಟ್ಟನು. ಇಲ್ಲಿಯ ಮುಖ್ಯೋಪಾಧ್ಯಾಯರು ರಾಮದಾಸನನ್ನು ಸ್ವಾಗತಿಸಿದರು. ಇವರು ಖಾದಿ ವಸ್ತ್ರಗಳನ್ನು ಧರಿಸಿದ್ದರು. ರಾಮದಾಸನು ವಿದ್ಯಾರ್ಥಿಗಳಿಗೆ ಕೆಲವು ಮಾತನ್ನು ಹೇಳಬೇಕೆಂದು ಏರ್ಪಾಡು ಮಾಡಿದರು. ರಾಮದಾಸನು "ದೇವರು ಪ್ರೇಮಮಯನು" ಎಂಬ ವಿಷಯ ಕ್ರೀಸ್ತನ ಬೋಧೆಗಳಲ್ಲಿ ಕಾಣುವ ರೀತಿಯನ್ನು ಕುರಿತು ಅರ್ಧ ಗಂಟೆ ಕಾಲ ಆಂಗ್ಲ ಭಾಷೆಯಲ್ಲಿ ಉಪನ್ಯಾಸ ಮಾಡಿದನು. ಮುಖ್ಯೋಪಾಧ್ಯಾಯರು ಇದಕ್ಕೆ ಮಲಯಾಳಿಯಲ್ಲಿ ಅರ್ಥ ಹೇಳಿ ನೆರೆದಿದ್ದ ಹುಡುಗರಿಗೆ ವಿಶದಪಡಿಸಿದರು.

ಆ ಸಾಯಂಕಾಲ Y. M. C. A. ಯಲ್ಲಿ ಸಂಜೀವರಾಯರ ಇನ್ನೊಂದು ಉಪನ್ಯಾಸ ಇದ್ದಿತು. ಸ್ನೇಹಿತರ ಒತ್ತಾಯದಮೇಲೆ ರಾಮದಾಸನು ಸಂಜೀವರಾಯರ ಉಪನ್ಯಾಸಕ್ಕೆ ಪೂರ್ವಭಾವಿಯಾಗಿ ಕಾಲು ಗಂಟೆ ಮಾತನಾಡಿದನು. ಅವನು ಮತಗಳ ಏಕತೆಯನ್ನು ಅಧಿಕರಿಸಿ ಪ್ರಪಂಚದ ಬೇರೆ ಬೇರೆ ಕಾಲಗಳಲ್ಲಿ ಅವತಾರವೆತ್ತಿದ ಮತಸ್ಥಾಪಕರೆಲ್ಲ ತಮ್ಮ ಬೋಧನೆಗಳಲ್ಲಿ ಏಕೀಭವಿಸಿದ್ದರೆಂಬುದನ್ನು ತೋರಿಸಿದನು. ನಂತರ ಸಂಜೀವರಾಯರ ಉಪನ್ಯಾಸವಾಯಿತು. ಈಗ ಯಾರೂ ಅಧ್ಯಕ್ಷರಿರಲಿಲ್ಲ. ಉಪನ್ಯಾಸ ಮಾಡುವವರ ಉಪನ್ಯಾಸ ಕೇಳುವವರ ಹೃದಯಗಳಲ್ಲಿ ಮಂಡಿಸಿರುವ ಪರಮಾತ್ಮನೇ ಅದಕ್ಕೆ ಅಧ್ಯಕ್ಷ.

ಎರಡು ದಿನಗಳನಂತರ ಇವರು ಎರ್ನಾಕುಲಂಗೆ ಹಿಂತಿರುಗಿದರು. ಆಗ ರಾಮದಾಸನಿಗೆ ಆ ಸುಮಾರಿನಲ್ಲಿ ಹರಿದ್ವಾರದಲ್ಲಿ ನಡೆಯುವುದಾಗಿದ್ದ ಕುಂಭಮೇಳಕ್ಕೆ ಹೋಗಬೇಕೆಂಬ ಅಭಿಲಾಷೆ ಉಂಟಾಯಿತು. ಹಿಮವತ್ಪರ್ವತವನ್ನು ಪುನಃ ಸಂದರ್ಶಿಸುವ ಸಂಭವ ಅವನಿಗೆ ಬಹು ಉತ್ಸಾಹವನ್ನು ನೀಡಿತು. ಆದರೆ ಎರ್ನಾಕುಲಂ ನಗರವನ್ನು ಬಿಟ್ಟು ಹೊರಟವನು ಉತ್ತರ ಹಿಂದೂದೇಶದ ಪ್ರವಾಸವನ್ನು ಕೈಕೊಳ್ಳುವುದಕ್ಕೆ ಮುಂಚೆ ದಕ್ಷಿಣ ಕನ್ನಡ ಜಿಲ್ಲೆಗೆ ಭೇಟಿಕೊಡಲು ಉದ್ದೇಶಿಸಿದನು.

# ಅಧ್ಯಾಯ ೨೭.

## ಕಾಸರಗೋಡು—ಸ್ವರ್ಗಾಶ್ರಮ.

### (i) ರಾಮದಾಸನು ಸೀತಾರಾಮರನ್ನು ಕಾಣುತ್ತಾನೆ.

ರಾಮದಾಸನು ಕಾಸರಗೋಡಿಗೆ ಸೇರಿದಾಗ, ಒಂದು ವಾರದಲ್ಲಿ ರಮಾಬಾಯಿಯ ಮದುವೆ ನಡೆಯುವುದಾಗಿ ತಿಳಿಯಿತು. ಪ್ರತಿ ವಿಷಯದಲ್ಲಿಯೂ ರಾಮದಾಸನಿಗೆ ಪೂರ್ಣದಯ ತೋರುತ್ತಿದ್ದ ಆನಂದರಾಯರು ಮದುವೆಯನ್ನು ತಮ್ಮ ಮನೆಯಲ್ಲಿ ನಡೆಯಿಸುವುದಾಗಿ ಒಪ್ಪಿದ್ದರು. ಸದ್ಯಕ್ಕೆ ರಾಮದಾಸನು ಇವರ ಕಛೇರಿಯ ಒಂದು ಸಣ್ಣ ಕೊಟಡಿಯಲ್ಲಿರುತ್ತಿದ್ದನು. ಮದುವೆಯ ಏರ್ಪಾಡುಗಳು ಮುಂದುವರಿದುವು. ಮುಹೂರ್ತದ ದಿನ ಮನೆಯಲ್ಲಿಯೂ, ಮದುವೆಯ ಚಪ್ಪರದಲ್ಲಿಯೂ ಜನ ತುಂಬಿದ್ದರು. ರಾಮದಾಸನು ಮದುವೆಯ ಕಾಲದಲ್ಲಿ ಮೊದಲಿಂದ ಕೊನೆಯವರೆಗೂ ತನಗೆ ಯಾವ ವಿಧದಲ್ಲಿಯೂ ಸಂಬಂಧವಿಲ್ಲದ ಸಾಕ್ಷಿಯಾಗಿದ್ದನು. ತನ್ನ ಕಾಲವನ್ನು ಮಕ್ಕಳ ಸಂಗಡ ಆಟವಾಡುವುದರಲ್ಲಿ ವಿನಿಯೋಗಿಸಿದನು. ಮದುವಣಿಗನೂ ಮದುವಣಗಿತ್ತಿಯೂ ಕಲ್ಯಾಣ ಮಂಟಪದಲ್ಲಿ ಮಂಡಿಸಿದ್ದಾಗ ಒಬ್ಬರು ಒಮ್ಮೆ ರಾಮದಾಸನನ್ನು ಇವರು ಯಾರೆಂಬುದಾಗಿ ಪ್ರಶ್ನಿಸಿದರು. ರಾಮದಾಸನು,

“ರಾಮದಾಸನಿಗೆ ಈ ದಂಪತಿಗಳಲ್ಲಿ ರಾಮ ಸೀತಾ ಇವರು ಕಾಣಿಸುತ್ತಾರೆ” ಎಂದು ತಕ್ಷಣ ಉತ್ತರವಿತ್ತನು.

ಮದುವೆಯಲ್ಲಿ ಮುಖ್ಯವಾದ ಭಾಗ ಮುಹೂರ್ತವಾದನಂತರ ಬಡವರಿಗೆ ಮಾಡಿದ ಅನ್ನದಾನ. ಮುನ್ನೂರು ನಾನೂರು ಬಡಜನರಿಗೆ ಮಿಷ್ಟಾನ್ನ ಭೋಜನವಾಯಿತು. ಮದುವೆಯನ್ನು ಆನಂದರಾಯರೂ ಅವರ ಧರ್ಮಪತ್ನಿಯೂ ನಡೆಸಿದರು. ಕೆಲವು ದಿನಗಳ ನಂತರ ರಾಮದಾಸನು ಕಾಸರಗೋಡಿನಿಂದ ಮಂಗಳೂರಿಗೆ ಹೋಗಿ ಅಲ್ಲಿ ಕೆಲವು ದಿನಗಳು ನಿಂತನು. ಅಲ್ಲಿ ಪುನಃ ಮಾರ್ಕ್ ಸಂಜೀವರಾಯರ ಭೇಟಿಯಾಗಿ ಇವನು ಅವರೊಡನೆ ಬಲ್ಮಠದಲ್ಲಿ ಅವರ ಕೊಟಡಿಯಲ್ಲಿ ಕೆಲವು ಧಾರ್ಮಿಕ ಗ್ರಂಥಗಳನ್ನು ಅವಲೋಕಿಸಿದನು. ಸಂಜೀವರಾಯರು ರಾಮದಾಸನನ್ನು ಕ್ರೈಸ್ತಮತ ಪ್ರಚಾರಕ ದಂಪತಿಗಳಿಬ್ಬರಿಗೆ ಪರಿಚಯಮಾಡಿಕೊಟ್ಟರು. ಕ್ರೈಸ್ತಮತದವರಿಗೆ ರಾಮದಾಸನ ಪರಿಚಯ ಮಾಡಿಕೊಡುವುದರಲ್ಲಿ ಅವರು ತುಂಬ ಶ್ರದ್ಧೆಯನ್ನು ವಹಿಸಿದರು.

ಭವಾನೀ ಶಂಕರರಾಯನ ತಂದೆ ಕೃಷ್ಣರಾಯರು ಆಗ ಮಂಗಳೂರಿನಲ್ಲಿದ್ದರು. ಅವರು ರಾಮದಾಸನ ಬಳಿಗೆ ಬಂದು ಅವನ ಜೊತೆಯಲ್ಲಿ ಬೆಂಗಳೂರಿಗೆ ಬರುವುದಾಗಿ ಸೂಚಿಸಿದರು. ಇಬ್ಬರೂ ಮಡಕೇರಿಯ ಮಾರ್ಗವಾಗಿ ಬಸ್ಸಿನಲ್ಲಿ ಪ್ರಯಾಣ

ಮಾಡಿದರು. ಸಂಜೆಗೆ ಬೆಟ್ಟಗುಡ್ಡಗಳ ಆ ನಾಡನ್ನು ಸೇರಿದರು. ಆಗ ತುಂತುರು ಸೋನೆ ಬೀಳುತ್ತಿದ್ದಿತು. ರಾಮುದಾಸನನ್ನು ಮೋಟಾರು ಏಜಂಟನ ಇಕ್ಕಟ್ಟಾದ ಕೊಟಡಿಯಲ್ಲಿ ಕುಳ್ಳಿರಿಸಿದರು. ರಾತ್ರಿಯನ್ನು ಎಲ್ಲಿ ಕಳೆಯುವುದು ? ರಾಮುದಾಸನಿಗೆ ಯೋಗ್ಯವಾದ ಸ್ಥಳವನ್ನು ದೊರಕಿಸಬೇಕೆಂಬ ಆಸೆಯಲ್ಲಿ ಈ ಪ್ರಶ್ನೆ ಕೃಷ್ಣರಾಯರಿಗೆ ತುಂಬಾ ಹಿಂಸೆಯನ್ನುಂಟುಮಾಡಿತು. ಆದರೆ ಭಗವಂತನು ಈ ಎಲ್ಲ ಸನ್ನಿವೇಶಕ್ಕೂ ಸಿದ್ಧಮಾಡಿದ್ದನು. ಕತ್ತಲಾಗುತ್ತ ಬಂದಾಗ ರಾಮುದಾಸನು ಹಿಂದೆ ಎಂದೂ ನೋಡದ ಒಬ್ಬ ವ್ಯಕ್ತಿ ಬಂದು ನಮಸ್ಕಾರ ಮಾಡಿ,

"ಸ್ವಾಮಿಜಿ, ತಾವು ಕೃಪೆಮಾಡಿ ನನ್ನ ಮನೆಗೆ ದಯಮಾಡಿಸುವುದಾದರೆ ನನಗೆ ಅತ್ಯಂತ ಹರ್ಷವಾಗುತ್ತದೆ. ನಾನು ತಮ್ಮ ದರ್ಶನಕ್ಕಾಗಿ ಎಷ್ಟೋ ಹಾತೊರೆಯುತ್ತಿದ್ದೆ. ಭಗವಂತನು ಈ ಸುಯೋಗವನ್ನು ಈಗ ಅನುಗ್ರಹಿಸಿದ್ದಾನೆ. ದಯವಿಟ್ಟು ನನ್ನ ಸಂಗಡ ಬರಬೇಕು" ಎಂದನು.

ರಾಮುದಾಸನು ಸಮ್ಮತಿಸಲು, ಆತನು ರಾಮುದಾಸನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಅದು ಮಹಡಿಯ ಮನೆ. ಸಂಸಾರದವರೆಲ್ಲರೂ ಎಲ್ಲಿಗೋ ಹೋಗಿದ್ದರು. ಮನೆಯಾತನು ಸೇವಕನೊಂದಿಗೆ ಒಬ್ಬನೆ ಇದ್ದನು. ಅವನು ರಾಮುದಾಸನನ್ನು ಒಂದು ಕೃಷ್ಣಾಜಿನದ ಮೇಲೆ ಕುಳ್ಳಿರಿಸಿ, ಹೀಗೆ ತನ್ನ ಪರಿಚಯವನ್ನು ಮಾಡಿಕೊಟ್ಟನು.

"ಸ್ವಾಮಿಜಿ, ನನ್ನ ಹೆಸರು ಮಾಧವ ಕಾಮತ್. ನಾನು 'ಪರಮಾತ್ಮನ ಶೋಧನೆಯಲ್ಲಿ' ಎಂಬ ತಮ್ಮ ಗ್ರಂಥವನ್ನು ಓದಿದ್ದೇನೆ. ಅದರಲ್ಲಿ ತಮ್ಮ ಚಿತ್ರವನ್ನು ನೋಡಿದ್ದೆ. ಆ ಗ್ರಂಥದಲ್ಲಿ ನಾನು ನೋಡಿದ ತಮ್ಮ ಫೋಟೋವಿನ ಹೋಲಿಕೆಯಿಂದ ಒಡನೆಯೇ ತಮ್ಮನ್ನು ಗುರುತು ಹಿಡಿಯಲಾಯಿತು. ನಾನು ಈ ಗ್ರಂಥವನ್ನು ಓದಿದಾಗಿನಿಂದಲೂ ತಮ್ಮ ದರ್ಶನ ಪಡೆಯಬೇಕೆಂದು ಬಹಳ ಕುತೂಹಲ ಪಡುತ್ತಿದ್ದೆ. ಭಗವಂತನು ನನ್ನ ಮೊರೆಯನ್ನು ಲಾಲಿಸಿ ನನಗಾಗಿ ತಮ್ಮನ್ನು ಇಲ್ಲಿಗೆ ಕಳುಹಿಸಿಕೊಟ್ಟಿದ್ದಾನೆ."

ಹೀಗೆ ಹೇಳುತ್ತ ಅವನ ಕಂಠ ಭಾವದಿಂದ ಗದ್ಗದವಾಯಿತು. ಅವನ ದೊಡ್ಡ ಕಣ್ಣುಗಳಿಂದ ಆನಂದಾಶ್ರು ಧಾರೆಯಾಗಿ ಹರಿಯಿತು. ಅವನು ಆನಂದಾತಿಶಯದಲ್ಲಿ ರಾಮುದಾಸನನ್ನು ಬಾರಿಬಾರಿ ಅಪ್ಪಿಕೊಂಡನು. ತನ್ನ ತಲೆಯ ಮೇಲೆ ಕೈಯಿಡಬೇಕೆಂದು ರಾಮುದಾಸನನ್ನು ಕೇಳಿಕೊಂಡನು. ರಾಮುದಾಸನು ಹಾಗೆ ಮಾಡಿದನು. ಕೂಡಲೇ ಮಾಧವನು ಪಾರವಶ್ಯದ ಸ್ಥಿತಿಯಲ್ಲಿ ನೆಲದಮೇಲೆ ಉರುಳಿದನು. ರಾತ್ರಿ ಬಹಳ ಹೊತ್ತಿನವರೆಗೂ ಇವರು ಮಾತನಾಡುತ್ತಿದ್ದರು. ಅವನು ರಾಮುದಾಸನ ಮೇಲೆ ದಯಾಪ್ರೇಮಗಳ ಸೋರುಮಳೆಯನ್ನು ಸುರಿಸಿದನು. ಅತರ್ಕ್ಯವಾದ ತನ್ನದೇ ಆದ ವಿಧಾನದಲ್ಲಿ ಭಗವಂತನು ರಾಮುದಾಸನನ್ನು ಕರುಣೆಯಿಂದ ಜೋಪಾನವಾಗಿ ನೋಡಿಕೊಂಡು ಬರುತ್ತಿದ್ದಾನೆ.

ಮರುದಿನ ರಾಮುದಾಸನು ಕೃಷ್ಣರಾಯರ ಸಂಗಡ ಪ್ರಯಾಣ ಬೆಳೆಸಿದನು. ಬೆಂಗಳೂರಿನಲ್ಲಿ ಭವಾನೀ ಶಂಕರರಾಯನೂ, ಸೀತಾಬಾಯಿ ಮತ್ತು ಆತನ ಮನೆಯ ಇತರರೂ ರಾಮುದಾಸನನ್ನು ಬಹು ಸಂತೋಷದಿಂದ ಬರಮಾಡಿಕೊಂಡರು. ರಾಮುದಾಸನು ಇಲ್ಲಿ ಕೆಲವು ದಿನ ನಿಂತನು. ಭವಾನೀ ಶಂಕರರಾಯನಿಗೂ ಕುಂಭಮೇಳವನ್ನು ನೋಡಲು ಆಸೆಯಿದ್ದುದರಿಂದ ಆತನು ಇವನೊಡನೆ ಹೊರಟನು. ಇವರು ಸಕಾಲದಲ್ಲಿ ಬೊಂಬಾಯಿಯನ್ನು ಮುಟ್ಟಿದರು. ಸಂಜೀವರಾಯರು ಇವರನ್ನು ಸ್ಟೇಷನ್ನಿನಲ್ಲಿ ಸ್ವಾಗತಿಸಿ ಜೊತೆಯಲ್ಲಿ ಅವರ ಮನೆಗೆ ಕರೆದುಕೊಂಡು ಹೋದರು. ಎಂದಿನಂತೆ ಸಂಜೀವರಾಯರೂ ಅವರ ಪತ್ನಿಯೂ ಪ್ರೇಮದಿಂದ ಮೇರೆ ಹರಿದರು. ರಾಮುದಾಸನು ಅವರೊಡನೆ ಸುಮಾರು ಮೂರು ದಿನ ಇದ್ದು ನಂತರ ಭವಾನಿ ಶಂಕರ ರಾಯನೊಂದಿಗೆ ಝಾನ್ಸಿಯ ಕಡೆ ಪ್ರಯಾಣಮಾಡಿದನು.

ಝಾನ್ಸಿಯಲ್ಲಿ ಇವನು ಹಿಂದೆ ಇಳಿದುಕೊಂಡಿದ್ದ ಅದೇ ರಾಮಮಂದಿರದಲ್ಲಿ ಉಳಿದನು. ಹಳೆಯ ಸ್ನೇಹಿತರೆಲ್ಲಾ ಬಂದು ಕೂಡಿ ರಾಮುದಾಸನನ್ನು ಸಂದರ್ಶಿಸಿದರು. ಬಂದವರಿಗೆ ಸತ್ಕಾರಮಾಡಿ ರಾಮಕಿಂಕರನು ತುಂಬಾ ಆನಂದಪಟ್ಟನು. ರಾಮುದಾಸನು ಝಾನ್ಸಿಯಲ್ಲಿ ರಾಮಚರಣದಾಸನನ್ನೂ ಕಂಡನು. ಅಲ್ಲಿ ಅವನು ರಾಮುದಾಸನ ಬರವಿಗಾಗಿ ಕಾದಿದ್ದನು.

ಝಾನ್ಸಿಯಲ್ಲಿ ಈ ಸಲ ನಿಂತಿದ್ದ ಸಂದರ್ಭದ ಒಂದಾದ ಮುಖ್ಯ ಸಂಗತಿ ಏನೆಂದರೆ, ರಾಮುದಾಸನು ಬೇರೆ ಬೇರೆ ಜಾತಿಯ ಮಿತ್ರರೊಂದಿಗೆ ಒಂದೇ ತಟ್ಟೆಯಲ್ಲಿ ಊಟಮಾಡಿದುದು. ಜಾತಿಭೇದವಿಲ್ಲದ ಈ ಭೋಜನದಲ್ಲಿ ಬ್ರಾಹ್ಮಣರೂ ಸೇರಿದ್ದರು. ಜಾತಿಯಿಂದ ಬ್ರಾಹ್ಮಣನಾದ ರಾಮಕಿಂಕರನು ಮೊದಲು ಈ ಅನೂಚಾನ ಪದ್ಧತಿಯ ಮೇಲಣ ಆಘಾತವನ್ನು ಕುರಿತು ಸ್ವಲ್ಪ ಅಸಂತುಷ್ಟನಾದನು. ಕೊನೆಗೆ ತನಗೆ ರಾಮುದಾಸನಲ್ಲಿದ್ದ ಪ್ರೀತಿ ಗೌರವಗಳಿಂದ ಇದಕ್ಕೆ ಸಮ್ಮತಿಸಿದನು.

ಝಾನ್ಸಿಯಲ್ಲಿ ಕೆಲವು ಕಾಲವಿದ್ದು ರಾಮುದಾಸನು ಭವಾನೀ ಶಂಕರರಾಯ ಮತ್ತು ರಾಮಚರಣದಾಸರೊಂದಿಗೆ ಹರಿದ್ವಾರಕ್ಕೆ ಹೊರಟನು. ಹರಿದ್ವಾರ ಹಿಮವತ್ಪರ್ವತದ ಬುಡದಲ್ಲಿದೆ. ಇದು ಹಿಂದೂಗಳ ಒಂದು ಪ್ರಸಿದ್ಧ ಯಾತ್ರಾಸ್ಥಳ. ಇಲ್ಲಿ ಹನ್ನೆರಡು ವರ್ಷಗಳಿಗೊಂದು ಸಲ, ಸಮುದ್ರಮಥನದಿಂದ ಉತ್ಪತ್ತಿಯಾದ ಅಮೃತವನ್ನು ದೇವತೆಗಳು ಪಾನಮಾಡಿದ ಜ್ಞಾಪಕಾರ್ಥವಾಗಿ ಒಂದು ಬೃಹನ್ಮೇಳ ನಡೆಯುತ್ತದೆ. ಈ ಉತ್ಸವವೇ ಕುಂಭಮೇಳ.

ಮಿತ್ರರಕೂಟ ಹರಿದ್ವಾರದಲ್ಲಿ ಸುಮಾರು ಒಂದು ಗಂಟೆಯ ಕಾಲವಿದ್ದು, ನಂತರ ಅಲ್ಲಿಗೆ ಹದಿನಾಲ್ಕು ಮೈಲಿಗಳ ದೂರದಲ್ಲಿರುವ ಹೃಷೀಕೇಶಕ್ಕೆ ಏರಿ ಹೊರಟಿತು. ಕಾಲುನಡಿಗೆಯಲ್ಲಿ ಪ್ರಯಾಣ. ಇವರು ಸಾಯಂಕಾಲಕ್ಕೆ ಹೃಷೀಕೇಶದಲ್ಲಿ ಗಂಗಾ ನದಿಯ ದಡವನ್ನು ಮುಟ್ಟಿದರು. ಆಳವಿಲ್ಲದ ಕಡೆ ನದಿಯನ್ನು ದಾಟಿ, ಇವರು ವಿಶಾಲವಾದ ಒಂದು ಮರಳುದಿಣ್ಣೆಯನ್ನು ಸೇರಿದರು. ರಾತ್ರಿಯನ್ನು ಕಳೆಯುವುದಕ್ಕೆ

ರಾಮುದಾಸನು ಈ ಮರಳುದಿಣ್ಣೆ ಅತ್ಯುತ್ತಮವಾದ ಸ್ಥಳವೆಂದು ಆರಿಸಿದನು. ಇದು ಗಂಭೀರ ಗಗನಚುಂಬಿ ಪರ್ವತಗಳ ಶ್ರೇಣಿಯೊಂದರ ಅಂಚಿನಲ್ಲಿದ್ದಿತು. ರಾತ್ರಿಯಾದ ಹಾಗೆ ಶೀತಲವಾದ ಗಾಳಿ ಇವರು ಇಳಿದಿದ್ದ ಮರಳಹಾಸಿನ ಮೇಲೆ ಬೀಸುತ್ತ ಬಂದಿತು. ಹತ್ತಿರದಲ್ಲಿಯೇ ಒಂದು ಬಿದ್ದ ಮರ ಇದ್ದಿತು. ಅದರ ಒಣಗಿದ ಒಂದು ಕೊನೆಗೆ ಉರಿಹಚ್ಚಿ ಬೆಂಕಿಯನ್ನು ಮಾಡಿದ್ದಾಯಿತು.

ಗಾಳಿ ಹೆಚ್ಚಿ ಬಿರುಗಾಳಿಯಾಯಿತು; ರಭಸದಿಂದ ಬೀಸಿತು; ನದಿಯ ಶಯ್ಯೆಯಿಂದ ಬಿಡಿಮರಳನ್ನು ಕೊಚ್ಚಿತಂದಿತು. ಪರಿಸ್ಥಿತಿ ಕಷ್ಟಕ್ಕೇ ಇಟ್ಟು ಕೊಂಡಿತು. ಮಿತ್ರರು ಈ ಬಿರುಗಾಳಿಯ ಮತ್ತು ಮರಳಿನ ಹೊಡೆತವನ್ನು ತಡೆಯಲು ಕಂಬಳಿಗಳನ್ನು ಮೈತುಂಬ ಹೊದ್ದುಕೊಳ್ಳುವುದಕ್ಕೆ ಪ್ರಯತ್ನಮಾಡುತ್ತಿದ್ದರು. ಅದು ಸಾಧ್ಯವಾಗಲಿಲ್ಲ. ಈ ವಿನೋದವನ್ನು ನೋಡುತ್ತಿದ್ದ ರಾಮುದಾಸನಿಗೆ ತುಂಬಾ ನಗು ಬಂದಿತು. ರಾತ್ರಿಯಲ್ಲಾ ಒಂದು ಸಲ ಎವೆ ಮುಚ್ಚದೆ ಕಳೆಯಿತು. ಅರುಣೋದಯವಾಗುತ್ತಲು ಬಿರುಗಾಳಿಯ ಭೂತ ಶಾಂತವಾಯಿತು. ಪ್ರಾತಃಕಾಲ ಶಾಂತವಾದ ಮನೋಹರವಾದ ದೃಶ್ಯವನ್ನು ನೀಡಿತು. ಮುಂಬೆಳಗು ಹಸುರಿಂದ ತುಂಬಿದ್ದ ಉನ್ನತ ಶೈಲಗಳ ಮೇಲೆ ತನ್ನ ಮನಮೋಹಕವಾದ ಸೊಬಗನ್ನು ಹರಡಿತು. ಪ್ರಶಾಂತಿ ನೀರವತೆ ಎಲ್ಲೆಡೆಯನ್ನೂ ಆಳಿದುವು. ರಾತ್ರಿಯಲ್ಲಿ ಕ್ಷುಬ್ಧ ಭೀಕರ ರೂಪವನ್ನು ಧರಿಸಿದ್ದ ಪ್ರದೇಶದಲ್ಲಿ ಉಲ್ಲಾಸಕರ ಮಂದಮಾರುತವು ನಲಿಯುತ್ತಿದ್ದಿತು.

ಮಧ್ಯಾಹ್ನ ಇವರು ಅಲ್ಲಿಯ ಅನ್ನಕ್ಷೇತ್ರಗಳಿಂದ ತಂದ ಆಹಾರವನ್ನು ತೆಗೆದು ಕೊಂಡರು. ಸಾಯಂಕಾಲದ ಹೊತ್ತಿಗೆ ನದಿಯನ್ನು ದಾಟಿ ಸ್ವರ್ಗಾಶ್ರಮವನ್ನು ಮುಟ್ಟಿದರು. ರಾಮುದಾಸನು ನದಿಯ ಎಡದಂಡೆಯಲ್ಲಿ ಸುಂದರವಾದ ಒಂದು ಕಟ್ಟಡವನ್ನು ಕಂಡನು. ಅದನ್ನು ರಾಮಾಶ್ರಮ ಎಂದು ಕರೆಯುತ್ತಾರೆ. ಈ ಆಶ್ರಮವನ್ನು ಕೀರ್ತಿವಂತರೂ ಮಹನೀಯರೂ ಆದ ಸ್ವಾಮಿ ರಾಮತೀರ್ಥರ ಜ್ಞಾಪಕಾರ್ಥವಾಗಿ ಕಟ್ಟಿದೆ. ಬೇರೆ ಒಮ್ಮೆ ರಾಮುದಾಸನು ಈ ಆಶ್ರಮವನ್ನು ಪ್ರವೇಶಿಸುವ ಯೋಗವನ್ನು ಪಡೆದಿದ್ದನು. ಆಗ್ಗೆ ಈ ಕಟ್ಟಡದ ಒಂದು ಭಾಗ ಒಂದು ಅಂಚೆಯ ಕಛೇರಿಯಾಗಿ ಉಪಯೋಗದಲ್ಲಿದ್ದಿತು. ಒಳಗಿನ ಕೊಟಡಿಗಳಲ್ಲಿ ತುಂಬ ಸಂಸ್ಕೃತ, ಇಂಗ್ಲಿಷ್, ಮತ್ತು ಇತರ ಭಾಷೆಗಳಲ್ಲಿಯ ಧಾರ್ಮಿಕ ಗ್ರಂಥಗಳ ಮಹಾ ನಿಚಯದಿಂದ ತುಂಬಿದ ಅಲಿಮಾರುಗಳಿದ್ದುವು. ✓

### (ii) ಹುಡುಗನಿಗೆ ರೇಗಿಹೋಯಿತು

ಸ್ವರ್ಗಾಶ್ರಮ ನೀಲಕಂಠ ಪರ್ವತದ ಬುಡದಲ್ಲಿರುವ ಒಂದು ವಿಶಾಲವಾದ ವನ. ಅದು ಗಂಗಾನದಿಯ ದಡದಲ್ಲಿದೆ. ನದಿ ಅದರ ಮುಂಭಾಗದಲ್ಲಿ ಹರಿಯುತ್ತದೆ. ಈ ವನದಲ್ಲಿ ಮೂರು ಸಾಲಾಗಿ ಇಪ್ಪತ್ತು ಇಪ್ಪತ್ತು ಗಜಗಳ ದೂರದಲ್ಲಿ ಒಬ್ಬೊಬ್ಬರು

ಇಬ್ಬಿಬ್ಬರು ಇರುವ ಕುಟಿಗಳು (ಪುಟ್ಟ ಕಟ್ಟಡಗಳು) ಸುಮಾರು ಇನ್ನೂರಿವೆ. ಇವನ್ನು ಕಟ್ಟಿರುವುದು ಸಾಧುಗಳ ಉಪಯೋಗಕ್ಕಾಗಿ. ವನದ ಆವರಣದಲ್ಲಿ ಒಂದು ಅನ್ನಕ್ಷೇತ್ರ ಇದೆ. ಇಲ್ಲಿ ಸಾಧುಗಳಿಗೆ ದಿನಕ್ಕೆ ಎರಡು ಹೊತ್ತು ಊಟ ಹಾಕುತ್ತಾರೆ.

ಈ ಕುಟಿಗಳೆಲ್ಲಾ ತುಂಬಿದ್ದುವು. ಇವರಿಗೆ ಇಳಿಯುವುದಕ್ಕೆ ಬರಿದಾದ ಕುಟಿ ಒಂದೂ ಇರಲಿಲ್ಲ. ಇವರು ಮೊದಲು ಒಂದು ಮರದ ಕೆಳಗೆ ಇಳಿದು ರಾತ್ರಿಯನ್ನು ಅಲ್ಲೇ ಕಳೆಯಬೇಕೆಂದು ನಿಶ್ಚಯಿಸಿದರು. ಆದರೆ ದಯಾಳುವಾದ ಒಬ್ಬ ಬಂಗಾಳಿ ಸಂನ್ಯಾಸಿ ಒಂದು ದೊಡ್ಡ ಕುಟಿಯಲ್ಲಿದ್ದ ಸಾಧುವನ್ನು ಒಪ್ಪಿಸಿ ಆ ಕುಟಿಯನ್ನು ಇವರಿಗೆ ಒದಗಿಸಿಕೊಟ್ಟನು. ಇವರು ಆ ಕುಟಿಗೆ ಹೋದರು.

ಹರಿದ್ವಾರದಲ್ಲಿ ನಡೆಯುವ ಕುಂಭಮೇಳ ಉತ್ಸವಕ್ಕೆ ಇನ್ನೂ ಹತ್ತು ಹನ್ನೆರಡು ದಿನಗಳಿದ್ದುವು. ಹಿಂದೂಸ್ಥಾನದ ನಾನಾ ಭಾಗಗಳಿಂದ ಸಾಧುಗಳೂ ಯಾತ್ರಿಕರೂ ತಂಡ ತಂಡವಾಗಿ ಬಂದು ಇಳಿಯುವುದಕ್ಕೆ ಆರಂಭವಾಯಿತು. ರಾಮದಾಸನು ಸಂಗಡಿಗರೊಡನೆ ಈ ಕುಟಿಯಲ್ಲಿ ಎರಡು ದಿವಸವಿದ್ದನು. ಇವರು ತಮ್ಮ ಊಟವನ್ನು ಅನ್ನಕ್ಷೇತ್ರದಿಂದ ತಂದರು. ಅದನ್ನು ಮೂವರೂ ಮುಸಲ್ಮಾನರು ಮಾಡುವಂತೆ ಒಂದೇ ತಟ್ಟೆಯಲ್ಲಿಟ್ಟು ಭೋಜನ ಮಾಡುತ್ತಿದ್ದರು. ಒಂದು ದಿನ ಭವಾನೀಶಂಕರರಾಯನೂ ರಾಮದಾಸನೂ ತಮ್ಮ ಊಟವನ್ನು ಎಂದಿಗಿಂತ ಮುಂದಾಗಿ ಮುಗಿಸಿದರು. ರಾಮಚರಣದಾಸನು ರೊಟ್ಟಿಯ ರುಚಿಯಾದ ಚೂರುಗಳನ್ನು ತೀರಾ ನಿದಾನವಾಗಿ ತಿನ್ನುತ್ತಾ ಕುಳಿತಿದ್ದನು. ಮೂರು ಜನರಿಗೆ ತರುತ್ತಿದ್ದ ಊಟ ಇವರು ತಿನ್ನುವುದಕ್ಕಿಂತ ಹೆಚ್ಚಾಗಿರುತ್ತಿದ್ದಿತು. ಕುಟಿಯ ಬಾಗಿಲಲ್ಲಿ ಒಬ್ಬ ಬಡ ಕಸಗುಡಿಸುವವನು ಉಳಿದ ಆಹಾರಕ್ಕಾಗಿ ಆಸೆಯಿಂದ ಕಾದಿದ್ದನು. ಅವನ ಮುಖದ ಮೇಲೆ ಕಾಣಿಸುತ್ತಿದ್ದ ಹಸಿವು ಆಸೆಗಳನ್ನು ನೋಡಿ ರಾಮದಾಸನು ರಾಮಚರಣದಾಸನಿಗೆ

"ರಾಮು, ಆ ಬಡವನಿಗೆ ಬಹಳ ಹಸಿವಿರಬೇಕು. ಅವನಿಗೆ ಕೆಲವು ರೊಟ್ಟಿ ಕೊಡು. ಹೇಗೂ ಮಿಕ್ಕಿರುತ್ತವೆ" ಎಂದನು.

ಈ ಮಾತನ್ನು ಲಕ್ಷಿಸದೆ ರಾಮಚರಣದಾಸನು ತನ್ನ ಪಾಡಿಗೆ ತಾನು ತಿನ್ನುತ್ತಾ ಇದ್ದನು. ರಾಮದಾಸನು ರಾಮಚರಣದಾಸನಿಗೆ ಇನ್ನೊಂದು ಸಲ ಜ್ಞಾಪಿಸಿದರೂ ಅವನು ಗಮನಿಸಲಿಲ್ಲ. ರಾಮದಾಸನು ಮೂರನೆಯ ಬಾರಿ ಹೇಳಿದನು. ಈಗ ಹುಡುಗನಿಗೆ ಸಿಟ್ಟು ಬಂದಿತು. ಅವನು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ರಾಮದಾಸನನ್ನು ದುರದುರನೆ ನೋಡುತ್ತಾ

"ಏನು? ನನ್ನ ಪಾಡಿಗೆ ನಾನು ಊಟ ಮಾಡುವುದಕ್ಕೂ ನೀವು ಬಿಡುವುದಿಲ್ಲವೋ? ಸುಮ್ಮನೆ ಈ ರೀತಿ ತೊಂದರೆ ಮಾಡುವುದರ ಅರ್ಥವೇನು?" ಎಂದು ಗುರುಗುಟ್ಟಿದನು.

ಈ ರೀತಿ ಒದರಾಟವನ್ನು ಕೇಳಿ ರಾಮದಾಸನು ತಡೆಯಲಾಗದೆ ಘಟ್ಟಿಯಾಗಿ ನಕ್ಕನು. ರಾಮಚರಣದಾಸನೇನೋ ಲಕ್ಷ್ಯಮಾಡದೆ ಒಂದಾಗುತ್ತಲೊಂದು ರೊಟ್ಟಿಯನ್ನು ಗಿಡಿಯುತ್ತಲೇ ಇದ್ದನು.

ಒಂದು ದಿನ ರಾಮದಾಸನು ವಶಿಷ್ಠಾಶ್ರಮಕ್ಕೆ ಹೋಗಬೇಕೆಂದು ರಾಮನ ಇಚ್ಛೆಯಾಯಿತು. ರಾಮದಾಸನು ಒಬ್ಬನೇ ಹೋಗಬೇಕೆಂದು ಯೋಚಿಸಿದನು. ಆದರೆ ರಾಮಚರಣದಾಸನೂ ಭವಾನೀ ಶಂಕರರಾಯನೂ ತಾವೂ ಬರುವುದಾಗಿ ಹಟಮಾಡಿದರು. ಹೀಗಾಗಿ ಒಂದು ದಿನ ಬೆಳಿಗ್ಗೆ ಮೂವರೂ ಹೊರಟರು. ದಾರಿಯ ವಿಷಯ ವಿಚಾರಿಸಿದ ವೇಳೆ ಅನೇಕ ಸಾಧುಗಳು ಅದು ಅತಿ ಅಪಾಯಕರವೆಂದು ವರ್ಣಿಸಿದರು; ಅಲ್ಲದೆ ಅವರಲ್ಲಿ ಯಾರೂ ಅದು ಇರುವ ಸ್ಥಳವನ್ನು ಹೇಳಲು ಕಾಣರು. ತೂಗುಸೇತುವೆ ಪ್ರವಾಹದಲ್ಲಿ ಮುರಿದುಹೋಗಿದ್ದುದರಿಂದ ಇವರು ಗಂಗಾನದಿಯನ್ನು ದೋಣಿಯಲ್ಲಿ ದಾಟಿ ಎದುರು ದಡಕ್ಕೆ ಎಂದರೆ ನದಿಯ ಎಡ ದಡಕ್ಕೆ ಸೇರಿದರು. ಇಲ್ಲಿ ಹಾಲು ಮಾರುವವನ ಹತ್ತಿರ ಒಂದೊಂದು ಬಟ್ಟಲು ಹಾಲನ್ನು ಕುಡಿದು, ಆಯಾಸ ನಿವಾರಣೆಮಾಡಿಕೊಂಡರು. ರಾಮಚರಣದಾಸನು ತನ್ನ ಜೋಳಿಗೆಯಲ್ಲಿ ಅಡಿಗೆ ಪಾತ್ರೆಗಳನ್ನೂ ಅಡಿಗೆಯ ಸಾಮಾನುಗಳನ್ನೂ ಹೊತ್ತು ತಂದನು.

---

## ಅಧ್ಯಾಯ ೨೮.

### ಹಿಮವತ್ಪರ್ವತ—ವಶಿಷ್ಠಾಶ್ರಮ

#### (i) ಕಡಿದಾದ ಕೊಡುಗಲ್ಲಿನಮೇಲೆ.

ದೇವರೇ ದಾರಿ ತೋರಿಸುವನೆಂದು ನಂಬಿ ಇವರು ಮುಂದೆಹೊರಟರು. ಮೊದಲಲ್ಲಿ ಒಬ್ಬ ಅಂಗಡಿಯವನು. ಇವರು ನಡೆಯಬೇಕಾದ ದಿಕ್ಕನ್ನು ತೋರಿಸಿದನು. ಇವರು ಹಲವು ಹೊಲಗಳಲ್ಲಿ ಹಾಯ್ದು ದಟ್ಟವಾಗಿದ್ದ ಒಂದು ಕುರುಚಲು ಕಾಡನ್ನು ಹೊಕ್ಕು ಅದರಾಚೆಗೆ ಸೇರಿ ಕಾಡಿಂದ ಹೊರಗೆ ಬಂದಾಗ ಗಂಗಾನದಿಯ ದಡ ಕಾಣಿಸಿತು. ಇಲ್ಲಿ ಇವರು ಒಬ್ಬ ರೈತನನ್ನು ಕಂಡರು. ಅವನು ಇವರಿಗೆ ನದಿಯ ದಂಡೆಯನ್ನೇ ಅನುಸರಿಸಿ ಪ್ರಯಾಣ ಮಾಡಬೇಕೆಂದು ಹೇಳಿ ವಶಿಷ್ಠಾಶ್ರಮಕ್ಕೆ ಹೋದ ದಾರಿಯೇ ಇಲ್ಲವೆಂದೂ ಸರಿಯಾಗಿ ತಿಳಿದು ದಾರಿ ತೋರುವರು ಇಲ್ಲದೆ ಆ ಸ್ಥಳವನ್ನು ಮುಟ್ಟುವುದು ಅಸಾಧ್ಯವೆಂದೂ ತಿಳಿಸಿದನು. ನಡೆಯಬೇಕಾದ ದಾರಿ ಇಪ್ಪತ್ತು ಮೈಲಿಗಳಿಗೆ ಮೇಲ್ಪಟ್ಟು ಇದ್ದಿತು. ಇವರಿಗೆ ದಾರಿ ತೋರಿಸುವನು ಭಗವಂತನೇ. ಅಲ್ಲಿಂದ ಮುಂದೆ ಪ್ರಯಾಣ ಮಾಡಿದುದಾಯಿತು.

ಗಂಗಾನದಿಯ ದಡದ ಮೇಲೆಲ್ಲಾ ದೊಡ್ಡ ದೊಡ್ಡ ಗುಂಡುಗಳು ಬಿದ್ದಿದ್ದವು. ಇವರು ಗುಂಡಿನಿಂದ ಗುಂಡಿಗೆ ಹಾರಿ ನಡೆಯಬೇಕಾಗಿದ್ದಿತು. ಹೀಗೆ ಸುಮಾರು ಮೂರು ಮೈಲಿ ಪ್ರಯಾಣ ಸಾಗಿದನಂತರ, ಎದುರಿಗೆ ನದಿಯ ಅಂಚಿನಲ್ಲಿ ಒಂದು ಬೆಟ್ಟ ಅಥವಾ ಭೂಶಿರವು ಇಳಿಜಾರಾಗಿ ಚಾಚಿಕೊಂಡಿರುವುದು ಕಾಣಿಸಿತು. ಆದುದರಿಂದ ಅಲ್ಲಿ ಮುಂದಕ್ಕೆ ಹೋಗುವುದು ಅಸಾಧ್ಯವಾಯಿತು. ಆಗ ಇವರು ಎಡಗಡೆಗೆ ತಿರುಗಿ, ಬೆಟ್ಟವನ್ನು ಹತ್ತಿ, ಮರ, ಕುರುಚಲು ಗಿಡ, ಪೊದೆ ಬಳ್ಳಿಗಳ ಸಂದಿಗಳಲ್ಲಿ ನುಗ್ಗಿ ಒಂದು ಮೈಲಿಯಷ್ಟು ದೂರ ನಡೆಯಬೇಕಾಯಿತು. ಅನಂತರ ಕೊಂಚ ಕೆಳಕ್ಕೆ ಳಿದಮೇಲೆ ಇವರಿಗೆ ಮತ್ತೆ ಗಂಗಾನದಿಯ ದಡ ಕಾಣಿಸಿತು. ಬೆಟ್ಟದ ಮೇಲೆ ಪ್ರಯಾಣ ಮಾಡುತ್ತಿದ್ದಾಗ ಬ್ರಹ್ಮಪುರಿ ಎಂಬ ಸ್ಥಳದ ಮೂಲಕ ಹೋಗಬೇಕಾಯಿತು. ಅದು ಇವರಿಗೆ ಆಗ ಗೊತ್ತಾಗಲಿಲ್ಲ. ಇವರು ದಡದ ಮೇಲೆ ಪುನಃ ಗುಂಡಿನಿಂದ ಗುಂಡಿಗೆ ಹಾರುತ್ತ ಮುಂದರಿದರು. ಹೀಗ ಎರಡು ಮೈಲಿಗಳಷ್ಟು ಪ್ರಯಾಣ ಸಾಗಿತು.

ಇಲ್ಲಿ ಒಂದು ಅಸಂಗತ ಸಂಭವಿಸಿ, ಅದರಿಂದ ಭವಾನೀ ಶಂಕರರಾಯನು ಮುಂದೆ ಹೋಗಲು ಸ್ವಲ್ಪ ಅನು ತಪ್ಪಿತು. ಬಂಡೆಯಿಂದ ಬಂಡೆಗೆ ಹಾರಿದ್ದರಿಂದ ಅವನ ಕಾಲು ಉಳುಕಿತು. ಇದರಿಂದ ಅವನು ನಿದಾನವಾಗಿ ನಡೆಯಲು ಮೊದಲು ಮಾಡಿದನು. ರಾಮುಚರಣದಾಸನು ಅವನ ಜೊತೆಯಲ್ಲಿ ನಡೆದನು. ರಾಮುದಾಸನು ಮುಂದೆ ಮುಂದೆ ಓಡುತ್ತಿದ್ದನು. ಅವನೂ ಆ ಮೊದಲು ಆದಂತೆ ಮುಂದೆ ಇನ್ನೊಂದು ಅಡ್ಡಿ ಬಂದಾಗ ನಿಲ್ಲಬೇಕಾಯಿತು. ಈ ಸಲ ಅಡ್ಡಿ ಬಂದುದು ಇಳಿಜಾರಾದ ಬೆಟ್ಟವಲ್ಲ. ನದಿಗೆ ಎದುರಾಗಿ, ನೆಟ್ಟಗೆ ನಿಂತಿದ್ದ, ಒಂದು ಕಡಿದಾದ ಗೋರ್ಕಲ್ಲು. ಇದರ ಮುಖದಮೇಲೆ ಬದುವಿನಂತೆ ಅಲ್ಲಲ್ಲೇ ಸ್ವಲ್ಪ ಉಬ್ಬುಗಳಿದ್ದುವು. ಈ ಕೋರ್ಗಲ್ಲ ಬೆಟ್ಟವಾದರೋ ನೆಟ್ಟಗೆ ಬಹು ಎತ್ತರಕ್ಕೆ ನೆಗೆದಿದ್ದಿತು. ಆದ್ದರಿಂದ ಪಕ್ಕಗಳಲ್ಲಿ ಹತ್ತುವುದಕ್ಕೆ ಅವಕಾಶವೇ ಇರಲಿಲ್ಲ. ಇದ್ದ ಒಂದೇ ದಾರಿ ಎಂದರೆ ಬೆಟ್ಟದ ಅರುಗಿನಲ್ಲಿ ಹರಿದು ಈ ಭೀಕರ ಶೈಲದ ನೇರವಾದ ಮುಖದ ಮೇಲೆ ಉಬ್ಬು ತಗ್ಗಿನ ಗೀರುಗಳ ಮೇಲೆ ಕೈ ಕಾಲನ್ನು ಊರಿ ಹೋಗುವುದು. ಕೆಳಗೆ ಆಳದಲ್ಲಿ ಗಂಗಾನದಿಯ ಉಗ್ರ ಸ್ರೋತ ಓಡುತ್ತಿರುವುದು. ಕಾಲೇನಾದರೂ ಸ್ವಲ್ಪ ಜಾರಿದರೆ ಸೊರೆಯುವ ಸುಳಿಯೊಳಕ್ಕೆ ಉರುಳುವುದು ಖಂಡಿತ.

ರಾಮುದಾಸನಿಗೆ ಎದುರಾಗಿ ಕಂಡದ್ದು ಈ ಸನ್ನಿವೇಶ. ಅರ್ಧ ಗಂಟೆ ಕಾದ ಮೇಲೆ ಉಳಿದವರಿಬ್ಬರೂ ಇವನ ಜೊತೆಗೆ ಬಂದು ಸೇರಿದರು. ಭವಾನೀಶಂಕರ ರಾಯನ ಕಾಲಿನ ಸ್ಥಿತಿ ಕೆಟ್ಟದ್ದಿತು. ಅವನು ತುಂಬ ನೋವಿನಿಂದ ಕಷ್ಟಪಡುತ್ತಿದ್ದನು. ಮುಂದಕ್ಕೆ ಹೋಗುವುದರಲ್ಲಿ ಅಪಾಯ ಮತ್ತು ಕಷ್ಟಗಳು ಕಂಡುಬಂದುವು. ರಾಮುಚರಣದಾಸನು ಹಿಂತಿರುಗಿ ಹೋಗುವುದೊಂದು ಹೊರತು ಇನ್ನೇನೂ ಮಾರ್ಗ ಇಲ್ಲವೆಂದು ಸೂಚಿಸಿದನು. ಇದಕ್ಕೆ ಭವಾನೀಶಂಕರ

ರಾಯನು ಮೌನವಾದ ಸಮ್ಮತಿಯನ್ನಿತ್ತನು. ಆದರೆ ರಾಮದಾಸನು ರಾಮನ ಇಚ್ಛೆಯಂತೆ ನಡೆಯಬೇಕಾಗಿದ್ದಿತು. ಆ ಇಚ್ಛೆ ಏನೆಂದರೆ ದುರ್ಗಮವಾದ ಈ ದಾರಿಯಲ್ಲೇ ಮುಂದೆಸಾಗುವುದು. ರಾಮದಾಸನು ಮಿತ್ರರಿಗೆ ಈ ತೀರ್ಮಾನವನ್ನು ತಿಳಿಸಿದನು. ರಾಮಚರಣದಾಸನು ಅದನ್ನು ನಿರೋಧಿಸಿ ಈ ದುರ್ಗಮವಾದ ದಾರಿಯಲ್ಲಿ ಮುಂದೆ ಪ್ರಯಾಣಮಾಡುವ ಸಾಹಸವು ಶುದ್ಧ ಹುಚ್ಚೆಂದು ಸಾಧಿಸಿದನು. ಪ್ರತಿ ಹೇಳಲು ರಾಮದಾಸನಿಗೆ ಉತ್ತರವಿರಲಿಲ್ಲ. ಅವನು ತನಗೆ ಅಂತರ್ಯಾಮಿ ರಾಮನ ಪ್ರೇರಣೆ ಒತ್ತಾಯವಾಗಿದೆಯೆಂದೂ ಅದು ಹುಚ್ಚುತನವೇ ಆಗಲಿ ಏನೇ ಆಗಲಿ ತಾನು ಅದರಂತೆ ನಡೆಯಲೇಬೇಕೆಂದೂ ಉತ್ತರವಿತ್ತನು.

ರಾಮಚರಣದಾಸನು ರಾಮದಾಸನೊಂದಿಗೆ ಇನ್ನೂ ಚರ್ಚೆಮಾಡುತ್ತಿದ್ದಂತೆ ಮೂವರು ಬೆಟ್ಟದ ಜನ, ಇಬ್ಬರು ಗಂಡಸರು, ಒಬ್ಬ ಹೆಂಗಸು ಬೆಟ್ಟದ ಮೇಲಿಂದ ಕೆಳಕ್ಕೆ ಇವರ ಕಡೆಗೆ ಜಾರಿಕೊಂಡು ಇಳಿಯುತ್ತಿದ್ದುದು ಕಾಣಿಸಿತು. ಅವರು ತಟ ಹಾದು ಈಚೆಯ ಕಡೆಗೆ ಬಂದಮೇಲೆ, ರಾಮದಾಸನು ಎದ್ದು, ಆ ಮೋಹಕ ಶೈಲದ ಕಡೆಗೆ ಹೋಗುವುದಕ್ಕೆ ಪ್ರಾರಂಭಿಸುವುದರಲ್ಲಿದ್ದನು. ಆಗ ಘಟ್ಟದವರು,

"ಎಚ್ಚರ! ನಮಗೆ ಸಾಧ್ಯವಾಯಿತೆಂದು ನೀವು ಪ್ರಯತ್ನ ಮಾಡಬೇಡಿ. ನಾವು ಬೆಟ್ಟದವರು. ನಮಗೆ ಚಿಕ್ಕಂದಿನಿಂದ ಈ ರೀತಿ ಬೆಟ್ಟಗಳನ್ನು ಹತ್ತಿ ಅಭ್ಯಾಸವಿದೆ. ನಿಮ್ಮ ವಿಷಯ ಬೇರೆ. ಬಹಳ ಅಪಾಯಕ್ಕೀಡಾಗುತ್ತೀರಿ. ನಮ್ಮ ಮಾತು ಕೇಳಿ. ನಿಮ್ಮ ದಮ್ಮಯ್ಯ, ಹುಚ್ಚಾಟವಾಡಿ ಪ್ರಾಣ ಈಡಾಡಬೇಡಿ" ಎಂದು ಕೂಗಿದರು.

ರಾಮಚರಣದಾಸನು "ಸ್ವಾಮಿಜಿ, ಆತನು ಹೇಳುವುದು ನಿಜ. ದಯವಿಟ್ಟು ನಿಮ್ಮ ಸಂಕಲ್ಪವನ್ನು ಬಿಟ್ಟು ಬಿಡಿ" ಎಂದು ಮರಳಿ ಒತ್ತಾಯಮಾಡಿದನು.

ರಾಮದಾಸನಿಗೆ ಈ ಸಂಭಾಷಣೆಯನ್ನು ಕೇಳಿ ವಿನೋದವಾಯಿತು. ಅವನು ಸಮಾಧಾನವಾಗಿ "ಒಳ್ಳೆಯದು ರಾಮು, ಹೆಂಗಸೇ ಈ ಸಾಹಸ ಕೃತ್ಯವನ್ನು ಮಾಡಿದ್ದನ್ನು ನೀನು ನೋಡಲಿಲ್ಲವೇ ? ಹೀಗಿರುವಾಗ, ದೇವರು ಗಂಡಾಗಿ ಮಾಡಿರುವ ನಾವು ಹಿಂತೆಗೆಯುವುದೆ ? " ಎಂದನು.

ಈ ಹೀಯಾಳಿಕೆಯ ಮಾತನ್ನು ಕೇಳಿ, ರಾಮಚರಣದಾಸನು ರೇಗಿಬಿದ್ದನು. ಅವನ ಆತ್ಮಗೌರವ ಉಕ್ಕಿತು. ಅವನು "ನನ್ನ ಮಾತೇ ಆದರೆ, ನಾನು ನಿಮ್ಮೊಂದಿಗೆ ಯಾವುದಕ್ಕೂ ಸಿದ್ಧನಾಗಿದ್ದೇನೆಂಬುದು ನಿಮಗೆ ಗೊತ್ತೇ ಇದೆ. ಆದರೆ ಭವಾನೀ ಶಂಕರರಾಯರು ಏನು ಮಾಡಬೇಕು ? ಅವರ ಕಾಲು ಸರಿಯಾಗಿಲ್ಲ. ಅವರು ಈ ಸಾಹಸಕ್ಕೆ ಸಮರ್ಥರಲ್ಲ ಎಂದು ನಿಮಗೇ ಗೊತ್ತಿದೆ" ಎಂದು ಮೂದಲಿಸಿದನು.

ರಾಮದಾಸನಾದರೋ, ದೃಢಮನಸ್ಕನಾಗಿದ್ದನು. ಅವನಿಗೆ ಅಂತರ್ಯಾಮಿಯ ಬಲವತ್ತರವಾದ ಪ್ರೇರಣೆ ಇದ್ದಿತು. ಅವನು ಈ ಕಠಿಣವಾದ ಆಜ್ಞೆಯನ್ನು ಉಲ್ಲಂಘಿಸಲಾಗಲಿಲ್ಲ. ಅವನು ಗೋರ್ಗಲ್ಲ ಕಡೆಗೆ ಓಡಿಯೇಬಿಟ್ಟನು. ಚಟು

ವಟಿಕೆಯು ಅವನ ದೇಹ ಬಂಡೆಯನ್ನೇರಿತು. ಅವನ ಬೆರಳು ಬಂಡೆಯ ಸಣ್ಣ ಸಂದುಗಳನ್ನು ಹಿಡಿದುಕೊಂಡುವು. ಉಂಗುಟಗಳು ಆ ಸಂದುಗಳಲ್ಲಿ ಊರಿದುವು. ಉಸಿರನ್ನು ಬಿಗಿಹಿಡಿದು ಅವನು ಮೆಲ್ಲಗೆ ಹರಿದುಹರಿದು ಹೋದನು. ಬಿಕ್ಕಟ್ಟಾದ ಸುಮಾರು ಹತ್ತು ನಿಮಿಷದ ಯತ್ನ: ಅವನು ಈ ಕಲ್ಲನ್ನು ತಟಹಾದು ಆ ಕೊನೆಗೆ ಹೋಗಿ ಬೆಟ್ಟದ ಮೇಲ್ಭಾಗದಲ್ಲಿದ್ದನು. ಎದುರಿಗೆ ಮರಳಿನ ಮೇಲೆ ತನ್ನ ಇಬ್ಬರು ಸ್ನೇಹಿತರೂ ಕುಳಿತಿದ್ದುದು ಅವನಿಗೆ ಕಾಣುತ್ತಿದ್ದಿತು. ಅವನು ಅವರಿಗೆ ಹಿಂಬಾಲಿಸಿ ಬನ್ನಿ ಎಂದು ಹುಚ್ಚಾಪಟ್ಟೆ ಸಂಜ್ಞೆ ಮಾಡಿದನು. ರಾಮಚರಣದಾಸನು ಇದ್ದಿದಿದ್ದಂತೆ ಕಣ್ಣಿಂದ ಮರೆಯಾದನು, ಬೆಟ್ಟವನ್ನು ಏರುವ ಯತ್ನಮಾಡಿದನು. ಹತ್ತು ನಿಮಿಷ ಕಳೆಯಿತು. ಅವನು ರಾಮದಾಸನ ಪಕ್ಕದಲ್ಲಿದ್ದನು. ಭವಾನೀಶಂಕರ ರಾಯನು ಇನ್ನೂ ಆ ಕುಳಿತಿದ್ದ ಸ್ಥಳದಲ್ಲಿಯೇ ಇದ್ದನು. ಅವನ ಕಾಲು ಸರಿಯಾಗಿದ್ದರೆ ಅವನೂ ಖಂಡಿತವಾಗಿ ಬಂದೇ ಬರುತ್ತಿದ್ದನು. ರಾಮದಾಸನಿಗೆ ಆಗ ಪರಿಸ್ಥಿತಿ ವಿಶದವಾಯಿತು. ಅವನೊಬ್ಬನನ್ನೇ, ತತ್ರಾಪಿ ಆವನ ಕಾಲು ಊನವಾಗಿರುವಾಗ, ಅಲ್ಲದೆ ಅಪರಿಚಿತ ಸ್ಥಳದಲ್ಲಿ, ನಡುದಾರಿಯಲ್ಲಿ, ಅಲ್ಲಿ ಬಿಟ್ಟುಹೋಗುವುದು ಸರಿಯಾದುದಲ್ಲ; ಇಂತಹ ಸಾಹಸಗಳಲ್ಲಿ ಅವನಿಗೆ ಅನುಭವವಿರಲಿಲ್ಲ.

ಆಗ ರಾಮದಾಸನು ರಾಮಚರಣದಾಸನ ಕಡೆಗೆ ತಿರುಗಿ, "ರಾಮ, ಭವಾನೀಶಂಕರರಾಯನ ಕಾಲು ನರ ಹೊರಳಿದೆ. ಅವನನ್ನು ಒಬ್ಬಂಟಿಗನಾಗಿ ಹಿಂದೆ ಬಿಟ್ಟು ಹೋಗಕೂಡದು. ನೀನು ಹಿಂತಿರುಗಿ ಅವನನ್ನು ಸ್ವರ್ಗಾಶ್ರಮಕ್ಕೆ ಕರೆದುಕೊಂಡು ಹೋಗಬೇಕು. ರಾಮದಾಸನಾದರೋ ಇಟ್ಟ ಹೆಜ್ಜೆಯನ್ನು ಹಿಂದಕ್ಕೆ ತೆಗೆಯಲಾರ. ಅವನು ವಶಿಷ್ಠಾಶ್ರಮವನ್ನು ಹುಡುಕಿಕೊಂಡು ಹೋಗಲೇಬೇಕು. ನೀನು ರಾಮದಾಸನನ್ನು ಪುನಃ ಎಂದಾದರೂ ಕಾಣುವುದು **ರಾಮನನ್ನು** ಅವಲಂಬಿಸಿದೆ. ರಾಮದಾಸನು ಹಿಮವತ್ಪರ್ವತದ ಬೆಟ್ಟ ಕಾಡುಗಳ ದಿಕ್ಕುತಪ್ಪಿಸುವ ಸುತ್ತುದಾರಿಗಳಲ್ಲಿ ಕಳೆದು ಹೋಗುವವನಾಗಿದ್ದಾನೆ" ಎಂದನು.

ರಾಮಚರಣದಾಸನು ಹಿಂತಿರುಗಬೇಕಾಯಿತು. ಅವನು ಭವಾನೀಶಂಕರ ರಾಯನಿದ್ದೆಡೆಗೆ ಹೋದನು. ಇಬ್ಬರೂ ಸ್ವರ್ಗಾಶ್ರಮದ ಕಡೆಗೆ ಹೊರಟರು. ರಾಮದಾಸನು ಈಗ ಒಬ್ಬಂಟಿಗನಾದನು. ಎಂದರೆ ಒಂದು ಮಾತು ನೆನಪಿರಬೇಕು. (ಯಾವಾಗಲೂ **ರಾಮನು** ರಾಮದಾಸನಿಗೆ ಜೊತೆಯಾಗಿ ಇದ್ದನು) ರಾಮದಾಸನು ಗಂಗಾನದಿಯ ದಡದ ಮೇಲೆ ಕುಣಿಯುತ್ತಾ ಓಡಿಓಡಿ ಹೋದನು. ದಡ ಬಾಗಿರುವ ಒಂದು ಸ್ಥಳವನ್ನು ಸುತ್ತಿದನು. ಹೀಗೆ ಅರ್ಧ ಮೈಲಿ ಓಡಿದರೆ, ಚಾಚಿಕೊಂಡಿರುವ ಇನ್ನೊಂದು ಭೂಶಿರ ಸಿಕ್ಕಿತು. ತಲೆ ಎತ್ತಿ ನೋಡಲು ಸುಮಾರು ಐವತ್ತು ಅಡಿ ಎತ್ತರದಲ್ಲಿ ಬೆಟ್ಟದೊಳಗೆ ದೊಡ್ಡದಾಗಿ ಬಾಯಿ ತೆರೆದುಕೊಂಡಿರುವ ಒಂದು ಡೊಗರು ಕಾಣಿಸಿತು. ನದಿಯ ಕಡಿದಾದ ಅಂಚಿನಲ್ಲಿ ಬೆಟ್ಟವನ್ನು ದಾಟುವುದು ಸಾಧ್ಯವೇ ಇರಲಿಲ್ಲ. ಅವನು ಅಂಬೆಗಾಲಿಟ್ಟುಕೊಂಡು ಬೆಟ್ಟವನ್ನು ಹತ್ತಿ

ಇಲಿಯಂತೆ ಹರಿದು ಡೊಗರಿನ ಸಮೀಪಕ್ಕೆ ಸೇರಿದನು. ಅದು ಅಷ್ಟೇನೂ ಆಳವಲ್ಲದ ಒಂದು ಗವಿ. ಅವನು ಅದರ ಒಳಗಡೆ ಹೊಕ್ಕು ಅದು ಬಹಳವೆಂದರೆ ತಾನು ನಿಲ್ಲುವಷ್ಟು ಎತ್ತರವಾಗಿದೆಯೆಂದು ಕಂಡನು. ಗವಿಯೊಳಗೆ ನಡುನೆತ್ತಿಯಲ್ಲಿ ಬಹು ದೊಡ್ಡ ಜೇನುಗೂಡು ಕಾಣಿಸಿತು. ಈ ಚಿತ್ರವಾದ ಗೂಡಿನ ಸುತ್ತ ಸಾವಿರಾರು ಜೇನುಹುಳ ಝೇಂಕರಿಸುತ್ತ ಸುತ್ತುತ್ತಿದ್ದುವು. ಅವುಗಳ ಮನೋಹರವಾದ ಝೇಂಕಾರ ಗವಿಯೊಳಗೆ ತುಂಬಿದ್ದಿತು. ಅವನು ಆ ಶಬ್ದವನ್ನು ಸ್ವಲ್ಪ ಹೊತ್ತು ಆನಂದದಿಂದ ಆಲಿಸಿ ಹೊರಗೆ ಬಂದು ಸುತ್ತಣ ದೃಶ್ಯವನ್ನು ಅವಲೋಕಿಸಿದನು. ಮುಂದೆ ದಾಟಬೇಕಾಗಿದ್ದ ಗೋರ್ಗಲ್ಲು ಬಹಳ ನುಣುಪಾಗಿ ಜಾರಿಕೆಯಾಗಿ ಇದ್ದಿತು. ಅದು ನೂರು ಗಜಗಳ ಮೇಲ್ಪಟ್ಟು ಉದ್ದವಾಗಿದ್ದಿತು. ಏನು ಮಾಡಬೇಕು? ರಾಮುದಾಸನು ಮಾತನಾಡಿದನು.

"ರಾಮು, ನಿನ್ನ ಪ್ರೇರಣೆಯಿಂದಲೆ ರಾಮುದಾಸನು ಈ ಸಾಹಸ ಕಾರ್ಯವನ್ನು ಕೈಗೊಂಡರೂ, ರಾಮುದಾಸನು ವಶಿಷ್ಠಾಶ್ರಮವನ್ನು ಮುಟ್ಟಕೂಡದೆಂದು ನಿನ್ನ ಇಚ್ಛೆ ಇರುವಂತೆ ಈಗ ಕಾಣುತ್ತಿದೆ. ಅಲ್ಲಿಗೆ ಹೋಗದೆ ಇದ್ದರೆ ರಾಮುದಾಸನಿಗೇನು ನಷ್ಟ? ಅವನು ಬಂದ ದಾರಿಯಲ್ಲಿಯೇ ಹಿಂದಕ್ಕೆ ಹೋಗುತ್ತಾನೆ.''

ರಾಮುದಾಸನಿಗೆ ಅತೃಪ್ತಿಯೇನೂ ಆಗಲಿಲ್ಲ. ಗುಹೆಯಿಂದ ಕೆಳಕ್ಕೆ ಇಳಿದು, ಗಂಗಾನದಿಯ ದಡವನ್ನು ಸೇರಿ, ಹಿಂದಿರುಗಿ ನೀರಿನ ಅಂಚಿನಲ್ಲೇ ಓಡುತ್ತಾ ಹೋದನು. ಐವತ್ತು ಗಜ ಸಹ ಹೋಗಿರಲಿಲ್ಲ. ಇನ್ನೊಂದು ದೃಶ್ಯ ಕಂಡು ಮುಂದಣ ಓಟವನ್ನು ನಿಲ್ಲಿಸಿತು. ನೀರಿನ ಅಂಚಿನಲ್ಲಿ ಇವನ ಎದುರಿಗೆ ಮನುಷ್ಯನ ಅಸ್ಥಿಪಂಜರ ಒಂದು ಬಿದ್ದಿದ್ದಿತು. ಅದರ ಗಾತ್ರದಿಂದ ಅದು ಹತ್ತು ಹನ್ನೆರಡು ವರ್ಷದ ಹುಡುಗನದಾಗಿರಬೇಕೆಂದು ಕಾಣಿಸಿತು. ಎಲುಬುಗಳು ಇನ್ನೂ ಹೊಸದಾಗಿದ್ದುವು. ಅವುಗಳ ಮೇಲಣ ಹೊಳಪು ನಶಿಸಿರಲಿಲ್ಲ. ತಲೆಯಮೇಲೆ ಅಲ್ಲಲ್ಲೇ ಇದ್ದ ಚರ್ಮ ಮತ್ತು ಕೂದಲು ವಿನಾ ಅದರ ಇತರ ಭಾಗಗಳ ಮಾಂಸವೆಲ್ಲವೂ ಪೂರ್ಣವಾಗಿ ಮಾಯವಾಗಿದ್ದಿತು.

ಇದುವರೆಗೂ ಮಾತನಾಡದಿದ್ದ ರಾಮುನು ಈಗ ಮಾತನಾಡಿದನು. "ರಾಮುದಾಸ, ಅಸ್ಥಿಪಂಜರವನ್ನು ಕಂಡೆಯಾ? ಚಲನವಿಲ್ಲದ ಎಲುಬುಗಳ ಗುಂಪು! ನಿನ್ನ ದೇಹವೂ ಅದೇ ವಸ್ತುಗಳಿಂದ ನಿರ್ಮಿತವಾದದ್ದು. ಅದಕ್ಕೂ ಇದೇ ಗತಿ ಕಾದಿದೆ. ದೇಹ ಅನಿತ್ಯವಾದ ನಶ್ವರ ವಸ್ತು. ಅದನ್ನು ಕುರಿತು ನೀನು ಅಭಿಮಾನ ಪಡುವ ಕಾರಣವಿಷ್ಟೂ ಇಲ್ಲ. ಈ ದೇಹವನ್ನು ನಿನಗೆ ಕೊಟ್ಟಿರುವುದು ಒಂದೇ ಪ್ರಯೋಜನಕ್ಕೆ; ಅದು ಬಿದ್ದುಹೋಗಿ, ಎದುರಿಗೆ ಇರುವ ಎಲುಬುಗಳಂತೆ ನಿಷ್ಪ್ರಯೋಜನ ಸ್ಥಿತಿಗೆ ಬರುವವರೆಗೂ ಅದನ್ನು ನನ್ನ ಸೇವೆಗೆ ಉಪಯೋಗಿಸುವುದಕ್ಕೆ."

ರಾಮುದಾಸನು ಇದರ ಅರ್ಥವನ್ನು ಗ್ರಹಿಸಿದನು. ರಾಮುನು ಈ ಪ್ರಪಂಚಕ್ಕೆ

ದೊಡ್ಡಗುರು. ಸಂದರ್ಭ ಒದಗಿದಹಾಗೆ ತನಗಿಷ್ಟಬಂದ ವೇಷವನ್ನು ಧರಿಸಿಕೊಳ್ಳು ತ್ತಾನೆ. ಅವನು ನಿಪುಣನಾದ ನಟ, ಸಕಲ ವಿದ್ಯಾಪಾರಂಗತ.

## (ii) ನೀನು ದೇವರ ಕೈಯಲ್ಲಿದ್ದೀಯೆ !

ರಾಮದಾಸನು ಮತ್ತೂ ಹಿಂದಕ್ಕೆ ನಡೆದನು. ತನ್ನ ಸ್ನೇಹಿತರಿಂದಗಲಿದ್ದ ಭೀಕರವಾದ ಬಂಡೆಯ ಹತ್ತಿರ ಬಂದನು. ಅದರ ಬಳಿ ಹೋಗುವ ವೇಳೆ ನದಿಯ ಕಡೆಯಿಂದ ಒಂದು ಧ್ವನಿ ಕೇಳಿಸಿತು. ಅವನು ನಿಂತನು. ನೋಡಿದರೆ ಇಬ್ಬರು ಘಟ್ಟದವರು ನದಿಯಲ್ಲಿ ತಮ್ಮ ಗಡಿಗೆಗಳಿಗೆ ನೀರನ್ನು ತುಂಬುತ್ತಿದ್ದರು. ನಿಸ್ಸಂಶಯ ವಾಗಿ ರಾಮನೇ ಆ ರೂಪಗಳನ್ನು ಧರಿಸಿದ್ದನು. ಅವರಲ್ಲೊಬ್ಬನು ರಾಮ ದಾಸನ ಬಳಿಗೆ ಬಂದು "ಎಲ್ಲಿಗೆ ಹೋಗುತ್ತೀಯೆ?" ಎಂದು ಪ್ರಶ್ನಿಸಿದನು. ವಶಿಷ್ಠಾಶ್ರಮಕ್ಕೆ ಹೋಗಲು ಹೊರಟದುದಾಗಿಯೂ ರಾಮನು ದಾರಿಯನ್ನು ತೋರಿಸಲಿಲ್ಲವಾಗಿ ಹಿಂತಿರುಗುತ್ತಿರುವುದಾಗಿಯೂ ರಾಮದಾಸನು ಉತ್ತರಕೊಟ್ಟನು. ರಾಮನ ಲೀಲೆಗಳು ಆಶ್ಚರ್ಯಕರವಾದುವು.

ಆ ಮನುಷ್ಯನು "ವಶಿಷ್ಠಾಶ್ರಮ ಇನ್ನೂ ದೂರವಿದೆ. ನದಿಯ ಪಕ್ಕದಲ್ಲಿ ದಾರಿ ಇಲ್ಲ. ಎದುರಿಗೆ ಕಾಣುವ ಎತ್ತರದ ಬೆಟ್ಟವನ್ನು ಹತ್ತಿ ಹೋಗಬೇಕು. ಅಲ್ಲಿ ಕಾಡಿನಲ್ಲಿ ಒಂದು ಕಾಲುಹಾದಿ ಕಾಣುತ್ತದೆ. ನೀನು ಆ ದಾರಿಯನ್ನು ಅನು ಸರಿಸಬೇಕು. ಬೆಟ್ಟದ ತುದಿಯನ್ನು ಏರಿದಮೇಲೆ ಆ ಕಡೆ ಇಳಿ. ಅಲ್ಲಿ ದೂರದಲ್ಲಿ ಒಂದು ಮಂದಿರದ ಗೋಪುರ ಕಾಣಿಸುತ್ತದೆ. ಅದನ್ನೇ ಗುರುತಾಗಿಟ್ಟುಕೊಂಡು ನೇರವಾಗಿ ಅದರ ಕಡೆಗೆ ಪ್ರಯಾಣಮಾಡು. ಆ ದೇವಸ್ಥಾನವಿರುವ ಶಿವಪುರಿ ಎಂಬ ಸಣ್ಣಹಳ್ಳಿ ಸಿಕ್ಕುತ್ತದೆ" ಎಂದನು.

ಅವನು ಕಾಲುದಾರಿಯನ್ನು ಮತ್ತೆ ತೋರಿಸಿದನು. ಎತ್ತರವಾದ ಆ ಬೆಟ್ಟದ ಮೇಲೆ ಅದರ ಒಂದು ಸಣ್ಣಗೆರೆ ಕಾಣುತ್ತಿದ್ದಿತು. ಕೂಡಲೆ ರಾಮದಾಸನು ಆ ಕಡೆಗೆ ಓಡಿ, ಬೆಟ್ಟವನ್ನು ಹತ್ತಿ ಹತ್ತಿಹೋದನು. ಬೆಟ್ಟ ಕಡಿದು. ಆದರೆ ರಾಮ ದಾಸನು ಉಸಿರು ತೆಗೆದುಕೊಳ್ಳುವುದಕ್ಕೂ ನಿಲ್ಲಲಿಲ್ಲ. ಅವನಲ್ಲಿದ್ದ ದೈವಿಕಶಕ್ತಿ ಅವನಿಗೆ ಅದ್ಭುತ ಲಾಘವವನ್ನೂ ಅಸಾಧಾರಣ ಸಹನಶಕ್ತಿಯನ್ನೂ ಕೊಟ್ಟಿದ್ದಿತು. ಒಂದು ಗಂಟೆಯ ಕಾಲ ನಡೆದುಹೋದ ಮೇಲೆ ಬೆಟ್ಟದ ನೆತ್ತಿ ಸಿಕ್ಕಿತು. ಅಲ್ಲಿಂದ ಆ ಘಟ್ಟದವನು ಹೇಳಿದ್ದ ಮಂದಿರದ ಗೋಪುರ ಕಾಣಿಸಿತು. ಇಲ್ಲಿಂದ ಕೆಳಕ್ಕೆ ಇಳಿಯುವುದು ಪ್ರಾರಂಭವಾಯಿತು. ಬೆಟ್ಟದಲ್ಲಿ ಮರ ಪೊದೆಗಳು ದಟ್ಟವಾಗಿ ಬೆಳೆದು ಕೊಂಡಿದ್ದುದನ್ನು ಹೇಳಬೇಕು. ಕೆಲವು ವೇಳೆ ರಾಮದಾಸನು ಈ ಗಿಡ ಮರಗಳ ದಾರಿ ತಪ್ಪಿಸುವ ಸುತ್ತಿನಲ್ಲಿ ನುಸುಳಿಕೊಂಡು ಹೋಗಬೇಕಾಯಿತು. ಅವನು ಇಳಿ ಜಾರಿನಲ್ಲಿ ಪೂರ್ಣ ಓಟದಿಂದ ಓಡಿದನು. ಬೆಟ್ಟದ ಬುಡದಲ್ಲಿ ಆಪ್ಯಾಯಮಾನವಾದ ನದಿ ಮತ್ತೆ ಸಿಕ್ಕಿತು. ಅಮೃತದಂತಿದ್ದ ಆ ನೀರನ್ನು ತೃಪ್ತಿಯಾಗಿ ಕುಡಿದು ರಾಮ ದಾಸನು ಈಗ ಹತ್ತಿರದಲ್ಲಿದ್ದ ಶಿವಪುರಿಗೆ ನಡೆದನು.

ಹಳ್ಳಿಯಲ್ಲಿ ದೇವಸ್ಥಾನವಲ್ಲದೆ ರೈತರ ಐದು ಆರು ಗುಡಿಸಿಲು ಮಾತ್ರ ಇದ್ದುವು. ಒಬ್ಬ ರೈತನು ರಾಮದಾಸನನ್ನು ನೋಡಿ ಇವನನ್ನು ತನ್ನ ಗುಡಿಸಿಲಿಗೆ ಕರೆದನು. ರಾಮದಾಸನು ಒಳಗೆ ಹೋಗಿ, ತನಗೆಂದು ಹಾಕಿದ ಒಂದು ಚಾಪೆಯ ಮೇಲೆ ಕುಳಿತನು. ಬೀಸುವ ಕಲ್ಲಿನ ಹತ್ತಿರ ಮುದ್ದಾದ ಒಂದು ಮಗು ಆಡುತ್ತಿರುವುದನ್ನು ಕಂಡು ಅವನು ಅದನ್ನು ಕೂಡಲೆ ತೊಡೆಯಮೇಲೆ ಕುಳ್ಳಿರಿಸಿಕೊಂಡು, ಅದನ್ನು ಮುದ್ದಿಸುತ್ತಾ ಅದರೊಡನೆ ನಗಲಾರಂಭಿಸಿದನು. ರೈತನೂ ಆತನ ಹೆಂಡತಿಯೂ ರಾಮದಾಸನನ್ನು, ತಮ್ಮ ಮಗುವಿನ ಜೊತೆಗೆ ಆಡಲು ಬಂದ ಇನ್ನೊಂದು ಮಗು ವನ್ನು ಎಂಬಂತೆ ವಾತ್ಸಲ್ಯದಿಂದ ನೋಡುತ್ತಿದ್ದರು. ರಾಮದಾಸನು ಅವರಿಗೆ ತಾನು ವಶಿಷ್ಠಾಶ್ರಮಕ್ಕೆ ಹೊರಟಿರುವುದಾಗಿ ತಿಳಿಸಿದನು. ಇಬ್ಬರೂ ಆಶ್ಚರ್ಯಚಕಿತರಾಗಿ ರಾಮದಾಸನನ್ನು ದೃಷ್ಟಿಸಿದರು. ರಾಮದಾಸನು ಒಬ್ಬಂಟಿಗ; ಅಲ್ಲದೆ ಇವನಲ್ಲಿ ಒಂದು ಖಾದಿ ನಿಲುವಂಗಿ, ಒಂದು ಸುಲಭ ಖರೀದಿಯ ಒಳಅಂಗಿ, ಒಂದು ಕಂಬಳಿ ತುಂಡು ಇಷ್ಟು ಹೊರತು ಏನೂ ಇರಲಿಲ್ಲ. ಆ ಸ್ಥಳದಿಂದ ಹೊರಡುವ ಮುನ್ನ ಆ ಒಳ ಅಂಗಿಯನ್ನೂ ಕೂಡ ಅವನು ಆ ರೈತನ ಕೈಗೆ ಕೊಟ್ಟುಬಿಟ್ಟನು.

ಆ ರೈತನು "ಸಾಧುಜಿ, ಈಗಾಗಲೆ ಕತ್ತಲಾಗುತ್ತಿದೆ. (ರಾಮದಾಸನು ಈ ಹಳ್ಳಿಗೆ ಬಂದಾಗಲೇ ಸಂಜೆ ಆರೂವರೆ ಗಂಟೆ ಸಮಯ) ರಾತ್ರಿ ದೇವಸ್ಥಾನದಲ್ಲಿ ಇರಿ. ನನ್ನ ಹೆಂಡತಿ ನಿಮಗೆ ಸ್ವಲ್ಪ ಕಿಚಡಿಯನ್ನು ಕಳುಹಿಸುತ್ತಾಳೆ. ವಶಿಷ್ಠಾ ಶ್ರಮದ ಪ್ರಯಾಣದ ವಿಷಯ ನಿಮಗೆ ಏನು ಹೇಳುವುದೂ ನನಗೆ ತೋರಲಿಲ್ಲ. ಅದಕ್ಕೆ ಸರಿಯಾದ ದಾರಿಯಿಲ್ಲ. ದಾರಿ ತೋರುವವನಿಲ್ಲದೆ ನೀವು ವಶಿಷ್ಠಾಶ್ರಮವನ್ನು ಸೇರಬಹುದೆಂದು ಕನಸಿನಲ್ಲಿಯೂ ನೆನೆಯಬೇಡಿ. ಈ ಸಾಹಸಕಾರ್ಯವನ್ನು ಬಿಡುವಂತೆ ನಿಮ್ಮಂತಹವರನ್ನು ಒಪ್ಪಿಸುವುದಕ್ಕಾಗುವುದಿಲ್ಲವೆಂದು ನನಗೆ ಗೊತ್ತಿದೆ. ಆದುದರಿಂದ ನಿಮಗೆ ಇಷ್ಟು ಹೇಳುತ್ತೇನೆ. ನದಿಯ ದಡದಲ್ಲೇ ಸುಮಾರು ಎರಡು ಮೈಲಿ ಹೋಗಿ. ಅಲ್ಲಿ ಎದುರು ದಡದಲ್ಲಿ, ನದಿಯಮೇಲೆ ಚಾಚಿಕೊಂಡಿರುವ ಮರಗಳ ಗುಂಪೊಂದು ಕಾಣಿಸುತ್ತದೆ. ಇದನ್ನು ಸರಿಯಾಗಿ ನೆನಪಿಟ್ಟುಕೊಳ್ಳಿ. ಈ ಮರಗಳಿಗೆ ಎದುರಾಗಿ, ನೀವು ಹೋಗುವ ದಡದಲ್ಲೇ ಒಂದು ಕಾಲುದಾರಿ ಇದೆ. ಈ ಸ್ಥಳದಲ್ಲಿ ನದಿಯ ದಡವನ್ನು ಬಿಟ್ಟು ಕಾಲುದಾರಿ ಹಿಡಿದು ಬೆಟ್ಟ ಹತ್ತಿಹೋಗಿ. ಅಲ್ಲಿಂದ ಮುಂದಕ್ಕೆ ನಿಮಗೆ ಹೇಳುವುದು ಹೇಗೆ? ಅನಂತರ ನೀವು ಭಗವಂತನ ಕೈಲಿದ್ದೀರಿ. ಅವನೇ ನೋಡಿಕೊಳ್ಳುತ್ತಾನೆ" ಎಂದನು.

ಹೀಗೆ ಹೇಳಿ ಅವನು ರಾಮದಾಸನನ್ನು ಗುಡಿಗೆ ಕರೆದುಕೊಂಡು ಹೋಗಿ, ಅವನನ್ನು ಅಲ್ಲಿ ಬಿಟ್ಟು ಹೊರಟುಹೋದನು. ಸಕಾಲದಲ್ಲಿ ಕಿಚಡಿ ಬಂದಿತು. ಅದರಲ್ಲಿ ಸ್ವರ್ಗಲೋಕದ ಊಟದ ರುಚಿ ಇದ್ದಿತು. ಏಕೆಂದರೆ ಅದರಲ್ಲಿ ಪ್ರೇಮ ತುಂಬಿದ್ದಿತು.

ಗುಡಿಯ ಒಳಭಾಗ ಸುಮಾರು ಏಳು ಅಡಿ ಚದರ ಇದ್ದಿತು. ಅದರ ಗೋಪುರ

ಎತ್ತರವಾಗಿ ಗಗನದಲ್ಲಿದೆ. ಒಟ್ಟು ಕಟ್ಟಡ ಒಂದು ಕಲ್ಲು ಜಗುಲಿಯಮೇಲೆ ಕಟ್ಟಲ್ಪಟ್ಟಿದೆ. ಬಾಗಿಲುಗಳು ತೆರೆದಿದ್ದುವು. ಆಗತಾನೆ ಅಸ್ತಂಗತವಾಗುತ್ತಿದ್ದ ಸೂರ್ಯನ ಬೆಳಕಿನ ಕೊನೆಯ ಕಿರಣಗಳು ಮಂದಿರವನ್ನು ಹೊಕ್ಕು, ಅವನಿಗೆ ಗೋಡೆಗೆ ಆತುಕೊಂಡಿದ್ದ ಅಗಲವಾದ ತಗ್ಗಾದ ಮಣೆಯಮೇಲೆ ಇದ್ದ ಕೆಲವು ಹಿತ್ತಾಳೆಯ ವಿಗ್ರಹಗಳನ್ನು ತೋರಿಸಿತು. ವಿಗ್ರಹಗಳ ಮೇಲ್ಭಾಗದ ಗೋಡೆಯಲ್ಲಿ ಎರಡು ಗೂಟಗಳ ಮೇಲೆ ಒಂದು ಕೆಂಪು ಬಣ್ಣದ ಒರಟು ಕಾಶ್ಮೀರಿ ಶಹಲು ನೇತಿದ್ದಿತು. ಸಂಜೆಯಾದ ಹಾಗೆ ಚಳಿ ಪ್ರಾರಂಭವಾಗಿದ್ದಿತು. ರಾಮದಾಸನು ತನ್ನಲ್ಲಿದ್ದ ಕಂಬಳಿಯನ್ನು ನೆಲದಮೇಲೆ ಹಾಸಿ, ಗೂಟದ ಮೇಲಿದ್ದ ಶಹಲನ್ನು ತೆಗೆದು ಹೊದೆದುಕೊಂಡು ಮಲಗಿದನು. ನಿಜವಾಗಿಯೂ ವಿಶ್ವಮಾತೆ ತನ್ನ ಮಕ್ಕಳನ್ನು ಕಾಪಾಡಲು ಸದಾ ಎಚ್ಚರವಾಗಿದ್ದಾಳೆ. ರಾಮದಾಸನು ಕಣ್ಣುಮುಚ್ಚಿದ ಕೂಡಲೆ, ಅವನಿಗೆ ಯಾರೋ ಒಳಕ್ಕೆ ಬಂದ ಶಬ್ದ ಕೇಳಿಸಿತು. ರಾಮದಾಸನು ಕಣ್ಣುಬಿಟ್ಟು ಎದ್ದು ಕುಳಿತನು. ಎದುರಿಗೆ ಯಾರೋ ಒಬ್ಬನು ಕುಳಿತಿದ್ದುದು ಕಾಣಿಸಿತು. ಆ ಕತ್ತಲ್ಲಿ ಅವನ ಆಕಾರ ಕಾಣಿಸುತ್ತಿರಲಿಲ್ಲ.

ಆತನು ತಾನು ದೇವಸ್ಥಾನದ ಅರ್ಚಕನೆಂದು ತನ್ನ ಪರಿಚಯ ಮಾಡಿಕೊಟ್ಟನು. ರಾಮದಾಸನನ್ನು ದೃಷ್ಟಿಸಿ ನೋಡುತ್ತಾ, ಅವನು ಹೊದೆದಿದ್ದ ಶಹಲನ್ನು ಮುಟ್ಟಿ ನೋಡಿ, ನಂತರ ಗೋಡೆಯ ಮೇಲೆ ಗೂಟಗಳ ಕಡೆ ದೃಷ್ಟಿಸಿ ಅಸಂತುಷ್ಟನಾಗಿ,

"ಹಾಗಾದರೆ ಶಹಲನ್ನು ತೆಗೆದುಕೊಂಡಿದ್ದೀರಿ. ಅದು ಠಾಕೂರಜಿಗೆ (ದೇವರಿಗೆ) ಸೇರಿದ್ದು" ಎಂದನು.

ರಾಮದಾಸನು "ನಿಮ್ಮ ಠಾಕೂರಜಿ ಎಲ್ಲಿದ್ದಾನೆ? ರಾಮದಾಸನಿಗೆ ತೋರಿಸುವೆಯಾ?" ಎಂಬ ಸುಲಭವಾದ ಪ್ರಶ್ನೆಯನ್ನು ಹಾಕಿದನು.

ಕೂಡಲೆ ಅವನು "ತಪ್ಪಾಯಿತು. ನಾನೆಂತಹ ಹುಚ್ಚು ಕುರುಡ! ನೀವು **ಅವನೇ! ನೀವು ಅವನೇ!** ಮಹರಾಜ್, ನಿಮಗೆ ಶಹಲನ್ನು ಹೊದೆದುಕೊಳ್ಳುವುದಕ್ಕೆ ಸಂಪೂರ್ಣ ಅಧಿಕಾರ ಇದೆ" ಎಂದು ಕೂಗಿಕೊಂಡನು. ತಕ್ಷಣವೇ ಅವನು ಪ್ರೀತಿ ಆದರಗಳ ಮೂರ್ತಿಯಾದನು. ನಂತರ "ತಿನ್ನುವುದಕ್ಕೆ ಏನಾದರೂ ತಂದುಕೊಡಲೆ? ನಮ್ಮ ಮನೆಯಲ್ಲಿ ಊಟ ಸಿದ್ಧವಾಗಿದೆ. ನಿಮಗೆ ಭೋಜನಮಾಡಿಸುವುದು ನನಗೆ ಕೊಂಚದ ಸಂತೋಷವಲ್ಲ. ದಯಮಾಡಿ ನನ್ನ ಬಡ ಆತಿಥ್ಯವನ್ನು ಸ್ವೀಕರಿಸಿ" ಎಂದು ಕೇಳಿಕೊಂಡನು.

ರಾಮದಾಸನು "ರಾಮಜಿ! ರಾಮದಾಸನಿಗೆ ಆಗಲೇ ಭೋಜನವಾಗಿದೆ. ನಿನ್ನ ಆದರಣೆಗೆ ವಂದನೆ. ನೀನು **ರಾಮನೇ** ನಿಜ" ಎಂದನು. ನಂತರ ಅವನು ಹೊರಟುಹೋದನು.

ಮಾರನೆಯ ಬೆಳಿಗ್ಗೆ ಹೊತ್ತಿಗೆಮುಂಚೆಯೇ ಎದ್ದು ರಾಮದಾಸನು ಶಿವಪುರಿಯಿಂದ ಹೊರಟು ನದಿಯ ದಂಡೆಯಲ್ಲೇ ನಡೆದು ಮುಂದೆಹೋದನು.

ಆ ರೈತ ಹೇಳಿದ್ದ ಗುರುತು ತಪ್ಪಿಹೋಯಿತು. ಮೂರು ಮೈಲಿಗಳಷ್ಟು ನಡೆದು ಹೋದಮೇಲೆ ಅವನು ಒಂದು ಸ್ಥಳಕ್ಕೆ ಬಂದನು. ಅಲ್ಲಿಂದ ಮುಂದುವರಿಯಲು ಆಗಲಿಲ್ಲ. ಕಡಿದಾದ ಒಂದು ಬಂಡೆಯನ್ನು ಹತ್ತಲು ಅವನು ಪ್ರಯತ್ನಪಟ್ಟನು. ಬಂಡೆ ತೀರಾ ಕಡಿದಾಗಿ ಕೈಕಾಲುಗಳನ್ನಿಡಲು ಯಾವ ಆಧಾರವೂ ಇಲ್ಲದೆ ಇದ್ದುದರಿಂದ ಅವನು ಆ ಯೋಚನೆಯನ್ನು ಬಿಡಬೇಕಾಯಿತು. ಅವನು ನಿಂತು **ರಾಮ**ನಿಗೆ ಅರಿಕೆಮಾಡಿದನು.

"**ರಾಮ,** ನೀನು ರಾಮದಾಸನೊಂದಿಗೆ ಹುಡುಗಾಟವಾಡುತ್ತಿದ್ದೀಯೆ. ನಿನ್ನ ಇಚ್ಛೆ ಇದ್ದಂತೆ ಮಾಡು. ರಾಮದಾಸನು ಹಿಂತಿರುಗುತ್ತಾನೆ. ವಶಿಷ್ಠಾಶ್ರಮಕ್ಕೆ ಏಕೆ ಮುಟ್ಟಲಿಲ್ಲವೆಂದು ಕೇಳಿದರೆ ನೀನು ಅವನಿಗೆ ಮೋಸಮಾಡಿ ಅರ್ಧ ದಾರಿಯಲ್ಲೇ ಹಿಂದಕ್ಕೆ ಕಳುಹಿಸಿದೆ ಎಂದು ರಾಮದಾಸನು ಮುಚ್ಚುಮರೆ ಇಲ್ಲದೆ ಹೇಳಿಬಿಡುತ್ತಾನೆ." ಅದೆಲ್ಲಾ **ರಾಮ**ನ ಇಚ್ಛೆ, **ರಾಮ**ನ ಲೀಲೆ.

ರಾಮದಾಸನು ಮತ್ತೆ ಹಿಂತಿರುಗಿದನು. ಸುಮಾರು ಒಂಭತ್ತು ಗಂಟೆಯ ಹೊತ್ತಿಗೆ ಮರಳಿ ಶಿವಪುರಿಗೆ ಬಂದನು. ಊರೊಳಗೆ ಹೋಗಲು ಮನಸ್ಸಿಲ್ಲದೆ ಹಾಗೆಯೇ ಮುಂದೆ ನಡೆದನು. ಊರ ಬದಿಯ ನದಿಯ ದಂಡೆಯನ್ನು ದಾಟಿದನು. ಕೆಲವು ಗಜ ಕೂಡ ಹೋಗಿರಲಿಲ್ಲ. ಇಬ್ಬರು ಘಟ್ಟದ ಜನ ಇವನ ಎದುರಿಗೆ ಬಂದರು. ಅವರು ಬೆನ್ನಿನಮೇಲೆ ಡಬ್ಬಗಳನ್ನು ಹೊತ್ತುಕೊಂಡಿದ್ದರು. ಇವರು ತರುಣರು, ಎತ್ತರದ ಆಳುಗಳು. ಇವರೂ **ರಾಮನೇ.** ಎಲ್ಲ ರೂಪಗಳೂ **ಅವನವೇ.** ಅವರು "ರಾಮ್ ರಾಮ್" ಎಂದು ಇವನಿಗೆ ವಂದನೆಮಾಡಿ ಇವನನ್ನು "ಎಲ್ಲಿ ಹೋಗುತ್ತಿ? ಏನು ಕಾರ್ಯ?" ಎಂದು ಪ್ರಶ್ನೆಮಾಡಿದರು. ರಾಮದಾಸನು ಅವರಿಗೆ ತಾನು ವಶಿಷ್ಠಾಶ್ರಮಕ್ಕೆಂದು ಹೊರಟದ್ದನ್ನೂ ಅದು ನಡೆಯದೆ ತಾನು ಹಿಂದಕ್ಕೆ ಹೋಗುತ್ತಿರುವುದನ್ನೂ ವಿವರಿಸಿದನು.

ಅವರಲ್ಲಿ ಒಬ್ಬನು "ಮತ್ತೆ ಹಿಂದಿರುಗು. ನಾವು ನಿನ್ನ ಜೊತೆಗೆ ಬರುತ್ತೇವೆ. ನಮ್ಮ ದಾರಿಯೂ ವಶಿಷ್ಠಾಶ್ರಮದ ಕಡೆಗೇ ಇದೆ. ನಿನಗೆ ನಾವು ದಾರಿ ತೋರಿಸಬಲ್ಲೆವು" ಎಂದು ಹೇಳಿದನು.

ರಾಮ, ನೀನು ಎಂತಹ ಕ್ಷಣಪಿತ್ತ ಕ್ಷಣಚಿತ್ತದ ಆಟಗಾರ! ಆ ಗೆಳೆಯರು ಬೆಟ್ಟಹತ್ತುವ ಅಭ್ಯಾಸವಿದ್ದವರು, ವೇಗವಾಗಿ ನಡೆಯಬಲ್ಲವರು. ಆದುದರಿಂದ ರಾಮದಾಸನು ಹಿಂದೆಬೀಳದಂತೆ ಅವನನ್ನು ಮುಂದೆ ನಡೆಸುವುದೇ ಉತ್ತಮ ಎಂದು ಎಣಿಸಿದರು. ಆದರೆ ರಾಮದಾಸನ ಧಮನಿಯಲ್ಲಿ ಭಗವಂತನ ಶಕ್ತಿ ಪುಲಕಿತವಾಗುತ್ತಿದ್ದಿತು. ಅವನು ನೆಗೆಯುತ್ತಾ ಕುಣಿಯುತ್ತಾ ಓಡಿದನು. ಆ ಸ್ನೇಹಿತರು ತಮ್ಮ ಕೈಲಾದಮಟ್ಟಿಗೂ ಹಿಂಬಾಲಿಸಿ ಬಂದರು. ಮುಂದೆ ಬೆಟ್ಟದ ಏತ ಆರಂಭವಾಯಿತು. ಇಲ್ಲಿಯೂ ರಾಮದಾಸನ ವೇಗ ಮೊದಲಂತೆಯೇ ಇದ್ದಿತು. ಅವನು ಅಳಿಲಂತೆ ಹತ್ತಿಹೋಗುತ್ತಿದ್ದನು. ಸ್ವಲ್ಪದೂರ ಹತ್ತಿದಮೇಲೆ ಅವನು

ನಿಂತು ಹಿಂತಿರುಗಿ ನೋಡಿದನು. ಆ ಇಬ್ಬರು ಸ್ನೇಹಿತರೂ ಸುಮಾರು ನಲವತ್ತು ಐವತ್ತು ಗಜಗಳ ಹಿಂದೆ ಇವನನ್ನು ಹಿಡಿಯುವುದಕ್ಕಾಗಿ ಓಡುತ್ತಾ ಬರುತ್ತಿದ್ದರು. ಕೈಗಳನ್ನು ಬೀಸಿ ನಿಂತುಕೋ ಎಂದು ಕೂಗಿದರು. ಏದುತ್ತಾ ಹತ್ತಿರಕ್ಕೆ ಬಂದು ಇವನನ್ನು ವಿಜಾತೀಯವಾದ ನಗೆನೋಟದಿಂದ ನೋಡಿ,

"ನೀನೇನೂ ಕೊಂಚದವನಲ್ಲ. ಏನು, ನಮ್ಮ ಉಸಿರನ್ನೇ ತೆಗೆದುಬಿಟ್ಟೆ! ನಿನ್ನನ್ನು ಮುಂದೆಬಿಟ್ಟು ಉಪಯೋಗವಿಲ್ಲ. ಇನ್ನು ನೀನು ನಮ್ಮ ಹಿಂದೆ ಬರ ಬೇಕು" ಎಂದರು. ಇದನ್ನು ಕೇಳಿ ರಾಮದಾಸನು ನಗುವನ್ನು ತಡೆಯಲಾರದೆ ಹೋದನು. ಅವರೂ ಜೊತೆಗೆ ನಕ್ಕು ಸಂತೋಷಪಟ್ಟರು. ರಾಮದಾಸನು ಇವರ ಹಿಂದೆ ನಡೆಯಬೇಕಾಯಿತು. ದಾಟುಗಾಲು ವೇಗದ ನಡಿಗೆಗೆ ಇಳಿಯಿತು. ಅವನು ಅವರ ಬೆನ್ನಿನ ಹತ್ತಿರಕ್ಕೆ ಬಂದಾಗ ರಬ್ಬರ್‌ಚಂಡಿನಂತೆ ಕುಪ್ಪಳಿಸುತ್ತಿದ್ದನು. ಅವನಲ್ಲಿ ದೈವಿಕ ಶಕ್ತಿ ಆಡಿದ ಆಟ ತಡೆಯಲಸಾಧ್ಯವಾಗಿದ್ದಿತು.

ಮಧ್ಯಾಹ್ನ ಒಂದು ಗಂಟೆಯ ಸಮಯಕ್ಕೆ ಇವರು ಉನ್ನತವಾದ ಒಂದು ಬೆಟ್ಟದ ಶಿಖರವನ್ನು ಮುಟ್ಟಿದರು. ಅಲ್ಲಿ ಉದ್ದವಾದ ಕಡಮೆ ಅಗಲದ ಗುಡಿಸಿ ಲೊಂದು ಇದ್ದಿತು. ಅದರಲ್ಲಿ ರೈತಾಪಿಜನ ತಮ್ಮ ದನಗಳೊಂದಿಗೆ ಇದ್ದರು. ಬಿಸಿಲು ತೀಕ್ಷ್ಣವಾಗಿದ್ದುದರಿಂದ ಆ ಗೆಳೆಯರು ಇಲ್ಲಿ ಸ್ವಲ್ಪ ವಿಶ್ರಾಂತಿಪಡೆಯೋಣವೆಂದರು. ಹೊರಗಿದ್ದ ಒಂದು ಸಣ್ಣ ಗುಡಿಸಿಲಿನಲ್ಲಿ ನೆಲದಮೇಲೆ ಹುಲ್ಲನ್ನು ಹಾಸಿ ಅದರ ಮೇಲೆ ರಾಮದಾಸನನ್ನು ಕುಳ್ಳಿರಿಸಿ, ಗೆಳೆಯರು ದೊಡ್ಡ ಗುಡಿಸಿಲಿಗೆ ಹೋಗಿ ಆದರ ವಂತರಾದ ಅಲ್ಲಿಯ ನಿವಾಸಿಗಳು ಕೊಟ್ಟ ಪದಾರ್ಥಗಳಿಂದ ಅನ್ನ ಪಲ್ಯ ಮೊಸರ ಊಟವನ್ನು ಸಿದ್ಧಮಾಡಿದರು. ಎಲ್ಲವೂ ಸಿದ್ಧವಾದಮೇಲೆ ರಾಮದಾಸನನ್ನು ಊಟಕ್ಕೆ ಕರೆದರು. ಊಟ ಆಪ್ಯಾಯಮಾನವಾಗಿದ್ದಿತು. ಅವನು ಅಲ್ಲಿ ತಿಂದ ಆ ಪದಾರ್ಥಗಳು ದೇವತೆಗಳ ಆಹಾರ. ಊಟ ಅಷ್ಟು ನಿರಾಡಂಬರವಾಗಿ ಶುಚಿ ಯಾಗಿ ರುಚಿಯಾಗಿ ಇದ್ದಿತು. ಒಟ್ಟು ಒಂದು ಗಂಟೆಯ ಕಾಲ ವಿಶ್ರಾಂತಿ ಆದ ಮೇಲೆ ಇವನು ಆ ಮಿತ್ರರೊಂದಿಗೆ ಮುಂದೆಹೊರಟನು. ಇಲ್ಲಿಂದ ಮುಂದೆ ದಾರಿ ಮೆಳೆ, ತರಗೆಲೆಯ ರಾಶಿ, ದೊಡ್ಡಮರ ಮತ್ತು ಬಳ್ಳಿಗಳು ಒಂದಕ್ಕೊಂದು ಹೆಣೆದು ಕೊಂಡಿರುವ ಸಂದು, ಇವುಗಳಲ್ಲಿ ನುಸಿದುಹೋಗಿದ್ದಿತು; ಮೆಲ್ಲನೆ ಇಳಿಯುತ್ತಿದ್ದಿತು.

ಸಾಯಂಕಾಲ ಆರು ಗಂಟೆಯ ಹೊತ್ತಿಗೆ ಇವರು ಮತ್ತೆ ನದಿಯ ದಂಡೆ ಯನ್ನು ಕಂಡರು. ಆಗ ಒಬ್ಬನು, "ಈಗ ನಾವು ವಶಿಷ್ಠರ ಗುಹೆಗೆ ಬಹು ಹತ್ತಿರ ಬಂದಿದ್ದೇವೆ" ಎಂದನು.

ತಡೆಯಲಾರದ ಸಂತೋಷದಿಂದ ರಾಮದಾಸನು "ಎಲ್ಲಿ? ಎಲ್ಲಿ?" ಎಂದು ಕಿರಿಚಿದನು. ಇವರು ನದಿಯ ದಂಡೆಗೆ ಬಂದರು. ಸ್ನೇಹಿತನು, ಬೆರಳಿನಿಂದ ಅಕೋ ಅಲ್ಲಿ ಎಂದು ನಿರ್ದೇಶಿಸಿದನು. ಸ್ವಲ್ಪ ದೂರದಲ್ಲಿ ದೊಡ್ಡದಾಗಿ ಬಾಯಿ ಬಿಟ್ಟಂತೆ ಗುಹೆ ಕಾಣಿಸುತ್ತಿದ್ದಿತು.

ಈಗ ರಾಮುದಾಸನು ನಿಲ್ಲಲಾರದೆ ಹೋದನು. ಇವರನ್ನು ಹಿಂದೆಬಿಟ್ಟು ಅವನು ಬಿರುಗಾಳಿಯಂತೆ ಆ ದಿಕ್ಕಿಗೆ ಓಡಿದನು. ಅವನಿಗೆ ಗುಹೆಯ ಬಾಗಿಲಲ್ಲಿ ಕೌಪೀನಧಾರಿಯಾದ ಎತ್ತರವಾದ ತೆಳುವಾದ ಒಬ್ಬ ಸಾಧು ನಿಂತಿರುವುದು ಕಂಡಿತು. ರಾಮುದಾಸನ ಸಂಗಡಿಗರು ಗುಹೆಯಲ್ಲಿ ಒಬ್ಬ ಮಹಾತ್ಮನು ವಾಸಿಸುತ್ತಿರುವುದಾಗಿ ತಿಳಿಸಿದ್ದರು.

ಸಾಧುವನ್ನು ಕಂಡಕೂಡಲೇ ರಾಮುದಾಸನು ಅವನಲ್ಲಿಗೆ ಓಡಿಹೋಗಿ ದೀರ್ಘದಂಡ ನಮಸ್ಕಾರ ಮಾಡಿದನು. ಈ ವಿಧದ ವಂದನೆ ಸಾಧುವಿಗೆ ಸಮ್ಮತ ವಾದಂತೆ ಕಾಣಲಿಲ್ಲ. ಅವನು ಕೈ ಸಂಜ್ಞೆಯಿಂದ ಅದನ್ನು ನಿರೋಧಿಸಿದನು. ಸಾಧು ಗುಹೆಯೊಳಕ್ಕೆ ಹೋಗಲು ರಾಮುದಾಸನು ಅವನ ಹಿಂದೆಯೇ ಹೋದನು. ಗುಹೆ ದೊಡ್ಡದಾಗಿ ವಿಶಾಲವಾಗಿ ಸುಮಾರು ಹದಿನೈದು ಅಡಿ ಅಗಲ ಇಪ್ಪತ್ತು ಅಡಿ ಉದ್ದ ಪತ್ತು ಅಡಿ ಎತ್ತರವಿದೆ. ರಾಮುದಾಸನು ಒಳಗೆ ಹೆಜ್ಜೆ ಇಟ್ಟಾಗ ಎಡಗಡೆಯ ಮೂಲೆಯಲ್ಲಿ ಪಲವು ಡಬ್ಬಗಳನ್ನು ಸಾಲಾಗಿ ಪೇರಿಸಿರುವುದು ಕಂಡಿತು. ಬಾಗಿ ಲಲ್ಲಿ ಎರಡು ಗೋಣಿಯ ಚೀಲಗಳನ್ನು ಹಾಸಿದ್ದಿತು. ಹಿಂದುಗಡೆ ಸ್ವಲ್ಪ ದೂರ ದಲ್ಲಿ ಒಂದು ಅಗಲವಾದ ಮೆತ್ತೆಯನ್ನು ಹಾಸಿದ್ದಿತು. ಇದು ಸಾಧುವಿನ ಪೀಠ. ಗುಹೆಯ ಮಧ್ಯೆ ಸಣ್ಣ ಒಂದು ಅಗ್ನಿಕೊಂಡವಿದ್ದಿತು. ಗುಹೆಯ ಬಾಯ ಹತ್ತಿರ ಬಲ ಭಾಗದಲ್ಲಿ ಅಚ್ಚುಕಟ್ಟಾಗಿ ಜೋಡಿಸಿ ಸೌದೆಯನ್ನು ಅಡಕಿದ್ದಿತು. ರಾಮು ದಾಸನು ಒಂದು ಗೋಣಿಯಚೀಲದ ಮೇಲೆ ಕುಳಿತನು. ಸಾಧು ತನ್ನ ಪೀಠದಲ್ಲಿ ಕುಳಿತನು. ಇಷ್ಟುಹೊತ್ತಿಗೆ ರಾಮುದಾಸನಿಗೆ ದಾರಿತೋರಿಸಿದ್ದ ಸಂಗಡಿಗರು ಬಂದು ಸೇರಿದರು. ಕೆಲವು ನಿಮಿಷ ಇದ್ದು ಅಪ್ಪಣೆ ಪಡೆದು ಹೊರಟುಹೋದರು. ಕೊನೆಗೂ ರಾಮನು ತನ್ನ ಮಗುವನ್ನು ಆಶ್ರಮಕ್ಕೆ ಕರತಂದೇ ತಂದನು. ✓

---

## ಅಧ್ಯಾಯ ೨೯

### ವಶಿಷ್ಠಾಶ್ರಮ.

### (i) ಬಟ್ಟಲ ಹಾಲು

ಸಾಧು ಆಗ ರಾಮುದಾಸನನ್ನು ನೋಡಿ "ಇಲ್ಲಿಗೆ ಬಂದ ಕಾರ್ಯವೇನು ?" ಎಂದು ಪ್ರಶ್ನಿಸಿದನು.

ರಾಮುದಾಸನು "ರಾಮನು ರಾಮುದಾಸನನ್ನು ಈ ಗುಹೆಯನ್ನು ನೋಡು ವುದಕ್ಕೂ ನಿಮ್ಮ ದರ್ಶನವನ್ನು ಪಡೆಯುವುದಕ್ಕೂ ಇಲ್ಲಿಗೆ ಕರೆತಂದಿದ್ದಾನೆ" ಎಂದು ಉತ್ತರಕೊಟ್ಟನು.

" ಈ ಹೊತ್ತು ಏನಾದರೂ ಊಟವಾಯಿತೆ ? " ಎಂದು ಸಾಧು ಕೇಳಿದನು.

ರಾಮದಾಸನು " ಆಯಿತು. ರಾಮದಾಸನನ್ನು ಇಲ್ಲಿಗೆ ಕರೆತಂದವರು ದಯಮಾಡಿ ದಾರಿಯಲ್ಲಿ ಭೋಜನಮಾಡಿಸಿದರು" ಎಂದು ಉತ್ತರಕೊಟ್ಟನು.

ಸಾಧು ರಾಮದಾಸನನ್ನು ಈಗ ಮತ್ತಷ್ಟು ದಿಟ್ಟವಾಗಿ ಈಕ್ಷಿಸಿ ಕೇಳಿದನು.

" ನಿನ್ನ ಹತ್ತಿರ ಇರುವುದೆಲ್ಲಾ ಇಷ್ಟೇನೆ ? ದುಡ್ಡು ಏನಾದರೂ ಇದೆಯೋ ? "

" ಇಲ್ಲ. ರಾಮದಾಸನಿಗೆ ಹತ್ತಿರ ದುಡ್ಡು ಇಟ್ಟುಕೊಳ್ಳಲು **ರಾಮನ** ಆಜ್ಞೆ ಇಲ್ಲ" ಎಂದನು ರಾಮದಾಸ.

ಸಾಧು " ಹಾಗಾದರೆ ನೀನು ಇಲ್ಲಿ ಉಪವಾಸವಿರುವುದಕ್ಕೆ ಬಂದಿದ್ದೀಯೆ" ಎಂದು ಸಾವಧಾನವಾಗಿ ನುಡಿದು ಮಾತನ್ನು ಮುಂದುವರಿಸಿದನು. " ಇಗೋ ಕೇಳು, ನನ್ನ ಸಂಗತಿ ಏನು ಎನ್ನುವುದನ್ನು ತಿಳಿಸುತ್ತೇನೆ. ನಾನು ಸಾಧುವೂ ಅಲ್ಲ, ಮಹಾತ್ಮನೂ ಅಲ್ಲ. ನಾನೊಬ್ಬ ವೈಶ್ಯ ಜಾತಿಯ ಸಾಧಾರಣ ವರ್ತಕ. ವರ್ಷದಲ್ಲಿ ಮೂರು ನಾಲ್ಕು ತಿಂಗಳು ಈ ಗುಹೆಯಲ್ಲಿ ವಾಸಿಸುತ್ತೇನೆ. ಮಳೆಗಾಲದಲ್ಲಿ ನದಿಯ ಪ್ರವಾಹ ಹೆಚ್ಚಿ ಗವಿಯೊಳಗೆ ನೀರು ನುಗ್ಗುವುದರಿಂದ ಆ ಕಾಲದಲ್ಲಿ ಇಲ್ಲಿರಲು ಸಾಧ್ಯವಿಲ್ಲ. ಉಳಿದ ಕಾಲವನ್ನು ಮೈದಾನ ಪ್ರಾಂತದಲ್ಲಿರುವ ನನ್ನೂರಿನಲ್ಲಿ ಕಳೆಯುತ್ತೇನೆ. ಅಲ್ಲಿ ಯಾವುದಾದರೂ ವ್ಯಾಪಾರದಲ್ಲಿ ತೊಡಗಿ ಸುಮಾರು ಇನ್ನೂರು ರೂಪಾಯಿನಷ್ಟು ಲಾಭ ಸಂಪಾದಿಸಿ ಅದನ್ನು ತೆಗೆದುಕೊಂಡು ಇಲ್ಲಿಗೆ ಬರುತ್ತೇನೆ. ನನಗೆ ಯಾರಿಂದಲೂ ಏತರದೂ ಹಂಗಿಲ್ಲ. ನನ್ನ ದುಡ್ಡಿನಿಂದಲೇ ನನ್ನ ಕಷ್ಟ ಸುಖವನ್ನು ನೋಡಿಕೊಳ್ಳುತ್ತೇನೆ. ಒಂದು ತಿಂಗಳಿಂದ ಬರಿಯ ಹಾಲು ಕುಡಿದು ಜೀವಿಸುತ್ತಿದ್ದೇನೆ. ಪ್ರತಿದಿನವೂ ಮೂರು ಪಾವು ಹಾಲು ಮಾತ್ರ ತೆಗೆದುಕೊಳ್ಳುತ್ತೇನೆ. ಇದನ್ನು ಬೆಟ್ಟದ ಮೇಲಿರುವ ಹಳ್ಳಿಗಳಿಂದ ತರಿಸಿಕೊಳ್ಳುತ್ತೇನೆ.

" ಪ್ರತಿದಿನವೂ ಮಧ್ಯಾಹ್ನದ ವೇಳೆಗೆ ಹಳ್ಳಿಯವನೊಬ್ಬನು ಹಾಲನ್ನು ತಂದುಕೊಡುತ್ತಾನೆ. ಅವನಿಗೆ ನಗದು ದುಡ್ಡು ಕೊಟ್ಟುಬಿಡುತ್ತೇನೆ. ಅರ್ಥವಾಯಿತೆ? ನಿನಗೆ ಏನಾದರೂ ಆಹಾರ ಬೇಕಾದರೆ ಬೆಟ್ಟ ಹತ್ತಿಹೋಗಿ ಹಳ್ಳಿಯಲ್ಲಿ ಭಿಕ್ಷಬೇಡಬೇಕು. ಒಂದು ಸಲ ಹತ್ತಿ ಇಳಿಯಬೇಕಾದರೆ ಹಗಲ ಮೂರು ಪಾಲು ಕಳೆಯುತ್ತದೆ. ಹೀಗೆ ಮಾಡುವುದಾದರೆ ನೀನು ಇಲ್ಲಿ ನಿಂತು ಉಪಯೋಗವಿಲ್ಲ. ಆದುದರಿಂದ ನೀನು ಆದಷ್ಟು ಜಾಗ್ರತೆ ಹೊರಟುಹೋಗಬೇಕೆಂಬುದೇ ನನ್ನ ಸೂಚನೆ. ನಿನ್ನ ಯೋಚನೆ ಏನು ? ಎಷ್ಟು ಕಾಲ ಇರಬೇಕೆಂದಿದ್ದಿ?" ಎಂದು ಕೇಳಿದನು.

" ರಾಮದಾಸನು ಯಾವುದನ್ನೂ ಯೋಚಿಸಿಲ್ಲ. ಅವನು ಎಷ್ಟು ದಿನ ಇಲ್ಲಿ ನಿಲ್ಲಬೇಕೆಂದು **ರಾಮನ** ಇಚ್ಛೆಯಿದೆಯೋ ಗೊತ್ತಿಲ್ಲ. ಅದೆಲ್ಲ **ರಾಮನ** ಅಧೀನ. ಊಟದ ಮಾತು. ಎಚ್ಚರದಲ್ಲಿ, ಧ್ಯಾನದಲ್ಲಿ, ಎಲ್ಲ ವೇಳೆಯನ್ನೂ ದೇವರಿಗೆ ಸಮರ್ಪಿಸಬೇಕೆಂದಿರುವ ಸ್ಥಳದಲ್ಲಿ ಗಟ್ಟಿ ಆಹಾರವನ್ನು ತೆಗೆದುಕೊಳ್ಳುವುದು ರಾಮ

ದಾಸನಿಗೆ ಸಮ್ಮತವಲ್ಲ. ಭಗವಂತನು ರಾಮುದಾಸನಿಗೆ ಬರಿ ನೀರಿನಿಂದಲೇ ಕೆಲವು ದಿನ ಇರಬಲ್ಲ ಸಹನ ಶಕ್ತಿಯನ್ನು ದಯಪಾಲಿಸಿದ್ದಾನೆ. ಆದ್ದರಿಂದ ರಾಮುದಾಸನಿಗೆ ಆಹಾರಕ್ಕಾಗಿ ಬೆಟ್ಟವನ್ನು ಹತ್ತಿಹೋಗದೆ ಇರುವುದು ಇಷ್ಟ" ಎಂದು ರಾಮುದಾಸನು ಉತ್ತರವಿತ್ತನು.

ಈ ಮಾತುಗಳನ್ನು ಕೇಳಿ ಸಾಧುವಿಗೆ ರೇಗಿತು. ಅವನು ರಾಮುದಾಸನನ್ನು ದೃಷ್ಟಿಸಿ ನೋಡುತ್ತಾ ಹೀಯಾಳಿಸುವ ಧ್ವನಿಯಲ್ಲಿ,

"ಸಾಕು ನಿನ್ನ ಹರಟೆ. ನೀರು ಕುಡಿದು ಇರುವುದಾಗಿ ಜಂಭ ಕೊಚ್ಚುವ ನಿನ್ನಂತಹ ಸಾಧುಗಳನೇಕರನ್ನು ಕಂಡಿದ್ದೇನೆ. ಅವರು ಒಂದು ದಿನ ಇದ್ದುದಿಲ್ಲ. ನನ್ನ ಹತ್ತಿರ ನಿನ್ನ ಜಂಭ ಹೊಡೆಯಬೇಡ" ಎಂದನು.

ರಾಮನು ಪುನಃ ಹುಡುಗಾಟಕ್ಕೆ ಮೊದಲು ಮಾಡಿದ್ದಾನೆಂಬುದು ರಾಮು ದಾಸನಿಗೆ ಚನ್ನಾಗಿ ಕಂಡಿತು. ಸಾಧು "ನೀನು ಹೇಳುವುದು ಗಟ್ಟಿ ಆಹಾರ ಬೇಕಿಲ್ಲವೆಂದು ತಾನೆ? ಎಂದರೆ ನಿನಗೆ ದ್ರವರೂಪವಾದ ಆಹಾರ ಬೇಕಾಗಿದೆ ಅಲ್ಲವೇ?" ಎಂದನು.

ರಾಮುದಾಸನು ಮೆತ್ತಗೆ "ಹೌದು. ಬರಿಯ ನೀರು; ಅಥವಾ ರಾಮನು ಒದಗಿಸಿಕೊಟ್ಟರೆ ಹಾಲು" ಎಂದು ಉತ್ತರ ಕೊಟ್ಟನು.

ಸಾಧು ಥಟ್ಟನೆಯಾಗಿ "ಆಹಾ! ನೋಡಿದೆಯಾ, ನಿನ್ನಗುಟ್ಟು ರಟ್ಟಾಯಿತು" ಎಂದು ಹಾಸ್ಯ ಮಾಡಿದನು. ಆಮೇಲೆ ರಾಮುದಾಸನ ಕಡೆ ಬಗ್ಗಿ, ತನ್ನ ತೋರ ಬೆರಳನ್ನು ನೀಡಿ, ಹೀಯಾಳಿಸುವ ನೋಟದೊಡನೆ ಅವಹೇಳನದಿಂದ ಕೂಡಿದ ಶಬ್ದ ಗಳಿಂದ "ನಾನು ದಿನಾ ಕುಡಿಯುವ ಹಾಲಿಗೆ ಪಾಲುದಾರನಾಗಿ ನನ್ನನ್ನು ಉಪ ವಾಸದಿಂದ ಸಾಯಿಸುವುದಕ್ಕೆಂದು ಬಂದೆಯಾ? ಅದೇಯೋ ನಿನ್ನ ಅಭಿಪ್ರಾಯ?" ಎಂದು ಉಸುರಿದನು.

"ರಾಮು, ನೀನು ಎಂತಹ ನುರಿತ ನಟನೋ! ಯಜಮಾನನಂತೆ ಭೃತ್ಯ! ನಿನ್ನ ಪದತಲದಲ್ಲಿ ಈ ಆಟವನ್ನೆಲ್ಲ ಕಲಿತ ರಾಮುದಾಸನು ನಿನ್ನ ಆಟಕ್ಕೆ ಸರಿ ಯಾಗಿ ಆಡಬಲ್ಲನು." ಈಗ ಆಟ ಒಂದು ಸೊಗಸಾದ ಸ್ಥಾನವನ್ನು ಮುಟ್ಟುವು ದರಲ್ಲಿದ್ದಿತು.

ರಾಮುದಾಸನು ಸಮಾಧಾನವಾಗಿ "ರಾಮುಜಿ, ರಾಮುದಾಸನಿಗೆ ನಿಮ್ಮ ಹಾಲಿ ನಲ್ಲಿ ಪಾಲನ್ನು ಬೇಡುವ ಅಪೇಕ್ಷೆ ಸರ್ವಥಾ ಇಲ್ಲ. ಪ್ರೇಮಮಯನಾದ ರಾಮನು ಒದಗಿಸಿದರೆ ಹಾಲನ್ನು ತೆಗೆದುಕೊಳ್ಳುತ್ತಾನೆ. ಹೀಗೆ ಒದಗಿಸುವುದು ಅವನ ಇಚ್ಛೆಯಲ್ಲಿಲ್ಲದಿದ್ದರೆ ರಾಮುದಾಸನಿಗೆ ನೀರೇ ಸಾಕು. ಗಂಗಾಮಾತೆಯ ಮಡಿಲಲ್ಲಿ ನೀರು ಯಥೇಷ್ಟವಾಗಿದೆ" ಎಂದನು.

ಸಾಧು ರಾಮುದಾಸನ ಮಾತನ್ನು ತಡೆದು "ನೋಡೋಣ, ನೋಡೋಣ" ಎಂದು ಹೇಳಿ. "ಈಗ ಇಷ್ಟರಲ್ಲೇ ರಾತ್ರಿಯಾಗುವುದರಲ್ಲಿದೆ. ಬಾ, ನಿನಗೆ ಎರಡು

ಗವಿಗಳನ್ನು ತೋರಿಸುತ್ತೇನೆ. ಅವುಗಳಲ್ಲಿ ಯಾವುದರಲ್ಲಾದರೂ ಒಂದರಲ್ಲಿ ನೀನು ಇರಬಹುದು" ಎಂದು ಎದ್ದು ಹೊರಕ್ಕೆ ಹೊರಟನು.

ಅವನು ರಾಮುದಾಸನನ್ನು ಬಯಲಿಗೆ ಕರೆದುಕೊಂಡು ಹೋಗಿ ಅವನಿದ್ದ ದೊಡ್ಡಗವಿಯ ಎಡಬಲಗಳಲ್ಲಿದ್ದ ಎರಡು ಸಣ್ಣ ಗವಿಗಳನ್ನು ತೋರಿಸಿದನು. ರಾಮುದಾಸನು ಎಡಗಡೆಯ ಗವಿಯನ್ನು ಒಪ್ಪಿದನು. ಅದು ಒಬ್ಬನಿರುವುದಕ್ಕೆ ತಕ್ಕಷ್ಟು ವಿಶಾಲವಾಗಿದ್ದಿತು. ಅಲ್ಲದೆ ನೆಲದಮೇಲೆ ಒಂದು ಪದರ ಹುಲ್ಲು ಹಾಸಿದ್ದಿತು. ಗವಿಯ ಒಳಗೆ ಹೋಗಿ ರಾಮುದಾಸನು ಅದು ಬಹು ತಣ್ಣಗಿರುವುದನ್ನು ಕಂಡನು. ಹೊರಗಿದ್ದ ಚಳಿಯೆಲ್ಲಾ ರಾತ್ರಿಯಾಗುತ್ತಲೂ ಒಳಗೆ ಬಂದು ಅಡಗಿಕೊಂಡಂತೆ ಇದ್ದಿತು.

ಸಾಧು "ನೀನು ಅನಂತರ ಇಲ್ಲಿಗೆ ಬರಬಹುದು. ಈಗ ನನ್ನೊಡನೆ ಬಾ. ಇನ್ನೂ ಬೆಳಕಿದೆ. ಸ್ವಲ್ಪ ಹೊತ್ತು ಜೊತೆಯಲ್ಲಿ ಕುಳಿತಿರೋಣ" ಎಂದು ಹೇಳಿದನು. ರಾಮುದಾಸನು ಅದೇ ಪ್ರಕಾರ ಅವನೊಂದಿಗೆ ಮರಳಿ ಅವನ ಗುಹೆಗೆ ಹೋದನು.

ಸಾಧು ತನ್ನ ಡಬ್ಬಗಳಲ್ಲಿ ಒಂದರಿಂದ ಕೆಲವು ಸಕ್ಕರೆ ಚೂರುಗಳನ್ನು ತೆಗೆದು ಒಂದು ಹಿತ್ತಾಳೆ ಬಟ್ಟಲಲ್ಲಿ ನೀರಿನಲ್ಲಿ ಕರಗಿಸಿ ಆ ಪಾನಕವನ್ನು ರಾಮುದಾಸನಿಗೆ ಕೊಟ್ಟನು. ರಾಮುದಾಸನು ಆ ಸಿಹಿಯಾದ ನೀರನ್ನು ಕುಡಿದನು. ಸಾಧು ಅನಂತರ ಹೊಗೆಯಸೊಪ್ಪಿನ ಚಿಲಿಮೆಯನ್ನು ಸಿದ್ಧಮಾಡಿ ರಾಮುದಾಸನನ್ನು "ಅಭ್ಯಾಸ ವಿದೆಯೇ ?" ಎಂದು ಕೇಳಿದನು. ರಾಮುದಾಸನು ರಾಮುನು ಒದಗಿಸಿದಾಗ ಧೂಮಪಾನಮಾಡಲು ತನಗೆ ಅಭ್ಯಂತರವಿಲ್ಲ ಎಂದು ಉತ್ತರ ಕೊಟ್ಟನು.

ಸಾಧು "ನೀನು ವಿಚಿತ್ರ ಮನುಷ್ಯ ! ಧೂಮಪಾನದ ಅಭ್ಯಾಸ ಇದ್ದರೂ ನಿನ್ನಲ್ಲೇನೂ ಧೂಮಪಾನದ ಪದಾರ್ಥವಿಲ್ಲವೆ ?" ಎಂದು ಆಶ್ಚರ್ಯಪಟ್ಟನು.

ರಾಮುದಾಸನು "ರಾಮುದಾಸನು, ರಾಮುನ ದಾಸ, ಯಾವ ಅಭ್ಯಾಸದ ದಾಸನೂ ಅಲ್ಲ" ಎಂದು ಹೇಳಿ ಕೆಲವು ದಮ್ಮುಗಳನ್ನು ಎಳೆದನು. ಈ ವೇಳೆಗೆ ತುಂಬ ಕತ್ತಲಾಗುತ್ತ ಬಂದಿತು. ಸಾಧು ಮರದ ದೀಪಸ್ತಂಭದ ಮೇಲೆ ಇದ್ದ ಒಂದು ಸಣ್ಣ ಹಣತೆಯನ್ನು ಹಚ್ಚಿಟ್ಟನು. ಆಗ ರಾಮುದಾಸನು ಎದ್ದು ತಾನು ಇರಲು ಆರಿಸಿದ್ದ ಗವಿಗೆ ಹೋಗುವುದಕ್ಕೆ ಈ ಗವಿಯಿಂದ ಹೊರಟನು. ಸಾಧು ಆಗ,

"ಈ ರಾತ್ರಿ ನನ್ನ ಜೊತೆಯಲ್ಲೇ ಇರಬಹುದು. ನಾಳೆಯಿಂದ ಆ ಗವಿಗೆ ಹೋಗುವೆಯಂತೆ" ಎಂದನು.

ರಾಮುನು ನಿಜವಾಗಿ ಕರುಣಿ ! ರಾಮುದಾಸನಿಗೆ ವಶಿಷ್ಠರ ಗುಹೆಯೆಂದು ಪ್ರಸಿದ್ಧವಾದ ಆ ದೊಡ್ಡಗುಹೆಯಲ್ಲಿ ಒಂದು ರಾತ್ರಿಯಾದರೂ ನಿಲ್ಲಬೇಕೆಂದು ನಿಜವಾಗಿ ಬಹು ಆಸೆ ಇದ್ದಿತು. ರಾಮುದಾಸನು ಹಿಂತಿರುಗಿ ಮತ್ತೆ ಸಾಧುವಿನ

ಪಕ್ಕದಲ್ಲಿ ಕುಳಿತನು. ಅನಂತರ ಮಾತು ಕತೆ ಏನೂ ನಡೆಯಲಿಲ್ಲ. ಅವನು ಸುಮಾರು ಎರಡು ಗಂಟೆಗಳ ಕಾಲ ಮೌನದಲ್ಲಿಯೇ ಇದ್ದು ನಂತರ ಸಾಧುವಿನ ಅಪ್ಪಣೆ ಪಡೆದು ಮಲಗಿದನು. ರಾತ್ರಿಯೆಲ್ಲಾ ಅವನಿಗೆ ಅರೆ ಎಚ್ಚರಿಕೆ. ಸಾಧುವೂ ನಿದ್ರೆಮಾಡಲಿಲ್ಲ. ಒಂದು ದಿಂಬಿಗೆ ಒರಗಿಕೊಂಡು ಆಗಾಗ್ಗೆ ಹುಕ್ಕಾವನ್ನು ಸೇದುತ್ತಾ ಮಧ್ಯೆ ಮಧ್ಯೆ ಸಕ್ಕರೆ ಚೂರನ್ನು ಬಾಯಿಗೆ ಹಾಕಿಕೊಳ್ಳುತ್ತಾ ಕುಳಿತಿದ್ದನು.

ರಾತ್ರಿ ಕಳೆಯಿತು. ಉಷಃಕಾಲಕ್ಕೆ ರಾಮದಾಸನು ಎದ್ದು ಕುಳಿತನು. ಆದರೆ ಅವನಿಗೆ ಅಲ್ಲಿಂದ ಚಲಿಸುವ ಮನಸ್ಸಾಗಲಿಲ್ಲ. ಸ್ವಲ್ಪ ಹೊತ್ತಿನ ನಂತರ ಸಾಧು ಹಠಾತ್ತಾಗಿ ರೇಗಿ ಕರ್ಕಶಧ್ವನಿಯಲ್ಲಿ

“ಆಚೆಗೆ ನಡಿ. ಇಲ್ಲಿ ಏನು ಕೆಲಸ ನಿನಗೆ? ನಿನ್ನ ಗವಿಗೆ ಹೋಗು. ನಾನು ಸಮಾಧಿಯಲ್ಲಿ ಕುಳ್ಳಿರಬೇಕು” ಎಂದನು.

ರಾಮದಾಸನು ಮೆಲ್ಲಗೆ ಹೊರಗೆ ಹೋಗಿ ಸಣ್ಣ ಗವಿಯನ್ನು ಸೇರಿ ಅಲ್ಲಿಂದ ಕದಲದೆ ಆ ದಿನವನ್ನೆಲ್ಲಾ ಅದರಲ್ಲಿ ಕಳೆದನು. ಸುಮಾರು ಹನ್ನೊಂದು ಗಂಟೆಯು ಸಮಯದಲ್ಲಿ ಸಾಧುವಿಗಾಗಿ ಹಾಲನ್ನು ತರುತ್ತಿದ್ದ ಇಬ್ಬರು ಗವಿಯ ಮುಂಭಾಗದಲ್ಲಿ ಹೋದರು. ಅರ್ಧ ಗಂಟೆಯು ನಂತರ ಅವರಲ್ಲೊಬ್ಬನು ಒಂದು ಬಟ್ಟಲು ಹಾಲಿನೊಂದಿಗೆ ಇವನ ಬಳಿಗೆ ಬಂದು, ದೊಡ್ಡ ಗವಿಯ ಸಾಧು ಇದನ್ನು ಸ್ವೀಕರಿಸಬೇಕೆಂದು ರಾಮದಾಸನಿಗೆ ಕಳುಹಿಸಿಕೊಟ್ಟಿರುವುದಾಗಿ ತಿಳಿಸಿದನು.

ರಾಮನು ತನ್ನ ಆಟವನ್ನು ಎಷ್ಟು ಚತುರವಾಗಿ ಆಡಿದ್ದನೋ ಅಷ್ಟೇ ಚತುರವಾಗಿ ಈಗ ರಾಮದಾಸನೂ ತನ್ನ ಆಟವನ್ನು ಆಡಿದನು. ತನಗೆ ಹಾಲು ಬೇಕಿಲ್ಲ ಎಂದು ಹೇಳಿ ಅವನು ಹಾಲನ್ನು ಸಾಧುವಿಗೆ ಹಿಂತಿರುಗಿ ಕೊಡು ಎಂದು ಆ ಮನುಷ್ಯನಿಗೆ ತಿಳಿಸಿದನು. ಆಗ ಸಾಧು ತಾನೇ ಹಾಲಿನ ಬಟ್ಟಲನ್ನು ತೆಗೆದುಕೊಂಡು ರಾಮದಾಸನ ಬಳಿಸಾರಿ ಅದನ್ನು ಕುಡಿಯಬೇಕೆಂದು ಒತ್ತಾಯ ಮಾಡಿದನು.

ರಾಮದಾಸನು “ಮಹರಾಜ್, ರಾಮದಾಸನನ್ನು ಕ್ಷಮಿಸಿರಿ. ನಿಮಗೆ ಒಂದು ದಿನಕ್ಕೆ ತಕ್ಕಷ್ಟೇ ಬಂದಿರುವ ಹಾಲಿನಲ್ಲಿ ರಾಮದಾಸನು ಪಾಲನ್ನು ತೆಗೆದುಕೊಳ್ಳಬೇಕೆಂದು ನೀವು ನಿರೀಕ್ಷಿಸುವುದು ಹೇಗೆ? ‘ನನಗೆ ದಿನಾ ದೊರೆಯುವ ಹಾಲಿನಲ್ಲಿ ಪಾಲಿಗೆ ಬಂದು ನನ್ನನ್ನು ಉಪವಾಸ ಕೆಡವಿ ಸಾಯಿಸುವುದಕ್ಕೆ ಬಂದಿದ್ದೀಯಾ?’ ಎಂದು ಹೇಳಿ ನೀವು ರಾಮದಾಸನನ್ನು ಎಚ್ಚರಿಸಿರುವುದು ನಿಮಗೆ ಜ್ಞಾಪಕವಿರಬೇಕು” ಎಂದನು.

ನೇರವಾದ ಈ ಮಾತಿನಿಂದ ಅಳುಕಿ ಸಾಧು ದೃಷ್ಟಿಯನ್ನು ಕೆಳಕ್ಕಿಳಿಸಿದವನು ಮತ್ತೆ ಒತ್ತಾಯ ಮಾಡಿದನು.

“ನೀವು ಇದನ್ನು ಸ್ವೀಕರಿಸಬೇಕೆಂದು ನನ್ನ ಅಪೇಕ್ಷೆ; ನಿಮ್ಮನ್ನು ಬೇಡಿಕೊಳ್ಳುತ್ತೇನೆ. ಇದಕ್ಕೆ ಬೇಕಾದಷ್ಟು ಗಂಗಾಜಲವನ್ನು ಬೆರೆಸಿದ್ದೇನೆ. ನನಗೂ ತಕ್ಕಷ್ಟು ಹಾಲಿದೆ.”

ರಾಮದಾಸನು "ರಾಮದಾಸನು ಬರಿಯ ನೀರನ್ನು ಕುಡಿದುಕೊಂಡಿರಬೇಕೆಂದು ರಾಮನ ಇಚ್ಛೆ ಎಂಬುದು ವ್ಯಕ್ತಪಟ್ಟಿದೆ. ಆದರೆ ನೀವು ಇಷ್ಟು ಒತ್ತಾಯ ಮಾಡುವುದರಿಂದ ಈ ಸಲ ಈ ಹಾಲನ್ನು ಒಂದು ನಿಯಮದ ಮೇಲೆ ತೆಗೆದುಕೊಳ್ಳಲು ರಾಮದಾಸನು ಒಪ್ಪುತ್ತಾನೆ. ಅದು ಏನೆಂದರೆ, ನೀವು ಪುನಃ ಹಾಲನ್ನು ನೀಡಕೂಡದು. ಒಂದು ವೇಳೆ ನೀವು ನೀಡಿದರೂ ರಾಮದಾಸನು ಏನೇ ಆದರೂ ಅದನ್ನು ಮುಟ್ಟುವುದಿಲ್ಲ" ಎಂದು ಹೇಳಿದನು.

ಸಾಧು ಉದ್ವೇಗದಿಂದ "ಆಗಬಹುದು" ಎಂದು ಹೇಳಿದನು. ರಾಮದಾಸನು ಆ ಹಾಲನ್ನು ಕುಡಿದನು.

## (ii) ಕ್ರಿಸ್ತನ ದರ್ಶನ.

ಸಾಯಂಕಾಲದವರೆಗೂ ರಾಮದಾಸನು ಗವಿಯನ್ನು ಬಿಟ್ಟು ಕದಲಲಿಲ್ಲ. ಕತ್ತಲಾಗುತ್ತಿರುವಾಗ ಸಾಧು ಗವಿಯ ಬಾಗಿಲ ಹತ್ತಿರ ತಲೆ ಇಣಿಕಿ "ಧೂಮಪಾನ ಮಾಡಲು ನನ್ನಲ್ಲಿ ಬರುವಿರಾ!" ಎಂದು ಕೂಗಿದುದು ಕೇಳಿಸಿತು.

ಸಾಧುವಿಗೆ ರಾಮದಾಸನ ಸಹವಾಸ ಬೇಕಾಗಿತ್ತೆನ್ನುವುದು ವ್ಯಕ್ತವಾಯಿತು. ಅದರಂತೆ ರಾಮದಾಸನು, ಅವನ ಹಿಂದೆ ಅವನ ಗವಿಗೆ ಹೋದನು. ಸಾಧು ರಾಮದಾಸನಿಗೆ ತನ್ನ ಹುಕ್ಕಾದ ದಮ್ಮುಗಳನ್ನೂ ಒಂದು ಬಟ್ಟಲು ಪಾನಕವನ್ನೂ ಕೊಟ್ಟನು. ಬಹಳ ಸಂಭಾಷಣೆಯೇನೂ ಇರಲಿಲ್ಲ. ತೀರ ಕತ್ತಲಾಗುವುದಕ್ಕೆ ಮುಂಚೆ ರಾಮದಾಸನು ಸಾಧುವನ್ನು ಬಿಟ್ಟು ತನ್ನ ಗವಿಗೆ ಹಿಂತಿರುಗಿದನು. ಗವಿಯಲ್ಲಿ ರಾತ್ರಿ ಚಳಿ ವಿಪರೀತವಾಯಿತು. ರಾಮದಾಸನು ತನ್ನ ತುಂಡು ಕಂಬಳಿಯನ್ನು ಹೊದೆದುಕೊಂಡು ಎದ್ದು ಕುಳಿತಿದ್ದನು. ನಡುರಾತ್ರಿ ಕಳೆದು ಎರಡು ಮೂರು ಗಂಟೆಗಳನಂತರ, ಸಾಧುವಿನಿಂದ ಒಂದು ಕೆಂಡವನ್ನು ಬೇಡಿ ತರಬೇಕೆಂದು ಅವನಿಗೆ ರಾಮನ ಪ್ರೇರಣೆಯಾಯಿತು. ಗವಿಯ ಮುಂದುಗಡೆ ಒಣಗಿಸಿದ ಮರದ ತುಂಡುಗಳು ಬಿದ್ದಿದ್ದುವು. ಉರಿಹಾಕಬೇಕೆಂಬ ಆಲೋಚನೆ ಅವನಿಗೆ ಹುಟ್ಟಿತು. ನಿಜವಾಗಿ ಅವನು ಚಳಿಯನ್ನು ತಡೆದುಕೊಳ್ಳಲು ಶಕ್ತನಾಗಿದ್ದನು. ಹಾಗಿದ್ದಮೇಲೆ ಬೆಂಕಿ ಕಾಯಿಸುವ ಈ ಯೋಚನೆ ಏಕೆ ಬರಬೇಕು? "ರಾಮ! ಸ್ವಲ್ಪ ತಮಾಷೆಮಾಡಬೇಕೆಂದು ನಿನ್ನ ಇಚ್ಛೆ! ಹಾಗಿಲ್ಲದಿದ್ದರೆ ರಾಮದಾಸನನ್ನು ಹೀಗೆ ಏಕೆ ದೂಡುತ್ತಿದ್ದೆ?" ರಾಮದಾಸನು ಗವಿಯಿಂದ ಕತ್ತಲಲ್ಲೆ ಹೊರಕ್ಕೆ ಹರಿದುಬಂದು ಮಗ್ಗಲು ಗವಿಯನ್ನು ಸೇರಿ ಒಳಹೊಕ್ಕು,

"ಮಹರಾಜ್, ದಯಮಾಡಿ ರಾಮದಾಸನಿಗೆ ಸ್ವಲ್ಪ ಕೆಂಡ ಕೊಡುವಿರಾ? ಅವನು ಗವಿಯಲ್ಲಿ ಉರಿಹಾಕಬೇಕು" ಎಂದು ಕೂಗಿದನು.

ಸಾಧು "ಆಹಾ! ಚಳಿಯನ್ನು ಸಹಿಸಲಾರೆ. ಬೆಂಕಿ ಬೇಕೋ? ಹಾಗಾದರೆ ಕೆಳಕ್ಕೆ ಇಳಿಯುತ್ತಿದ್ದೀಯ ಮಗು! ಇಕೊ ಕೆಂಡ, ತೆಗೆದುಕೊ'' ಎಂದು ಗುರುಗುಟ್ಟಿದನು.

ರಾಮದಾಸನು ಒಂದು ಕೆಂಡವನ್ನು ತೆಗೆದುಕೊಂಡು ಗವಿಗೆ ಹಿಂತಿರುಗಿದನು. ಅವನು ಹೊರಟು ಬರುವಾಗ ಸಾಧು ತನ್ನದೇ ಆದ ವಿಜಾತೀಯವಾದ ಅಣಕಿಸುವ ಧ್ವನಿಯಿಂದ ಗೊಣಗುಟ್ಟುವುದು ಕೇಳಿಸಿತು. ರಾಮದಾಸನು ಅನಿವಾರ್ಯವಾಗಿ ತನ್ನಲ್ಲಿಯೇ ಒಳನಗೆ ನಗುತ್ತ, "ರಾಮ! ನೀನು ತೀರಾ ಹುಡುಗಾಟದವನು" ಎಂದುಕೊಂಡನು. ಉರಿಯನ್ನು ಹಾಕಿದ್ದಾಯಿತು. ಅವನು ಅಲ್ಲಿ ಕತ್ತಲಲ್ಲಿ ತಡಕಾಡಿ ಸಿಕ್ಕಿದ ಸೌದೆಯನ್ನೆಲ್ಲಾ ಉರಿಸಿದನು.

ಬೆಳಗಾಯಿತು. ರಾಮದಾಸನು ಗವಿಯಿಂದ ಹೊರಕ್ಕೆ ಬಂದನು. ಅರುಣೋದಯದ ಬೆಳಕು ಅತ್ಯಂತ ಮೋಹಕವಾದ ನೋಟವನ್ನು ತೋರಿಸಿತು. ಗವಿಗೆ ಸುಮಾರು ಇಪ್ಪತ್ತು ಗಜ ದೂರದಲ್ಲೇ ಗಂಗಾಭವಾನಿ ಪ್ರವಹಿಸುತ್ತಿದ್ದಳು. ನದಿಯ ದಂಡೆಯಲ್ಲಿ ದೊಡ್ಡ ದೊಡ್ಡ ಬಂಡೆಗಳು ಹಲವು ಅಲ್ಲಲ್ಲೇ ಚೆಲ್ಲಿ ಕಾಣಿಸುತ್ತಿದ್ದುವು. ರಾಮದಾಸನು ಒಂದು ಬಂಡೆಯ ಮೇಲಕ್ಕೆ ಹೋಗಿ ಮನೋಹರವಾದ ಸುತ್ತಣ ದೃಶ್ಯವನ್ನು ನೋಡಲು ಕುಳಿತನು.

ಗಗನಚುಂಬಿಗಳಾದ ಶೈಲಗಳ ಶ್ರೇಣಿಯ ಮಧ್ಯದಿಂದ ಗಂಗಾನದಿಯ ಥಳಥಳಿಸುವ ಜಲರಾಶಿ ನುಗ್ಗಿಬಂದು ಗವಿಗಳನ್ನು ದಾಟಿ ಪ್ರವಹಿಸುತ್ತಿದ್ದಿತು. ದಟ್ಟವಾಗಿ ಬೆಳೆದಿರುವ ಮರಗಳು ಬೆಟ್ಟಗಳನ್ನು ಹೊದೆದಿದ್ದುವು. ಅದರಿಂದ ಅವುಗಳ ಮೇಲೆ ಚಿತ್ರ ವಿಚಿತ್ರವಾದ ರತ್ನಕಂಬಳಿಯನ್ನು ಹಾಸಿದಂತೆ ಭಾಸವಾಗುತ್ತಿದ್ದಿತು. ಸ್ವಚ್ಛ ನೀಲಾಕಾಶದ ಹಿನ್ನೆಲೆಯಲ್ಲಿ ಕಿತ್ತಳೆ ಬಣ್ಣದ ಮೋಡಗಳು ನಿದಾನವಾಗಿ ಚಲಿಸುತ್ತಿದ್ದುವು. ಅಲ್ಲಿಯ ವಾತಾವರಣವೆಲ್ಲ ನಿಶ್ಶಬ್ದತೆ ತಂಪು ಮತ್ತು ಹೊಗೆಯಂತೆ ತೋರುವ ಮಂಜಿನಿಂದ ತುಂಬಿದ್ದಿತು. ರಾಮದಾಸನ ಆತ್ಮ ವಿವರಿಸಲಸದಳವಾದ ಆಹ್ಲಾದದಿಂದ ಪುಳಕಿತವಾಯಿತು. ಸ್ವಲ್ಪಹೊತ್ತು ಕಾಲ ದೇಶ ನಿಮಿತ್ತಗಳ ಗಣನೆ ನಷ್ಟವಾಯಿತು. ವಶಿಷ್ಠಮಹರ್ಷಿಗಳು ಈ ಸ್ಥಳವನ್ನು ತಮ್ಮ ಆಶ್ರಮಕ್ಕಾಗಿ ಆರಿಸಿದುದರಲ್ಲಿ ಏನೂ ಆಶ್ಚರ್ಯವಿಲ್ಲ. ಅಲ್ಲಿಯ ವಾಯುಸೇವನೆಯೇ ಧ್ಯಾನ, ಮಾನವನ ಸಂಪೂರ್ಣ ವ್ಯಕ್ತಿತ್ವವು, ಭಗವಂತನದೇ ಆದ ಇರುವಿಕೆಯ ಅನಂತ ಅಸ್ತಿತ್ವದಲ್ಲಿ ಲೀನವಾಗಿ ನಿಲ್ಲುತ್ತದೆ. ನಿತ್ಯವಾದ ಶಾಂತಿ ಆನಂದಗಳಿಂದ ಅವನು ಮತ್ತನಾಗುತ್ತಾನೆ.

ದಿನಕ್ಕೆ ಎರಡು ಮೂರು ಸಲ ನೀರು ಕುಡಿಯಲು ನದಿಯವರೆಗೆ ಹೋದುದು ಹೊರತು ಉಳಿದ ಕಾಲವೆಲ್ಲವನ್ನೂ ರಾಮದಾಸನು ಆ ಬಂಡೆಯ ಮೇಲೆ ಕಳೆದನು. ನಿಶೆ ತನ್ನ ಕರಿಯಹೊದಿಕೆಯನ್ನು ಆ ಸ್ಥಳದಮೇಲೆ ಪಸರಿಸತೊಡಗಿದಾಗ ಅವನು ಗವಿಗೆ ಹಿಂತಿರುಗಿದನು. ಮೊದಲನೆಯ ರಾತ್ರಿ ಚಳಿಯಾಗುತ್ತಿರುವುದು ಅನುಭವವಾಯಿತು. ಆದರೆ ಅದನ್ನು ಸಹಿಸಬಹುದಾಗಿದ್ದಿತು. ಅಲ್ಲಿಂದ ಮುಂದಿನ ರಾತ್ರಿಗಳಲ್ಲಿ ಚಳಿ ಇರುವುದು ತೀರಾ ಗೊತ್ತಾಗಲಿಲ್ಲ. ವಾಡಿಕೆಯಂತೆ ಎರಡನೆ ರಾತ್ರಿಯೂ ಅರೆ ಎಚ್ಚರಿಕೆ ಮತ್ತು ಆನಂದದ ಒಂದು ಅವಸ್ಥೆಯಲ್ಲಿ ಕಳೆಯಿತು. ಮೂರನೇ

ದಿವಸದ ಪ್ರಾತಃಕಾಲ ರಾಮದಾಸನು ಯಥಾಪ್ರಕಾರ ಬಂಡೆಯನ್ನು ಹತ್ತಿ ಕುಳಿತನು. ಸೂರ್ಯನು ಗಗನದಲ್ಲಿ ಮೇಲೇರಿದ್ದಾಗ ರಾಮದಾಸನಿಗೆ ತನ್ನೆದುರಿಗೆ ಒಬ್ಬ ಘಟ್ಟದವನು ನಿಂತಿರುವುದು ಕಂಡುಬಂದಿತು.

ಅವನು "ನೀವು ಉಪವಾಸಮಾಡಿ ಸಾಯುವುದಾಗಿ ನಿಷ್ಕರ್ಷಿಸಿರುವುದು ನಿಜವೆ?" ಎಂದು ಪ್ರಶ್ನೆ ಮಾಡಿದನು.

ರಾಮದಾಸನು ಉತ್ತರ ಹೇಳುವುದು ಏನೂ ಇರಲಿಲ್ಲ. ಅವನು ಸುಮ್ಮನೆ ಮುಗುಳುನಗೆ ನಕ್ಕನು. ಬಂದಾತನು ಇವನಿಗೆ ಕೆಲವು ದೋರೆಹಣ್ಣನ್ನು ಕೊಟ್ಟನು. ಅವು ಗಟ್ಟಿಯಾಗಿದ್ದುವು. ಆದರೂ ಅವನು ಪ್ರೀತಿಯಿಂದ ಕೊಟ್ಟುದ ದರಿಂದ ರಾಮದಾಸನು ಅವನ್ನು ಬಾಯಿಯಲ್ಲಿ ಹಾಕಿಕೊಂಡು ಸ್ವಲ್ಪ ಅಗಿದು ಉಗಿ ದನು. ಆಗ ಮಗ್ಗಲ ಗವಿಯ ಸಾಧುವೂ ಅಲ್ಲಿ ಬಂದು ರಾಮದಾಸನನ್ನು ದುರು ಗುಟ್ಟಿ ನೋಡುತ್ತಾ,

"ನೀನು ಇಲ್ಲಿಗೆ ಬಂದಿರುವುದು ಯೋಗಾಭ್ಯಾಸಕ್ಕಲ್ಲ, ಆತ್ಮಘಾತಕ್ಕೆ! ನೀನು ಎಂತಹ ಅವಿವೇಕಿ!" ಎಂದು ಹೇಳಿದನು.

ಈ ಹೊಸ ಬಾಣಪ್ರಯೋಗದಿಂದ ರಾಮದಾಸನ ನಗೆ ಮತ್ತೆ ಉದ್ರೇಕ ವಾಯಿತು. ಅವನು ಹೊಟ್ಟೆತುಂಬ ನಕ್ಕನು.

ಆಮೇಲೆ ರಾಮದಾಸನು ಸಾಧುವಿಗೆ ಹೀಗೆಂದನು.

"ರಾಮ, ನಿನ್ನ ಶಿಶುವನ್ನು ಇಲ್ಲಿಗೆ ಕರೆದುಕೊಂಡು ಬಂದು ಅವನನ್ನು ಉಪವಾಸ ಮಾಡುವಂತೆ ಮಾಡಿದ್ದೀಯೆ. ಇಷ್ಟೂಮಾಡಿ ಅವನನ್ನು ಅವಿವೇಕಿ ಎಂದು ಹೀಯಾಳಿಸುತ್ತಿದ್ದೀಯೆ! ಒಳ್ಳೆಯದು, ನಿನ್ನ ಇಷ್ಟಬಂದ ಹಾಗೆ ಮಾಡು."

"ಮನುಷ್ಯನು ಹುಚ್ಚುಹುಚ್ಚಾಗಿ ಆಡುತ್ತಿರುವ ದೈವ" ಎಂದು ಒಂದು ವಚನ ಉಂಟು. ರಾಮದಾಸನಿಗೆ ಈಗ ಈ ವಿಚಾರ ಅರ್ಥವಾಯಿತು. ಸಾಧು ತನ್ನ ಕೋಪವನ್ನು ತಡೆಯುವಂತಿರಲಿಲ್ಲ. ಅವನು ಮುಂದೆ ಮಾತನಾಡಲಾರದೆ ಹಿಂತಿ ರುಗಿ ಗವಿಗೆ ಹೋದನು. ಇನ್ನೂ ಒಂದು ದಿವಸ ಕಳೆಯಿತು. ಆ ಮುಂದೆ ಸಾಧು ರಾಮದಾಸನನ್ನು ಸಂಧಿಸದೆ ಇರುವಂತೆ ಜೋಪಾನವಾಗಿದ್ದನು. ರಾಮ ದಾಸನು ಹಗಲನ್ನೆಲ್ಲಾ ಕಲ್ಲಿನ ಮೇಲೂ ರಾತ್ರಿಯನ್ನು ಗವಿಯೊಳಗೂ ಕಳೆಯುತ್ತಿ ದ್ದನು. ಹೀಗೆ ಇನ್ನೂ ಮೂರು ದಿನ ಕಳೆದುವು.

ಈಗ ಆ ಸ್ಮರಣೀಯವಾದ ರಾತ್ರಿಯ ಮಾತು. ಐದನೆಯ ರಾತ್ರಿ ಅದು. ಸಮರಾತ್ರಿ ಕಳೆದಿದೆ. ಎಲ್ಲೆಲ್ಲೂ ಕಗ್ಗತ್ತಲು ಕವಿದಿದೆ. ಸಾಧಾರಣವಾಗಿ ರಾಮ ದಾಸನು ಗವಿಯಲ್ಲಿ ರಾತ್ರಿಯಲ್ಲಾ ಕುಳಿತೇ ಇರುತ್ತಿದ್ದನು. ಈ ಸಮಯದಲ್ಲಿ ಗವಿ ಇದ್ದದಿದ್ದಂತೆ ಒಂದು ವಿಲಕ್ಷಣ ಪ್ರಭೆಯಿಂದ ಪ್ರಕಾಶವಾಯಿತು. (ರಾಮದಾಸನಿಗೆ ತನ್ನೆದುರಿಗೆ ಮೂರು ನಾಲ್ಕು ಅಡಿಗಳ ದೂರದಲ್ಲಿ ನೆಲದಮೇಲೆ ಕುಳಿತಿರುವ ಒಬ್ಬ ಮನುಷ್ಯನ ಮೂರ್ತಿ ಕಂಡಿತು. ಆತನ ಮುಖ ದಿವ್ಯಜ್ಯೋತಿಯಿಂದ ಥಳಥಳಿ

ಸುತ್ತಿದ್ದಿತು.) ಮುಖದ ಆಕೃತಿ ನಯವಾಗಿ ಸ್ಫುಟವಾಗಿ ಸುಂದರವಾಗಿ ಇದ್ದಿತು. ಅದರಮೇಲೆ ಕಪ್ಪಾದ ಹೊಳಪಾದ ಸಣ್ಣ ದಾಡಿಮೀಸೆಗಳಿದ್ದುವು. ತುಟಿಗಳು ಕುಂಕುಮದಂತೆ ಕೆಂಪು; ಮಧ್ಯೆ ಹಾಲಿನಂತೆ ಬಿಳುಪಾದ ಹೊಳೆವ ಹಲ್ಲು ಕಾಣು ತ್ತಿದ್ದುವು. ಮೃದುವಾದ ಕಪ್ಪುವರ್ಣದ ಮಿಸಗುವ ಕೂದಲು ಭುಜಗಳ ಮೇಲೆ ಹರಿದಾಡುತ್ತಿದ್ದಿತು. ಆ ಮೂರ್ತಿ ಚಾಕೊಲೇಟ್ ಬಣ್ಣದ ಕರಿಯ ನಿಲುವಂಗಿ ಯನ್ನು ಧರಿಸಿದ್ದಿತು. ಆ ಅಂಗಿಯ ತೋಳು ಅಗಲವಾಗಿ ವಿಪುಲವಾಗಿದ್ದುವು. ರಾಮದಾಸನನ್ನು ಮೋಹಗೊಳಿಸಿದ್ದು ಅವನ ಕಣ್ಣುಗಳು. ಅವು ಅವಳಿ ಜವಳಿ ನಕ್ಷತ್ರಗಳಂತೆ ಮಿರಗುತ್ತಿದ್ದುವು. ಅವು ಸೂಸಿದ ಕಿರಣಗಳಲ್ಲಿ, ವಾತ್ಸಲ್ಯ, ಪ್ರೀತಿ, ಕನಿಕರ ತುಂಬಿದ್ದುವು.

ರಾಮದಾಸನು ಮುಗ್ಧನಾಗಿ ಹರ್ಷದಿಂದ ಆ ಕಣ್ಣುಗಳನ್ನು ಎವೆಯಿಕ್ಕದೆ ದೃಷ್ಟಿಸಿದನು. ಅವನಿಗೆ "ಈತನು ಯೇಸುಕ್ರೀಸ್ತ" ಎಂದು ಹೊಳೆಯಿತು. ಈತನ ಮಗ್ಗುಲಲ್ಲೇ ಇನ್ನೊಂದು ವ್ಯಕ್ತಿ ಕಂಡುಬಂದಿತು. ಇವನು ಇರುವುದು ಮನಸ್ಸಿಗೆ ತೋರುತ್ತಿದ್ದರೂ ಈ ವ್ಯಕ್ತಿಯ ಕಡೆ ರಾಮದಾಸನ ಗಮನ ಹೋಗಲಿಲ್ಲ. ಆ ವ್ಯಕ್ತಿ ಒಬ್ಬ ಶಿಷ್ಯನಿದ್ದಿರಬಹುದು. ಆಗ ಯೇಸುಕ್ರೀಸ್ತನ ತುಟಿಗಳು ಚಲಿಸಿದುವು. ಆತನು ಮಾತನಾಡುತ್ತಿದ್ದನು. ರಾಮದಾಸನು ಕಿವಿಗೊಟ್ಟನು. ಅವನ ಮಾತು ಅರ್ಥವಾಗಲಿಲ್ಲ. ಭಾಷೆ ಇವನಿಗೆ ತಿಳಿಯದ್ದು, ವಿಚಿತ್ರವಾಗಿದ್ದಿತು. ಮೂರ್ತಿ ಬಹುಶಃ ಒಂದು ನಿಮಿಷಕಾಲ ಮಾತನಾಡಿರಬೇಕು. ನಂತರ ದೃಶ್ಯ ಮಾಯ ವಾಯಿತು. ಆದರೆ ಅದರ ಕಾಂತಿ ಗವಿಯಲ್ಲಿ ಇನ್ನೂ ಕೆಲವು ನಿಮಿಷ ಇದ್ದಿತು. ರಾಮದಾಸನು ತೀರಾ ಆನಂದದಲ್ಲಿ ಮುಳುಗಿಹೋದನು. ಚನ್ನಾಗಿ ಬೆಳಕಾದ ಮೇಲೆಯೇ ಅವನು ಬಾಹ್ಯಪ್ರಪಂಚಜ್ಞಾನಕ್ಕೆ ಹಿಂದಿರುಗಿದ್ದು.

## (ii) ಸ್ವಾರ್ಥಪರತೆ ಎಲ್ಲ ಅಜ್ಞಾನದ ಮೂಲ

ರಾಮನು ರಾಮದಾಸನಿಗೆ ಅವನು ಅಲ್ಲಿರಬೇಕಾದ ಕಾಲ ಮುಗಿಯುತ್ತಿದೆ ಯೆಂದು ತಿಳಿಸಿಕೊಟ್ಟನು. ಯಾವಾಗ ಹೊರಡಬೇಕೆಂಬುದು ನಿರ್ಧರವಾಗಿ ತೋರ ಲಿಲ್ಲ. ಎಂದಿನಂತೆ ಆ ದಿವಸವೂ ರಾಮದಾಸನು ಬಯಲಲ್ಲಿ ಆ ಕಲ್ಲಿನಮೇಲೆ ಮಧ್ಯಾಹ್ನ ಮೂರು ಗಂಟೆಯವರೆಗೂ ಕುಳಿತಿದ್ದನು.

ಅಂತರ್ಯಾಮಿ ರಾಮನು ಹೇಳಿದನು: "ಐದು ದಿನಗಳ ಉಪವಾಸದಿಂದ ನಿನ್ನ ಶರೀರ ಕುಂದಿದೆ. ಸ್ವರ್ಗಾಶ್ರಮಕ್ಕೆ ನಡೆದು ಹೋಗಲು ನಿನಗೆ ಶಕ್ತಿಯಿಲ್ಲ. ಸಾಧುವಿನ ಬಳಿಗೆ ಹೋಗಿ ರೊಟ್ಟಿ ತೊವ್ವೆಯಿಂದ ಭೋಜನ ಮಾಡಿಸುವಂತೆ ಕೇಳಿಕೊ. ಅನಂತರ ಹೊರಡು."

ರಾಮದಾಸನು ನೆಟ್ಟಗೆ ಗವಿಯೊಳಗಿನ ಸಾಧುವಿನ ಹತ್ತಿರ ಹೋದನು. ರಾಮದಾಸನನ್ನು ನೋಡಿ ಸಾಧುವಿಗೆ ಆಶ್ಚರ್ಯವಾಯಿತು. ಕಣ್ಣುಗಳನ್ನು ದೊಡ್ಡ

ದಾಗಿ ಅರಳಿಸಿ ಇವನ ಕಡೆ ನೋಡಿ ಸಾಧು ಪ್ರಶ್ನೆಯ ರೂಪವಾಗಿ ತಲೆಯನ್ನಲ್ಲಾಡಿಸಿ ದನು. ಅವನಲ್ಲಿ ಏನೋ ಸ್ಪಷ್ಟವಾದ ಮಾರ್ಪಾಡಾಗಿರುವುದು ರಾಮದಾಸನಿಗೆ ಕಂಡುಬಂದಿತು. ಅವನ ಮುಖ ಒಣಗಿ ನಿಸ್ತೇಜವಾಗಿ ಯೋಚನೆಗೀಡಾಗಿದ್ದಿತು. ಅವನಲ್ಲಿ ಆಗಾಗ್ಗೆ ಉದ್ರೇಕವಾಗುತ್ತಿದ್ದ ಕೋಪ ಅವನಲ್ಲಿ ಹಾವಳಿಮಾಡಿದ್ದಿರಬೇಕು.

ರಾಮದಾಸನು "ಮಹರಾಜ್, ರಾಮದಾಸನು ಇಲ್ಲಿಂದ ಹೊರಟುಹೋಗ ಬೇಕೆಂದು ರಾಮನ ಆಜ್ಞೆಯಾಗಿದೆ. ಆದರೆ ಉಪವಾಸದಿಂದ ಕೈಕಾಲುಗಳು ಸೋತುಹೋಗಿರುವುದರಿಂದ ಮುಂದೆ ಪ್ರಯಾಣಮಾಡಲು ಸಾಕಾದ ಶಕ್ತಿ ಬರುವು ದಕ್ಕಾಗಿ ರೊಟ್ಟಿ ತೊವ್ವೆಯನ್ನು ಕೊಡಬೇಕೆಂದು ಬೇಡಿಕೊಳ್ಳಲು ರಾಮದಾಸನು ಬಂದಿದ್ದಾನೆ" ಎಂದನು.

ಸಾಧು ಸ್ವಲ್ಪ ಹೊತ್ತು ತೀರಾ ಮೌನವಾಗಿದ್ದನು. ನಂತರ ಅವನ ಮುಖದ ಮೇಲೆ ಒಂದು ಮಂದಹಾಸ ಮೂಡಿತು. ಅವನು ಮೊದಲು ಸ್ವಲ್ಪ ಪಾನಕವನ್ನು ಮಾಡಿ ಅದನ್ನು ರಾಮದಾಸನಿಗೆ ಕುಡಿಸಿ ಅವನನ್ನು ಹಿಂದೆ ಬಾ ಎಂದು ಹೊರಗೆ ಕರೆದುಕೊಂಡು ಹೋದನು. ಅಲ್ಲಿಂದಾಚೆ ಒಂದು ಫರ್ಲಾಂಗ್ ದೂರದಲ್ಲಿರುವ ಬೆಟ್ಟದ ಬುಡಕ್ಕೆ ಇಬ್ಬರೂ ನಡೆದರು. ಅಲ್ಲಿ ಬೆಟ್ಟದಿಂದ ಕೆಳಕ್ಕೆ ಹರಿಯುತ್ತಿದ್ದ ಸಣ್ಣ ಒಂದು ಹೊಳೆಯ ಹತ್ತಿರ ಐದು ಜನ ಘಟ್ಟದ ಆಳುಗಳು ಕೆಲಸಮಾಡು ತ್ತಿದ್ದರು. ಅವರು ಅಲ್ಲಿ ಬೀಳುತ್ತಿದ್ದ ನೀರಿನ ಶಕ್ತಿಯನ್ನು ಉಪಯೋಗಿಸಿಕೊಂಡು ಒಂದು ಮರ ಕಡೆಯುವ ಚಕ್ರವನ್ನು ನಡೆಸುತ್ತಿದ್ದರು. ಒಂದು ಉದ್ದವಾದ ಕದಿರಿನಮೇಲೆ ಸುತ್ತುವ ಒಂದು ಒರಟಾದ ಮರದ ಚಕ್ರವನ್ನು ತಿರುಗಿಸಿ ಕದಿರಿನ ಕೊನೆಗೆ ಮರದ ತುಂಡನ್ನು ಸಿಕ್ಕಿಸಿ ಚೂಪಾದ ಉಳಿಗಳಿಂದ ಅದನ್ನು ಕಡೆದು ಸೊಗಸಾದ ಮರದ ಪಾತ್ರೆಗಳನ್ನು ತಯಾರುಮಾಡುತ್ತಿದ್ದರು.

ಸಾಧು ಅವರ ಬಳಿಗೆ ಹೋಗಿ,

"ಇಲ್ಲಿ ನೋಡಿ, ಈ ಸಾಧು ಐದು ದಿನಗಳಿಂದ ಉಪವಾಸಮಾಡುತ್ತಿದ್ದಾನೆ. ಅವನಿಗೆ ಊಟ ಬೇಕು. ನನ್ನಲ್ಲಿ ಅಡಿಗೆ ಪದಾರ್ಥ ಇಲ್ಲ. ನಿಮ್ಮಲ್ಲಿ ಒಬ್ಬರು ಬೆಟ್ಟದ ಮೇಲಣ ಹಳ್ಳಿಗೆ ಹೋಗಿ ಒಂದು ಊಟಕ್ಕೆ ತಕ್ಕಷ್ಟು ಪದಾರ್ಥಗಳನ್ನು ತರುವಿರಾ ? ಇಕೊ, ಪದಾರ್ಥಗಳಿಗೆ ಬೆಲೆ" ಎಂದು ದುಡ್ಡನ್ನು ಕೊಡಲು ಹೋದನು.

ಅವರು ರಾಮದಾಸನ ಕಡೆ ನೋಡಿ, ಸಾಧುವನ್ನು ಕುರಿತು "ನಮ್ಮಲ್ಲಿ ಗೋಧಿ ಹಿಟ್ಟು ತುಪ್ಪ ಬೇಳೆ ಇದೆ. ಅದರಲ್ಲಿ ಅವನಿಗೆ ಒಂದು ಊಟಕ್ಕೆ ತಕ್ಕಷ್ಟು ಕೊಡ ಬಲ್ಲೆವು. ಆದರೆ ನಾವು ಅದಕ್ಕಾಗಿ ದುಡ್ಡನ್ನು ತೆಗೆದುಕೊಳ್ಳುವುದಿಲ್ಲ" ಎಂದರು.

ಸಾಧು ಅದಕ್ಕೆ ಒಪ್ಪಲಿಲ್ಲ. "ಹಾಗಾಗದು, ನೀವು ಕೊಡುವ ಪದಾರ್ಥಗಳಿಗೆ ದುಡ್ಡನ್ನು ತೆಗೆದುಕೊಳ್ಳಲೇಬೇಕು. ನನ್ನ ಖರ್ಚಿನಿಂದ ಅವನಿಗೆ ಭೋಜನಮಾಡಿಸ ಬೇಕೆಂದು ನನ್ನ ಇಷ್ಟ" ಎಂದನು.

ಅವನು ಹೀಗೆಂದು ಅವರನ್ನು ದುಡ್ಡು ತೆಗೆದುಕೊಳ್ಳಲು ಒಪ್ಪಿಸಿದನು.

ಇವರು ಪದಾರ್ಥಗಳನ್ನು ತೆಗೆದುಕೊಂಡು ಗವಿಗೆ ಬಂದರು. ಸಾಧು ಬೇಗನೆ ಮತ್ತು ಚೊಕ್ಕಟವಾಗಿ ಅಡಿಗೆ ಮಾಡಬಲ್ಲವನು. ಅರ್ಧ ಗಂಟೆಯ ಒಳಗಾಗಿ ತುಪ್ಪ ಸವರಿದ ನಾಲ್ಕು ರೊಟ್ಟಿ ಹೆಸರುಬೇಳೆತೊವ್ವೆ ಇವನ್ನು ಸಿದ್ಧಮಾಡಿದನು. ಇದನ್ನು ಮಾಡುತ್ತ ಅವನು ರಾಮುದಾಸನಿಗೆ ಕೆಲವು ಮಾತನ್ನು ಹೇಳಲು ಮನಸ್ಸು ಮಾಡಿದನು.

"ನೀನು ಒಳ್ಳೆಯೋಗ್ಯ! ನಾನು ಈಗ ಈ ರೊಟ್ಟಿಗಳನ್ನು ಸುಡುತ್ತಿರುವಂತೆ ನೀನು ಈ ಐದು ದಿವಸವೂ ನನ್ನನ್ನು ಬೇಯಿಸಿದ್ದೀಯೆ. ನಿನ್ನ ಉಪವಾಸ ವ್ರತ ಬೆಟ್ಟದಮೇಲಣ ಎಲ್ಲ ಹಳ್ಳಿಗಳಲ್ಲಿಯೂ ಗೊಂದಲವನ್ನು ಎಬ್ಬಿಸಿದೆ. ಯಾವುದರ ನೆನಪೂ ಇಲ್ಲದೆ ನೀನು ಆ ಕಲ್ಲಿನಮೇಲೆ ಕುಳಿತಿದ್ದಾಗ, ಎಷ್ಟೋ ಜನ ನಿನಗಾಗಿ ಊಟದ ಪದಾರ್ಥಗಳನ್ನೂ ಹಾಲನ್ನೂ ತಂದಿದ್ದರು. ನಿನ್ನಲ್ಲಿ ಬಂದು ತಿಳಿಸುವ ಧೈರ್ಯವಿಲ್ಲದೆ, ನಾನು ಅವರೆಲ್ಲರನ್ನೂ ಹಿಂದಕ್ಕೆ ಕಳುಹಿಸಿಬಿಟ್ಟುದಾಯಿತು. ನಿನಗೆ ಹಾಲನ್ನು ಕುಡಿಸುವ ಸಂತೋಷವನ್ನು ಕೂಡ ನೀನು ನನಗೆ ನೀಡಲಿಲ್ಲ" ಎಂದನು.

ಆಗ ರಾಮುದಾಸನು ಅವನ ಮಾತನ್ನು ತಡೆದನು. "ಏನೆಂದಿರಿ, ಮಹರಾಜ್? ಇರುವುದನ್ನು ಹೇಳಲು ಹಿಂಜರಿಯಲೇಕೆ? ನಿಮ್ಮ ಮಾತಿನಿಂದ ನೀವೇ ಅದನ್ನೆಲ್ಲ ಮಾಡಿಕೊಂಡಿರಿ" ಎಂದನು.

ಸಾಧು ಅಸಹನೆಯಿಂದ "ಆ ಮಾತನ್ನು ತಿರುತಿರುಗಿ ನನ್ನ ಮುಖದಮೇಲೆ ಹಾಕುತ್ತಿದ್ದೀಯಾ?" ಎಂದು ಕಿರಿಚಿದನು.

ರಾಮುದಾಸನು ನೇರವಾಗಿ ಅವನ ಕಡೆ ದೃಷ್ಟಿಸಿದನು. ಸಾಧು ಆ ದೃಷ್ಟಿಯ ಮುಂದೆ ಅಧೈರ್ಯದಿಂದ ತಗ್ಗಿದನು.

ಆಗ ರಾಮುದಾಸನು ಹೇಳಿದನು:

"ಮಹರಾಜ್, ದಯವಿಟ್ಟು ಕೇಳಿರಿ: (ರಾಮುದಾಸನು ಭಗವಂತನ ದೀನದಾಸ. ಏನೂ ತಿಳಿಯದ ಶಿಶು. ಅವನು ಇಲ್ಲಿಗೆ ಭಗವಂತನ ಇಚ್ಛೆಯಿಂದಲೇ ಬಂದನು. ಈ ದಿನಗಳಲ್ಲಿ ಉಪವಾಸಮಾಡುವಂತೆ ರಾಮುದಾಸನನ್ನು ಪ್ರೇರಿಸಿದ್ದು ಭಗವಂತನೇ) ರಾಮುದಾಸನಾದರೂ ನೀವು ಅವನಿಗೆ ಆಹಾರವನ್ನು ಕೊಡಬೇಕೆಂದು ಎಂದೂ ನಿರೀಕ್ಷಿಸಲಿಲ್ಲ. ಮೊದಲಿಂದಲೂ ನೀವು ರಾಮುದಾಸನನ್ನು ಓಡಿಸುವ ಯೋಚನೆಯನ್ನೇ ಮಾಡಿದಿರಿ. ರಾಮುದಾಸನನ್ನು ಹೆದರಿಸಲು ಪ್ರಯತ್ನಪಟ್ಟಿರಿ. ಆದರೆ ಅವನನ್ನು ಹೆದರಿಸಲಾಗಲಿಲ್ಲ. ನೀವು ರಾಮುದಾಸನಿಗೆ ಕಠಿಣೋಕ್ತಿಗಳನ್ನಾಡಿದಿರಿ. ಅದಕ್ಕೆ ರಾಮುದಾಸನು ಬೆದರಲಿಲ್ಲ. ನೀವು ರಾಮುದಾಸನನ್ನು ಖಂಡಿಸಿದಿರಿ. ಆದರೂ ರಾಮುದಾಸನು ಕೋಪಮಾಡಿಕೊಳ್ಳದೆ ಸೌಮ್ಯವಾಗಿಯೇ ಇದ್ದನು. ಇದು ಒಂದು ಕಡೆ ಇನ್ನೊಂದು ಕಡೆ ನೋಡಿದರೆ, ನೀವು ರಾಮುದಾಸನಿಗೆ ತುಂಬ ದಯೆ ತೋರಿದಿರಿ. ನೀವು ಅವನಿಗೆ ಮೊದಲ ದಿನ ಬಲವಂತದಿಂದ ಹಾಲು ಕುಡಿಸಿದಿರಿ. ನೀವಿರುವ ಗವಿಯಲ್ಲಿ ಒಂದು ರಾತ್ರಿ ನಿಮ್ಮ ಜೊತೆಯಲ್ಲಿರುವ ಸುಯೋಗವನ್ನು ದಯಪಾಲಿಸಿದಿರಿ.

ಪಾನಕದಿಂದ ಧೂಮಪಾನದಿಂದ ಅವನನ್ನು ಸತ್ಕರಿಸಿದಿರಿ. ಸಮ ರಾತ್ರಿಯಲ್ಲೂ ಕೆಂಡವನ್ನು ದಯಪಾಲಿಸಿದಿರಿ. ನಿಮ್ಮನ್ನು ನೋಡಿದರೆ, ರಾಮದಾಸನು ಉಪವಾಸ ಮಾಡುತ್ತಿರುವುದು ನಿಮಗೆ ಕಳವಳವನ್ನುಂಟು ಮಾಡಿದೆ ಎಂದು ಕಾಣುತ್ತದೆ. ಇದೆಲ್ಲ **ರಾಮನ ಲೀಲೆ** ಎಂದು ರಾಮ ದಾಸನು ಬಲ್ಲನು. ಕಾರುಣ್ಯ ಕಾಠಿಣ್ಯ ಎರಡೂ ಅವನಿಗೆ ಒಂದೇ. ಯೋಗ ಆತ್ಮಘಾತ ಎಂದರೆ ಏನೋ ರಾಮದಾಸನಿಗೆ ತಿಳಿಯದು. ಅವನು ಸರ್ವಶಕ್ತಿ ಪೂರಿತವಾದ ಭಗವನ್ನಾಮದಲ್ಲಿ ಸಂಪೂರ್ಣ ವಿಶ್ವಾಸವುಳ್ಳವನು ಎಷ್ಟೋ ಅಷ್ಟೆ. ಅದೇ ರಾಮದಾಸನನ್ನು ಭಗವಂತನ ಸಮ್ಮುಖಕ್ಕೆ ತಂದಿದೆ."

ಸಾಧು ಮಧ್ಯೆ ಬಾಯಿ ಹಾಕಿದನು.

"ನಿಮಗೆ ಯೋಗ ತಿಳಿಯದೆಂದು ನಾನು ಈಗ ನಂಬಲಾರೆ. ನನ್ನಿಂದ ತಪ್ಪಾಯಿತೆಂದು ಒಪ್ಪುತ್ತೇನೆ. ನಿಮ್ಮ ವಸ್ತ್ರದ ಬಣ್ಣದಿಂದ ನಾನು ಎಚ್ಚರಿಕೆ ತೆಗೆದುಕೊಳ್ಳಬೇಕಾಗಿದ್ದಿತು. ಸಂನ್ಯಾಸಿಗಳೆಂದರೆ ನನಗೆ ತೀರ ಹೆದರಿಕೆ. ಇನ್ನು ಉಪವಾಸಮಾಡುವುದು ನಿಮಗೆ ಒಳ್ಳೆಯದಲ್ಲ. ಅದರಿಂದ ತಮೋಗುಣ ವೃದ್ಧಿ ಯಾಗುತ್ತದೆ. ಹಾಗಲ್ಲದೆ ನೀವು ಹೀಗೆ ಮಾತನಾಡುತ್ತಿರಲಿಲ್ಲ."

ರಾಮದಾಸನು "ರಾಮದಾಸನಲ್ಲಿ ಯಾವ ಗುಣ ಹೇಗೆ ಕೆಲಸಮಾಡುತ್ತ ದೆಂಬುದು ಅವನಿಗೆ ಗೊತ್ತಿಲ್ಲ. ಅವನು ಎಲ್ಲವನ್ನೂ **ರಾಮನ** ಇಚ್ಛೆಯಂತೆ ಮಾಡುತ್ತಾನೆ. ಈಗಲೂ ಅವನು **ರಾಮನ** ಇಚ್ಛೆಯಿಂದಲೇ ಮಾತನಾಡು ತ್ತಿದ್ದಾನೆ. ರಾಮದಾಸನಿಗೆ ಯಾರ ವಿಷಯದಲ್ಲೂ ದ್ವೇಷವಾಗಲಿ ಪ್ರೀತಿ ಯಾಗಲಿ ಇಲ್ಲ. ಇದಕ್ಕೆ ಪ್ರತಿಯಾಗಿ ಅವನಿಗೆ **ರಾಮನಿಂದ** ಒಂದು ಬೋಧೆ ಯಾಗಿದೆ. ಈ ಪ್ರಪಂಚದಲ್ಲಿ ಎಲ್ಲಾ ವಿಧದ ಅಜ್ಞಾನಕ್ಕೂ ಸ್ವಾರ್ಥವೇ ಮೂಲ. ಎಲ್ಲಾ ಕಷ್ಟ ದುಃಖಗಳಿಗೂ ಅದೇ ಕಾರಣ. ನಮ್ಮ ಜೀವಿತದ ಪರಮ ಸ್ವಾಮಿಯಾದ ಜಗದೀಶ್ವರನ ಶರಣು ಹೊಗುವುದರಿಂದ ನಾವು ಅಹಂಭಾವ ವನ್ನು ಬೇರು ಸಹಿತ ಕಿತ್ತೊಗೆದು ಜ್ಞಾನವನ್ನು ಸಂಪಾದಿಸಿ, ಶಾಶ್ವತ ಸುಖವನ್ನೂ ಆನಂದಗಳನ್ನೂ ಹೊಂದಬಹುದು. ಈ ಗವಿ ಈ ಮಹಾ ಸತ್ಯವನ್ನು ಮನಗಂಡ ಋಷಿಗಳ ಆವಾಸ. ಇಲ್ಲಿಯ ವಾತಾವರಣ ಅವರ ತಪಸ್ಸಿನ ವೇಗದಿಂದ ಪುಳಕಿತವಾಗಿದೆ. ಇಲ್ಲಿ ವಾಸಮಾಡುತ್ತ ನಾವು ನಮ್ಮ ಒಳಗೂ ಹೊರಗೂ ಇರುವ ಭಗವಂತನನ್ನು ಕಾಣುವುದೆಂಬ ಮಾನವ ಜೀವನದ ಗುರಿ ಮತ್ತು ಮುಖ್ಯ ಧ್ಯೇಯವನ್ನು ಮರೆಯುವುದು ಬೇಡ" ಎಂದು ಹೇಳಿದನು.

---

# ಅಧ್ಯಾಯ ೩೦

## ಮರುಪ್ರಯಾಣ

### (i) (ಭಗವಂತನು ಕರುಣಾಸಾಗರ)

ಇಷ್ಟುಹೊತ್ತಿಗೆ ರೊಟ್ಟಿ ತೊವ್ವೆ ಸಿದ್ಧವಾದುವು. ಸಾಧು ಹೊರಗಿನ ಗಿಡಗಳಿಂದ ಕೆಲವು ಎಲೆಗಳನ್ನು ತಂದು, ಅವುಗಳಲ್ಲಿ ತಿಂಡಿಯನ್ನು ಹಾಕಿ ಮುಡಿಸಿ, ರಾಮದಾಸನಲ್ಲಿ ಉಳಿದಿದ್ದ ಬಟ್ಟೆಯನ್ನು ಕೇಳಿ ತೆಗೆದುಕೊಂಡು ಪೊಟ್ಟಣವನ್ನು ಅದರಲ್ಲಿ ಕಟ್ಟಿ, ರಾಮದಾಸನ ಕೈಗೆ ಕೊಟ್ಟು,

"ನದಿಯ ದಂಡೆಗೆ ಹೋಗಿ, ನಿಮಗೆ ಬೇಕಾದಷ್ಟನ್ನು ತಿಂದು, ಮಿಕ್ಕುದನ್ನು ದಾರಿಗೆ ಕಟ್ಟಿಕೊಂಡು ಹೋಗಿ. ಊಟವಾಗುತ್ತಲೂ ನಿಮ್ಮನ್ನು ನದೀ ತೀರಕ್ಕೆ ಕರೆದುಕೊಂಡು ಹೋಗುತ್ತೇನೆ. ಅಲ್ಲಿ ಒಬ್ಬ ನಾವಿಕನು ತೆಪ್ಪವನ್ನಿಟ್ಟುಕೊಂಡಿರುತ್ತಾನೆ. ಅವನು ಅದರಲ್ಲಿ ನಿಮ್ಮನ್ನು ಹೊಳೆ ದಾಟಿಸುತ್ತಾನೆ. ನದಿಯ ಎದುರು ದಡದಲ್ಲಿರುವ ಬೇರೆ ದಾರಿಯಿಂದ ನೀವು ಹಿಂದಕ್ಕೆ ಹೋಗಬಹುದು" ಎಂದನು.

ರಾಮದಾಸನು ಹಾಗೆಯೇ ನದಿಗೆ ಹೋಗಿ ಒಂದು ಕಲ್ಲಿನ ಮೇಲೆ ಕುಳಿತವನು ಒಂದು ರೊಟ್ಟಿಯಲ್ಲಿ ಕಾಲುಭಾಗಕ್ಕೆ ಹೆಚ್ಚಾಗಿ ತಿನ್ನಲಾರದೆ ಹೋದನು. ಉಳಿದುದನ್ನು ಮತ್ತೆ ಕಟ್ಟಿಕೊಂಡು ಹೊರಡಲನುವಾದನು. ಸಾಧು ಅವನನ್ನು ತೆಪ್ಪದ ಹತ್ತಿರಕ್ಕೆ ಕರೆದುಕೊಂಡು ಹೋಗಿ, ಅಂಬಿಗನಿಗೆ ಅವನನ್ನು ಆಚೆ ದಡಕ್ಕೆ ಸೇರಿಸುವಂತೆ ತಿಳಿಸಿದನು. ರಾಮದಾಸನು ತೆಪ್ಪವನ್ನೇರಿದನು. ಸಾಧು ಗವಿಗೆ ಹಿಂದಿರುಗಿದನು. ನದಿಯಲ್ಲಿ ಸೆಳತ ಬಲವಾಗಿದ್ದಿತು. ಆದರೆ ಅಂಬಿಗನು ಅದಕ್ಕೆ ತಕ್ಕಷ್ಟು ಸಮರ್ಥನಾಗಿದ್ದನು. ಅವನು ನೀರಿನಲ್ಲಿ ಹಾಯ್ದನು. ನದಿಯ ಮಧ್ಯಭಾಗವನ್ನು ಸೇರಿದಾಗ ಅವನು ರಾಮದಾಸನನ್ನು ಗಂಟಿನಲ್ಲಿ ಏನಿದೆ ಎಂದು ಕೇಳಿದನು. ರೊಟ್ಟಿ ತೊವ್ವೆ ಇರುವುದಾಗಿ ರಾಮದಾಸನು ಉತ್ತರ ಕೊಟ್ಟನು. ಅಂಬಿಗನು ಹರ್ಷವನ್ನು ಸೂಸುವ ನಗೆಯಿಂದ,

"ನನಗೆ ಬಹಳ ಹಸಿವು ಆಗಿದೆ. ನೀವು ಆ ಊಟವನ್ನು ನನಗೆ ಕೊಟ್ಟರೆ ಬಹಳ ಉಪಕಾರ ಎಣಿಸುತ್ತೇನೆ" ಎಂದು ಹೇಳಿದನು.

ರಾಮದಾಸನಿಗೆ ಅವನು ಎರಡನೆಯ ಸಾರಿ ಕೇಳುವುದಾಗಲಿ, ಧನ್ಯವಾದವನ್ನು ಅರ್ಪಿಸುವುದಾಗಲಿ ಬೇಕಿರಲಿಲ್ಲ. ಅವನು ಬಹು ಸಂತೋಷದಿಂದ ತಿಂಡಿಯ ಪೊಟ್ಟಣವನ್ನು ಅಂಬಿಗನಿಗೆ ಕೊಟ್ಟುಬಿಟ್ಟನು. ರಾಮದಾಸನು ತಾನು

ಈ ಅಂಬಿಗನಿಗೋಸ್ಕರ ತಿಂಡಿಯನ್ನು ತೆಗೆದುಕೊಂಡುಬರುವುದು **ರಾಮನ** ಇಚ್ಛೆ ಯಾಗಿದ್ದಿತೆಂದು ಈಗ ತಿಳಿದುಕೊಂಡನು.

ರಾಮದಾಸನು ಎದುರು ದಡವನ್ನು ಸೇರಿದನು. ಮರಳಿನ ಮೇಲೆ ಸ್ವಲ್ಪ ದೂರ ಹೋಗುವುದರೊಳಗೆ ಒಬ್ಬ ಮುದುಕನು ಒಂದು ಕಂಬ ಮಾಡುವುದಕ್ಕಾಗಿ ಅಲ್ಲಿ ಬಿದ್ದಿದ್ದ ಒಂದು ಒಣ ಮರವನ್ನು ಬಾಚಿಯಿಂದ ಕಡಿಯುತ್ತಿದ್ದುದನ್ನು ಕಂಡನು. ರಾಮದಾಸನು ಅವನ ಬಳಿಗೆ ಹೋಗಿ ಪಕ್ಕದಲ್ಲಿ ಕುಳಿತನು; "ರಾಮಜಿ, ಸ್ವರ್ಗಾಶ್ರಮಕ್ಕೆ ಹೋಗುವ ದಾರಿಯನ್ನು ದಯವಿಟ್ಟು ತೋರಿಸು ವಿರಾ ?" ಎಂದು ಮುದುಕನನ್ನು ಕೇಳಿದನು.

ದಯಾಳುವಾದ ಆ ಮುದುಕನು ತಾನು ಮಾಡುತ್ತಿದ್ದ ಕೆಲಸವನ್ನು ನಿಲ್ಲಿಸಿ, ರಾಮದಾಸನನ್ನು ನೋಡುತ್ತಾ, "ಸ್ವರ್ಗಾಶ್ರಮ ಬಹಳ ಬಹಳಾ ದೂರವಿದೆ. ಅದಕ್ಕೆ ಗುರುತಾದ ಜಾಡು ಮಾಡಿದ ರಸ್ತೆ ಇಲ್ಲ. ಅಲ್ಲಲ್ಲೇ ವಿಚಾರಿಸಿ ಕೊಳ್ಳುತ್ತಾ ಹೋಗಬೇಕು. ಈಗಲೇ ಕತ್ತಲಾಗುತ್ತಿದೆ. ಅಷ್ಟು ದೂರ ಹೋಗುವ ಯೋಚನೆ ಯನ್ನು ಈಗ ಮಾಡುವ ಹಾಗಿಲ್ಲ. ನಾನು ತೋರಿಸುವ ದಾರಿಯನ್ನು ಅನುಸರಿಸಿ ಹೋಗಿ. ಬೆಟ್ಟದ ಮೇಲೆ ಒಂದು ಮೈಲಿ ಏರಿದನಂತರ ಸುತ್ತ ಹೊಲಗಳ ಮಧ್ಯೆ ಎರಡು ಗುಡಿಸಲು ಕಾಣುತ್ತವೆ. ಅವುಗಳಲ್ಲಿ ಒಂದರಲ್ಲಿ ರಾತ್ರಿ ಇರಿ. ಅಲ್ಲಿಯವರು ನಿಮಗೆ ಸಂತೋಷದಿಂದ ಸ್ಥಳ ಕೊಡುತ್ತಾರೆ. ಬೆಳಗ್ಗೆ ಅಲ್ಲಿಂದ ಪ್ರಯಾಣ ಮಾಡಬಹುದು" ಎಂದು ಹೇಳಿದನು.

ಅವನು ವಕ್ರವಾಗಿ ಹರಿಯುತ್ತಿದ್ದ ಒಂದು ಸೀಳುದಾರಿಯನ್ನು ತೋರಿ ಸಿದನು. ಅದು ದಟ್ಟವಾಗಿ ಬೆಳೆದ ಮರಗಳ ಮಧ್ಯೆ ಬೆಟ್ಟಕ್ಕೆ ಏರಿ ಹೋಗು ತ್ತಿದ್ದಿತು. ರಾಮದಾಸನು ಏರಿಹೋದನು. ಒಂದು ಮೈಲಿಯಷ್ಟು ಹತ್ತಿದಮೇಲೆ, ಹಸುರು ಹೊಲಗಳ ವಿಸ್ತಾರವಾದ ಬಯಲು ಕಾಣಿಸಿತು. ಅದರ ಹಿಂದೆ ಬೆಟ್ಟವು ಇನ್ನೂ ಎತ್ತರಕ್ಕೆ ಏರಿದ್ದಿತು. ಹೊಲಗಳ ಮಧ್ಯೆ ಸುಮಾರು ನಲವತ್ತು ಗಜಗಳ ಅಂತರದಲ್ಲಿ ಎರಡು ಗುಡಿಸಲುಗಳಿರುವುದು ಕಂಡಿತು. ಇವನು ಹೊಲಗಳನ್ನು ಹಾಯ್ದು ಒಂದು ಗುಡಿಸಿಲ ಬಳಿಗೆ ಹೋದನು. ಅದರ ಮುಂದೆ ಮರಗಳ ಬಲವಾದ ಬುಡಗಳ ಮೇಲೆ ಹಲಗೆಯಿಂದ ಹಾಕಿದ್ದ ಒಂದು ಮಂಚಿಗೆ ಇದ್ದಿತು. ರಾಮದಾಸನು ಅದರ ಮೇಲೆ ಏರಿದನು. ಅದರ ಮೇಲೆ ಇಬ್ಬರು ಹುಡುಗರೂ ಒಬ್ಬ ವಯಸ್ಕನೂ ಒಬ್ಬ ಮುದುಕನೂ ಕುಳಿತಿದ್ದರು. ದೊಡ್ಡವರಿಬ್ಬರೂ ಹರಿದು ಹೋಗಿದ್ದ ಒಂದು ಕಂಬಳಿಯನ್ನು ಹೊಲೆಯುತ್ತಿದ್ದರು. ಅವರು ಇವನನ್ನು ಕಂಡಾಗ, ಚಿಕ್ಕ ವಯಸ್ಸಿನವನು ಎದ್ದು ಗುಡಿಸಿಲಿನಿಂದ ಒಂದು ಕರಿಯ ಕಂಬಳಿಯನ್ನು ತಂದು ಕೆಳಗೆ ಹಾಸಿ ರಾಮದಾಸನಿಗೆ ಅದರ ಮೇಲೆ ಕುಳಿತು ಕೊಳ್ಳುವಂತೆ ಸಂಜ್ಞೆ ಮಾಡಿದನು. ರಾಮದಾಸನು ಅದರ ಮೇಲೆ ಕುಳಿತು

ಕೊಂಡನು. ಅವನು ರಾಮದಾಸನನ್ನು ಎಲ್ಲಿಂದ ಬಂದಿರಿ ಎಲ್ಲಿಗೆ ಪ್ರಯಾಣ ಎಂದು ಕೇಳಿದನು. ರಾಮದಾಸನು ತಾನು ವಶಿಷ್ಠಾಶ್ರಮದಿಂದ ಬಂದು ದಾಗಿಯೂ ಸ್ವರ್ಗಾಶ್ರಮಕ್ಕೆ ಹೋಗಬೇಕಾಗಿದೆಯೆಂದೂ ತಿಳಿಸಿದನು.

ಆ ಮನುಷ್ಯನು "ಹಾಗಾದರೆ ಆ ಗವಿಯಲ್ಲಿರುವ ಸಾಧುವನ್ನು ನೀವು ನೋಡಿರಬೇಕು. ಆತನು ಬೇರೆ ಯಾವ ಸಾಧುವನ್ನೂ ಅಲ್ಲಿ ಇರಗೊಡಿಸುವುದಿಲ್ಲ. ಇತರರನ್ನು ಓಡಿಸುವುದೇ ಅವನಿಗೆ ಒಂದು ಕೆಲಸ. ಅವನು ಬಹಳ ಕಠಿಣ ಮನುಷ್ಯ, ಕ್ರೂರಿ." ಎಂದನು.

ರಾಮದಾಸನು "ಅವನು ಹೊರಗಡೆ ಕ್ರೂರವಾಗಿ ಕಂಡು ಬಂದರೂ ಅವನ ಹೃದಯ ಬಹಳ ಮೃದು. ದೇವರ ಲೀಲೆ ಆಶ್ಚರ್ಯಕರವಾದುದು! **ಅವನು** ನಾನಾ ರೀತಿಯಲ್ಲಿ ಆಡುತ್ತಾನೆ. ಸಾಧು ರಾಮದಾಸನಿಗೆ ಆಶ್ರಮ ಬಿಡುವುದಕ್ಕೆ ಮುಂಚೆ ರೊಟ್ಟಿ ತೊವ್ವೆಯನ್ನು ಮಾಡಿ ತಿನ್ನಿಸಿದನು. ಬಹು ರೀತಿಯಲ್ಲಿ ಅವನು ರಾಮದಾಸನಿಗೆ ದಯೆ ಪ್ರೀತಿಯನ್ನು ತೋರಿದನು" ಎಂದು ಉತ್ತರ ಕೊಟ್ಟನು.

ಆಗ ಆತನು "ಇದು ಬಹಳ ಆಶ್ಚರ್ಯ. ನಾವು ಕಂಡಿದ್ದರಲ್ಲಿ ಅವನಿಗೂ ದಯ ನಯಗಳಿಗೂ ದೂರ. ಹೇಗಾದರೂ ಇರಲಿ ಅದು ಬೇರೆ ಮಾತು. ರಾತ್ರಿಗೆ ಏನನ್ನು ತೆಗೆದುಕೊಳ್ಳುತ್ತೀರಿ?" ಎನ್ನುತ್ತ, ನಂತರ ಸ್ವಲ್ಪ ಯೋಚನಾಪರನಾಗಿ, ಮನೆಯ ಎದುರಿನ ಒಂದು ದೊಡ್ಡಿಯನ್ನು ತೋರಿಸುತ್ತಾ, "ನನಗೆ ಬೇಕಾದ ಹಾಗೆ ದನ ಇವೆ. ಆದರೆ ನನ್ನ ದುರದೃಷ್ಟಕ್ಕೆ ಈಗ ಅವು ಒಂದಾದರೂ ಕರೆಯು ತ್ತಿಲ್ಲ. ಇಲ್ಲದಿದ್ದರೆ ಎಷ್ಟೋ ಸಂತೋಷದಿಂದ ನಿಮಗೆ ಹಾಲು ಕೊಡುತ್ತಿದ್ದೆ" ಎಂದನು.

ಅವನು ಮತ್ತೆ ಒಂದು ಕ್ಷಣ ಯೋಚಿಸಿ, ತನ್ನ ಮಗ ಆ ಹುಡುಗರಲ್ಲಿ ಒಬ್ಬನನ್ನು ಕರೆದು ಒಂದು ಮಡಕೆಯನ್ನು ತೆಗೆದುಕೊಂಡು ಓಡಿ ಹೋಗಿ ಮಗ್ಗುಲು ಗುಡಿಸಿಲಿನಿಂದ ಸ್ವಲ್ಪ ಹಾಲು ಕೇಳಿ ತಾ ಎಂದು ಹೇಳಿ ಆ ಮನೆಯ ಏಕ ಮಾತ್ರ ಮರದ ಸಾಮಾನಾದ ಒಂದು ಹಗ್ಗದ ಮಂಚದ ಮೇಲೆ ಎರಡು ಕಂಬಳಿಗಳನ್ನು ಹಾಸಿ, ಅದರ ಮುಂದೆ ಉರಿಹಾಕಿ, ರಾಮದಾಸನಿಗೆ ಒಳಗೆ ಹೋಗಿ ಕುಳಿತುಕೊಳ್ಳಿ ಎಂದು ಹೇಳಿದನು. ರಾಮದಾಸನನ್ನು ಮಲಗ ಹೇಳಿ ಅವನ ಕಾಲುಗಳನ್ನು ಒತ್ತಲು ಪ್ರಾರಂಭಿಸಿದನು.

ಹೃದಯದಲ್ಲಿ ಪ್ರೀತಿ ಉಕ್ಕಿ ಅವನು ರಾಮದಾಸನಿಗೆ ಹೀಗೆಂದನು. "ನೀವು ನಿಜವಾಗಿ ಈ ನನ್ನ ಬಡ ಕುಟೀರಕ್ಕೆ ಬಂದಿರುವ ಈಶ್ವರನೇ. ನಾನು ಮಾಯೆಯ ಸುಳಿಯಲ್ಲಿ ಸಿಕ್ಕಿರುವ ದುಃಖಿ ಸಂಸಾರಿ. ಶಾಂತಿಯನ್ನು ದಯಪಾಲಿಸ ಬೇಕೆಂದು ನಾನು ಭಗವಂತನಿಗೆ ಮೊರೆಯಿಡುತ್ತಿದ್ದೆ. ಈ ಮೊರೆಯನ್ನು ಲಾಲಿಸಿ ಭಗವಂತನೇ ನಿಮ್ಮ ರೂಪದಲ್ಲಿ ಬಂದಿದ್ದಾನೆ. (ಭಗವಂತನು ನಿಜವಾಗಿ ಕರುಣೆ ದಯೆಗಳ ಸಾಗರ.")

ರಾಮುದಾಸನು "**ಹರೇರಾಮು!** ಇದೆಲ್ಲಾ ನಿನ್ನ ಲೀಲೆ. ಅನಾಥನಿಗೆ ಈಶ್ವರನು ಬಂಧು, **ಅವನು** ಭಕ್ತರ ಸೇವಕ. ರಾಮುದಾಸನು ಪರಮಾತ್ಮನ ಶಿಶು ಮಾತ್ರ. ಆತನನ್ನು ನಿನ್ನ ಅಪಾರವಾದ ಪ್ರೀತಿಯಲ್ಲಿ ಮುಳುಗಿಸುತ್ತಿರುವ ನೀನು ಆ ಪರಮಾತ್ಮ" ಎಂದು ಉತ್ತರ ಕೊಟ್ಟನು.

ಅವನು ಎಂತಹ ಮಾತೃಸಮವಾದ ಪ್ರೀತ್ಯಾದರಗಳಿಂದ ರಾಮುದಾಸನನ್ನು ನೋಡಿಕೊಂಡನೆಂದು ವರ್ಣಿಸಲು ರಾಮುದಾಸನಿಗೆ ಶಬ್ದಗಳೇ ಸಿಕ್ಕುವುದಿಲ್ಲ. ಹನ್ನೆರಡು ವರ್ಷದ ಅವನ ಮಗಳು ಅಡಿಗೆ ಮಾಡಿದಳು. ಅವನ ಹೆಂಡತಿ ಈ ಮರ್ತ್ಯ ಲೋಕವನ್ನು ತ್ಯಜಿಸಿದ್ದಳು. ಗುಡಿಸಿಲಿನಲ್ಲಿ ಹಾಕಿದ್ದ ಉರಿಯಿಂದ ಒಳ ಭಾಗವು ಮಸಕುಬೆಳಕಾಗಿದ್ದಿತು. ಯಜಮಾನನು ರಾಮುದಾಸನ ಬಳಿಯಿಂದ ಹೋಗಿ ಅಗಲವಾದ ಬಾಯ ಒಂದು ಬಟ್ಟಲಲ್ಲಿ ಬಿಸಿಯಾದ ಹಾಲನ್ನೂ ಮೆತ್ತನೆಯ ಒಂದು ರೊಟ್ಟಿಯನ್ನೂ ತಂದು ರೊಟ್ಟಿಯನ್ನು ಚೂರುಮಾಡಿ ಹಾಲಿನಲ್ಲಿ ಕಲಸಿದನು. ಈ ಮಧ್ಯೆ ಮಗ್ಗುಲಲ್ಲಿದ್ದ ಒಂದು ತುಂಬಿದ ಬುಟ್ಟಿಯಿಂದ ಬೆಳ್ಳಗಿದ್ದ ಕೆಲವು ಪದಾರ್ಥಗಳನ್ನು ತೆಗೆದು ರಾಮುದಾಸನಿಗೆ ಕೊಟ್ಟನು.

"ಇವನ್ನು ತಿನ್ನಿ" ಎಂದನು.

ರಾಮುದಾಸನು ಅವುಗಳನ್ನು ಬೆರಳಿನಲ್ಲಿ ಅದುಮಿ ನೋಡಲು ಅವು ಮೆತ್ತಗಿದ್ದುವು. ಮಸಕು ಬೆಳಕಿನಲ್ಲಿ ಅವು ಏನೆಂಬುದು ರಾಮುದಾಸನಿಗೆ ಗೊತ್ತಾಗುವುದು ಕಷ್ಟವಾಗಿದ್ದಿತು. ಅವನು ಒಂದು ಚೂರನ್ನು ಬಾಯಲ್ಲಿ ಹಾಕಿಕೊಂಡನು. ಅದು ಬಹು ರುಚಿಯಾಗಿದ್ದಿತು.

ಯಜಮಾನ "ನೀವು ತಿನ್ನುವುದು ಒಂದು ಕಂದ. ಅದನ್ನು ಬೇಯಿಸಿದೆ. ಅದು ಈ ಪ್ರಾಂತದಲ್ಲಿ ಬೇಕಾದ ಹಾಗೆ ದೊರೆಯುತ್ತದೆ" ಎಂದನು.

ರಾಮುದಾಸನು "ರಾಮಜಿ, ರಾಮುದಾಸನು ಈ ಕಂದದ ಇನ್ನು ಎರಡು ಚೂರನ್ನು ತಿನ್ನಲು ಅಪೇಕ್ಷಿಸುತ್ತಾನೆ. ರೊಟ್ಟಿ ಹಾಲು ಬೇಕಿಲ್ಲ. ನೀವು ಒತ್ತಾಯಮಾಡಬೇಡಿ" ಎಂದನು.

ಆತನು ಪ್ರೀತಿ ಪುರಸ್ಸರವಾಗಿ ಈ ಮಾತನ್ನು ತಡೆದು "ಇಲ್ಲ ಇಲ್ಲ. ಅದನ್ನೂ ತೆಗೆದುಕೊಳ್ಳಿ. ಬೇಕಾದಷ್ಟು ಕಂದವನ್ನು ತಿನ್ನಿರಿ, ಆದರೆ ಈ ರೊಟ್ಟಿ ಬೆರಸಿರುವ ಹಾಲನ್ನೂ ತೆಗೆದುಕೊಳ್ಳಬೇಕು" ಎಂದನು.

ರಾಮುದಾಸನು ರೊಟ್ಟಿಯ ಚೂರುಗಳಿಂದ ಮಿಶ್ರವಾದ ಹಾಲನ್ನು ಕುಡಿದು ಇನ್ನೂ ಕೆಲವು ಗೆಡ್ಡೆಯ ಚೂರುಗಳನ್ನು ತಿನ್ನಬೇಕಾಯಿತು. ಇದಾದ ಮೇಲೆ ಮನೆಯವರೆಲ್ಲರೂ ಸಂಜೆಯೂಟ ಮಾಡಿದರು. ರಾತ್ರಿ ಬಹಳ ಹೊತ್ತಿನ ವರೆಗೂ ದೇವರು, ಭಕ್ತಿ, ಪ್ರೇಮ ಮತ್ತು ಆನಂದ ಈ ಸಂಬಂಧವಾದ ಸಲ್ಲಾಪ ನಡೆಯಿತು. ಮನೆಯಾತ ಈ ಕಾಲವೆಲ್ಲ ಅತ್ಯಂತ ಆನಂದದಲ್ಲಿದ್ದನು.

ಎರಡು ಗಂಟೆಗಳ ಕಾಲ ನಿದ್ರೆಮಾಡಿ ರಾಮದಾಸನು ಬೆಳಿಗ್ಗೆ ಎದ್ದು ಮುಂದೆ ಹೊರಟನು. ಮನೆಯವನು ತೀರಾ ಖಿನ್ನನಾದನು. ಕಣ್ಣಿನಲ್ಲಿ ನೀರು ಹಾಕುತ್ತಾ ಅವನು ರಾಮದಾಸನನ್ನು ಇನ್ನು ಒಂದು ದಿವಸವಾದರೂ ತನ್ನೊಂದಿಗೆ ಇರಬೇಕೆಂದು ಬೇಡಿಕೊಂಡನು. ಆದರೆ ರಾಮದಾಸನಿಗೆ ಆ ಸ್ಥಳ ದಿಂದ ಹೊರಡಬೇಕೆಂದು **ರಾಮನು** ಕಠಿಣ ಆಜ್ಞೆ ಮಾಡಿದನು. ಅವನು ಹೊರಡುವ ಮುನ್ನ ದಯಾಳುಯಜಮಾನನಿಗೆ ಆಲಿಂಗನ ಕೊಟ್ಟನು. ಆತನು "ಅಕೋ, ಬೆಟ್ಟದ ಮತ್ತಷ್ಟು ಎತ್ತರದ ಮೇಲೆ ಸಣ್ಣ ಬಯಲು ಕಾಣುತ್ತದೆ. ಅದು ಒಂದು ಪಾಳ್ಯ. ಅದನ್ನು ಗುರುತಾಗಿಟ್ಟುಕೊಂಡು ಅದೇ ಕಡೆಗೆ ಏರಿ ಹೋಗಿ. ಅಲ್ಲಿಗೆ ಮಧ್ಯಾಹ್ನದ ವೇಳೆಗೆ ಮುಟ್ಟಬಹುದು. ಆ ಹಳ್ಳಿಯವರು ಸತ್ಕಾರಪರರು, ನಿಮಗೆ ಬೇಕಾದುದನ್ನು ನೋಡಿಕೊಳ್ಳುತ್ತಾರೆ" ಎಂದನು.

ಕಾಡುಗಳಲ್ಲಿಯೂ ಕಿಬ್ಬರಿಗಳಲ್ಲಿಯೂ ಹಾಯ್ದುಹೋಗಿ ರಾಮದಾಸನು ಈ ಹಳ್ಳಿಯನ್ನು ಮುಟ್ಟಿದನು. ಆಗ ಸೂರ್ಯನು ನಡುನೆತ್ತಿಗೆ ಬಂದಿದ್ದನು. ಇಲ್ಲಿಯೂ ಹಳ್ಳಿಯವರು ಅವನನ್ನು ಬಹಳವಾಗಿ ಆದರದಿಂದ ಸತ್ಕರಿಸಿದರು. ಊಟವಾದ ಮೇಲೆ ರಾಮದಾಸನು ಮುಂದಕ್ಕೆ ಹೊರಟನು.

ಆ ಹಳ್ಳಿಯ ಮುದುಕನು "ಮಹರಾಜ್, ನೀವು ಇನ್ನೂ ಹತ್ತು ಮೈಲಿಗಳಷ್ಟು ದಾರಿ ನಡೆಯಬೇಕು. ಕಾಲುದಾರಿ ಯಾವುದೂ ಇಲ್ಲ. ದಾರಿಯ ಮಧ್ಯದಲ್ಲಿ ಹಳ್ಳಿಗಳೂ ಇಲ್ಲ. ನೀವು ಒಬ್ಬರೇ ಹೊರಟರೆ ಭಗವಂತನೇ ನಿಮಗೆ ದಾರಿ ತೋರಿಸಬೇಕು. ನಾನು ಹೋಗಬೇಕಾದ ದಿಕ್ಕನ್ನು ಮಾತ್ರ ತೋರಿಸ ಬಲ್ಲೆ" ಎಂದನು.

### (ii) ರಾಮನೊಡನೆ ರಾಮದಾಸನ ಸಲ್ಲಾಪ

ಆ ವೃದ್ಧನು ತನ್ನ ಮುಂಬೆರಳಿನಿಂದ ದಿಕ್ಕನ್ನು ತೋರಿಸಿದನು. ರಾಮದಾಸನು ಹೊರಟನು. ಒಂದು ಮೈಲಿಯಷ್ಟು ನಡೆದನಂತರ ಅವನಿಗೆ ದಟ್ಟವಾದ ಕಾಡೊಂದು ಸಿಕ್ಕಿತು. ನೆಲದ ಮೇಲೆ ಮಂಡಿಯನ್ನು ಮುಟ್ಟುವಂತೆ ತರಗೆಲೆಗಳು ಬಿದ್ದಿದ್ದುವು. ರಾಮದಾಸನು ಅವುಗಳಲ್ಲಿ ಇಳಿದು ಹೋದನು. ನಿಜದಲ್ಲಿ ಅವನು ದಾರಿಕಾಣದೆ ಸಿಕ್ಕಿದಂತೆ ಹೋಗುತ್ತಿದ್ದನು. ಆಗ ರಾಮ ದಾಸನಿಗೆ ಸಂಭಾಷಣೆಯ ಅಭಿಲಾಷೆಯುಂಟಾಯಿತು.

ಅವನು **ರಾಮನನ್ನು** ಸಂಬೋಧಿಸಿ "**ಲೋಕಮಾತೆ!** ನಿನ್ನ ಶಿಶುವನ್ನು ಪವಿತ್ರವಾದ ಈ ಬೆಟ್ಟಗಳ ಮೇಲೆ ಅಲೆಯಲು ಕರೆತಂದಿರುವುದು ನೀನೆ. ಈ ಮಗುವಿಗೆ ಸರಿಯಾದ ದಾರಿ ತೋರಿಸಿ ಕರೆದುಕೊಂಡು ಹೋಗುವುದು ನಿನ್ನ ಹೊಣೆ" ಎಂದು ಹೇಳಿದನು.

ಸ್ವಲ್ಪ ದೂರ ಹೋದ ಮೇಲೆ ಅವನಿಗೆ ಇಳುವರಿಯಾದ ಒಂದು ಬೆಟ್ಟ ಸಿಕ್ಕಿತು. ಅಲ್ಲಿ ಗೋರ್ಗಲ್ಲಿನ ಅಂಚಿನಲ್ಲಿ ಒಂದು ಗವಿ ಎಂದರೆ ಬಂಡೆಯಲ್ಲಿ ದೊಡ್ಡ ಒಂದು ಗುಂಡಿ ಕಾಣಿಸಿತು. ಅವನು ಅದರೊಳಕ್ಕೆ ಇಣಿಕಿ ನೋಡಿದನು. ಒಳಗೆ ತೀರ ಕತ್ತಲಾಗಿದ್ದಿತು. ಇಂತಹ ಗವಿಗಳು ಸಾಧಾರಣವಾಗಿ ದುಷ್ಟ ಮೃಗ ಗಳ ಆವಾಸಸ್ಥಾನವೆಂದು ಅವನು ಕೇಳಿದ್ದನು. ಹುಲಿ ಅಥವ ಸಿಂಹದ ಆಕಾರದಲ್ಲಿ **ರಾಮನ** ದರ್ಶನ ಪಡೆಯಲು ಇದು ಒಂದು ಸುಸನ್ನಿವೇಶವೆಂದು ಅವನು ಯೋಚಿಸಿದನು. ಗವಿಯೊಳಗೆ ಧುಮುಕಿ "ಹರಿಃ ಓಂ" ಎಂದು ಮೂರು ಬಾರಿ ಗಟ್ಟಿಯಾಗಿ ಕೂಗಿ ಏನಾಗುತ್ತದೋ ಎಂದು ನೋಡಿದನು. ಗವಿಯಿಂದ ಹೊರಕ್ಕೆ ಏನೂ ಬರಲಿಲ್ಲ. ದುಷ್ಟ ಮೃಗಗಳು ಇವನ ಎದುರಿಗೆ ಬರುವುದು ಬೇಡವೆಂದು **ರಾಮನ** ಇಚ್ಛೆ ಆಗಿದ್ದಿತು. ರಾಮದಾಸನು ಗವಿಯಿಂದ ಹೊರಗೆ ಬಂದನು.

ಅವನ ಎದುರಿಗೆ ಆಳವಾದ ಕಂದರ ಭಯಂಕರವಾಗಿ ಬಾಯಿಬಿಟ್ಟು ಕೊಂಡಿದ್ದಿತು. ಇದರ ಕೆಳಕ್ಕೆ ಇಳಿಯಬೇಕಾಗಿದ್ದಿತು.

"**ರಾಮ,** ಈಗ ಏನು ಮಾಡಬೇಕೆಂದು ಸೂಚಿಸುತ್ತೀಯೆ?" ಎಂದು ರಾಮದಾಸನು ಪ್ರಶ್ನೆ ಮಾಡಿದನು.

"ಹೆದರ ಬೇಡ ಮಗು; ಇಳಿ" ಎಂದು **ರಾಮನು** ಸಾವಧಾನವಾಗಿ ಉತ್ತರವಿತ್ತನು. ರಾಮದಾಸನು ಹಿಮ್ಮುಖವಾಗಿ ತಿರುಗಿ ಮೆಲ್ಲಗೆ ಇಳಿಬಿದ್ದ ಕಲ್ಲಿನ ಮೇಲೆ ಜಾರಲು ಆರಂಭಿಸಿದನು. ಒರಟು ಬಂಡೆಯ ಮೇಲಿನ ಸಂದಿಗಳು ಕಾಲಿಗೂ ಕೈಗಳಿಗೂ ಆಸರೆಯಾಗಿ ಅವನು ಇಳಿದನು. ಸ್ವಲ್ಪ ಆಯ ತಪ್ಪಿ ದರೆ ಇನ್ನೂರು ಅಡಿ ಕೆಳಕ್ಕೆ ಬೀಳುವುದೂ, ಪ್ರಾಣ ಹೋಗುವುದೂ ಖಂಡಿತ. ಆದರೆ **ರಾಮನು** ಧೈರ್ಯ ಕೊಟ್ಟಿದ್ದನು. ಹೆದರಿಕೆ ರಾಮ ದಾಸನನ್ನು ತ್ಯಜಿಸಿ ತೀರಾ ತೊಲಗಿಹೋಗಿದ್ದಿತು. ನಿಧಾನವಾಗಿ ಕ್ರಮವಾಗಿ ಹೆಜ್ಜೆಯಾದಮೇಲೆ ಹೆಜ್ಜೆಯಾಗಿ ಅವನು ಇಳಿದನು. ರಾಮದಾಸನ ಶರೀರ ಎಷ್ಟು ಹಗುರವಾಗಿ ತೇಲುತ್ತಿದ್ದಿತೆಂದರೆ ಅದು ಗಾಳಿ ತುಂಬಿದ ರಬ್ಬರ್ ಬೊಂಬೆಯಂತಿದ್ದಿತು. ಉಸಿರಾಡುವುದು ತನ್ನಷ್ಟಕ್ಕೆ ತಾನೇ ನಿಂತಿದ್ದಿತು. ಅತಂತ್ರವಾದ ಕಾಲಿನ ಆಸರೆ ಕೆಲವು ವೇಳೆ ನಡುಗುವುವು. ಕಾಲ ಭಾರದಿಂದ ಕಲ್ಲಿನ ಚಕ್ಕೆಗಳು ಕೆಳಕ್ಕೆ ಬಿದ್ದು ಹಾಗೆ ಬಿದ್ದುದರಿಂದ ಕಣಿವೆಯ ತಳದಲ್ಲಿ ಗುಡುಗಿ ನಂತೆ ಪ್ರತಿಧ್ವನಿಗಳನ್ನುಂಟುಮಾಡುತ್ತಿದ್ದುವು. ಕಣಿವೆಯ ತಳವನ್ನು ಮುಟ್ಟಲು ಎಷ್ಟು ಕಾಲ ಹಿಡಿಯಿತೆಂಬುದು ರಾಮದಾಸನಿಗೆ ಗೊತ್ತಾಗಲೇ ಇಲ್ಲ. ಅದೆಲ್ಲ ಬಹಳ ಸ್ವಲ್ಪ ಕಾಲದ ಹಾಗೆ ಕಾಣಿಸಿತು. ಕೊನೆಗೆ ಇವನು ಕಣಿವೆಯ ತಳವನ್ನು ಸುರಕ್ಷಿತವಾಗಿ ಮುಟ್ಟಿದನು. ಇಲ್ಲಿಯೂ "ಹರಿಃ ಓಂ" ಎಂದು ಘಟ್ಟಿಯಾಗಿ ಕೂಗಿದನು. ಸುತ್ತಣ ಮಹಾ ಶೈಲಗಳೆಲ್ಲ ಅದನ್ನು ಪ್ರತಿಧ್ವನಿಸಿದುವು.

ರಾಮುದಾಸನು "ರಾಮ, ನಿನ್ನ ಮಹಿಮೆ ಎಂತಹದೋ? ರಾಮುದಾಸನ ಕೈಯಲ್ಲಿ ಅತ್ಯದ್ಭುತವಾದ ಸಾಹಸ ಕಾರ್ಯವನ್ನು ಮಾಡಿಸಿದ್ದೀಯೆ!" ಎಂದು ಆಶ್ಚರ್ಯದಿಂದ ನುಡಿದನು.

**ರಾಮನು** "ಇಷ್ಟೇ ಅಲ್ಲ. ನೀನಿನ್ನೂ ಎಷ್ಟೋ ಸಾಹಸ ಕಾರ್ಯ ಮಾಡಬೇಕು, ಮುಂದೆ ನಡೆ" ಎಂದನು.

ರಾಮುದಾಸನು ಮಹೋನ್ನತ ವೃಕ್ಷಗಳ ತಂಪಾದ ನೆರಳಿನಲ್ಲಿ ಮುಂದೆ ನಡೆದನು.

"ಹೇ **ರಾಮ**! ಇಂತಹ ನಿರ್ಜನಪ್ರದೇಶದಲ್ಲೂ ನೀನು ಸಂಗಡ ಇರುವುದನ್ನು ಅನುಭವಿಸುವುದು ರಾಮುದಾಸನ ಎಂಥ ಸುಯೋಗ" ಎಂದುಕೊಂಡನು ರಾಮುದಾಸ.

**ರಾಮನು** "ಓ ನನ್ನ ಕಂದ, ಇನ್ನು ಮುಂದೆ ನೀನು ಸರ್ವದಾ ನಾನು ನಿನ್ನ ಜೊತೆಯಲ್ಲೂ ನಿನ್ನಲ್ಲೂ ನಿನ್ನ ಸುತ್ತ ಇರುವುದರಲ್ಲಿಯೂ ಇರುವುದನ್ನು ಅನುಭವಿಸುತ್ತಿರುತ್ತೀಯೆ. ಸಂಪೂರ್ಣವಾಗಿ ನನ್ನಲ್ಲಿ ಐಕ್ಯವಾಗಿದ್ದೀಯೆ ಎಂಬ ಭಾವನೆ ನಿನಗೆ ಇರುವುದರಿಂದ ಈ ತಿಳುವಳಿಕೆಯನ್ನು ನಿನಗೆ ಕೊಟ್ಟಿದ್ದೇನೆ. (ನೀನೂ ನಾನೂ ಒಂದೇ") ಎಂದು ಧೈರ್ಯಕೊಟ್ಟನು.

ಇದನ್ನು ಕೇಳಿ ರಾಮುದಾಸನು ಪರಮಾನಂದದಿಂದ ನಕ್ಕನು. ಇನ್ನು ಅರ್ಧ ಮೈಲಿ ಸಾಗಿತು. ಆಗ ಅವನು ಇನ್ನೊಂದು ಕಿಬ್ಬರಿಗೆ ಬಂದನು. ಇದು ಹಿಂದಿನದಕ್ಕಿಂತ ಕಠಿಣವಾಗಿದ್ದಿತು; ಅಲ್ಲದೆ ಇಳಿಯೋಣವೆಂದರೆ ಕಾಲಿಡುವುದಕ್ಕೆ ಸ್ಥಳವೇ ಇರಲಿಲ್ಲ. ಇದು ನೇರವಾಗಿ ನಿಂತಿದ್ದ ನುಣುಪಾದ ಕಲ್ಲುಚಪ್ಪಡಿ.

ಇದನ್ನು ನೋಡಿ ರಾಮುದಾಸನು ಅರೆನಗೆ ನಗುತ್ತ,

"**ರಾಮ**, ಈಗ ನೀನು ಸಿಕ್ಕಿಕೊಂಡೆ. ಈ ಸಮಸ್ಯೆಯನ್ನು ನೀನು ಹೇಗೆ ಬಗೆಹರಿಸುತ್ತೀಯೆ ರಾಮುದಾಸನಿಗೆ ಸ್ವಲ್ಪ ತಿಳಿಸು" ಎಂದನು.

ತಕ್ಷಣ **ರಾಮನು** "ತಡೆತಡೆ! ನೀನೇನೋ ಬುದ್ಧಿವಂತ. ಆದರೆ ನೀನು ಎಷ್ಟೇ ಊಹಿಸುವುದಕ್ಕಿಂತ ಹೆಚ್ಚು ಬುದ್ಧಿ ನನಗಿದೆ. ಬಲಗಡೆ ನೋಡು. ನೆಲ ಇಳಿಜಾರಾಗಿದೆ. ಇಳಿವರಿ ಕಡಿದಾಗಿದ್ದರೂ ಆ ದಾರಿಯಲ್ಲಿ ಪ್ರಯತ್ನ ಮಾಡಿ ನೋಡು" ಎಂದನು.

ರಾಮುದಾಸನು ಆ ಕಡೆಗೆ ಹೋಗಿ ಒಂದೆರಡು ಸಲ ಕುಣಿದು, ನಗುತ್ತ, "**ರಾಮ** ನೀನೊಳ್ಳೆಯವನು. ಆದರೆ ಆದಾರಿ ಆಗುವುದಿಲ್ಲ. ನೋಡು, ಈ ಇಳಿಜಾರು ಕಡಿದಾಗಿರುವುದಲ್ಲದೆ ಪುಡಿ ಮಣ್ಣಿನಿಂದ ಮುಚ್ಚಿದೆ. ಅದರ ಮೇಲೆ ಕಾಲಿಡುವುದೇ ತಡ, ಜಾರುವುದು ನಿಜ. ರಾಮುದಾಸನು ಒಂದು ಸುತ್ತಿದ ಹಾಸಿಗೆಯಂತೆ ತಳಮುಟ್ಟುವವರೆಗೂ ಉರುಳುತ್ತಾನೆ. ಇದು ನಿನಗೆ ಇಷ್ಟವೇ ಹೇಗೆ?" ಎಂದನು.

**ರಾಮುನು** "ರಾಮುದಾಸ, ನಿನ್ನ ನಗುವೂ ಕುಣಿತವೂ ಸ್ವಲ್ಪ ಮುಂದಾದುವು. ನಾನು ನಿನಗೆ ಕೊಟ್ಟಿರುವ ಕಣ್ಣುಗಳನ್ನು ನೀನು ಸರಿಯಾಗಿ ಉಪಯೋಗಿಸುವ ಹಾಗೆ ಕಾಣುವುದಿಲ್ಲ. ಚನ್ನಾಗಿ ನೋಡು. ಇಳಿಜಾರಿನಲ್ಲಿ ಅಲ್ಲಲ್ಲೆ ಒಣಹುಲ್ಲಿನ ತೆಂಡೆಗಳು ಕಾಣುತ್ತವೆ. ಇವು ದಪ್ಪ ಜೊಂಡುಗಳ ಬೇರು. ಒಣಗಿರುವುದರಿಂದ ನೆಲದಂತೆ ತೋರುತ್ತವೆ. ಅದರೆ ನಿಟ್ಟಿಸಿ ನೋಡಿದರೆ ಅವು ಕಾಣುತ್ತವೆ. ಅವು ಭದ್ರವಾಗಿವೆ, ನಿನ್ನ ಭಾರವನ್ನು ತಡೆಯಬಲ್ಲವು. ತಡಮಾಡದೆ ಇಳಿ" ಎಂದು ನುಡಿದನು.

**ರಾಮುನ** ಮಾತು ಸರಿ : ಬೇರುಗಳಿದ್ದುವು. ರಾಮುದಾಸನು ಅದೇ ಪ್ರಕಾರ ಅಂಬೆ ಕಾಲಿಟ್ಟುಕೊಂಡು ಒಣಹುಲ್ಲಿನ ತೆಂಡೆಗಳ ಮೇಲೆ ಅಡಿಗಳನ್ನು ಆನಿಸಿ ಮೆಲ್ಲನೆ ಜಾರಿದನು. ಹತ್ತಿರ ಹತ್ತಿರ ಇಳುವರಿಯ ಕೊನೆಯನ್ನು ಸೇರಿದನು. ಇದರಾಚೆ ಒಂದು ಆಳವಾದ ಕಮರಿ ಇದ್ದಿತು; ಇಳುವರಿ ಇರಲಿಲ್ಲ. ರಾಮು ದಾಸನು ಈಗ ಇದ್ದ ಸನ್ನಿವೇಶ ಅತ್ಯಂತ ಕಠಿಣವಾಗಿದ್ದಿತು. ಅವನು ಇಳಿಜಾರು ಭೂಮಿಯ ಕೊನೆಗೆ ಇನ್ನು ಎರಡೇ ಗಜವಿದ್ದ ಸ್ಥಳವನ್ನು ಮುಟ್ಟಿದನು. ಒಂದು ಗಜ ಆಚೆಗೆ ಒಂದು ತೆಂಡೆಯ ಆಕಾರ ಬಹಳ ಮುಸುಕಾಗಿ ಕಾಣಿಸುತ್ತ ಒಂದುಂಗು ಟವನ್ನು ಮಾತ್ರ ಇಡಲು ಸ್ಥಳವಿದ್ದಿತು. ಈಗ ಜಾರುವುದನ್ನು ನಿಲ್ಲಿಸಿ ರಾಮು ದಾಸನು,

"**ರಾಮು,** ಮುಂದೆ ಹೇಗೆ ?" ಎಂದು ಪ್ರಶ್ನಿಸಿದನು.

**ರಾಮುನು** ತನ್ನ ಉಪಾಯಗಳನ್ನು ತಿಳಿಸಲು ಯಾವಾಗಲೂ ಸಿದ್ಧನಾಗಿ ದ್ದನು. "ನೋಡು ಮಗು ! ಇಳಜಾರಿನ ಅಂಚಿನ ಸಮುಕ್ಕೆ ಆಳದಿಂದ ಮೇಲಕ್ಕೆ ಇಣಿಕಿ ನೋಡುತ್ತಿರುವ ಒಂದು ರೆಂಬೆಯ ಕೊನೆ ಕಾಣಿಸುತ್ತದೆ. ಅದು ಸುಮಾರು ಅರ್ಧ ಅಂಗುಲ ದಪ್ಪವಿದೆ. ಹುಲ್ಲಿನ ಬೇರಿನ ಸಹಾಯದಿಂದ ಒಂದು ಗಜ ಜಾರಿ ಅದನ್ನು ಕಾಲಿನಲ್ಲಿ ಹಿಡಿ, ಮುಂದೇನು ಮಾಡಬೇಕೆಂಬುದು ನಿನಗೆ ಗೊತ್ತಾ ಗುತ್ತದೆ" ಎಂದು ಹೇಳಿದನು.

ರಾಮುದಾಸನು **ರಾಮುನ** ಸಲಹೆಯನ್ನು ಅನುಸರಿಸಿ ಆ ರೆಂಬೆಯ ಕೊನೆ ಯನ್ನು ಕಪಿಯಂತೆ ತನ್ನ ಎಡಕಾಲ ಉಂಗುಟ ಮತ್ತು ಅದರ ಮಗ್ಗಲು ಬೆರಳು ಗಳಿಂದ ಹಿಡಿದುಕೊಂಡನು. ಸತ್ಯವಾಗಿ ಈಗ ರಾಮುದಾಸನಿಗೆ ಶ್ರೀರಾಮಚಂದ್ರನ ಮಹಾಭಕ್ತ ಆಂಜನೇಯನ ಜ್ಞಾಪಕ ಬಂದಿತು. ಅವನಿಗೆ ಅವನ ಶರೀರ ಗರಿಯಂತೆ ಹಗುರವಾಗಿ ಕಾಣಿಸಿತು. ಈ ರೆಂಬೆಯ ತುದಿಯಲ್ಲಿ ಒಂದು ಕಾಲನ್ನು ನಿಲ್ಲಿಸಿ ಅವನು ಇನ್ನೊಂದು ಕಾಲನ್ನು ಹುಲ್ಲ ತೆಂಡೆಯಿಂದ ಎತ್ತಿದನು. ಕೆಲವು ಕ್ಷಣಗಳ ಕಾಲ ಶರೀರಾದ್ಯಂತವೂ ಒಂದೇ ಕಾಲಿನ ಆಧಾರದ ಮೇಲೆ ತೂಗಿ ದ್ದಿತು. ರಾಮುದಾಸನು ಈಗ ಮೈಯ್ಯನ್ನು ಕುಗ್ಗಿಸಿ ಮುದಿಸಿಕೊಂಡು ಕೈ

ಳಿಂದಲೂ ಆ ರೆಂಬೆಯನ್ನು ಹಿಡಿದನು. ಇಷ್ಟು ಹೊತ್ತೂ ಆ ಸಣ್ಣ ರೆಂಬೆ ತೀರಾ ಭಯಂಕರವಾಗಿ ಪಕ್ಕದಿಂದ ಪಕ್ಕಕ್ಕೆ ಅಲ್ಲಾಡುತ್ತಿದ್ದಿತು.

ಆಗ ರಾಮದಾಸನು ಕೆಳಕ್ಕೆ ಬಗ್ಗಿ ನೋಡಿದನು. ಕಂದರದ ಆಳ ಅಗಾಧ ವಾಗಿದ್ದಿತು.

ಉಫೇ **ರಾಮ** ! ನೀನು ಮಾಟಗಾರ. ರಾಮದಾಸನು ನಿಂತಿದ್ದ ಆ ರೆಂಬೆ ಆ ಕಂದಕದ ತಳದಿಂದ ಬೆಳೆದು ಬಂದಿದ್ದ ಎತ್ತರವಾದ ಒಂದು ಮರದ ಕೊನೆ. ಅವನು ಮೆಲ್ಲಗೆ ಇಳಿಯುತ್ತ, ಕ್ರಮವಾಗಿ ಸ್ವಲ್ಪ ದಪ್ಪನಾದ ಕೊಂಬೆಗಳ ಮೇಲೆ ಕಾಲಿಟ್ಟನು. ಇಲ್ಲಿಂದಾಚೆಗೆ ಇಳಿಯುವುದು ಸುಲಭವಾಯಿತು. ಆ ಮರವು ನಿಜಕ್ಕೂ ವನವೃಕ್ಷಗಳಲ್ಲಿ ಬಲಭೀಮ. ಅದು ಎಷ್ಟು ಎತ್ತರ ಎಂದರೆ ಅಷ್ಟು ಎತ್ತರದ ಮರವನ್ನು ರಾಮದಾಸನು ಹಿಂದೆ ನೋಡಿಯೇ ಇರಲಿಲ್ಲ. ಕೊನೆಗೆ ಇವನು ಸುರಕ್ಷಿತವಾಗಿ ನೆಲವನ್ನು ಮುಟ್ಟಿದನು. ಆಗ ರಾಮದಾಸನನ್ನು ಹುಚ್ಚ ನನ್ನು ಮಾಡಿ **ರಾಮನು** ಗಹಗಹಿಸಿ ನಕ್ಕನು. ರಾಮದಾಸನು ಬಾಯಿ ಮುಚ್ಚಿ ಕೊಂಡಿದ್ದನು. ಪ್ರತಿ ಸಲವೂ ರಾಮದಾಸನು ಸೋತನು. **ರಾಮನ** ಕೈ ಮೇಲಾಗಿದ್ದಿತು.

ಮತ್ತೆ ರಾಮದಾಸನಿಗೆ ಒಂದು ಗುಹೆ ಕಾಣಿಸಿತು. ಅವನು ಅದರೊಳಕ್ಕೆ ಹೋಗಿ "ಹರಿಃ ಓಂ" ಎಂದು ಘಟ್ಟಿಯಾಗಿ ಕೂಗಿದನು. ಪ್ರತ್ಯುತ್ತರ ಏನೂ ಬರಲಿಲ್ಲ. ಇಲ್ಲಿಂದ ಮುಂದಕ್ಕೆ ಅವನು ಹಲವು ಇಳುವರಿಯನ್ನು ಇಳಿಯಬೇಕಾ ಯಿತು. ಆದರೆ ಅದು ಕಷ್ಟವಾಗಲಿಲ್ಲ. ಅವನು ಈಗ ಕಲ್ಲುಗಳ ಮೇಲೆ ಹಾರುತ್ತ ಕುಪ್ಪಳಿಸುತ್ತ ಪೂರ್ಣವೇಗದಿಂದ ಓಡಿದನು. ಕೊನೆಗೆ ಅವನು ಹಠಾತ್ತಾಗಿ ಗಂಗಾನದಿಯ ದಡವನ್ನು ಮುಟ್ಟಿದನು. ಇಲ್ಲಿ ಅವನು ನದಿಗೆ ಚಾಚಿಕೊಂಡಿರುವ ಒಂದು ಕಲ್ಲಿನ ಅಂಚಿನಲ್ಲಿ ಒಂದು ಸಣ್ಣ ಸಾಹಸ ಕಾರ್ಯವನ್ನು ಮಾಡಬೇಕಾ ಯಿತು. ಆ ಮೇಲೆ ಅವನು ಮರಳ ದಿಬ್ಬದ ಮೇಲೆ ಫುಲ್‌ಚಟ್ಟಿ ಎಂಬ ಗ್ರಾಮ ಸಿಕ್ಕುವವರೆಗೂ ಜಾಗ್ರತೆ ನಡೆದನು. ಫುಲ್‌ಚಟ್ಟಿಯಲ್ಲಿ ಪಂಜಾಬಿ ಸಾಧುಗಳು ನಡೆಯಿಸುತ್ತಿದ್ದ ಒಂದು ಧರ್ಮಶಾಲೆ ಇದ್ದಿತು. ರಾಮದಾಸನು ಓಡುತ್ತ ಕಟ್ಟಡದ ಕಡೆಗೆ ಹೋದಾಗ ಒಬ್ಬ ತರುಣ ಸಂನ್ಯಾಸಿ ಅವನನ್ನು ತೋಳುಚಾಚಿ ಬರಮಾಡಿ ಕೊಂಡನು. ರಾಮದಾಸನನ್ನು ಸ್ಪಷ್ಟವಾಗಿ ತನ್ನ ತೋಳುಗಳಲ್ಲಿ ತೆಗೆದುಕೊಂಡು ಎಂದೋ ಕಳೆದುಕೊಂಡಿದ್ದ ಸಹೋದರನನ್ನೋ ಅಥವ ಮಗುವನ್ನೋ ಮರಳಿ ಕಂಡವನಂತೆ ಬಾಚಿ ಅಪ್ಪಿಕೊಂಡನು.

ಅವನು ರಾಮದಾಸನನ್ನು ಧರ್ಮಶಾಲೆಯೊಳಗೆ ಕರೆದುಕೊಂಡು ಹೋಗಿ, ಅವನನ್ನು ಆಸನದ ಮೇಲೆ ಕುಳ್ಳಿರಿಸಿ, ಕಾಲನ್ನು ಒತ್ತಿ, ನಂತರ ಅತ್ಯಂತ ಪ್ರೀತಿ ಯಿಂದ ಹೊಟ್ಟೆ ತುಂಬ ಊಟ ಮಾಡಿಸಿದನು. **ರಾಮ** ! ಎಲ್ಲೆಲ್ಲಿಯೂ ಕಾಣಿ ಸುವ ಶಾಶ್ವತವಾದ ಪ್ರೀತಿಯೇ ! ಇದೆಲ್ಲ ನಿನ್ನ ವ್ಯಾಪಾರ.

ಫುಲ್‌ಚಟ್ಟಿಯಿಂದ ಅದೇ ಸಾಯಂಕಾಲ ಹೊರಟು, ರಾಮುದಾಸನು ಸ್ವರ್ಗಾಶ್ರಮಕ್ಕೆ ನಡೆದನು. ಅದು ಅಲ್ಲಿಂದ ಎರಡು ಮೈಲಿಗಳ ದೂರದಲ್ಲಿದ್ದಿತು. ಕತ್ತಲಾಗುವುದಕ್ಕೆ ಮುಂಚೆ ರಾಮುದಾಸನು ಅಲ್ಲಿ ಮುಟ್ಟಿದನು.

---

# ಅಧ್ಯಾಯ ೩೧

## ಸ್ವರ್ಗಾಶ್ರಮ-ಹರಿದ್ವಾರ

### (i) ರಾಮುದಾಸನು ಸೋತು ಸುಮ್ಮನಾದನು

ರಾಮುದಾಸನು ಸ್ವರ್ಗಾಶ್ರಮವನ್ನು ಸೇರಿದ ಮೇಲೆ ಅವನು ವಶಿಷ್ಠಾಶ್ರಮಕ್ಕೆ ಹೊರಡುವುದಕ್ಕೆ ಮುಂಚೆ ಆ ಇಬ್ಬರು ಸ್ನೇಹಿತರೊಂದಿಗೆ ತಾನು ತಂಗಿದ್ದ ದೊಡ್ಡ ಕುಟಿಗೆ ನೇರವಾಗಿ ಹೋದನು. ಆದರೆ ಅದಕ್ಕೆ ಬೀಗ ಹಾಕಿದ್ದಿತು. ಆ ರಾತ್ರಿಯನ್ನು ಪಾಳುಬಿದ್ದಿದ್ದ ಇನ್ನಾವುದೋ ಕುಟಿಯಲ್ಲಿ ಕಳೆದನು. ಈ ಕುಟಿ ಎನ್ನುವುದು ಎರಡು ಗೋಡೆ, ಅವುಗಳ ಮೇಲೆ ತಗಡಿನ ಛಾವಣಿ ಇಷ್ಟು ಮಾತ್ರ. ರಾತ್ರಿ ಬಹಳ ಚಳಿಯಾಗಿದ್ದಿತು. ಹಿಮದ ಗಾಳಿ ಪಾಳುಬಿದ್ದಿದ್ದ ಕುಟಿ ಒಳಗೆ ನುಗ್ಗಿ ಬೀಸುತ್ತಿದ್ದಿತು. ರಾತ್ರಿ ಕಳೆಯಿತು. ಮರುದಿನವೂ ದೊಡ್ಡ ಕುಟಿಯ ಬಾಗಿಲು ಮುಚ್ಚಿ ಬೀಗ ಹಾಕಿಯೇ ಇದ್ದಿತು.

ರಾಮುದಾಸನು ರಾತ್ರಿ ನಿಂತ ಕುಟಿಯ ಸಾಲಿನಲ್ಲಿ ಇನ್ನೊಂದು ಕುಟಿ ಇದ್ದಿತು. ಅದರಲ್ಲಿ ಒಬ್ಬ ಮಹಾರಾಷ್ಟ್ರದ ವೃದ್ಧಸಾಧುವಿದ್ದನು. ರಾಮುದಾಸನು ಹಿಂದೆ ಇಲ್ಲಿ ಇದ್ದಾಗ ಇವನಿಗೆ ರಾಮುದಾಸನ ಪರಿಚಯ ಆಗಿದ್ದಿತು. ಆತನು ರಾಮುದಾಸನಿಗೆ, ರಾಮುಚರಣದಾಸನೂ ಭವಾನೀಶಂಕರರಾಯನೂ ಕೆಲವು ದಿನಗಳ ಹಿಂದೆ ಪ್ರಯಾಣ ಮಾಡಿದುದಾಗಿಯೂ, ರಾಮುಚರಣದಾಸನು ಕುಟಿಗೆ ಬೀಗ ಹಾಕಿದ್ದಾಗಿಯೂ ತಿಳಿಸಿದನು. ಆತನು ರಾಮುದಾಸನನ್ನು ತನ್ನ ಕುಟಿಯಲ್ಲಿ ನಿಲ್ಲಿಸಿಕೊಳ್ಳಲು ಬಹಳವಾಗಿ ಬಯಸಿದನು. ರಾಮುದಾಸನು ಅವನ ಆತಿಥ್ಯವನ್ನು ಸ್ವೀಕರಿಸಿದನು. ಅವನ ಆ ಕುಟಿ ಹತ್ತು ಅಡಿ ಉದ್ದ ನಾಲ್ಕು ಅಡಿ ಅಗಲ ಮಾತ್ರ ಇದ್ದಿತು. ಕುಟಿಯ ಅಗಲಕ್ಕೂ ಎತ್ತರವಾದ ಮಣ್ಣುಜಗುಲಿ ಇದ್ದಿತು. ಕುಟಿಯ ಏಕಮಾತ್ರ ನಿವಾಸಿಗೆ ಇದು ಕುಳಿತುಕೊಳ್ಳಲೂ ಮಲಗಲೂ ಸ್ಥಳ. ಆ ದಯಾಳುಸಾಧು ರಾಮುದಾಸನನ್ನು ಈ ಜಗುಲಿಯ ಮೇಲೆ ಮಲಗಬೇಕೆಂದು ಒತ್ತಾಯಪಡಿಸಿ ತಾನಾದರೋ ರಾಮುದಾಸನ ಕಾಲ ಬಳಿ ನೆಲದ ಮೇಲೆ ಮಲಗಿ ಕುಳಿತು ಮಾಡಿದನು. ಈ ಸಾಧು ಕುಳ್ಳು. ಇವನಿಗೆ ಗಾಂಜಾ

ಸೇವನೆಯ ಚಟ. ಈತನ ಸಾಧನೆ ಶ್ರೀ ದತ್ತಾತ್ರೇಯರ ಸಂಸ್ಕೃತ ಅವಧೂತ ಗೀತೆಯನ್ನು ದಿನಕ್ಕೆ ಎರಡು ಸಲ ಪಾರಾಯಣ ಮಾಡುವುದು.

ಭಿಕ್ಷಕ್ಕಾಗಿ ಇಬ್ಬರೂ ಮಧ್ಯಾಹ್ನ ಅನ್ನಕ್ಷೇತ್ರಕ್ಕೆ ಹೋಗುತ್ತಿದ್ದರು. ರಾಮದಾಸನಿಗೆ ಎಂದೂ ದಿನಕ್ಕೆ ಒಂದು ಊಟ ಸಾಕಾಗುತ್ತಿದ್ದಿತು. ಸಾಧುವಿನ ಸಂಗತಿಯೂ ಹಾಗೆಯೇ ಇದ್ದಿತು.

ಕುಂಭ ಮೇಳಕ್ಕಾಗಿಯೂ, ಸಮೀಪಿಸುತ್ತಿದ್ದ ಬದರೀನಾಥ ಕೇದಾರನಾಥದ ಯಾತ್ರೆಗಾಗಿಯೂ ನಿಯತವಾದ ಕಾಲಕ್ಕೆ ಮುಂದಾಗಿಯೇ ಯಾತ್ರಿಕರ ಸಂಖ್ಯೆ ಅಸಾಧಾರಣವಾಗಿ ಹೆಚ್ಚಿತು. ಅವರು ಕುಟಿಯಲ್ಲಿದ್ದ ಸಾಧುಗಳ ದರ್ಶನಕ್ಕಾಗಿ ಸ್ವರ್ಗಾಶ್ರಮದಲ್ಲೆಲ್ಲಾ ಅಲೆದಾಡುತ್ತಿದ್ದರು. ಸಾಧುಗಳಿಗೆ ತಿಂಡಿ ಬಟ್ಟೆ ಮತ್ತು ದುಡ್ಡುಗಳನ್ನು ದಾನ ಮಾಡುತ್ತಿದ್ದರು. ದರ್ಶನಾನಂತರ ಕುಟಿಯನ್ನು ಬಿಟ್ಟು ಹೋಗುವ ಮುನ್ನ ಈ ಭಕ್ತಯಾತ್ರಿಕರು ತಾವು ತಂದಿದ್ದ ಪದಾರ್ಥಗಳನ್ನು ಕುಟಿಯಲ್ಲಿ ಹಾಕಿ ಹೋಗುತ್ತಿದ್ದರು. ಅವರು ವಿಶೇಷವಾಗಿ ಕಾಸನ್ನೇ ಎಸೆದು ಹೋಗುವರು. ದಿನ ಒಂದಕ್ಕೆ ಸೇರಿಸಿದ ಕಾಸು ಹತ್ತು ಹನ್ನೆರಡು ಆಣೆ ಆಗುತ್ತಿದ್ದಿತು. ಸಾಧು ಇದನ್ನು ಜೋಳಿಗೆಯಲ್ಲಿ ಜೋಪಾನ ಮಾಡುತ್ತಿದ್ದನು.

ಈ ದುಡ್ಡನ್ನು ತೆಗೆದುಕೊಂಡು ಸಾಧು ಆಶ್ರಮದ ಹೊರಗಿನ ಸಣ್ಣಪೇಟೆಗೆ ಹೋಗಿ ಹಾಲು, ಚಹ ಎಲೆ, ಸಕ್ಕರೆ, ತಿಂಡಿ, ಇವುಗಳನ್ನು ಕೊಂಡುಕೊಂಡು ಬರುವನು. ಹೀಗೆ ಈ ಭಿಕ್ಷದಿಂದ ಎರಡು ಹೊತ್ತು ಚಹಪಾನವನ್ನು ತಯಾರಿಸುತ್ತಿದ್ದನು. ಪ್ರತಿದಿನವೂ ಚಹ ಪದಾರ್ಥಗಳನ್ನು ತಂದು ಚಹ ತಯಾರ್ಮಾಡುವುದರಲ್ಲಿಯೇ ಈ ಸಾಧುವಿನ ಜೀವನ ಕಳೆಯುತ್ತಿರುವುದು ರಾಮದಾಸನಿಗೆ ಕಂಡಿತು. ಇದರಿಂದ ಅವನ ಪ್ರತಿದಿನದ ಅವಧೂತಗೀತೆಯ ಪಾರಾಯಣವೂ ನಿಲ್ಲಬೇಕಾಯಿತು.

ದಿನ ಕಳೆದ ಹಾಗೆ ಕಾಸು ಮಳೆಯಾಗಿಯೆ ಸುರಿಯಲು ಮೊದಲಾಯಿತು. ಕೆಲವು ವೇಳೆ ಬೆಳ್ಳಿಯ ನಾಣ್ಯಗಳೂ ಇರುತ್ತಿದ್ದವು. ಪ್ರತಿ ದಿನವೂ ಖರ್ಚು ಕಳೆದು ದುಡ್ಡು ಉಳಿಯುತ್ತಿದ್ದಿತು. ಜೋಳಿಗೆ ದಿನದಿನಕ್ಕೂ ಭಾರವಾಗುತ್ತ ಬಂದಿತು. ಬಾಲ ಸುಟ್ಟುಕೊಂಡ ಬೆಕ್ಕಿನ ಹಾಗೆ ಸಾಧು ಹುಚ್ಚಾಪಟ್ಟೆ ಓಡಾಟದಲ್ಲಿ ಬಿದ್ದನು.

ರಾಮದಾಸನಿಗೆ ಇದನ್ನು ನಿಲ್ಲಿಸಬೇಕೆಂದು ಮನಸ್ಸಾಯಿತು. ಅವನು ಸಾಧುವಿನೊಂದಿಗೆ ದುಡ್ಡಿನ ವಿಚಾರವಾಗಿ ಮುಚ್ಚುಮರೆಯಿಲ್ಲದೆ ಮಾತನಾಡಿದನು.

''ಸಾಧುಜಿ! ಭಗವಂತನು ನಮಗೆ ಈ ಕುಟಿಯಲ್ಲಿ ನೆರಳನ್ನು ಕೊಟ್ಟಿದಾನೆ. ಒಂದು ಹೊತ್ತು ಊಟವನ್ನು ಒದಗಿಸಿದ್ದಾನೆ. ನಮ್ಮ ಕಾಲವನ್ನೆಲ್ಲ ಅವನ ಸ್ಮರಣೆಯಲ್ಲೇ ಕಳೆಯಬೇಕೆಂದು ಅವನ ಇಚ್ಛೆ. ಆದರೆ ನಮ್ಮ ನಡವಳಿಕೆ

ಹೇಗಿದೆ? ಚಹ ತಿಂಡಿ ಊಟ ಇವು ನಮ್ಮ ಜೀವನದ ಏಕಮಾತ್ರ ಧ್ಯೇಯ ಆಗಿವೆ. (ಸಾಧುಗಳಿಗೂ ಹಣಕ್ಕೂ ಸಂಬಂಧ ಇಲ್ಲವೆಂದು ನಿನಗೆ ಗೊತ್ತಿದೆ.) ದೇಹದ ಅವಶ್ಯಕತೆಗಳಿಗೆ ಸಾಕಾಗಿ ಹಣ ಮಿಕ್ಕ ಕೂಡಲೇ ಅದನ್ನು ಯಾವರೀತಿ ವೆಚ್ಚಮಾಡಬೇಕೆಂಬ ಯೋಚನೆ ಬರುತ್ತದೆ. ಕೂಡಲೆ ಪೇಟೆಗೆ ಓಡುತ್ತೇವೆ. ಅವಶ್ಯಕವಿಲ್ಲದ ಪದಾರ್ಥಗಳನ್ನು ಕೊಳ್ಳುತ್ತೇವೆ. ಭ್ರಾಂತಿಯ ಚಟುವಟಿಕೆಯ ಸುಳಿಯಲ್ಲಿ ಸಿಕ್ಕಿಕೊಳ್ಳುತ್ತೇವೆ. ಆದುದರಿಂದ ನಾವು ಇನ್ನು ಮುಂದೆ ಜನರಿಂದ ದುಡ್ಡನ್ನು ತೆಗೆದುಕೊಳ್ಳಕೂಡದು. ಕೊಡಬೇಡಿ ಎಂದು ಅವರನ್ನು ಕೇಳಿ ಕೊಳ್ಳೋಣ. ಈಗ ಎಷ್ಟು ಹಣ ಸೇರಿದೆ, ನೋಡೋಣ ”

ಮೊದಲು ಸಾಧುವಿಗೆ ಈ ಸಲಹೆ ಒಪ್ಪಾಗಲಿಲ್ಲ. ಕೊನೆಗೆ ರಾಮುದಾಸನು ತನ್ನ ಸಂಗ ಬೇಕೋ ದುಡ್ಡು ಬೇಕೋ ಯಾವುದನ್ನಾದರೂ ಆರಿಸಬಹುದೆಂದು ಕೇಳಿದಾಗ, ಅವನು ಒಪ್ಪಿಕೊಂಡನು. ಗೂಟದ ಮೇಲಿದ್ದ ಜೋಳಿಗೆಯನ್ನು ಇಳಿಸಿ ದುಡ್ಡನ್ನು ಸುರಿದನು. ಅದು ಒಟ್ಟು ಸುಮಾರು ಐದು ರೂಪಾಯಿನಷ್ಟು ಇದ್ದಿತು. ಬಹಳವೆಲ್ಲ ತಾಮ್ರದ ನಾಣ್ಯ. ಸಾಧುವಿಗೆ ತತ್ಕಾಲಕ್ಕೆ ಹಣದ ವಿಷಯ ರಾಮುದಾಸನ ಮಾತು ಸರಿಯಾದುದೆಂದು ನಂಬಿಕೆಯಾಯಿತು.

ಅವನು “ಈ ದುಡ್ಡನ್ನು ಏನು ಮಾಡೋಣ? ಯಾರಾದರೂ ಸಾಧುಗಳಿಗೆ ಕೊಡೋಣವೇ?” ಎಂದು ಪ್ರಶ್ನಿಸಿದನು.

ರಾಮುದಾಸನು “ನಿನಗೆ ಕೆಟ್ಟುದೆಂದು ಕಂಡ ಪದಾರ್ಥವನ್ನು ಇನ್ನೊಬ್ಬ ಸಾಧುವಿಗೆ ಕೊಡುವುದು ಹೇಗೆ?” ಎಂದು ಟೀಕೆ ಮಾಡಿದನು.

ಸಾಧು, “ಹಾಗಾದರೆ ಏನು ಮಾಡಬೇಕು?” ಎಂದು ಪ್ರಶ್ನಿಸಿದನು.

ರಾಮುದಾಸ, “ದುಡ್ಡನ್ನು ಬಿಸುಟು ಅದರ ಸಂಬಂಧವನ್ನು ಹರಿಯುವುದು ಒಂದೇ ದಾರಿ” ಎಂದನು.

ಈ ಸಲಹೆಯನ್ನು ಕೇಳಿ ಸಾಧು ಆಶ್ಚರ್ಯದಿಂದ ರಾಮುದಾಸನ ಕಡೆ ಕಣ್ಣನ್ನು ಅರಳಿಸಿದನು.

“ಬಾ, ನಾಣ್ಯವನ್ನು ತೆಗೆದುಕೊ” ಎನ್ನುತ್ತ ರಾಮುದಾಸನು ಹೊರಗೆ ನಡೆದನು. ಸಾಧು ಸುಮ್ಮನೆ ಹಿಂದೆ ಬಂದನು. ರಾಮುದಾಸನು ಎರಡು ಕೈಯಲ್ಲಿಯೂ ನಾಣ್ಯ ತುಂಬಿಕೊಂಡಿರುವ ಸಾಧುವನ್ನು ಮುಳ್ಳು ತುಂಬಿ ಹೆಣೆದುಕೊಂಡಿರುವ ಒಂದು ಪೊದೆಯ ಬಳಿಗೆ ಕರೆದುಕೊಂಡು ಹೋದನು. ಪೊದೆಯೊಳಕ್ಕೆ ಹೋಗುವುದು ಯಾರಿಗೂ ಅಸಾಧ್ಯ.

ರಾಮುದಾಸನು ಸಾಧುವಿಗೆ “ಈಗ ಆ ದುಡ್ಡನ್ನು ಎಸೆದುಬಿಡು” ಎಂದು ತಿಳಿಸಿದನು.

ಒಂದೇ ಎಸೆತಕ್ಕೆ ದುಡ್ಡೆಲ್ಲಾ ಪೊದೆಯೊಳಕ್ಕೆ ಹೋಗಿ ಅದೃಶ್ಯವಾಯಿತು. ಅವರು ಆ ಮೇಲೆ ಕುಟಿಗೆ ಹಿಂದಿರುಗಿದರು. ಇದಾದದ್ದು ಸಂಜೆ. ಮಾರನೆಯ ದಿನ ಎಂದಿನಂತೆ ಯಾತ್ರಿಕರು ತಮ್ಮ ಸೋಲು ಕಾಣದ ಸಾಧುಅನ್ವೇಷಣದಲ್ಲಿ ಬಂದರು. ಹಿಂದೆ ಬಂದದಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ಬಂದರು. ದುಡ್ಡನ್ನು ಕೊಡಬಾರದೆಂದು ರಾಮದಾಸನೂ ಸಾಧುವೂ ಅವರನ್ನು ಬೇಡಿಕೊಂಡರು. ಇವರು ಬೇಡಿದ್ದನ್ನು ಕೇಳದೆ ಅವರು ವಾಡಿಕೆಯಂತೆ ದುಡ್ಡನ್ನು ಕೋಣೆಯ ಬಾಗಿಲಲ್ಲಿ ಕೆಳಗೆ ಎಸೆದರು. ಈ ಸಲ ತಾಮ್ರದ ನಾಣ್ಯಗಳು ಮಾತ್ರವಲ್ಲದೆ ಬೆಳ್ಳಿಯ ರೂಪಾಯಿಗಳೂ ಉರುಳಿದುವು. ಸಾಯಂಕಾಲ ಎಣಿಸಿದರೆ ಬರುವಳಿ ಅನೇಕ ರೂಪಾಯಿಗಳಾಗಿದ್ದಿತು.

ರಾಮದಾಸನು ಸೋತು ಈ ವಿಷಯದಲ್ಲಿ ಸುಮ್ಮನಾದನು. ಅದು **ರಾಮ ನಿಚ್ಛೆ**. ಸಾಧು ಪೂರ್ವದಂತೆ ಹಣದ ವಿಷಯ ಏನೂ ನಡೆದಿರಲಿಲ್ಲವೆಂಬ ರೀತಿ ಚಹ ತಯಾರ್ಮಾಡುವುದರಲ್ಲಿಯೂ ಸೇರಿಸಿದ ಕಾಸಿನಿಂದ ಸಾಮಗ್ರಿಯನ್ನು ಕೊಂಡಿಡುವುದರಲ್ಲಿಯೂ ನಿರತನಾದನು.

## (ii) ಕುಂಭಮೇಳ

ಕುಂಭಮೇಳದ ಮುಖ್ಯ ದಿನ ಹತ್ತಿರವಾಯಿತು. ಬೆಳಗಾದರೆ ಈ ಉತ್ಸವ. ಹರಿದ್ವಾರದಲ್ಲಿ ನಡೆಯುವ ಈ ಪರಿಷೆಗೆ ಹೋಗುವ ಅಭಿಲಾಷೆ ಏನಾದರೂ ಇದೆಯೆ ಎಂದು ರಾಮದಾಸನು ಸಾಧುವನ್ನು ಕೇಳಿದನು. ಮಾರನೆಯ ದಿನದ ಮಹದುತ್ಸವದಲ್ಲಿ ತಾನು ಇರಬೇಕೆಂದು ಆತನಿಗೆ ತುಂಬಾ ಆಸೆ ಇರುವಂತೆ ಕಂಡಿತು. ಅವನು ತನ್ನ ಜೊತೆಗೆ ರಾಮದಾಸನನ್ನು ಕರೆದನು. ಈ ತಮಾಷೆ ಯನ್ನು ನೋಡಬೇಕೆಂದು ರಾಮದಾಸನಿಗೂ ಅಭಿಲಾಷೆಯಾಯಿತು. ಇಲ್ಲಿ ತುಂಬಾ ತಮಾಷೆ ದೊರೆತೇ ದೊರೆಯಿತೆನ್ನುವುದು ಮುಂದೆ ವಿವರಿಸುವ ಸಂಗತಿ ಯಿಂದ ವಿಶದವಾಗುತ್ತದೆ.

ಇವರು ಮಧ್ಯಾಹ್ನ ಹೊರಟರು. ಸ್ವರ್ಗಾಶ್ರಮದಲ್ಲಿ ಸದಾ ವಾಸಿಸುತ್ತಿದ್ದ ಮತ್ತೊಬ್ಬ ವೃದ್ಧ ಸಾಧುವೂ ಇವರ ಜೊತೆಗೆ ಸೇರಿದನು. ರಾತ್ರಿ ಸ್ವರ್ಗಾಶ್ರಮ ದಿಂದ ಏಳು ಮೈಲಿ ದೂರವಿರುವ ಸತ್ಯನಾರಾಯಣಚಟ್ಟಿ ಎಂಬ ಸ್ಥಳದಲ್ಲಿ ನಿಂತರು. ಮಾರನೆಯ ದಿನ ಮಧ್ಯಾಹ್ನ ಊಟ ತೀರಿಸಿಕೊಂಡು ಹರಿದ್ವಾರಕ್ಕೆ ನಡೆದು ಸಾಯಂಕಾಲ ಸುಮಾರು ಐದು ಗಂಟೆಗೆ ಅಲ್ಲಿ ಮುಟ್ಟಿದರು. ಗಂಗಾ ನದಿಯ ಉಭಯ ಪಾರ್ಶ್ವವೂ ನರಜಂತುವಿನ ಸಮುದಾಯದ ತಳಮಳವನ್ನು ತೋರುತ್ತಿದ್ದಿತು. ಸುತ್ತಲೆಲ್ಲ ಮೈಲಿಗಟ್ಲೆದೂರ ಪ್ರತಿಯೊಂದು ಮೂಲೆ ಯಲ್ಲಿಯೂ ಸಾಧುಗಳು ಯಾತ್ರಿಕರು ತುಂಬಿದ್ದರು. ಅದೊಂದು ಅಸಾಧ್ಯ

ಜನಸಂದಣಿ. ಮೇಳಕ್ಕಾಗಿ ಹದಿಮೂರು ಲಕ್ಷಕ್ಕೆ ಮೇಲ್ಪಟ್ಟು ಗುಂಪು ಸೇರಿದ್ದಿತೆಂದು ಜನರು ಹೇಳಿಕೊಂಡರು.

ಈ ಸಾಧುಗಳು ಎದುರು ದಡದಲ್ಲಿ ಯಾತ್ರಿಕರ ಎರಡು ಗುಂಪಿನ ಮಧ್ಯೆ ತಾವೂ ಹೇಗೋ ನುಗ್ಗಿ ಸ್ಥಳ ಮಾಡಿಕೊಂಡರು. ಮುಹೂರ್ತ ಎಂದರೆ ಬ್ರಹ್ಮ ಕುಂಡದಲ್ಲಿ ಸ್ನಾನಮಾಡುವುದಕ್ಕೆ ಲಗ್ನ ಸಮರಾತ್ರಿ ಕಳೆದು ನಾಲ್ಕು ಗಂಟೆ. ಈ ಮುಹೂರ್ತದಲ್ಲಿ ಆ ಕುಂಡದಲ್ಲಿ ಸ್ನಾನ ಮಾಡುವವರು ಅಮರರಾಗುವರೆಂದು ಜನರ ನಂಬಿಕೆ. ಅಷ್ಟು ಸುಲಭವಾದ ಮಾರ್ಗದಲ್ಲಿ ಅಮರತ್ವವನ್ನು ಸಂಪಾದಿಸಬಹುದೆಂಬುದನ್ನು ರಾಮದಾಸನು ಮೆಚ್ಚಲಿಲ್ಲ, ಅದನ್ನು ನಂಬಲೂ ಇಲ್ಲ. ಅವಶ್ಯಕವಾದ ಶ್ರಮಸಾಧನಗಳಲ್ಲಿ ಹಾಯಿಸಿ ಭಗವಂತನು ರಾಮದಾಸನಿಗೆ ಆಗಲೇ ಆ ಅತ್ಯಂತ ಅನುಗ್ರಹವನ್ನು ದಯಪಾಲಿಸಿದ್ದನು. ರಾಮದಾಸನು ಅಲ್ಲಿಗೆ ಹೋದದ್ದು ಅಲ್ಲಿ ಲಕ್ಷಾಂತರಗಟ್ಟಲೆ ಜನರ ಮೇಳವನ್ನು ನೋಡುವುದಕ್ಕಷ್ಟೆ. ಆ ಮಹತ್ತರವಾದ ಜನಸಂದಣಿಯನ್ನು ನೋಡಿದ್ದೇ ರಾಮದಾಸನನ್ನು ಆನಂದಪರವಶನಾಗಿ ಮಾಡಿತು.

ಹನ್ನೆರಡು ಗಂಟೆಯ ವರೆಗೂ ಜನಸ್ತೋಮ ನದಿಯ ದಂಡೆಯ ಮೇಲೆ ಸುಮ್ಮನೆ ಬಿದ್ದಿದ್ದಿತು. ಆಗ ಸಮುದ್ರದಲ್ಲಿ ಏಳುವ ದೊಡ್ಡ ಅಲೆಗಳಂತೆ ಜನಗಳ ಚಲನಕ್ಕೆ ಅರಂಭವಾಯಿತು. ಸಾವಿರಾರು ಜನ ಯಾತ್ರಿಕರು ತಮ್ಮ ಬಯಕೆಯ ಬ್ರಹ್ಮಕುಂಡದ ಕಡೆಗೆ ನುಗ್ಗಿದರು. ಇಬ್ಬರು ಸಾಧುಗಳೂ ರಾಮದಾಸನೂ ದೊಂಬಿಯಲ್ಲಿ ಸೇರಬೇಕಾಯಿತು. ಸಾಧುಗಳು ಬೇರೆಬೇರೆಯಾಗದಂತೆ ಒಬ್ಬರ ಕೈಯನ್ನು ಒಬ್ಬರು ಹಿಡಿದುಕೊಂಡಿದ್ದರು. ಗುಂಪುಗಳು ನಿಧಾನವಾಗಿ ನಡೆಯಬೇಕಾಗಿದ್ದಿತು. ಕೆಲವು ವೇಳೆ ಒಂದು ಗಜ ಮುಂದುವರಿಯುವುದಕ್ಕೆ ಐದು ನಿಮಿಷಕ್ಕೂ ಹೆಚ್ಚು ಕಾಲ ಹಿಡಿಯುತ್ತಿದ್ದಿತು.

ಗಲಾಟೆಯಾಗದಂತೆ ನೋಡಿಕೊಳ್ಳಲೂ ಮತ್ತು ಅಪಘಾತದ ನಿವಾರಣೆಗಾಗಿಯೂ ನೂರಾರು ಜನ ಪೋಲೀಸಿನವರು ಅಲ್ಲಿ ಇದ್ದರು. ಇವರು ಮುಂದೆ ಮುಂದೆ ಹೋದರು. ಗುಂಪುಗಳು ಕೆಲವು ಸ್ಥಳಗಳಲ್ಲಿ ಅರ್ಧಗಂಟೆಗೂ ಹೆಚ್ಚು ಕಾಲ ನಿಂತುವು. ಎದುರು ಕಡೆಯಿಂದ ಇನ್ನೊಂದು ದೊಡ್ಡ ಗುಂಪು ಬಂದುದರಿಂದ ಮುಂದಕ್ಕೆ ಹೋಗುವುದು ಸಾಧ್ಯವಾಗಲಿಲ್ಲ. ಹಿಂದುಗಡೆಯಿಂದ ಸಾವಿರಾರು ಜನ ನೂಕುತ್ತಿದ್ದರು. ಗಾಣಕ್ಕೆ ಸಿಕ್ಕಿದ ಕಬ್ಬಿನಂತೆ ಇವರು ಜಜ್ಜಿ ಹಿಂಡಿ ಹೋದರು. ಈ ಸಾಧುಗಳು ಕಿರಿಚಿಕೊಂಡರು. ಹೊಸದಾಗಿ ಇವರ ಜೊತೆಗೆ ಸೇರಿದ ವೃದ್ಧ ಸಾಧು ಹೆದರಿ ಹುಚ್ಚಾದನು.

"ಈ ಕುಂಡದಲ್ಲಿಯಾಗಲಿ ಇದರಂತಹ ಬೇರೆ ಮಹತ್ಕುಂಡದಲ್ಲಾಗಲೀ ನನಗೆ ಸ್ನಾನಬೇಕಾಗಿಲ್ಲ. ಮೂಳೆ ಚರ್ಮ ಉಳಿಸಿಕೊಂಡು ಈ ಅಸಾಧ್ಯ ಸಂಕಟದಿಂದ ಪಾರಾದರೆ ಸಾಕು!" ಎಂದು ಅವನು ಅರಚಿದನು.

ಆದರೆ ತಪ್ಪಿಸಿಕೊಂಡು ಹೋಗಲು ದಾರಿ ಇರಲಿಲ್ಲ. ಇವರು ಈ ಸುಖ ಕ್ಕಾಗಿ ಹೊರಟಿದ್ದರು. ಬೇಕಾಗಲಿ ಬೇಡವಾಗಲಿ ಅದನ್ನು ಪೂರ್ತಿಯಾಗಿ ಅನು ಭವಿಸಬೇಕಾಗಿದ್ದಿತು. ಸಾಧುವಿಗಿದ್ದುದು ಒಂದೇ ಯೋಚನೆ. ತಾನು ಸಿಕ್ಕಿ ಕೊಂಡಿದ್ದ ಆ ಕಷ್ಟದಿಂದ ಪಾರಾಗುವುದು. ಅನನು ಆ ಸ್ವಾತಂತ್ರ್ಯ ಅಸುರತೆಗೆ ಯಾವ ವಿಧದಲ್ಲಿಯೂ ಕಡಮೆಯಾದುದಲ್ಲವೆಂದು ಭಾವಿಸಿದನು. ಕೊನೆಗೆ ಇವರು ಒಂದು ಅಗಲವಾದ ರಸ್ತೆಯಲ್ಲಿ ಚೌಕವಾದ ಒಂದು ಸಮ ನೆಲವನ್ನು ಮುಟ್ಟಿದರು. ಇಲ್ಲಿ ಹಲವರು ಪೋಲೀಸಿನವರು ಉದ್ದದ ಲಾಠಿಗಳನ್ನು ಬೇಲಿಯಂತೆ ಹಿಡಿದು, ಎರಡು ಕಡೆಯಿಂದಲೂ ನುಗ್ಗಿ ಬರುತ್ತಿರುವ ಗುಂಪುಗಳನ್ನು ತಡೆದಿದ್ದರು. ಸಾಧು ಗಳು ರಸ್ತೆಯ ಮಗ್ಗುಲಲ್ಲಿದ್ದ ಒಂದು ಮಿಠಾಯಿ ಅಂಗಡಿಯ ಹತ್ತಿರ ಪ್ರೈಯನ್ನು ಅಡಗಿಸಿಕೊಂಡು ನಿಂತರು. ಒಂದು ನಿಮಿಷ ಆಗಲಿಲ್ಲ. ಆಗ ಗುಂಪಿನ ದುಸ್ಸಹ ವಾದ ಒತ್ತಡದಿಂದ ಒಂದು ಕಡೆ ಲಾಠಿಗಳ ತಡೆ ಕಿತ್ತು ಹೋಯಿತು. ಅನಂತರ ಸಂಭವಿಸಿದ್ದು ರೌರವ ದೃಶ್ಯ. ಕೂಗಾಟ, ಕಿರಿಚಾಟ, ತುಳಿದಾಟ, ಶಪಿಸುವುದು ನಭವನ್ನು ಹರಿದುವು. ವೃದ್ಧಸಾಧು ರಾಮದಾಸನ ಮಗ್ಗುಲಲ್ಲೇ ಇದ್ದನು. ತನ್ನ ಕೊನೆಗಾಲ ಒದಗಿತೆಂದು ಗಗನವನ್ನೇ ಭೇಧಿಸುವಂತೆ ಕಿರಿಚಿದನು.

ರಾಮದಾಸನು ಅಂಗಡಿಯ ಗೋಡೆಗೆ ಒರಗಿಕೊಂಡು ಇದ್ದನು. ಅವನ ಮೊಣಕಾಲುಗಳ ಮೇಲೆ ಇಬ್ಬರು ಯಾತ್ರಿಕರು, ಭುಜಗಳ ಮೇಲೆ ಇಬ್ಬರು, ಕುತ್ತಿಗೆಯ ಮೇಲೆ ಒಬ್ಬನು ನಿಂತಿದ್ದರು. ಭಾರದಿಂದ ರಾಮದಾಸನ ಕೊರಳು ಬಗ್ಗಿಹೋಯಿತು. ಈ ವಿಚಿತ್ರ ಅನುಭವದ ವೇಳೆಯಲ್ಲಿಯೂ ಅವನ ಮನಸ್ಸು ಶಾಂತವಾಗಿ ಸಮಾಧಾನವಾಗಿ ಇದ್ದಿತು. ಆ ಸಮಯದಲ್ಲಿ ಅವನ ಉಚ್ಛ್ವಾಸ ನಿಶ್ವಾಸಗಳು ಸಂಪೂರ್ಣವಾಗಿ ನಿಂತು ಹೋಗಿದ್ದಂತೆ ಅವನಿಗೆ ಜ್ಞಾಪಕ. ಅವನು ಇಷ್ಟು ಜನರ ಭಾರವನ್ನು ಸುಲಭವಾಗಿ ತಡೆದನು. ಅವನೇನಾದರೂ ಕೆಳಕ್ಕೆ ಬಿದ್ದಿದ್ದರೆ ಅವನು ತುಳಿದಾಟದಲ್ಲಿ ಬಜ್ಜಿಯಾಗಿ ಹೋಗುತ್ತಿದ್ದನು. ಆದರೆ ಭಗವಂತನ ಅಭಯ ಹಸ್ತ ಸರ್ವದಾ ಅವನ ಮೇಲಿದ್ದಿತು. ಆಗ ರಾಮದಾಸನಿಗೆ ವೃದ್ಧ ಸಾಧುವಿನ ಹೃದಯ ವಿದ್ರಾವಕ ಆಕ್ರಂದನ ಕೇಳಿಸಿತು. ನೋಡಿದರೆ ಸ್ಥೂಲಕಾಯದ ಒಬ್ಬ ಮಾತೆ ಅವನ ಎದೆಯ ಮೇಲೆ ನಿಂತಿದ್ದಳು. ಸಾಧು ಅವಳನ್ನು ಕುರಿತು, "ಅಮ್ಮಾ! ನೀನು ನನ್ನ ಪ್ರೇಮದ ತಾಯಿ! ದಯವಿಟ್ಟು ನನ್ನ ಎದೆಯಿಂದ ಇಳಿ. ನಾನು ನಿನ್ನ ಭಾರವನ್ನು ತಡೆಯಲಾರೆ. ತಾಯಿ! ನಿನ್ನ ಪಾದ ಕಮಲಗಳಿಗೆ ಸಾವಿರ ನಮಸ್ಕಾರ, ದಯವಿಟ್ಟು ಇಳಿ!" ಎಂದು ಬೇಡಿಕೊಳ್ಳುತ್ತಿದ್ದನು.

ಆ ಮಹಾತಾಯಿ "ಸಾಧುಜಿ, ನಾನು ಇಳಿಯಲಾರೆ. ನೆಲಕ್ಕೆ ಇಳಿದರೆ ನನ್ನ ಪಾಡು ಮುಗಿಯಿತು, ಸ್ವಲ್ಪ ಹೊತ್ತು ತಡೆದುಕೊ" ಎಂದಳು.

ಸಾಧು "ಓ ಹೊ! ನೀನು ನನ್ನನ್ನು ಕೊಲ್ಲಬೇಕೆಂದೇ ನಿರ್ಧರ ಮಾಡಿದಂತಿದೆ. ಅಯ್ಯೋ ಇಲ್ಲಿಗೇಕೆ ಬಂದೆನಪ್ಪ! ನನ್ನನ್ನು ಈ ರುದ್ರ ಭೂಮಿಗೆ ಕರೆತಂದ ಆಲೋಚನೆಗೆ ಬೆಂಕಿ ಹಾಕ" ಎಂದು ಶಪಿಸಿದನು.

ಈ ಕಠಿಣ ಪರಿಸ್ಥಿತಿ ಕೆಲವು ನಿಮಿಷ ಮಾತ್ರ ಇದ್ದಿತು. ಪೋಲೀಸಿನವರು ಗುಂಪನ್ನು ಜಾಗ್ರತೆ ಹಿಡಿತಕ್ಕೆ ತಂದರು; ಸ್ಥಳ ಬಿಡಿಸಿದರು. ರಾಮುದಾಸನ ಮೇಲಿದ್ದ ಭಾರ, ಹಾಗೆಯೇ ಸಾಧುವಿನ ಮೇಲಿದ್ದ ಭಾರ ತಪ್ಪಿದುವು. ಸ್ಥೂಲ ಕಾಯದ ಹೆಂಗಸು ಸಾಧುವಿನ ಎದೆಯ ಮೇಲಣ ಪೀಠದಿಂದ ಕೆಳಕ್ಕಿಳಿದಾಗ ಅವನು ವಿವರಿಸಲಾಗದ ಉಪಶಾಂತಿಯ ನಿಟ್ಟುಸಿರನ್ನು ಬಿಟ್ಟನು.

ಮರುದಿನ ಸಾಯಂಕಾಲದವರೆಗೂ ಜನಗಳ ನೂಕುನುಗ್ಗಲು ಮತ್ತು ಪೋಲೀಸಿನವರ ಓಡಾಟದಿಂದ ಇವರು ಒಂದು ಕಡೆಯಿಂದ ಒಂದು ಕಡೆಗೆ ಹರಿಯುತ್ತಿದ್ದರು. ಅವರಿಗೆ ಈ ಅಗಾಧವಾದ ಸಿಕ್ಕಾದ ಗುಂಪಿನ ಹೊದರಿನಿಂದ ತಪ್ಪಿಸಿಕೊಳ್ಳಲು ಆಗಲಿಲ್ಲ. ರಾಮುದಾಸನಿಗೆ ಮಹಾಭಾರತದ ಚಕ್ರವ್ಯೂಹದ ನೆನವು ಆಯಿತು. ಅಂತೂ ಸೂರ್ಯನು ಮುಳುಗಿದನಂತರ ಇವರು ದಾರಿ ಮಾಡಿಕೊಂಡು ಹೃಷೀಕೇಶಕ್ಕೆ ತಮ್ಮಿಂದಾದಷ್ಟು ಜಾಗ್ರತೆ ನಡೆದು ಹೋದರು.

ರಾತ್ರಿಯ ನೂಕು ನುಗ್ಗಲಲ್ಲಿ, ಗುಂಪುಗಳ ಭೀಕರ ಆಘಾತದಲ್ಲಿ, ನೂರಕ್ಕೆ ಹೆಚ್ಚಾಗಿ ಜನ ಸತ್ತು ಹೋಗಿದ್ದರು. ಇವರು ರಾತ್ರಿ ಮತ್ತೆ ಸತ್ಯನಾರಾಯಣ ಚಿಟ್ಟಿಯಲ್ಲಿ ಉಳಿದುಕೊಂಡು ಮಾರನೆಯ ದಿನ ಸ್ವರ್ಗಾಶ್ರಮವನ್ನು ಮುಟ್ಟಿದರು.

ವೃದ್ಧ ಸಾಧುವಿಗೆ ಮೇಳದಲ್ಲಿ ಉಂಟಾದ ಹೆದರಿಕೆ ಆಯಾಸ ಇವುಗಳ ಫಲವಾಗಿ ಆತನು ಜ್ವರದಿಂದಲೂ ನರಗಳ ದೌರ್ಬಲ್ಯದಿಂದಲೂ, ಒಂದು ವಾರಕ್ಕೆ ಮೇಲ್ಪಟ್ಟು ಹಾಸಿಗೆ ಹಿಡಿದನು. ರಾಮುದಾಸನೂ ಅವನ ಜೊತೆಯ ಇನ್ನೊಬ್ಬ ಸಾಧುವೂ ತಮಗೆ ಉಂಟಾದ ಕಷ್ಟದ ಅನುಭವಗಳಿಂದ ಯಾವ ತೊಂದರೆಯೂ ಆಗದೆ ಆರೋಗ್ಯವಾಗಿಯೇ ಇದ್ದರು.

---

# ಅಧ್ಯಾಯ ೩೨

## ನೀಲಕಂಠಗಿರಿ.

### (i) ಪ್ರಥಮ ಪ್ರಯತ್ನ

ರಾಮುದಾಸನು ಮಹಾರಾಷ್ಟ್ರ ಸಾಧುವಿನ ಸಂಗಡ ಅವನ ಕುಟಿಯಲ್ಲಿಯೇ ನಿಂತನು. ಎರಡು ಮೂರು ದಿನದ ಮೇಲೆ ನೇಪಾಳದಿಂದ ಬಂದ ಒಬ್ಬ ಸಂನ್ಯಾಸಿ

ಅವರ ಜೊತೆಗೆ ಸೇರಿದನು. ಅವನಿಗೆ ರಾಮದಾಸನ ಮೇಲೆ ತುಂಬ ಪ್ರೀತಿಯುಂಟಾಯಿತು. ಅವನು ಹರ್ಷಚಿತ್ತನಾದ ಮುದುಕ, ಸ್ಥೂಲಕಾಯದವನು, ಆರೋಗ್ಯವಂತ, ಉಲ್ಲಾಸಿ. ಅವನು ತಾನು ಹಿಮವತ್ಪರ್ವತದ ಮೇಲೆ ಮಾಡಿದ ವಿಸ್ತೃತ ಸಂಚಾರಗಳ ಅನುಭವಗಳನ್ನು ವಿವರಿಸಿದನು. ಅವನು ತಾನು ಬೆಟ್ಟವನ್ನೇರಿದ ವಿಚಾರವನ್ನು ಹೇಳುತ್ತಿದ್ದಾಗ, ರಾಮದಾಸನಿಗೆ ಆಶ್ರಮದ ಹಿಂದೆಯೇ ಇದ್ದ ನೀಲಕಂಠ ಪರ್ವತವನ್ನು ಹತ್ತಬೇಕೆಂಬ ಅಭಿಲಾಷೆ ಉಂಟಾಗಿ ಅದನ್ನು ಅವನು ಸಾಧುಗಳಿಗೆ ತಿಳಿಸಿದನು.

ನೇಪಾಲಿ ಸಾಧು "ಸ್ವಾಮಿ, ಒಂದು ಬಾರಿ ಈ ಪರ್ವತವನ್ನು ಏರಲು ನೋಡಿದೆನು. ಆದರೆ ನನಗೆ ದಾರಿ ಸಿಕ್ಕದೆ ಆ ಯೋಚನೆಯನ್ನು ಬಿಡಬೇಕಾಯಿತು. ನೀವು ಈ ಕಾರ್ಯವನ್ನು ಕೈಕೊಳ್ಳಬೇಕೆಂದಿರುವುದರಿಂದ, ನಾನೂ ಸಂತೋಷದಿಂದ ನಿಮ್ಮೊಡನೆ ಬರುತ್ತೇನೆ" ಎಂದನು.

ಕುಟಿಯ ಸಾಧುವನ್ನು ಕೇಳಿದ್ದಾಯಿತು. ಆತನೂ ಇವರ ಜೊತೆಗೆ ಬರುವುದಾಗಿ ಹೇಳಿದನು. ಮಾರನೆಯ ದಿನ ಮುಂಜಾನೆ ಇವರು ಹೊರಟರು. ಆಶ್ರಮದಲ್ಲಿದ್ದ ಇನ್ನೊಬ್ಬ ಸಾಧುವನ್ನು ಇವರು ಬೆಟ್ಟದ ಮೇಲಿರುವ ನೀಲಕಂಠದೇವಸ್ಥಾನಕ್ಕೆ ದಾರಿಯಾವುದೆಂದು ಕೇಳಿದರು. ಅವನು ದಾರಿಯ ಕೆಲವು ಗುರುತುಗಳನ್ನು ತಿಳಿಸಿದನು. ಇವರು ಬೆಟ್ಟದ ಬುಡದಲ್ಲಿ ಕಾಡಿನಲ್ಲಿ ಹಾಯ್ದು ಹತ್ತಿ ಹತ್ತಿ ಮೇಲಕ್ಕೆ ಹೋದರು. ಇವರಿಗೆ ಕಾಲುದಾರಿಯ ಮುಂದು ಸಿಕ್ಕಲಿಲ್ಲ. ರಾಮದಾಸನು ಮುಂದೆ ನಡೆಯುತ್ತ ಗಿಡಮರಗಳ ಒತ್ತಾದ ಮೆಳೆಗಳ ಮಧ್ಯೆ ದಾರಿ ಮಾಡಿಕೊಂಡು ಏರಿ ಹೋದನು. ಸಾಧುಗಳು ಅವನ ಹಿಂದೆಯೇ ಬಂದರು.

ನೇಪಾಲಿ ಸಾಧು "ಸ್ವಾಮಿ, ನೀವು ಸಿದ್ಧರ ದಾರಿಯಲ್ಲಿ ಪ್ರಯಾಣ ಮಾಡುತ್ತಿದೀರಿ" ಎಂದನು, ಎಂದರೆ ದಾರಿಯಿಲ್ಲದ ಕಡೆ ಹೋಗುತ್ತಿದ್ದೀರೆಂದು ಅವನ ಅರ್ಥ.

ಒಂದು ಮೈಲಿಯಷ್ಟು ಎತ್ತರ ಏರಿದ ಮೇಲೆ ಇವರಿಗೆ ಒಂದು ನೀರಿನ ಚಿಲುಮೆ ಸಿಕ್ಕಿತು. ಸಾಧುಗಳು ಇಲ್ಲಿ ನಿಲ್ಲೋಣವೆಂದರು. ತಂಪಾದ ಚಿಲುಮೆಯ ನೀರನ್ನು ಕುಡಿದು ದಾಹ ಶಾಂತಿ ಮಾಡಿಕೊಂಡ ಮೇಲೆ ನೇಪಾಲಿ ಸಾಧು,

"ಸ್ವಾಮಿ, ನಮಗೆ ದಾರಿ ತಪ್ಪಿದೆ. ಇನ್ನು ಹತ್ತಿ ಉಪಯೋಗವಿಲ್ಲ. ಆಶ್ರಮಕ್ಕೆ ಹಿಂತಿರುಗೋಣ" ಎಂದನು.

ರಾಮದಾಸನು "ಇಲ್ಲ ಮಹರಾಜ್, ಕೈಕೊಂಡ ಕಾರ್ಯವನ್ನು ಇಷ್ಟು ಬೇಗನೆ ಬಿಡಬಾರದು. ಮೇಲಕ್ಕೆ ಹತ್ತಿಹೋಗಿ, ಬೆಟ್ಟದ ಶಿಖರದಲ್ಲಿ ಈ ಕಡೆ ಏನಿದೆಯೋ ನೋಡೋಣ" ಎಂದನು.

ಇದು ನೇಪಾಲಿ ಸಾಧುವಿಗೆ ಸಮ್ಮತವಲ್ಲ. ಇನ್ನೊಬ್ಬ ಸಾಧು ಮೌನವಾಗಿದ್ದನು. ಈತನು ಯಾವುದರಲ್ಲಿಯೂ ತನ್ನ ಅಭಿಪ್ರಾಯವನ್ನು ಸಾಧಿಸುವವನಾಗಿ

ರಲಿಲ್ಲ. ರಾಮುದಾಸನ ಜೊತೆಗೆ ಹೊರಟದ್ದಾಯಿತು; ಅವನು ಹೇಳಿದಂತೆ ಮಾಡಲು ಸಿದ್ಧನಾಗಿದ್ದನು. ನೇಪಾಲಿಸಾಧುವನ್ನು ರಾಮುದಾಸನ ಸಲಹೆಗೆ ಒಪ್ಪಿಸಿದ್ದಾಯಿತು. ಹೀಗಾಗಿ ಇವರು ಪುನಃ ಬೆಟ್ಟವನ್ನು ಏರಲು ಪ್ರಾರಂಭ ಮಾಡಿದರು. ಉದ್ದಕ್ಕೂ ರಾಮುದಾಸನು ನೇರವಾದ ದಾರಿಯಿಂದ ಮೇಲಕ್ಕೆ ಹತ್ತುತ್ತಿದ್ದನು. ಅವನಿಗೆ ಸುತ್ತಿಕೊಂಡು ಹೋಗುವ ದಾರಿಗಳೆಂದರೆ ತಾಳ್ಮೆ ಇಲ್ಲ. ನೇಪಾಲಿ ಸಾಧುವಿನ ಕೈಯಲ್ಲಿ ಉದ್ದವಾದ ದೊಣ್ಣೆ ಇದ್ದಿತು. ಅದನ್ನು ಅವನು ಚನ್ನಾಗಿ ಉಪಯೋಗಿಸಿಕೊಂಡು ಉಸಿರಿಗಾಗಿ ಪ್ರಯಾಸದಿಂದ ಏದುತ್ತ ಹಿಂದೆ ಬರುತ್ತಿದ್ದನು. ಇನ್ನೂ ಒಂದು ಮೈಲಿಯಷ್ಟು ಏರಿದ ಮೇಲೆ ಇವರು ಒಂದು ಕಡಿದಾದ ಬಂಡೆಯ ಬುಡವನ್ನು ಮುಟ್ಟಿದರು. ಅದು ನೂರು ಅಡಿ ಎತ್ತರವಾದ ಸ್ಥೂಲವಾದ ಒರಟಾದ ನೇರವಾದ ಗೋರ್ಕಲ್ಲು. ಈ ಕಲ್ಲನ್ನು ಹತ್ತಿ ಹೋದರೆ ಬೆಟ್ಟದ ತುದಿ ಸಿಕ್ಕುತ್ತದೆಂಬುದು ವ್ಯಕ್ತವಾಯಿತು.

ಸಾಧುಗಳು ಈ ಕಲ್ಲ ಬುಡದಲ್ಲಿ ವಿಶ್ರಮಿಸಿಕೊಂಡರು. ನೇಪಾಲಿ ಸಾಧು ಆಗ ಶಾಂತಿಯ ನಿಟ್ಟುಸಿರಿಂದ,

"ಸ್ವಾಮಿ, ಮುಂದಣಪಯಣ ಸಾಧ್ಯವಲ್ಲವಾದುದರಿಂದ ಈಗಲಾದರೂ ಹಿಂತಿರುಗಬಹುದು" ಎಂದನು.

ರಾಮುದಾಸನು ಅವನಿಗೆ ಉತ್ತರ ಕೊಡದೆ ಎದ್ದು ನಿಂತು, ಉಚ್ಚಸ್ವರದಲ್ಲಿ ದೀರ್ಘವಾಗಿ "ಹರಿಃ ಓಂ" ಎಂದು ಉದ್ಘೋಷಿಸಿದನು. ಆ ಕಾಡೂ ಗಂಭೀರ ಪರ್ವತಗಳ ಪಾರ್ಶ್ವಗಳೂ ಆ ಹರ್ಷನಿನದದಿಂದ ಪ್ರತಿಧ್ವನಿಸಿದುವು. ಆದರೆ ಈ ಶಬ್ದಗಳ ಗುಡುಗಾಟದಲ್ಲಿ ಬೆಟ್ಟದ ಮೇಲಿಂದ ಉತ್ತರ ಕೊಡುವ ಒಬ್ಬ ಮನುಷ್ಯನ ಧ್ವನಿಯೂ ಸ್ಪಷ್ಟವಾಗಿ ಕೇಳಬಂದಿತು.

ರಾಮುದಾಸನು "ಬೆಟ್ಟದ ಮೇಲೆ ಯಾರೋ ಇದ್ದಾರೆ. ರಾಮುದಾಸನು ಏರಿ ಹೋಗುವನು" ಎಂದನು.

ನೇಪಾಲಿ ಸಾಧು. "ಶುದ್ಧ ಹುಚ್ಚು! ಹತ್ತುವುದಕ್ಕೆ ದಾರಿಯೇ ಇಲ್ಲದಿರುವಾಗ ಹೇಗೆ ಹೋಗುತ್ತೀರಿ?" ಎಂದು ಪ್ರಶ್ನಿಸಿದನು.

ರಾಮುದಾಸನು "ಬೇರೆ ಹೇಗೆ? ಕೋಡು ಕಲ್ಲನ್ನು ಏರಿ" ಎಂದು ಉತ್ತರವಿತ್ತನು.

"ಸ್ವಾಮಿ, ಆತ್ಮಘಾತ ಮಾಡಿಕೊಳ್ಳಬೇಕೆಂದಿದ್ದೀರಾ? ನನ್ನ ಮಾತು ಕೇಳಿ. ನಿಮ್ಮ ಪ್ರಾಣವನ್ನು ಅಷ್ಟು ತುಚ್ಛವಾಗಿ ಭಾವಿಸಿ ಈಡಾಡುವದು ಬೇಡ."

ರಾಮುದಾಸನು ಲಕ್ಷಿಸಲಿಲ್ಲ. ಭಯಾನಕವಾಗಿ ನಿಂತಿದ್ದ ಕಲ್ಲಿನ ಕಡೆಗೆ ನೆಟ್ಟಗೆ ಹಾರಿದನು. ಆ ಒರಟು ಬಂಡೆಯ ಚೂಪಾದ, ತೆಳುವಾದ ಬಳಪದ ಚಕ್ಕೆಯಂದದ ಅರುಗುಗಳನ್ನು ಕೈಗಳಿಗೆ ಕಾಲುಗಳಿಗೆ ಆಧಾರ ಮಾಡಿಕೊಂಡು

ಮಂಗನಂತೆ ಅಂಬೆಗಾಲಿನಿಂದ ಏರಲು ಪ್ರಾರಂಭ ಮಾಡಿದನು. ಆ ಅರುಗುಗಳು ಬಹು ಸಲ ರಾಮುದಾಸನ ಕಾಲಿನ ಭಾರಕ್ಕೆ ಮುರಿದು ಚೂರಾಗಿ ಬಿದ್ದವು; ಆದರೆ ರಾಮುದಾಸನ ತೂಕ ತಪ್ಪಲಿಲ್ಲ. (ರಾಮನಾಮ ತಾನಾಗಿ ಉಚ್ಚಾರವಾಗುತ್ತಿದ್ದಿತು.) ಶರೀರ ಒಣಗಿದ ಎಲೆಯ ಹಾಗೆ ಹಗುರವಾಗಿ ಕಂಡಿತು. ಅಪಾಯವನ್ನೆಣಿಸದ ಆತುರದಿಂದ ಅವನು ಮೇಲೆ ಮೇಲಕ್ಕೆ ಹತ್ತಿ ಹೋದನು. ಕೆಳಗೆ ಸಾಧುಗಳು ಇವನು ಹತ್ತುತ್ತಿದ್ದುದನ್ನೇ ಭಯಭ್ರಾಂತರಾಗಿ ನೋಡುತ್ತ ನಿಂತಿದ್ದರು. ಹದಿನೈದು ನಿಮಿಷಗಳೊಳಗಾಗಿ ಅವನು ಆ ಬೋರ್ಗಲ್ಲ ತುದಿಯನ್ನು ಸೇರಿ ಮೇಲೆ ನಿಂತನು. ಇಲ್ಲಿ ಅವನಿಗೆ ವಿಶಾಲವಾದ ಸಮಭೂಮಿಯೂ ಇದರಲ್ಲಿ ಹೊಲ ಗದ್ದೆ ಗಿಡಗಳೂ ಕಂಡವು. ಸ್ವಲ್ಪ ದೂರದಲ್ಲಿ ಒಂದು ಗುಡಿಸಲೂ ಮೈದಾನದಲ್ಲಿ ಕೆಲವು ಹಸುಗಳನ್ನು ಮೇಯಿಸುತ್ತಿದ್ದ ಒಬ್ಬ ಘಟ್ಟದ ಹೆಂಗಸೂ ಕಂಡರು. ಅವಳು ರಾಮುದಾಸನನ್ನು ಕಂಡ ಕೂಡಲೇ ಹೆದರಿಕೆಯಿಂದ ಕೈಗಳನ್ನೆತ್ತಿ,

"ಹೊರಟು ಹೋಗು, ಹೊರಟು ಹೋಗು. ನನ್ನ ಹತ್ತಿರ ಬರಬೇಡ." ಎಂದು ಕೂಗಿಕೊಂಡಳು.

ರಾಮುದಾಸನು "ತಾಯಿ, ನೀಲಕಂಠಕ್ಕೆ ದಾರಿಯಾವುದು?" ಎಂದು ಕೇಳಿದನು.

ಆಕೆ ನಡುಗುವ ಧ್ವನಿಯಲ್ಲಿ "ಅದು ಇಲ್ಲಿಗೆ ಬಹಳ ದೂರ. ಬೆಟ್ಟದ ಇನ್ನೊಂದು ಮೂಲೆಯಲ್ಲಿದೆ" ಎಂದಳು.

ರಾಮುದಾಸನು ಆಕೆ ಬೆರಳು ನೀಡಿ ತೋರಿಸಿದ ದಿಕ್ಕಿಗೆ ತಿರುಗಿದನು. ಎದುರಿಗೆ ದಟ್ಟವಾದ ಕಪ್ಪಾದ ಕಾಡು ಕಾಣಿಸಿತು. ಈ ಕಾಡಿನಲ್ಲಿ ನಡೆದು ಹೋದರೆ ಬೆಟ್ಟದ ಇನ್ನೊಂದು ಕೊನೆಯಲ್ಲಿ ಇರುವ ನೀಲಕಂಠ ದೇವಸ್ಥಾನ ಸಿಕ್ಕುವುದು. ಆಕೆ ಬಹು ದೂರವೆಂದು ಹೇಳಿದ್ದು ಕಾಡು ಎಷ್ಟೋ ಮೈಲಿಗಳುದ್ದ ಇರುವಂತೆ ಅಭಿಪ್ರಾಯ ಕೊಟ್ಟಿತು. ರಾಮುದಾಸನು ಈ ಕಾರ್ಯಕ್ಕೆ ಸಿದ್ಧನಾಗಿದ್ದನು. ದಾರಿಯಲ್ಲಿ ದುಷ್ಟ ಪ್ರಾಣಿಗಳ ಸಂದರ್ಶನಲಾಭದ ಸಂಭವವೂ ಉಂಟು. ಇದು ರಾಮುದಾಸನಿಗೆ ಆಶೆ ಹುಟ್ಟಿಸುವ ಸ್ಥಿತಿಯಾಗಿದ್ದಿತು. ಇದು ಅತಿ ಸಾಹಸದ ಕಾರ್ಯವೆಂಬುದೂ, ಅದರಲ್ಲಿ ಸಾವು ಉಳಿವು ಮನಸ್ಸಿಗೆ ಹುಲ್ಲಿನಂತೆ ಹಗುರವಾಗಿರಬೇಕೆಂಬುದೂ ರಾಮುದಾಸನಿಗೆ ಮನದಟ್ಟಾಯಿತು. ಈ ಪರ್ವತಗಳ ಮೇಲೆ ದಿಗಂಬರ ಸಿದ್ಧರು ಸಂಚರಿಸುತ್ತಿರುವರೆಂದೂ, ರಾಮುದಾಸನು ಕೇಳಿದ್ದನು. ರಾಮುದಾಸನಿಗೆ ಇವರ ದರ್ಶನ ಸಂಸರ್ಗವೂ ದೊರೆಯುವುದು. ಅವನು ತಾನು ನಿಂತಿದ್ದ ಕಡೆಯಿಂದ ಬಗ್ಗಿ ನೋಡಿದನು. ಕೆಳಗಡೆ ಸಾಧುಗಳು ಆ ಎತ್ತರದಿಂದ ಬಹು ಚಿಕ್ಕದಾಗಿ ಕಾಣುತ್ತಿದ್ದರು. ರಾಮುದಾಸನು ಹಿಂತಿರುಗಲೆಂದು ಕಾದಿದ್ದರು. ರಾಮುದಾಸನು ತನ್ನ ಕೈಲಾದಷ್ಟು ಘಟ್ಟಿ ಧ್ವನಿಯಲ್ಲಿ

ಅವರನ್ನು ಮೇಲಕ್ಕೆ ಹತ್ತಿ ಬರುವಂತೆ ಕೂಗಿ ಕೈಗಳಿಂದಲೂ ಬಲವಾಗಿ ಸಂಜ್ಞೆ ಮಾಡಿದನು.

ನೇಪಾಲಿ ಸಾಧುವಿನ ಧ್ವನಿ ''ನಮ್ಮ ಕೈಯಲ್ಲಾಗುವುದಿಲ್ಲ. ನೀವೇ ಕೆಳಕ್ಕೆ ಇಳಿಯಿರಿ. ಹೊತ್ತು ಕಳೆಯಬೇಡಿ'' ಎಂದು ಕೇಳಿಸಿತು.

ರಾಮದಾಸನು ''ನೀವಿಬ್ಬರೂ ಹಿಂತಿರುಗಿ. ರಾಮದಾಸನು ನೀಲಕಂಠಕ್ಕೆ ಹೋಗುವವನಾಗಿದ್ದಾನೆ'' ಎಂದು ಉತ್ತರ ಕೊಟ್ಟನು.

''ಕೂಡದು, ಕೂಡದು! ನಾನು ನಿಮ್ಮನ್ನು ಬಿಟ್ಟುಹೋಗುವುದಿಲ್ಲ. ದೇವರಾಣೆ ಇಳಿದು ಬನ್ನಿ'' ಹೀಗೆಂದು ಆ ನೇಪಾಲಿ ಮುದುಕನು ಕೈಯನ್ನು ಗಾಳಿಯ ಯಂತ್ರದಂತೆ ತಿರುಗಿಸುತ್ತಾ, ಉದ್ವೇಗದಲ್ಲಿ ಕುಣಿಯುತ್ತಿದ್ದನು. ಇದರಿಂದ ಅವನ ಬಯಕೆ ಎಷ್ಟು ತೀವ್ರ ಎಷ್ಟು ಒತ್ತಾಯದ್ದೆಂದು ಕಾಣುತ್ತಿದ್ದಿತು.

ಆಗ ರಾಮದಾಸನು ಒಂದು ಉಭಯ ಸಂಕಟದಲ್ಲಿ ಸಿಕ್ಕಿಕೊಂಡನು. ಒಂದು ನಿಮಿಷ ಯೋಚಿಸಿದನೋ ಇಲ್ಲವೋ ನೇಪಾಲಿ ಗೆದ್ದನು. ರಾಮದಾಸನು ಕಲ್ಲಿನ ಪಕ್ಕದ ಅಪಾಯಕರವಾದ ಇಳಿಜಾರಿನಲ್ಲಿ ಜಾರಿ ಇಳಿದನು. ಅವನು ಹತ್ತು ನಿಮಿಷಗಳೊಳಗಾಗಿ ಸಾಧುಗಳ ಜೊತೆಗೆ ನಿಂತನು. ವೃದ್ಧ ಸಾಧು ಆನಂದದ ಭರದಲ್ಲಿ ರಾಮದಾಸನನ್ನು ಅಪ್ಪಿಕೊಂಡನು. ಅವನ ಕಣ್ಣಿನಲ್ಲಿ ನೀರು ತುಂಬಿದ್ದಿತು. ಅವರು ಚಿಲುಮೆಯ ಬಳಿ ಸ್ವಲ್ಪಹೊತ್ತು ವಿಶ್ರಮಿಸಿಕೊಂಡರು. ಅಲ್ಲಿ ಮಹಾರಾಷ್ಟ್ರ ಸಾಧು ನೇಪಾಲಿ ಸಾಧುವಿನ ಲೋಟದಲ್ಲಿ ಚಹವನ್ನು ಸಿದ್ಧ ಮಾಡಿದನು. ನೇಪಾಲಿ ಸಾಧು ತನ್ನ ಜೋಳಿಗೆಯಲ್ಲಿ ಸ್ವಲ್ಪ ಬೆಲ್ಲವನ್ನೂ ಕೆಲವು ಟೀ ಎಲೆಗಳನ್ನೂ ತಂದಿದ್ದನು. ಆಗ ಸಾಯಂಕಾಲ ಸುಮಾರು ನಾಲ್ಕು ಗಂಟೆ.

ನೇಪಾಲಿ ಸಾಧುವಿಗೆ ಅತ್ಯಂತ ಚಿಂತೆ. ಆತನು "ಜಾಗ್ರತೆ ಇಳಿಯೋಣ ಸಾಯಂಕಾಲವಾದಂತೆ ದುಷ್ಟ ಜಂತುಗಳು ತಾವು ವಾಸವಾಗಿರುವ ಗುಹೆಯನ್ನು ಬಿಟ್ಟು ನೀರಿಗಾಗಿ ಚಿಲುಮೆಯ ಬಳಿಗೆ ಬರುತ್ತವೆಂದು ನಿಮಗೆ ಗೊತ್ತೇಇದೆಯಲ್ಲ!" ಎಂದು ಸೂಚನೆ ಕೊಟ್ಟನು.

ಆದುದರಿಂದ ಇವರು ಜಾಗ್ರತೆ ನಡೆಯಲಾರಂಭಿಸಿದರು. ಅನೇಕ ಸ್ಥಳಗಳಲ್ಲಿ ನೇಪಾಲಿ ಸಾಧು ದುಷ್ಟ ಮೃಗಗಳ ಪಾದಚಿನ್ಹೆಗಳನ್ನು ತೋರಿಸಿದನು. ಇವು ದೃಷ್ಟಿಗೆ ಬಿದ್ದೊಡನೆ ಇವರು ಇನ್ನೂ ವೇಗವಾಗಿ ಓಡುವಂತಾಯಿತು. ಇವರು ಆರು ಗಂಟೆಯ ಹೊತ್ತಿಗೆ ಸ್ವರ್ಗಾಶ್ರಮವನ್ನು ಮುತ್ತಿ ಮುಟ್ಟಿದರು. ಈ ವೇಳೆಗೆ ನೇಪಾಲಿ ಸಾಧುವಿಗೆ ತೀರಾ ಸಾಕಾಗಿ ಹೋಗಿದ್ದಿತು. ಬೆಟ್ಟವನ್ನು ಹತ್ತಿದ ಶ್ರಮ, ಹೆದರಿಕೆ, ಕಳವಳ, ಹಸಿವಿನದಾಂಧಲೆ ಇವುಗಳಿಂದ ಮುದುಕ ತೀರಾ ಮೆತ್ತಗಾಗಿದ್ದನು.

ಕುಟಿಯನ್ನು ಸೇರಿದಾಗ, ಆ ಮಧ್ಯಾಹ್ನ ಅನ್ನಕ್ಷೇತ್ರದಲ್ಲಿ ಭಂಡಾರ ಎಂದರೆ ಹಬ್ಬದ ಊಟವಿದ್ದಿತೆಂದು ತಿಳಿಯಿತು. ರಾಮದಾಸನು ಅನ್ನಕ್ಷೇತ್ರಕ್ಕೆ ಓಡಿಹೋಗಿ ಮೂರುಜನ ಸಾಧುಗಳಿಗೆ ಊಟ ಬೇಕೆಂದು ಕೇಳಿದನು. ವಿಚಾರಣೆ ಕರ್ತ ಸಂನ್ಯಾಸಿ ದಯೆಮಾಡಿ ಮಧ್ಯಾಹ್ನದ ಹಬ್ಬದ ಊಟದಲ್ಲಿ ಮಿಕ್ಕಿದ್ದ ಪದಾರ್ಥಗಳಿಂದ ಬೇಕಾದಷ್ಟು ಆಹಾರವನ್ನು ಕೊಟ್ಟನು. ರಾಮದಾಸನಿಗೂ ಇಬ್ಬರು ಸಾಧುಗಳಿಗೂ ತೃಪ್ತಿಯಾಗಿ ಭೋಜನವಾಯಿತು. ನೀಲಕಂಠ ದೇವಾಲಯಕ್ಕೆ ಹೋಗುವ ಪ್ರಯತ್ನ ಈ ರೀತಿ ಮುಕ್ತಾಯವಾಯಿತು. ✓

## (ii) ಎರಡನೆಯ ಪ್ರಯತ್ನ

ಕೆಲವು ದಿವಸಗಳ ನಂತರ ರಾಮಚರಣದಾಸನು ಬಂದು ಸೇರಿದನು. ಅವನು ಕುಂಭಮೇಳದ ಸಮಯದಲ್ಲಿ ಹರಿದ್ವಾರದಲ್ಲಿ ಇದ್ದನು. ಆದರೆ ಜನ ಸಂದಣಿಯಲ್ಲಿ ರಾಮದಾಸನು ಅವನನ್ನು ಕಾಣಲಿಲ್ಲ. ರಾಮದಾಸನಿಲ್ಲದ ವೇಳೆ ತಾನು ಬೀಗ ಹಾಕಿ ಕಾದಿಟ್ಟಿದ್ದ ಕುಟಿಗೆ ಬರಬೇಕೆಂದು ಅವನು ರಾಮದಾಸ ನನ್ನು ಒತ್ತಾಯಪಡಿಸಿದನು.

"ರಾಮು, ನೀನು ಆ ಕುಟಿಗೆ ಬೀಗ ಹಾಕಿಕೊಂಡು ಹೋಗಬಾರದಾಗಿ ದ್ದಿತು. ಕುಟಿ ಎಲ್ಲಾ ಸಾಧುಗಳಿಗೂ ಸೇರಿದ್ದು. ನೀನು ಇಲ್ಲದಿರುವಾಗ ಎಷ್ಟೋ ಜನ ಸಾಧುಗಳು ಸ್ಥಳಕ್ಕಾಗಿ ಅಲೆದಾಡಿದರು. ಕುಟಿಗೆ ಬೀಗ ಹಾಕಿ ಕೊಂಡು ಹೋದದ್ದು ಸಾಧು ಧರ್ಮಕ್ಕೆ ವಿರೋಧ" ಎಂದು ರಾಮದಾಸನು ಹೇಳಿದನು.

ರಾಮದಾಸನು ಅಷ್ಟು ದಿನವೂ ತನಗೆ ಆಶ್ರಯವನ್ನು ಕೊಟ್ಟಿದ್ದ ಮಹಾ ರಾಷ್ಟ್ರ ಸಾಧುವಿನ ಸಂಗವನ್ನು ತ್ಯಜಿಸಲು ಒಪ್ಪಲಿಲ್ಲ. ತನ್ನನ್ನು ಬಿಟ್ಟುಹೋಗ ಬಾರದೆಂದು ಸಾಧುವೂ ರಾಮದಾಸನಲ್ಲಿ ಅಂಗಲಾಚಿದನು. ರಾಮಚರಣ ದಾಸನು ಒತ್ತಾಯ ಪಡಿಸಿ, ಒಂದೆರಡು ಸಲ ಬಲವಂತದಿಂದ ಎತ್ತಿಕೊಂಡು ಹೋಗಲು ಪ್ರಯತ್ನಪಟ್ಟರೂ, ರಾಮದಾಸನು ಅವಕಾಶ ಕೊಡದೆ, ಮಹಾರಾಷ್ಟ್ರ ಸಾಧುವಿನ ಸಂಗಡಲೇ ಇದ್ದನು. ಕೊನೆಗೆ ರಾಮದಾಸನು ತನ್ನ ಕುಟಿಗೆ ಬಾರದ್ದ ರಿಂದ ರಾಮಚರಣದಾಸನಿಗೆ ಬಹಳ ಅಸಮಾಧಾನವಾಯಿತೆಂದು ತಿಳಿದು, ರಾಮ ದಾಸನು ಆ ಕುಟಿಗೆ ಹೋದನು. ಇಲ್ಲಿ ಚಿತ್ರಕೂಟದ ಅಖಂಡಾನಂದಸ್ವಾಮಿಗಳ ಸಂನ್ಯಾಸಿ ಶಿಷ್ಯರಿಬ್ಬರು ಸಿಕ್ಕಿದರು. ರಾಮದಾಸನಿಗೆ ನೀಲಕಂಠ ಪರ್ವತವನ್ನು ಹತ್ತಬೇಕೆಂದು ಪುನಃ ಅಭಿಲಾಷೆಯಾಯಿತು. ವಿಫಲವಾದ ಆ ಯತ್ನದಿಂದ ಹಿಂತಿರುಗಿ ಬಂದಮೇಲೆ ನೇಪಾಲಿ ಸಾಧು ಹೊರಟುಹೋಗಿದ್ದನು.

ಈಗ ರಾಮದಾಸ, ರಾಮಚರಣದಾಸ, ಮಹಾರಾಷ್ಟ್ರ ಸಾಧು ಮತ್ತು ಈ ಇಬ್ಬರು ಸಂನ್ಯಾಸಿಗಳು ಸೇರಿ ಈ ಉದ್ಯಮಕ್ಕೆ ಹೊರಟರು. ಆ ಹೊಸ

ಸಂನ್ಯಾಸಿಗಳಲ್ಲಿ ಒಬ್ಬನು ಹಿಂದೆ ಒಂದು ಸಲ ನೀಲಕಂಠ ಬೆಟ್ಟಕ್ಕೆ ಹೋಗಿದ್ದುದರಿಂದ ದಾರಿ ಬಲ್ಲವನಾಗಿದ್ದನು.

ಈ ಸಮಯದಲ್ಲಿ ರಾಮದಾಸನಿಗೆ ನಾಗಪುರದ ರಾಮಚಂದ್ರ ತಿಮಂಡೆ ಎಂಬ ಶ್ರದ್ಧಾಳು ಸಾಧಕ ಮತ್ತು ಒಂದು ಮಾರ್ವಾಡಿ ಅನ್ನಕ್ಷೇತ್ರದ ವ್ಯವಸ್ಥಾಪಕ ಇವರಿಬ್ಬರ ಪರಿಚಯವಾಯಿತು. ಇಬ್ಬರೂ ರಾಮದಾಸನಲ್ಲಿ ತುಂಬ ಪ್ರೀತಿ ಆದರಗಳನ್ನು ತೋರುತ್ತಿದ್ದರು. (ರಾಮಚಂದ್ರ ತಿಮಂಡೆ ರಾಮದಾಸನನ್ನು ತನ್ನ ಆಧ್ಯಾತ್ಮಿಕ ಗುರುವಾಗಿ ಭಾವಿಸುತ್ತಿದ್ದನು.)

ನೀಲಕಂಠಕ್ಕೆ ಹೊರಡುವ ಮುನ್ನ ರಾಮಚರಣದಾಸನು ಮಾರ್ವಾಡಿ ಅನ್ನಕ್ಷೇತ್ರದಿಂದ ಅಡಿಗೆ ಪದಾರ್ಥಗಳನ್ನು ಬೇಡಿ ತಂದು ಜೋಳಿಗೆಯನ್ನು ತುಂಬಿದ್ದನು. ಅವನ ಹತ್ತಿರ ಆಗಲೇ ಎರಡು ಅಲ್ಯೂಮಿನಿಯಂ ಪಾತ್ರೆಗಳು ಇದ್ದುವು. ಅವನು ಸೌದೆ ಕತ್ತರಿಸಲು ಕ್ಷೇತ್ರದಿಂದ ಒಂದು ಕೈಬಾಚಿಯನ್ನೂ ತೆಗೆದುಕೊಂಡನು.

ಒಂದು ದಿನ ಮುಂಜಾನೆ ಇವರು ಬೆಟ್ಟ ಹತ್ತುವುದಕ್ಕೆ ಪ್ರಾರಂಭಿಸಿದರು. ಸಂನ್ಯಾಸಿ ಮಾರ್ಗದರ್ಶಕನಿಗೆ ದಾರಿ ಗೊತ್ತಿದ್ದುದರಿಂದ ಸರಿಯಾದ ದಾರಿಯಲ್ಲಿ ಕರೆದುಕೊಂಡು ಹೋದನು. ಇದು ಸುತ್ತಿಕೊಂಡು ಹೋಗುವ ದಾರಿಯಾದುದರಿಂದ ಹತ್ತುವುದಕ್ಕೆ ಸುಲಭವಾಗಿದ್ದಿತು. ಇವರು ಹತ್ತಿಹೋಗಬೇಕಾಗಿದ್ದುದು ಏಳು ಮೈಲಿ. ಇದನ್ನು ಮಧ್ಯಾಹ್ನದ ಹೊತ್ತಿಗೆ ಹತ್ತಿ ಮುಗಿಸಿದರು. ಇಲ್ಲಿ ಒಂದು ಸಣ್ಣ ಹಳ್ಳ ಸಿಕ್ಕಿತು. ಇದನ್ನು ಒಂದು ಮರದ ಸೇತುವೆಯ ಸಹಾಯದಿಂದ ದಾಟಿ, ಇವರು ಹಿರಿಯ ಕಾಡುಮರಗಳ ಹರಡಿದ ಕೊಂಬೆಗಳ ನೆರಳಿನ ಒಂದು ಸ್ಥಳವನ್ನು ಮುಟ್ಟಿದರು. ಈ ಮರಗಳ ಮಧ್ಯೆ ನೀಲಕಂಠ ದೇವಾಲಯವೂ ಎರಡು ಧರ್ಮಶಾಲೆಗಳೂ ಇದ್ದುವು. ಈ ಸಂಗಡಿಗರು ಒಂದು ಧರ್ಮಶಾಲೆಯಲ್ಲಿ ಇಳಿದುಕೊಂಡರು.

ಇಲ್ಲಿ ಎಲ್ಲರಿಗೂ ಅಡಿಗೆಯಾಯಿತು. ಎರಡು ಗಂಟೆಯ ವೇಳೆಗೆ ಊಟ ಮುಗಿಯಿತು. ರಾಮದಾಸನೂ ರಾಮಚರಣದಾಸನೂ ಬೆಟ್ಟದ ಮೇಲೆ ಕೆಲವು ದಿನ ನಿಲ್ಲುವುದಾಗಿ ತಿಳಿಸಿದರು. ಸಂನ್ಯಾಸಿಗಳೂ ಮಹಾರಾಷ್ಟ್ರ ಸಾಧುವೂ ಬೆಟ್ಟದಿಂದ ಬಯಲಿಗಿಳಿದು ಹೋದರು.

ರಾಮದಾಸನು ಬೆಟ್ಟದ ಮೇಲಿನ ಕಂದಮೂಲಗಳನ್ನು ಹುಡುಕಲು ಯೋಚಿಸಿದನು. ಆದ್ದರಿಂದ ಅವನೂ ರಾಮಚರಣದಾಸನೂ ಇವಕ್ಕಾಗಿ ಬೆಟ್ಟದ ಮೇಲೆ ಹಲವೆಡೆ ಅಗೆಯಲು ಮೊದಲುಮಾಡಿದರು. ಬೇಸಗೆಯಕಾಲವಾದುದರಿಂದ ನೆಲವು ಬಹು ಗಟ್ಟಿಯಾಗಿದ್ದಿತು. ಗೆಡ್ಡೆಗಳು ಬಹಳ ಆಳದಲ್ಲಿರುವುವೆಂದೂ ಅಗೆಯುವುದಕ್ಕೆ ಅದು ಕಾಲವಲ್ಲವೆಂದೂ ಬೆಟ್ಟದ ಜನರು ತಿಳಿಸಿದರು. ಇದರಿಂದ ಇವರು ಈ ಕಷ್ಟದ ಕೆಲಸವನ್ನು ಬಿಟ್ಟುಬಿಟ್ಟರು.

ನಂತರ ರಾಮದಾಸನು ರಾಮಚರಣದಾಸನಿಗೆ ಧರ್ಮಶಾಲೆಯನ್ನು ಬಿಟ್ಟು ಬೆಟ್ಟದ ನಿರ್ಜನವಾದ ಒಂದು ಮೂಲೆಯಲ್ಲಿ ಕಾಲಕಳೆಯೋಣವೆಂದು ಸೂಚಿಸಿದನು. ಸಾಯಂಕಾಲವಾಗುತ್ತಿದ್ದಾಗ ಇವರು ಅನುಕೂಲವಾದ ನಿರ್ಜನಪ್ರದೇಶ ಒಂದನ್ನು ಹುಡುಕಲು ಹೊರಟರು. ಸೂರ್ಯನು ಮುಳುಗಿದನು. ಆಗ ಇವರು ಇಳಿಜಾರಾದ ಬೆಟ್ಟದ ಕಿಬ್ಬರಿಯಲ್ಲಿ ಒಂದು ಝರಿಯ ಸಮೀಪದಲ್ಲಿದ್ದರು. ರಾಮದಾಸನು ಮರಗಳಿಂದ ತುಂಬಿದ ಆ ಇಳಿಜಾರು ಬೆಟ್ಟವನ್ನು ಹತ್ತಿ ಮರಗಳ ಒಂದು ಗುಂಪಿನ ಮಧ್ಯೆ ಕುಳಿತನು.

"ರಾತ್ರಿ ಇಲ್ಲಿಯೇ ಇರೋಣ. ನೆಲವನ್ನು ಸರಿಮಾಡಿ ನಮ್ಮಿಬ್ಬರ ಮಧ್ಯೆ ಒಂದು ಗುಂಡಿ ತೋಡಿ, ರಾತ್ರಿ ಬೆಚ್ಚಗಿರಲು ಬೆಂಕಿ ಕಾಯಿಸೋಣ" ಎಂದು ರಾಮದಾಸನು ಸಲಹೆ ಕೊಟ್ಟನು.

ಇಬ್ಬರೂ ಒಣಗಿದ ರೆಂಬೆಗಳನ್ನು ಕಡ್ಡಿಗಳನ್ನು ಸೇರಿಸಿದರು. ಬೇಗದಲ್ಲೇ ಉರಿ ಹಾಕಿದ್ದಾಯಿತು. ನೆಲದ ಮೇಲಣ ಕುರುಚಲು ಮುಳ್ಳುಗಿಡಗಳನ್ನು ಕತ್ತರಿಸಿದ್ದಾಯಿತು. ಕುಡಿಯುವುದಕ್ಕೆ ಝರಿಯಿಂದ ಲೋಟದಲ್ಲಿ ನೀರನ್ನು ತಂದರು. ರಾತ್ರಿ ಚಳಿ; ಆದರೆ ಬೆಂಕಿ ಕಾಯಿಸುತ್ತಿದ್ದುದರಿಂದ ಬೆಚ್ಚಗಿದ್ದಿತು. ರಾಮದಾಸನು ರಾಮಚರಣದಾಸನಿಗೆ ಮಾರನೆಯ ದಿವಸದ ಕಾರ್ಯವನ್ನು ಸೂಚಿಸಿದನು.

"ರಾಮ, ಬೆಳಿಗ್ಗೆ ಬಾಚಿಯಿಂದ ಮರಗಳನ್ನು ಕತ್ತರಿಸಿ, ನಾವು ಇರುವುದಕ್ಕೆ ಒಂದು ಗುಡಿಸಲನ್ನು ಕಟ್ಟೋಣ. ಇಲ್ಲೇ ಕೆಲವು ದಿವಸಗಳು ಶಾಂತವಾಗಿ ಇರೋಣ.''

ರಾಮಚರಣದಾಸನು ಸಮ್ಮತಿಸಿದನು. ರಾತ್ರಿ ಸುಮಾರು ಜಾಗರಣೆಯಲ್ಲೇ ಕಳೆಯಿತು. ಮಾರನೆ ದಿನ ಮುಂಜಾನೆಯಿಂದ ಇವರು ಉದ್ದೇಶಿಸಿದ ಗುಡಿಸಲನ್ನು ಕಟ್ಟುವುದರಲ್ಲಿ ನಿರತರಾದರು. ರಾಮದಾಸನು ನೆಲವನ್ನು ಅಗೆದು ಸರಿಪಡಿಸಿದನು. ರಾಮಚರಣದಾಸನು ಗುಡಿಸಲ ಕವೆಗಳಿಗಾಗಿ ಸಣ್ಣ ಮರಗಳನ್ನು ಕಡಿಯಲು ಸುತ್ತಿದನು. ಮಧ್ಯಾಹ್ನದವರೆಗೂ ಕೆಲಸ ಮಾಡಿದ ನಂತರ ರಾಮಚರಣದಾಸನು ಸಣ್ಣ ಹಳ್ಳದ ಬದಿಯಲ್ಲಿ ಕೆಲವು ರೊಟ್ಟಿಯನ್ನೂ ತೊವ್ವೆಯನ್ನೂ ತಯಾರಿಸಿದನು. ಊಟಮಾಡಿ ಇವರು ಪುನಃ ಕೆಲಸಕ್ಕೆ ಆರಂಭಿಸಿದರು. ಗುಡಿಸಲ ನಿರ್ಮಾಣ ಚನ್ನಾಗಿ ಮುಂದೆ ಸಾಗಿತು. ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಒಬ್ಬ ಬೆಟ್ಟದ ಕುರುಬನು ತನ್ನ ಕುರಿ ಹಿಂಡನ್ನು ಹೊಡೆದುಕೊಂಡು ಆ ಕಡೆ ಬಂದನು. ರಾಮದಾಸನೂ ರಾಮಚರಣದಾಸನೂ ಮಾಡುತ್ತಿರುವ ಕೆಲಸವನ್ನು ಕಂಡು, ಅವನು ಏನು ಮಾಡುತ್ತಿದ್ದೀರೆಂದು ಇವರನ್ನು ಕೇಳಿದನು. ರಾಮದಾಸನು ತಾವು ಕೈಕೊಂಡಿರುವ ಕೆಲಸವನ್ನು ತಿಳಿಸಿದನು.

ಆತನು "ಮಹರಾಜ್ ! ಸುಮ್ಮನೆ ಏಕೆ ಕಷ್ಟ ಪಡುತ್ತೀರಿ. ಮಗ್ಗುಲಲ್ಲೇ ಒಂದು ಗುಹೆ ಇದೆ. ನಿಮ್ಮ ವಾಸಕ್ಕೆ ಬಹು ಯೋಗ್ಯವಾಗಿದೆ. ಸ್ವಲ್ಪ ಕಾಲದ

ಹಿಂದೆ ಅದರಲ್ಲಿ ಒಬ್ಬ ಸಾಧು ಉಳಿದಿದ್ದರು. ಅದು ಈಗ ಬರಿದಾಗಿದೆ. ಇಷ್ಟೆಲ್ಲ ಕಷ್ಟಪಡುವ ಬದಲು ನೀವು ಅಲ್ಲಿಯೇ ಇರಬಹುದು. ಅದು ಸ್ವಚ್ಛವಾದ ತಿಳಿ ನೀರಿನ ಹೊಳೆಯ ಅಂಚಿನಲ್ಲಿ ಇದೆ'' ಎಂದನು.

ಇದು ರಾಮದಾಸನಿಗೆ ಬಹು ಒಪ್ಪಿತು. ಅವನು ಕುರುಬನನ್ನು "ನಮಗೆ ಗುಹೆಯನ್ನು ತೋರಿಸುವೆಯಾ ?" ಎಂದು ಕೇಳಿದನು.

ಅವನು "ಬನ್ನಿ, ಈಗಲೆ ಕರೆದುಕೊಂಡು ಹೋಗುತ್ತೇನೆ" ಎಂದನು.

ರಾಮದಾಸನು ರಾಮಚರಣದಾಸನ ಕಡೆಗೆ ತಿರುಗಿ, "ಕೆಲಸವನ್ನು ನಿಲ್ಲಿಸು. ಅವನ ಹಿಂದೆ ಹೋಗೋಣ" ಎಂದು ಹೇಳಿದನು.

ರಾಮದಾಸನ ಚಪಲ ಬುದ್ಧಿಯ ಆಜ್ಞೆಯನ್ನು ಕೇಳಿ ರಾಮಚರಣದಾಸನಿಗೆ ವಿಸ್ಮಯವಾಯಿತು. ಆದರೆ ಹಿಂದೆ ಎಷ್ಟೋಸಲ ಪಾಲಿಸಿದಂತೆ ಅವನು ಈಗಲೂ ಆಜ್ಞೆಯನ್ನು ಪಾಲಿಸಿದನು.

## (iii) ಗುಹೆಯೊಳಗೆ

ಬೆಟ್ಟದವನು ಸಾಧುಗಳನ್ನು ನೀಲಕಂಠದೇವಾಲಯದಿಂದ ಸುಮಾರು ನೂರು ಗಜ ದೂರದಲ್ಲಿದ್ದ ಒಂದು ಗುಹೆಗೆ ಕರದುಕೊಂಡು ಹೋದನು. ಅದು ದೇವಾಲಯಕ್ಕೆ ನೀರನ್ನು ಒದಗಿಸುತ್ತಿದ್ದ ಹೊಳೆಯ ಮಗ್ಗುಲಲ್ಲಿದ್ದಿತು. ಅದು ವಿವಿಕ್ತವಾದ ಸ್ಥಳ. ಗುಹೆಯ ಮುಂಭಾಗದಲ್ಲಿ ದೊಡ್ಡದಾಗಿ ತೆರೆದುಕೊಂಡಿರುವ ಬಾಯಿ ಇದ್ದಿತು. ಒಳಗೆ ಹೋದಂತೆ ಅದು ಕಿರಿದಾಗಿ, ಕೊನೆಗೆ ಒಬ್ಬರು ಕುಳಿತುಕೊಳ್ಳುವಷ್ಟು ಮಾತ್ರ ವಿಶಾಲವಾದ ಒಂದು ಒಳಗವಿ ಸಿಕ್ಕುವುದು. ಇವರು ನೆಲವನ್ನು ಗುಡಿಸಿ ಬೆಂಕಿ ಹೊತ್ತಿಸಿದರು. ಹಿಂದೆ ಅಲ್ಲಿ ಯಾರೋ-ಒಬ್ಬ ಸಾಧು ಇದ್ದುದರ ನಿದರ್ಶನವಾಗಿ ಬೂದಿಯ ಗುರುತು ಇದ್ದಿತು. ರಾತ್ರಿ ಕಾಲದಲ್ಲಿ ಹತ್ತಿರದ ಆ ಹೊಳೆಯ ಹರಿವಿನ ಮಂಜುಲ ನಾದವೂ ದೂರದ ದೃಷ್ಟ ಮೃಗಗಳ ಗರ್ಜನೆಗಳೂ ಕೇಳಬರುತ್ತಿದ್ದುವು. ಗುಹೆ ಏಕ ಕಾಲದಲ್ಲಿ ಮಾಯಿಕವೂ ಭೀಕರವೂ ಆಗಿ ಕಾಣುತ್ತಿದ್ದಿತು; ರಾಮದಾಸನಿಗೆ ಸ್ಥಳ ಬಹಳ ಇಷ್ಟವೆನಿಸಿತು.

ರಾಮಚರಣದಾಸನು ತಂದಿದ್ದ ಊಟದ ಪದಾರ್ಥಗಳು ಐದು ದಿವಸಗಳಿಗೆ ಸಾಕಾದುವು. ಈ ಮಧ್ಯೆ ಇಬ್ಬರು ಸಾಧುಗಳು ಈ ಬೆಟ್ಟದ ಮೇಲೆ ಒಂದು ಭಯಂಕರ ಸ್ಥಳದಲ್ಲಿರುವ ಗುಹೆಯಲ್ಲಿ ವಾಸವಾಗಿದ್ದಾರೆಂಬ ವಾರ್ತೆ ಹೃಷಿಕೇಶ ಮತ್ತು ಸ್ವರ್ಗಾಶ್ರಮದ ಸಾಧುಗಳಲ್ಲೂ ಯಾತ್ರಿಕರಲ್ಲೂ ಹಬ್ಬಿತು. ಇವರ ದರ್ಶನಕ್ಕಾಗಿ ನೂರಾರು ಜನ ಬರಲು ಪ್ರಾರಂಭವಾಯಿತು. ಅವರು ಹಾಲು, ದ್ರಾಕ್ಷಿ, ಕಲ್ಲುಸಕ್ಕರೆ, ಹುರಿದಕಾಳು, ಬಾದಾಮಿ ಮುಂತಾದ ವಿವಿಧ ಪದಾರ್ಥಗಳನ್ನು ತಂದುಕೊಡುತ್ತಿದ್ದರು. ಭಗವಂತನು ಸಾಧುಗಳ ದೇಹಧಾರಣೆಗೆ ಅವಶ್ಯಕವಾದ

ಆಹಾರದ ಕೊರತೆ ಇರದಂತೆ ನೋಡಿಕೊಳ್ಳುವುದರಲ್ಲಿ ನಿರತನಾಗಿದ್ದನೆನ್ನುವುದು ವಿಶದವಾಯಿತು.

ಒಂದು ದಿನ ರಾಮಚರಣದಾಸನು,

"ಸ್ವಾಮಿಜಿ, ನಾವು ಇಲ್ಲಿ ಎಷ್ಟು ಕಾಲ ಇರಬೇಕು ?" ಎಂದು ಕೇಳಿದನು.

"ರಾಮದಾಸನಿಗೆ ಅದರ ಕಲ್ಪನೆ ಇಲ್ಲ. ತಿಂಗಳು ಗಟ್ಟಲೆ ಇರಬಹುದು. ಈ ಸ್ಥಳ ರಾಮದಾಸನ ಹೃದಯವನ್ನು ಸೆರೆಹಿಡಿದಿದೆ" ಎಂದು ರಾಮದಾಸನು ಉತ್ತರ ಕೊಟ್ಟನು.

ಪ್ರೇಕ್ಷಕರು ಯಾರೂ ಇಲ್ಲದಿರುವಾಗ ಇಬ್ಬರೂ ಸೌದೆಯನ್ನು ಕೂಡಿಹಾಕಲು ಮೊದಲು ಮಾಡಿದರು. ದಪ್ಪನಾದ ಹಸಿಯ ರೆಂಬೆಗಳನ್ನು ಕಡಿದು ಬಿಸಿಲಿನಲ್ಲಿ ಒಣಗಿಸುತ್ತಿದ್ದರು. ರಾಮದಾಸನು ಒಂದು ಒಣಗಿದ ಮರದ ದಪ್ಪನಾದ ಬುಡವನ್ನು ಕಡಿಯಲು ಆರಂಭಿಸಿದನು. ಕೊಡಲಿ ಸಣ್ಣದಾಗಿದ್ದಿತು. ಅವನು ಬೆಳಿಗೆ ಸಾಯಂಕಾಲ ಎರಡೆರಡು ಗಂಟೆಗಳ ಕಾಲ ಕೆಲಸ ಮಾಡಿ ಮೂರು ದಿವಸ ದುಡಿಯಬೇಕಾಯಿತು. ಕೊನೆಗೆ ಮರವನ್ನು ಕಡಿದದ್ದಾಯಿತು. ಆ ದೊಡ್ಡ ತೊಲೆಯನ್ನು ಗುಹೆಯ ಬಾಯಿಗೆ ತೆಗೆದುಕೊಂಡು ಹೋಗುವ ಕೆಲಸ ಉಳಿದಿದ್ದಿತು. ಇದನ್ನು ಮುಂದೆ ಮಾಡೋಣವೆಂದು ನಿಲ್ಲಿಸಿದ್ದಾಯಿತು.

ದಿನ ದಿನಕ್ಕೆ ಪ್ರೇಕ್ಷಕರ ಸಂಖ್ಯೆ ಹೆಚ್ಚಿತು. ಒಂದು ಸಾಯಂಕಾಲ ಒಬ್ಬ ಬಲಾಢ್ಯ ದೃಢಾಂಗ ಸಾಧು ಇವರನ್ನು ನೋಡಲು ಬಂದನು. ಅವನ ಕೈಮಣಿಕಟ್ಟಿನಲ್ಲಿ ಬಳೆಗಳು, ಬೆರಳುಗಳ ಮೇಲೆ ಉಂಗುರಗಳು, ಭುಜದ ಮೇಲೆ ಒಂದು ಜೋಳಿಗೆ ಇದ್ದುವು. ಈ ಜೋಳಿಯಲ್ಲಿ ನಾನಾ ವಿಧದ ಸಾಮಾನು ಇದ್ದುವು. ಅವನು ರಾಮದಾಸನಿಗೆ ಗಾಂಜಾದಿಂದ ತಯಾರಿಸಿದ್ದ ಒಂದು ದಪ್ಪ ಚೂರು ಚರಸ್ಸನ್ನು ಕೊಟ್ಟನು. ರಾಮದಾಸನು ಅದನ್ನು ತೆಗೆದುಕೊಂಡನು. ಆ ಸಾಧು ತಾನು ಗಾಂಜಾಸೇವನೆ ಮಾಡುವವನು. ಸ್ವಲ್ಪ ಹೊತ್ತಿನ ನಂತರ ಆತ ಹೊರಟು ಹೋದನು. ಅವನು ಹೋದ ಮೇಲೆ ರಾಮದಾಸನು ಚರಸ್ಸನ್ನು ಬೆಂಕಿಯೊಳಕ್ಕೆ ಬಿಸುಟು ಅದನ್ನು ಉರಿಸಿ ಬೂದಿಮಾಡಿಬಿಟ್ಟನು. ಮಾರನೆಯ ದಿನ ಸಾಧು ಮತ್ತೆ ಬಂದನು. ಅವನಿಗೆ ಚರಸ್ಸು ಬೇಕಾಗಿದ್ದಿತು. ಹಿಂದಣ ಸಾಯಂಕಾಲ ತಾನು ಕೊಟ್ಟಿದ್ದ ಚರಸ್ಸಿನಲ್ಲಿ ರಾಮದಾಸನು ಸ್ವಲ್ಪವನ್ನು ಕೊಡುತ್ತಾನೆಂದು ಅವನಿಗೆ ಆಶೆಯಿದ್ದಿತು.

ಅವನು "ಸ್ವಲ್ಪ ಚರಸ್ಸು ಕೊಡುವಿರಾ ?" ಎಂದು ಕೇಳಿದನು.

"ನೀನು ಕೊಟ್ಟ ಚರಸ್ಸನ್ನು ರಾಮದಾಸನು ಬೆಂಕಿಗೆ ಹಾಕಿ ಸುಟ್ಟು ಬಿಟ್ಟನು" ಎಂದನು ರಾಮದಾಸ.

"ಒಳ್ಳೇ ಕೆಲಸ ಮಾಡಿದಿರಿ ಮಹರಾಜ್ !" ಎಂದು ಹೇಳಿ ಆತನು ನಿರ್ವೇದದ ನಿಶ್ವಾಸ ಬಿಟ್ಟನು. "ಈ ದುರಭ್ಯಾಸಕ್ಕೆ ನಾನು ದಾಸನಾಗಿ ಬಿಟ್ಟದ್ದೇನೆ. ನಿಮ್ಮ ಸಹವಾಸದ ಮೂಲಕ ಅದರಿಂದ ಬಿಡಿಸಿಕೊಂಡೇನೆಂದು ನಂಬಿದೇನೆ." ಆಮೇಲೆ ಅವನಿಗೆ ರಾಮದಾಸನ ವಿಷಯದಲ್ಲಿ ತುಂಬ ಪ್ರೀತಿ ಹುಟ್ಟಿ, ಅವನು ರಾಮದಾಸನನ್ನು ಕಾಣಲು ಮತ್ತೆ ಮತ್ತೆ ಬಂದನು.

ಇತರ ತಿಂಡಿ ಪದಾರ್ಥಗಳು ಸುರಿಯುತ್ತಿದ್ದರೂ ರೊಟ್ಟಿ ತೊವ್ವೆಯ ವಾಡಿಕೆಯು ಅಡಿಗೆ ಸಾಮಾನು ಪೂರೈಸುತ್ತ ಬಂದುವು. ರಾಮಚರಣದಾಸನಿಗೆ ದಿನಂಪ್ರತಿ ರೊಟ್ಟಿ ತೊವ್ವೆಯೇ ಬೇಕು.

ಅವನು ಒಂದು ರಾತ್ರಿ, "ಸ್ವಾಮಿಜಿ, ಪದಾರ್ಥಗಳೆಲ್ಲ ಮುಗಿದು ಹೋದುವು. ಸ್ವರ್ಗಾಶ್ರಮದ ಮಾರ್ವಾಡಿ ಅನ್ನಕ್ಷೇತ್ರಕ್ಕೆ ಹೋಗಿ ನಮಗೆ ಹದಿನೈದು ದಿವಸಗಳಿಗಾದರೂ ಸಾಕಾಗುವಷ್ಟು ಪದಾರ್ಥಗಳನ್ನು ತರಬೇಕೆಂದಿದ್ದೇನೆ. ನೀರು ತರುವುದಕ್ಕೆ ತುಂಬುವುದಕ್ಕೆ ನಮಗೆ ಮಡಕೆಗಳೂ ಬೇಕು. ಇವನ್ನೂ ತರುತ್ತೇನೆ" ಎಂದನು.

ರಾಮದಾಸನು "ರಾಮ, ಏಕೆ ಇಷ್ಟೆಲ್ಲ ಕಷ್ಟ ? ನಮಗೆ ಬೇಕಾದುದನ್ನು ಭಗವಂತನು ಇಲ್ಲಿ ದೊರಕಿಸುತ್ತಿದ್ದಾನೆ. **ಅವನು** ಕಳುಹಿಸುತ್ತಿರುವ ಪದಾರ್ಥಗಳಿಂದ ತೃಪ್ತರಾಗಿರೋಣ" ಎಂದನು.

"ಇಲ್ಲ ಸ್ವಾಮಿಜಿ, ದಿನಕ್ಕೊಂದು ಸಲ ರೊಟ್ಟಿತೊವ್ವೆಯೂಟ ಅವಶ್ಯಕ. ನನಗೆ ತೊಂದರೆ ಏನೂ ಇಲ್ಲ. ಕಷ್ಟವಿಲ್ಲದೇ ತರುತ್ತೇನೆ. ತರುವುದೆಂದು ನಿರ್ಧರ ಮಾಡಿದ್ದೇನೆ. ನಾಳೆ ಬೆಳಿಗ್ಗೆ ಹೊರಟು ಸಾಯಂಕಾಲ ಹಿಂತಿರುಗಲು ಪ್ರಯತ್ನ ಮಾಡುತ್ತೇನೆ" ಎಂದು ರಾಮಚರಣದಾಸನು ಹೇಳಿದನು.

ಅವನು ಹಟವಾದಿ; ರಾಮದಾಸನು ಸುಮ್ಮನಾದನು. ಬೆಳಿಗ್ಗೆ ರಾಮಚರಣದಾಸನು ಬೆಟ್ಟದಿಂದ ಇಳಿದು ಸ್ವರ್ಗಾಶ್ರಮಕ್ಕೆ ಹೋದನು. ಆ ಸಾಯಂಕಾಲ ಅವನು ಅಲ್ಲೇ ನಿಲ್ಲಬೇಕಾಯಿತು. ರಾಮದಾಸನು ಆ ರಾತ್ರಿ ಗುಹೆಯ ಪೂರ್ಣ ವಿವಿಕ್ತತೆಯ ಸುಖವನ್ನು ಅನುಭವಿಸಿದನು. ಮಾರನೆಯ ದಿನ ಸಂಜೆಗೆ ರಾಮಚರಣದಾಸನು ಒಂದು ಭಾರವಾದ ಗಂಟನ್ನು ಹೊತ್ತುಕೊಂಡು ತಟ್ಟಾಡುತ್ತ ಗುಹೆಯೊಳಕ್ಕೆ ಬಂದನು. ಅವನು ಹೊತ್ತಿದ್ದ ದೊಡ್ಡ ಗೋಣಿಯಚೀಲದಲ್ಲಿ ಸಾಮಾನುಗಳು ತುಂಬ ಉಬ್ಬಿಕೊಂಡಿದ್ದುವು. ಬೆನ್ನ ಮೇಲೆ ಎರಡು ಗಡಿಗೆಗಳು ನೇತಾಡುತ್ತಿದ್ದುವು.

ಅವನು ಚೀಲವನ್ನು ಇಳಿಸಿ ಗಡಿಗೆಗಳನ್ನು ಕೆಳಕ್ಕೆ ಇಟ್ಟು, ಮಿತಿ ಮೀರಿ ಆಯಾಸವಾಗಿದ್ದುದರಿಂದ ನೆಲದ ಮೇಲೆ ಉರುಳಿದನು. ಹತ್ತು ನಿಮಿಷಗಳ ಕಾಲ ಅವನಿಗೆ ಮಾತನಾಡಲು ಉಸಿರೇ ಇರಲಿಲ್ಲ. ಅವನು ಗಾಳಿಗಾಗಿ ಏದುತ್ತಿದ್ದನು.

ನಂತರ ನಿಧಾನವಾಗಿ ಮೂಟೆ ಬಾಯನ್ನು ಬಿಚ್ಚಿ ಒಂದೊಂದಾಗಿ ಅಕ್ಕಿ, ಬೇಳೆ, ಗೋಧಿಹಿಟ್ಟು, ಆಲೂಗೆಡ್ಡೆ, ಬೆಲ್ಲ, ತುಪ್ಪ, ಸಕ್ಕರೆ, ಇನ್ನೂ ಏನೇನೋ ಸಾಮಾನಿನ ಪೊಟ್ಟಣಗಳನ್ನು ತೆಗೆದಿಟ್ಟನು. ಪದಾರ್ಥಗಳು ಒಂದು ತಿಂಗಳಿಗಿಂತ ಹೆಚ್ಚು ಕಾಲ ತಡೆಯುವಷ್ಟು ಇದ್ದುವು.

ರಾಮುದಾಸನು "ನೀನೆಂಥ ವಿಚಿತ್ರದ ಮನುಷ್ಯನಪ್ಪ ! ಏಕೆಇಷ್ಟೊಂದು ?" ಎಂದನು.

ರಾಮಚರಣದಾಸನು "ಇಷ್ಟೊಂದೆ ? ಏನು ಅಂಥದು ! ಇಷ್ಟೂ ನಮಗೆ ಬೇಕು. ನನಗೆ ಹಗಲೆಲ್ಲಾ ಹೋಗಿ ಬರುವ ತೊಂದರೆ ತಪ್ಪುತ್ತದೆ. ಏನಿಲ್ಲವೆಂದರೂ ಒಂದು ತಿಂಗಳ ಕಾಲ ಊಟದ ವಿಚಾರವಾಗಿ ಯಾವ ಯೋಚನೆಯೂ ಇಲ್ಲದೆ ನಾವು ಹಾಯಾಗಿ ಇರಬಹುದು" ಎಂದನು.

ರಾಮುದಾಸನು "ರಾಮು, ನಿನಗೆ ದೇವರಲ್ಲಿರುವುದಕ್ಕಿಂತ ಈ ಪದಾರ್ಥಗಳಲ್ಲಿ ಹೆಚ್ಚು ನಂಬಿಕೆ ಇರುವಂತೆ ಕಾಣುತ್ತದೆ" ಎಂದನು.

ರಾಮಚರಣದಾಸನಿಗೆ ಉತ್ತರ ಕೊಡಲು ಮನಸ್ಸಿರಲಿಲ್ಲ. ಗುಹೆಯ ಒಳಗಣ ಕೋಣೆ ಒಡನೆಯೆ ಉಗ್ರಾಣವಾಯಿತು. ಸಾಮಾನು ಪೊಟ್ಟಣಗಳನ್ನು ಅಚ್ಚುಕಟ್ಟಾಗಿ ಹೊಂದಿಸಿಟ್ಟುದಾಯಿತು. ಈ ಕಾರ್ಯದಲ್ಲಿ ರಾಮುದಾಸನೂ ನೆರವಾದನು.

ಮಾರನೆಯ ದಿನ ಸೌದೆ ಒಣಗಿರಲಿಲ್ಲವಾದ ಕಾರಣ ರಾಮಚರಣದಾಸನಿಗೆ ಅಡಿಗೆ ಮಾಡುವುದು ಬಹುಕಷ್ಟವಾಯಿತು. ಅಲ್ಲದೆ ಬಯಲಲ್ಲಿ ಅಡಿಗೆ ಮಾಡಬೇಕಾಗಿ ಬಂದುದರಿಂದ ವೇಗವಾಗಿ ಬೀಸುವ ಗಾಳಿ ಒಲೆ ನಿಂತುಉರಿಯದಂತೆ ಮಾಡಿತು. ಆದ್ದರಿಂದ ಅಂದಿನ ರೊಟ್ಟಿ ಸರಿಯಾಗಿ ಸುಡಲಿಲ್ಲ. ಬೇಳೆ ಅರೆವಾಸಿ ಬೆಂದಿದ್ದಿತು. ರಾಮುದಾಸನಿಗೆ ಹಲ್ಲುಗಳು ಇರಲಿಲ್ಲ. ಅವನು ಹೇಗೋ ಆ ಅರೆವಾಸಿ ಬೆಂದಿದ ಪದಾರ್ಥವನ್ನೇ ನುಂಗಿ ಮುಗಿಸಿದನು. ಹಿಂದಿನ ದಿವಸದ ಪದಾರ್ಥಗಳೂ ಚನ್ನಾಗಿ ಬೆಂದಿರಲಿಲ್ಲ. ಅವನಿಗೆ ಅಜೀರ್ಣವಾಗಿದ್ದಿತು. ರಾಮಚರಣದಾಸನು ಅಡಿಗೆಯಲ್ಲಿ ಕೂಡ ಇನ್ನೂ ಸಾಧಕನಾಗಿಯೇ ಇದ್ದನು. ಇಂತಹ ಅಪಕ್ವ ಪದಾರ್ಥಗಳ ಸೇವನೆಯ ಮೊತ್ತದ ಪರಿಣಾಮವಾಗಿ ರಾಮುದಾಸನಿಗೆ ಆಮಶಂಕೆ ಬಂದಿತು. ಇದು ಹದಿನೈದು ದಿವಸಕ್ಕೆ ಹೆಚ್ಚಾಗಿ ಹಿಂಸಿಸಿತು.

ಎರಡು ದಿನಗಳ ನಂತರ ಆರು ಜನ ಸಾಧುಗಳು ಬಂದರು. ಅವರಲ್ಲೊಬ್ಬನು ಸಂಭಾಷಣೆಯಲ್ಲಿ,

"ಮಹರಾಜ್, ನೀವು ಈ ನಿರ್ಜನ ಪ್ರದೇಶದಲ್ಲಿ ಏಕೆ ಮರೆಸಿಕೊಂಡಿದೀರಿ. ನೀವು ಪಂಜಾಬಿನಲ್ಲಿ, ಕಾಶ್ಮೀರದಲ್ಲಿ ಸಂಚರಿಸಬೇಕು. ಆ ಪ್ರಾಂತಗಳ ಭಕ್ತರ ಪ್ರೇಮವನ್ನು ಅನುಭವಿಸಬೇಕು. ಅದರಲ್ಲೂ ಪಂಜಾಬಿನಲ್ಲಿ ಜನ ಭಕ್ತಿ ಆದರಗಳಿಂದ ತುಂಬಿದಾರೆ. ಅಲ್ಲಿಗೆ ಭೇಟಿ ಕೊಡದೆ ಇರಬೇಡಿ" ಎಂದನು.

ರಾಮದಾಸನಿಗೆ ಕೂಡಲೇ ಈ ಬುದ್ಧಿವಾದ ಮನಸ್ಸಿಗೆ ಒಪ್ಪಿತು. ಈ ಗುಹೆಯನ್ನು ಬಿಟ್ಟುಹೋಗಲೆಂಬ ಉದ್ದೇಶದಿಂದ ಈ ಸೂಚನೆ ಭಗವಂತನಿಂದಲೇ ಬಂದಿತೆಂದು ಅವನು ನಂಬಿದನು. ಬಂದವರು ಹೊರಟುಹೋಗುತ್ತಲೂ, ರಾಮದಾಸನು ರಾಮಚರಣದಾಸನ ಕಡೆ ತಿರುಗಿ,

"ರಾಮ, ನಾವು ಈ ಸ್ಥಳವನ್ನು ಬಿಟ್ಟು ಹೊರಟು ಪಂಜಾಬ್ ಕಾಶ್ಮೀರದ ಕಡೆ ಪ್ರಯಾಣ ಮಾಡಬೇಕೆಂದು ರಾಮನ ಆಜ್ಞೆ. ಹೊರಡಲು ಸಿದ್ಧನಾಗು" ಎಂದನು.

ಇದನ್ನು ಕೇಳಿ ರಾಮಚರಣದಾಸನಿಗೆ ಮುಖ ಬೆಳ್ಳಗಾಗಿ ನಂತರ ಬೂದುಬಣ್ಣವಾಯಿತು. ಅವನು ಉಗ್ರಾಣದ ಕಡೆ ವಾತ್ಸಲ್ಯದಿಂದ ನೋಡಿದನು. ಸೊಟ್ಟ ಮುಖ ಹಾಕಿಕೊಂಡು ಮೆಲ್ಲನೆಯಾದ ದನಿಯಲ್ಲಿ,

"ಸರಿಹೋಯಿತು. ಸದ್ಯ ದೇವರ ದಯೆ. ಒಂದು ದೊಡ್ಡ ಪ್ರಯಾಸ ತಪ್ಪಿದಂತಾಯಿತು. ಆ ಮರದ ಭಾರವಾದ ತೊಲೆಯನ್ನು ಅದು ಬಿದ್ದಿದ್ದ ಹಳ್ಳದಿಂದ ಗವಿಯ ಬಾಯಿವರೆಗೆ ಉರುಳಿಸಿಕೊಂಡು ಬರಬೇಕಾಗಿಲ್ಲ" ಎಂದನು.

ಇದನ್ನು ಕೇಳಿ ರಾಮದಾಸನಿಗೆ ನಗುವನ್ನು ತಡೆಯಲಾಗಲಿಲ್ಲ. ರಾಮಚರಣದಾಸನಿಗೂ ಜೊತೆಗೆ ನಗದಿರಲು ಸಾಧ್ಯವಾಗಲಿಲ್ಲ.

ತಂದಿದ್ದ ಸಾಮಾನುಗಳನ್ನೂ ಗಡಿಗೆಗಳನ್ನೂ ಘಟ್ಟದ ಜನಗಳಿಗೆ ಕೊಟ್ಟದ್ದಾಯಿತು. ಸಾಯಂಕಾಲದ ಹೊತ್ತಿಗೆ ಇವರು ಸ್ವರ್ಗಾಶ್ರಮದ ಮಾರ್ವಾಡಿ ಅನ್ನಕ್ಷೇತ್ರದ ಬಳಿಯ ಸಣ್ಣ ಹುಲ್ಲು ಗುಡಿಸಲನ್ನು ಸೇರಿದರು. ಚರಸ್ ಧೂಮಪಾನಕ್ಕೆ ದಾಸನಾಗಿದ್ದು ಆ ದುರಭ್ಯಾಸದಿಂದ ಪಾರಾಗಿದ್ದ ಸಾಧು ರಾಮದಾಸನಿಗೆ ಅಂಟಿದನು. ಅವನು ರಾಮದಾಸನು ಬೆಟ್ಟ ಇಳಿಯುವಾಗ ಸಂಗಡಲೇ ಇಳಿದು ಜೊತೆಯಲ್ಲೇ ನಿಂತನು. ರಾಮದಾಸನು ಎಲ್ಲಿ ಹೋದರೆ ಅಲ್ಲಿ ಹಿಂಬಾಲಿಸುವೆನೆಂದು ಹಟ ಮಾಡಿದನು. ರಾಮದಾಸನು ಅವನಿಗೆ ತನ್ನ ಸಮಕ್ಕೆ ನಡೆಯುವುದು ಕಷ್ಟವಾಗುತ್ತದೆ, ಒಂದಿಗೆ ಬರಬಾರದು ಎಂದು ಹೇಳಿದನು. ಆ ಸಾಧುವಿನ ಅನನುಕೂಲ ಏನೆಂದರೆ ಅವನು ಸ್ಥೂಲಕಾಯನಾದುದರಿಂದ ಅವನಿಗೆ ವೇಗವಾಗಿ ನಡೆಯಲಾಗುತ್ತಿರಲಿಲ್ಲ. ಅಲ್ಲದೆ ರಾಮದಾಸನೊಂದಿಗೇ ಇರುವುದರಿಂದ ಹೆಚ್ಚು ಪ್ರಯೋಜನ ಆಗಲಾರದೆಂದೂ, ಅವನು ಹುಡುಕುತ್ತಿರುವ ಸತ್ಯ ಅವನಲ್ಲಿಯೇ ಇರುವುದೆಂದೂ ರಾಮದಾಸನು ಅವನಿಗೆ ಭರವಸೆ ಕೊಟ್ಟನು. ಕೊನೆಗೆ ಅವನು ರಾಮದಾಸನ ಸೆರಗನ್ನು ಹಿಡಿದು ನಡೆಯುವ ಯೋಚನೆಯನ್ನು ಬಿಟ್ಟುಬಿಡುವಂತೆ ಒಪ್ಪಿಸಿದ್ದಾಯಿತು.

ರಾಮಚಂದ್ರ ತಿಮುಂಡೆಯೂ ಮತ್ತು ಮಾರ್ವಾಡಿ ಕ್ಷೇತ್ರದ ಬ್ರಿಜಲಾಲ್ ಮುನೀಮನೂ ರಾಮದಾಸನನ್ನು ಕುರಿತು ಪ್ರೀತಿ ಆದರಗಳಿಂದ ಮೇಲ್ಪರಿದರು.

ರಾಮದಾಸನು ಕಾಶ್ಮೀರಕ್ಕೆ ಬೆಟ್ಟದ ಮೇಲೆ ಕಾಲು ನಡಿಗೆಯಲ್ಲಿ ಪ್ರಯಾಣಮಾಡುವುದಾಗಿ ಸೂಚಿಸಿದನು. ಕಾಶ್ಮೀರಕ್ಕೆ ಬೆಟ್ಟದ ಮೇಲೆ ಒಂದು ದಾರಿ ಇರುವುದಾಗಿಯೂ ಆದರೆ ಅದು ಬಹು ದುರ್ಗಮವೆಂದೂ ಬೇಸರದ ದಾರಿಯೆಂದೂ ರಾಮದಾಸನಿಗೆ ತಿಳಿಯಿತು. ರಾಮದಾಸನ ದುರ್ದಮ್ಯ ಸಾಹಸ ಅವನನ್ನು ಈ ಕಷ್ಟದ ಪ್ರಯಾಸವನ್ನು ಕೈಕೊಳ್ಳುವಂತೆ ನೂಕಿತು. ರಾಮಚಂದ್ರ ತಿಮುಂಡೆ ಇದಕ್ಕೆ ಖಂಡಿತವಾಗಿ ಅಡ್ಡಿಮಾಡಿ ರಾಮದಾಸನು ರೈಲಿನಲ್ಲಿ ಮೊದಲು ಪಂಜಾಬಿಗೂ, ನಂತರ ಕಾಶ್ಮೀರಕ್ಕೂ ಪ್ರಯಾಣ ಮಾಡಬೇಕೆಂದು ಒತ್ತಾಯ ಪಡಿಸಿದನು.

"ಸ್ವಾಮಿಜಿ! ಪಂಜಾಬಿನಲ್ಲಿ ಚಿಂತಾಪೂರ್ಣಿ ಜ್ವಾಲಾಜಿ ಎಂಬ ಎರಡು ಪ್ರಮುಖ ಸ್ಥಳಗಳು ನೋಡಬೇಕಾದವು ಇವೆ. ಹೊಷ್ಯಾರ್ಪುರದವರೆಗೂ ನಿಮ್ಮಿಬ್ಬರಿಗೂ ಟಿಕೀಟು ಕೊಡಿಸುತ್ತೇನೆ. ಅಲ್ಲಿಂದ ನೀವು ಕಾಲು ನಡಿಗೆಯಲ್ಲಿ ಈ ಪವಿತ್ರ ಸ್ಥಳಗಳಿಗೆ ಹೋಬೇಕಾಗುತ್ತದೆ."

ಪ್ರೀತಿವಂತನಾದ ಈ ಮಿತ್ರನು ರಾಮದಾಸನನ್ನು ರಾಮಚರಣದಾಸನೊಂದಿಗೆ ಹೃಷಿಕೇಶವನ್ನು ಬಿಟ್ಟು ಪಂಜಾಬ್ ಕಡೆ ಹೋಗುವ ರೈಲಿನಲ್ಲಿ ಪ್ರಯಾಣ ಮಾಡಲು ಒಪ್ಪಿಸಿದನು.

---

# ಅಧ್ಯಾಯ ೩೩

## ಚಿಂತಾಪೂರ್ಣಿ — ಜ್ವಾಲಾಜಿ — ಪಠಾನ್‌ಕೋಟೆ

### (i) ನೋವು ಸುಖವಾಗಿ ಪರಿಣಮಿಸಿದ್ದು

ಸಾಯಂಕಾಲ ಇವರು ಹೊಷ್ಯಾರ್ಪುರದ ಸ್ಟೇಷನ್ನನ್ನು ಸೇರಿದರು. ಆ ರಾತ್ರಿಯನ್ನು ಯಾತ್ರಿಕರಿಗಾಗಿ ಇರುವ ಒಂದು ದೊಡ್ಡ ಧರ್ಮಶಾಲೆಯ ಮಾಳಿಗೆ ಮೇಲೆ ಕಳೆದರು. ಇಲ್ಲಿ ಕೆಲವರು ಯಾತ್ರಿಕರು ಇವರಿಗೆ ಕುಡಿಯುವುದಕ್ಕೆ ಅಚ್ಚವಾದ ಹಸುವಿನ ಹಾಲನ್ನೂ ಮಲಗುವುದಕ್ಕೆ ಮಂಚವನ್ನೂ ದೊರಕಿಸಿದರು. ಆಮಶಂಕೆ ರಾಮದಾಸನ ಮೈಯನ್ನು ಬಾಧಿಸುತ್ತಲೇ ಇದ್ದಿತು. ಇವರು ಪ್ರಾತಃಕಾಲ ಹೊತ್ತಿಗೆಮುಂಚೆಯೇ ಚಿಂತಾಪೂರ್ಣಿಗೆ ನಡೆಯುತ್ತ ಹೊರಟರು. ಅದು ಹೊಷ್ಯಾರ್ಪುರಕ್ಕೆ ಸುಮಾರು ನಲವತ್ತೈದು ಮೈಲಿಗಳ ದೂರದಲ್ಲಿದೆ. ಇವರು ಮೆಲ್ಲನೆ ಏರುವ ಮೇಡನ್ನು ಹತ್ತಿ ನಡೆಯಬೇಕಾಗಿದ್ದಿತು. ಆ ಹಗಲು ಹದಿನೈದು ಮೈಲಿ ಪ್ರಯಾಣ ಮಾಡಿ ಒಂದು ಸಣ್ಣ ಹಳ್ಳಿಯ ವಿಶ್ರಾಂತಿ ಗೃಹ

ದಲ್ಲಿ ನಿಂತರು. ದೇಹಬಾಧೆನಿವಾರಣೆಗಾಗಿ ನಾಲ್ಕೈದುಸಲ ನಿಂತಿದ್ದುದು ಹೊರತು ರಾಮುದಾಸನೂ ರಾಮುಚರಣದಾಸನೂ ದಾರಿಯನ್ನು ವೇಗವಾಗಿಯೇ ನಡೆದರು.

ರಾಮುದಾಸನು ಘಟ್ಟಿ ಆಹಾರವನ್ನು ತೊರೆದು ಒಂದು ಬಟ್ಟಲು ಹಾಲನ್ನು ಮಾತ್ರ ಕುಡಿದನು. ರಾಮುಚರಣದಾಸನು ಭಿಕ್ಷ ಬೇಡಿ ರೊಟ್ಟಿ ಮತ್ತು ತೊವ್ವೆಯನ್ನು ದೊರಕಿಸಿಕೊಂಡನು. ಮಾರನೆಯ ದಿನವೂ ಇವರು ಹೊತ್ತಿಗೆ ಮುಂಚೆಯೇ ಹೊರಟರು. ಸುಮಾರು ಎಂಟು ಗಂಟೆಯ ಹೊತ್ತಿಗೆ ದಾರಿಯಲ್ಲಿ ಒಂದು ಹಳ್ಳಿ ಸಿಕ್ಕಿತು. ಇವರು ಒಂದು ಮಿಠಾಯಿಅಂಗಡಿ ಹತ್ತಿರ ಹೋಗುತ್ತಿದ್ದಾಗ ಅಂಗಡಿಯಲ್ಲಿ ಹರಡಿದ್ದ ತಿನಸು ರಾಮುಚರಣದಾಸನ ಗಮನವನ್ನು ಸೆಳೆಯಿತು. ಅಯ್ಯೋ ಪಾಪ! ಮಿಠಾಯಿಯನ್ನು ನೋಡಿ ಅವನ ಬಾಯಲ್ಲಿ ನೀರೂರಿರಬೇಕು. ಅಂಗಡಿಯ ಪಕ್ಕದಲ್ಲಿ ಗಿರಾಕಿಗಳಿಗಾಗಿ ಒಂದು ಸಣ್ಣ ಗರಿಗುಡಿಸಲಿದ್ದಿತು. ರಾಮುಚರಣದಾಸನು ಅದನ್ನು ಪ್ರವೇಶಿಸಿದನು. ರಾಮುದಾಸನೂ ಜೊತೆಯಲ್ಲಿ ಹೋದನು. ಇಬ್ಬರೂ ನೆಲದಮೇಲೆ ಕುಳಿತರು. ಅಲ್ಲಿ ಯಾರೂ ಇರಲಿಲ್ಲ. ರಾಮುಚರಣದಾಸನು ಮೂರು ಗಂಟೆಗಳ ಕಾಲ ನಡೆದಿದ್ದುದರಿಂದ ವಿಶ್ರಾಂತಿ ಪಡೆಯಲು ನಿಂತಿರಬಹುದೆಂದು ರಾಮುದಾಸನು ಊಹಿಸಿದನು. ಭಗವಂತನ ವ್ಯಾಪಾರಗಳು ಆಶ್ಚರ್ಯಕರವಾದವು. ಇವರು ಗುಡಿಸಲನ್ನು ಹೊಕ್ಕ ಕೆಲವು ನಿಮಿಷಗಳೊಳಗಾಗಿ ಇಬ್ಬರು ಪಂಜಾಬಿಗಳು ಒಳಗೆ ಬಂದು ಇವರ ಹತ್ತಿರ ಕುಳಿತರು.

ಅವರಲ್ಲಿ ಒಬ್ಬನು ರಾಮುದಾಸನಿಗೆ ಕೈಮುಗಿದು "ಮಗ್ಗುಲ ಅಂಗಡಿಯಿಂದ ನಿಮಗೆ ಸ್ವಲ್ಪ ಹಾಲನ್ನು ತಂದುಕೊಡಬಹುದೆ ?" ಎಂದು ಕೇಳಿದನು. ರಾಮುದಾಸನು ಆಗಬಹುದೆಂದು ತಲೆಯನ್ನಾಡಿಸಿದನು. ಆಗ ಆ ಪಂಜಾಬಿ ಅವರಿಗೆ ದೊಡ್ಡ ಎರಡು ಹಿತ್ತಾಳೆ ಬಟ್ಟಲುಗಳಲ್ಲಿ ಹಾಲನ್ನು ತಂದನು. ಒಂದೊಂದು ಬಟ್ಟಲಲ್ಲೂ ಸುಮಾರು ಒಂದು ಸೇರು ಹಾಲಿದ್ದಿತು. ರಾಮುದಾಸನೂ ರಾಮುಚರಣದಾಸನೂ ಅದನ್ನು ಕುಡಿದರು.

ನಂತರ ಪಂಜಾಬಿ ರಾಮುದಾಸನನ್ನು "ಮಹರಾಜ್, ಎಲ್ಲಿಗೆ ಪ್ರಯಾಣ ಮಾಡುತ್ತಿದ್ದೀರಿ ?" ಎಂದು ಕೇಳಿದನು.

"ಚಿಂತಾಪೂರ್ಣಿಗೆ" ಎಂದು ರಾಮುದಾಸನು ಸಹಜವಾಗಿ ಉತ್ತರ ಕೊಟ್ಟನು. ಪಂಜಾಬಿ "ನಾವೂ ಅಲ್ಲಿಗೇ ಹೊರಟದ್ದೇವೆ. ನಿಮ್ಮ ಸಂಗಡ ಪ್ರಯಾಣ ಮಾಡಬಹುದಾದರೆ ಅದನ್ನು ಒಂದು ದೊಡ್ಡ ಭಾಗ್ಯವೆಂದು ಎಣಿಸುತ್ತೇವೆ" ಎಂದು ಪ್ರಾರ್ಥಿಸಿದನು.

ಆದ್ದರಿಂದ ನಾಲ್ಕು ಜನವೂ ಸೇರಿ ಮುಂದಕ್ಕೆ ಪ್ರಯಾಣ ಮಾಡಿದರು. ರಾಮುದಾಸನು ಈಗ ಊಹಿಸಲಾಗದಷ್ಟು ವೇಗದಿಂದ ನಡೆದನು. ಆ ರಾತ್ರಿಗೇ

ಚಿಂತಾಪೂರ್ಣಿಯನ್ನು ಸೇರಬೇಕೆಂದು ಸೂಚಿಸಿದನು. ಮಧ್ಯೆ ಆಮಶಂಕೆಯಿಂದ ಐದು ಆರುಸಲ ದೇಹಬಾಧೆಗಾಗಿ ನಿಲ್ಲಬೇಕಾಗಿದ್ದರೂ ದಾರಿಯುಬೇರೆ ಇಡಿಗು ತಡಿಗಾಗಿದ್ದರೂ ಇವರು ವೇಗದಿಂದಲೇ ಮುಂದರಿದರು. ಇನ್ನೂ ಇಪ್ಪತ್ತೇಳು ಮೈಲಿಗಳಷ್ಟು ಪ್ರಯಾಣ ಮಾಡಬೇಕಾಗಿದ್ದಿತು. ರಾತ್ರಿ ಒಂಬತ್ತು ಗಂಟೆಗೆ ಇವರು ಚಿಂತಾಪೂರ್ಣಿಯನ್ನು ಮುಟ್ಟಿದರು. ರಾತ್ರಿಯನ್ನು ಒಂದು ಲಾಯದ ಹೊರಗೆ ಕಳೆದರು.

ಚಿಂತಾಪೂರ್ಣಿ ಒಂದು ಸಣ್ಣ ಊರು. ಇದರಲ್ಲಿ ಚಿಂತಾಪೂರ್ಣಿ ದೇವ ತೆಯ ಆಲಯವಿದೆ. ಊರಿಗೆ ದೇವತೆಯ ಹೆಸರನ್ನೇ ಇಟ್ಟಿದಾರೆ. ಈ ದೇವಾಲ ಯಕ್ಕೆ ಒಮ್ಮೆ ಬಂದ ಮಾತ್ರದಿಂದ ಸಕಲ ದುಃಖಗಳೂ ಕಳವಳಗಳೂ ಸಂಪೂರ್ಣ ವಾಗಿ ಶಮನವಾಗುವುದೆಂದು ಜನರ ನಂಬಿಕೆ. ಆದುದರಿಂದಲೇ ದೇವತೆಗೆ ಈ ನಾಮಧೇಯ. ಮಾರನೆಯ ದಿನ ಸ್ನಾನವಾದ ಮೇಲೆ ಈ ಗೆಳೆಯರು ಆಲಯಕ್ಕೆ ಹೋದರು. ಪಂಜಾಬಿ ಸ್ನೇಹಿತ, ಆತನ ಹೆಸರು ಪಂಡಿತ ಜೀವನದಾಸ, ರಾಮ ದಾಸನು ಆ ಹಳ್ಳಿಯಲ್ಲಿ ಒಂದು ದಿವಸ ವಿಶ್ರಾಂತಿ ಪಡೆಯಬೇಕೆಂದು ಒಪ್ಪಿಸಿದನು. ರಾಮದಾಸನಿಗೆ ಆಮಶಂಕೆಯಾಗಿದೆ ಎಂದು ತಿಳಿದಾಗ ಜೀವನ್‌ದಾಸ ರಾಮ ದಾಸನ ಆರೋಗ್ಯದ ವಿಷಯದಲ್ಲಿ ತುಂಬ ಕಳವಳಗೊಂಡನು.

ಒಂದು ದಿನ ಅಲ್ಲಿ ನಿಂತು ಆಪ್ಯಾಯಿತರಾಗಿ ಸಂಗಡಿಗರು ಮತ್ತೆ ಪ್ರಯಾಣ ಹೊರಟರು. ಅವರ ಗುರಿ ಜ್ವಾಲಾಜಿ. ಅದು ಚಿಂತಾಪೂರ್ಣಿಯಿಂದ ಸುಮಾರು ಇಪ್ಪತ್ತೈದು ಮೈಲಿ ದೂರ. ಇವರು ಮತ್ತೆ ವೇಗವಾಗಿಯೇ ನಡೆಯಲಾರಂಭಿ ಸಿದರು. ಮಧ್ಯಾಹ್ನ ದಾರಿಯ ಮರಗಳ ಬುಡದಲ್ಲಿ ಎರಡು ಗಂಟೆಗಳ ವಿಶ್ರಾಂತಿ ಪಡೆದರು. ಈ ವೇಳಿಗೆ ಆಮಶಂಕೆ ನಿಂತಿದ್ದಿತು. ಆದರೆ ಜ್ವಾಲಾಜಿಯ ಹತ್ತಿರ ಬರುವಾಗ್ಗೆ ರಾಮದಾಸನಿಗೆ ಬಲಗಾಲಿನಲ್ಲಿ ಏನೋ ತೊಂದರೆ ಕಾಣಿಸಿತು. ಆದರೂ ಇವರು ಸಾಯಂಕಾಲದ ವೇಳೆಗೆ ಜ್ವಾಲಾಜಿಯನ್ನು ಸೇರಿದರು. ರಾತ್ರಿ ಯನ್ನು ದೇವಾಲಯಕ್ಕೆ ಬಹಳ ಹತ್ತಿರವಿರುವ ದಶನಾಮಿ ಸಂನ್ಯಾಸಿಗಳ ಒಂದು ಆಶ್ರಮದಲ್ಲಿ ಕಳೆದರು. ಇಲ್ಲಿ ಇವರಿಗೆ ಊಟ ಉಪಚಾರ ನಡೆಯಿತು. ಆಶ್ರಮ ದವರೂ ಬಹಳ ಪ್ರೇಮ ಆದರಗಳನ್ನು ತೋರಿದರು.

ಮರು ದಿನ ರಾಮದಾಸನು ಉಳಿಯುವುದಕ್ಕೆ ಪ್ರತ್ಯೇಕ ಸ್ಥಳಕ್ಕಾಗಿ ಬೆಟ್ಟ ದಲ್ಲಿ ಗುಹೆಯನ್ನು ಹುಡುಕಿದನು. ಆಶ್ರಮಕ್ಕೆ ಕೆಲವು ಗಜಗಳ ದೂರದಲ್ಲಿ ಸಾಲಾಗಿ ಬರಿದಾಗಿದ್ದ ಕೆಲವು ಕೊಟಡಿಗಳ ಭದ್ರವಾದ ಒಂದು ಕಟ್ಟಡವನ್ನು ಕಂಡನು. ಇವುಗಳೊಂದನ್ನು ತಾನು ಉಪಯೋಗಿಸುವುದೆಂದು ಯೋಚಿಸಿದನು. ರಾಮಚರಣದಾಸ ಜೀವನ್‌ದಾಸರು ರಾಮದಾಸನೊಂದಿಗೆ ಈ ಕೊಟಡಿಯಲ್ಲಿ ಉಳಿದುಕೊಂಡರು. ಜೀವನ್‌ದಾಸನೊಂದಿಗೆ ಬಂದಿದ್ದ ಇನ್ನೊಬ್ಬ ಸ್ನೇಹಿತನು

ಮಧ್ಯಮಾರ್ಗದಲ್ಲೇ ಹೊರಟು ಹೋಗಿದ್ದನು. ಅವನೊಬ್ಬ ಕಾಲೇಜಿನ, ವಿದ್ಯಾರ್ಥಿ, ಅವನ ತಂದೆ ತಾಯಿಗಳ ಬಳಿಗೆ ಹೋಗುತ್ತಿದ್ದನು. ಅವರು ಅಲ್ಲೇ ಆ ಜಿಲ್ಲೆಯಲ್ಲಿ ವಾಸಿಸುತ್ತಿದ್ದರು.

ರಾಮದಾಸನಿಗೆ ಈಗ ಬಲ ಅಂಗಾಲಿನಲ್ಲಿ ಒಂದು ಬೊಕ್ಕೆ ಎದ್ದಿರುವುದು ಕಾಣಿಸಿತು. ಆದರೂ ತಾವು ಅದೇ ಕೆಲಸವಾಗಿ ಬಂದಿದ್ದುದರಿಂದ ಇವರು ಜ್ವಾಲಾಜಿಯ ದರ್ಶನವನ್ನು ಮಾಡಲು ಹೋದರು.

ದೇವಸ್ಥಾನ ಅಖಂಡವಾದ ಒಂದು ಬಂಡೆಯಲ್ಲಿ ಕಡೆದಿರುವ ಚಚ್ಚೌಕವಾದ ಕಟ್ಟಡ. ಮೇಲ್ಛಾವಣಿ ಬಂಗಾರದ ಮುಲಾಮಿನ ರೇಕಿನದು. ಅದರಲ್ಲಿ ಅಂದವಾದ ಭುವನೇಶ್ವರಿಯೊಂದಿದೆ. ಅದರಮೇಲೆ ಸುಂದರವಾದ ಕೆತ್ತನೆ ಇದೆ. ಭುವನೇಶ್ವರಿ ಬಿಸಿಲಪ್ರಭೆಯಲ್ಲಿ ಕಾಂತಿಯಿಂದ ಬೆಳಗುತ್ತಿದ್ದಿತು. ಬಂಗಾರದ ರೇಕಿನ ಛಾವಣಿ ಚರಿತ್ರೆಯಲ್ಲಿ ಪ್ರಸಿದ್ಧನಾದ ಯೋದ್ಧರಾಜ ರಣಜಿತ್‌ಸಿಂಗನ ಕಾಣಿಕೆಯೆಂದು ಹೇಳುತ್ತಾರೆ. ರಾಮದಾಸನು ದೇವಾಲಯವನ್ನು ಪ್ರವೇಶಿಸಿ ನೋಡಿದಾಗ ಒಳಗೆ ಯಾವ ವಿಗ್ರಹವೂ ಇಲ್ಲದೆ ಬರಿದಾಗಿರುವ ವಿಶೇಷ ಕಂಡಿತು. ದ್ವಾರಕ್ಕೆ ಕೆಲವು ಹೆಜ್ಜೆಗಳ ದೂರದಲ್ಲಿ ಒಂದು ಚತುರ್ಭುಜದ ಗುಂಡಿ ಕಾಣಿಸಿತು. ಇದರಲ್ಲಿ ಒಂದು ದೊಡ್ಡ ಉರಿಯನಾಲಗೆ ಆಲುತ್ತ ಘುಯ್ಯುತ್ತ ಇರುವುದು ಕಂಡಿತು. ಹಾಗೆಯೇ ದೇವಾಲಯದ ಒಳಗೆಲ್ಲ ಕಲ್ಲುಗೋಡೆಗಳಲ್ಲಿ ಅಲ್ಲಲ್ಲಿ ಇಂಥ ಬೇರೆ ಬೇರೆ ಸಣ್ಣ ಸಣ್ಣ ಜ್ವಾಲೆಗಳು ಕಂಡುಬರುತ್ತಿದ್ದುವು. ಅಂತು ಹೀಗೆ ಅಗ್ನಿಶೈಲವು ಎಂಬಂಥ ಸುಮಾರು ಏಳು ಜ್ವಾಲೆಗಳಿವೆ. "ಜ್ವಾಲಾಜಿ" ಎಂದರೆ "ಉರಿಯ ದೇವತೆ" ಎಂದರ್ಥ. ಈ ಜ್ವಾಲೆಗಳನ್ನೇ ದರ್ಶನ ಮಾಡಿ ಪೂಜೆ ಮಾಡುವುದು.

ದೇವಾಲಯದಿಂದ ಹೊರಗೆ ಬಂದು ರಾಮದಾಸನು ಅದರ ಬಲಗಡೆ ಇದ್ದ ಕೆಲವು ಮೆಟ್ಟಲುಗಳನ್ನು ಹತ್ತಿ, ಒಂದು ಮಂಟಪಕ್ಕೆ ಹೋದನು. ಇಲ್ಲಿ ಕಲ್ಲಿನಲ್ಲಿ ಕೊರೆದಿರುವ ಗುಂಡಾದ ಮತ್ತು ಎರಡು ಅಡಿ ಆಳವಾದ ಒಂದು ಒರಳು ಕಾಣಿಸಿತು. ಇದರಲ್ಲಿ ನೀರಿದ್ದಿತು. ಕೆಳಗಣ ಒಂದು ಜ್ವಾಲೆಯಿಂದ ಅದು ಕುದಿಯುತ್ತಿದ್ದಿತು.

ಆಮೇಲೆ ರಾಮದಾಸನು ಜೀವನ್‌ದಾಸನಿಂದ ಕೇಳಿದ್ದರಲ್ಲಿ ಬಂಗಾರದ ಛಾವಣಿಯ ಮಂದಿರದಲ್ಲಿಯ ಜ್ವಾಲೆಗಳು ಭಕ್ತರು ಸಮರ್ಪಿಸಿದ ಹಾಲಿನಲ್ಲಿ ಸುಮಾರು ಅರ್ಧ ಭಾಗವನ್ನು ನೆಕ್ಕಿ ಮುಗಿಸಿ ಉಳಿದ ಅರ್ಧವನ್ನು ಪ್ರಸಾದವಾಗಿ ಉಳಿಸುತ್ತಿದ್ದುವೆಂದು ತಿಳಿಯಿತು. ಇದು ತನ್ನ ಅನುಭವವೆಂದು ಅವನು ಹೇಳಿದನು.

ದರ್ಶನಾನಂತರ ರಾಮದಾಸನೂ ಜೊತೆಗಾರರೂ ಕೊಟಡಿಗೆ ಹಿಂತಿರುಗಿದರು. ಮಾರನೆಯ ದಿನ ರಾಮದಾಸನ ಅಂಗಾಲಿನ ಊತ ಹೆಚ್ಚಿದ್ದಿತು; ಬೊಕ್ಕೆ

ಯಾಯಿತು. ಮೂರು ದಿವಸಗಳಲ್ಲಿ ಅದು ಒಂದು ದೊಡ್ಡ ನಿಂಬೆಯ ಹಣ್ಣಿನ ಗಾತ್ರವಾಯಿತು. ಜೀವನ್‌ದಾಸನೂ ರಾಮಚರಣದಾಸನೂ ಬೊಕ್ಕೆ ಮಾದು ಮೆತ್ತಗಾಗಿ ಒಡೆಯಲು ಅದಕ್ಕೆ ಮುಲಾಮು ಮುಂತಾದ ಅನೇಕ ವಿಧದ ಲೇಪನ ಗಳನ್ನು ಬಳಿಯುವುದರಲ್ಲಿ ನಿರತರಾದರು.

ಈ ಕಾಲವೆಲ್ಲಾ ಬೊಕ್ಕೆಯ ನೋವಿದ್ದರೂ, ರಾಮದಾಸನು ಮುಗುಳ್ನಗೆ ಯನ್ನು ಸೂಸುತ್ತ ಹರ್ಷವಾಗಿದ್ದನು. ರಾಮದಾಸನು ಈ ಸ್ಥಿತಿಯಲ್ಲಿದ್ದಾಗ ಅವನನ್ನು ಸಂದರ್ಶಿಸಲು ಅನೇಕ ಸಾಧುಗಳು ಬಂದರು. ಅವರಿಗೆ ಬಹಳ ಆಶ್ಚರ್ಯವನ್ನುಂಟುಮಾಡಿದ್ದು ರಾಮದಾಸನ ಹಸನ್ಮುಖ. ಕಾಲಿನಲ್ಲಿ ನೋವಿರು ವಾಗ ಮುಖದಲ್ಲಿ ಮುಗುಳ್ನಗೆ ಮೂಡಲು ಸಾಧ್ಯವಿಲ್ಲವಲ್ಲ. ರಾಮದಾಸನು ರಾತ್ರಿಯ ಹೊತ್ತು ನಿದ್ರಿಸಿದನೆನ್ನುವಂತೆ ಇರಲಿಲ್ಲ. ಅವನು ರಾತ್ರಿಯೆಲ್ಲ ಗೋಡೆಗೆ ಒರಗಿಕೊಂಡು ಕುಳಿತಿರುತ್ತಿದ್ದನು. ಅವನು ಸಂತತವಾದ ಆನಂದವನ್ನು ಅನುಭವಿ ಸುತ್ತಿದ್ದನು. ಈ ಅವನ ಸ್ಥಿತಿಯಲ್ಲಿ, ಅವನು ದೈವಭಕ್ತಿ ದೈವಸಾಕ್ಷಾತ್ಕಾರಗಳ ವಿಚಾರವಾಗಿ ಮಾತನಾಡುತ್ತಿದ್ದನು. ಜೀವನ್‌ದಾಸನಿಗೆ ರಾಮದಾಸನ ವಾಕ್ಯ ಗಳನ್ನು ಬರೆದಿಡುವ ಆಕಾಂಕ್ಷೆ. ಆವನು ರಾಮದಾಸನ ಬಾಯಿಂದ ಹೊರಡುವ ಮಾತೆಲ್ಲವನ್ನೂ ತನ್ನಿಂದ ಬರೆಯುವುದಕ್ಕೆ ಆದಷ್ಟು ಜಾಗ್ರತೆಯಾಗಿ ಕಾಗದದ ಚೂರುಗಳ ಮೇಲೆ ಗುರುತು ಹಾಕುತ್ತಾ ಹೋದನು. ಅವನು ಒಂದು ಮಣ್ಣಿನ ಹಣತೆಯ ದೀಪವನ್ನು ಉಪಯೋಗಿಸಿದನು. ಈ ರೀತಿ ಬರೆದ ಟಿಪ್ಪಣಿಗಳು ಅನೇಕ ಹಾಳೆಗಳಾದುವು.

ಏಳು ದಿನ ಕಳೆದುವು. ಬೊಕ್ಕೆ ಒಡೆಯುವ ಸೂಚನೆ ಕಾಣಲಿಲ್ಲ. ಒಂದು ಬೆಳಗುಮುಂಜಾನೆ ಒಬ್ಬ ಸಂನ್ಯಾಸಿನಿ ರಾಮದಾಸನನ್ನು ನೋಡಲು ಬಂದಳು. ಈ ಬೊಕ್ಕೆಯನ್ನು ನೋಡಿ ಆಕೆಯ ಹೃದಯ ಕರಗಿತು.

ಆಕೆ "ಮಹರಾಜ್, ಬೊಕ್ಕೆ ಹಣ್ಣಾಗಿರುವಂತೆ ಕಾಣುತ್ತದೆ. ಅದನ್ನು ತೂತುಮಾಡುವುದೊಂದೇ ಉಳಿದಿದೆ. ನಾನು ಬೇಗನೆ ಹೋಗಿ ಒಬ್ಬ ಕ್ಷೌರಿಕ ನನ್ನು ಕಳುಹಿಸುತ್ತೇನೆ. ಅವನು ಬೊಕ್ಕೆಯನ್ನು ಕುಯಿದು ನಿಮಗೆ ಹಾಯಾ ಗುವ ಹಾಗೆ ಮಾಡುತ್ತಾನೆ" ಎಂದಳು.

ಹೀಗೆ ಹೇಳಿ ಆಕೆ ಬೆಟ್ಟವಿಳಿದು ಹೋದಳು. ಸುಮಾರು ಅರ್ಧ ಗಂಟೆಯ ಮೇಲೆ ಒಬ್ಬನಾಪಿತನು ಬಂದನು; ಅವನು ಹಳ್ಳಿಯ ಶಸ್ತ್ರಚಿಕಿತ್ಸಕನೂ ಹೌದು. ರಾಮದಾಸನು ತನ್ನ ಕಾಲನ್ನು ಅವನ ಕಡೆ ನೀಡಲು, ನಾಪಿತನು ತನ್ನ ಮೊಂಡಾದ ಆಯುಧದಿಂದ ಬೊಕ್ಕೆಯನ್ನು ಕುಯ್ಯಲು ಉಪಕ್ರಮಿಸಿದನು. ಅಂಗಾಲಿನ ಚರ್ಮವು ಸಹಜವಾಗಿ ದಪ್ಪನಾದ್ದರಿಂದ ಆಯುಧವನ್ನು ಸ್ವಲ್ಪ ಶಕ್ತಿಯಿಂದ ಉಪ ಯೋಗಿಸಬೇಕಾಗಿದ್ದಿತು. ಅಂತೂ ಅವನು ಒಂದು ರಂಧ್ರವನ್ನು ಮಾಡಿ

ಆಯುಧದ ಕೊನೆಯನ್ನು ಹುಣ್ಣಿನೊಳಕ್ಕೆ ಚುಚ್ಚಿ ಅದನ್ನು ಹೊರಗೆಳೆದನು. ಇದರಲ್ಲಿ ಚರ್ಮ ಹರಿಯಿತು. ಆಮೇಲೆ ಅವನು ಒಳಗಿದ್ದ ಕೀವನ್ನು ಅದುಮಿ ತೆಗೆದು, ಹುಣ್ಣಿನ ಮೇಲೆ ಒಂದು ಚಿಂದಿ ಬಟ್ಟೆಯನ್ನು ಸುತ್ತಿದನು.

"ಮಹರಾಜ್, ಕೆಲವು ದಿನ ನಡೆಯುವುದು ಬೇಡ. ಹುಣ್ಣಿನ ಒಳಗೆ ಧೂಳು ಸೇರಿದರೆ ನಿಮಗೆ ಇನ್ನೂ ಹೆಚ್ಚು ತೊಂದರೆಯಾಗುತ್ತದೆ" ಎಂದು ಅವನು ಎಚ್ಚರಿಸಿದನು.

ಜೀವನ್‌ದಾಸನು ಮಾರನೆಯ ದಿನ ಜ್ವಾಲಾಜಿಯನ್ನು ಬಿಟ್ಟು ತನ್ನ ಸ್ಥಳವಾದ ರಾವಲ್ಪಿಂಡಿಗೆ ಹೊರಟನು. ರಾಮದಾಸನೂ ಹೊರಟನು. ಕೆಲವು ಸಾಧುಗಳೂ ರಾಮಚರಣದಾಸನೂ, ಹುಣ್ಣು ಮಾಯದೆ ಹಸಿಯಾಗಿರುವಾಗ ಕಾಲ್ನಡಿಗೆಯಲ್ಲಿ ಪ್ರಯಾಣ ಮಾಡಕೂಡದೆಂದು ರಾಮದಾಸನನ್ನು ತಡೆಯಲು ನೋಡಿದರು. ರಾಮದಾಸನು ಅವರ ಮಾತನ್ನು ಲಕ್ಷಿಸಲಿಲ್ಲ. ದಾರಿಯನ್ನು ಸೇರಿದನು.

### (ii) ರಾಮಚರಣದಾಸನು ಪರೀಕ್ಷೆಯಲ್ಲಿ ಸೋತದ್ದು

ರಾಮದಾಸನು ಕುಂಟಿಕೊಂಡು ನಡೆದನು. ಮಧ್ಯಾಹ್ನದ ಹೊತ್ತಿಗೆ ಇವರು ಹತ್ತು ಮೈಲಿ ಪ್ರಯಾಣ ಮಾಡಿ ದಾರಿಯ ಮಗ್ಗುಲಲ್ಲಿದ್ದ ಒಂದು ಹಳ್ಳಿಗೆ ಬಂದರು. ರಾಮಚರಣದಾಸನು ಊರಿನವರಿಂದ ಅಡಿಗೆಯಾದ ಊಟವನ್ನು ಭಿಕ್ಷೆ ತರುವುದಾಗಿ ಹೇಳಿ ಹೋಗಿ ಒಂದು ಗಂಟೆಯ ಹೊತ್ತಿಗೆ ಜೋಳಿಗೆಯಲ್ಲಿ ಎಲ್ಲಾ ಬಗೆಯ ಊಟದ ಸಾಮಾನುಗಳನ್ನು ಬೆರಸಿ ತಂದನು. ಊಟಮಾಡಿ ವಿಶ್ರಾಂತಿ ಪಡೆದು ಇವರು ಮರಳಿ ಹೊರಟರು. ಸಾಯಂಕಾಲಕ್ಕೆ ಇನ್ನೊಂದು ಹಳ್ಳಿಯನ್ನು ಮುಟ್ಟಿ ಅಲ್ಲಿ ರಾತ್ರಿ ಪಕ್ಕದ ಒಂದು ಬೆಟ್ಟದ ಮೇಲೆ ಇದ್ದರು.

ಮಾರನೆಯ ದಿನ ಇವರು ಫಲವತ್ತಾದ ಮನೋಹರವಾದ ಕಾಂಗ್ರ ಕಣಿವೆಯಲ್ಲಿ ಹಾಯ್ದು ಸಾಯಂಕಾಲಕ್ಕೆ ಎತ್ತರದ ಸಮಭೂಮಿಯ ಮೇಲೆ ಇದ್ದ ಊರೊಂದನ್ನು ಸೇರಿದರು. ರಾಮದಾಸನು ಇಲ್ಲಿ ಒಂದು ಮುರುಕಲು ಮನೆಯಲ್ಲಿ ರಾತ್ರಿಯನ್ನು ಕಳೆಯಬಹುದಾಗಿ ಸೂಚಿಸಿದನು. ಆದರೆ ಹುಡುಗನಿಗೆ ವಿಶ್ರಾಂತಿಯ ಮನಸ್ಸಿರಲಿಲ್ಲ. ಅವನಿಗೆ ಹಸಿವು ಬಹಳವಾಗಿದ್ದಿತು. ಊಟದ ಯೋಚನೆ ಮನಸ್ಸಿನಲ್ಲಿ ಸುತ್ತುತ್ತಿದ್ದಿತು.

ಅವನು "ಸ್ವಾಮಿಜಿ, ಸ್ವಲ್ಪ ಭಿಕ್ಷವನ್ನು ಸಂಪಾದಿಸಲು ನೋಡುತ್ತೇನೆ ಈ ಮರದ ಕೆಳಗೆ ಕಾದಿರಿ" ಎಂದನು.

ಆ ಮರ ಧರ್ಮಶಾಲೆಯ ಎದುರಿಗಿದ್ದಿತು. ರಾಮಚರಣದಾಸನು ಕತ್ತಲಲ್ಲಿ ಮರೆಯಾಗಿ ಸ್ವಲ್ಪ ಹೊತ್ತಿನಲ್ಲೇ ಸೊಟ್ಟಮುಖ ಮಾಡಿಕೊಂಡು ಬರಿಗೈಯಲ್ಲಿ ಬಂದನು.

"ಏನು ಸಂಗತಿ ರಾಮು ?" ಎಂದು ರಾಮುದಾಸನು ಪ್ರಶ್ನಿಸಿದನು.

ಅವನು ವ್ಯಥೆಯಿಂದ "ನಾನು ಎರಡು ಮನೆಗೆ ಭಿಕ್ಷಕ್ಕೆ ಹೋದೆ. ಭಿಕ್ಷಕ್ಕೆ ಬದಲಾಗಿ ಕ್ರೂರವಾದ ಬೈಗಳೂ ದೂರೂ ದೊರೆತವು. ಒಂದು ಮನೆಯಲ್ಲಿ ಮನೆಯ ತರುಣ ನನ್ನನ್ನು ಒಬ್ಬ ಅಲೆಯುವ ಕಳ್ಳನೆಂದು ತಿಳಿದು, ದೊಡ್ಡ ದೊಣ್ಣೆಯನ್ನು ತೆಗೆದುಕೊಂಡು ಅಟ್ಟಿಕೊಂಡು ಬಂದನು. ಸದ್ಯ ಪ್ರಾಣ ಉಳಿಸಿಕೊಳ್ಳೋಣ ಎಂದು ಓಡಿ ಇಗೋ ಹಿಂದಕ್ಕೆ ಬಂದೆ" ಎಂದನು.

ಕಣ್ಣಿಗೆ ಕಟ್ಟುವಂತೆ ಹೇಳಿದ ರಾಮುಚರಣದಾಸನ ಈ ಕಥೆಯನ್ನು ಕೇಳಿ ರಾಮುದಾಸನಿಗೆ ತಡೆಯದ ನಗೆ ಬಂದಿತು. ಅವನು "ರಾಮು, ಬೈಗಳೂ ದೊಣ್ಣೆಯಿಂದಏಟು ಕೊಡಲು ಬಂದದ್ದೂ ಕೂಡ ಭಿಕ್ಷ ಎಂದೇ ತಿಳಿದುಕೋ. ಮೊದಲನೆ ಭಿಕ್ಷವನ್ನು ತೆಗೆದುಕೊಂಡೆ, ಕೊನೆಯದನ್ನು ಸ್ವೀಕರಿಸಲು ಏಕೆ ಹಿಂತೆಗೆದೆ ? ಈ ಎರಡರಲ್ಲಿ ಕೊನೆಯದೆ ಹೆಚ್ಚು ಬೆಲೆಯದು" ಎಂದು ಹಾಸ್ಯವಾಗಿ ಹೇಳಿದನು.

ರಾಮುದಾಸನು ಮಾತನಾಡಿದ ರೀತಿ ರುಚಿಸದೆ ರಾಮುಚರಣದಾಸನು "ಸ್ವಾಮಿಜಿ, ನಿಮ್ಮ ಹಾಸ್ಯಕ್ಕೆ ಇದು ಸಮಯವಲ್ಲ. ನನಗೆ ಹಸಿವಾಗಿದೆ, ತಿನ್ನುವುದಕ್ಕೆ ಏನಾದರೂ ಬೇಕು. ಅದಿಲ್ಲದೆ ನಾನು ಬಿಡುವುದಿಲ್ಲ. ಇಗೋ ತಿರುಗಿ ಹೊರಟೆ" ಎಂದನು.

ಹೀಗೆ ಹೇಳಿ ಅವನು ಮರಳಿ ಮರೆಯಾದನು. ಅರ್ಧ ಗಂಟೆಯ ಒಳಗೆ ಪುನಃ ಬಂದನು. ಈ ಸಲ ಅವನ ಮುಖದಲ್ಲಿ ಹೆದರಿಕೆಯೂ, ಅದರ ಮೇಲೆ ಒಂದು ಕಷ್ಟವಾದ ಇಕ್ಕಟ್ಟಿನಿಂದ ಪಾರಾದೆನೆಂಬ ಸಮಾಧಾನವೂ ಕಾಣುತ್ತಿದ್ದುವು. ರಾಮುಚರಣದಾಸನು ಇದ್ದುದನ್ನು ಇದ್ದ ಹಾಗೆ ಹೇಳುವ ನಿಷ್ಕಪಟ ಮನಸ್ಸಿನ ಸರಳ ಸ್ವಭಾವದ ಹುಡುಗ.

ಅವನು ಕಥೆಯನ್ನು ಹೇಳುತ್ತ "ಸ್ವಾಮಿಜಿ, ಎರಡು ಸಲ ತಲೆ ಉಳಿಸಿಕೊಂಡದ್ದಾಯಿತು ! ನಿಮ್ಮನ್ನು ಬಿಟ್ಟು ಹೋದ ಸ್ವಲ್ಪದರಲ್ಲಿ ಅಲ್ಲಲ್ಲಿ ತಿರುಗುತ್ತ ಜನ ತುಂಬಿದ ಒಂದು ಮನೆಯ ಹತ್ತಿರಕ್ಕೆ ಹೋದೆ. ಮುಂದಿನ ಕೋಣೆಯಲ್ಲಿ ಒಲೆಯ ಮೇಲೆ ರೊಟ್ಟಿಯನ್ನು ಸುಡುತ್ತಿದ್ದುದು ಕಂಡಿತು. ಒಲೆ ಮಗ್ಗುಲಲ್ಲಿ ರೊಟ್ಟಿಗಳನ್ನು ಪೇರಿಸಿದ್ದರು. ಒಳಕ್ಕೆ ನುಗ್ಗಿದೆ. ಅಲ್ಲಿ ಜನ ತುಂಬಿದ್ದರು. ಒಲೆಯ ಮುಂದಿದ್ದವನನ್ನು ನನಗೆ ಕೆಲವು ರೊಟ್ಟಿ ಕೊಡೆಂದು ಕೈಚಾಚಿ ಬೇಡಿಕೊಂಡೆ. ಅವನು "ನಾವು ಪಠಾನರು, ನಾವು ಮಾಡಿದ ರೊಟ್ಟಿ ತೆಗೆದುಕೊಳ್ಳುವುದಕ್ಕೆ ಅಭ್ಯಂತರವಿಲ್ಲದಿದ್ದರೆ ಎರಡು ರೊಟ್ಟಿಯನ್ನು ಸ್ವಲ್ಪ ಪಲ್ಯವನ್ನು ಕೊಡಬಲ್ಲೆವು" ಎಂದು ಹೇಳಿದನು.

ಸುತ್ತ ಕಣ್ಣು ಬಿಟ್ಟು ನೋಡಿದರೆ, ಒರಟರೂ ಧೂರ್ತರೂ ಆದ ಸ್ಥೂಲ ಪಠಾನರು ಹಲವರು ಕಾಣಿಸಿದರು. ಅವರ ದಾಡಿಗಳು ಮೆಳೆಯಾಗಿ ಭಯಂಕರವಾಗಿದ್ದವು. ಇನ್ನು ಕಾಲ ಕಳೆಯದೆ ಒಂದೇ ಹಾರಿಗೆ ರಸ್ತೆಯನ್ನು ಸೇರಿದೆ. ಮನೆಯ

ಕಡೆಯಿಂದ ನಗುವಿನ ಗುಡುಗು ಮೆದುವಾಗಿ ಕೇಳಿಸಿತು. ಆದರೆ ಅದನ್ನೆಲ್ಲ ಆಲಿಸುವುದಕ್ಕೆ ನಾನು ಅಲ್ಲಿ ನಿಲ್ಲಲಿಲ್ಲ. ಓಟಕಿತ್ತೆ. ಎಲ್ಲಿಗೆ ಹೋಗುತ್ತಿದೇನೆಂಬ ಅರಿವಿಲ್ಲದೆ ಸಿಕ್ಕಾಬಟ್ಟೆ ಓಡಿದೆ. ಎದುರಿಗೆ ಒಂದು ಸಾಲು ಗುಡಿಸಲು ಇದ್ದುವು. ಓ, ನನಗೆ ಇಲ್ಲಿ ತಿಂಡಿ ಸಿಕ್ಕುತ್ತದೆ ಎಂದು ಯೋಚಿಸಿದೆ. ಒಂದು ಗುಡಿಸಲ ಹತ್ತಿರ ಹೋದೆ. ಮನೆಯವನು ಆದರಿಸಿದ. ಇಂಥ ರಾತ್ರಿಯಲ್ಲಿ ಬಂದ ಕಾರ್ಯವನ್ನು ತಿಳಿದವನಾಗಿ ಆತನು, "ಒಳ್ಳೆಯದು, ನಿನಗೆ ಆಹಾರ ಕೊಡುವುದಕ್ಕೆ ಏನೂ ಅಭ್ಯಂತರವಿಲ್ಲ. ಊಟ ಸಿದ್ಧವಾಗಿದೆ. ಆದರೆ ಮೊದಲೇ ಎಚ್ಚರಿಸಬೇಕಾಗಿದೆ ನಾವು ಚಮ್ಮಾರ ಜಾತಿಯವರು" ಎಂದನು. "ಏನು!" ಎಂದವನೇ ನಾನು ತುಪಾಕಿಯಿಂದ ಹೊರಬಿದ್ದ ಗೋಲಿಯಂತೆ ಉತ್ತರ ಕ್ಷಣ ಗುಡಿಸಿಲಿಂದ ಚಿಮ್ಮಿದೆ. ಇಗೋ ಇಲ್ಲಿ ಬಂದೆ. ಹಸಿವೇ ಆಗಲಿ. ಆದರೆ ಮುಹಮ್ಮದೀಯರ ಕೈಯಿಂದ ಚಮ್ಮಾರರ ಕೈಯಿಂದ ಊಟ ಮಾಡುವುದೆಂದರೆ ಮಾತ್ರ ನನ್ನಿಂದ ಆಗುವ ಕೆಲಸವಲ್ಲ" ಎಂದು ಪೂರೈಸಿದನು.

ರಾಮದಾಸನು ಅಸಮಾಧಾನವನ್ನು ಸೂಚಿಸಿ "ಆಹಾ! ರಾಮು, ನೀನು ಪರೀಕ್ಷೆಯಲ್ಲಿ ಸೋತೆ. ನೀನು ಮಾಡುತ್ತಿರುವ ಭೇದಗಳು ಅಸ್ವಾಭಾವಿಕವಾದುವು. ನೀನು ಸಮದೃಷ್ಟಿಯನ್ನು ಪಡೆಯಲೋಸುಗ ಹೊರಟಿರುವೆ; ಆದರೂ ಅಜ್ಞಾನದಿಂದ ಜನಿಸುವ ಈ ಭೇದ ಬುದ್ಧಿಗಳನ್ನು ಅನುಸರಿಸುತ್ತೀಯೆ. ಮುಹಮ್ಮದೀಯನೂ ಚಮ್ಮಾರನೂ ನಿನಗೆ ಪ್ರೀತಿ ಪಾತ್ರರಾದ **ರಾಮ**ನಾಗಬೇಕು. **ರಾಮನು** ಸರ್ವರ ಅಂತರ್ಯಾಮಿಯಲ್ಲವೆ ?" ಎಂದನು.

ರಾಮಚರಣದಾಸನು ಇದಕ್ಕೆ ಒಪ್ಪಿದನು. "ನೀವು ಹೇಳವುದು ಸತ್ಯ. ಆದರೆ ಜಾತಿಭೇದವನ್ನು ಮರೆತು ನಡೆಯುವುದು ಬಹಳ ಕಷ್ಟ. ಇದು ನನಗೆ ಹೇಗೆ ಹುಚ್ಚು ಹಿಡಿಸಿತು ನೋಡಿದಿರಾ ?" ಎಂದನು.

"ಇನ್ನೊಂದು ಪ್ರಯತ್ನ" ಎಂದು ಹೇಳಿ ಅವನು ಪುನಃ ಹೊರಟನು. ಕೆಲವು ನಿಮಿಷಗಳಳೊಳಗಾಗಿ ಪ್ರಸನ್ನನಾಗಿ ನಗುತ್ತ ಹಿಂತಿರುಗಿ ಬಂದನು.

"ಸ್ವಾಮಿಜಿ, ಓಬ್ಬ ಹಿಂದೂ ಮನೆಯವರು ಊಟಕ್ಕೆ ಕರೆದಿದ್ದಾರೆ ಬನ್ನಿ."

ರಾಮದಾಸನು ಅವನ ಜೊತೆಯಲ್ಲಿ ಹೊರಟನು. ಊಟಕ್ಕೆ ಕರೆದಿದ್ದವನು ಪ್ರವಾಸಿಯಾದ ಒಬ್ಬ ಅಧಿಕಾರಿ. ಊಟ ಮಾಡಿದ ನಂತರ ಇವರು ಕೈಸಾಲೆಯಲ್ಲಿ ಮಲಗಿದ್ದು, ಅರುಣೋದಯಕ್ಕೆ ಪ್ರಯಾಣ ಮಾಡಿ ಮಧ್ಯಾಹ್ನಕ್ಕೆ ಕಾಂಗ್ರಕ್ಕೆ ಬಂದರು. ಕಾಂಗ್ರ ಬೆಟ್ಟಕಾಡಿನ ಭೂಮಿ. ತಂಪಾದ ನೆರಳನ್ನು ಪಸರಿಸುವ ಮರಗಳಿಂದಲೂ, ಸ್ವಚ್ಛವಾದ ನೀರಿನ ಚಿಲುಮೆಗಳಿಂದಲೂ ತುಂಬಿದೆ. ಇಲ್ಲಿನ ವಾಯುಗುಣ ತಂಪಾಗಿ ಉತ್ತೇಜಕವಾಗಿ ಇದೆ. ಆದ್ದರಿಂದ ಇದು ಆರೋಗ್ಯಕ್ಕಾಗಿ ಹುಡುಕಿಕೊಂಡು ಬರುವ ಸ್ಥಳವಾಗಿದೆ. ರಾಮದಾಸನು ಬೀದಿ

ಗಳಲ್ಲಿ ತಿರುಗುತ್ತಾ, ಊರಾಚೆ ಹೋಗಿ ಮಹಾದೇವನ ಒಂದು ದೇಸ್ಥಾನದ ಪ್ರಾಕಾರವನ್ನು ಸೇರಿ, ಎರಡು ದೊಡ್ಡ ಆಲದ ಮರಗಳ ಮಧ್ಯೆ ದೇವಾಲಯಕ್ಕೆ ಎದುರಾಗಿ ಒಂದು ಕಲ್ಲಿನ ಚಪ್ಪಡಿಯ ಮೇಲೆ ಕುಳಿತನು. ರಾಮುಚರಣ ದಾಸನು ಊರೊಳಗೆ ನಿಂತನು. ಅವನ ಮೊದಲ ಯೋಚನೆ ಊಟವನ್ನು ದೊರಕಿಸುವುದು. ದೇವಾಲಯಕ್ಕೆ ಬಂದಿದ್ದ ಓಬ್ಬಾತನು ರಾಮುದಾಸನನ್ನು ಕಂಡು ಹತ್ತಿರ ಬಂದು,

"ಮಹರಾಜ್, ನಮ್ಮ ಮನೆಯಲ್ಲಿ ನಿಮಗೆ ಆತಿಥ್ಯ ಮಾಡಿಸಲು ನನಗೆ ತುಂಬಾ ಸಂತೋಷ. ಅಥವಾ ಊಟವನ್ನು ಇಲ್ಲಿಗೆ ತರಬೇಕೆಂದರೆ ತರುತ್ತೇನೆ." ಎಂದನು.

ರಾಮುದಾಸನು "ರಾಮುಜಿ, ರಾಮುದಾಸನು ಭಿಕ್ಷಕ್ಕಾಗಿ ನಿಮ್ಮ ಮನೆಗೆ ಬರುತ್ತಾನೆ. ಆದರೆ ರಾಮುದಾಸನ ಸಂಗಡಿಗನಾದ ಮತ್ತೊಬ್ಬನಿಗೆ ನೀವು ಭೋಜನ ಒದಗಿಸಬೇಕಾಗುತ್ತದೆ. ಆತನು ಸದ್ಯದಲ್ಲಿ ಇಲ್ಲಿಗೆ ಬರುತ್ತಾನೆ"ಎಂದನು.

ಆತನು "ಆಗಬಹುದು ಮಹರಾಜ್! ನಿಮ್ಮನ್ನು ಕರೆದುಕೊಂಡು ಹೋಗಲು ಸರಿಯಾಗಿ ಹನ್ನೆರಡು ಗಂಟೆಗೆ ಬರುತ್ತೇನೆ" ಎಂದು ಹೇಳಿ ಹೊರಟು ಹೋದನು.

ಇದಾದ ಸ್ವಲ್ಪ ಹೊತ್ತಿನ ಮೇಲೆ ರಾಮುಚರಣದಾಸನು ಬಂದನು. ಅಲ್ಲಿ ಇಲ್ಲಿ ಪ್ರಯತ್ನಮಾಡಿದಮೇಲೆ ಕೊನೆಗೆ ಊರಿನ ಯಾರೋ ಒಬ್ಬ ಪುಣ್ಯಾತ್ಮಳು ಇಬ್ಬರಿಗೂ ಊಟಕ್ಕೆ ಹೇಳಿದಳೆಂದು ಬಹಳ ಸಂತೋಷದಿಂದ ತಿಳಿಸಿದನು.

ರಾಮುದಾಸನು "ರಾಮು, ಆಕೆಗೆ ತೊಂದರೆ ಕೊಡಬೇಕಾದ್ದಿಲ್ಲ. ಈಗಾಗಲೇ ಊರಿನ ಒಬ್ಬ ವ್ಯಾಪಾರಿ ಮಿತ್ರ ಊಟಕ್ಕೆ ಹೇಳಿದ್ದಾನೆ. ಅವನಲ್ಲಿಗೆ ಹೋಗೋಣ. ನಮ್ಮನ್ನು ಕರೆದುಕೊಂಡುಹೋಗಲು ಅವನು ಹನ್ನೆರಡು ಗಂಟೆಗೆ ಬರುತ್ತಾನೆ" ಎಂದು ಹೇಳಿದನು.

ಇಬ್ಬರೂ ಮಗ್ಗುಲ ಒಂದು ಕೊಳದಲ್ಲಿ ಸ್ನಾನಮಾಡಿ ದೇವಸ್ಥಾನಕ್ಕೆ ಬರುವ ಹೊತ್ತಿಗೆ ವ್ಯಾಪಾರಿ ಬಂದು ಇವರನ್ನು ತನ್ನ ಮನೆಗೆ ಕರೆದುಕೊಂಡುಹೋದನು. ರಾಮುದಾಸನು ವ್ಯಾಪಾರಿಯನ್ನು ತಮಗೆ ಸಾಧಾರಣ ಊಟವನ್ನು ಒದಗಿಸ ಬೇಕೆಂದು ಕೇಳಿಕೊಂಡಿದ್ದನು. ಈತನು ಇಬ್ಬರಿಗೂ ಬಹು ಪ್ರೀತಿಯಿಂದ ಭೋಜನ ಮಾಡಿಸಿದನು.

ಇವರು ಕಾಂಗ್ರದಲ್ಲಿ ನಾಲ್ಕೈದು ದಿನ ನಿಂತರು. ಅಲ್ಲಿಯ ಒಬ್ಬ ಸಂನ್ಯಾಸಿಯ ಆಶ್ರಮ ಮನೋಹರವಾದ ಒಂದು ಸ್ಥಳದಲ್ಲಿ ಇದ್ದಿತು. ಇವರು ಅದರಲ್ಲಿ ಒಂದು ರಾತ್ರಿಯನ್ನು ಕಳೆದರು. ಸಂನ್ಯಾಸಿ ಪ್ರೇಮ ಆತಿಥ್ಯಗಳ ಮೂರ್ತಿಯಾಗಿದ್ದನು. ಯಾತ್ರಿಕರು ಕೊನೆಯ ದಿನಸಗಳನ್ನು ಆ ಮೊದಲು ತಂಗಿದ್ದ ಮಹಾದೇವನ ದೇವ

ಸ್ಥಾನದಲ್ಲಿ ಕಳೆದರು. ಇಲ್ಲಿ ರಾಮುದಾಸನಿಗೆ ಆರೋಗ್ಯಕ್ಕಾಗಿ ಕಾಂಗ್ರಕ್ಕೆ ಬಂದಿದ್ದ ಒಬ್ಬ ಡಾಕ್ಟರ ಪರಿಚಯುವಾಯಿತು. ಈತನು ದೇವಸ್ಥಾನದ ಪ್ರಾಕಾರದ ಮುಂಟಪದಲ್ಲಿ ಇಳಿದುಕೊಂಡಿದ್ದನು. ಈತನು ರಾಮುದಾಸನಿಗೆ ತುಂಬಾ ಪ್ರೀತಿ ತೋರಿಸಿದನು. ತಾನು ಯೂರೋಪಿನಲ್ಲಿ ಮಾಡಿದ ವಿಸ್ತಾರವಾದ ಸಂಚಾರದ ಕಥೆಯನ್ನು ಹೇಳಿದನು. ಅವನು ಅಲ್ಲಿ ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ ಮುತ್ತು ಇತರ ದೇಶಗಳಲ್ಲಿ ಸಂಚಾರಮಾಡಿದ್ದನು. ಚನ್ನಾಗಿ ಓದಿದ್ದಾತ. ಸಂಭಾಷಣೆ ಯಲ್ಲಿ ಈತನು ಸ್ವೀಡನ್ ದೇಶದ ವೇದಾಂತಿ ಇಮ್ಯಾನ್ಯುಯಲ್ ಸ್ವೀಡನ್ ಬೊರ್ಗಿನ ಗ್ರಂಥಗಳನ್ನು ನೆನೆದನು.

ಈತ ಹೇಳಿದನು: "ಸ್ವೀಡನ್ ದೇಶದವನಾದ ಸ್ವೀಡನ್ ಬೋರ್ಗನು ಪ್ರಪಂಚದಲ್ಲಿ ಇಷ್ಟೊಂದು ಕಷ್ಟಗಳನ್ನು ನೋಡಿ ಒಮ್ಮೆ ಬಹಳ ಆಕ್ರೋಶದಿಂದ 'ಲೋಕದಲ್ಲಿ ಇಷ್ಟು ಕಷ್ಟವನ್ನು ಸೃಷ್ಟಿಸಿರುವ ಕ್ರೂರ ರಾಜ ದೇವರು ನನ್ನ ಕೈಗೆ ಸಿಕ್ಕಿದ್ದೇ ಆದರೆ ನಾನು ಅವನನ್ನು ಕತ್ತು ಹಿಸುಕಿ ಕೊಲ್ಲುವೆನು' ಎಂದು ಹೇಳಿದ್ದಾನೆ. ಇದು ನಿಮಗೆ ಹೇಗೆ ಕಾಣುತ್ತದೆ?"

"ಆತನು ಹಾಗೆ ಹೇಳುವಾಗ ರಾಮುದಾಸನು ಅಲ್ಲಿ ಇದ್ದಿದ್ದರೆ ಅವನು ಆ ವೇದಾಂತಿಯ ಕೈಗಳನ್ನು ಹಿಡಿದು ಅವನ ಕತ್ತಿಗೇ ಸೇರಿಸಿ 'ನಿನಗೆ ಈ ಪ್ರಪಂಚ ದಲ್ಲಿ ಕಾಣುವ ಕಷ್ಟವೆಲ್ಲ ನಿನ್ನಿಂದಲೇ ಆಗಿದೆ, ನಿನ್ನ ಕತ್ತನ್ನೇ ಹಿಸಿಕಿಕೊಂಡು ಸಾಯಿ' ಎನ್ನುತ್ತಿದ್ದನು."

ರಾಮುದಾಸನು ಕಾಂಗ್ರವನ್ನು ಬಿಟ್ಟುಹೊರಡುವ ದಿನ ಬಂದಾಗ ಆ ಡಾಕ್ಟರು ರಾಮುದಾಸನಿಗೆ ಪ್ರಯಾಣದ ಖರ್ಚಿಗಾಗಿ ಎರಡು ರೂಪಾಯಿಗಳನ್ನು ಬಲವಂತಮಾಡಿ ಕೊಟ್ಟನು. ರಾಮುದಾಸನು ಈ ದಾನವನ್ನು ಸ್ವೀಕರಿಸಲು ಸಮ್ಮತಿಸಲಿಲ್ಲ. ದುಡ್ಡನ್ನು ರಾಮುಚರಣದಾಸನಿಗೆ ನೀಡಲು, ಅವನು ರಾಮು ದಾಸನ ನಿರೋಧವನ್ನು ಲಕ್ಷಿಸದೆ ಅದನ್ನು ಸ್ವೀಕರಿಸಿದನು.

ಕಾಂಗ್ರವನ್ನು ಬಿಟ್ಟು ಪ್ರಯಾಣ ಮಾಡಿ ಇವರು, ರಾತ್ರಿ ಒಂದು ಹಳ್ಳಿಯ ಹೊರಗೆ ಒಂದು ಬಾವಿಯು ದಡದಲ್ಲಿನ ಒಂದು ಮರದ ಬುಡದಲ್ಲಿ ಉಳಿದರು. ಇಲ್ಲಿ ರಾಮುದಾಸನು ರಾಮುಚರಣದಾಸನಿಗೆ ತಾನೂ ಅವನೂ ಪ್ರತ್ಯೇಕವಾಗ ಬೇಕೆಂದು ಸೂಚಿಸಿದನು.

"ರಾಮು, ನೀನು ನಿನ್ನ ದಾರಿಯಲ್ಲಿ ಹೋಗಿ ಅನುಭವವನ್ನು ಪಡೆ. ರಾಮು ದಾಸನೂ ಒಬ್ಬಂಟಿಗನಾಗಿಯೇ ಹೋಗುತ್ತಾನೆ. ಆದರೆ ಇಬ್ಬರೂ ಕಾಶ್ಮೀರಕ್ಕೆ ಹೋಗುವವರೆಂದು ಜ್ಞಾಪಕದಲ್ಲಿಟ್ಟುಕೊ. ಅಲ್ಲಿ ಸೇರೋಣ."

ಪ್ರಾರಂಭದಲ್ಲಿ ರಾಮುಚರಣದಾಸನು ಇದಕ್ಕೆ ಸರ್ವಥಾ ಒಪ್ಪಲಿಲ್ಲ. ಅವನು ಗೊಣಗಿದನು, ಕೋಪಿಸಿದನು, ಅತ್ತನು. ಆದರೆ ಈ ಮಾರ್ಗವನ್ನು ಅನು ಸರಿಸುವುದು ತೀರಾ ಆವಶ್ಯಕವೆಂದೂ, ಇದರಿಂದ ರಾಮುಚರಣದಾಸನಿಗೆ

ಶ್ರೇಯಸ್ಸು ಆಗುವುದೆಂದೂ, ರಾಮದಾಸನು ಮನಮುಟ್ಟುವಂತೆ ತಿಳಿಸಿದನು. ಸಾಧು ಆದವನು ಸ್ವತಂತ್ರ ಜೀವನವನ್ನು ನಡೆಸಿಯೇ ಜೀವನ ಮತ್ತು ಸತ್ಯದ ರಹಸ್ಯವನ್ನು ತಿಳಿದುಕೊಳ್ಳಬೇಕು. ಎಲ್ಲ ವೇಳೆಯೂ ಆತ್ಮದ ವಿಷಯದಲ್ಲಿ ಹೊರಗಣ ಒಂದು ಊರೆಯನ್ನು ಅವಲಂಬಿಸುವುದು ಸಾಧಕನ ಬೆಳವಣಿಗೆಗೆ ಅಡ್ಡಿಯಾಗುತ್ತದೆ. ಏಕೆಂದರೆ ಆಗ್ಗೆ ಆತನ ದೃಷ್ಟಿಯಲ್ಲಿ ವಿಕಾಸಕ್ಕೂ ಮತ್ತು ಸಮತ್ವಾನುಭವಕ್ಕೂ ಬೇಕಾದ ಬಳುಕು ಇರುವುದಿಲ್ಲ. ಸತ್ಯದ ಆನಂತ್ಯವನ್ನು ಗ್ರಹಿಸಿ ಅನುಭವಕ್ಕೆ ತಂದುಕೊಳ್ಳುವುದು ಅವನ ಗುರಿ; ಅಂಥಾದ್ದರಲ್ಲಿ ಶ್ರದ್ಧೆಯ ಆಶ್ರಯ ಸಂಕುಚಿತವಾಗಿ ಏಕದೇಶವಾಗಿ ಮುಗಿಯುತ್ತದೆ.

## (iii) ಸರ್ಪರೂಪಿ ಭಗವಂತ

ಮಾರನೆಯ ಬೆಳಗಿನ ನಾಲ್ಕು ಗಂಟೆಯ ಸಮಯದಲ್ಲಿ ರಾಮಚರಣ ದಾಸನು ರಾಮದಾಸನಿಂದ ಬೀಳ್ಕೊಂಡು ಪ್ರಯಾಣ ಮಾಡಿದನು. ರಾಮದಾಸನು ಮೂರು ಗಂಟೆಗಳ ನಂತರ ಹೊರಟನು. ಮಧ್ಯಾಹ್ನದ ಹೊತ್ತಿಗೆ ರಾಮದಾಸನು ಒಂದು ಹಳ್ಳಿಯ ಗುಡಿಯನ್ನು ಸೇರಿ ಕೈಸಾಲೆಯಲ್ಲಿ ವಿಶ್ರಮಿಸಿಕೊಂಡನು. ಇಲ್ಲಿಕೂಡ ಗುಡಿಗೆ ಬಂದಿದ್ದ ಓರ್ವ ಧರ್ಮಾತ್ಮನು ರಾಮದಾಸನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಮೊಸರನ್ನದಿಂದ ಭೋಜನ ಮಾಡಿಸಿದನು. ಅದೇ ದಿನ ಸಾಯಂಕಾಲಕ್ಕೆ ಇವನು ಇನ್ನೊಂದು ಹಳ್ಳಿಯನ್ನು ಮುಟ್ಟಿ, ಒಂದು ಆಲದ ಮರದ ಕೆಳಗೆ ರಾತ್ರಿಯನ್ನು ಕಳೆದನು. ರಾತ್ರಿ ದೊಡ್ಡ ಬಿರುಗಾಳಿ ಎದ್ದು ರಾಮದಾಸನಿದ್ದ ಕಡೆ ಅಸಂಖ್ಯಾತ ಪತಂಗಗಳು ಮುತ್ತಿಕೊಂಡವು. ರಾಮದಾಸನು ರಾತ್ರಿಯೆಲ್ಲ ಪ್ರಚಂಡ ಮಾರುತದ ಹಾವಳಿಯನ್ನೂ ಅಸಂಖ್ಯಾತ ಪತಂಗಗಳ ಬೇಕಿಲ್ಲದ ಆದರವನ್ನೂ ಮೌನದಿಂದ ನೋಡುತ್ತಿದ್ದನು.

ಅವನು ಅರುಣೋದಯಕ್ಕೆ ಪ್ರಯಾಣವನ್ನು ಮುಂದರಿಸಿದನು. ಅಂಗಾಲಿನ ಹುಣ್ಣು ವಾಸಿಯಾಗುತ್ತ ಬಂದಿದ್ದಿತು. ಹಳೆಯ ಚರ್ಮ ಸುಲಿದುಬೀಳುವಂತಿದ್ದಿತು; ಹೊಸ ಚರ್ಮ ಘಟ್ಟಿಯಾಗುತ್ತಿದ್ದಿತು. ಅವನು ಮಧ್ಯಾಹ್ನದ ವೇಳೆಗೆ ದೊಡ್ಡ ಮರಗಳಿಂದ ಆವೃತವಾಗಿದ್ದ ವಿಶಾಲವಾದ ಒಂದು ಕೆರೆಗೆ ಬಂದನು. ಅದು ಹೆಚ್ಚಾಗಿ ಮಹಮ್ಮದೀಯರು ವಾಸವಾಗಿರುವ ಒಂದು ಹಳ್ಳಿಯ ಬಳಿಯಿದ್ದಿತು. ಅವನು ಆ ದೊಡ್ಡ ಮರಗಳಲ್ಲಿ ಒಂದರ ಕೆಳಗೆ ಕುಳಿತನು. ಸ್ವಲ್ಪ ಹೊತ್ತಾದ ನಂತರ ಭಿಕ್ಷಕ್ಕಾಗಿ ಊರೊಳಕ್ಕೆ ಹೋದನು. ಅವನು ಮೊದಲು ಒಂದು ಸಣ್ಣ ಗುಡಿಸಲಿಗೆ ಹೋದನು. ಅದರ ಬಾಗಿಲಲ್ಲಿ ಮನೆಯ ಮಾತೆಯು ನಿಂತಿದ್ದುದು ಕಂಡಿತು.

ರಾಮದಾಸನು "ತಾಯಿ, ನಿನ್ನ ಮಗುವಿಗೊಂದು ರೊಟ್ಟಿ ಕೊಡುವೆಯಾ?" ಎಂದು ಹಿಂದೀ ಭಾಷೆಯಲ್ಲಿ ಭಿಕ್ಷ ಬೇಡಿದನು.

ಆಕೆ "ಸಾಧುಜಿ, ನಾನು ಮುಸಲ್ಮಾನ ಮತದವಳು. ನೀವು ಹಿಂದೂ ಸಾಧುಗಳು. ನಾನು ಕೊಡುವ ಊಟವನ್ನು ನೀವು ಹೇಗೆ ತಿನ್ನಬಹುದು?" ಎಂದು ಕೇಳಿದಳು.

ರಾಮದಾಸನು "ರಾಮದಾಸನಿಗೆ ಹಿಂದೂ ಮಹಮದೀಯರೆಂಬ ಭೇದ ವಿಲ್ಲ. ನೀನು ಅವನಿಗೆ ತಾಯಿ. ಈ ಸಂಬಂಧ ಹೊರತು ಇನ್ನಾವುದನ್ನೂ ಅವನು ಅರಿಯನು" ಎಂದನು.

ಆಕೆ ಕೂಡಲೆ ಒಳಗೆ ಹೋಗಿ ಒಂದು ರೊಟ್ಟಿಯಮೇಲೆ ಮಾವಿನಕಾಯಿಯ ಚಟ್ಣಿಯನ್ನು ಇಟ್ಟು ತಂದುಕೊಟ್ಟಳು. ಅಂಗಳದಲ್ಲಿ ಕುಳಿತು ರಾಮದಾಸನು ಅದನ್ನು ತಿಂದನು; ಬೊಗಸೆಯಲ್ಲಿ ನೀರನ್ನು ಹಾಕಿಸಿಕೊಂಡು ಕುಡಿದು ಹತ್ತಿರದ ಇನ್ನೊಂದು ಮನೆಗೆ ಹೋದನು. ಅದೂ ಮುಸಲ್ಮಾನರ ಮನೆಯೇ ಆಗಿ ಇಲ್ಲಿಯೂ ಹಿಂದಿನ ಕಥೆಯೇ ಆಯಿತು. ಅವರ ಅಡಿಗೆಯನ್ನು ಊಟ ಮಾಡಲು ತನಗೆ ಏನೂ ಅಭ್ಯಂತರವಿಲ್ಲವೆಂದು ರಾಮದಾಸನು ಮಾತೆಯರಿಗೆ ಹೇಳಿದಾಗ ಅವರು ಅವನಿಗೆ ಸಂತೋಷದಿಂದ ಒಂದು ರೊಟ್ಟಿಯನ್ನೂ ಸ್ವಲ್ಪ ಪಲ್ಯವನ್ನೂ ಕೊಟ್ಟರು. ಅವನಿಗೆ ಸಾಕಾದಷ್ಟು ಊಟವಾಯಿತು. ಆಮೇಲೆ ಅವನು ಅಲ್ಲಿಂದ ಹೊರಟನು. ಬಿಸಿಲು ತೀಕ್ಷ್ಣವಾಗಿದ್ದಿತು. ಆದರೆ ಅವನು ಎಷ್ಟೋ ಸಲ ಉರಿಯುವ ನಡುಬಿಸಿಲಲ್ಲೆ, ವಿಶ್ರಾಂತಿಯ ಅಪೇಕ್ಷೆ ಇಲ್ಲದೆ, ಪ್ರಯಾಣ ಮಾಡಿದ್ದನು.

ರಾಮದಾಸನು ಊರನ್ನು ತಟಹಾಯುವ ಸಮಯದಲ್ಲಿ, ಒಬ್ಬ ಬ್ರಾಹ್ಮಣನು ಅವನನ್ನು ಕಂಡು, ರಟ್ಟೆ ಹಿಡಿದು ಮನೆಗೆ ಕರೆದುಕೊಂಡು ಹೋಗಿ ಅವನ ಎದುರಿಗೆ ಅಚ್ಚುಕಟ್ಟಾದ ಊಟವನ್ನು ಇರಿಸಿದನು. ರಾಮದಾಸನಿಗೆ ಹಸಿವಿರಲಿಲ್ಲ. ಆದರೂ ಆ ಬ್ರಾಹ್ಮಣನು ರಾಮದಾಸನನ್ನು ಭಿಕ್ಷಸ್ವೀಕಾರ ಮಾಡದೆ ಹೋಗಲು ಬಿಡಲಿಲ್ಲ. ಆದುದರಿಂದ ಇವನ ಮನೆಯಲ್ಲೂ ಒಂದು ರೊಟ್ಟಿಯನ್ನು ತಿನ್ನಲೇ ಬೇಕಾಯಿತು. ನಂತರ ರಾಮದಾಸನು ಆ ಹಳ್ಳಿಯನ್ನು ಬಿಟ್ಟು ಮುಂದೆ ಸಾಗಿದನು.

ರಾಮದಾಸನು ಸಾಯಂಕಾಲ ಐದು ಗಂಟೆಯ ಸಮಯಕ್ಕೆ ಪಠಾನ್ ಕೋಟೆಯನ್ನು ಮುಟ್ಟಿದನು. ದಾರಿಯ ಪಕ್ಕದಲ್ಲಿ ಒಂದು ದೇವಸ್ಥಾನದ ಬಿಳಿಯ ಗೋಪುರ ಕಾಣಿಸಿತು. ರಾಮದಾಸನು ದೇವಸ್ಥಾನವನ್ನು ಹೊಕ್ಕನು. ದೇವಸ್ಥಾನದ ಪೂಜಾರಿ ರಾಮದಾಸನನ್ನು ಕಂಡೊಡನೆ, ಇವನನ್ನು ಕಾಣಲು ಎಷ್ಟೋದಿನದಿಂದ ಕಾದಿದ್ದನೆಂಬಂತೆ, ಬಹು ಸಂತೋಷಪಟ್ಟನು. ಬಹಳ ಪ್ರೀತಿ ಯಿಂದ ರಾಮದಾಸನನ್ನು ಆಲಂಗಿಸಿ ಒಂದು ಮಂಚದ ಮೇಲೆ ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡನು. ರಾಮದಾಸನಿಗೆ ಪಾನಕವನ್ನು ಕೊಟ್ಟು ಬಹು ಸ್ನೇಹದಿಂದ ಮಾತನಾಡಿಸಿದನು. ಆಗ ಕತ್ತಲಾಗುತ್ತಿದ್ದಿತು.

ರಾಮುದಾಸನು "ಮಹರಾಜ್, ರಾಮುದಾಸನು ಈ ರಾತ್ರಿ ಈ ದೇವಸ್ಥಾನ ದಲ್ಲಿ ಸಂಪೂರ್ಣವಾಗಿಏಕಾಂತವಾದ ಕೋಣೆಯಲ್ಲಿರಬೇಕೆಂದು ಬಯಸುತ್ತಾನೆ. ದಯವಿಟ್ಟು ಅಂಥ ಸ್ಥಳವನ್ನು ಒದಗಿಸಿಕೊಡಿರಿ" ಎಂದು ಬೇಡಿದನು.

ಕೂಡಲೆ ಪೂಜಾರಿ ದೇವಸ್ಥಾನದ ಕೆಳಗೆ ನೆಲಮಾಳಿಗೆಯಲ್ಲಿ ಹೊರಗಿನ ಯಾವ ಗದ್ದಲವೂ ಕೇಳದೆ ಗುಹೆಯಂತಿರುವ ಒಂದು ಕೊಟಡಿ ಇದೆಯೆಂದು ಹೇಳಿದನು. ಆ ಕೊಟಡಿಯನ್ನು ಬಹುಕಾಲದಿಂದ ಉಪಯೋಗಿಸಿರಲಿಲ್ಲ. ಆದರೂ ಅದು ವಸತಿಗೆ ಯೋಗ್ಯವಾಗಿದ್ದಿತು. ರಾತ್ರಿ ಅದರಲ್ಲಿ ಇರಲು ರಾಮುದಾಸನು ಒಪ್ಪಿದನು. ಪೂಜಾರಿ ಒಂದು ಹಳೆಯ ಚಾಪೆಯನ್ನು ತೆಗೆದುಕೊಂಡು ರಾಮುದಾಸನನ್ನು ಒಂದು ಕಲ್ಲು ಹಂತವನ್ನಿಳಿಸಿ ಆ ಅರೆಕತ್ತಲು ಕೋಣೆಗೆ ಕರೆದುಕೊಂಡು ಹೋದನು. ಅದು ಸುಮಾರು ಹತ್ತು ಅಡಿ ಚೌಕ ವಾಗಿದ್ದಿತು. ಭೂಮಿಯ ಗರ್ಭದಲ್ಲಿದ್ದಿತು. ಪ್ರಾಯಶಃ ವರ್ಷಗಟ್ಟಲೆ ಗುಡಿಸಿರ ಲಿಲ್ಲವಾಗಿ ನೆಲದ ಮೇಲೆ ದಪ್ಪನಾಗಿ ಧೂಳು ಕವಿದಿದ್ದಿತು. ಪೂಜಾರಿ ಚಾಪೆ ಯನ್ನು ಹಾಸಿದನು. ರಾಮುದಾಸನು ಅದರ ಮೇಲೆ ಕುಳಿತು ಪೂಜಾರಿಗೆ ಸುಖ ನಿದ್ರೆ ಬಯಸಿದನು. ಪೂಜಾರಿ ಹೊರಟು ಹೋದನು. ಹೊರಗೆ ರಾತ್ರಿ ಯಾಗುತ್ತಲು ಕೋಣೆಯಲ್ಲಿ ಕಾಡಿಗೆಕತ್ತಲು ತುಂಬಿಕೊಂಡಿತು. ಗುಹೆಯಲ್ಲಿ ಹೊರಗಿನ ನೆಲದ ಸಮಕ್ಕೆ ಒಂದೇ ಒಂದು ಸಣ್ಣ ಕಿಟಕಿ ಇದ್ದಿತು.

ಗಂಟೆಗಂಟೆಯಕಾಲ ರಾಮುದಾಸನು ಚಾಪೆಯ ಮೇಲೆ ದೇಹಭಾವವನ್ನು ತೀರಾ ಅತಿಕ್ರಮಿಸಿ ಕುಳಿತಿದ್ದನು. ಆಗ ಯಾರೋ ನಡೆಯುವ ಶಬ್ದ ಕೇಳಬಂದು ಅವನಿಗೆ ಬಾಹ್ಯಜ್ಞಾನ ಉಂಟಾಯಿತು. ಅವನು ಕಣ್ಣು ಬಿಟ್ಟು ನೋಡಿದನು. ಮೂರು ಜನ ಒಳಕ್ಕೆ ಬಂದರು. ಅವರಲ್ಲಿ ಒಂದು ಲಾಂದ್ರ, ಒಂದು ಕೈ ಹಾರ್ಮೋನಿಯಮ್ ಮತ್ತು ಒಂದು ತಬಲ ಇದ್ದುವು. ಇವರು ಪೂಜಾರಿ ಮತ್ತು ಅವನ ಸ್ನೇಹಿತರು. ಪೂಜಾರಿ ರಾಮುದಾಸನಿಗೆ ಒಂದು ಹಿತ್ತಾಳೆ ಲೋಟದ ತುಂಬ ಹಾಲನ್ನು ತಂದಿದ್ದನು. ಅವನ ಒತ್ತಾಯದ ಮೇಲೆ ರಾಮುದಾಸನು ಆ ಹಾಲನ್ನು ಕುಡಿದನು.

ಪೂಜಾರಿ "ಮಹರಾಜ್, ಇಲ್ಲಿ ವಾಡಿಕೆಯಾಗಿ ಹಾಡುವ ಕೆಲವು ದೇವರ ನಾಮಗಳನ್ನು ಹಾಡಬೇಕೆಂದಿದ್ದೇವೆ. ಅದಕ್ಕಾಗಿ ವಾದ್ಯಗಳನ್ನು ತಂದಿ ದ್ದೇವೆ" ಎಂದನು.

ರಾಮುದಾಸನು "ಆಗಬಹುದು. ದೇವರ ನಾಮವನ್ನು ರಾಮುದಾಸನು ಅಗತ್ಯವಾಗಿಯೂ ಬಹಳ ಸಂತೋಷದಿಂದ ಕೇಳುತ್ತಾನೆ" ಎಂದನು.

ಲಾಂದ್ರವನ್ನು ಕೋಣೆಯ ಮಧ್ಯೆ ಇಟ್ಟು ಈ ಮಿತ್ರರು ಮೆಟ್ಟಲು ಬುಡದ ಹತ್ತಿರ ರಾಮುದಾಸನ ಎಡಗಡೆಗೆ ಪಂಕ್ತಿಯಾಗಿ ಕುಳಿತರು. ಕೀರ್ತನೆ ಪ್ರಾರಂಭ

ನಾಯಿತು. ಹಾಡು ಒಬ್ಬ ಪ್ರಸಿದ್ಧ ಸಾಧುವಿನದು; ಹಿಂದೀ ಭಾಷೆಯಲ್ಲಿದ್ದಿತು. ಅವರು ಮೊದಲುನುಡಿಯನ್ನು ಹಾಡಿದರು. ಅದರ ಅಭಿಪ್ರಾಯ ಹೀಗಿದ್ದಿತು. ("ನಾಲಗೆಯ ಮೇಲೆ ರಾಮನಾಮ ಇರುವುದರ ಆನಂದವನ್ನು ಕಂಡಿರುವವನೇ ಜೀವನ್ಮುಕ್ತ, ಬಂಧನರಹಿತ.") ಈ ನುಡಿ ಮುಕ್ತಾಯವಾದ ಕೂಡಲೇ ಅವರ ಗಾಯನ ತಟಕ್ಕನೆ ನಿಂತಿತು. ವಾದ್ಯಗಳೂ ಸುಮ್ಮನಾದುವು. ಏನು ವಿಚಾರ ವೆಂದು ರಾಮದಾಸನು ಅವರ ಕಡೆ ತಿರುಗಿ ನೋಡಿದನು. ಮೂವರೂ ಬಾಯನ್ನು ಅಗಲವಾಗಿ ತೆರೆದುಕೊಂಡು ಭಯಭ್ರಾಂತವಾದ ಕಣ್ಣುಗಳಿಂದ ರಾಮದಾಸನ ಬಲಗಡೆ ಲಾಂದ್ರದ ಆಚೆ ಕಡೆಗೆ ದೃಷ್ಟಿಸುತ್ತಿದ್ದರು. ಒಂದು ವಿಷ ಸರ್ಪ ರಾಮದಾಸನ ಕಡೆಗೆ ನಿದಾನವಾಗಿ ಹರಿದು ಬರುತ್ತಿದ್ದುದು ಕಾಣಿಸಿತು. ಆ ಮೂವರೂ ಜಗ್ಗನೆ ಎದ್ದುನಿಂತು ರಾಮದಾಸನನ್ನು ಏಳಬೇಕೆಂದು ಬೇಡಿದರು.

ಪೂಜಾರಿ "ಮಹರಾಜ್, ಈ ಸ್ಥಳವನ್ನು ಬಿಟ್ಟು ಹೋಗೋಣ. ನಿಮಗೆ ಬೇರೆ ಸ್ಥಳ ಮಾಡಬಲ್ಲೆ. ಈ ಹಾವು ಆ ಜಾತಿಯಲ್ಲಿ ಬಹಳ ಕ್ರೂರವಾದದ್ದು. ಅದರ ತಲೆಯಿಂದ ಬಾಲದವರೆಗೂ ವಿಷ ತುಂಬಿದೆ. ಏಳಿ! ಏಳಿ! ನಮ್ಮೊಂದಿಗೆ ಬನ್ನಿ" ಎಂದನು.

ರಾಮದಾಸನು ಶಾಂತನಾಗಿ ಸುಮ್ಮನೆ ಇದ್ದನು. "ರಾಮು, ಹಾವನ್ನು ಕಂಡು ಇಷ್ಟು ಏಕೆ ಹೆದರುತ್ತೀರಿ? ಭಗವಂತನೇ ಆ ರೂಪದಲ್ಲಿ ದರ್ಶನ ಕೊಟ್ಟಿದ್ದಾನೆ. ನಿಮ್ಮ ಕೀರ್ತನೆಯನ್ನು ಕೇಳುವುದಕ್ಕೋಸ್ಕರ ಎಷ್ಟೋ ಪ್ರೀತಿಯಿಂದ ಬಂದಿದ್ದಾನೆ. ನಿಮಗೇನೂ ತೊಂದರೆ ಮಾಡುವುದಿಲ್ಲ. ಕುಳಿತುಕೊಂಡು ಕೀರ್ತನೆ ಮಾಡಿ" ಎಂದನು.

ಪೂಜಾರಿ "ಅದು ಅಸಾಧ್ಯ; ಸಾಕ್ಷಾತ್ ಯಮನ ಭಟ ಇಷ್ಟು ಹತ್ತಿರವಿರು ವಾಗ ಕೀರ್ತನ ಮಾಡುವುದೆ? ನಾವು ಹೊರಟೆವು. ನೀವೂ ಜೊತೆಗೆ ಬರಬೇಕೆಂದು ನಮ್ಮ ಸೂಚನೆ" ಎಂದು ಕಿರಿಚಿದನು.

ರಾಮದಾಸನು "ಅಧೈರ್ಯಪಡಬೇಡಿ. ಹಾವು ಏನೂ ತೊಂದರೆ ಮಾಡು ವುದಿಲ್ಲ. ನೀವು ಹಾಡದಿದ್ದರೆ ಬಿಡಿ, ಆದರೆ ಓಡಿಹೋಗಬೇಡಿ. ತೊಂದರೆ ಮಾಡುವ ಅಭಿಪ್ರಾಯ ಹಾವಿಗೆ ಇಲ್ಲವೆಂಬುದು ನಿಮಗೆ ಗೊತ್ತಾಗುತ್ತದೆ" ಎಂದು ಒತ್ತಿ ಹೇಳಿದನು.

ಅವರು ಕುಳಿತುಕೊಳ್ಳಒಲ್ಲರು. ಹಾವು ರಾಮದಾಸನ ಹತ್ತಿರ ಹತ್ತಿರಕ್ಕೆ ಬಂದಹಾಗೆ ಇವರು ಗಡಿಯಾರದ ಮುಳ್ಳಿನಂತೆ ಸುತ್ತುತ್ತಾ, ಹಾವಿನ ಬಾಲದ ಕಡೆಗೆ ಬಂದರು. ಹಾವು ರಾಮದಾಸನಿಗೆ ತೀರ ಸಮೀಪವಾಗಿ ಬಂದಿತು. ರಾಮದಾಸನು ಕೈಯಿಂದ ಸಂಜ್ಞೆ ಮಾಡುತ್ತಾ "ಪ್ರಿಯತಮ ರಾಮು, ಬಾ. ಅನುಮಾನಿಸಬೇಡ" ಎಂದು ಕರೆದನು.

ರಾಮದಾಸನ ಬಟ್ಟೆಯ ಕೊನೆಯಲ್ಲಿ ಒಂದು ಚೂರು ಬೆಲ್ಲದ ಮುರುಕು ಕಟ್ಟಿದ್ದಿತು. ರಾಮದಾಸನು ಗಂಟನ್ನು ಬಿಚ್ಚಿ, ಬೆಲ್ಲವನ್ನು ಹಾವಿನ ಮುಂದಿಟ್ಟು, "ಪ್ರಿಯತಮ ರಾಮ, ನಿನಗೆ ಕೊಡಲು ರಾಮದಾಸನ ಬಳಿ ಇದೊಂದೇ ಇರುವುದು. ದಯವಿಟ್ಟು ಸ್ವೀಕರಿಸು" ಎಂದನು.

ಸರ್ಪ ಬೆಲ್ಲದ ಹತ್ತಿರಕ್ಕೆ ಬಂದು ತನ್ನ ಸೀಳಿದ ನಾಲಿಗೆಯಿಂದ ಕೆಲವು ಕ್ಷಣ ಚೆನ್ನಾಗಿ ನೆಕ್ಕಿ ನಂತರ ಮುಂದಕ್ಕೆ ಬಂದಿತು. ಅದು ಈಗ ಅವನಿಂದ ಎರಡೇ ಅಂಗುಲದ ಅಂತರದಲ್ಲಿದ್ದಿತು. ಆದರೂ ರಾಮದಾಸನು ಅಳ್ಳಾಡದೆ ಕಲ್ಲಿನಂತೆ ಕುಳಿತಿದ್ದನು. ಅದು ಏಕೋ ಸರ್ಪ ಅವನ ಬಳಿಗೆ ಸಾರದೆ ತಲೆಯನ್ನು ಹೊರಗಡೆಗೆ ತಿರುಗಿಸಿ ಸುತ್ತಿಕೊಂಡು ರಾಮದಾಸನ ಬೆನ್ನು ಕಡೆಗೆ ಹೊರಟಿತು. ಸರ್ಪ ರಾಮದಾಸನ ಎಡಪಾರ್ಶ್ವಕ್ಕೆ ಬಂದಹಾಗೆ, ರಾಮದಾಸನ ಸ್ನೇಹಿತರು ರಾಮದಾಸನ ಬಲಪಾರ್ಶ್ವಕ್ಕೆ ಬಂದರು. ಇವರು ಸದಾ ಎಚ್ಚರಿಕೆಯಿಂದ ಹಾವಿನ ಬಾಲದ ತುದಿಯಿಂದ ಒಂದು ಗಜಕ್ಕೆ ಕಡಿಮೆಯಿಲ್ಲದ ದೂರವಾಗಿಯೇ ಇದ್ದರು. ಸರ್ಪ ಈಗ ಮೆಟ್ಟಲುಗಳ ಕಡೆ ಹೊರಟು ಹಂತವನ್ನು ಒಂದು ಮೂಲೆಯಿಂದ ಹತ್ತಲಾರಂಭಿಸಿತು.

ಪೂಜಾರಿ ಆತಂಕದ ಧ್ವನಿಯಲ್ಲಿ, "ಮಹರಾಜ್, ಹೊರಗಿನ ನೆಲದ ಸಮಕ್ಕೆ ಸೇರಲು ಸುಮಾರು ನಲವತ್ತು ಮೆಟ್ಟಲನ್ನು ಏರಬೇಕು. ಹಾವು ಬಹಳ ನಿದಾನವಾಗಿ ಹೋಗುವುದರಲ್ಲಿ ಅದು ಮೇಲೆ ಸೇರಬೇಕಾದರೆ ಗಂಟೆಗಟ್ಟಲೆ ಆಗುತ್ತದೆ. ಅಲ್ಲಿಯವರೆಗೂ ನಾವು ಇಲ್ಲಿ ಸಿಕ್ಕಿಕೊಂಡ ಹಾಗಾಯಿತು. ಅಲ್ಲದೆ ಮರಳಿ ಗುಹೆಯೊಳಕ್ಕೆ ಬರಬೇಕೆಂದು ಅದರ ನೆತ್ತಿಗೆ ಯಾವಾಗ ಹತ್ತುತ್ತದೋ ಹೇಳುವಂತಿಲ್ಲ. ನಮ್ಮ ಕೆಲಸ ಪೂರೈಸಿತು" ಎಂದು ಕೂಗಿದನು.

ರಾಮದಾಸನು "ಹೆದರಬೇಡಿ, ಹಾವು ಹಂತದ ಒಂದು ಅಂಚಿನಲ್ಲಿ ಹತ್ತಿ ಹೋಗುತ್ತಿದೆ. ನೀವು ಮೆಟ್ಟಲ ಇನ್ನೊಂದು ಕಡೆ ಸುರಕ್ಷಿತವಾಗಿ ಹತ್ತಬಹುದು" ಎಂದು ಸೂಚಿಸಿದನು.

ತಕ್ಷಣವೇ ಪೂಜಾರಿ "ಅದೆಲ್ಲ ಅಸಾಧ್ಯ. ಹಾಗೆ ಮಾಡಲು ನಮಗೆ ಧೈರ್ಯವಿಲ್ಲ. ಅದನ್ನು ಕುರಿತು ನಿಮಗಿರುವ ನಂಬಿಕೆ ನಮಗಿಲ್ಲ" ಎಂದು ಉತ್ತರ ಕೊಟ್ಟನು.

ಆಗ ರಾಮದಾಸನು ತಾನು ಮೆಟ್ಟಲ ಮಧ್ಯೆ ನಿಲ್ಲುವುದಾಗಿಯೂ, ಅವರು ಹಾವು ಹರಿಯುತ್ತಿದ್ದ ದಾರಿಯ ಎದುರು ಕಡೆ ರಾಮದಾಸನ ಮತ್ತು ಗೋಡೆಯ ಮಧ್ಯೆ ಹತ್ತಿ ಹೋಗಬಹುದೆಂದೂ ಉಪಾಯವನ್ನು ಹೇಳಿದನು. ಅವರು ಒಪ್ಪಿಕೊಂಡರು. ರಾಮದಾಸನು ತಾನು ಹೇಳಿದ ಸ್ಥಳದಲ್ಲಿ ನಿಂತನು. ಆ ಸ್ನೇಹಿತರು ಒಬ್ಬರ ಹಿಂದೆ ಒಬ್ಬರು ಒಂದು ಸಲಕ್ಕೆ ನಾಲ್ಕು ಮೆಟ್ಟಲುಗಳನ್ನು

ಹಾರುತ್ತ ಹೋದರು. ಹೊರಟುಹೋಗುವ ಮುನ್ನ, ರಾಮದಾಸನಿಗೆ ಅಪಾಯದ ವಿಷಯ ಮರಳಿ ಎಚ್ಚರಿಕೆ ಹೇಳಿದರು. ತಮ್ಮ ಜೊತೆಯಲ್ಲಿಯೇ ಬಂದುಬಿಡಬೇಕೆಂದು ಬೇಡಿಕೊಂಡರು. ಅವರು ಹೋಗುವಾಗ ಕೀರ್ತನ ವಾದ್ಯಗಳನ್ನಲ್ಲದೆ ಲಾಂದ್ರವನ್ನೂ ತೆಗೆದುಕೊಂಡು ಹೊರಟುಹೋದರು.

ರಾಮದಾಸನು ಮತ್ತೆ ಕಗ್ಗತ್ತಲಿನಲ್ಲಿ ಮುಳುಗಿದನು. ಅವನು ಚಾಪೆಯನ್ನು ಸೇರಿ ಸರ್ಪ ನೆಕ್ಕಿದ್ದ ಬೆಲ್ಲದ ಮುರುಕನ್ನು ತಡವರಿಸಿ ಹುಡುಕಿದನು. ಸ್ವಲ್ಪ ಹೊತ್ತು ಹುಡುಕಿದ ಮೇಲೆ ಅದು ಸಿಕ್ಕಿತು. ಇದು ಸರ್ಪ ಉಳಿಸಿದ್ದ ಪ್ರಸಾದವಾದುದರಿಂದ ಅವನು ಅದನ್ನು ತನ್ನ ಬಾಯೊಳಕ್ಕೆ ಹಾಕಿಕೊಂಡು ಬಹಳ ಆನಂದದಿಂದ ಸವಿದನು. ರಾತ್ರಿಎಲ್ಲ ಆ ಆನಂದದಲ್ಲಿ ಕುಳಿತೇ ಇದ್ದನು. ಪ್ರಾತಃಕಾಲದ ಮುಂಜಾನೆ ಬೆಳಕು ಗವಿಯ ಸಣ್ಣ ಕಿಟಕಿಯ ತಿಳಿಯಾದ ಕನ್ನಡಿಯಿಂದ ಬಸಿದು ಬಂದಾಗ ಕಲ್ಲಿನ ಹಂತದ ಕಡಿದಾದ ಒಂದು ಮೂಲೆಯಿಂದ ಒಳಕ್ಕೆ ದೃಷ್ಟಿಸುತ್ತಿರುವ ತಲೆಯೊಂದು ರಾಮದಾಸನಿಗೆ ಕಾಣಿಸಿತು. ಪೂಜಾರಿ ರಾಮದಾಸನು ಜೀವಂತನಾಗಿದ್ದಾನೆ ಎಂಬುದನ್ನು ದೃಢಪಡಿಸಿಕೊಳ್ಳಲು ಇಣಿಕಿ ನೋಡುತ್ತಿದ್ದನು. ರಾಮದಾಸನು ಅವನ ಕಡೆ ನೋಡಿ ನಸುನಕ್ಕನು. ಆಗ ಪೂಜಾರಿ ಅವನ ಹಿಂದೆಯೇ ಅವನ ಆ ರಾತ್ರಿಯ ಸ್ನೇಹಿತರು ಒಳಕ್ಕೆ ಬಂದರು. ರಾಮದಾಸನ ಎದುರಿಗೆ ಕುಳಿತು ಅವನನ್ನು ಆಶ್ಚರ್ಯದಿಂದ ದೃಷ್ಟಿಸಿ ನೋಡಿದರು. ಆಗ ಪೂಜಾರಿಗೆ ಬೆಲ್ಲದ ಚೂರು ಬಿದ್ದಿದ್ದ ಸ್ಥಳ ಜ್ಞಾಪಕ ಬಂದಿತು. ಅದು ಅಲ್ಲಿ ಇರಲಿಲ್ಲವಾದುದರಿಂದ ಅವನು ರಾಮದಾಸನನ್ನು ಅದು ಏನಾಯಿತು ಎಂದು ಕೇಳಿದನು. ಸರ್ಪ ಉಳಿಸಿದ್ದ ಪ್ರಸಾದವಾದುದರಿಂದ ಅದನ್ನು ತಾನು ತಿಂದುಬಿಟ್ಟುದಾಗಿ ರಾಮದಾಸನು ಉತ್ತರಕೊಟ್ಟನು.

ಪೂಜಾರಿ "ಅಯ್ಯೋ ದೇವರೇ! ನೀನು ಎಂತಹ ಪ್ರಚಂಡ ಮನುಷ್ಯ!" ಎಂದು ಘಾಬರಿಯಿಂದ ಹೇಳಿದನು.

"ರಾಮದಾಸನು ಪ್ರಚಂಡ ಮನುಷ್ಯನಲ್ಲ. ಅವನು ಭಗವಂತನ ಶಿಶು, ಭಗವಂತನ ಸೇವಕ ಮಾತ್ರ" ಎಂದು ರಾಮದಾಸನು ಉತ್ತರವಿತ್ತನು.

ರಾಮದಾಸನು ನಂತರ ಗವಿಯಿಂದ ಈಚೆಗೆ ಬಂದು ದೇವಸ್ಥಾನದಿಂದ ಹೊರಟು ಮುಂದೆ ಪ್ರಯಾಣ ಮಾಡಿದನು.

---

# ಅಧ್ಯಾಯ ೩೪

## ಸಹರ್ಸೂನ್ಪುರ-ಜಮ್ಮು

### (i) ಶ್ರೇಷ್ಠ ದಂಪತಿಗಳು

ಸಹರ್ಸೂನ್ಪುರ ಪಠಾನ್‌ಕೋಟಿಗೆ ನಾಲ್ಕು ಮೈಲಿಗಳ ದೂರದಲ್ಲಿರುವ ದೊಡ್ಡ ಊರು, ರಭಸದಿಂದ ಹರಿಯುವ ಒಂದು ನದಿಯ ದಡದಮೇಲಿದೆ. ರಾಮದಾಸನು ಊರೊಳಕ್ಕೆ ಆತುರವಿಲ್ಲದೆ ನಿಧಾನವಾಗಿ ನಡೆದನು. ಹೀಗೆ ಅವನು ಒಂದು ಮನೆಯ ಅಂಗಳಕ್ಕೆ ಹೋದನು. ಇದು ಒಬ್ಬ ಅಂಚೆ ಜವಾನನಿರುವ ಮನೆ. ಯಜಮಾನನು ಮನೆಯಲ್ಲಿರಲಿಲ್ಲ. ಆತನ ಪತ್ನಿ ರಾಮದಾಸನನ್ನು ಕಂಡೊಡನೆ ಅವನ ಪಾದಗಳಿಗೆ ನಮಸ್ಕಾರ ಮಾಡಿ, ಮನೆಯ ಮುಂದಣ ಒಂದು ಮರದ ನೆರಳಲ್ಲಿದ್ದ ಒಂದು ಮಂಚದಮೇಲೆ ಕುಳಿತುಕೊಳ್ಳಲು ಬೇಡಿಕೊಂಡಳು. ರಾಮದಾಸನು ಅದರ ಮೇಲೆ ಕುಳಿತನು. ಆಕೆ ತಕ್ಷಣವೇ ಮನೆಯೊಳಕ್ಕೆ ಹೋಗಿ ಒಂದು ಮಣೆಯನ್ನೂ ಒಂದು ಲೋಟ ನೀರನ್ನೂ ತಂದಳು. ಅಂಗಳದಲ್ಲಿ ಸ್ವಲ್ಪ ನೆಲವನ್ನು ಸರಿಮಾಡಿ ನೀರನ್ನು ನೆಲದಮೇಲೆ ಚಿಮುಕಿಸಿ ಮಣೆಯನ್ನು ಸರಿಯಾಗಿ ಹಾಕಿ ನಂತರ ಅಡಿಗೆ ಮನೆಯಿಂದ ಬಿಸಿಬಿಸಿಯಾದ ಊಟವನ್ನು ತಟ್ಟೆಯಲ್ಲಿ ತಂದಿಟ್ಟಳು.

ಎರಡು ಕೈಗಳನ್ನೂ ಜೋಡಿಸಿ ಕೈಮುಗಿಯುತ್ತಾ, ರಾಮದಾಸನನ್ನು "ಮಹರಾಜ್, ನಿಮ್ಮ ದರ್ಶನದಿಂದ ಧನ್ಯಳಾದೆ. ನಮ್ಮ ಬಡ ಆತಿಥ್ಯವನ್ನು ದಯವಿಟ್ಟು ಸ್ವೀಕರಿಸಿ" ಎಂದು ಬೇಡಿಕೊಂಡಳು.

ರಾಮದಾಸನು ಕೈಗಳನ್ನು ತೊಳೆದುಕೊಂಡು, ಆ ಮಾತೆ ಅಷ್ಟು ಪ್ರೀತಿಯಿಂದ ಅಷ್ಟು ಜಾಗ್ರತೆಯಲ್ಲಿ ನೀಡಿದ ಭೋಜನಕ್ಕೆ ಕುಳಿತನು. ಆಗ ಅವನಿಗೆ ಪಂಜಾಬ್ ದೇಶದ ಜನರ ಅಸದೃಶ ಪ್ರೇಮ ಮತ್ತು ಭಕ್ತಿಯ ವಿಚಾರವಾಗಿ ನೀಲಕಂಠಗುಹೆಯಲ್ಲಿದ್ದ ವೇಳೆ ಸಾಧು ಹೇಳಿದ ಮಾತು ಜ್ಞಾಪಕಕ್ಕೆ ಬಂದಿತು.

ಊಟ ಪೂರೈಸಿದಮೇಲೆ ಮನೆಯ ಯಜಮಾನನು ಬಂದನು. ಈ ಬಡ ಅಂಚೆಯ ಜವಾನ ಮತ್ತು ಇವನ ಹೆಂಡತಿಯ ರೂಪದಲ್ಲಿ ಭಗವಂತನು ಎಂತಹ ಶ್ರೇಷ್ಠ ದಂಪತಿಗಳನ್ನು ಕೂಡಿಸಿದ್ದ! ಅವರು ಎಷ್ಟು ನಮ್ರರು, ಎಷ್ಟು ಪರಿಶುದ್ಧಭಾವದವರು, ಎಷ್ಟು ಸರಳರು! ಇಂತಹ ದಿವ್ಯ ದಂಪತಿಗಳ ದರ್ಶನವನ್ನು ಪಡೆದ ರಾಮದಾಸನು ಧನ್ಯನೇ ಸರಿ! ಈ ದಂಪತಿಗಳು ಹಿಂದೂ ಧರ್ಮದ ಭಕ್ತಿಪಂಥದಿಂದ ಅದರ ಅನುಯಾಯಿಗಳು ಮುಟ್ಟುವ ಭಕ್ತಿಯ ನಿಜವಾದ ಪರಾಕಾಷ್ಠೆಯ ಪ್ರತ್ಯಕ್ಷ ನಿದರ್ಶನವಾಗಿದ್ದರು. ಸತಿಪತಿಗಳು ರಾಮ

ದಾಸನ ಶುಶ್ರೂಷೆಯಲ್ಲಿ ನಿರತರಾಗಿರುವಷ್ಟು ಹೊತ್ತು ಅವರ ನಾಲ್ಕು ವರ್ಷದ ಮಗು ಪಕ್ಕದ ಒಂದು ಮಂಚದ ಮೇಲೆ ಒಂದು ಕಂಬಳಿಯ ಮೇಲೆ ಮಲಗಿಕೊಂಡಿದ್ದಿತು. ಅದು ಕ್ಷಯರೋಗದಿಂದ ಕೃಶವಾಗಿ ಅಸ್ಥಿಪ್ರಾಯವಾಗಿದ್ದಿತು. ರಾಮದಾಸನು ಮಗುವಿನ ಹತ್ತಿರ ಬಂದು ನೋಡಿದನು. ಅದು ಸಮಾಧಾನವಾಗಿದ್ದಿತು. ಅದರ ನೋಟ ನಿತ್ಯಕಾಲವನ್ನು ದೃಷ್ಟಿಸುತ್ತಿದ್ದಂತೆ ಕಂಡಿತು.

ತಾಯಿ ಸ್ವಲ್ಪ ಉದ್ವೇಗದಿಂದ "ಭಗವಂತ ನಮಗೆ ಈ ಮಗುವನ್ನು ಕರುಣಿಸಿದ. ಆದರೆ ಅದು **ಅವನಿಗೆ** ಹಿಂದಕ್ಕೆ ಬೇಕೆಂದು ಕಾಣುತ್ತದೆ"ಎಂದಳು.

ರಾಮದಾಸನು "ತಾಯಿ, ಎಲ್ಲ ವಿಷಯಗಳಲ್ಲೂ ಭಗವದಿಚ್ಛೆಗೆ ಅಧೀನಳಾಗು. ನಿಜವಾಗಿ **ಅವನು** ಕೊಡುತ್ತಾನೆ, **ಅವನು** ತೆಗೆದುಕೊಳ್ಳುತ್ತಾನೆ. **ಅವನ** ಇಚ್ಛೆಗೆ ಎದುರಿಲ್ಲ. **ಅವನ** ಸಂಕಲ್ಪ ಎಂದೂ ಒಳ್ಳೆಯದೆ" ಎಂದು ನಂಬಿಕೆ ಹೇಳಿದನು.

ಈ ಮಾತುಗಳಿಂದ ಆಕೆಯ ಕಣ್ಣಿನಲ್ಲಿ ನೀರು ಊರಿತು. ಆಕೆಯು ಭಗವಂತನ ಇಚ್ಛೆಗೆ ಸಂಪೂರ್ಣವಾಗಿ ಅಧೀನಳಾದ ಭಾವನೆಯಿಂದ ಮಂದಹಾಸವನ್ನು ತಾಳಿದಳು.

ರಾಮದಾಸನನ್ನು ನೋಡಲು ಬಂದ ಕೆಲವು ಪಂಜಾಬಿ ಸ್ನೇಹಿತರು, ಅವನನ್ನು ಅಂಗಡಿ ಬೀದಿಗೆ ಕರೆದುಕೊಂಡು ಹೋಗಿ, ಅಲ್ಲಿಂದ ಮನೆಮನೆಗಳಿಗೆ ಒಯ್ದರು. ಪ್ರೇಮವಿಹ್ವಲರಾದ ಮಾತೆಯರು ಅವನನ್ನು ಮುದ್ದಿಸಿ ಆಡಿಸಿ ಅವನಿಗೆ ಊಟಮಾಡಿಸಿದರು. ರಾಮದಾಸನು ಇಲ್ಲಿದ್ದ ನಾಲ್ಕು ದಿವಸಗಳ ಕಾಲದಲ್ಲಿ ಹನ್ನೆರಡಕ್ಕೆ ಹೆಚ್ಚುಮಂದಿ ಮಾತೆಯರು ಅವನ ವಿಷಯದಲ್ಲಿ ತೀರಾ ಹುಚ್ಚರಾದರು. ತಮ್ಮ ಸ್ವಚ್ಛವಾದ ಅವ್ಯಾಜಪ್ರೇಮದಲ್ಲಿ ರಾಮದಾಸನನ್ನು ಮುಳುಗಿಸಿದರು.

ಸಾಯಂಕಾಲದ ಹೊತ್ತು ಕೆಲವರು ಸ್ನೇಹಿತರು ರಾಮದಾಸನನ್ನು ನದಿಗೆ ಕರೆದುಕೊಂಡು ಹೋಗುವರು. ಅಲ್ಲಿ ದಡದ ಮೇಲೆ ಅವನು ಸುತ್ತ ಒಂದು ಗುಂಪನ್ನೇ ಕೂಡಿಕೊಂಡು ಮಧ್ಯೆ ತಾನು ಕುಳಿತುಕೊಳ್ಳುವನು. ರಾಮದಾಸನು ಉದ್ರಿಕ್ತವಾದ ಭಾಷೆಯಲ್ಲಿ ದೈವಿಕ ಪ್ರೇಮದ ವೈಭವವನ್ನು ಕುರಿತು ಉಪನ್ಯಾಸ ಮಾಡುವನು. ಹೀಗೆ ನಾಲ್ಕು ದಿನ ಕಳೆದ ಮೇಲೆ, ಅವನು ತನ್ನ ಕಾಶ್ಮೀರದ ದೂರ ಪ್ರಯಾಣಕ್ಕಾಗಿ ಅಲ್ಲಿಂದ ಹೊರಡುವ ವಿಚಾರವನ್ನು ಎತ್ತಿದನು. ತಾನು ಕಾಲನಡೆಯಿಂದ ಹಳ್ಳಿಯಿಂದ ಹಳ್ಳಿಗೆ ಹೋಗಿ ಗುರಿಯನ್ನು ಮುಟ್ಟುವುದಾಗಿ ಹೇಳಿದನು.

ಇಲ್ಲಿ ದೊರೆತ ಹೊಸ ಸ್ನೇಹಿತರಲ್ಲಿ ಮ್ಯುನಿಸಿಪಲ್ ಅಧಿಕಾರಿಗಳೂ ಶ್ರೀಮಂತ ಜಮೀನ್ದಾರರೂ ಇದ್ದರು. ಅವರು ರಾಮದಾಸನನ್ನು ಜಮ್ಮುವರೆಗೆ ರೈಲಿನಲ್ಲಿ

ಪ್ರಯಾಣ ಮಾಡಬೇಕೆಂದೂ, ರೈಲು ಛಾರ್ಜನ್ನು ತಾವು ಕೊಡುವುದಾಗಿಯೂ ಹೇಳಿ ಬಲವಂತಮಾಡಿದರು. ಅವನು ಮೊದಲು ಇದನ್ನು ಒಲ್ಲೆನೆಂದನು. ಕಾಲ್ನಡೆಯಲ್ಲಿ ನಡೆದು ಪಂಜಾಬ್ ದೇಶದ ಭಕ್ತರ ಸಂಸರ್ಗವನ್ನು ಪಡೆಯುವ ಸಂತೋಷವನ್ನು ಕಳೆದುಕೊಳ್ಳಲು ಅವನಿಗೆ ಮನಸ್ಸಿಲ್ಲ. ಅದರೆ ಈ ಸ್ನೇಹಿತರು ಅವನನ್ನು ರೈಲಿನಲ್ಲೇ ಕಳುಹಿಸಬೇಕೆಂದು ನಿರ್ಧರ ಮಾಡಿದ್ದರು. ನಡೆದು ಹೋಗ ಬಾರದೆಂಬ ಅವರ ಪ್ರೀತಿಯ ಒತ್ತಾಯಕ್ಕೆ ಅವನು ಬಾಗಬೇಕಾಯಿತು.

ಷಹಛೂನ್ಪುರದಿಂದ ಪ್ರಯಾಣ ಮಾಡುವುದಕ್ಕೆ ಮುಂಚೆ ರಾಮದಾಸನು ಅಂಚೆಯ ಜವಾನನ ಮನೆಗೆ ಕೊನೆಯ ಭೆಟ್ಟಿಯನ್ನು ಕೊಟ್ಟನು. ರಾತ್ರಿ ಅಲ್ಲಿದ್ದನು. ರಾಮದಾಸನು ಅವರೊಡನೆ ಒಂದು ರಾತ್ರಿ ಉಳಿಯಲು ಬಯಸಿದ್ದನ್ನು ಆ ಮಾತೆ ಅವನ ಅತ್ಯಂತ ಅನುಗ್ರಹವೆಂದು ವರ್ಣಿಸಿ ಆನಂದ ಪರವಶಳಾದಳು.

ಷಹರ್ಝೂನ್ಪುರ ರೈಲ್ವೆ ಸ್ಟೇಷನ್ನಲ್ಲ. ಆದುದರಿಂದ ರೈಲನ್ನು ಏರಲು ಇವರು ಪಠಾನ್ ಕೋಟೆ ಸ್ಟೇಷನ್ನಿಗೆ ಹೋಗಬೇಕಾಗಿದ್ದಿತು. ರಾಮದಾಸನನ್ನು ಬೀಳ್ಕೊಡಲು ಭಕ್ತರು ಮೂರು ಕುದುರೆಗಾಡಿಗಳಲ್ಲಿ ತುಂಬಿ ಸ್ಟೇಷನ್ನಿನವರೆಗೂ ಬಂದರು. ಅವರಲ್ಲಿ ಹೆಚ್ಚು ಜನ ಮಾತೆಯರು. ಇವರ ಪ್ರೀತಿಗೆ ಮೇರೆಯೇ ಇರಲಿಲ್ಲ. ರೈಲು ಬೆಳಗಿನ ಆರು ಗಂಟೆಗೆ ಹೊರಟಿತು. ಇವರು ರಾಮದಾಸನಿಗೆ ಕುಡಿಯುವುದಕ್ಕೆ ನೊರೆ ಹಾಲನ್ನು ಒದಗಿಸಿ ಅವನನ್ನು ಇಂಟರ್ ತರಗತಿಯ ಗಾಡಿಯಲ್ಲಿ ಕೂಡಿಸಿ ಜೊತೆಗೆ ಅಷ್ಟು ಹಣ್ಣು ಅಷ್ಟು ಮಿಠಾಯಿಯನ್ನು ಇಟ್ಟರು. ರೈಲು ಸ್ಟೇಷನ್ನಿನಿಂದ ಕದಲಲು ತೊಡಗಿದಾಗ ಈ ಮಾತೆಯರ ಹೃದಯ ಉದ್ವೇಗ ದಿಂದ ತುಂಬಿತು. ಅವರ ಕಣ್ಣಿನಲ್ಲಿ ನೀರು ಹೊಳೆ ಹರಿಯಿತು. ರಾಮದಾಸನು ಅವರಿಗೆ ಕೊನೆಯ ನಮಸ್ಕಾರವನ್ನು ನೀಡಿದನು. ಬೇಗನೆ ಅವರ ದೃಷ್ಟಿಯಿಂದ ದೂರವಾದನು.

### (ii) ಭಗವಂತನ ಮೇಲೆ ಭಾರಹಾಕು–ಇನ್ನಾರ ಮೇಲೂ ಬೇಡ

ಆ ರಾತ್ರಿ ಒಂಭತ್ತು ಗಂಟೆಗೆ ರಾಮದಾಸನು ಜಮ್ಮುವನ್ನು ಸೇರಿದನು. ಜಮ್ಮು ಕಾಶ್ಮೀರ ದೇಶದ ಸರ್ಕಾರಕ್ಕೆ ಚಳಿಗಾಲದ ಆವಾಸ. ರೈಲಿನಿಂದ ಇಳಿದು ಇವನು ಇತರ ಪ್ರಯಾಣಿಕರೊಂದಿಗೆ ಊರೊಳಕ್ಕೆ ಹೊರಟನು. ದಾರಿಯಲ್ಲಿ ತವಿನದಿಯ ಮೇಲಿರುವ ದೊಡ್ಡ ಸೇತುವೆಯನ್ನು ದಾಟಬೇಕಾಗಿದ್ದಿತು. ಅಲ್ಲಿಯ ಸಾಧು ಒಬ್ಬನು ಪ್ರಸಿದ್ಧವಾದ ರಘುನಾಥದೇವಸ್ಥಾನದಲ್ಲಿ ಇಳಿದುಕೊಳ್ಳುವಂತೆ ಇವನಿಗೆ ಹೇಳಿದನು. ರಾಮದಾಸನು ಆ ದೇವಸ್ಥಾನದ ಒಳಕ್ಕೆ ಒಯ್ಯುವ ಮಹಾ ದ್ವಾರವನ್ನು ಹೊಕ್ಕನು. ದೇವಾಲಯ ವಿಶಾಲವಾದ ಒಂದು ಪ್ರಾಕಾರದ ಮಧ್ಯೆ ಇದೆ. ಹನ್ನೊಂದು ಗಂಟೆಯವರೆಗೂ ಸ್ವಾಮಿಯ ದರ್ಶನಕ್ಕಾಗಿ ಬಂದ ಭಕ್ತರ ಸಂತತ ಧಾರೆ ಇದ್ದಿತು. ಅವನು ಹೊರ ಪ್ರಾಕಾರದ ಕಟ್ಟಡಗಳೆದುರು ಭಾಗದಲ್ಲಿ,

ಅಗಲವಾದ ಕಲ್ಲಜಗುಲಿಯ ಮೇಲೆ ಕುಳಿತನು. ಅದರ ಮೇಲೆ ಕುಳಿತಿದ್ದ ಕೆಲವು ಮದರಾಸು ಸಾಧುಗಳಿಂದ ದೂರವಾಗಿ ಹೊರಚ್ಚಾದ ಒಂದು ಸ್ಥಳವನ್ನು ಆರಿಸಿದನು.

ಮೊದಲ ಅರ್ಧ ಗಂಟೆಯಕಾಲ ಇವರಲ್ಲಿ ಯಾವ್ಯಾವದೋ ಮಾತುಗಳ ಗದ್ದಲ ಗಲಿಬಿಲಿ ಇದ್ದಿತು. ನಂತರ ಒಂದು ವ್ಯಾಜ್ಯ ಪ್ರಾರಂಭವಾಯಿತು. ಮುಂದೆ ನಡೆದ ಜಗಳದಲ್ಲಿ ಹೊಲಸು ಬೈಗಳೇ ಬೈಗಳು. ಈ ಗುಂಪು ಎರಡು ಭಾಗಆಗಿ ಕ್ರಮವಾದ ಯುದ್ಧವೇ ಮೊದಲಾಯಿತು. ಒಂದು ಗಂಟೆಗೆ ಮೇಲ್ಪಟ್ಟು ಗದ್ದಲವೋ ಗದ್ದಲ. ರಾಮದಾಸನು ಈ ನಾಟಕವನ್ನು ತಮಾಷೆ ಯಿಂದ ನೋಡುತ್ತಿದ್ದನು. ಪ್ರತಿಯೊಂದು ಸನ್ನಿವೇಶದಲ್ಲೂ, ಆನಂದದ ರಸವನ್ನೇ ಅನುಭವಿಸುವುದನ್ನು ಭಗವಂತನು ರಾಮದಾಸನಿಗೆ ಕಲಿಸಿದ್ದನು. ಸಮರಾತ್ರಿಯ ಹೊತ್ತಿಗೆ ಗಲಾಟೆ ಮೆಲ್ಲನೆ ಶಮನವಾಯಿತು. ಆದರೂ ಆಗಾಗ್ಗೆ ಕೆಲವು ಅಪೂರ್ವ ಬೈಗಳು ಸಿಡಿತ ಕೇಳಬರುತ್ತಿದ್ದಿತು. ಆ ಬೈಗಳ ನೆನಪು, ವ್ಯಾಜ್ಯ ನಡೆಯುತ್ತಿದ್ದಾಗ ಜ್ಞಾಪಕಕ್ಕೆ ಬಾರದೆ, ಆಮೇಲೆ ಆ ಮಂದಬುದ್ಧಿಗೆ ಹೊಳೆದು ಹೊರಬಿದ್ದಂತೆ ಕಾಣುತ್ತಿದ್ದಿತು. ಒಂದು ಗಂಟೆಯ ಸಮಯಕ್ಕೆ ಈ ಸಾಧುಗಳು ಇದ್ದ ಸ್ಥಳದಿಂದ ಕೇಳಬರುತ್ತಿದ್ದ ಶಬ್ದಾಯಿತವಾದ ನಿಡುಗೊರಕೆಯ ಹೊರತು, ಮಿಕ್ಕಂತೆ ಎಲ್ಲ ಮೌನವಾಗಿದ್ದಿತು.

ಮರು ದಿನ ಉದಯ, ಆಗತಾನೆ ಜನಿಸಿದ ಶಿಶುವಿನಂತೆ, ಪ್ರಭಾತದ ನಸು ಬೆಳಕಿನ ಮೃದುವೂ ಕಾಂತಿಯುಕ್ತವೂ ಆದ ಎದೆಯ ಮೇಲೆ ಹುದುಗಿದ್ದ ವೇಳೆ ರಾಮದಾಸನು ದೇವಸ್ಥಾನದ ಆವರಣದಿಂದ ಹೊರಬಿದ್ದನು. ಊರಿನಲ್ಲಿ ಗುರಿ ಇಲ್ಲದೆ ಅಲೆದನು. ನೂರಾರು ಮಂದಿರದ ಗೋಪುರಗಳು ಭುವನೇಶ್ವರಿಗಳು ಜಮ್ಮು ಪಟ್ಟಣದ ಮನೆಗಳ ಮೇಲೆ ಉನ್ನತಾಕಾಶಕ್ಕೆ ಚಿಮ್ಮಿರುವುದನ್ನು ಕಂಡನು. ನಿಜವಾಗಿ ಜಮ್ಮು ದೇವಸ್ಥಾನಗಳ ಪಟ್ಟಣ.

ರಾಮದಾಸನು ಹೀಗೆ ತಿರುಗಾಡುತ್ತಿರುವಾಗ, ಅವನ ಹೆಜ್ಜೆ ಅರಿವಿಲ್ಲದೆ ಅಷ್ಟೇನೂ ಅಂದವಲ್ಲದ ಒಂದು ದೇವಸ್ಥಾನದ ಬಳಿಗೆ ತಿರುಗಿತು. ಅವನು ಮಹಾದ್ವಾರವನ್ನು ಹೊಕ್ಕು ದೇವಾಲಯದ ಎದುರಿಗಿದ್ದ ದೊಡ್ಡಮರದ ಧೂಳಿ ತುಂಬಿದ ಜಗುಲಿಯ ಮೇಲೆ ಕುಳಿತನು. ಕೆಲವು ಜನ ಭಕ್ತರು ಪುಷ್ಪನೇವೇದ್ಯ ಗಳನ್ನು ತೆಗೆದುಕೊಂಡು ದೇವಾಲಯವನ್ನು ಪ್ರವೇಶಿಸಿದ್ದು ಇವನಿಗೆ ಕಾಣಿಸಿತು. ಆ ಸಮಯದಲ್ಲಿ ರಾಮದಾಸನ ಮನೋಧರ್ಮ ಪೂರ್ಣವಾಗಿ ನಿಶ್ಚಿಂತೆ ಅಥವಾ ಆತ್ಮಾರ್ಪಣದ್ದು ಆಗಿದ್ದಿತು. ಮನಸ್ಸು ಭೂತಭವಿಷ್ಯಗಳ ನೆನವು ಹೊರತು ಯಾವದೂ ತೀರಾ ಇಲ್ಲದ ಸಂಪೂರ್ಣ ಸ್ವಾತಂತ್ರ್ಯ ಮತ್ತು ಶಾಂತಿಯ ಅನುಭವ ದಲ್ಲಿದ್ದಿತು. ಆದರೆ ಬಾಹ್ಯ ಪ್ರಪಂಚಜ್ಞಾನವೇನೋ ತೀಕ್ಷ್ಣವಾಗಿಯೇ ಇದ್ದು

ಅವನು ತನ್ನೆದುರಿಗೆ ಕಾಣುತ್ತಿರುವ ಪ್ರಕೃತಿಯ ಲೀಲೆಯನ್ನು ನಿರ್ಲೇಪದಿಂದ ಸಾಕ್ಷಿಭೂತನಾಗಿ ನೋಡುತ್ತಾ ಅಂತಶ್ಶಾಂತಿಯನ್ನು ಅನುಭವಿಸುತ್ತಿದ್ದನು.

ಅವನಿಗೆ ಬಲಗಡೆ ಸಿಮೆಂಟು ಹಾಕಿರುವ ಒಂದು ಎತ್ತರವಾದ ಪೀಠದ ಮೇಲೆ ಅವನ ಕಡೆಗೆ ಬೆನ್ನು ಮಾಡಿಕೊಂಡು ಧ್ಯಾನಾಸಕ್ತವಾಗಿರುವ ಒಂದು ಮೂರ್ತಿ ಕಾಣಿಸಿತು. ಆ ಮನುಷ್ಯನ ದಪ್ಪನಾದ ರುಮಾಲು ಅವನ ಪಕ್ಕದಲ್ಲಿ ತಲೆಕೆಳಗಾಗಿ ಬಿದ್ದಿದ್ದಿತು. ರಾಮದಾಸನು ಕೆಲವು ನಿಮಿಷ ಅವನನ್ನು ನೋಡುತ್ತಿದ್ದನು. ಕೊಂಚ ಹೊತ್ತಿನ ಮೇಲೆ ಆತನು ಧ್ಯಾನವನ್ನು ಪೂರೈಸಿ ರುಮಾಲನ್ನು ತಲೆಯ ಮೇಲೆ ಸರಿಯಾಗಿ ಇಟ್ಟುಕೊಂಡು ಹೊರಡಲು ಅನುವಾದನು. ಅವನು ಮೆಟ್ಟಲನ್ನು ಇಳಿದನು. ಇಳಿಯುತ್ತಿದ್ದಂತೆ ಅವನ ದೃಷ್ಟಿ ರಾಮದಾಸನ ಮೇಲೆ ಬಿದ್ದು ಇವರ ಕಣ್ಣು ಸಂಧಿಸಿದವು. ಆತನು ರಾಮದಾಸನಿಗೆ ಕೈಮುಗಿದನು. ರಾಮದಾಸನು ಪ್ರತಿಯಾಗಿ ವಂದನೆ ಮಾಡಿದನು. ನಂತರ ಆತನು ದೇವಸ್ಥಾನದ ಹೊರಗೆ ಹೊರಟು ಹೋದನು.

ಸುಮಾರು ಹತ್ತು ಗಂಟೆಯ ಸಮಯ ಇರಬಹುದು. ರಾಮದಾಸನು ದೇವಸ್ಥಾನದ ಸುತ್ತಲೂ ಚೌಕವಾದ ಜಗುಲಿ ಇದ್ದುದನ್ನು ಕಂಡನು. ಅದರ ಬಲಕ್ಕೆ ಮರದ ನೆರಳಿರುವ ತಂಪಾದ ಒಂದು ಸ್ಥಳವನ್ನು ಆರಿಸಿ ಅಲ್ಲಿ ಹೋಗಿ ಘಟ್ಟ ನೆಲದ ಮೇಲೆ ತನ್ನ ಏಕಮಾತ್ರ ವಸ್ತ್ರದ ಕೊಂಚ ಭಾಗವನ್ನು ಹಾಸಿ ಉಳಿದ ಭಾಗದಿಂದ ಪೂರ್ತಿಯಾಗಿ ಮೈಯನ್ನೆಲ್ಲಾ ಮುಚ್ಚಿಕೊಂಡು ಮಲಗಿದನು. ಇಂತಹ ಕಾಲದಲ್ಲಿ ರಾಮದಾಸನು ಶರೀರವನ್ನು ಸುರಳಿಸುತ್ತಿದಂತೆ ಕುಗ್ಗಿಸಿ ಮೊಣಕಾಲುಗಳನ್ನು ಮುಖಕ್ಕೆ ತಗಲುವಂತೆ ಮಾಡಿಕೊಂಡಿರುತ್ತಿದ್ದನು. ಹೀಗೆ ಮಲಗಿ ಇನ್ನೂ ಹತ್ತು ನಿಮಿಷ ಕೂಡ ಕಳೆದಿರಲಿಲ್ಲ. ಆಗ ಯಾರೋ ಕಾಲಿನ ಕಡೆಯಿಂದ ಹೊದೆದಿದ್ದ ಬಟ್ಟೆಯನ್ನು ಎಳೆದಂತಾಯಿತು. ತಟಕ್ಕನೆ ಎದ್ದು ಕುಳಿತು ನೋಡಿದರೆ ರಾಮದಾಸನಿಗೆ ಮಗ್ಗುಲಲ್ಲಿ ಒಬ್ಬ ಯುವಕನು ಕುಳಿತಿದ್ದುದು ಕಂಡಿತು.

ಆತನು "ಮಹರಾಜ್, ನೀವು ವಾಡಿಕೆಯಾಗಿ ತೆಗೆದುಕೊಳ್ಳುವ ಆಹಾರವೇನು ? ನಿಮಗೆ ಬೇಕಾದರೆ ಹಣ್ಣು ಹಾಲು ತಂದು ಕೊಡಬಲ್ಲೆನು. ಈಗ ಸ್ವಲ್ಪ ಹೊತ್ತಿಗೆ ಹಿಂದೆ ಇಲ್ಲಿ ಇದ್ದ ಪಂಡಿತಜಿ, ನನ್ನ ಕೈಯಲ್ಲಿ ಸ್ವಲ್ಪ ದುಡ್ಡು ಕೊಟ್ಟು ನಿಮಗೆ ಏನು ಆಹಾರ ಬೇಕೋ ಕೊಡಿಸಬೇಕೆಂದು ಕಳುಹಿಸಿದ್ದಾರೆ" ಎಂದನು.

ರಾಮದಾಸನು "ರಾಮದಾಸನಿಗೆ ಯಾವ ರೀತಿಯ ಆಹಾರ ತೆಗೆದುಕೊಳ್ಳುವುದೆಂಬ ವಿಷಯದಲ್ಲಿ ನಿಯಮವಿಲ್ಲ. ಅನ್ನ ತೊವ್ವೆ ಮುಂತಾದ ಸಾಧಾರಣ ಪದಾರ್ಥಗಳನ್ನು ಅವನು ಭುಜಿಸುತ್ತಾನೆ" ಎಂದು ಉತ್ತರ ಕೊಟ್ಟನು.

"ಹಾಗಾದರೆ ತಾವು ನನ್ನೊಂದಿಗೆ ಪಂಡಿತಜಿ ಇರುವ ಮನೆಗೆ ದಯವಿಟ್ಟು ಬರುವಿರಾ ? ತಮಗೆ ಆತಿಥ್ಯವನ್ನು ನೀಡುವುದು ಅವರಿಗೆ ಎಷ್ಟೋ ಸಂತೋಷ."

ರಾಮುದಾಸನು ಅವನೊಂದಿಗೆ ಹೊರಟು ಪಂಡಿತಜಿಯ ಮನೆಗೆ ಬಂದನು. ಅಲ್ಲಿ ಅವನನ್ನು ಪಂಡಿತನೂ ಆತನೊಂದಿಗೆ ವಾಸವಾಗಿದ್ದ ಅನೇಕರೂ ಸ್ವಾಗತಿಸಿದರು. ಅವರೆಲ್ಲ ಕಾಶ್ಮೀರಿ ಪಂಡಿತರು, ಸುಂಕದ ಕಛೇರಿಯಲ್ಲಿ ಕೆಲಸದಲ್ಲಿದ್ದವರು, ಎಲ್ಲರೂ ಒಂದೇ ಮನೆಯಲ್ಲಿ ವಾಸವಿದ್ದರು. ಒಬ್ಬ ಅಡಿಗೆಯವನು ಅವರಿಗೆ ಅಡಿಗೆ ಮಾಡಿಹಾಕುವವನು; ಅವರ ಸಂಸಾರಗಳು ಶ್ರೀನಗರದಲ್ಲಿ ಇರುವುವು. ಆಗ ಬೇಸಗೆ. ಜಮ್ಮುವಿನಲ್ಲಿ ಬಿಸಲಿನ ತಾಪ ಬಹಳ. ಈ ಬೇಗೆ ಅಭ್ಯಾಸವಿಲ್ಲದ ಈ ಪಂಡಿತರು ಸೆಕೆಯಿಂದ ಬಹು ಕಷ್ಟಪಡುತ್ತಿದ್ದರು.

ರಾಮುದಾಸನನ್ನು ಆಹ್ವಾನಿಸಿದ ಪಂಡಿತನ ಹೆಸರು ಜಾನಕೀನಾಥಬಕ್ಷಿ. ಈತನು ಬಹು ಪ್ರೀತಿವಂತನು, ಆದರವಂತನು. ಜಾನಕೀನಾಥನ ಏರ್ಪಾಡಿನಂತೆ ರಾಮುದಾಸನಿಗೆ ಭೋಜನವಾಯಿತು.

ಜಾನಕೀನಾಥನಿಗೆ ರಾಮುದಾಸನ ಮೇಲೆ ಬಹಳ ಇಷ್ಟವಾಗಿ, ಅವನು ರಾಮುದಾಸನನ್ನು ಕೆಲವು ದಿವಸ ತಮ್ಮೊಡನೆ ಇರಬೇಕೆಂದು ಬೇಡಿಕೊಂಡನು. ಮನೆಗೆ ಕರೆದುಕೊಂಡು ಬಂದ ಯುವಕ ಜಿಯಲಾಲ್‌ಧರನು ಯಾವಾಗಲೂ ರಾಮುದಾಸನೊಂದಿಗೆ ಇರುತ್ತಿದ್ದನು. ಅವನು ವಿದ್ಯಾರ್ಥಿ, ಆಗ ಶಾಲೆಗೆ ರಜವಿದ್ದುದರಿಂದ ಜಮ್ಮುವಿನಲ್ಲಿ ಇದ್ದನು. ಅವನು ರಾಮುದಾಸನನ್ನು ಪೇಟೆಯ ಮೂಲಕ ತವಿನದಿಯ ದಡಕ್ಕೆ ದೂರದ ಸುತ್ತಾಟಕ್ಕೆ ಕರೆದುಕೊಂಡು ಹೋಗುತ್ತಿದ್ದನು. ರಾಮುದಾಸನ ಮೇಲೆ ಇವನಿಗೆ ಪ್ರೀತಿ ಎಷ್ಟಿತ್ತೆಂದರೆ ಅವನು ರಾಮುದಾಸನ ನೆರಳಿನಂತೆ ಅವನ ಜೊತೆಗೆ ಸುಳಿದನು. ರಾಮುದಾಸನು ಭಗವನ್ನಾಮಸಂಕೀರ್ತನೆ ಮಾಡುತ್ತ ನರ್ತನಮಾಡುವಾಗ ಇವನೂ ರಾಮುದಾಸನೊಂದಿಗೆ ನರ್ತನದಲ್ಲಿಯೂ ಸೇರುತ್ತಿದ್ದನು.

ಸಂಜೆಗಳಲ್ಲಿ ಕಛೇರಿಯಿಂದ ಹಿಂದಿರುಗಿ ಮನೆಗೆ ಬಂದೊಡನೆ ಜಾನಕೀನಾಥನು ರಾಮುದಾಸನನ್ನು ಸಂಪೂರ್ಣವಾಗಿ ತನ್ನದಾಗಿ ಮಾಡಿಕೊಳ್ಳುವನು. ಕೆಲವು ದಿವಸ ರಾಮುದಾಸನೊಂದಿಗೆ ಇದ್ದುದು ಸಾಕು, ಅವನಿಗೆ ರಾಮುದಾಸನ ಹುಚ್ಚು ಹಿಡಿಯಿತು. ಅವನು ರಾಮುದಾಸನನ್ನು ಎತ್ತಿಕೊಂಡು ಆಲಂಗಿಸುತ್ತ, ಅವನ ಹತ್ತಿರಿದ್ದರೆ ಸಾಕು ಆನಂದದಲ್ಲಿ ಲೀನನಾಗುವನು. ಹೀಗೆ ಸುಮಾರು ಹತ್ತು ದಿನ ಕಳೆದವು. ಒಂದು ರಾತ್ರಿ ರಾಮುದಾಸನು ತಾನು ಜಮ್ಮು ಬಿಟ್ಟು ಶ್ರೀನಗರಕ್ಕೆ ಪ್ರಯಾಣ ಮಾಡಬೇಕೆಂದು ತಿಳಿಸಿದನು. ಇದನ್ನು ಕೇಳಿ ಜಾನಕೀನಾಥನು ಕಳವಳದ ಲಕ್ಷಣಗಳನ್ನು ತೋರಿಸಿದನು. "ಕೂಡದು ಸ್ವಾಮಿಜೀ, ನೀವು ನಮ್ಮನ್ನು ಇಷ್ಟುಬೇಗ ಬಿಟ್ಟು ಹೋಗಕೂಡದು. ಆ ಯೋಚನೆಯನ್ನೇ ನಾನು ಸಹಿಸಲಾರೆ" ಎಂದು ಅಡ್ಡಿನುಡಿದನು.

ರಾಮದಾಸನು "ರಾಮದಾಸನು ನಿಮ್ಮೊಡನೆ ಸಾಕಾದಷ್ಟು ಕಾಲ ಇದ್ದು ದಾಯಿತು. ಅವನು ಶ್ರೀನಗರಕ್ಕೆ ಹೊರಟಿದ್ದಾನೆ. ನೀವು ಇನ್ನು ಅವನನ್ನು ನಿಲ್ಲಿಸಬಾರದು" ಎಂದನು.

"ನೀವು ಹೇಗೆ ಹೋಗಬೇಕೆಂದಿದ್ದೀರಿ ? ನೀವು ಇಲ್ಲಿಂದ ಪ್ರಯಾಣ ಮಾಡ ದಂತೆ ಎಲ್ಲಾ ಅಡಚಣೆಗಳು ಒದಗುವಂತೆ ನೋಡಿಕೊಳ್ಳುತ್ತೇನೆ. ಇಲ್ಲಿಂದ ದಿನಾ ಶ್ರೀನಗರಕ್ಕೆ ಹೋಗುವ ಬಸ್ಸು ಒಂದರಲ್ಲೂ ಸ್ಥಳ ದೊರೆಯದಂತೆ ಅಡ್ಡಿ ಮಾಡ ಬಲ್ಲೆ." ಜಮ್ಮುವಿಂದ ಶ್ರೀನಗರಕ್ಕೆ ಹೋಗಬೇಕಾಗಿದ್ದರೆ ಬಸ್ಸಿನಲ್ಲಿ ಪ್ರಯಾಣ ಮಾಡಬೇಕಾಗಿದ್ದಿತು.

ರಾಮದಾಸನು "ರಾಮದಾಸನು ನಿಮ್ಮ ಬಸ್ಸುಗಳನ್ನು ನಂಬಿಕೊಂಡಿಲ್ಲ. ಅವನು ನಡೆದು ಹೋಗುತ್ತಾನೆ. ದಾರಿ ಇನ್ನೂರು ಮೈಲಿ ಮಾತ್ರ ಇದೆಯಂತೆ. ಅವನು ಸ್ವಲ್ಪ ಸ್ವಲ್ಪ ನಡೆದು ಹೋಗುತ್ತಾನೆ." ಎಂದನು.

ಜಾನಕೀನಾಥನು "ಓ ಸ್ವಾಮಿಜಿ! ನಡೆದು ಹೋಗುವ ಸಾಹಸದ ಯೋಚನೆ ಬಿಟ್ಟು ಬಿಡಿ. ದಾರಿ ಇರುವುದು ಎತ್ತರದ ಪರ್ವತಗಳ ಮಧ್ಯೆ ಕಾಡಿ ನಲ್ಲಿ, ತಡೆಯಲಾರದ ಚಳಿಯ ಸೀಮೆಯಲ್ಲಿ" ಎಂದು ಒದರಿದನು.

"ರಾಮದಾಸನಿಗೆ ಅದೆಲ್ಲ ಲಕ್ಷ್ಯವಿಲ್ಲ. (ರಾಮದಾಸನಿಗೆ ತಂದೆಯೂ ತಾಯಿಯೂ ಆದ **ರಾಮನೇ**), ರಾಮದಾಸನು ಈ ಅಪಾಯಗಳಿಂದ ತೊಂದರೆ ಬಾರದೆ ಸುರಕ್ಷಿತವಾಗಿ ಪ್ರಯಾಣ ಮಾಡುವಂತೆ ನೋಡಿಕೊಳ್ಳುತ್ತಾನೆ. ಇವನು ಪ್ರಯಾಣ ಮಾಡುವುದು ಅವನ ಇಚ್ಛೆಯಿಂದಲೇ"

ಜಾನಕೀನಾಥನು "ಒಳ್ಳೇದು, ನೀವು ಹೊರಡಬೇಕೆಂದೇ ನಿರ್ಧರಿಸಿದ್ದರೆ, ನೀವು ಮೋಟಾರು ಬಸ್ಸಿನಲ್ಲಿ ಪ್ರಯಾಣ ಮಾಡಲು ಏರ್ಪಾಡು ಮಾಡುತ್ತೇನೆ. ನೀವು ನಡೆದುಕೊಂಡು ಹೋಗಲು ನಾನು ಒಪ್ಪಲಾರೆ. ಆದರೆ ನನ್ನ ಆಶೆ ಇಷ್ಟೆ. ನೀವು ಇನ್ನು ಹದಿನೈದು ದಿವಸಗಳಾದರೂ ನಿಮ್ಮ ಸಹವಾಸ ಸುಖವನ್ನು ನನಗೆ ಕೊಡಬೇಕು" ಎಂದು ಬೇಡಿಕೊಂಡನು.

ರಾಮದಾಸನು ಹಟಹಿಡಿದನು. ಜಿಯಲಾಲ್‌ಧರನು ಕಾವಲನ್ನು ಎರಡ ರಷ್ಟು ಜಾಗರೂಕ ಮಾಡಿದನು. ರಾಮದಾಸನು ತನಗೆ ತಿಳಿಯದಂತೆ ಜಾರಿ ಕೊಂಡಾನೆಂದು ಜಾನಕೀನಾಥನು ಜಿಯಲಾಲನನ್ನು ಕಾವಲು ಹಾಕಿದನು. ಆದರೂ ಎರಡು ಮೂರು ದಿನಗಳಲ್ಲಿ ಕಾಶ್ಮೀರಿ ಪಂಡಿತನೊಬ್ಬನು ಕೆಲವು ದಿನದ ರಜಕ್ಕಾಗಿ ತನ್ನ ಸಂಸಾರವನ್ನು ಶ್ರೀನಗರಕ್ಕೆ ಕರೆದುಕೊಂಡು ಹೋಗಿ ಬರುವ ಉದ್ದಿಶ್ಯ ಹೊರಡುವನಾಗಿದ್ದು ತನ್ನೊಡನೆ ರಾಮದಾಸನನ್ನು ಕರೆದುಕೊಂಡು ಹೋಗುವುದಾಗಿ ತಾನಾಗಿ ತಿಳಿಸಿದನು. ರಾಮದಾಸನೂ ಅವನೊಡನೆ ಹೋಗಲು ಒಪ್ಪಿದನು. ಬೆಳಿಗ್ಗೆ ಹೊರಡಬೇಕು. ಹಿಂದಿನ ಸಾಯಂಕಾಲ ಜಾನಕೀನಾಥನು ಮನೆಯಲ್ಲಿಲ್ಲದ ಕಾಲದಲ್ಲಿ ರಾಮದಾಸನು ಆ ಮನೆಯನ್ನು ಬಿಟ್ಟು ಇವನನ್ನು

ಕರೆದುಕೊಂಡು ಹೋಗುವನಾಗಿದ್ದ ಈ ಸ್ನೇಹಿತನ ಮನೆಗೆ ಹೋಗಿ ನಿಂತನು. ರಾತ್ರಿ ಜಾನಕೀನಾಥನು ಈ ಸ್ನೇಹಿತನ ಮನೆಗೆ ಬಂದನು; ಇನ್ನೂ ಕೆಲವು ದಿವಸ ರಾಮದಾಸನನ್ನು ನಿಲ್ಲಿಸಿಕೊಳ್ಳಲು ಎಷ್ಟೆಷ್ಟೋ ಪ್ರಯತ್ನ ಮಾಡಿದನು, ಸಾಧ್ಯವಾಗಲಿಲ್ಲ.

ಕೊನೆಗೆ ಆತನು "ಸ್ವಾಮಿಜಿ, ಈ ಬೆಂಕಿಯ ಬೇಗೆ ಕಡಾರದಲ್ಲಿ ನನ್ನನ್ನು ಬಿಟ್ಟು ತಂಪಾಗಿರುವ ಶ್ರೀನಗರಕ್ಕೆ ನೀವು ಹೋಗುತ್ತಿದ್ದೀರಿ. ನನ್ನನ್ನೂ ಏಕೆ ಜೊತೆಯಲ್ಲಿ ಕರೆದುಕೊಂಡು ಹೋಗಕೂಡದು ? ಈಗ ಕರೆದುಕೊಂಡು ಹೋಗದಿದ್ದರೆ, ನೀವು ಅಲ್ಲಿಗೆ ಹೋದಮೇಲಾದರೂ ನನ್ನನ್ನು ಅಲ್ಲಿಗೆ ಸೆಳೆದುಕೊಳ್ಳುವ ಹಾಗೆ ಮಾಡಬಲ್ಲಿರಿ" ಎಂದನು.

ಈ ಮಧ್ಯೆ ಶ್ರೀನಗರದ ಕಛೇರಿಯಲ್ಲಿ ಒಂದು ಕೆಲಸ ಬಿಡುವಾಗಿದ್ದಿತು. ಜಾನಕೀನಾಥನಿಗೆ ಅದಕ್ಕೆ ಅರ್ಹತೆ ಇದ್ದಿತು. ಅವನು ಆ ಕೆಲಸಕ್ಕೆ ಅರ್ಜಿ ಹಾಕಿ ಫಲಿತಾಂಶಕ್ಕಾಗಿ ಆತುರದಿಂದ ಕಾದಿದ್ದನು.

---

## ಅಧ್ಯಾಯ ೩೫

### ಕಾಶ್ಮೀರ

### (i) ಕಶ್ಯಪಭೂಮಿ

ಮಾರನೆಯ ದಿನ ರಾಮದಾಸನು ಕಾಶ್ಮೀರಿ ಸ್ನೇಹಿತ ಮತ್ತು ಅವನ ಸಂಸಾರದೊಂದಿಗೆ ಜಮ್ಮುವನ್ನು ಬಿಟ್ಟು ಶ್ರೀನಗರಕ್ಕೆ ಪ್ರಯಾಣ ಮಾಡಿದನು. ಅವನನ್ನು ಒಯ್ಯುವ ಮೋಟಾರ್‌ಬಸ್ಸು ಬೆಟ್ಟದ ಸಾಲಿನ ಪಕ್ಕದಲ್ಲಿ ಕಡೆದಿರುವ ದಾರಿಯಲ್ಲಿ ಹಾಯ್ದಿತು. ಬಸ್ಸು ಗುಡ್ಡದ ದಾರಿಯಲ್ಲಿ ಹತ್ತುತ್ತಿರುವಾಗ, ದೊಡ್ಡ ಮಣ್ಣಿನ ಗುಡ್ಡೆಯ ಮೇಲೆ ಒಂದು ಇರುವೆ ಹರಿದಾಡುವಂತೆ ಕಾಣುತ್ತಿದ್ದಿತು. ಹುಲುಸಾಗಿಬೆಳೆದಿರುವ ಪೈರುಪಚ್ಚೆಗಳಿಂದ ಹಸುರಾದ ಸುತ್ತಣ ಭೂಮುಖವೂ ಆಳವಾದ ಕಣಿವೆಯೂ, ಗಗನ ಚುಂಬಕವಾದ ಮಲೆಗಳ ಮೇಲಣ ದೇವದಾರು ಮುಂತಾದ ಮರಗಳ ದಟ್ಟವಾದ ಕಾಡೂ ಅಸದೃಶ ಸೌಂದರ್ಯ ಗಾಂಭೀರ್ಯದ ಮನಮೋಹಕ ದೃಶ್ಯವನ್ನು ನೀಡಿದವು. ಮೋಟಾರು ಬಸ್ಸು ಸುತ್ತಿಕೊಂಡು ಬೆಟ್ಟದ ಮೇಲೆ ಹತ್ತಿ ಹೋದಹಾಗೆಲ್ಲ, ಪ್ರಕೃತಿಯ ಉದ್ದಾಮ ಗಾಂಭೀರ್ಯದ ಹೊಸ ಹೊಸ ವಿಭವಯುಕ್ತವಾದ ದೃಶ್ಯಗಳು ರಾಮದಾಸನ ಕಣ್ಣೆದುರಿಗೆ ತೆರೆದವು. ಅವನು ಮೋಹಕ ದೃಶ್ಯದ ಆನಂದದಿಂದ ಪುಳಕಿತನಾದನು.

ಕತ್ತಲು ಪ್ರಾರಂಭವಾಗುವ ಹೊತ್ತಿಗೆ ಬಸ್ಸು ಬನಹಾಲ್ ಪರ್ವತದ ಶಿಖರವನ್ನು ಮುಟ್ಟಿತು. ಇದು ಸಮುದ್ರದ ಮಟ್ಟಕ್ಕೆ ಒಂಭತ್ತು ಸಾವಿರ ಅಡಿ ಎತ್ತರ

ದಲ್ಲಿದೆ. ಇಲ್ಲಿ ಗಾಳಿ ತೆಳ್ಳನಾಗಿ ಹವ ಬಹು ತಂಪಾಗಿದೆ. ಸಂಗಡಿಗರು ರಾತ್ರಿ ಅಲ್ಲಿಯ ಒಬ್ಬ ಪಂಡಿತನ ಮನೆಯಲ್ಲಿಳಿದರು. ಆತನು ದಯೆ ಸತ್ಕಾರಗಳ ಮೂರ್ತಿಯಾಗಿದ್ದನು. ರಾತ್ರಿ ಬಹು ಚಳಿ. ಆ ಪಂಡಿತನು ರಾಮುದಾಸನಿಗೆ ಧಪ್ಪನಾದ ಕಂಬಳಿಗಳನ್ನು ಹೊದ್ದಿಸಿದನು.

ಮಾರನೆಯ ದಿನ ಸುಮಾರು ಎಂಟು ಗಂಟೆಗೆ ಇವರು ಪ್ರಯಾಣವನ್ನು ಮುಂದರಿಸಿ, ಮಧ್ಯಾಹ್ನಕ್ಕೆ ಒಂದು ಕಡೆ ಊಟಕ್ಕೆ ನಿಂತು, ಸಾಯಂಕಾಲದ ಹೊತ್ತಿಗೆ ಶ್ರೀನಗರವನ್ನು ಕಂಡರು. ಶ್ರೀಶಂಕರಾಚಾರ್ಯರ ಬೆಟ್ಟ ಅದರ ಮೇಲಣ ದೇವಾಲಯ ದೂರಕ್ಕೆ ಮೊದಲು ಕಾಣಿಸಿದುವು.

ರಾತ್ರಿ ರಾಮುದಾಸನು, ತನ್ನನ್ನು ಕರೆದುಕೊಂಡು ಹೋಗುತ್ತಿದ್ದ ಪಂಡಿತನ ಬಂಧುವಾದ ಮತ್ತೊಬ್ಬ ಪಂಡಿತನ ಮನೆಯಲ್ಲಿ ಉಳಿದುಕೊಂಡನು. ಈ ಪಂಡಿತನು ಬೃಹದಾಕಾರದ ವ್ಯಕ್ತಿ. (ಮನೆಯವರೆಲ್ಲ ದಯಾವಂತರೂ ಆದರವಂತರೂ ಆಗಿದ್ದರು) ಮರುದಿವಸ ಜಾನಕೀನಾಥನ ಮನೆಯನ್ನು ವಿಚಾರಿಸಿಕೊಂಡು ರಾಮುದಾಸನು ಆ ಮನೆಗೆ ಸಾಗಿದನು. ಜಾನಕೀನಾಥನ ತಮ್ಮ ಅಮರನಾಥಬಕ್ಷಿ ರಾಮುದಾಸನನ್ನು ಆದರದಿಂದ ಬರಮಾಡಿಕೊಂಡು ಅವನನ್ನು ಒಂದು ಪ್ರತ್ಯೇಕ ಕೊಟಡಿಯಲ್ಲಿ ಇಳಿಸಿದನು. ಅಮರನಾಥನೂ ಜಾನಕೀನಾಥನ ಸತಿ ಸುತೆಯರೂ ಮನೆಯಲ್ಲಿರುವವರೆಲ್ಲರೂ ರಾಮುದಾಸನನ್ನು ತುಂಬ ಪ್ರೀತಿಯಿಂದ ವಿಚಾರಿಸಿಕೊಂಡು ಅವನನ್ನು ಮನೆಯವನಂತೆ ಕಂಡರು.

ಅಮರನಾಥಬಕ್ಷಿ ಪಂಜಾಬ್ ವಿಶ್ವವಿದ್ಯಾನಿಲಯದ ಎಂ. ಎ. ಪದವಿಯನ್ನು ಎರಡು ವಿಷಯಗಳಲ್ಲಿ ಪಡೆದಿದ್ದನು. ಅವನು ಶ್ರೀನಗರದ ಸರ್ ಪ್ರತಾಪ್ ಕಾಲೇಜಿನಲ್ಲಿ ತತ್ವದ ಅಧ್ಯಾಪಕನಾಗಿದ್ದನು. ಮನಶ್ಶಾಸ್ತ್ರದಲ್ಲೂ ತತ್ವಶಾಸ್ತ್ರದಲ್ಲೂ ಪರೀಕ್ಷೆಯಲ್ಲಿ ಪ್ರಥಮಸ್ಥಾನದ ಮನ್ನಣೆಯನ್ನು ಗಳಿಸಿದ್ದನು; ಆತನು ಶ್ರೇಷ್ಠ ಮೃದು ಸಮಾಧಾನ ಸ್ವಭಾವದ ಯುವಕ. ಅವನಿಗೆ ರಾಮುದಾಸನನ್ನು ಕುರಿತು ಬಹು ಗೌರವ. ಅವನ ಸೌಕರ್ಯಗಳಿಗೆ ನಿಷ್ಠೆಯಿಂದ ಗಮನ ಕೊಡುತ್ತಿದ್ದನು.

ಜಾನಕೀನಾಥನ ಮೂವರು ಪುತ್ರಿಯರೂ ರಾಮುದಾಸನನ್ನು ಸದಾಕಾಲವೂ ನೋಡಿಕೊಳ್ಳುತ್ತಿದ್ದರು. ಅವರಲ್ಲಿ ಹಿರಿಯರಿಬ್ಬರೂ ಪರಿಶುದ್ಧ ಶ್ರೇಷ್ಠ ಜೀವಿಗಳು. ಸಾಕ್ಷಾತ್ ದೇವೀ ಸ್ವರೂಪರು. ಇವರು ರಾಮುದಾಸನನ್ನು ಒಬ್ಬ ತಾಯ ವಾತ್ಸಲ್ಯ ಮತ್ತು ಶ್ರದ್ಧೆಯೊಡನೆ ಉಪಚರಿಸಿ ಭೋಜನ ಮಾಡಿಸುತ್ತಿದ್ದರು. ಅವರು ಇವನ ಹತ್ತಿರ ಇರುವಾಗಲೆಲ್ಲಾ ಇವರು ಪಾರಿಶುದ್ಧ್ಯ ವಿನಯ ಸರಳತೆಯ ಸುಗಂಧವನ್ನು ಸೂಸುತ್ತಿರುವರೆಂದು ರಾಮುದಾಸನಿಗೆ ತೋರುತ್ತಿದ್ದಿತು. ಚಿಕ್ಕ ಮಕ್ಕಳಿಗೂ ರಾಮುದಾಸನ ಮೇಲೆ ತುಂಬಾ ಪ್ರೀತಿ. ಅವರು ರಾಮುದಾಸನೊಂದಿಗೆ ಆಡುತ್ತಾ, ನಗುತ್ತಾ, ಕುಣಿಯುತ್ತಿದ್ದರು. ಶಾಲೆಗೆ

ಹೋಗುವ ಮುಂಚೆ ಮತ್ತು ಶಾಲೆಯಿಂದ ಬಂದ ಕೂಡಲೇ ಅವರಲ್ಲಿ ಕೆಲವರು ನೇರವಾಗಿ ರಾಮದಾಸನ ಹತ್ತಿರಕ್ಕೆ ಬಂದು ಅವನನ್ನು ಬಹಳ ಪ್ರೀತಿಯಿಂದ ಆಲಿಂಗಿಸುತ್ತಿದ್ದರು. ಮನೆಯ ಯಜಮಾನಿಯೂ ಸಹ ರಾಮದಾಸನ ಸಹವಾಸ ವನ್ನು ಆಶಿಸುತ್ತಾ ರಾಮದಾಸನ ಸಂಗಡ ಇರುವಾಗ ಬಹು ಹರ್ಷವಾಗಿ ರುತ್ತಿದ್ದಳು. ಒಟ್ಟಿನಲ್ಲಿ ಆ ಕಲ್ಯಾಣ ನಿವಾಸದಲ್ಲಿ ರಾಮದಾಸನ ಜೀವನ ವಿವರಿ ಸಲಸದಳವಾದ ಪ್ರೀತ್ಯಾನಂದಗಳಿಂದ ತುಂಬಿದ್ದಿತು.

ರಾಮದಾಸನು ಕಾಶ್ಮೀರದಲ್ಲಿ ಮೂರು ತಿಂಗಳ ಮೇಲೆ ನಿಂತನು. ಹರಿ ದ್ವಾರದ ಕಡೆಯವರಿಗೆ ಬದರೀನಾಥ ಕೇದಾರನಾಥಗಳ ಯಾತ್ರೆ ಹೇಗೆ ಬಹು ಮುಖ್ಯವೋ ಹಾಗೆಯೇ ಕಾಶ್ಮೀರದಲ್ಲಿರುವವರಿಗೆ ಅಮರನಾಥಯಾತ್ರೆ ಅಷ್ಟೇ ಪ್ರಮುಖವೆಂದು ತಿಳಿವಳಿಕೆ. ಆ ಯಾತ್ರೆಗೆ ಇನ್ನೂ ಎರಡು ತಿಂಗಳ ಕಾಲ ವಿದ್ದಿತು. ಆದ್ದರಿಂದ ರಾಮದಾಸನು ಈ ಎರಡು ತಿಂಗಳು ಶ್ರೀನಗರದಲ್ಲೇ ನಿಲ್ಲಬೇಕಾಯಿತು. ಕಾಶ್ಮೀರದ ಚೆಲುವ ಬೆಟ್ಟಗಳನ್ನು ಏರಿ ಅವುಗಳ ಉನ್ನತ ಶಿಖರಗಳಲ್ಲಿ ಅವುಗಳ ಗಾಂಭೀರ್ಯವನ್ನು ಅನುಭವಿಸುವ ಅವಕಾಶವನ್ನು ಕಳೆದು ಕೊಳ್ಳಲು ಅವನು ಇಷ್ಟಪಡಲಿಲ್ಲ.

ಈ ಮಧ್ಯೆ ಶ್ರೀನಗರದಲ್ಲೂ ಅದರ ಉಪನಗರಗಳಲ್ಲೂ ರಾಮದಾಸನು ನೋಡಬೇಕಾದ ಮತ್ತು ಅನುಭವ ಪಡೆಯಬೇಕಾದ ಅನೇಕ ವಿಷಯಗಳಿದ್ದುವು. ಈ ಕಾಲದಲ್ಲಿ ಮೊದಲಿನ ಭಾಗವೆಲ್ಲಾ ಶ್ರೀನಗರದ ಊರಿನಲ್ಲಿ ಕಳೆಯಿತು. ಮನೆ ಗಳು ಹಳೆಯ ಕಾಲದವು. ಮಣ್ಣಿನಿಂದ ಕಟ್ಟಿದವು. ಅವುಗಳಲ್ಲಿ ಬೆಳಕು ಗಾಳಿಯ ಓಡಾಟಕ್ಕೆ ಸೌಕರ್ಯವಿಲ್ಲ, ಅಲ್ಲದೆ ಅವು ಕಿಕ್ಕಿರಿದಿವೆ. ಅವುಗಳ ಮಧ್ಯೆ ಸಂದಿಗಳು ಕಿರಿದು, ಧೂಳು ಮತ್ತು ಕೊಳೆಯಿಂದ ತುಂಬಿವೆ. ಆರೋಗ್ಯ ಸೂತ್ರಗಳು ನಗರ ಪರಿಷ್ಕರಣ ತತ್ವಗಳು ಈ ಊರಿನ ಜನಜೀವನದಲ್ಲೂ ಕಟ್ಟಡಗಳ ನಿರ್ಮಾಣ ದಲ್ಲೂ ಯಾವ ಭಾಗವನ್ನೂ ವಹಿಸಿಲ್ಲ ಎಂಬಂತೆ ಕಾಣುತ್ತದೆ. ಈ ಊರಿನ ಹೇಯ ವಾದ ಭಾಗಗಳು ಹೇಗಿರುತ್ತವೆಂದು ತಿಳಿಯಬೇಕಾದರೆ ಇದರ ರಸ್ತೆಗಳಲ್ಲಿ ನಡೆದು ಕೊಂಡು ಹೋಗಿ, ಅನಾರೋಗ್ಯದ ಈ ತೌರುಮನೆಯಲ್ಲಿ ಒಂದರಮಗ್ಗುಲಿ ಗೊಂದು ಮನಸ್ಸಿ ಕಟ್ಟಿ ಕಿಕ್ಕಿರಿದಿರುವ ಮನೆಗಳಲ್ಲಿ ಸ್ವಲ್ಪಕಾಲ ನಿಂತರೆ ಸಾಕು.

ಊರಿನ ಜನಸಂಖ್ಯೆಯಲ್ಲಿ ಶೇಕಡ ತೊಂಬತ್ತೈದಕ್ಕೆ ಮೇಲ್ಪಟ್ಟು ಮುಸಲ್ಮಾ ನರು. ಉಳಿದವರು ಕಾಶ್ಮೀರಿ ಪಂಡಿತರು. ಯುಗಾಂತರದಲ್ಲಿ ಈ ಪ್ರದೇಶದಲ್ಲಿ ವಾಸ ಮಾಡಿದ ಕಶ್ಯಪಮಹರ್ಷಿಗಳಿಂದ ಇದಕ್ಕೆ ಕಾಶ್ಮೀರವೆಂದು ಹೆಸರು ಬಂದಿದೆ. ಪಂಡಿತರು ಬಹು ತೀಕ್ಷ್ಣ ಬುದ್ಧಿಯ ಜನ. ಸಂಸ್ಕೃತದಲ್ಲಿ ಪಾರಂಗತರು. ಈಗ ಇಲ್ಲಿ ಸರ್ ಪ್ರತಾಪ್ ಕಾಲೇಜ್ ಎಂಬ ಉನ್ನತ ತರಗತಿಯ ಪ್ರೌಢ ಶಿಕ್ಷಣ ಸಂಸ್ಥೆ ಇದೆ. ಇದರಲ್ಲಿ ವಿಶ್ವವಿದ್ಯಾನಿಲಯದ ಉತ್ತಮ ಪದವೀಧರರು ತರಪೇತು ಆಗುತ್ತಾರೆ. ಜನರು ದೃಢಾಂಗರು. ಯಾರ ತಂಟೆಗೂ ಹೋಗದ ಒಳ್ಳೇ

ಸ್ವಭಾವದವರು. ಹಿಮಕಾಲದ ಅತಿ ಚಳಿಯಿಂದ ಕಾಶ್ಮೀರದ ತಪ್ಪಲೆಲ್ಲ ಹಿಮಬಿದ್ದು ಮಂಜುಗಡ್ಡೆಯಾಗಿ ನಿಲ್ಲುವುದಂತೆ. ಇದು ಬೇಸಿಗೆಯಲ್ಲಿ ಬೀಳುವ ಕಶ್ಮಲವನ್ನೂ ಕೊಚ್ಚೆಯನ್ನೂ ಚೊಕ್ಕಟ ಮಾಡುತ್ತದೆಂದು ಹೇಳುತ್ತಾರೆ. ರಸ್ತೆಗಳ ಅನಾರೋಗ್ಯಕರ ಸ್ಥಿತಿಯಿಂದುಂಟಾಗುವ ದುರ್ವಾಸನೆ ಮತ್ತು ಇದರಿಂದ ಉತ್ಪತ್ತಿಯಾಗುವ ರೋಗವನ್ನು ಹರಡುವ ಕ್ರಿಮಿಗಳನ್ನು, ವರುಷದ ಉಳಿದ ಕಾಲದ ಚಳಿಯು ಸ್ವಲ್ಪಮಟ್ಟಿಗೆ ನಾಶ ಮಾಡಬಹುದು. ಆದರೆ ಪಟ್ಟಣದ ನಿವಾಸಿಗಳ ಆರೋಗ್ಯ ಅಷ್ಟು ತೃಪ್ತಿಕರವಾಗಿಲ್ಲ.

## (ii) ಕಾಶ್ಮೀರದವರ ಪದ್ಧತಿಗಳು

ಜನರ ಉಡುಪು ಇಲ್ಲಿಯ ವಾಯುಗುಣಕ್ಕೆ ಅನುಸಾರವಾಗಿ ಇದೆ. ಸ್ತ್ರೀಯರೂ ಪುರುಷರೂ ಮೊಣಕಾಲಿನಿಂದ ಕೆಳಕ್ಕೆ ಮುಟ್ಟುವ ಉದ್ದವಾದ ಅಂಗಿಗಳನ್ನು ತೊಡುತ್ತಾರೆ. ಇವಕ್ಕೆ ಇಲ್ಲಿ ಫೇರನ್ ಎಂದು ಹೆಸರು. ಈ ಬಟ್ಟೆ ಯಾವಾಗಲೂ ಉಣ್ಣೆಯದು. ಒರಟಾದ ಪಟ್ಟು ಅಥವಾ ನಯವಾದ ಪಶ್ಮೀನದಿಂದ ತಯಾರಾದುದು. ಈ ನಿಲುವಂಗಿಗಳ ತೋಳುಗಳು ಕೈಯಿಂದ ಮುಂದಕ್ಕೂ ಇರುತ್ತಾ ಹೆಚ್ಚಿನ ಭಾಗ ಚಳಿಯಿಂದ ಕೈಯನ್ನು ರಕ್ಷಿಸುವ ಕೈಚೀಲಗಳಂತೆ ಇರುತ್ತವೆ. ವೃದ್ಧರು ಮೈಗೆ ಫೇರನ್ನನ್ನು ತೊಟ್ಟು ಕಾಲಿಗೆ ಎತ್ತರವಾದ ಹಿಮ್ಮಡಿಯ ಮರದ ಮೆಟ್ಟುಗಳನ್ನು ಹಾಕಿಕೊಳ್ಳುತ್ತಾರೆ. ಇವುಗಳ ಪಟ್ಟಿಯನ್ನು ಹುಲ್ಲಿನ ಸರವಿಯಲ್ಲಿ ಮಾಡಿರುತ್ತಾರೆ. ಅದು ಕಾಲನ್ನು ಮುಚ್ಚುತ್ತದೆ. ಇವರು ತಲೆಗೆ ಹಳೆ ಪದ್ಧತಿಯ ರುಮಾಲನ್ನು ಧರಿಸುತ್ತಾರೆ. ಯುವಕರು ಪಂಜಾಬಿಗಳ ರೀತಿಯಲ್ಲಿ ಬೂಟ್ಸು, ಮೋಜಗಳು, ಮೈಗೆ ಅಂಟಿಕೊಂಡಿರುವ ಷರಾಯಿ, ಉದ್ದನೆ ಅಂಗಿ, ಮತ್ತು ರುಮಾಲನ್ನು ಧರಿಸುತ್ತಾರೆ.

ಸ್ತ್ರೀಯರು ಪೂರ್ವ ಕಾಲದ ವಸ್ತ್ರಗಳನ್ನು ಬಳಸುತ್ತಾರೆ. ಇದು ಉದ್ದವಾದ ತೋಳಿನ ನಿಲುವಂಗಿ. ಇವರಿಗೆ ತಲೆಯ ಹಿಂಭಾಗವನ್ನು ಮಾತ್ರ ಮುಚ್ಚುವ ಸಣ್ಣ ಬಿಳಿ ಬಣ್ಣದ ಮುಖಾವರಣವಿರುತ್ತದೆ. ಇವರು ತಮಗೆ ಮದುವೆಯಾಗಿದೆ ಎಂದು ಸೂಚಿಸಲು ಹಣೆಯ ಮೇಲೆ ಬಿಳಿಯ ಬಣ್ಣದ ಸೆಲ್ಯುಲಾಯಿಡ್ ಪಟ್ಟಿಯನ್ನು ಧರಿಸುತ್ತಾರೆ. ಮದುವೆಯಾಗದಿದ್ದವರಿಗೂ ವಿಧವೆಯರಿಗೂ ಈ ಪಟ್ಟಿ ಇರುವುದಿಲ್ಲ. ಸ್ತ್ರೀಯರ ಆಭರಣಗಳು ಮಹಮ್ಮದೀಯರ ರೀತಿಯವು. ಕಿವಿಗಳ ಅಂಚಿನಲ್ಲಿ ತೆಳ್ಳಗಿರುವ ಅಗಲವಾದ ಹಲವು ಬಳೆಗಳನ್ನು ಚುಚ್ಚಿರುತ್ತಾರೆ. ಹಣೆಗೆ ಕುಂಕುಮವನ್ನಿಡುವ ಪದ್ಧತಿ ಇಟ್ಟುಕೊಂಡಿದ್ದಾರೆ. ಪಂಜಾಬ್ ದೇಶದ ಸ್ತ್ರೀಯರಲ್ಲಿ ಇದಿಲ್ಲದಿರುವುದು ಎದ್ದು ಕಾಣುತ್ತದೆ.

ಈ ಪಂಡಿತಜನ ಗೌರವರ್ಣದವರು. ಕಾಶ್ಮೀರದಲ್ಲಿ ರಾಮದಾಸನು ನೋಡಿದ ಕೆಲವು ಹರೆಯದ ಪಂಡಿತಾನಿಯರು ಬಣ್ಣದಲ್ಲಿಯೂ ರೂಪದಲ್ಲಿಯೂ

ಪಡೆದಿದ್ದ ಸೌಂದರ್ಯ ಅಸದೃಶವಾದದ್ದು, ಅಲೌಕಿಕವಾದದ್ದು. ಅವರ ನಡಿಗೆ ಅವರದೇ ಒಂದು ರೀತಿ. ಅವರು ಸಾಕ್ಷಾತ್ ರಾಣಿಯರಂತೆ ಗಂಭೀರವಾಗಿ ಠೀವಿಯಿಂದ ಹೆಜ್ಜೆ ಇಡುವರು.

ಮುಸಲ್ಮಾನರ ಮತ್ತು ಪಂಡಿತರ ಆಡುವ ಭಾಷೆ ಸಂಸ್ಕೃತ, ಉರ್ದು, ಪಾರ್ಸಿ, ಈ ಹಲವು ಭಾಷೆಗಳ ಒಂದು ವಿಚಿತ್ರ ಮಿಶ್ರಣ. ಅದಕ್ಕೆ ಲಿಪಿ ಇಲ್ಲ. ವ್ಯವಹಾರ, ನ್ಯಾಯ, ಮತ್ತು ಇತರ ಎಲ್ಲ ಕೆಲಸಕ್ಕೆ ಬರವಣಿಗೆಯ ಭಾಷೆ ಉರ್ದು.

ಕಾಶ್ಮೀರ ದೇಶದ ಫಲವತ್ತಾದ ತಪ್ಪಲು, ಹಿಂದೆ ಆಂಗ್ಲರು ಭಾರತ ವರ್ಷಕ್ಕೆ ಬರುವ ಮುನ್ನ ಪಾರ್ಸಿ ದೇಶದ ಧಾಳಿಕಾರರ ಕಣ್ಣಿಗೆ ಆಕರ್ಷಕ ವಸ್ತುವಾಗಿದ್ದಿತು. ಆ ಧಾಳಿಕಾರರು ಈ ಪ್ರಾಂತದ ಮೇಲೆ ದರೋಡೆಮಾಡಿ ಅದನ್ನು ಲೂಟಿ ಹೊಡೆದು ಹಿಂದೂಮತೀಯರ ಬಹು ಅಂಶವನ್ನು ಬಲವಂತದಿಂದ ಇಸ್ಲಾಂ ಮತಕ್ಕೆ ಸೇರಿಸಿಕೊಂಡರು. ಈಗ ಶ್ರೀನಗರದಲ್ಲಿರುವ ಮುಸಲ್ಮಾನರು ಹಿಂದೆ ಮುಸಲ್ಮಾನ ದೊರೆಗಳ ಧಾಳಿಗಳಲ್ಲಿ ಆಳ್ವಿಕೆಗಳಲ್ಲಿ ಮತಾಂತರವನ್ನು ಹೊಂದಿದ ಪಂಡಿತರ ಸಂತತಿಯವರು. ಭಾಷೆಯಲ್ಲೂ ಉಡುಪಿನಲ್ಲೂ ಮುಸಲ್ಮಾನನಿಗೂ ಪಂಡಿತನಿಗೂ ಏನೂ ವ್ಯತ್ಯಾಸವಿಲ್ಲ. ಈ ಇಬ್ಬರ ಜಾತಿಭೇದ ಮುಸಲ್ಮಾನನ ಹಣೆಯಲ್ಲಿ ಗಂಧದ ಬೊಟ್ಟು ಇಲ್ಲದಿರುವುದರಿಂದ ಮಾತ್ರ ತಿಳಿಯುತ್ತದೆ. ಪಂಡಿತನ ಹಣೆಯ ಮೇಲೆ ಈ ಗಂಧದ ಬೊಟ್ಟು ಎತ್ತಿ ಕಾಣುತ್ತಿರುತ್ತದೆ.

ಆಹಾರದ ವಿಚಾರದಲ್ಲಿಯೂ ಈ ಎರಡು ಸಮೂಹಗಳು ಹತ್ತಿರ ಹತ್ತಿರ ಒಂದಾಗಿವೆ. ಇಬ್ಬರೂ ಅಕ್ಕಿಯನ್ನು ಮತ್ತು ಮಾಂಸವನ್ನು ತಿನ್ನುತ್ತಾರೆ. ಧೂಮಪಾನ ಮಾಡುವ ಹುಕ್ಕ ಎಲ್ಲ ಮನೆಗಳಲ್ಲೂ ಕಾಣುತ್ತದೆ. ಇಬ್ಬರೂ ಚಹ ಪಾನಕ್ಕೆ ದಾಸರೇ ಎನಬೇಕು. ದಿನಕ್ಕೆ ನಾಲ್ಕೈದುಸಲವಾದರೂ ಚಹ ಕುಡಿಯುತ್ತಾರೆ. ಹಿಮಕಾಲದಲ್ಲಿ ಬೆಚ್ಚಗಿರುವುದಕ್ಕೋಸ್ಕರ ಯೂರೋಪ್ ದೇಶದಲ್ಲಿ ಆಂಗ್ಲರು ತಮ್ಮ ಮನೆಗಳಲ್ಲಿ ಉಪಯೋಗಿಸುವ ಅಗ್ಗಿಷ್ಟಿಕೆಯನ್ನು ಇವರು ಉಪಯೋಗಿಸುವುದಿಲ್ಲ. ಜೊತೆಯಲ್ಲೇ ಇಟ್ಟುಕೊಳ್ಳಬಹುದಾದ "ಕಾಂಗ್ಡಿ" ಎಂಬ ಹೆಸರಿನ ಸಣ್ಣ ಅಗ್ಗಿಷ್ಟಿಕೆಗಳನ್ನು ಉಪಯೋಗಿಸುತ್ತಾರೆ. ಇವು ವಿಲ್ಲೋ ಬೆತ್ತದಿಂದ ತಯಾರ್ಮಾಡಿದ ಬುಟ್ಟಿಗಳು. ಇವುಗಳ ಹಿಡಿಯೂ ವಿಲ್ಲೋ ಬಳ್ಳಿಯದೇ. ಈ ಬುಟ್ಟಿಗಳೊಳಗೆ ಮಣ್ಣಿನ ಬೋಗುಣಿಯಂಥ ಪಾತ್ರೆಗಳನ್ನು ಇಟ್ಟಿರುತ್ತಾರೆ. ಬೋಗುಣಿಯಲ್ಲಿ ಕೆಂಡವನ್ನು ಮಾಡಲು ಕರಿಯನ್ನು ಉಪಯೋಗಿಸುತ್ತಾರೆ. ಈ ಕಾಂಗ್ಡಿಗಳನ್ನು ತಮ್ಮ ಫೇರನ್ನಿನ ಒಳಗೆ ಇಟ್ಟುಕೊಳ್ಳುತ್ತಾರೆ. ಶಾಖ ಅಂಗಿಯೊಳಗೆ ದೇಹದ ಮೇಲೆಲ್ಲಾ ಹರಡಿ ಕಾವನ್ನು ಕೊಡುತ್ತದೆ.

ಅಕ್ಕಿಯೇ ಮುಖ್ಯ ಆಹಾರವಾದುದರಿಂದ ಬತ್ತದ ಬೆಳೆಯೇ ಹೆಚ್ಚು. ಇವರು ಬೆಳೆಯುವ ಅಕ್ಕಿಯ ಕಾಳು ಕೆಂಪಗೆ ದಪ್ಪವಾಗಿರುತ್ತದೆ. ಇವರಿಗೆ ಬಹಳ ಇಷ್ಟವಾದ ಮುಖ್ಯ ತರಕಾರಿ ಎಂದರೆ ಕದಂಬದ ಪಲ್ಯ. ಇದಿಲ್ಲದಿದ್ದರೆ ಅವರಿಗೆ

ಊಟವೇ ರುಚಿಸುವುದಿಲ್ಲ. ಇವರು ತುಪ್ಪ ಮತ್ತು ಹಾಲನ್ನು ಉಪಯೋಗಿಸುವುದು ಅಪರೂಪ. ಇವರು ಮೊಸರನ್ನೂ ಮತ್ತು ನೀರು ತೆಗೆದ ಮೊಸರುಗಟ್ಟಿಯನ್ನೂ ಥಂಡಿಯಾಗಿ ಭುಂಜಿಸುತ್ತಾರೆ. ಶ್ರೀನಗರದಲ್ಲಿ ಹಾಲು ಯಥೇಚ್ಛವಾಗಿ ದೊರೆಯುತ್ತದೆ. ಮುಸಲ್ಮಾನರೇ ಅಧಿಕಸಂಖ್ಯೆಯಲ್ಲಿದ್ದರೂ, ಆ ಸಂಸ್ಥಾನದ ಮಹಾರಾಜರ ಸರಕಾರ ದನಗಳನ್ನು ಕೊಲ್ಲುವುದನ್ನು ನಿಷೇಧಿಸಿರುವುದರಿಂದ ಕಾಶ್ಮೀರದಲ್ಲಿ ಗೋವಧೆ ಇಲ್ಲ. ಕಾಶ್ಮೀರದ ಹಣ್ಣುಗಳು ಚಳಿದೇಶದವು. ಸೇಬು, ಪೀಚು, ಪೇರ್ಸ್ಸ ಮಿಡಿಗಳು ಇವು ಬೇಕಾದಷ್ಟು ಬಹು ಸುಲಭ ಬೆಲೆಗೆ ಸಿಕ್ಕುತ್ತವೆ.

ಪಂಡಿತರು ಶೈವರು, ಶಕ್ತಿಯ ಆರಾಧಕರು. ಇವರು ಬಾಹ್ಯ ವೈರಾಗ್ಯ ಸೂಚಕವಾದ ಸಂನ್ಯಾಸವನ್ನು ವಿರೋಧಿಸುತ್ತಾರೆ. ಪಂಡಿತರಲ್ಲಿ ಸಾಧುಗಳಿದ್ದಾರೆ. ಅವರು ಪ್ರಾಯೇಣ ಸದಾಚಾರಿಗಳಾದ ಗೃಹಸ್ಥರು. ಪಂಡಿತನಿಗೆ ತನ್ನ ವಿದ್ಯೆ ಮತ್ತು ಬುದ್ಧಿ ವಿಕಾಸಗಳನ್ನು ಕುರಿತು ಹೆಮ್ಮೆ. ಆತನು ಹೇಳುವುದು; "ಪಾಶ್ಚಾತ್ಯ ಆಧ್ಯಾತ್ಮಿಕಶಾಸ್ತ್ರ ಎಲ್ಲಿ ಕೊನೆಗಾಣುತ್ತದೋ ಅಲ್ಲಿ ಪೂರ್ವದೇಶದ ಆಧ್ಯಾತ್ಮಿಕ ಶಾಸ್ತ್ರ ಪ್ರಾರಂಭವಾಗುತ್ತದೆ. ಪೂರ್ವದೇಶದ ಆಧ್ಯಾತ್ಮಿಕಶಾಸ್ತ್ರ ಎಲ್ಲಿ ಕೊನೆಗಾಣುತ್ತದೋ ಅಲ್ಲಿಂದ ಕಾಶ್ಮೀರದ ಆಧ್ಯಾತ್ಮಿಕಶಾಸ್ತ್ರ ಪ್ರಾರಂಭವಾಗುತ್ತದೆ." ಈ ಪಂಡಿತರು ನಿಸ್ಸಂಶಯವಾಗಿಯೂ ಬುದ್ಧಿವಂತರು, ಸೂಕ್ಷ್ಮಮತಿಗಳು. ಅವರ ಬ್ರಾಹ್ಮಣ್ಯ ಅವರನ್ನು ದೇಹಶ್ರಮ ವಾಣಿಜ್ಯ ಮತ್ತು ಕುಶಲ ಕರ್ಮಗಳಲ್ಲಿ ಉದ್ಯುಕ್ತರಾಗದಂತೆ ಮಾಡಿತು. ಇವುಗಳಲ್ಲಿ ಮಹಮ್ಮದೀಯರು ಬಹಳವಾಗಿ ತೊಡಗಿದ್ದಾರೆ. ಜಗತ್ಪ್ರಸಿದ್ಧವಾದ ಕಾಶ್ಮೀರದ ಶಹಲುಗಳು ಕುಶಲರಾದ ಮಹಮ್ಮದೀಯ ನೇಯ್ಗೆಯವರ ಕೈವಾಡ. ಮರದ ಸಾಮಾನು ಮರದ ಕೆತ್ತನೆ ಪೆಪಿಯರ್‌ಮೆಷಿ ಮುಂತಾದ ಕೆಲಸಗಳಲ್ಲಿ ಕಾಶ್ಮೀರದ ಕೆಲಸಗಾರರು ಸುಪ್ರಸಿದ್ಧರು. ಪಂಡಿತರು ಜ್ಞಾನಪ್ರಧಾನವಾದ ವೃತ್ತಿಗಳನ್ನು ಮಾತ್ರ ಅವಲಂಬಿಸಿದ್ದಾರೆ. ಆದರೆ ಈಚೆಗೆ ಈ ವೃತ್ತಿಗಳಲ್ಲಿ ಜನಬಾಹುಳ್ಯವಾಗಿರುವುದರಿಂದ, ಅವರೂ ವ್ಯಾಪಾರ ಮತ್ತು ಇತರ ವ್ಯವಹಾರಗಳಲ್ಲಿ ಪ್ರವೇಶಿಸುತ್ತಿದ್ದಾರೆ.

ಇವರಲ್ಲಿ ಸಂಗೀತ ವಿದ್ಯೆಇಲ್ಲ. ಇವರು ಒಂದು ವಿಚಿತ್ರವಾದ ಏಕತಾನವಾದ ಧ್ವನಿಯಲ್ಲಿ ಸಂಸ್ಕೃತ ಶ್ಲೋಕಗಳನ್ನೂ ಮಂತ್ರಗಳನ್ನೂ ಒಂದಿಗೆ ಹಾಡುವರು. ಇವರ ಉಚ್ಚಾರಣೆಯ ವಿಧಾನ ಪಾರ್ಸಿಸ್ಥಾನದವರ ಶಬ್ದೋಚ್ಚಾರಣೆಯ ಲಕ್ಷಣವನ್ನು ಸ್ಪಷ್ಟವಾಗಿ ತೋರುತ್ತದೆ.

ಪುರುಷರು ವಿದ್ಯಾಪಾರಂಗತರಾಗಿ ಪದವೀಧರರಾದರೂ ಶ್ರೀನಗರದ ಗೃಹಿಣಿಯರು ವಿದ್ಯೆಯ ವಿಚಾರದಲ್ಲಿ ಬಹಳ ಹಿಂದಾಗಿದ್ದಾರೆ. ಅನೇಕ ಸಂದರ್ಭಗಳಲ್ಲಿ ಗೃಹಿಣಿಯರು ನಿರಕ್ಷರ ಕುಕ್ಷಿಗಳು. ಇವರು ತಮ್ಮ ಮಿಶ್ರ ಭಾಷೆ ಕಾಶ್ಮೀರಿಯಲ್ಲಿ ಮಾತ್ರ ತಮ್ಮ ಅಭಿಪ್ರಾಯವನ್ನು ತಿಳಿಯಪಡಿಸಬಲ್ಲರು. ಇದು ಹೊರತು ಇವರಿಗೆ ಬೇರೆ ಯಾವ ಭಾಷಣದ ವಿಧಾನವೂ ಗೊತ್ತಿರುವುದಿಲ್ಲ. ಈ ಜನರಲ್ಲಿ

ಪ್ರೌಢಾವಿವಾಹ ಎಂದರೆ ಋತುಮತಿಯಾದ ಮೇಲೆ ಮದುವೆಮಾಡುವುದು ಸಾಮಾನ್ಯ. ಅನೇಕ ಸಂದರ್ಭಗಳಲ್ಲಿ ಮದುವೆಮಾಡುವ ಮೊದಲು ವಧುವನ್ನು ಹದಿನೇಳು ಹದಿನೆಂಟು ವರುಷದವರೆಗೆ ಬೆಳೆಯಬಿಟ್ಟಿರುತ್ತಾರೆ. ಇವರಲ್ಲಿಯೂ ಕನ್ಯಾಶುಲ್ಕದ ಪದ್ಧತಿ ಹಿಂದೂಸ್ಥಾನದ ಇತರ ಪ್ರಾಂತಗಳಲ್ಲಿರುವಂತೆ ದುಸ್ವಪ್ನದ ಎದೆಭಾರದಂತಾಗಿದೆ.

ರಾಮದಾಸನಿಗೆ ಈ ಪಂಡಿತರ ಮನೆಯ ಮದುವೆಗೆ ಹೋಗುವ ಸಂದರ್ಭ ಒಂದು ಸಲ ಒದಗಿತು. ಮದುವೆಯ ಕಾರ್ಯಗಳು ನಡೆಯುತ್ತಾ, ಪುರೋಹಿತರು ಉಸಿರು ನಿಲ್ಲಿಸದಂತೆ ಮಂತ್ರಗಳನ್ನು ಪಠಿಸುತ್ತಿರುವಾಗ, ರಾಮದಾಸನು ವಧೂ ವರರನ್ನು ನೋಡಲು ಲಗ್ನಮಂಟಪಕ್ಕೆ ಹೋದನು. ವರನು ಕಾಣಿಸುತ್ತಿದ್ದನು. ವಧು ಒಂದು ದಪ್ಪ ಬಿಳಿಯ ಬಟ್ಟೆಯ ಮುಖಾವರಣದಿಂದ ಮುಚ್ಚಿಹೋಗಿದ್ದಳು. ನೂರಾರು ವರ್ಷಗಳು ಮುಸಲ್ಮಾನರ ಸಂಪರ್ಕದಲ್ಲಿದ್ದು, ಅದರ ಪ್ರಭಾವದಿಂದ ಅವರ ಪದ್ಧತಿಗಳನ್ನು ಜೀವನ ಕ್ರಮವನ್ನು ಅನುಸರಿಸಬೇಕಾಗಿ ಈ ಪಂಡಿತರು ಅವರ ಪದ್ಧತಿಗಳನೇಕವನ್ನು ಅನುಕರಿಸಿದ್ದಾರೆಂಬುದು ವ್ಯಕ್ತವಾಗುತ್ತದೆ. ರಾಮ ದಾಸನು ಮದುವೆಯ ಔತನಕ್ಕೆ ಹೋಗಿದ್ದನು. ಶ್ರೀನಗರದಲ್ಲಿ ನಿಂತ ಆ ಕಾಲದಲ್ಲಿ ಪ್ರಯಶಃ ಕ್ಷೀರವ್ರತವನ್ನು ನಡೆಸುತ್ತಿದ್ದುದರಿಂದ ಅವನು ಆ ಊಟವನ್ನು ತೆಗೆದು ಕೊಳ್ಳಲಿಲ್ಲ. ಊಟಕ್ಕೆ ನೆರೆದಿದ್ದ ನೂರಾರು ಜನರನ್ನು, ಹಿಂದೂಸ್ಥಾನದ ಇತರ ಭಾಗಗಳಲ್ಲಿರುವ ಪದ್ಧತಿಯಂತೆ ಮೂರು ನಾಲ್ಕು ಉದ್ದವಾದ ಸಾಲುಗಳಲ್ಲಿ ನೆಲದ ಮೇಲೆ ಕುಳ್ಳಿರಿಸಿ ಭೋಜನಕ್ಕೆ ಬಡಿಸಿದರು. ಆದರೆ ರಾಮದಾಸನಿಗೆ ಅಸಾಧಾರಣವೆಂದು ಕಂಡ ವಿಷಯವೆಂದರೆ ಅತಿಥಿಗಳಿಗೆ ಊಟದ ಪದಾರ್ಥ ಗಳನ್ನು ದೊಡ್ಡ ದೊಡ್ಡ ಮಣ್ಣಿನ ಪಾತ್ರೆಗಳಲ್ಲಿ ಬಡಿಸುತ್ತಿದ್ದುದು.

ಮುಸಲ್ಮಾನರೂ ಪಂಡಿತರೂ ಪರಸ್ಪರ ಬಹು ಸೌಹಾರ್ದದಿಂದ ಬಾಳುತ್ತಾರೆ. ಮುಸಲ್ಮಾನರ ನಿರಕ್ಷರಕುಕ್ಷತೆ ಆಶ್ಚರ್ಯಕರವಾದುದು. ಅವರು ಸಂಸ್ಕೃತಿಯಲ್ಲಿ ಸ್ವಚ್ಛಜೀವನದಲ್ಲಿ ಮತ್ತು ನಯನೀತಿಗಳಲ್ಲಿ ವಿಕಾಸಹೊಂದಿಲ್ಲ. ಕುಶಲ ವಿದ್ಯೆ, ಕೈಗಾರಿಕೆ, ವ್ಯಾಪಾರ, ವ್ಯವಸಾಯ ಇವುಗಳಲ್ಲಿ ಪ್ರವೀಣರಾಗಿದ್ದಾರೆ. ಪಂಡಿತರ ಮನೆಯಲ್ಲಿ ಮುಸಲ್ಮಾನರಿಗೆ ಧಾರಾಳವಾಗಿ ಪ್ರವೇಶವಿದೆ. ಅವರ ಅಡಿಗೆ ಮನೆ ಮತ್ತು ಊಟದ ಕೋಣೆಗಳಿಗೂ ಮುಸಲ್ಮಾನರು ಪ್ರವೇಶ ಮಾಡ ಬಹುದು.

ಕಾಶ್ಮೀರಿಗಳು ಅಸ್ಪೃಶ್ಯತೆ ಎಂಬುದನ್ನು ಅರಿಯರು. ಹಿಂದೂ ಸಮಾಜದಲ್ಲಿ ಜಾತಿಭೇದಗಳಿಲ್ಲ. ಪಂಡಿತರು ಮಾತ್ರ ಉನ್ನತ ವಂಶಜರೆಂಬ ಭಾವನೆಯಿಂದಲೂ ಅನೂಚಾನವಾದ ಹೆಮ್ಮೆಯಿಂದಲೂ ತಮ್ಮ ತಮ್ಮೊಳಗೆ ಉಚ್ಚ ನೀಚ ಭೇದ ಗಳನ್ನು ಮಾಡುತ್ತಾರೆ. ಆದರೆ ಪಂಡಿತರ ಎಲ್ಲಾ ತರಗತಿಯವರೂ ವಿವಾಹ ಊಟ ಉಪಚಾರಗಳಲ್ಲಿ ಧಾರಾಳವಾಗಿ ಬೆರೆಯುತ್ತಾರೆ.

ನೆಲದ ಸಾಗುವಳಿಯ ವಿಷಯದಲ್ಲಿ ಭತ್ತ ಮತ್ತು ಹಿಂದೂಸ್ಥಾನದ ಇತರ ಭಾಗಗಳಿಗೆ ಥಂಡಿಯಾಗಿ ರಫ್ತಾಗುವ ಹಣ್ಣು ಅಲ್ಲದೆ, ಈ ಜನ ಬೇಸಿಗೆಯ ಅಂತ್ಯ ದಲ್ಲಿ ಕೆಲವು ಆರಿಸಿದ ಹೊಲಗಳಲ್ಲಿ ಕೇಸರಿಯನ್ನೂ ಬೆಳೆಯುತ್ತಾರೆ. ಕಾಶ್ಮೀರದ ಭೂಮಿ ಫಲವತ್ತಾದ ಮೆಕ್ಕಲು ಮಣ್ಣು.

## (ii) ಹರಿಪರ್ವತ

ರಾಮದಾಸನು ಕೆಲವು ದಿವಸ ಜಾನಕೀನಾಥನ ಮನೆಯನ್ನು ಬಿಟ್ಟು ಕದಲಲಿಲ್ಲ. ಅವನು ಮೊದಲನೆಯ ಸಲ ಹೊರಗೆ ಹೋದುದು ಹುಡುಗರು ಅವನನ್ನು ಆಟದ ಮೈದಾನಕ್ಕೆ ಕರೆದುಕೊಂಡು ಹೋದಾಗಲೇ. ಈ ಮೈದಾನ ಉದ್ದವಾದ ಪಟ್ಟೆಯಂಥ ಸಮಭೂಮಿ; ಅದರ ಮೇಲೆ ದಟ್ಟವಾಗಿ ಹುಲ್ಲು ಬೆಳೆ ದಿದ್ದಿತು. ಅದರ ಒಂದು ಅಂಚಿನಲ್ಲಿ ಎತ್ತರವಾದ ಪಾಪಲಾರ್ ಮರಗಳ ಸಾಲು ಇದ್ದಿತು. ರಾಮದಾಸನು ಹುಡುಗರ ಆಟವನ್ನು ನೋಡುತ್ತ ನಿಂತನು. ಇಲ್ಲಿ ಅವನಿಗೆ ಕೆಲವು ವಿದ್ಯಾವಂತರಾದ ಮುಸಲ್ಮಾನರು ದೊರೆತು ಅವರು ಹುಲ್ಲಿನ ಮೇಲೆ ಅವನನ್ನು ಸುತ್ತಿ ನಿಂತು ಅವನಿಗೆ ಧರ್ಮಸಂಬಂಧವಾಗಿಯೂ ಆಧ್ಯಾತ್ಮಿಕ ವಿಷಯವಾಗಿಯೂ ಅನೇಕ ಪ್ರಶ್ನೆಗಳನ್ನು ಹಾಕಿದರು. ರಾಮದಾಸನಿಗೆ ಲೋಕದ ಸರ್ವಮತಗಳಲ್ಲೂ ಸಹೃದಯತೆ ಸಮವಾಗಿದ್ದುದರಿಂದ ಅವನು ಕೆಲವು ವೇಳೆ ಇಂಗ್ಲಿಷಿನಲ್ಲಿ ಕೆಲವು ವೇಳೆ ಹಿಂದೀಯಲ್ಲಿ ಪೈಗಂಬರ್ ಮಹಮ್ಮದರ ಹಿರಿಮೆಯ ವಿಚಾರವಾಗಿ ಮತ್ತು ಕುರಾನಿನಲ್ಲಿರುವ ಬೋಧನೆಯ ಮೌಲ್ಯದ ವಿಚಾರವಾಗಿ ಮಾತನಾಡಿದನು. ಅವನ ವಿವರಣೆಯನ್ನು ಇವರು ಕುತೂಹಲದಿಂದ ಕೇಳಿದರು. ಮತ್ತು ಅವನ ವಿಷಯದಲ್ಲಿ ಸ್ನೇಹವನ್ನೂ ಪ್ರೀತಿಯನ್ನೂ ತೋರಿದರು.

ಅವನು ಕೆಲವು ದಿನ ಪ್ರತಿ ಸಾಯಂಕಾಲವೂ ಆಟದ ಮೈದಾನಕ್ಕೆ ಹೋಗು ತ್ತಿದ್ದನು. ನಂತರ ಈ ಹುಡುಗರು ರಾಮದಾಸನನ್ನು ಹರಿಪರ್ವತಕ್ಕೆ ಕರೆದು ಕೊಂಡು ಹೋದರು. ಇದು ಶ್ರೀನಗರಕ್ಕೆ ಸುಮಾರು ಒಂದು ಮೈಲಿ ದೂರದಲ್ಲಿ ರುವ ಒಂದು ಬೆಟ್ಟ. ಈ ಬೆಟ್ಟದ ಮೇಲೆ ಒಂದು ಕಡೆ ಅಮ್ಮನವರ ದೇವಸ್ಥಾನ ವಿರುವುದರಿಂದ ಪಂಡಿತರು ಇದನ್ನು ಭಕ್ತಿಯಿಂದ ಕಾಣುತ್ತಾರೆ. ಈ ಗಿರಿಯ ಪ್ರದಕ್ಷಣೆಯನ್ನು ಪುಣ್ಯಸಾಧನವೆಂದು ಗಣಿಸುತ್ತಾರೆ. ಈ ಉದ್ದೇಶದಿಂದ ಪ್ರತಿ ದಿನವೂ ಬೆಳಿಗ್ಗೆ ನೂರಾರು ಪಂಡಿತರು ಮತ್ತು ಅವರ ಸ್ತ್ರೀಯರು ತಮ್ಮ ಕಿಕ್ಕಿರಿದ ಮನೆಗಳಿಂದ ಸುರಿದುಹೋಗುತ್ತಿರುವುದು ಕಾಣುತ್ತದೆ. ಬೆಳಗಿನ ವ್ಯಾಯಾಮವೂ ಬಯಲಿನ ಒಳ್ಳೇ ಗಾಳಿಯ ಸೇವನೆಯೂ ಕಶ್ಮಲವಾದ ಊರಿನ ಕೆಟ್ಟ ವಾಯುವಿ ನಿಂದ ಅವರ ಆರೋಗ್ಯಕ್ಕೆ ಉಂಟಾಗುವ ದುಷ್ಪರಿಣಾಮವನ್ನು ತಗ್ಗಿಸಲು ಬಹು ಮಟ್ಟಿಗೆ ಸಹಕಾರಿಯಾಗಿವೆ. ಪ್ರದಕ್ಷಣೆಯೂ ಬೆಟ್ಟದ ಮೇಲಣ ದೇವಿಯ ದರ್ಶನವೂ ವಿಧ್ಯುಕ್ತ ಕರ್ತವ್ಯವೇ ಸರಿ ಎಂದು ಇವರು ಎಣಿಸುತ್ತಾರೆ. ಆ ಸಮಯ

ದಲ್ಲಿ ಇವರು ತಮ್ಮ ಮನಸ್ಸನ್ನು ಪ್ರಾಪಂಚಿಕ ಕ್ಲೇಶಗಳಿಂದ ತೀರಾ ಬಿಡಿಸಿ ಪರಮಾತ್ಮನ ಧ್ಯಾನಕ್ಕೆ ತಿರುಗಿಸುವುದು ಸಾಧ್ಯ.

ಬೆಟ್ಟದ ಇನ್ನೊಂದು ಪಾರ್ಶ್ವದಲ್ಲಿ ಚೊಕ್ಕವಾಗಿ ಕಟ್ಟಿದ ಒಂದು ಕೋಟೆ ಇದೆ. ಇದು ಪೂರ್ವದಲ್ಲಿ ಕಾಶ್ಮೀರದ ರಾಜರ ದುರ್ಗವಾಗಿದ್ದಿತು. ರಾಮದಾಸನು ದೇವಿಯ ಮಂದಿರಕ್ಕೆ ಹೋದನು. ದೇವಿಯ ಮೂರ್ತಿ ಒಂದು ದೊಡ್ಡ ಶಿಲೆ. ದರ್ಶನಕ್ಕೆ ಹೋಗುವವರ ಕಡೆಗೆ ಅದು ಚಪ್ಪಟೆಯಾಗಿದೆ. ಈ ಚಪ್ಪಟೆ ಕಲ್ಲಿಗೆ ದಟ್ಟವಾಗಿ ಕೆಂಪು ಬಣ್ಣವನ್ನು ಬಳಿದು, ಮೇಲೆ ಹೂವಿನಿಂದಲೂ ಹೂವಿನ ಹಾರದಿಂದಲೂ ಅಲಂಕಾರ ಮಾಡಿರುತ್ತಾರೆ. ದೇವಸ್ಥಾನದ ಕಟ್ಟಡದಲ್ಲಿಯೇ ಕೆಲವರು ಪಂಡಿತರು ವಾಸಮಾಡುತ್ತಾರೆ. ಇವರು ದೇವತೆಯ ಅರ್ಚಕರು.

ರಾಮದಾಸನನ್ನು ಬೆಟ್ಟದ ಮೇಲಿನ ತಂಪಾದ ಮತ್ತು ಉತ್ತೇಜಕವಾದ ಗಾಳಿ ಆಕರ್ಷಿಸಿತು. ಅವನು ಒಂದು ರಾತ್ರಿಯನ್ನು ದೇವಸ್ಥಾನದ ಮುಂದೆ ಸುಮಾರು ಐವತ್ತು ಗಜಗಳ ದೂರದಲ್ಲಿನ ಒಂದು ಚಪ್ಪಡಿಯ ಮೇಲೆ ಒಂಟಿಯಾಗಿ ಕಳೆದನು. ಅಮರನಾಥನಿಗೆ ರಾಮದಾಸನ ಮೇಲೆ ಇದ್ದ ಅತಿಪ್ರೇಮದಿಂದ ಅವನು ಈ ಸಂದರ್ಭದಲ್ಲಿ ಬಹಳ ಕಳವಳಿಸುವಂತಾಯಿತು. ಮಾರನೆಯ ದಿನ ಸಾಯಂಕಾಲದವರೆಗೂ ರಾಮದಾಸನು ಬೆಟ್ಟದ ಮೇಲೆಯೇ ಇದ್ದನು. ಅಮರನಾಥನು ಪ್ರಾತಃಕಾಲದಲ್ಲಿ ಬಂದು ಹಾಲಿಗೆ ಏರ್ಪಾಡು ಮಾಡಿದನು. ಈ ಬೆಟ್ಟ ಅಗೋಚರವಾದ ಮಾನವಕೋಟಿಯ ಮಾರ್ಗದರ್ಶಕರಾದ ಸಪ್ತರ್ಷಿಗಳ ಸಮ್ಮೇಳನದ ಸ್ಥಳವೆಂದು ಪ್ರತೀತಿ ಇದೆ.

ಈ ಬೆಟ್ಟವನ್ನು ಸುತ್ತಾಡುವ ಯೋಗ ರಾಮದಾಸನಿಗೆ ಅನೇಕ ಸಲ ದೊರೆಯಿತು. ದಾರಿಯ ಮಗ್ಗುಲಲ್ಲಿ ಒಂದು ಸಣ್ಣ ದೇವಸ್ಥಾನವಿದೆ. ಇದರ ಮೇಲ್ವಿಚಾರಣೆ ಸಂನ್ಯಾಸಿಗಳಿಗೆ ಸೇರಿದ್ದು. ರಾಮದಾಸನು ಇಲ್ಲಿಗೆ ಹೋಗಿದ್ದಾಗ ಅವನಿಗೆ ಆನಂದಸ್ವರೂಪನೆಂಬ ಚಿಕ್ಕ ವಯಸ್ಸಿನ ಒಬ್ಬ ಸಂನ್ಯಾಸಿ ಸಿಕ್ಕಿದನು. ಇವನು ಕೊಚ್ಚಿ ದೇಶದಲ್ಲಿ ಹುಟ್ಟಿದವನು, ಗೌಡ ಸಾರಸ್ವತ ಸಮುದಾಯಕ್ಕೆ ಸೇರಿದವನು. ಇವನು ದೇವಸ್ಥಾನದ ಹತ್ತಿರ ಇದ್ದ ಒಂದು ಛತ್ರದ ಮಹಡಿಯ ಮೇಲೆ ಒಂದು ಸಣ್ಣ ಕೋಣೆಯಲ್ಲಿ ವಾಸಿಸುತ್ತಿದ್ದನು. ಈತನು ಬಹಳ ಶ್ರದ್ಧೆಯುಳ್ಳ ಸಾಧಕ. ಶಾಸ್ತ್ರವನ್ನು ಆಳವಾಗಿ ಅಭ್ಯಾಸಮಾಡುವುದರಲ್ಲಿ ಆಧ್ಯಾತ್ಮಿಕ ಸಾಧನೆ ಮತ್ತು ಧ್ಯಾನದಲ್ಲಿ ಕಾಲವನ್ನು ತುಂಬಿ ತನ್ನ ಪಾಡಿಗೆ ತಾನಿದ್ದನು. ರಾಮದಾಸನು ಈತನ ಸಹವಾಸದಲ್ಲಿ ಹಲವು ತಾಸು ಆನಂದವನ್ನು ಅನುಭವಿಸಿದನು. ಅವನು ರಾಮದಾಸನ ವಿಚಾರದಲ್ಲಿ ಎಷ್ಟೋ ದಯೆ ಪ್ರೀತಿಯನ್ನು ತೋರಿಸಿದನು.

ಕಾಶ್ಮೀರದ ಮುಖ್ಯ ನದಿ ಝೀಲಂ. ಇದನ್ನು ಪಂಡಿತರು "ವಿತಸ್ತ" ಎಂದು ಕರೆಯುತ್ತಾರೆ. ಇದು ಸಿಂಧೂನದಿಯ ಉಪ ನದಿಗಳಲ್ಲಿ ಒಂದು. ನದಿ ಸರಿಯಾಗಿ ಊರ ಮಧ್ಯದಲ್ಲಿ ಹರಿಯುತ್ತದೆ. ಅದರ ಎರಡು ದಡಗಳ ಮೇಲೂ ಅಲ್ಲಿಯ ಪಂಡಿತರ ಮತ್ತು ಮುಸಲ್ಮಾನರ ಮನೆಗಳು ಚಿಮುಕಿವೆ. ಅನೇಕ ಕಡೆ ಮನೆಗಳು ಮರದ ಕಂಬಗಳ ಮೇಲೆ ನಿಂತು ನದಿಯ ಒಳಕ್ಕೆ ಚಾಚಿಕೊಂಡಿವೆ.

ಪಂಡಿತರು ನದಿಯನ್ನು ಬಹಳ ಪವಿತ್ರವೆಂದು ಭಾವಿಸುತ್ತಾರೆ. ಆದರೆ ಊರಿನ ಚರಂಡಿಯ ನೀರೆಲ್ಲಾ ನದಿಗೆ ಸೇರುವುದರಿಂದ ಅದರ ನೀರು ರಾಡಿಯಾಗಿ ಕಪ್ಪಾಗಿ ಒಂಡಾಗಿ ಅಶುಚಿಯಾಗಿದೆ. ಪಂಡಿತರು ಈ ನದಿಯ ನೀರಿನಲ್ಲಿ ಬಟ್ಟೆ ಒಗೆಯುತ್ತಾರೆ; ಸ್ನಾನಮಾಡುತ್ತಾರೆ. ಕಿಸ್ತಿಯೆಂದು ಕರೆಯುವ ಉದ್ದವಾದ ತೆಳುವಾದ ದೋಣಿಗಳು ನದಿಯ ಮೇಲೆ ಓಡಾಡುತ್ತವೆ. ಇವಕ್ಕೆ ಅಂಬಿಗರು ಮುಸಲ್ಮಾನರು. ವಿಹಾರಾರ್ಥವಾಗಿಯೂ ಮತ್ತೂ ಪ್ರೇಕ್ಷಣೀಯ ಸ್ಥಳಗಳಿಗೆ ಪ್ರಯಾಣ ಮಾಡುವಾಗಲೂ ಊರಿನವರು ಈ ಹಗುರವಾದ ದೋಣಿಗಳನ್ನು ಬಹಳವಾಗಿ ಉಪಯೋಗಿಸುತ್ತಾರೆ. ಕಿಸ್ತಿಯ ಮಾಲೀಕರಿಗೆ ತುಂಬ ವರಮಾನ ಸಿಕ್ಕುತ್ತದೆ. ಒಂದು ದಡದಿಂದ ಇನ್ನೊಂದು ದಡಕ್ಕೆ ಹೋಗುವುದಕ್ಕಾಗಿ ನದಿಗೆ ಅಡ್ಡಲಾಗಿ ಹಲವು ಮರದ ಸೇತುವೆಗಳನ್ನು ಕಟ್ಟಿದ್ದಾರೆ.

ಒಂದು ದಿನ ರಾಮುದಾಸನನ್ನು ನೋಡುವುದಕ್ಕೆ ಜಾನಕೀನಾಥನ ಮನೆಗೆ ಬರುತ್ತಿದ್ದ ಒಬ್ಬ ವಿದ್ಯಾರ್ಥಿಗೆಳೆಯ ಅವನನ್ನು ಶಂಕರಾಚಾರ್ಯರ ಬೆಟ್ಟಕ್ಕೆ ಕರೆದುಕೊಂಡು ಹೋಗುವುದಾಗಿ ಹೇಳಿದನು. ಅವನೂ ರಾಮುದಾಸನೂ ಒಂದು ಕಿಸ್ತಿಯಲ್ಲಿ ಕುಳಿತರು. ದೋಣಿ ನದಿಯ ಪ್ರವಾಹಕ್ಕೆ ಎದುರಾಗಿ ಹಾಯ್ದು ಬೆಟ್ಟದ ಬುಡದ ಬಳಿಯ ಕಡುವನ್ನು ಮುಟ್ಟಿತು. ಸ್ವಲ್ಪ ದೂರ ನಡೆದ ಮೇಲೆ ಬೆಟ್ಟದ ಬುಡವನ್ನು ಸೇರಿದರು. ಅಲ್ಲಿ ಸಂನ್ಯಾಸಿಗಳ ಆಶ್ರಮ ಒಂದಿದೆ. ಈ ಸ್ಥಳವನ್ನು "ದುರ್ಗಾನಾಗ್" ಎಂದು ಕರೆಯುತ್ತಾರೆ. ಆಶ್ರಮದ ಆವರಣದಲ್ಲಿರುವ ಒಂದು ಸ್ವಚ್ಛವಾದ ಬುಗ್ಗೆಯಿಂದ ಈ ಹೆಸರು ಬಂದಿದೆ. ನಾಗ್ ಎಂದರೆ ಚಿಲುಮೆ.

## (iv) ಶಂಕರಾಚಾರ್ಯರ ಬೆಟ್ಟ

ವಿದ್ಯಾರ್ಥಿಗೆಳೆಯನೂ ರಾಮುದಾಸನೂ ಬೆಟ್ಟವನ್ನು ಹತ್ತಲು ಆರಂಭಿಸಿದರು: ಬೆಟ್ಟ ಕಾಶ್ಮೀರದ ತಪ್ಪಲ ಮಟ್ಟಕ್ಕಿಂತ ಒಂದು ಸಾವಿರ ಅಡಿ ಎತ್ತರದಲ್ಲಿದೆ. ಮೇಲೆ ಮೇಲೆ ಏರಿದಂತೆ ರಾಮುದಾಸನಿಗೆ ತೆರೆಯೊಂದನ್ನು ಮೆಲ್ಲನೆ ಎತ್ತುತ್ತ ಕಾಶ್ಮೀರದ ಅತಿಶಯಿತ ಸೌಂದರ್ಯವನ್ನು ಪ್ರಕಟಿಸುತ್ತಿರುವಂತೆ ಕಂಡಿತು. ಇವರು ಬೆಟ್ಟದ ತುದಿಯನ್ನು ಸೇರಿದ ಮೇಲೆ ರಾಮುದಾಸನು ಸುತ್ತ ಕಣ್ಣೆಸದು ನೋಡಲು ಅವನಿಗೆ ವಿವರಿಸಲಸದಳವಾದ ಆನಂದ ಆಗಿ ರೋಮಾಂಚ

ವನ್ನುಂಟುಮಾಡಿತು. ವಿಶಾಲವೂ ಚಿತ್ರವೂ ಆದ ತಪ್ಪಲು ಎದುರಿಗೆ ಇದ್ದಿತು. ನೀಲಿನೇರಲವರ್ಣಗಳ ನಯವಾದ ಮಿಲನದಿಂದ ರಂಜಿತವಾದ ಶಿಖರಗಳಲ್ಲಿ ಕಣ್ಣು ಕೋರೈಸುವ ಹಿಮದ ಚಕ್ಕೆಗಳನ್ನು ಕಿರೀಟದೋಪಾದಿಯಲ್ಲಿ ಧರಿಸಿದ್ದ ಉದ್ದಾಮ ಪರ್ವತಗಳು ಸುತ್ತಣ ಆ ಕಣಿವೆಯ ಪ್ರದೇಶದಲ್ಲಿ ನಾಡಿನ ರಕ್ಷಕ ಸತ್ವಗಳಂತೆ ತನ್ಮುದ್ರಾದ ಒಂದು ಪೂರ್ಣ ಗಾಂಭೀರ್ಯದಿಂದ ನಿಂತಿದ್ದುವು.

ತಪ್ಪಲಲ್ಲಿ ಅಲ್ಲಲ್ಲಿ ಚೆಲ್ಲಿರುವ ವಿಶಾಲ ತಟಾಕಗಳು, ಬೆಟ್ಟಗಳ ಮತ್ತು ಹಸಿರು ಎಲೆಯಿಂದ ತುಂಬಿದ ತೋಪುಗಳ ವೈಭವವನ್ನು ಪ್ರತಿಬಿಂಬಿಸಿ ಸೂರ್ಯ ಪ್ರಭೆಯಲ್ಲಿ ದೊಡ್ಡ ಕನ್ನಡಿಗಳಂತೆ ಥಳಥಳಿಸುತ್ತಿದ್ದುವು. ಭೂಮುಖವನ್ನು ನೋಡುತ್ತ ರಾಮದಾಸನು ನಿಂತಿದ್ದ ಬೆಟ್ಟದ ಬುಡದಲ್ಲಿ ಡಾಲ್ ಸರೋವರ ಇದ್ದಿತು. ಇದು ಅಲ್ಲಿಂದ ಕಾಣಿಸುತ್ತಿದ್ದ ತಟಾಕಗಳಲ್ಲೆಲ್ಲ ಅತ್ಯಂತ ವಿಸ್ತಾರ ವಾದದ್ದು. ಅದು ತನ್ನ ಪ್ರಶಾಂತವಾದ ವಕ್ಷದಲ್ಲಿ ದೊಡ್ಡದಾದ ಕೆಂದಾವರೆಗಳನ್ನು ಧರಿಸಿದ್ದಿತು. ಈ ಕಮಲಗಳ ಪಕ್ಕದಲ್ಲಿ ಹಂಸಗಳು ನಲಿದು ಆಟವಾಡುತ್ತಿದ್ದವು.

ಆ ಎತ್ತರದಿಂದ ನೋಡಿದಾಗ, ಹರಿ ಪರ್ವತ ಒಂದು ಸಣ್ಣ ಮಣ್ಣಿನ ಗುಡ್ಡೆಯ ಹಾಗೆ ಕಾಣಿಸಿತು. ಅದರ ಮೇಲಣ ಕೋಟೆಯ ಗೋಡೆಗಳು ಸ್ಫುಟವಾಗಿ ಎದ್ದು ಕಾಣಿಸಿದುವು. ಆ ಮೇಲೆ ಆ ಝೀಲಂ ನದಿ ಮನೋಹರ ವಾದ ಆ ತಪ್ಪಲಲ್ಲಿ ಹರಿಯುವ ಒಂದು ದೊಡ್ಡ ಹಾವಿನ ಹಾಗೆ ವಕ್ರವಕ್ರವಾಗಿ ಹರಿಯುತ್ತಿದ್ದಿತು. ಪಟ್ಟಣದ ಬೂದುಬಣ್ಣದ ಮೊದ್ದುಮನೆಗಳು ದೂರಕ್ಕೂ ಕಾಣಿಸಿದುವು. ನೀರಿನ ಥಳಥಳಕು, ಗಿಡಮರಗಳ ಹಸಿರುಬಣ್ಣ, ಅಸಂಖ್ಯಾತ ಪರ್ವತಶ್ರೇಣಿ, ಸ್ವಚ್ಛ ನೀಲಾಕಾಶ ಇವೆಲ್ಲ ಸೇರಿದ ದೃಶ್ಯ ಹೇಗಿತ್ತೆಂದರೆ, ರಾಮದಾಸನ ಕಣ್ಣುಗಳು ಭಗವಂತನ ಮನಮೋಹಕ ಸೃಷ್ಟಿ ಅಥವಾ ವ್ಯಕ್ತಸ್ವರೂಪದ ಮಹದ್ಗಾಂಭೀರ್ಯವನ್ನು ಔತಣವಾಗಿ ಉಂಡವು.

ಅವನು ದೇವಸ್ಥಾನದ ಕಡೆ ದೃಷ್ಟಿ ತಿರುಗಿಸಿದನು. ಇದು ದೊಡ್ಡ ದೊಡ್ಡ ಕಲ್ಲುಗುಂಡುಗಳಿಂದ ನಿರ್ಮಿತವಾಗಿದೆ. ಮೇಲೆ ಬಾದಾಮಿ ಆಕಾರವಾಗಿದ್ದು ಕೊನೆಯಲ್ಲಿ ಭುವನೇಶ್ವರಿಯಿಂದ ಶೋಭಿಸುತ್ತಿದೆ. ಸುತ್ತಲೂ ಚೌಕವಾದ ಎತ್ತರವಾದ ಜಗುಲಿ. ಮೆಟ್ಟಲುಗಳ ಒಂದು ಹಂತವನ್ನು ಹತ್ತಿಹೋದರೆ ಯಾತ್ರಿ ಕನಿಗೆ ಗರ್ಭಗುಡಿ ದೊರೆಯುತ್ತದೆ. ಅದರಲ್ಲಿ ಮೂರು ಅಡಿ ಎತ್ತರದ ನುಣ್ಣ ಗಿರುವ ಕಾಂತಿಯುತವಾದ ಶಿವಲಿಂಗವಿದೆ. ಹಗಲೆಲ್ಲಾ ದೇವಸ್ಥಾನದಲ್ಲಿ ದೇವರ ಬಳಿ ಒಬ್ಬ ಸಾಧು ಇದ್ದೇ ಇರುತ್ತಾನೆ. ದೇವಾಲಯದ ಭುವನೇಶ್ವರಿಯ ಮೇಲೂ ಮತ್ತು ಸುತ್ತ ನೆಲದ ಮೇಲೂ ವಿದ್ಯುತ್ತಿನ ಹೊಳಪು ಬೆಳಕುಗಳೂ ಇವನ್ನು ಪ್ರತಿಫಲಿಸುವ ದೊಡ್ಡ ಗಾಜಿನ ಪ್ರತಿಬಿಂಬಕಗಳೂ ಇವೆ. ಇವನ್ನು ಮೈಸೂರು ಸಂಸ್ಥಾನದ ಶ್ರೀಮನ್‌ಮಹಾರಾಜರು ಶ್ರೀನಗರಕ್ಕೆ ದಯಮಾಡಿಸಿ ದ್ದಾಗ ಹಾಕಿಸಿಕೊಟ್ಟರೆಂದು ಹೇಳುತ್ತಾರೆ. ರಾತ್ರಿಯ ಕಾಲದಲ್ಲಿ ತಪ್ಪಲಲ್ಲಿ

ಬಹು ದೂರದಿಂದ ಕೂಡ ದೇವಸ್ಥಾನವಿರುವ ಸ್ಥಳವನ್ನೂ ದೇವಸ್ಥಾನವನ್ನೂ ಈ ದೀಪಗಳು ಬೆಳಗಿ ತೋರುತ್ತವೆ.

ಪ್ರಸಿದ್ಧ ವೇದಾಂತಿಗಳು ಶ್ರೀ ಶಂಕರಾಚಾರ್ಯರು ತಮ್ಮ ಪರಿವ್ರಜನ ಕಾಲದಲ್ಲಿ ಕಾಶ್ಮೀರಕ್ಕೆ ಬಂದ ವೇಳೆ ಈ ಬೆಟ್ಟದ ಮೇಲೆ ನಿಂತುದಾಗಿಯೂ ಈ ಶಿವದೇವಸ್ಥಾನ ಅವರ ಪ್ರಯತ್ನದಿಂದ ಮೊದಲು ಪ್ರತಿಷ್ಠೆ ಆಯಿತೆಂದೂ ಪ್ರತೀತಿ. ಆದುದರಿಂದಲೇ ಈಗಲೂ ಆಬೆಟ್ಟಕ್ಕೆ ಅವರ ಹೆಸರು ಇದೆ. ಶ್ರೀ ಶಂಕರಾಚಾರ್ಯರು ಈ ಬೆಟ್ಟಕ್ಕೆ ದಯಮಾಡಿಸಿದಾಗ ನಡೆದದ್ದೆಂದು ಒಂದು ಕಥೆಯನ್ನು ಇಲ್ಲಿಯ ಪಂಡಿತರು ಹೇಳುತ್ತಾರೆ.

ಶ್ರೀ ಶಂಕರಾಚಾರ್ಯರೂ ಅವರ ಶಿಷ್ಯರೂ ಈ ಬೆಟ್ಟದ ಮೇಲೆ ಬಂದು ಬಹು ದಿನ ನಿಂತರು. ಶ್ರೀನಗರದ ಪಂಡಿತರಲ್ಲಿ ಒಬ್ಬರೂ ಇವರನ್ನು ಸಂದರ್ಶಿಸಲು ಹೋಗಲಿಲ್ಲ. ಇವರಿಗೆ ಆತಿಥ್ಯವನ್ನೂ ನೀಡಲಿಲ್ಲ. ಆದುದರಿಂದ ಆಚಾರ್ಯರೂ ಶಿಷ್ಯರೂ ಅನ್ನ ನೀರು ಇಲ್ಲದೆ ಇರಬೇಕಾಯಿತು. ಕೆಲವು ದಿನಗಳ ನಂತರ ಕೆಲವು ಪಂಡಿತರು ಇವರ ದರ್ಶನಕ್ಕಾಗಿ ಹೋದರು.

ಆಚಾರ್ಯರು "ನಾವು ಬಹು ದಿವಸ ಈ ಬೆಟ್ಟದ ಮೇಲೆ ಉಪವಾಸವಿದ್ದಿದ್ದೇವೆ. ಮಹನೀಯರೂ ಶಾಸ್ತ್ರಜ್ಞರೂ ಆದರೂ ನೀವು ನೀತಿಶಾಸ್ತ್ರಗಳು ಪ್ರತಿ ಮಾನವನಿಗೂ ಸಾಮಾನ್ಯ ಧರ್ಮವೆಂದು ನಿಯಮಿಸಿರುವ ಅಭ್ಯಾಗತಸತ್ಕಾರವನ್ನು ನಮಗೆ ನೀಡುವ ಯೋಚನೆಯನ್ನು ಮಾಡಲಿಲ್ಲ" ಎಂದು ಹೇಳಿದರು.

ಅದಕ್ಕೆ ಪಂಡಿತರು ಹೀಗೆ ಹೇಳಿದರು.

"ತಪ್ಪು ನಮ್ಮದಲ್ಲ. ನಮ್ಮ ಊರಿನೊಳಕ್ಕೆ ಬರುವ ಅಭ್ಯಾಗತರನ್ನು, ಮಾನ ಮರ್ಯಾದೆಯಿಂದ ಕಂಡು, ಆದರಾತಿಥ್ಯಗಳನ್ನು ನಡೆಯಿಸಲು ನಾವು ಯಾವಾಗಲು ಸಿದ್ಧರು. ಆದರೆ ಪಟ್ಟಣದಲ್ಲಿಯೂ ಭಗವಂತನ ಮಹಿಮೆ ವ್ಯಕ್ತವಾಗಿದ್ದರೂ ತಾವು ಪ್ರಾಪಂಚಿಕ ಜೀವನವನ್ನು ದೂರ ಮಾಡಿ ಊರಿಗೆ ಬಹಳ ದೂರವಾದ ಈ ಬೆಟ್ಟದ ಮೇಲೆ ನೆಲೆಸಲು ಮನಸ್ಸು ಮಾಡಿದಿರಿ. ಆದುದರಿಂದ ತಮ್ಮ ಮತ್ತು ತಮ್ಮ ಶಿಷ್ಯರ ವಿಚಾರದಲ್ಲಿ ನಾವು ಉದಾಸೀನರಾಗಿದ್ದುದು ನ್ಯಾಯವೇ. ತಮಗೆ ಉಪವಾಸವಾಯಿತೆಂದು ಹೇಳುವ ವಿಚಾರದಲ್ಲಿ ತಮಗೆ ಯೋಗಶಕ್ತಿ ಇದ್ದಿದ್ದರೆ ಆ ಶಕ್ತಿಯನ್ನು ಉಪಯೋಗಿಸಿ ಬೇಕಾದ ಪದಾರ್ಥಗಳನ್ನು ಒದಗಿಸಿಕೊಳ್ಳಬಹುದಾಗಿದ್ದಿತು. ಉಪವಾಸ ಮಾಡಬೇಕಾದ ಪ್ರಮೇಯವೇ ಇರಲಿಲ್ಲ".

ಶ್ರೀ ಶಂಕರಾಚಾರ್ಯರು ಅದ್ವೈತಿಗಳು. ಈ ಪ್ರಪಂಚ ಮಿಥ್ಯೆಯೆಂದು ಅವರ ಭಾವನೆ. ಬಹುಶಃ ಭಗವಂತನ ಶಕ್ತಿಯ ವ್ಯಕ್ತಸ್ವರೂಪದಲ್ಲಿ ಅವರಿಗೆ ಆಗ್ಯೆ ನಂಬಿಕೆ ಇರಲಿಲ್ಲವೆಂದು ಕಾಣುತ್ತದೆ.

ಅವರು "ಪ್ರಪಂಚ ಮಿಥ್ಯ, ಅಜ್ಞಾನದಿಂದ ಆವೃತವಾಗಿರುವ ಮನಸ್ಸಿನವರಿಗೆ ಅದು ನಿಜವೆಂದು ಕಂಡರೂ ಅದು ನಿಜವಾಗಿ ಇಲ್ಲ" ಎಂದು ವಾದಿಸಿದರು.

ಪಂಡಿತರು "ತಮ್ಮದು ತಪ್ಪು ತಿಳಿವಳಿಕೆ. ಈ ಪ್ರಪಂಚ ಸತ್ಯ; ಲೋಕದಲ್ಲಿ ತುಂಬಿರುವ ದೃಗ್ಗೋಚರ ಸ್ವರೂಪವೆಲ್ಲದರ ಸೃಷ್ಟಿಸ್ಥಿತಿಲಯಗಳಿಗೆ ಮೂಲಕಾರಣವಾದ **ಆದಿಶಕ್ತಿಯ** ವ್ಯಂಜನ. ಪ್ರಪಂಚವನ್ನು ಬಾಹ್ಯವಾಗಿ ಬಿಡುವುದು ಮರುಳಾಟ. ಅದು ಭಗವಂತನ ಮತ್ತು ಆತನ ಶಕ್ತಿಯ ವಿಚಾರವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದ್ದರಿಂದ ಉಂಟಾಗುತ್ತದೆ. ಜೀವನದ ಚಲನವಲನಗಳ ವಿಸ್ತಾರ ವ್ಯಾಪಾರದಲ್ಲಿ ಶಕ್ತಿ ಲಾಸ್ಯಮಾಡುತ್ತದೆ. ನಿಜವಾದ ತಿಳಿವಳಿಕೆ, ಈ ಪ್ರಪಂಚವನ್ನು "ಮಿಥ್ಯೆ" ಎಂದು ತ್ಯಜಿಸುವುದಿಲ್ಲ; ಅದನ್ನು ಪರಮಾತ್ಮನ ವ್ಯಕ್ತ ಸ್ವರೂಪವೆಂದೂ ಆ ಶಕ್ತಿಯ ಲೀಲೆಯೆಂದೂ ಭಾವಿಸುತ್ತದೆ" ಎಂದರು.

ಶಕ್ತಿಯ ಕಾರ್ಯದ ಒಂದು ನಿದರ್ಶನವನ್ನು ತೋರಿಸಲೋಸ್ಕರ ಒಬ್ಬ ಪಂಡಿತನು ಮಂತ್ರವನ್ನುಚ್ಚರಿಸಿ ದೇವಿಯನ್ನು ಸ್ತುತಿಸಿ ತಾವು ಕುಳಿತಿದ್ದ ಸ್ಥಳದಲ್ಲಿ ಒಂದು ಕಡ್ಡಿ ಮುಟ್ಟಿದನಂತೆ. ಒಡನೆ ಒಂದು ಚಿಲುಮೆ ಎಂಬಂತೆ ನೀರು ಅಲ್ಲಿ ನೆಲದಿಂದ ಸ್ರವಿಸಿತು.

ಪಂಡಿತರು ಮಾಡಿದ ಉಪದೇಶ ಮತ್ತು ಭಗವಚ್ಛಕ್ತಿಯ ಪ್ರದರ್ಶನ ಶ್ರೀ ಶಂಕರಾಚಾರ್ಯರ ಮನಮುಟ್ಟಿ ಅವರು ತಮ್ಮ ವಿಚಾರವಾಹಿನಿಯನ್ನು ಈ ಪಂಡಿತರು ವಿವರಿಸಿದ ಅಭಿಮತದಂತೆ ತಿದ್ದಿಕೊಳ್ಳಬೇಕಾಯಿತು ಎಂದು ಈ ಜನ ಹೇಳುತ್ತಾರೆ.

---

# ಅಧ್ಯಾಯ ೩೬

## ಕಾಶ್ಮೀರ (ಮುಂದುವರಿದುದು)

### (i) ಮನಸ್ಸಿನ ಸರೋವರ

ಒಂದು ಭಾನುವಾರದದಿನ ಅಮರನಾಥಬಕ್ಷಿ ರಾಮದಾಸನನ್ನು ಷಾಲಿಮಾರ್ ಮತ್ತು ನಿಷದ್‌ಬಾಗ್ ಎಂಬ ಕಾಶ್ಮೀರದ ಪ್ರಸಿದ್ಧ ಉದ್ಯಾನವನಗಳಿಗೆ ವಿಹಾರಾರ್ಥವಾಗಿ ಕರೆದುಕೊಂಡು ಹೋದನು. ಇವುಗಳಿಗೆ ಹೋಗಲು, ಗಾಜಿನಂತೆ ಹೊಳೆಯುವ ಡಾಲ್ ಸರೋವರದ ಸ್ವಚ್ಛ ಜಲದಲ್ಲಿ ಕಿಸ್ತಿಯಲ್ಲಿ ಪ್ರಯಾಣ ಮಾಡಬೇಕಾಯಿತು. ಸರೋವರಕ್ಕೆ ಹರಿಯುವ ನದಿಯಲ್ಲೂ ಕಾಲುವೆಗಳಲ್ಲೂ ದೋಣಿ ನಿಶ್ಶಬ್ದವಾಗಿ ತೇಲಿಕೊಂಡು ಹೋಯಿತು. ಅದು ಹೀಗೆ ಹಾಯುವಾಗ ದಡದ ಉದ್ದಕ್ಕೂ ದಟ್ಟವಾಗಿ ಬೆಳೆದಿರುವ ಬಳ್ಳಿಗಳೂ, ಸಸ್ಯಸಮೃದ್ಧಿಯೂ

ಮನೋಹರವಾಗಿ ಕಂಗೊಳಿಸುತ್ತವೆ. ದೋಣಿಯಲ್ಲಿ ಒಂದು ಗಂಟೆ ಪ್ರಯಾಣ ಮಾಡಿದ ನಂತರ ನಿಷದ್‌ಬಾಗ್ ಉದ್ಯಾನದ ಕಡು ಸಿಕ್ಕಿತು.

ಇವರು ವನದ ಒಳಗೆ ಪ್ರವೇಶಿಸಿದರು. ರಾಮದಾಸನ ದೃಷ್ಟಿಯ ಎದುರಿಗೆ ಈಗ ಹರಡಿದ ದೃಶ್ಯ ಅತ್ಯಂತ ಮನೋಹರವಾಗಿ ವಿಲಾಸಯುಕ್ತವಾಗಿದ್ದಿತು. ಉದ್ಯಾನ ಸುಷಮವಾಗಿ ರಚಿತವಾಗಿದೆ. ಉದ್ಯಾನವನದ ಮಧ್ಯದಲ್ಲಿ ಉದ್ದಕ್ಕೂ ಥಳಥಳಿಸುವ ಸ್ವಚ್ಛವಾದ ನೀರಿನ ಅಗಲವಾದ ಒಂದು ಕಾಲುವೆ ವಡ್ಯಾಣದಂತೆ ಕಂಗೊಳಿಸುತ್ತಿದೆ. ಆಳವಿಲ್ಲದ ಈ ಹೊಳೆಯ ಎರಡೂ ಪಕ್ಕದ ನಾನಾ ಜಾತಿಯ ಹೂವಿನ ಗಿಡಗಳ ಮತ್ತು ವೃಕ್ಷಗಳ ಮಡಿಗಳನ್ನು ಯೋಚನೆಯಿಂದ ತಿದ್ದಿಮಾಡಿದೆ. ಪ್ರಕೃತಿ ತನ್ನದೇ ಆದ ರೀತಿಯಲ್ಲಿ ವಿವಿಧ ಬಣ್ಣಗಳಿಂದ ಸೃಷ್ಟಿಸಿರುವ ಈ ಪುಷ್ಪ ಚಿತ್ರಕ್ಕೆ, ಚಿತ್ತಾಕರ್ಷಕವಾದ ಕಳೆಯನ್ನು ಕೊಡುವುದರಲ್ಲಿ, ಪುಷ್ಪಗಳ ಹಳದಿ ಮತ್ತು ನೀಲ, ಅಚ್ಚ ಕೆಂಪು ಮತ್ತು ಬಿಳುಪು, ನೇರಳೆ ಕಿತ್ತಲೆ ಬಣ್ಣಗಳ ಕಾಂತಿಗಳು ಒಂದರೊಡನೊಂದು ಸ್ಪರ್ಧಿಸುತ್ತಿದ್ದುವು. ಗುಲಾಬಿ, ನೈದಿಲೆ, ಸೇವಂತಿಗೆ, ಚೆಂಡುಮಲ್ಲಿಗೆ, ಕೆಂಜುಗ, ಡೇಸಿ, ಊದಾ, ನೀಲಿಕೊಳಗದ ಪುಷ್ಪಗಳು ತಮ್ಮ ಸ್ವಚ್ಛ ಕಾಂತಿಯನ್ನು ಯಥೇಷ್ಟವಾಗಿ ಹರಡಿದುವು.

ಸದಾ ಹಸಿರಾಗಿರುವ ಶಂಕು ಆಕಾರದ ದೇವದಾರು ಮರಗಳೂ ಮತ್ತು ಕಾಶ್ಮೀರ ದೇಶದಲ್ಲಿ ಮಾತ್ರ ಬೆಳೆಯುವ ಚಿನಾರ್ ಎಂಬ ಬೃಹದಾಕಾರದ ವೃಕ್ಷಗಳೂ ಉದ್ಯಾನದಲ್ಲಿ ತಮ್ಮ ದಟ್ಟವಾದ ತಂಪಾದ ನೆರಳನ್ನು ಹರಡಿವೆ. ಅಂತಸ್ತು ಅಂತಸ್ತಾಗಿ ವಿಂಗಡಿಸಿರುವ ವಿಶಾಲವಾದ ನೆಲದಲ್ಲಿ ಇವರು ನಡೆದು ಹೋಗುವಾಗ ರಾಮದಾಸನು ನೂರಾರು ಬುಗ್ಗೆಗಳು ಆಡುತ್ತಿರುವುದನ್ನು ಕಂಡನು. ಇವು ಇಪ್ಪತ್ತು ಅಡಿಗಳ ಎತ್ತರಕ್ಕೆ ನೀರು ತುಂತುರನ್ನು ಹಾರಿಸುತ್ತಿದ್ದವು. ಉದ್ಯಾನದ ನಟ್ಟನಡುವೆ, ಮತ್ತಷ್ಟು ಎತ್ತರದ ಸ್ಥಳದಲ್ಲಿ, ನಯ ಕೆಲಸದ ಕಲ್ಲುಗಳ ಮೇಲೆ ನಿಂತಿರುವ ಒಂದು ಭದ್ರವಾದ ಕಟ್ಟಡವಿದೆ. ಉದ್ಯಾನದ ಸುತ್ತಣ ಪ್ರಕೃತಿ ದೃಶ್ಯವೂ ಅತ್ಯಂತ ಗಂಭೀರವಾಗಿ ಇದೆ. ಉದ್ಯಾನವನ್ನು ಬೆಟ್ಟದ ಬುಡದಲ್ಲಿ ಕಟ್ಟಿದೆ. ಈ ಬೆಟ್ಟಗಳು ಅದಕ್ಕೆ ಹಿನ್ನೆಲೆಯಾಗಿವೆ. ಮುಂಭಾಗದಲ್ಲಿ ಡಾಲ್ ಸರೋವರದ ವಿಸ್ತಾರವಾದ ಹರವು.

ಷಾಲಿಮಾರ್ ಉದ್ಯಾನ ಅನೇಕ ವಿಚಾರಗಳಲ್ಲಿ ನಿಷದ್‌ಬಾಗಿನ ಪ್ರತಿಬಿಂಬವೆನ್ನಬಹುದು. ಇದನ್ನು ಮೊದಲು ನಿರ್ಮಾಣಮಾಡಿಸಿದವರು ಪ್ರಖ್ಯಾತರಾದ ಮೊಗಲ್‌ಚಕ್ರವರ್ತಿಗಳು ಷಹಜಹಾನ್ ಜಹಂಗೀರರು. ಈ ರಮಣೀಯವಾದ ಸ್ಥಳಗಳು ನಿಜವಾಗಿಯೂ ಮಹಮ್ಮದೀಯರ ಸ್ವರ್ಗಲೋಕ.

ತಾವು ಉದ್ಯಾನಕ್ಕೆ ಹೋಗಿದ್ದ ಅದೇ ಕಿಸ್ತಿಯಲ್ಲಿ ಹಿಂತಿರುಗಿ ಬರುವಾಗ ಅಮರನಾಥನು ಕಾಶ್ಮೀರದ ಕ್ರಿಮಿನಲ್ ನ್ಯಾಯಾಧೀಶರಿಗೆ ಒದಗಿದ್ದ ಒಂದು ವ್ಯಾವಹಾರಿಕ ಕ್ಲೇಶವನ್ನು ವಿವರಿಸಿದನು. ಇತರ ಕಡೆಗಳಲ್ಲಿ ಹಣ ಮುಂತಾದ

ಚರಸ್ವತ್ತು ಕಳವಿಗೆ ವಸ್ತುಗಳಾಗಿರುವಂತೆ ಇಲ್ಲಿ ಸ್ಥಿರಸ್ವತ್ತುಗಳೂ ಕಳವಾಗುತ್ತವೆ. ತಟಾಕದಲ್ಲಿ ದಟ್ಟವಾಗಿ ಬೆಳೆದಿರುವ ದಪ್ಪಜೊಂಡು ಇರುತ್ತದೆ. ಮೇಲೆ ಕೃಷಿ ಮಾಡಿ ಇವುಗಳನ್ನು ತೇಲುವ ಹೊಲಗಳನ್ನಾಗಿ ಮಾಡುತ್ತಾರೆ. ಇಂತಹ ಹೊಲಗಳ ತುಂಡನ್ನು ಕತ್ತರಿಸಿ ಕಳ್ಳಬುದ್ಧಿಯ ಮಗ್ಗುಲ ತುಂಡಿನವರು ನೀರಿನ ಮೇಲೆ ಎಳೆದು ತಮ್ಮ ಹೊಲಗಳಿಗೆ ಸೇರಿಸಿಕೊಳ್ಳುತ್ತಾರೆ. ಇದರಿಂದ ವ್ಯಾಜ್ಯ ವ್ಯವಹಾರಗಳಿಗೆ ಅವಕಾಶವಾಗುತ್ತದೆ. ಸಾಯಂಕಾಲದ ಹೊತ್ತಿಗೆ ರಾಮದಾಸನೂ ಅಮರನಾಥನೂ ಊರಿಗೆ ಹಿಂತಿರುಗಿದರು.

ರಾಮದಾಸನು ವಿಚಾರ್‌ನಾಗಕ್ಕೂ ರಾಮಬಾಗಿಗೂ ಹೋದನು. ವಿಚಾರ್ ನಾಗ್ ಚಿನಾರ್ ಮಹಾವೃಕ್ಷಗಳಿಂದ ಸುತ್ತಲೂ ಆವೃತವಾಗಿದೆ. ಅದರಲ್ಲಿ ಪಾವನವೆಂದು ಪ್ರಸಿದ್ಧವಾದ ತಟಾಕ ಒಂದಿದೆ. ರಾಮಬಾಗ್ ಸುಂದರವಾದ ಪುಷ್ಪೋದ್ಯಾನಗಳಿಂದಲೂ ಪ್ರಯಾಣಿಕರ ಸೌಕರ್ಯಕ್ಕಾಗಿ ಕಟ್ಟಿರುವ ಮಾಡ ಗಳುಳ್ಳ ಧರ್ಮಶಾಲೆಯಿಂದಲೂ ರಾಜಿಸುತ್ತದೆ. ಈ ಎರಡು ಸ್ಥಳಗಳೂ ನಗರದ ಆವರಣದ ಹೊರಗಿವೆ.

ಇನ್ನೊಂದು ದಿನ ರಾಮದಾಸನು ಶ್ರೀನಗರಕ್ಕೆ ಒಂಬತ್ತು ಮೈಲಿ ದೂರದಲ್ಲಿ ರುವ ಹರವನ ಎಂಬ ಮನಮೋಹಕವಾದ ವಿಹಾರಸ್ಥಳಕ್ಕೆ ಹೋದನು. ಸಸ್ಯ ಸಮೃದ್ಧಿಯಿಂದ ಕೂಡಿದ ಎತ್ತರವಾದ ಬೆಟ್ಟಗಳ ಹಿನ್ನಲೆಯನ್ನುಳ್ಳ ಭೂಮುಖವೂ, ಮುಂದಣ ಸರೋವರವೂ ಮತ್ತು ಥಳಥಳಿಸಿ ಪ್ರವಹಿಸುತ್ತಿರುವ ಹೊಳೆಯೂ ಅತ್ಯಂತ ಮನೋಹರವಾದ ದೃಶ್ಯವಾಗಿವೆ. ರಾಮದಾಸನಿಗೆ ಈ ಸ್ಥಳದ ಸೂಕ್ಷ್ಮ ವಾದ ಮಾಯೆ ಸೋಕಿತು. ಸರೋವರ ಬೆಟ್ಟಗಳಿಗೆ ಅಭಿಮುಖವಾಗಿ ಎತ್ತರ ದಲ್ಲಿದೆ. ರಾಮದಾಸನು ಇದನ್ನು ಮೊದಲು ನೋಡಿದಾಗ ಸರೋವರದ ಮೇಲೆ ಮಂದವಾದ ಮಾರುತ ಬೀಸುತ್ತ ಅದರ ಸ್ವಚ್ಛ ನಿರ್ಮಲ ಜಲವನ್ನು ಸಣ್ಣ ಅಲೆ ಗಳಾಗಿ ಎಬ್ಬಿಸುತ್ತಿದ್ದಿತು. ಇವು ತಟಾಕದ ವಕ್ಷದಲ್ಲಿ ಹರಡುತ್ತಿದ್ದುವು. ಚಿತ್ತಾ ಕರ್ಷಕ ದೃಶ್ಯಗಳ ಮಧ್ಯೆ ತಿರುಗಿದ ಅರ್ಧಗಂಟೆ ಕಾಲದಲ್ಲಿ ಅವನು ಮರಳಿ ಸರೋವರದ ಕಡೆ ದೃಷ್ಟಿಯನ್ನು ಬೀರಿದನು. ಮಾರುತ ನಿಂತಿದ್ದಿತು. ತಟಾಕ ಒಂದು ವಿಶಾಲವಾದ ಕನ್ನಡಿಯಂತೆ ಹೊಳೆಯುತ್ತಿದ್ದಿತು. ಅದರ ಮೇಲ್ಮೈ ಸೌಮ್ಯ ಶಾಂತ ನಿಶ್ಚಲವಾಗಿ ಸುತ್ತಣ ಪರ್ವತ ಶ್ರೇಣಿಯ ಮನೋಹರ ದೃಶ್ಯವನ್ನು ಪ್ರತಿಬಿಂಬಿಸುತ್ತಿದ್ದಿತು.

ತಟಾಕವನ್ನು ತೋರಿಸಿ ರಾಮದಾಸನು ಅಮರನಾಥನಿಗೆ "ಮಾನವನ ಮನಸ್ಸನ್ನು ಈ ತಟಾಕಕ್ಕೆ ಹೋಲಿಸಬಹುದು. ಮಾಯ ಎಂಬ ಮಾರುತ ಚಿತ್ತ ಸರೋವರದ ಮೇಲೆ ಬೀಸಿದಾಗ ಆಶೆ ಅಲೆಗಳು ಉತ್ಪನ್ನವಾಗಿ ಕ್ಷೋಭೆ ಉದಿಸು ತ್ತದೆ. ಮಾಯೆ ಬೀಸುವುದು ನಿಂತಿತೋ ಇಲ್ಲವೋ ಅದು ಈಗ ಕಂಡುಬರುತ್ತಿರು ವಂತೆ ಸಮಾಧಾನವಾಗಿ ಪ್ರಶಾಂತವಾಗುತ್ತದೆ; ಮೀರಲಾಗದ ವೈಭವ ಆನಂದಗಳ

ನೋಟವನ್ನು ತೋರುತ್ತದೆ" ಎಂದು ಹೇಳಿದನು. ಕತ್ತಲಾಗುವುದಕ್ಕೆ ಮುಂಚೆಯೇ ಇಬ್ಬರೂ ಶ್ರೀನಗರಕ್ಕೆ ಹಿಂತಿರುಗಿದರು.

ಅಮರನಾಥನು ಸ್ವಭಾವತಃ ನಿಷ್ಕಪಟ ಪ್ರೇಮಿ. ತನ್ನ ಅಣ್ಣ ಜಾನಕೀ ನಾಥನನ್ನಗಲಿರಬೇಕಾದುದಕ್ಕೆ ತುಂಬ ಕಳವಳಪಡುತ್ತಿದ್ದನು. ಕಾಶ್ಮೀರ ಸರ್ಕಾರದ ಒಂದು ವಿಚಿತ್ರ ವ್ಯವಹಾರದಂತೆ ಜಾನಕೀನಾಥನೂ ಮತ್ತು ಇತರ ಪಂಡಿತರೂ ವರ್ಷಪೂರ್ತ ಜಮ್ಮುವಿನಲ್ಲಿಯೇ ಇರಬೇಕಾಗಿ ಬಂದಿದ್ದಿತು. ರಾಮ ದಾಸನು ಜಮ್ಮುವಿನಿಂದ ಪ್ರಯಾಣ ಮಾಡುವ ಕಾಲದ ಸುಮಾರಿಗೆ ಶ್ರೀನಗರದಲ್ಲಿ ಅದೇ ವಿಭಾಗದಲ್ಲಿ ಒಂದು ಕೆಲಸ ಬಿಡುವಾಗಿದ್ದಿತು. ಜಾನಕೀನಾಥನಿಗೆ ಈ ಕೆಲಸಕ್ಕೆ ಬೇಕಾದ ಅರ್ಹತೆಗಳು ಇದ್ದುವು. ಅವನು ಆ ಕೆಲಸಕ್ಕಾಗಿ ಅರ್ಜಿ ಯನ್ನೂ ಹಾಕಿದ್ದನು. ಜಾನಕೀನಾಥನ ವರ್ಗಕ್ಕಾಗಿ ಅಮರನಾಥನು ತನ್ನ ಆಶೆಯ ತ್ವರೆಯಲ್ಲಿ ಸಂಬಂಧಪಟ್ಟ ಅಧಿಕಾರಿಗಳಲ್ಲಿ ತನ್ನ ದಾಕ್ಷಿಣ್ಯವನ್ನೆಲ್ಲ ಉಪಯೋಗಿಸುತ್ತಿದ್ದನು. ಅವನು ಈ ದಿನಗಳಲ್ಲಿ ಪ್ರತಿದಿನವೂ ರಾಮದಾಸನ ಬಳಿಗೆ ಬರುವನು.

ಬಂದು "ಸ್ವಾಮಿಜಿ, ನಮ್ಮ ಅಣ್ಣನ ಆಶೆ ಸಿದ್ಧಿಸುವಂತೆ ಪ್ರಾರ್ಥನೆ ಮಾಡಿ. ಜಾನಕೀನಾಥನು ಈ ಉರಿ ಬೇಸಗೆಯಲ್ಲಿ ಜಮ್ಮುವಿನಲ್ಲಿ ಎಷ್ಟೋ ಕಷ್ಟಪಟ್ಟು ಕೊಂಡಿದ್ದಾನೆ. ಅವನ ಸಂಸಾರದವರೂ ಅವನು ಅವರೊಡನೆ ಇಲ್ಲದಿರುವುದ ರಿಂದ ಕಳವಳಪಡುತ್ತಿದ್ದಾರೆ" ಎನ್ನುವನು.

ರಾಮದಾಸನು "ದೇವರನ್ನು ನಂಬು, ಕಳವಳ ಪಡಬೇಡ. ಎಲ್ಲ ಸರಿ ಹೋಗುತ್ತದೆ" ಎಂದು ಮಾತ್ರ ಸಮಾಧಾನ ಹೇಳುತ್ತಿದ್ದನು. ನಿರೀಕ್ಷೆಯು ಈ ಮೊನೆಯಲ್ಲಿ ಕುಳಿತೇ ಅವನಿಗೂ ಆ ಸಂಸಾರಕ್ಕೂ ದಿನದ ಮೇಲೆ ದಿನ ಕಳೆಯಿತು. ಒಂದು ವಾರ ಹೀಗೆ ಹರಿಯಿತು. ಒಂದು ದಿನ ಅಮರನಾಥನು ರಾಮದಾಸನಲ್ಲಿ ಬಂದು ಹರ್ಷದ ನಗುಮುಖದಿಂದ,

"ಸ್ವಾಮಿಜಿ, ಕೊನೆಗೂ ನಮ್ಮ ಅಣ್ಣನಿಗೆ ಆ ಕೆಲಸ ಸಿಕ್ಕಿತು. ಕೆಲಸಕ್ಕೆ ಸೇರಲು ಇಲ್ಲಿಗೆ ಜಾಗ್ರತೆಯಾಗಿ ಬರುತ್ತೇನೆಂದು ಅವನಿಂದ ತಂತೀ ವರ್ತಮಾನ ಬಂದಿದೆ. ಇದೆಲ್ಲಾ ನಿಮ್ಮ ಕೃಪೆ." ಎಂದು ಹೇಳಿದನು.

ರಾಮದಾಸನು "ಎಲ್ಲಾ ಭಗವಂತನ ಕೃಪೆ! ಇದೆಲ್ಲಾ **ಅವನ** ಕೆಲಸ" ಎಂದು ಉತ್ತರ ಕೊಟ್ಟನು.

ಮುಂದಣವಾರ ಪೂರೈಸುವುದರೊಳಗಾಗಿ ಜಾನಕೀನಾಥನು ಶ್ರೀನಗರಕ್ಕೆ ಬಂದನು. ಮನೆಯ ಒಳಗೆ ಕಾಲಿಟ್ಟ ಅವನು ಮೊದಲು ಮಾಡಿದ ಕೆಲಸ ರಾಮದಾಸನಿದ್ದ ಕೊಟಡಿಗೆ ನುಗ್ಗಿ ಅವನನ್ನು ಎತ್ತಿಕೊಂಡು ಘಟ್ಟಿಯಾಗಿ ಪ್ರೀತಿಯಿಂದ ಎದೆಗೆ ಅನೇಕ ನಿಮಿಷಗಳವರೆಗೆ ಅಪ್ಪಿಕೊಂಡದ್ದು. ಈಗ ಮನೆಯವರ ಮುಖಗಳೆಲ್ಲಾ ಸುಖ ಸಂತೋಷಗಳಿಂದ ಅರಳಿದುವು.

## (ii) ಕಬೀರ್ ಮತ್ತು ಉದ್ಧವ

ಕಾಶ್ಮೀರದಲ್ಲಿದ್ದಾಗ ರಾಮದಾಸನು ಹಿಂದೂಸ್ಥಾನದ ನಾನಾ ಭಾಗಗಳಲ್ಲಿನ ಸ್ನೇಹಿತರೊಂದಿಗೆ ವಿಶೇಷವಾಗಿ ಪತ್ರವ್ಯವಹಾರವನ್ನಿಟ್ಟುಕೊಳ್ಳಬೇಕಾಯಿತು. ಒಂದು ಸಲ ಬೊಂಬಾಯಿ ನಗರದ ಯು. ಸಂಜೀವರಾಯರಿಂದ ಆಗ ಕಾಶ್ಮೀರ ಸರಕಾರದ ಒಂದು ಪ್ರಮುಖ ಅಧಿಕಾರದಲ್ಲಿದ್ದ ಉತ್ತರ ಕನ್ನಡ ಜಿಲ್ಲೆಯ ಒಬ್ಬ ಸಾರಸ್ವತನನ್ನು ನೋಡಬೇಕೆಂದು ಕಾಗದ ಬಂದಿತು. ದುರ್ಗಾದಾಸ್ ನಾಗರ ಕಟ್ಟಿ ಎಂಬ ಆ ಅಧಿಕಾರಿ ಸಂಸ್ಥಾನದ ಕೈಗಾರಿಕೆಗಳ ಇಲಾಖೆಯ ಮೋಃಖ್ಯೇಸರ. ಸಂಜೀವರಾಯರ ಕಾಗದದಲ್ಲಿ ಈತನ ಅಸ್ಥಿಕ್ಷಯ ವ್ಯಾಧಿಯ ವಿವರವೂ ಇದ್ದಿತು. ರೋಗ ಕಾಲಿನಲ್ಲಿ ವ್ಯಾಪಿಸಿ ಅದರ ಫಲವಾಗಿ ಈತ ಊರುಗೋಲುಗಳ ಸಹಾಯ ದಿಂದ ಹೊರತು ನಡೆಯಲು ಸಾಧ್ಯವಿಲ್ಲದೆ ಇದ್ದನು. ದುರ್ಗಾದಾಸನಿಗೆ ಬಹಳ ಕಾರ್ಯವೆಂದೂ ರಾಮದಾಸನಿಗೆ ತಿಳಿಯಿತು. ಆದ್ದರಿಂದ ರಾಮದಾಸನು ತಾನಾಗಿ ಅವನ ಮೇಲೆ ಬಿದ್ದು ಹೋಗುತ್ತಿರಲಿಲ್ಲ. ಆದರೆ ಆತನ ದೇಹಸ್ಥಿತಿಯ ನೆನಪು ರಾಮದಾಸನನ್ನು ಅಲ್ಲಿಗೆ ಹೋಗುವಂತೆ ಪ್ರೇರಿಸಿತು. ಸಂಜೀವರಾಯರ ಸಲಹೆಯನ್ನು ಅಂಗೀಕರಿಸಿ ರಾಮದಾಸನು ಇಬ್ಬರು ಪಂಡಿತರೊಡನೆ ದುರ್ಗಾ ದಾಸನ ಬಂಗಲೆಗೆ ಹೋದನು. ಬಂಗಲೆಯ ಹೊರಗೆ ಹಾಕಿದ್ದ ಡೇರೆಯಲ್ಲಿ ಎಲ್ಲರನ್ನೂ ನಿಲ್ಲಿಸಿದರು. ರಾಮದಾಸನು ಭೇಟಿ ಅಪೇಕ್ಷೆಯ ಒಂದು ಚೀಟಿ ಯನ್ನು ಬರೆದು ಒಳಕ್ಕೆ ಕಳುಹಿಸಬೇಕಾಯಿತು. ತಾನು ಕನ್ನಡ ದೇಶದ ಸಾಧು, ಅವರನ್ನು ನೋಡಬೇಕೆಂದು ತನಗೆ ಸಲಹೆ ಬಂದಿದೆ ಎಂದು ಮಾತ್ರ ಚೀಟಿಯಲ್ಲಿ ಬರೆದನು.

ಇಪ್ಪತ್ತು ನಿಮಿಷಕಾದರೂ ಚೀಟಿಗೆ ಉತ್ತರ ಬರಲಿಲ್ಲ. ಭೇಟಿ ಕೊಡಲು ಅವನಿಗೆ ಇಷ್ಟವೇ ಎಂಬುದನ್ನು ಖಂಡಿತವಾಗಿ ತಿಳಿಯಲು ಪುನಃ ಹೇಳಿಕಳುಹಿಸ ಲಾಯಿತು. ಬಂದ ಉತ್ತರ ದುರ್ಗಾದಾಸನಿಗೆ ರಾಮದಾಸನನ್ನು ಬರಮಾಡಿ ಕೊಳ್ಳುವ ಆಶೆ ಬಹಳವೇನೂ ಇಲ್ಲ ಎನ್ನುವುದು ಅಷ್ಟೆ.

ಆಗ ರಾಮದಾಸನು ಪಂಡಿತರನ್ನುದ್ದೇಶಿಸಿ, "ದೇವರ ಇಚ್ಛೆ ರಾಮ ದಾಸನು ದುರ್ಗಾದಾಸರನ್ನು ಭೇಟಿಮಾಡಬಾರದು ಎಂದು ಇರುವಂತೆ ಕಾಣುತ್ತದೆ. ಜಾನಕೀನಾಥನ ಮನೆಗೆ ಹಿಂತಿರುಗೋಣ" ಎಂದು ಹೇಳಿದನು. ಹಿಂದಕ್ಕೆ ಬರುವಾಗ ಕೈಗಾರಿಕೆ ಪಾಠಶಾಲೆಯ ದೊಡ್ಡ ಕಟ್ಟಡ ಕಾಣಿಸಿತು. ಒಳಗೆ ಹೋಗಿ ನೋಡೋಣವೆಂದು ಪಂಡಿತರು ಸೂಚಿಸಿದರು. ಅದರಂತೆ ಇವರು ಒಳಗೆ ಪ್ರವೇಶಿಸಿ ಕೊಟಡಿಯಿಂದ ಕೊಟಡಿಗೆ ಹೋಗಿ, ಅಲ್ಲಿ ಪಾಠ ಹೇಳಲು ನಿಯಮಿತ ರಾಗಿದ್ದ ತಜ್ಞರು ವಿದ್ಯಾರ್ಥಿಗಳಿಗೆ ಕೊಡುತ್ತಿದ್ದ ಅಭ್ಯಾಸ ಶಿಕ್ಷಣದಲ್ಲಿ ತಯಾ ರಾಗುತ್ತಿದ್ದ ವಿವಿಧ ಕೈಗಾರಿಕೆ ಸಾಮಾನುಗಳನ್ನು ಪರಿಶೀಲಿಸಿದರು. ಅಧ್ಯಾಪಕರು ರಾಮದಾಸನಿಗೆ ತುಂಬಾ ಸೌಜನ್ಯ ಆದರವನ್ನು ತೋರಿಸಿದರು. ವಿದ್ಯಾರ್ಥಿಗಳ

ಒಂದು ತರಗತಿಗೆ ಪಾಠ ಹೇಳುತ್ತಿದ್ದ ಒಂದು ಕೊಟಡಿಗೆ ಹೋದಾಗ ಅಧ್ಯಾಪಕರು ತಮ್ಮ ಪೀಠವನ್ನು ರಾಮುದಾಸನಿಗೆ ಕೊಟ್ಟರು. ರಾಮುದಾಸನು ಆ ತರಗತಿಯನ್ನು ಅರ್ಧ ಗಂಟೆಯ ಕಾಲ ಹುಡುಗರ ವೃತ್ತಿ ಶಿಕ್ಷಣಕ್ಕೆ ಪ್ರತಿಯಾಗಿ ಧರ್ಮ ಶಿಕ್ಷಣದ ತರಗತಿಯಾಗಿ ಮಾಡಿದನು. ರಾಮುದಾಸನು ದೇವರು, ಭಕ್ತಿ, ಮತ್ತು ಭಗವನ್ನಾಮ ಎಂಬ ವಿಚಾರವಾಗಿ ಉಪನ್ಯಾಸ ಮಾಡಿದನು. ಉಪಾಧ್ಯಾಯರಿಗೂ ವಿದ್ಯಾರ್ಥಿಗಳಿಗೂ ಅವನು ಬಂದಿದ್ದರಿಂದಲೂ ಅವನ ಮಾತಿನಿಂದಲೂ ತುಂಬಾ ಸಂತೋಷವಾಯಿತು.

ಈ ಕೊಟಡಿಯಿಂದ ಈಚೆಗೆ ಬಂದು ಈ ಸಂಗಡಿಗರು ಕೆಳಗಿನ ಅಂತಸ್ತಿನಲ್ಲಿರುವ ತರಗತಿಗಳನ್ನು ಪರಿಶೀಲಿಸಿ ನಂತರ ಮಹಡಿಯ ಮೇಲಕ್ಕೆ ಹೋದರು. ಇಲ್ಲಿ ಇವರು ಒಂದು ಪರಿಶೋಧನ ಕಾರ್ಯದ ಕೊಟಡಿಯನ್ನು ಹೊಕ್ಕರು. ಅದರಲ್ಲಿ ಇಬ್ಬರು ವಿದ್ಯಾರ್ಥಿಗಳು ಕೆಲವು ಪ್ರಯೋಗದಲ್ಲಿ ತೊಡಗಿದ್ದರು. ಅದರಲ್ಲಿ ಒಬ್ಬನು ರಾಮುದಾಸನನ್ನೂ ಸಂಗಡಿಗರನ್ನೂ ಆ ಭಾಗದ ಅಧಿಕಾರಿಯಾದ ಅಧ್ಯಾಪಕನ ಕೊಟಡಿಗೆ ಕರೆದುಕೊಂಡು ಹೋದನು. ಆತನು ಭಾರತೀಯ; ತನ್ನ ಮೇಜಿನ ಮುಂದೆ ಕುಳಿತಿದ್ದನು. ರಾಮುದಾಸನನ್ನು ನೋಡಿ ಅಧ್ಯಾಪಕನು ಅವನನ್ನು ಸ್ವಾಗತಿಸಿ ಅವನಿಗೆ ಒಂದು ಆಸನವನ್ನಿತ್ತನು. ರಾಮುದಾಸನು ಕುಳಿತು ಆತನೊಡನೆ ಸಂಭಾಷಣೆ ಮಾಡುತ್ತ, ದುರ್ಗಾದಾಸನು ಭೇಟಿಕೊಡದ ವಿಷಯವನ್ನು ತಿಳಿಸಿದನು. ಅಧ್ಯಾಪಕನಿಗೆ ರಾಮುದಾಸನ ಮೇಲೆ ಏನೋ ಹಠಾತ್ ಪ್ರೀತಿ ಉಂಟಾಗಿದ್ದಿತು.

ಅವನು ಆತುರದಿಂದ "ಏನೋ ಅಚಾತುರ್ಯವಾಗಿದೆ. ದುರ್ಗಾದಾಸರಿಗೆ ನಿಮ್ಮ ಪರಿಚಯವೇನೋ ಇಲ್ಲ. ಆದರೆ ನಿಮ್ಮನ್ನು ನೋಡುವುದರಲ್ಲಿ ಅವರಿಗೆ ಖಂಡಿತವಾಗಿ ಸಂತೋಷವೆ" ಎಂದನು. ಹೀಗೆಂದು "ಒಬ್ಬ ಹುಡುಗನನ್ನು ಕಳುಹಿಸಿ, ನೀವು ಬಂದಿರುವುದನ್ನು ತಿಳುಹಿಸುತ್ತೇನೆ. ನಿಮಗೆ ಭೇಟಿ ದೊರೆಯುವಂತೆ ಮಾಡುತ್ತೇನೆ. ಅಲ್ಲಿಯವರೆಗೆ ದಯವಿಟ್ಟು ಸ್ವಲ್ಪ ಕಾದಿರಿ" ಎಂದು ಹೇಳಿದನು.

ಅವನು ಕೂಡಲೇ ಒಬ್ಬ ಹುಡುಗನನ್ನು ದುರ್ಗಾದಾಸನ ಬಂಗಲೆಗೆ ಕಳುಹಿಸಿದನು. ಈ ಮಧ್ಯೆ ಅಧ್ಯಾಪಕನು ದಯವಿಟ್ಟು ನಾನಾವಿಧದ ಪರಿಶೋಧನೆಗಳಿಗೆ ಬೇಕಾದ ಅನೇಕ ಸಾಧನಗಳನ್ನು ತೋರಿಸಿದನು. ರಾಮುದಾಸನು ಒಂದು ಸೂಕ್ಷ್ಮದರ್ಶಕ ಯಂತ್ರದಿಂದ ನೋಡಿದನು; ಗೋಧಿಯ ಹಿಟ್ಟಿನ ಒಂದು ಸಣ್ಣ ಕಣ ಒಂದು ಬಟಾಣಿಕಾಳಿನ ಗಾತ್ರ ಕಾಣಿಸಿತು. ಈ ಶಾಸ್ತ್ರೀಯ ಸಾಧನಗಳು ಇಂದ್ರಿಯ ಗೋಚರವಾದ ವಿಷಯಗಳನ್ನು ಮಾತ್ರ ಹೊರಗೆಡಹಬಲ್ಲವು. ಆಧ್ಯಾತ್ಮಿಕ ವಿಷಯದಲ್ಲಿ ಇವು ತೀರಾ ನಿಷ್ಪ್ರಯೋಜಕ. ಏಕೆಂದರೆ ಆತ್ಮದರ್ಶನ

ಇಂದ್ರಿಯಾತೀತವಾದ ಜ್ಞಾನ ಚಕ್ಷುಸ್ಸಿನ ಏಕಮಾತ್ರ ಸಹಾಯದಿಂದ ದೊರೆಯ ತಕ್ಕುದಾಗಿದೆ.

ಸ್ವಲ್ಪ ಹೊತ್ತಿನಲ್ಲೇ ದುರ್ಗಾದಾಸನ ಮನೆಯ ಒಬ್ಬ ಯುವಕನು ರಾಮದಾಸನನ್ನು ಕರೆದುಕೊಂಡು ಹೋಗಲು ಬಂದನು. ರಾಮದಾಸನು ದುರ್ಗಾದಾಸನನ್ನು ಅವನ ಕಚೇರಿಯ ಕೊಟಡಿಯಲ್ಲಿ ಭೇಟಿ ಮಾಡಿದನು. ದುರ್ಗಾದಾಸ್ ವಯಸ್ಸಾದವನು, ಎತ್ತರವಾಗಿ ಕೃಷ್ಣವರ್ಣದವನಾಗಿದ್ದನು. ರಾಮದಾಸನು ಒಳಕ್ಕೆ ಹೋಗುತ್ತಲು ಅವನು ಎದ್ದು ನಿಲ್ಲುವುದಕ್ಕೆ ಪ್ರಯತ್ನಪಟ್ಟನು. ಆದರೆ ವ್ಯಾಧಿಯ ಕಾರಣದಿಂದ ಅದು ಸಾಧ್ಯವಾಗಲಿಲ್ಲ. ಅವನು ತನ್ನೆದುರಿಗೆ ಕುರ್ಚಿಒಂದನ್ನು ತೋರಿಸಿದನು. ರಾಮದಾಸನು ಅದರ ಮೇಲೆ ಕುಳಿತನು. ಕೆಲವು ಮಾತಿನಿಂದ ದುರ್ಗಾದಾಸನಿಗೆ ರಾಮದಾಸನು ಬಂದ ಕಾರಣವನ್ನು ತಿಳಿಸಿದ್ದಾಯಿತು. ದುರ್ಗಾದಾಸನು ತನ್ನ ವ್ಯಾಧಿಯ ವಿಚಾರದಲ್ಲಿ ನಾಲ್ಕು ಮಾತನ್ನು ಹೇಳಿ ನಂತರ ರಾಮದಾಸನಿಗೆ ಸ್ವಲ್ಪ ಉಪಹಾರವನ್ನು ತರಿಸಿದನು. ರಾಮದಾಸನು ಆಗ ಕ್ಷೀರವ್ರತವನ್ನು ಅನುಸರಿಸುತ್ತಿದ್ದುದರಿಂದ ಒಂದು ಬಟ್ಟಲು ಹಾಲನ್ನು ಮಾತ್ರ ಸ್ವೀಕರಿಸಿದನು. ದುರ್ಗಾದಾಸನಿಗೆ ತುಂಬ ಕೆಲಸವೆಂದು ಸ್ಪಷ್ಟವಾಗಿ ಕಾಣುತ್ತಿದ್ದಿತು. ರಾಮದಾಸನು ಒಳಕ್ಕೆ ಹೋದಾಗ ದುರ್ಗಾದಾಸನು ಯಾರೋ ಒಬ್ಬರ ಸಂಗಡ ಇದ್ದನು. ಹೊರಗೆ ಎಷ್ಟೋ ಜನ ತಮ್ಮ ಸರತಿಗಾಗಿ ಕಾದಿದ್ದರು. ರಾಮದಾಸನು ಅಲ್ಲಿಂದ ಹೊರಡಲು ಉದ್ಯುಕ್ತನಾಗಿ ಎದ್ದನು. ಆದರೆ ದುರ್ಗಾದಾಸನು ಒಪ್ಪಲಿಲ್ಲ.

ಅವನು "ನೀವು ಇಷ್ಟು ದೀರ್ಘಕಾಲ ಶ್ರೀನಗರದಲ್ಲಿದ್ದರೂ ನಿಮ್ಮನ್ನು ನನ್ನೊಡನೆ ನಿಲ್ಲಿಸಿಕೊಳ್ಳುವ ಅವಕಾಶವಿಲ್ಲದೆ ಹೋಯಿತು. ನನ್ನ ಮನೆಯಲ್ಲೂ ಕೆಲವು ದಿನಗಳಿದ್ದ ಮೇಲೆ ಹೊರತು ನಿಮಗೆ ಹೋಗಲು ಅನುಮತಿಯನ್ನು ಕೊಡಲಾರೆ" ಎಂದನು.

ದುರ್ಗಾದಾಸನು ಒತ್ತಿಒತ್ತಿ ಕೇಳಿಕೊಂಡುದರಿಂದ ರಾಮದಾಸನಿಗೆ ನಿಲ್ಲುವ ಮನಸ್ಸಾಯಿತು. ರಾಮದಾಸನನ್ನು ಕರೆದುಕೊಂಡು ಬಂದಿದ್ದ ಪಂಡಿತ ಸಂಗಡಿಗರಿಗೆ ಈ ವಿಷಯವನ್ನು ತಿಳಿಸಲು ಅವರು ಬೀಳ್ಕೊಂಡು ತಮ್ಮ ಮನೆಗಳಿಗೆ ಹೊರಟುಹೋದರು. ರಾಮದಾಸನು ಅಲ್ಲಿ ನಿಲ್ಲುವುದಕ್ಕೆ ಎರಡು ನಿಯಮಗಳನ್ನು ಹಾಕಿದನು. ಮೊದಲನೆಯದು ಅವನು ಅಲ್ಲಿರುವ ವೇಳೆ ಕ್ಷೀರಾಹಾರವನ್ನೇ ಸೇವಿಸುವುದೆನ್ನುವುದು. ಎರಡನೆಯದು ತಾನು ಅಷ್ಟರಲ್ಲೇ ಅಮರನಾಥ ಯಾತ್ರೆಯನ್ನು ಕೈಗೊಂಡಿರುವುದರಿಂದ ಮಾರನೆ ದಿನವೇ ಪಟ್ಟಣಕ್ಕೆ ಹಿಂತಿರುಗಲು ಅನುಮತಿ ಕೊಡುವುದು. ದುರ್ಗಾದಾಸನು ಎರಡನೆಯ ನಿಯಮಕ್ಕೆ ಸಮ್ಮತಿಸಲಿಲ್ಲ.

ದುರ್ಗಾದಾಸನ ವಿಶಾಲವಾದ ವಾಸಗೃಹದ ಮಹಡಿಯಮೇಲೆ ಬೇರೆಯಾದ ಒಂದು ದೊಡ್ಡ ಕೊಟಡಿಯನ್ನು ರಾಮದಾಸನ ಉಪಯೋಗಕ್ಕಾಗಿ ಕೊಟ್ಟರು.

ಎಲ್ಲಾ ಸೌಕರ್ಯಗಳಿಗೂ ಏರ್ಪಾಡಾಯಿತು. ಮನೆಯ ತಾಯಿಯರು ರಾಮ ದಾಸನನ್ನು ಬಹಳ ಆದರದಿಂದ ವಿಚಾರಿಸಿಕೊಳ್ಳುತ್ತಿದ್ದರು. ಇಲ್ಲಿ ರಾಮದಾಸನಿಗೆ ದುರ್ಗಾದಾಸನ ಮಕ್ಕಳು ಕಬೀರ್ ಮತ್ತು ಉದ್ಧವ ಎಂಬುವರ ಸಂತತ ಸಹವಾಸ ದೊರೆಯಿತು. ಆ ಮಕ್ಕಳ ಬಾಲಲೀಲೆ ಮತ್ತು ಮುದ್ದು ಮಾತುಗಳಿಂದ ರಾಮ ದಾಸನಿಗೆ ತುಂಬ ಹರ್ಷವಾಯಿತು. ತನ್ನ ದೌರ್ಬಲ್ಯದ ನಿಮಿತ್ತ ದುರ್ಗಾ ದಾಸನು ರಾಮದಾಸನಿದ್ದ ಕೊಟಡಿಗೆ ಬರಲು ಆಗಲಿಲ್ಲ. ಮರುದಿನ ಮಧ್ಯಾಹ್ನ ರಾಮದಾಸನು ಕೆಳಗಿನ ಅಂತಸ್ತಿಗೆ ಇಳಿದುಹೋಗಿ, ನೇರವಾಗಿ ದುರ್ಗಾದಾಸನ ಕೆಲಸದ ಕೊಟಡಿಯನ್ನು ಪ್ರವೇಶಿಸಿ, ತಾನು ಹೊರಡಬೇಕೆಂಬ ಅಪೇಕ್ಷೆಯನ್ನು ತಿಳಿಸಿದನು. ಎಷ್ಟು ಬೇಡಿಕೊಂಡರೂ ತನ್ನ ನಿರ್ಧಾರವನ್ನು ಬಿಡಲಿಲ್ಲ. ಮನೆಯ ತರುಣ ರಾಮದಾಸನನ್ನು ಜಾನಕೀನಾಥನ ಮನೆಗೆ ಕರೆದುಕೊಂಡು ಹೋಗ ಬೇಕಾಯಿತು. ಅಲ್ಲಿ ರಾಮದಾಸನನ್ನು ಮನೆಯವರೆಲ್ಲ ಸುಸ್ಪಷ್ಟವಾದ ಆನಂದ ದಿಂದ ಸ್ವಾಗತಿಸಿದರು.

ಈ ಸಮಯದಲ್ಲಿ ರಾಮದಾಸನಿಗೆ ಲಿಂಬ್ಡಿ ಸಂಸ್ಥಾನದ ಠಾಕೂರ್ ಸಾಹೇಬ್ ರಾಜಾರಾಮರ ಅಪೇಕ್ಷೆಯನ್ನನುಸರಿಸಿ ಎಲಿಜಬೆತ್ ಮಾತೆ ಬರೆದ ಒಂದು ಕಾಗದ ಬಂದಿತು. ಅದರಲ್ಲಿ ರಾಮದಾಸನು ಹಾಗೆ ನೋಡಬೇಕೆಂದು ಇಷ್ಟಪಟ್ಟರೆ ರಾಜಾರಾಮರು ಕಾಶ್ಮೀರದ ಮಹಾರಾಜ ಹರಿಸಿಂಗರಿಗೆ ಒಂದು ಪರಿಚಯಪತ್ರವನ್ನು ಕಳುಹಿಸುವುದಾಗಿ ಬರೆದಿದ್ದಿತು. ಮಹಾರಾಜರ ದರ್ಶನಕ್ಕೆ ಹೋಗಲು ಒಳಗಿಂದ **ರಾಮನ** ಪ್ರೇರಣೆಯಿಲ್ಲವೆಂದೂ, ಒಂದು ವೇಳೆ ಮಹಾರಾಜರು ತಾವೇ ರಾಮದಾಸನನ್ನು ಭೇಟಿ ಮಾಡಲು ಇಷ್ಟಪಟ್ಟರೆ ಆಗ ರಾಮದಾಸನು ಹೋಗಬಹುದೆಂದೂ ಉತ್ತರಕೊಟ್ಟನು. ಈ ವಿಷಯದಲ್ಲಿ ರಾಜಾರಾಮರು ಕಾಗದಬರೆದು ಮಹಾರಾಜರ ಇಷ್ಟವನ್ನು ತಿಳಿದುಕೊಳ್ಳ ಬಹುದೆಂದೂ ಸೂಚಿಸಿದನು. ಯಾರನ್ನಾಗಲಿ ನೋಡಿ ರಾಮದಾಸನಿಗೆ ಆಗ ಬೇಕಾದದ್ದು ಏನೂ ಇರಲಿಲ್ಲ. ಸರ್ವ ವಿಷಯಗಳಲ್ಲಿಯೂ ಅವನನ್ನು **ರಾಮನು** ಆಳುತ್ತ ನಡೆಸುತ್ತ ಇದ್ದನು. ಪ್ರಸ್ತಾಪ ಅಷ್ಟಕ್ಕೇ ನಿಂತು ಹೋದ್ದರಿಂದ ಮುಂದೆ ಏನೂ ಆಗಲಿಲ್ಲ.

## (iii) ಭಗವಂತನ ನಿಗೂಢ ವ್ಯಾಪಾರ

ಈ ವೇಳೆಗೆ ರಾಮದಾಸನು ಶ್ರೀನಗರಕ್ಕೆ ಬಂದು ನಿಂತು ಎರಡು ತಿಂಗಳಿಗೆ ಮೇಲ್ಪಟ್ಟು ಆಗಿದ್ದಿತು. ಅವನು ಆತುರದಿಂದ ಬಯಸುತ್ತಿದ್ದ ಅಮರನಾಥಯಾತ್ರೆ ಹತ್ತಿರವಾಗಿ ಸಮೀಪಿಸುತ್ತಿದ್ದಿತು. ಜಾನಕೀನಾಥ ರಾಮದಾಸನೊಡನೆ ಬಹಳವಾಗಿ ವಾಗ್ವಾದ ಮಾಡಿ ಅವನ ಉದ್ದೇಶದ ಯಾತ್ರೆಯಿಂದ ಅವನನ್ನು ತಡೆಯಲು ಪ್ರಯತ್ನಪಟ್ಟನು. ಆ ಪ್ರಾಂತದಲ್ಲಿ ಚಳಿ ಅಸಾಧ್ಯವಾಗಿದೆಯೆಂದೂ

ಅದಕ್ಕೆ ಏರುವ ಬೆಟ್ಟಗಳು ಅತ್ಯಂತ ದುರ್ಗಮವೆಂದೂ ವಿಸ್ತರಿಸಿದನು. ಆದರೆ ರಾಮದಾಸನು ದೃಢಸಂಕಲ್ಪ ಮಾಡಿದ್ದನು.

ಆಗ ರಾಮಚರಣದಾಸನು ಹಠಾತ್ತಾಗಿ ಬಂದು ಸೇರಿದನು. ಅವನ ಶರೀರ ಬಹುಕೃಶವಾಗಿ ಅಂಗಾಲುಗಳು ಸವೆದು, ಅವುಗಳ ತುಂಬ ಬೊಬ್ಬೆಗಳೆದ್ದಿದ್ದುವು. ಪಂಜಾಬಿನಲ್ಲಿ ಪಠಾನ್‌ಕೋಟೆಯ ಬಳಿ ಇವರು ಬೇರೆಯಾದಾಗಿನಿಂದ ತಾನು ಬಹಳ ಕಷ್ಟಪ್ರಯಾಸಗಳಿಗೀಡಾಗಿದ್ದನೆಂದು ಅವನು ತಿಳಿಸಿದನು. ಚಳಿಯೊಂದು ಕಡೆ, ನಿರಂತರವಾದ ಕಾಲನಡೆ ಒಂದು ಕಡೆ, ಮಧ್ಯೆ ಹಲವುಸಲ ಆಹಾರದ ಅಭಾವ ಇವುಗಳಿಂದ ರಾಮಚರಣದಾಸನ ಸ್ಥಿತಿ ವಿಷಾದಕರವಾಗಿದ್ದಿತು. ಸಂಪೂರ್ಣ ವಿಶ್ರಾಂತಿಯಿಂದಲೂ ಜಾನಕೀನಾಥನ ಪುತ್ರಿಯರ ಪ್ರೇಮಪೂರ್ಣವಾದ ಆದರಣೆ ಶುಶ್ರೂಷೆಗಳಿಂದಲೂ ಅವನು ಬೇಗನೆ ಮೊದಲಿನಂತೆ ದೃಢಾಂಗನಾದನು.

ಜಾನಕೀನಾಥನ ಪತ್ನಿ ತಾರಾವತಿ ಮತ್ತು ಆಕೆಯ ಚಿಕ್ಕಮಕ್ಕಳುಗಳೊಡನೆ, ರಾಮದಾಸನೂ, ರಾಮಚರಣದಾಸನೂ, ಊರಿಗೆ ಹತ್ತು ಮೈಲಿ ದೂರದಲ್ಲಿರುವ ಖೀರ್‌ಭವಾನಿಯ ದರ್ಶನಕ್ಕೆ ಹೋದರು. ಆ ದೇವಾಲಯ ಉಭಯ ಪಾರ್ಶ್ವಗಳಲ್ಲಿಯೂ ಪ್ರವಹಿಸುವ ಸಿಂಧೂನದಿಯಿಂದ ಆವೃತವಾಗಿ, ಒಂದು ದೊಡ್ಡ ಚಿನಾರ್ ಮರದ ಪಸರಿಸಿದ ಶಾಖೆಗಳ ನೆರಳಿನಲ್ಲಿದೆ. ಇದು ಭವಾನಿ ದೇವಿಯ ಮಂದಿರದಿಂದ ಪ್ರಸಿದ್ಧವಾಗಿದೆ. ಮಂದಿರ ಸಣ್ಣ ಕಟ್ಟಡ. ಇಟ್ಟಿಗೆ ಮತ್ತು ಸಿಮೆಂಟುಗಳಿಂದ ನಿರ್ಮಿತವಾಗಿರುವ ಸಮಭುಜದ ಒಂದು ಆಳವಾದ ಗುಂಡಿಯ ಪಕ್ಕದಲ್ಲಿ ಕಟ್ಟಿರುವ ಜಗಲಿಯ ಮಧ್ಯೆ ಇದೆ. ಈ ಗುಂಡಿ ಇರುವುದು ದೇವಿಗೆ ಅರ್ಪಿಸುವ ಹಾಲು ಪಾಯಸವನ್ನು ಹಾಕುವುದಕ್ಕಾಗಿ. ಇದೇ ದೇವತೆಗೆ ಪ್ರಿಯವಾದ ನೈವೇದ್ಯ. ಆದುದರಿಂದಲೇ ಆಕೆಗೆ ಖೀರ್ ಭವಾನಿ ಎಂದು ಹೆಸರು. ಪ್ರತಿದಿನವೂ ದೇವಾಲಯಕ್ಕೆ ಬರುವ ನೂರಾರು ಜನ ಭಕ್ತರು ಸುರಿಯುವ ಖೀರಿನ ಮೊತ್ತ ನಾರುತ್ತಿದ್ದನಾತ ಗಾಳಿಯನ್ನು ತುಂಬಿದ್ದಿತು. ಈ ಗುಂಡಿಯನ್ನು ಶುದ್ಧಮಾಡಲು ಏನೂ ಏರ್ಪಾಡು ಇರಲಿಲ್ಲ. ಬಹುಶಃ ಖೀರನ್ನು ಹೀಗೆ ಕೊಳೆಯುವುದಕ್ಕೆ ಬಿಡುವುದರಲ್ಲಿ ಮತ ಸಂಬಂಧದ ಸಂಕೇತವೇನೋ ಇರಬಹುದು.

ಮಾತೆ ತಾರಾವತಿ ಒಬ್ಬ ಪಂಡಿತ ಪುರೋಹಿತನ ಸಹಾಯದಿಂದ ದೇವಿಯ ಪೂಜೆ ಮಾಡಿದಳು. ಸಾಯಂಕಾಲದ ವೇಳೆಗೆ ಎಲ್ಲರೂ ಜಾನಕೀನಾಥನ ಮನೆಗೆ ಹಿಂತಿರುಗಿದರು.

"ಖೀರ್ ಭವಾನಿ ಸ್ಥಳ ಹೇಗಿದೆ?" ಎಂದು ಜಾನಕೀನಾಥನು ಪ್ರಶ್ನಿಸಿದನು.

"ಸ್ಥಳವೇನೋ ಪ್ರಶಸ್ತವಾಗಿದೆ. ಆದರೆ ಆ ಖೀರ್‌ಕುಂಡದಿಂದ ಏಳುವ ಅಸಹ್ಯ ದುರ್ಗಂಧದ ಮಧ್ಯೆ ದೇವಿಯನ್ನು ಎಂದಿಗೂ ಬಂಧಿ ಮಾಡಿರುವುದೇ ವಿಷಾದ" ಎಂದು ರಾಮದಾಸನು ಉತ್ತರಕೊಟ್ಟನು.

ಆತನು ನಗುತ್ತ "ನಿಜ, ನನಗೂ ಹಾಗೆಯೇ ಎನ್ನಿಸುತ್ತದೆ" ಎಂದನು.

ಅಮರನಾಥಕ್ಕೆ ಹೊರಡಲು ಗೊತ್ತಾದದ್ದರ ಕೆಲವು ದಿನಗಳ ಮುಂಚೆ ಒಂದು ಸಂಜೆ ಜಾನಕೀನಾಥನು ರಾಮುದಾಸನಿಗೆ,

"ಸ್ವಾಮಿಜಿ, ನನಗೂ ನಿಮ್ಮೊಡನೆ ಅಮರನಾಥದ ಯಾತ್ರೆ ಮಾಡಬೇಕೆಂದು ತುಂಬ ಅಭಿಲಾಷೆ ಇದೆ. ಆದರೆ ದೈವೇಚ್ಛೆ ಬೇರೆಯಾಗಿದೆ. ನಾನು ಈಗತಾನೆ ಕೆಲಸಕ್ಕೆ ಸೇರಿರುವುದರಿಂದ ಸದ್ಯ ರಜವನ್ನು ತೆಗೆದುಕೊಳ್ಳಲಾಗುವುದಿಲ್ಲ. ಅದು ಹೇಗಾದರೂ ಇರಲಿ, ನನ್ನ ಸಂಬಂಧಿಯೊಬ್ಬನು ಸಂಸಾರ ಸಮೇತ ಅಲ್ಲಿಗೆ ಪ್ರಯಾಣ ಮಾಡುವವನಾಗಿದ್ದಾನೆ. ಆತನಿಗೆ ಪ್ರತ್ಯೇಕ ಡೇರೆ ಇದೆ. ನಿಮ್ಮನ್ನೂ ರಾಮುಚರಣದಾಸನನ್ನೂ ತಮ್ಮೊಂದಿಗೆ ಸೇರಿಸಿಕೊಳ್ಳಬೇಕೆಂದು ಅವನಿಗೆ ಹೇಳಿದ್ದೇನೆ. ಅವನೂ ಒಪ್ಪಿಕೊಂಡಿದ್ದಾನೆ. ನಿಮ್ಮಿಬ್ಬರಿಗೂ ಶಾಖವಾದ ಉಡುಪನ್ನು ಹೊಲಿಸಿಕೊಡುವ ಏರ್ಪಾಡನ್ನೂ ಮಾಡಿದ್ದೇನೆ" ಎಂದನು.

ಪ್ರಯಾಣದ ದಿನ ಸನ್ನಿಹಿತವಾಯಿತು. ಮಾರನೆಯ ದಿನ ಹೊರಡಬೇಕು. ಹಿಂದಿನ ಸಾಯಂಕಾಲ ಜಾನಕೀನಾಥನು ಜೋಲುಮುಖದೊಡನೆ ರಾಮುದಾಸನನ್ನು ಕಂಡನು. ಅವನ ಮನಸ್ಸಿಗೆ ತುಂಬ ಕಳವಳವಾಗಿದ್ದಿತು. ವಿಷಯವೇನೆಂದರೆ, ಈತನ ಸಂಬಂಧಿ ರಾಮುದಾಸನನ್ನು ತನ್ನ ಜೊತೆಗೆ ಕರೆದುಕೊಂಡು ಹೋಗುವ ವಿಚಾರದಲ್ಲಿ ಕಡೆಯ ಕ್ಷಣದಲ್ಲಿ ಬೇರೆ ಮನಸ್ಸು ಮಾಡಿ ಕರೆದುಕೊಂಡು ಹೋಗುವುದು ಸಾಧ್ಯವಿಲ್ಲವೆಂದು ಹೇಳಿಕಳುಹಿಸಿದ್ದನು ಜಾನಕೀನಾಥನ ಮುಖದ ಮೇಲೆ ಮೂಡಿದ್ದ ನಿರಾಶೆಗೆ ಇದೇ ಕಾರಣ.

ಅವನು "ಸ್ವಾಮಿಜಿ, ನೀವು ಅಮರನಾಥಕ್ಕೆ ಪ್ರಯಾಣ ಮಾಡಬಾರದೆಂಬುದು ದೈವೇಚ್ಛೆಯೆಂದು ಕಾಣುತ್ತದೆ. ಹಾಗಲ್ಲದೆ ನನ್ನಸಂಬಂಧಿ ಕೊನೆಯ ಗಳಿಗೆಯಲ್ಲಿ ತನ್ನ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ" ಎಂದನು.

ಇದನ್ನು ಕೇಳಿ ರಾಮುದಾಸನು ಎದ್ದು ಕುಳಿತನು. ಸ್ಥಿರ ನಿಶ್ಚಯದಿಂದ ಅವನ ಶರೀರ ಕಟ್ಟಿಗೆಯಂತೆ ಘಟ್ಟಿಯಾಯಿತು.

ಜಾನಕೀನಾಥನ ಕಣ್ಣುಗಳನ್ನೆ ನೆಟ್ಟಗೆ ದೃಷ್ಟಿಸುತ್ತಾ ನಿಶ್ಚಯದ ನಿಧಾನವಾದ ಧ್ವನಿಯಿಂದ ರಾಮುದಾಸನು, "ರಾಮುಜಿ, ರಾಮುದಾಸನು ನಿನ್ನ ಸಂಬಂಧಿಯನ್ನು ನಂಬಿಕೊಂಡು ಅಮರನಾಥಕ್ಕೆ ಪ್ರಯಾಣ ಮಾಡುವುದಾಗಿ ಯೋಚಿಸಿದ್ದನೆಂದು ತಿಳಿದೆಯೇನು? (ರಾಮುದಾಸನು ದೇವರ ಶಿಶು, ಸೇವಕ. ಆ ಯೋಚನೆಯನ್ನು ರಾಮುದಾಸನ ತಲೆಯಲ್ಲಿಟ್ಟವನು ದೇವರು. ಅದು ಸಫಲವಾಗುವಂತೆ ನೋಡಿಕೊಳ್ಳುವುದು ಅವನಿಗೆ ಸೇರಿದುದು. ಭಗವಂತನಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ರಾಮುದಾಸನು ಅಮರನಾಥ ದೇವಾಲಯಕ್ಕೆ ಸುರಕ್ಷಿತವಾಗಿ ಹೋಗುವಂತೆ ಅವನು ನೋಡಿಕೊಳ್ಳುವನು") ಎಂದು ಹೇಳಿದನು.

ರಾಮದಾಸನ ಮನಸ್ಸಿನ ಸ್ಥಿತಿಯನ್ನೂ ಅವನು ಆಡುತ್ತಿದ್ದ ಮಾತಿನ ದಾರ್ಢ್ಯವನ್ನೂ ಕಂಡು, ಜಾನಕೀನಾಥನು ಸಮಾಧಾನವಾಗಿ,

"ಒಳ್ಳೆಯದು, ಸ್ವಾಮಿಜಿ, ನಾನು ತಪ್ಪು ತಿಳಿದುಕೊಂಡೆ. ಯಾವುದಾದರೊಂದನ್ನು ಮಾಡಬೇಕೆಂದು ನೀವು ಸಂಕಲ್ಪಿಸಿದ ಮೇಲೆ ನಿಮಗೆ ಯಾವ ಅಡಚಣೆಗಳೂ ಬರಲಾರವಷ್ಟೆ" ಎಂದನು. ಆ ಪ್ರಸ್ತಾಪ ಅಲ್ಲಿಗೆ ನಿಂತಿತು.

ಜಾನಕೀನಾಥನ ಮನೆಗೆ ಐವತ್ತು ಗಜದಷ್ಟು ದೂರದಲ್ಲಿ ಝೀಲಂ ನದಿಯ ದಡದಲ್ಲಿ ಒಂದು ಶಿವಾಲಯವಿದೆ. ಆ ದೇವಸ್ಥಾನದ ಅರ್ಚಕ ತಾರಾಚಂದ್ ಬಾಯು ಎಂಬ ಯುವಕನಿಗೆ ರಾಮದಾಸನ ಮೇಲೆ ತುಂಬ ಪ್ರೀತಿ ವಿಶ್ವಾಸಗಳಿದ್ದುವು. ಆತನು ರಾಮದಾಸನನ್ನು ಕಂಡು ಅವನೊಡನೆ ಮಾತನಾಡಲು ಜಾನಕೀನಾಥನ ಮನೆಗೆ ಬರುತ್ತಿದ್ದನು. ಪೂರ್ವಾಚಾರದ ಪಂಡಿತರಲ್ಲಿ ಕೆಲವರಿಗೆ ಹಿಂದೀ ಭಾಷೆಯ ಪರಿಚಯವಿರುತ್ತದೆ. ಅವರು ಉರ್ದು ಶಬ್ದಗಳನ್ನು ಬೆರಸಿ ಆ ಭಾಷೆಯಲ್ಲಿ ಮಾತನಾಡ ಬಲ್ಲರು. ಆಂಗ್ಲ ಭಾಷೆ ತಿಳಿಯದಿದ್ದ ಸ್ತ್ರೀಯರೊಂದಿಗೂ, ಪಂಡಿತರೊಂದಿಗೂ ರಾಮದಾಸನು ವಿಶೇಷವಾಗಿ ಹಿಂದೀ ಭಾಷೆಯಲ್ಲಿಯೇ ಮಾತನಾಡುತ್ತಿದ್ದನು. ನದಿಯಲ್ಲಿ ಸ್ನಾನ ಮಾಡುವುದಕ್ಕಾಗಿ ತಾರಾಚಂದ್ ಬಾಯು ರಾಮದಾಸನನ್ನು ದೇವಾಲಯಕ್ಕೆ ಕರೆದುಕೊಂಡು ಹೋಗುತ್ತಿದ್ದನು. ರಾಮದಾಸನು ಹಲವು ಸಾಯಂಕಾಲದ ಹೊತ್ತನ್ನು ದೇವಸ್ಥಾನದಲ್ಲಿ ಹಿಂದೀಯಲ್ಲಿ ಯೋಗವಾಸಿಷ್ಠವನ್ನು ಓದುವುದನ್ನು ಕೇಳುತ್ತಾ ಸಂಜೆಯ ಪೂಜೆಯನ್ನು ನೋಡುತ್ತಾ ಕಳೆದನು. ಪೂಜೆಯ ಕಾಲದಲ್ಲಿ ಅಲ್ಲಿ ಪೂಜೆಗಾಗಿ ಸೇರುತ್ತಿದ್ದ ಹನ್ನೆರಡು ಭಕ್ತರು ಸಂಸ್ಕೃತ ಶ್ಲೋಕಗಳನ್ನೂ ಮಂತ್ರಗಳನ್ನೂ ಗೋಷ್ಠಿಯಾಗಿ ಪಠಿಸುತ್ತಿದ್ದರು.

ರಾಮದಾಸನು ಅಮರನಾಥ ಯಾತ್ರೆಗಾಗಿ ಪ್ರಯಾಣ ಹೊರಡಬೇಕಾಗಿದ್ದ ದಿನ ಬೆಳಿಗ್ಗೆ ತಾರಾಚಂದ್ ಬಾಯು ಬಂದು ರಾಮದಾಸನನ್ನು ದೇವಾಲಯಕ್ಕೆ ಕರೆದುಕೊಂಡು ಹೋದನು. ರಾಮಚರಣದಾಸನೂ ಸಂಗಡ ಇದ್ದನು. ಸ್ನಾನ ಮಾಡಿದನಂತರ ರಾಮದಾಸನು ಮೂರ್ತಿಯ ಎದುರಲ್ಲಿಪೂಜಾರಿ ಕೊಟ್ಟ ಒಂದು ಆಸನದ ಮೇಲೆ ಕುಳಿತನು. ಆಗ ಸುಮಾರು ಎಂಟು ಗಂಟೆಯಾಗಿರಬಹುದು. ರಾಮದಾಸನಿಗೆ ತೀರ ಅಪರಿಚಿತನಾದ ಒಬ್ಬ ತರುಣ ಪಂಡಿತನು ಅವಸರವಾಗಿ ದೇವಾಲಯವನ್ನು ಪ್ರವೇಶಿಸಿದನು. ಅವನು ಒಂದು ಬೈಸಿಕಲ್ ಮೇಲೆ ಬಂದು ರಾಮದಾಸರು ಎಲ್ಲಿ ಎಂದು ಪ್ರಶ್ನಿಸಿದ್ದನು. ಪೂಜಾರಿ ಆ ಪಂಡಿತನನ್ನು ರಾಮದಾಸನ ಬಳಿಗೆ ಕರೆತಂದನು.

ಆ ತರುಣನು "ಸ್ವಾಮಿಜಿ, ನಮ್ಮ ತಂದೆ ಅಮರನಾಥಯಾತ್ರೆಗೆ ಸಿದ್ಧಪಡಿಸಿಕೊಳ್ಳುತ್ತಿದ್ದಾರೆ. ನಿಮ್ಮನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗ

ಬೇಕೆಂದು ಅವರ ಇಷ್ಟ. ತಾವು ದಯವಿಟ್ಟು ನನ್ನೊಡನೆ ಬನ್ನಿ. ಅವರು ಮನೆಯಲ್ಲಿ ನಿಮ್ಮ ಆಗಮನವನ್ನು ನಿರೀಕ್ಷಿಸುತ್ತಿದ್ದಾರೆ" ಎಂದನು.

ಭಗವಂತನ ಲೀಲೆ ಆಶ್ಚರ್ಯಕರವಾದುದು. ರಾಮದಾಸನಿಗೆ ತೀರಾ ಪರಿಚಯವೇ ಇಲ್ಲದ ಪಂಡಿತ, ಈತ ತಾನಾಗಿ ಈ ಯಾತ್ರೆಯಲ್ಲಿ ರಾಮದಾಸನನ್ನು ಜೊತೆಗೆ ಕರೆದುಕೊಂಡು ಹೋಗುತ್ತೇನೆಂದು ಹೇಳುತ್ತಿದ್ದಾನೆ! ರಾಮದಾಸನು ಆ ತರುಣನ ಸಂಗಡ ಹೊರಟು ತಾನು ಮೊದಲು ಜಾನಕೀನಾಥನನ್ನು ಕಂಡು ತಾನು ಹೊರಡಬೇಕೆಂದಿರುವುದನ್ನು ಅವನಿಗೆ ತಿಳಿಸಬೇಕಾಗಿರುವುದಾಗಿ ಹೇಳಿದನು. ಇಬ್ಬರೂ ಜಾನಕೀನಾಥನ ಮನೆಗೆ ಹೋಗಿ ಅಮರನಾಥಯಾತ್ರೆಗೆ ಭಗವಂತನು ಮಾಡಿರುವ ಏರ್ಪಾಡಿನ ವಿವರವನ್ನು ಅವನಿಗೆ ತಿಳಿಸಿದರು. ಇದನ್ನು ಕೇಳಿ ಜಾನಕೀನಾಥನು ಸ್ತಬ್ಧನಾದನು. ಆ ನಿಮಿಷದವರೆಗೂ ರಾಮದಾಸನು ಆ ದಿವಸ ಪ್ರಯಾಣ ಮಾಡುವ ಸಂಭವ ಎಳ್ಳಷ್ಟೂ ಇಲ್ಲವೆಂದು ಕಂಡಿದ್ದಿತು. ದೇವರು ಪ್ರಯಾಣ ಸೌಕರ್ಯವನ್ನು ಒದಗಿಸಿದ ಈ ಸಿಗೂಢವೂ ಮತ್ತು ಅನಿರೀಕ್ಷಿತವೂ ಆದ ವಿನ್ಯಾಸ ಜಾನಕೀನಾಥನಿಗೆ ಶುದ್ಧವಾಗಿ ಭಗವದ್ವ್ಯಾಪರವೇ ಎಂದು ಹೊಳೆಯಿತು. ಅಂತೂ ಭಗವಂತನು ರಾಮದಾಸನು ಅಮರನಾಥ ಯಾತ್ರೆಯನ್ನು ಬಿಡಬೇಕೆಂದು ಸಂಕಲ್ಪಿಸಲಿಲ್ಲ. ರಾಮದಾಸನಾದರೂ ತಾನು ಯಾತ್ರೆಗೆ ಹೋಗುವುದೇ ನಿಜವೆಂದು ಸಂಪೂರ್ಣವಾಗಿ ನಂಬಿದ್ದನು.

ರಾಮದಾಸ ರಾಮಚರಣದಾಸರಿಗಾಗಿ ಹೊಲಿಯಹಾಕಿದ್ದ ಶಾಖದ ಉಡುಪು ಇನ್ನೂ ಪೂರ್ತಿಯಾಗದೆ ದರ್ಜಿಯವನಲ್ಲಿ ಉಳಿದಿದ್ದುವು. ರಾಮ ದಾಸನಿಗೆ ಉಣ್ಣೆಬಟ್ಟೆಯ ಟೋಪಿ ಮತ್ತು ಎದೆಯಮೇಲೆ ಎರಡು ಮಡಿಕೆಗಳಿರುವ ಅಂಗಿ, ರಾಮಚರಣದಾಸನಿಗೆ ಅದೇ ಬಟ್ಟೆಯಲ್ಲಿ ಒಂದು ನಿಲುವಂಗಿ ಇಷ್ಟಕ್ಕೆ ಏರ್ಪಾಡಾಗಿದ್ದಿತು. ರಾಮದಾಸನಿಗೆ ಬಟ್ಟೆ ಬೇಕೆನ್ನಿಸಲಿಲ್ಲ. ಅವನಿಗೆ ಭಗವಂತನ ಆಜ್ಞೆ ಬಂದಿರುವುದೆಂದೂ, ಏನೇ ಆಗಲಿ ಅದರಂತೆ ನಡೆಯುವುದು ತನ್ನ ಕರ್ತವ್ಯವೆಂದೂ ತೋರಿತು. ಆದುದರಿಂದ ಅವನು ಎರಡು ತುಂಡು ಖದರ್ ಬಟ್ಟೆಯನ್ನು ತೆಗೆದುಕೊಂಡು ಹೊರಟನು. ರಾಮಚರಣದಾಸನು ಮಾರನೆಯ ದಿನ ಉಣ್ಣೆ ಬಟ್ಟೆಗಳನ್ನು ತೆಗೆದುಕೊಂಡು ದಾರಿಯಲ್ಲಿ ಎರಡು ದಿನ ನಿಲ್ಲಬೇಕಾದ ಮೊದಲನೆಯ ಮಜಲು ಮಟ್ಟಾನ್ ಎಂದರೆ ಮಾರ್ತಾಂಡಕ್ಕೆ ಬರಬೇಕೆಂದು ನಿಷ್ಕರ್ಷೆಯಾಯಿತು. ಹೀಗೆ ರಾಮದಾಸನು ಯಾತ್ರಿಕ ಪಂಡಿತನ ಮನೆಗೆ ಬಂದು ಊಟ ಮಾಡಿದನು. ಈ ಪಂಡಿತನು ವಯಸ್ಸಾದವನು. ಎತ್ತರವಾಗಿ ದೃಢಾಂಗನಾಗಿದ್ದನು. ಹನ್ನೆರಡು ಗಂಟೆಯ ಹೊತ್ತಿಗೆ ಇವರು ಒಂದು ಮೋಟಾರ್ ಬಸ್ಸಿನಲ್ಲಿ ಕುಳಿತರು. ಅದು ಸಾಯಂಕಾಲದ ವೇಳೆಗೆ ಅವರನ್ನು ಮಟ್ಟಾನಿಗೆ ಒಯ್ಯಿತು.



ಶ್ರೀ ರಾಮದಾಸರು
ವಯಸ್ಸು ೩೦

# ಅಧ್ಯಾಯ ೩೭

## ಅಮರನಾಥಯಾತ್ರೆ

### (i) ರಾಮದಾಸನಿಗೋಸ್ಕರ ಹೋರಾಟ

ರಾತ್ರಿ ರಾಮದಾಸನೂ, ಪಂಡಿತನೂ ಮಟ್ಟಾನ್‌ವಾಸಿಯಾದ ಈ ಪಂಡಿತನ ಸ್ನೇಹಿತ ಇನ್ನೊಬ್ಬ ಪಂಡಿತನ ಮನೆಯಲ್ಲಿ ಉಳಿದುಕೊಂಡರು. ಮಾರನೆಯ ಬೆಳಿಗ್ಗೆ ರಾಮದಾಸನು ತಿರುಗಾಡಿಕೊಂಡು ಬರಲು ಮನೆಯಿಂದ ಹೊರಟನು. ಮಟ್ಟಾನ್ ಹಳ್ಳಿಯು ಎರಡು ವಿಷಯಗಳಿಗೆ ಪ್ರಸಿದ್ಧವಾಗಿದೆ. ಮೊದಲನೆಯದು ಒಂದು ಸ್ವಚ್ಛ ಜಲದ ಬುಗ್ಗೆ. ತುಂಬ ಚೊಕ್ಕಟವಾಗಿಟ್ಟಿರುವ ಒಂದು ಕೊಳಕ್ಕೆ ಇದರ ನೀರನ್ನು ತಿರುಗಿಸಿದ್ದಾರೆ. ಇದರಲ್ಲಿ ಮೀನುಗಳು ಆಡುತ್ತಿರುತ್ತವೆ. ತಂಪಾದ ತಿಳಿಯಾದ ಈ ನೀರನ್ನು ನೋಡುವುದು, ಕುಡಿಯುವುದು, ಇದರಲ್ಲಿ ಸ್ನಾನ ಮಾಡುವುದು ಒಂದು ಆನಂದ. ಎರಡನೆಯದು, ಇನ್ನಷ್ಟು ಎತ್ತರದಲ್ಲಿರುವ ಒಂದು ಮಾರ್ತಾಂಡ ದೇವಾಲಯದ ಹಳೆಯಪಾಳು. ರಾಮದಾಸನು ಈ ಭಗ್ನ ಮಂದಿರಕ್ಕೆ ಹೋಗಿದ್ದನು. ಹೊರಗಡೆಯ ಬಿದ್ದುಹೋಗಿರುವ ಪ್ರಾಕಾರ ಮತ್ತು ಮೇಲೆ ಅರ್ಧ ಚಂದ್ರಾಕಾರವಾಗಿರುವ ಬಾಗಿಲು ವಿನಾ ದೇವಸ್ಥಾನದಲ್ಲಿ ಬೇರೆ ಏನೂ ಉಳಿದಿಲ್ಲ. ಈ ಪಾಳು, ನೋಡುವವನಿಗೆ ದೇವಾಲಯವು ಪೂರ್ಣವಾಗಿ ಸರಿಯಾಗಿ ಇದ್ದಾಗಣ ಕಟ್ಟಡದ ಗಾಂಭೀರ್ಯ ವಿಸ್ತಾರ ಭದ್ರತೆಯನ್ನು ಸೂಚಿಸುತ್ತದೆ. ಸುತ್ತಣ ನೋಟವನ್ನು ನೋಡುತ್ತ ಈ ಪಾಳಿನಲ್ಲಿ ರಾಮದಾಸನು ಒಂದು ಗಂಟೆಯ ಕಾಲವನ್ನು ಕಳೆದನು. ಗುಡಿ ಮಾರ್ತಾಂಡ ದೇವರದು. ಅದರಿಂದ ಆ ಹೆಸರು.

ಇನ್ನೊಂದು ದಿನ ಬೆಳಿಗ್ಗೆ ಇವನು ಊರಿಗೆ ಒಂದೂವರೆ ಮೈಲಿ ದೂರ ವಿರುವ ಒಂದು ಗುಹೆಗೆ ಹೋಗುತ್ತಿದ್ದಾಗ ಊರ ಹೊರಗೆ ರಸ್ತೆಯಲ್ಲಿ ಒಂದು ಗುಂಪು ಸೇರಿರುವುದು ಕಾಣಿಸಿತು. ಹತ್ತಿರಕ್ಕೆ ಹೋದಾಗ ಒಬ್ಬ ಪಂಡಿತನಿಗೂ, ಅಲ್ಪ ವಸ್ತ್ರಧಾರಿಯಾದ ಒಬ್ಬ ಸಾಧುವಿಗೂ ದೊಡ್ಡ ವಾಗ್ಯುದ್ಧವಾಗುತ್ತಿದ್ದುದು ಕೇಳಿಸಿತು. ಅವರ ಮಾತಿನಿಂದ ರಾಮದಾಸನಿಗೆ ಸಾಧು ಒಬ್ಬ ಪಂಡಿತನ ಮನೆಗೆ ಸ್ವಲ್ಪ ಸೌದೆಗಾಗಿ ಹೋಗಿದ್ದನೆಂದೂ ಆ ಪಂಡಿತನು ತನಗೆ ಸೌದೆ ಕೊಡಲಿಲ್ಲವೆಂಬ ಕಾರಣದಿಂದ ಸಾಧು ಅವನನ್ನು ಅವನ ಮನೆಯಲ್ಲಿಯೇ ಹೊಡೆದಿದ್ದನೆಂದೂ ತಿಳಿಯಿತು. ಇದರಿಂದ ದೊಡ್ಡ ಗಲಭೆಯಾಗಿದ್ದಿತು.

ರಾಮದಾಸನು ಮುಂದೆ ಹೋಗಿ ದಾರಿಯ ಮಗ್ಗುಲ ಒಂದು ಬೆಟ್ಟವನ್ನು ಸೇರಿದನು. ಕೆಲವು ಗಜ ಹತ್ತಿ ಹೋದ ಮೇಲೆ ಅವನು ಒಂದು ಗುಹೆಯ

ಕಿರಿದಾದ ಬಾಯನ್ನು ಕಂಡನು. ಗುಹೆಯ ಮುಂಭಾಗದ ಬಲಗಡೆ ಸ್ವಲ್ಪ ದೂರ ದಲ್ಲಿ ಕಾಷಾಯ ವಸ್ತ್ರಧಾರಿಣಿಯಾದ ಒಬ್ಬ ಹುಡುಗಿ ಒಂದು ಬೆಂಕಿಯ ಮುಂದೆ ಕುಳಿತಿದ್ದಳು. ರಾಮದಾಸನಿಗೆ ಅಲ್ಲಿಗೆ ಹೋಗಬೇಕೆನ್ನಿಸಿತು. ಆ ಹುಡುಗಿ ಕುಳಿತಿದ್ದಕಡೆ ಬೆಟ್ಟದಲ್ಲಿ ಒಂದು ಡೊಗರು ಇದ್ದಿತು. ಇದನ್ನು ಅವಳು ತನ್ನ ಸದ್ಯದ ಆವಾಸವಾಗಿ ಮಾಡಿಕೊಂಡಿದ್ದಳು. ರಾಮದಾಸನನ್ನು ನೋಡಿ ಅವಳು ಎಷ್ಟೋ ಆನಂದಪಟ್ಟಳು. ರಾಮದಾಸನು ಅವಳ ಎದುರಿಗೆ ಬೆಂಕಿಯ ಹತ್ತಿರ ಕುಳಿತನು. ಅವಳ ಹತ್ತಿರ ಸ್ವಲ್ಪ ಹಾಲಿದ್ದಿತು. ಅವಳು ಅದನ್ನು ಕಾಯಿಸಿ ರಾಮದಾಸನಿಗೆ ಕೊಟ್ಟಳು. ಅವಳ ಶುದ್ಧ ಪ್ರೇಮದಿಂದ ಸವಿಯಾದ ಆ ಹಾಲನ್ನು ಅವನು ಕುಡಿದನು. ಆಕೆ ಹರ್ಷಚಿತ್ತಳಾದ ಸಲಿಗೆ ನಿರ್ಭೀತಿಯ ತರುಣಿ. ನಿಜವಾಗಿ ಇಂಥವರೇ ಆನಂದಸಾಮ್ರಾಜ್ಯಕ್ಕೆ ಸೇರಿದವರು.

ಸಂನ್ಯಾಸಿನಿ ರಾಮದಾಸನಿಗೆ ಕೊಳ್ಳಿಯೊಂದನ್ನು ಕೊಟ್ಟಳು. ಅದು ಮೇಣದ ಬತ್ತಿಯಂತೆ ಉರಿಯುತ್ತಿದ್ದಿತು. ಅದನ್ನು ತೆಗೆದುಕೊಂಡು ರಾಮ ದಾಸನು, ಆ ಎತ್ತರವಾದ ಬೆಟ್ಟದ ಒಳಗೆ ಇದ್ದ ಗುಹೆಗೆ ಒಯ್ಯುವ ಕತ್ತಲಾದ ಇಕ್ಕಟ್ಟಾದ ಓಣಿಯನ್ನು ಹೊಕ್ಕನು. ಓಣಿಯ ಗೋಡೆಗಳಿಂದಲೂ ಗುಹೆಯ ಒಳಗಿನಿಂದಲೂ ಗೋಪ್ಯವಾದ ಒಂದು ಬುಗ್ಗೆಯಿಂದ ಹರಿದು ಬರುವ ನೀರು ತೊಟ್ಟಿಕ್ಕುತ್ತಿದ್ದಿತು. ಗುಹೆಯಲ್ಲಿ ಎರಡು ಕೋಣೆಗಳಿದ್ದುವು. ದೊಡ್ಡದರಲ್ಲಿ ಮಹಾದೇವನ ವಿಗ್ರಹ ಇದೆ; ಇನ್ನೊಂದರಲ್ಲಿ ಎತ್ತರವಾದ ಕಲ್ಲುಚಪ್ಪಡಿ. ಅದರ ಕೆಳಗೆ ಹಿಂದೆ ಇಲ್ಲಿ ವಾಸವಾಗಿದ್ದು, ದೇಹವನ್ನು ತ್ಯಜಿಸಿದ ಒಬ್ಬ ಸಾಧುವಿನ ಅಸ್ಥಿ ಇದೆಯೆಂದು ಪ್ರತೀತಿ. ರಾಮದಾಸನು ಕೆಲವು ನಿಮಿಷ ಗುಹೆಯನ್ನು ನೋಡಿ ಹೊರಗೆ ಬಂದು ಆ ತರುಣಿ ಮಾತೆಯಿಂದ ಬೀಳ್ಕೊಂಡು ಮಟ್ಟಾನಿಗೆ ಹಿಂತಿರುಗಿದನು.

ರಾಮದಾಸನಿಗೆ ಜೊತೆಗಾರ ಪಂಡಿತನ ಮುಖದಲ್ಲಿ ಕಳವಳದ ಚಿಹ್ನೆ ಕಂಡಿತು. ವಿಚಾರಿಸಿದ್ದರಲ್ಲಿ, ಆತನು ಬಹಳ ಹಿಂತೆಗೆಯುತ್ತ ಕಾರಣವನ್ನು ತಿಳಿಸಿದನು.

ಅವನು "ಮಹರಾಜ್, ನನ್ನ ಕಳವಳದ ಕಾರಣ ಇದು. ನಾವು ನಾಳೆಯೋ ನಾಡಿದ್ದೋ ಬೆಟ್ಟವನ್ನು ಏರಬೇಕು. ಬೆಟ್ಟವನ್ನು ಹತ್ತಿಹೋದ ಹಾಗೆಲ್ಲ ಚಳಿ ಹೆಚ್ಚು ಹೆಚ್ಚಾಗುತ್ತದೆ. ನಾನು ಒಬ್ಬನಿಗೆ ಮಾತ್ರ ಸಾಕಾಗುವಷ್ಟು ಕಂಬಳಿ ಮತ್ತು ಬಟ್ಟೆಗಳನ್ನು ತಂದಿದ್ದೇನೆ. ನಿಮ್ಮಲ್ಲಿ ನಿಮ್ಮ ಉಪಯೋಗಕ್ಕೆ ಚಳಿ ತಡೆಯದ ಹತ್ತಿ ಬಟ್ಟೆಯ ಹೊರತು ಬೇರೆ ಏನೂ ಇಲ್ಲ. ನಿಮಗಾಗಿ ನಿಮ್ಮ ಸ್ನೇಹಿತನೊಬ್ಬನ ಮೂಲಕ ಕೆಲವು ಉಣ್ಣೆಬಟ್ಟೆಗಳನ್ನು ಕಳುಹಿಸುವರೆಂದು ನನಗೆ ಹೇಳಿದ್ದರು. ಇದುವರೆಗೂ ಅವನ ಸುಳಿವಿಲ್ಲ. ಏನುಮಾಡೋಣ ?" ಎಂದನು.

ರಾಮುದಾಸನು "ಆ ವಿಚಾರವನ್ನು **ರಾಮುನಿಗೆ** ಬಿಡಿ. **ಅವನೇ** ನೋಡಿ ಕೊಳ್ಳುತ್ತಾನೆ. ನೀವೇನೂ ಮನಸ್ಸಿಗೆ ಹಚ್ಚಿಕೊಳ್ಳಬೇಡಿ." ಎಂದನು.

ಆ ದಿನವೆಲ್ಲಾ ಬಸ್ಸಿನ ಮೇಲೆ ಬಸ್ಸು ತುಂಬಾಗಿ ಯಾತ್ರಿಕರು ಮಟ್ಟಾನಿಗೆ ಬರುತ್ತಲೇ ಇದ್ದರು. ರಾಮುಚರಣದಾಸನನ್ನು ಕಂಡುಹಿಡಿಯುವ ಭಾರವನ್ನು ಪಂಡಿತನು ರಾಮುದಾಸನಿಗೆ ವಹಿಸಿದನು. ರಾಮುದಾಸನು ಸಾಯಂಕಾಲ ನಾಲ್ಕೂ ವರೆ ಗಂಟೆಯವರೆಗೂ ಬಸ್ಸು ಬಂದು ನಿಲ್ಲುವ ಸ್ಥಳದಲ್ಲಿ, ಒಂದು ಸೇತುವೆಯ ತಗ್ಗಾದ ಗೋಡೆಯ ಮೇಲೆ ಕುಳಿತು ಕಾದಿದ್ದನು.

ಒಬ್ಬ ಯುವಕನು ಹಠಾತ್ತಾಗಿ ರಾಮುದಾಸನ ಬಳಿಗೆ ಬಂದನು. ಅವನು ಶ್ರೀನಗರದ ನವೀನ ನಾಗರಿಕ ಮಾದರಿಯ ವಸ್ತ್ರಗಳಿಂದ ಅಲಂಕೃತನಾಗಿದ್ದನು. ಅವನು ತಲೆಯ ಮೇಲೆ ಹಳದಿ ವರ್ಣದ ದೊಡ್ಡ ರುಮಾಲನ್ನು ಧರಿಸಿದ್ದನು. ಅವನು ರಾಮುದಾಸನ ತೋಳನ್ನು ಹಿಡಿದುಕೊಂಡು,

"ರಾಮುದಾಸರೇ, ನೋಡಿ. ನಿಮ್ಮನ್ನು ಹಿಡಿದೇ ಹಿಡಿದೆ! ನೀವು ನನ್ನೊಡನೆ ಅಮರನಾಥಕ್ಕೆ ಪ್ರಯಾಣ ಮಾಡಬೇಕು. ನಿಮಗೆ ನನ್ನ ನೆನಪು ಇಲ್ಲದಿದ್ದರೂ ನಾನು ನಿಮ್ಮನ್ನು ನಿಷದ್‌ಬಾಗಿನಲ್ಲಿ ಅಮರನಾಥ ಬಕ್ಷಿಯವರ ಸಂಗಡನೋಡಿದ್ದೆ. ಅವರು ನನ್ನ ಉಪಾಧ್ಯಾಯರಾಗಿದ್ದರು; ಈಗ ಅವರು ನನಗೆ ಬಹು ಪ್ರಿಯರಾದ ಸ್ನೇಹಿತರು. ನಿಮ್ಮನ್ನು ಸರಿಯಾಗಿ ನೋಡಿಕೊಳ್ಳಬೇಕೆಂದು ಅವರು ನನಗೆ ಹೇಳಿದ್ದಾರೆ ಬನ್ನಿ. ನಾನು ಒಬ್ಬ ಡಾಕ್ಟರು. ನನ್ನ ಹೆಸರು ಅಮರನಾಥ. ನಾನು ಯಾತ್ರಿಕರ ಆರೋಗ್ಯದ ಮೇಲ್ವಿಚಾರಣೆಗಾಗಿ ಆಸ್ಪತ್ರೆ ಸಲಕರಣೆಗಳೊಂದಿಗೆ ಯಾತ್ರಿಕರ ಸಂಗಡ ಅಮರನಾಥದವರೆಗೂ ಪ್ರಯಾಣಮಾಡುತ್ತೇನೆ. ನನ್ನ ಸ್ವಂತಕ್ಕೆ ಬೇರೆ ಒಂದು ಡೇರೆ ಇದೆ. ನೀವು ಅಗತ್ಯವಾಗಿ ಅದರಲ್ಲಿ ಇರಬಹುದು. ಬೆಚ್ಚಗಿರುವ ಬಟ್ಟೆಗಳಿಗೂ ಕಂಬಳಿಗಳಿಗೂ ನಿಮಗೆ ಏನೂಕೊರತೆ ಇರುವುದಿಲ್ಲ. ನಿಮಗೆ ಕೊಡುವುದಕ್ಕೂ ಬೇಕಾದಷ್ಟು ನನ್ನಲ್ಲಿವೆ." ಎಂದು ಹೇಳಿದನು.

**ರಾಮುನು** ಯಾವಾಗಲೂ ರಾಮುದಾಸನನ್ನು ಅನಿರೀಕ್ಷಿತದಿಂದ ಬೆಕ್ಕಸ ಪಡಿಸುತ್ತಾನೆ.

ರಾಮುದಾಸನು ಡಾಕ್ಟರಿಗೆ "ರಾಮುಜಿ, ರಾಮುದಾಸನು ಇಲ್ಲಿಗೆ ಒಬ್ಬ ಪಂಡಿತನ ಜೊತೆಯಲ್ಲಿ ಬಂದಿದ್ದಾನೆ. ಆತನು ರಾಮುದಾಸನನ್ನು ಬಹು ಪ್ರೀತಿ ಯಿಂದ ಕಂಡಿದ್ದಾನೆ. ಹೊಸ ಏರ್ಪಾಡನ್ನು ರಾಮುದಾಸನು ಅವನಿಗೆ ತಿಳಿಸಬೇಕು" ಎಂದು ಹೇಳಿದನು.

ನಿಜವಲ್ಲದ ಒಂದು ದರ್ಪದಿಂದ ಮಾತನಾಡುವುದು ಡಾಕ್ಟರ ವಾಡಿಕೆ. ಅವನು ಅಂತಹ ದಯಾಳು, ಪ್ರೀತಿವಂತ. ಆತನು ರಾಮುದಾಸನಿಗೆ "ಮೊದಲು ನನ್ನ ಸಂಗಡ ಬನ್ನಿ. ನೀವು ನನ್ನ ಕೈಯಿಂದ ನುಣಿಚಿಕೊಂಡು ಹೋಗು ವುದು ನನಗೆ ಒಪ್ಪಿಗೆಯಿಲ್ಲ; ನನ್ನ ಡೇರೆಗೆ ಬನ್ನಿ. ನೀವು ಹೇಳುವ ಪಂಡಿತ

ನನಗೆ ಗೊತ್ತು; ಅವನಿಗೆ ಹೇಳಿ ಕಳುಹಿಸಿ ಅವನ ಸಂಗಡ ಮಾತನಾಡುತ್ತೇನೆ. ಆ ವಿಚಾರ ನಿಮಗೆ ಬೇಡ" ಎಂದು ಹೇಳಿದನು.

ರಾಮದಾಸನನ್ನು ತೋಳಿನಿಂದ ಹಿಡಿದುಕೊಂಡು, ಡಾಕ್ಟರು ಮರಗಳ ನೆರಳಿನಲ್ಲಿ ಸಮವಾದ ಚೌಕದಲ್ಲಿ ಹೊಡೆದಿದ್ದ ಒಂದು ಡೇರೆಗೆ ನಡೆಯಿಸಿಕೊಂಡು ಹೋದನು. ಅವನನ್ನು ಒಂದು ಕುರ್ಚಿಯ ಮೇಲೆ ಕುಳ್ಳಿರಿಸಿ, ಪಂಡಿತನನ್ನು ಕರೆತರಲು ತನ್ನ ಆಳೊಬ್ಬನನ್ನು ಕಳುಹಿಸಿದನು. ಪಂಡಿತನು ಬಂದನು; ರಾಮದಾಸನು ಕುರ್ಚಿಯ ಮೇಲೆ ಸುಖಾಸೀನನಾಗಿರುವುದನ್ನು ನೋಡಿದನು. ಈಗ ಡಾಕ್ಟರ ಮತ್ತು ಪಂಡಿತನ ಮಧ್ಯೆ ಕಾಶ್ಮೀರಭಾಷೆಯಲ್ಲಿ ನಡೆದ ಸಂಭಾಷಣೆಯನ್ನು ರಾಮದಾಸನು ಸುಮ್ಮನೆ ಕೇಳುತ್ತಿದ್ದನು. ಕಾಶ್ಮೀರ ದೇಶದ ಜನಗಳ ಮಧ್ಯೆ ತಿಂಗಳುಗಟ್ಟಲೆ ವಾಸವಾಗಿದ್ದುದರಿಂದ ಅವರ ಸಂಭಾಷಣೆಯ ಸರಣಿ ಅರ್ಥವಾಗುವ ಮಟ್ಟಿಗೆ ಅವನಿಗೆ ಆ ಮಾತು ತಿಳಿಯುತ್ತಿದ್ದಿತು. ಇವರಿಬ್ಬರಿಗೂ ವಾಗ್ಯುದ್ಧಕ್ಕೆ ಆರಂಭವಾಯಿತು. ರಾಮದಾಸನನ್ನು ಬಿಟ್ಟುಕೊಡಲು ಪಂಡಿತನಿಗೆ ಇಷ್ಟವಿಲ್ಲ. ರಾಮದಾಸನಿಗೆ ಶಾಖವಾದ ಉಡುಪನ್ನೂ ಕಂಬಳಿಗಳನ್ನೂ ಒದಗಿಸುವೆನೆಂದು ಕೂಡ ಅವನು ಡಾಕ್ಟರಿಗೆ ಭರವಸೆ ಕೊಟ್ಟನು. ಈ ಯುದ್ಧ ಅರ್ಧ ಗಂಟೆ ನಡೆಯಿತು. ಕೊನೆಗೆ ಡಾಕ್ಟರೇ ಜಯಶಾಲಿಯಾದನು. ಪಂಡಿತನು ಅಸಮಾಧಾನದಿಂದ ಗೊಣಗಿಕೊಂಡು ಹೊರಟುಹೋದನು.

ಸೂರ್ಯಾಸ್ತಮಯ ಸಮಯದಲ್ಲಿ ರಾಮಚರಣದಾಸನು ಕೊನೆಯ ಬಸ್ಸಿನಲ್ಲಿ ಬಂದಿಳಿದನು. ಅವನು ತನಗೂ ರಾಮದಾಸನಿಗೂ ಸಹ ಉಣ್ಣೆಯ ಬಟ್ಟೆಯನ್ನು ತಂದಿದ್ದನು. ಅದೇ ಸಂಜೆ ರಾಮದಾಸನಿಗೆ ಡಾಕ್ಟರ ನೆಂಟನೊಬ್ಬನು ಸಿಕ್ಕಿದನು. ಆತನು ರಾಮದಾಸನಿಗೆ ಒಂದು ಉಣ್ಣೆಯ ನಿಲುವಂಗಿಯನ್ನೂ ಒಂದು ಕೊಡೆಯನ್ನೂ ಒದಗಿಸಲು ಏರ್ಪಡಿಸಿದನು. ಭಗವಂತನು ತನ್ನ ಮಕ್ಕಳ ಮೇಲೆ ದಯೆಯನ್ನು ಸುರಿಸಬೇಕೆಂದು ಸಂಕಲ್ಪಿಸಿದಾಗ ಅದನ್ನು ಅವರು ಕೇಳದಿದ್ದರೂ ಮಾಡುತ್ತಾನೆ. ಅದನ್ನು ಮಾಡುವುದರಲ್ಲಿ ಅವನ ಧಾರಾಳ ನೋಡಿ ಇವರು ಮುಗ್ಧರಾಗಿ ದಿಗ್ಭ್ರಾಂತರಾಗುತ್ತಾರೆ.

ಮಾರನೆಯ ದಿನ ಯಾತ್ರಿಕರ ಗುಂಪು ಮುಂದೆ ಸಾಗಿತು. ಅದರೊಂದಿಗೆ ಆಸ್ಪತ್ರೆ ಸಿಬ್ಬಂದಿಯೂ ಹೊರಟಿತು. ಹಾಗೆಯೇ ರಾಮದಾಸನೂ ರಾಮಚರಣದಾಸನೂ, ಜೊತೆಗೆ ಬಂದ ಡಾಕ್ಟರ ಸಿಬ್ಬಂದಿಯ ಇಬ್ಬರು ದೃಢಾಂಗರಾದ ಪಂಡಿತರೊಂದಿಗೆ ಹೊರಟರು. ಡಾಕ್ಟರು ಒಂದು ಕುದುರೆಯನ್ನೇರಿ ಹೊರಟನು.

ಇವರು ಸಾಯಂಕಾಲಕ್ಕೆ ಪ್ರಯಾಣಕ್ಕೆ ಎರಡನೆಯ ಮಜಲಾದ ಫೇಲ್ ಗಾಮನ್ನು ಸೇರಿದರು. ಆಸ್ಪತ್ರೆಯ ಪಾಳಯವನ್ನು ನದಿಯ ದಡದ ಬಳಿ ಒಂದು ವಿಶಾಲವಾದ ಮೈದಾನದಲ್ಲಿ ಹಾಕಿದರು. ಫೇಲ್‌ಗಾಮ್ ಬಹು ಮನೋಹರವಾದ ಸ್ಥಳ. ಒಂದು ಕಡೆ ಎತ್ತರವಾದ ಬೆಟ್ಟಗಳು, ಇನ್ನೊಂದು ಕಡೆ ಫರ್

ಮರಗಳ ಮತ್ತು ಎತ್ತರವಾದ ಪೋಪ್ಲಾರ್ ಮರಗಳ ದಟ್ಟವಾದ ಕಾಡು; ತಪ್ಪಲ ಸಮನೆಲದಲ್ಲಿ ನಿಶ್ಶಬ್ದವಾಗಿ ಪ್ರವಹಿಸುವ ನದಿ. ಮನೋಹರವಾದ ಅಂಚಿನಿಂದೊಡಗೂಡಿದ ವಿಶಾಲವಾದ ಸಮಭೂಮಿ ಆ ಸ್ಥಳಕ್ಕೆ ಭವ್ಯತೆಯನ್ನೂ ಅತುಲವಾದ ಆಕರ್ಷಕ ಶಕ್ತಿಯನ್ನೂ ನೀಡುತ್ತಿದ್ದಿತು. ಕಾಶ್ಮೀರದ ಸುಂದರವಾದ ಭೂ ಮುಖಗಳು ಪ್ರಪಂಚದ ನಾನಾ ಭಾಗಗಳಿಂದ ಪ್ರೇಕ್ಷಕರನ್ನು ಸೆಳೆಯುತ್ತಿವೆ. ಇವುಗಳ ಸೊಬಗೂ ಸೌಂದರ್ಯವೂ ಪ್ರಪಂಚದಲ್ಲಿ ಸುಪ್ರಸಿದ್ಧವಾದ ಸ್ವಿಟ್ಜರ್ ಲೆಂಡ್ ದೇಶದ ದೃಶ್ಯಸ್ಥಾನ, ದೃಶ್ಯ ಸ್ತೋಮಗಳಿಗೆ ಕಡಿಮೆಯಾದುದಲ್ಲವೆಂದು ಹೇಳುತ್ತಾರೆ.

ಫೇಲ್‌ಗಾಮಿನಲ್ಲಿ ಯಾತ್ರಿಕರ ಒತ್ತಡವಾದ ಗುಂಪಿನಲ್ಲಿ ರಾಮದಾಸನಿಗೆ ಬಾಲಕ್‌ರಾಮಪರಮಹಂಸನು ಕಂಡನು. ಇಷ್ಟು ಅನಿರೀಕ್ಷಿತವಾಗಿ ರಾಮದಾಸನನ್ನು ಕಂಡಾಗ ಬಾಲಕ್‌ರಾಮನ ಸಂತೋಷಕ್ಕೆ ಪಾರವೇ ಇಲ್ಲ. ರಾಮದಾಸನಿಗೆ ಅವನು ಇನ್ನೂ ಗಾಂಜಾ ಧೂಮಪಾನಕ್ಕೆ ಅಡಿಯಾಳಾಗಿದ್ದುದು ಕಂಡಿತು. ಅವನು ರಾಮದಾಸನಿಂದ ಒಂದು ವಸ್ತ್ರವನ್ನು ಕೇಳಿದನು. ರಾಮದಾಸನು ತನ್ನಲ್ಲಿದ್ದ ಒಂದು ಹೆಚ್ಚಿನ ಬಟ್ಟೆಯನ್ನು ಕೊಟ್ಟನು. ಅನಂತರ ತಿಳಿಯ ಬಂದುದರಲ್ಲಿ, ಬಾಲಕ್‌ರಾಮನು ಸಿಕ್ಕಾಪಟ್ಟೆ ವರ್ತಿಸಿ ಶಾಂತರಾಗಿದ್ದ ಯಾತ್ರಿಕರನ್ನು ಹೊಡೆಯಲು ಆರಂಭಿಸಿದುದರಿಂದ ಪೋಲೀಸಿನವರು ಅವನನ್ನು ಅಮರನಾಥಕ್ಕೆ ಮುಂದರಿಯಲು ಬಿಡದೆ ತಡೆದು ಶ್ರೀನಗರದಿಂದ ರಾವಲ್ಪಿಂಡಿಗೆ ಓಡಿಸಿದರು.

ರಾಮದಾಸನು ಬಿಡಾರಕ್ಕೆ ಹಿಂತಿರುಗಿದಾಗ ಹೊಸ ಅನೇಕ ಸ್ನೇಹಿತರು ಜೊತೆಗೆ ಬಂದಿದ್ದುದು ತಿಳಿಯಿತು. ಇದರಲ್ಲಿ ಕೆಲವರು ವಕೀಲರೂ ಅಧ್ಯಾಪಕರೂ ಇದ್ದರು. ರಾಮದಾಸನು ಒಂದು ವಸ್ತ್ರವನ್ನು ಕೊಟ್ಟುಬಿಟ್ಟಿದ್ದನೆಂದು ಡಾಕ್ಟರ್ ಅಮರನಾಥನಿಗೆ ತಿಳಿಯಿತು. ಅದು ಹುಚ್ಚು ಕೆಲಸವೆಂದು ಆತನ ಭಾವನೆ. ಆತನು ರಾಮದಾಸನನ್ನು ಆ ಬಗ್ಗೆ ತುಂಬ ಆಕ್ಷೇಪಿಸಿ ರಾಮದಾಸನ ಹೆಚ್ಚಿನ ಉಡಿಗೆಗಳನ್ನು ಕಾಯುವ ಕೆಲಸವನ್ನು ತಾನೇ ವಹಿಸಿಕೊಂಡನು. ಡಾಕ್ಟರ ಬಂಧು ಕೊಟ್ಟಿದ್ದ ನಿಲುವಂಗಿಯನ್ನು ರಾಮದಾಸನು ಉಪಯೋಗಿಸಿದ್ದು ಅಪೂರ್ವ. ಮುಖ್ಯವಾಗಿ ಈ ನಿಲುವಂಗಿಯನ್ನು ಡಾಕ್ಟರು ತನ್ನ ಬಟ್ಟೆಗಳೊಂದಿಗೆ ಪೆಟ್ಟಿಗೆಯಲ್ಲಿ ಭದ್ರವಾಗಿ ಮುಚ್ಚಿಟ್ಟನು. ರಾಮದಾಸನು ಅದನ್ನು ಧರಿಸಿದ ಕಾಲದಲ್ಲಿ ಅವನು ಅದನ್ನು ಇತರರಿಗೆ ದಾನಮಾಡದಂತೆ ನೋಡಿಕೊಳ್ಳಲು ಅವನ ಮೇಲೆ ಕಾವಲಿರುತ್ತಿದ್ದಿತು.

ಮಧ್ಯಾಹ್ನ ರಾಮದಾಸನಿಗೆ ಒಬ್ಬ ಆಂಗ್ಲ ಮಿಷನರಿ ದೊರಕಿ ಬಹು ಸ್ನೇಹಿತನಾದನು. ರಾಮದಾಸನು ಅವನ ಸಂಗಡ ದೇವರು, ಪ್ರೀತಿ ಮತ್ತು ಕ್ರೈಸ್ತನ ವಿಷಯವಾಗಿ ಮಾತನಾಡಿದನು. ಆ ಮಿಷನರಿಗೆ ಅತ್ಯಂತ ಸಂತೋಷ

ವಾಯಿತು. ರಾಮದಾಸನು ಅಮರನಾಥದಿಂದ ಹಿಂತಿರುಗಿದ ಮೇಲೆ ಆವಸಿಂದ ತಮ್ಮ ಪ್ರಾರ್ಥನಾ ಮಂದಿರದಲ್ಲಿ ಒಂದು ಉಪನ್ಯಾಸವನ್ನು ಏರ್ಪಡಿಸುವುದಾಗಿ ಆತನು ಯೋಚಿಸಿದನು.

### (ii) ರಾಮದಾಸನು ದೃಶ್ಯದಲ್ಲಿ ಮಗ್ನನಾದುದು

ಫೇಲ್‌ಗಾಮ್‌ವರೆಗೂ ದಾರಿ ಸಮನೆಲವಾಗಿದ್ದಿತು. ಅಲ್ಲಿಂದ ಬೆಟ್ಟದ ಏರುದಾರಿ ಆರಂಭವಾಯಿತು. ಮಾರ್ಗ ಸುತ್ತಿಸುಳಿದುದರಿಂದ ಏರುವುದು ಸುಲಭ ವಾಗಿದ್ದಿತು. ರಾಮದಾಸನೂ ಸಂಗಡಿಗರೂ ತೀವ್ರವಾದ ನಡೆಯಿಂದ ನಡೆದರು. ಸೂರ್ಯಾಸ್ತಮಯಕ್ಕೆ ಬಹು ಮುಂಚೆಯೇ ಚಂದನವಾಡಿಯನ್ನು ಸೇರಿದರು. ಚಂದನವಾಡಿಯ ದೃಶ್ಯಗಳು ತಮ್ಮವೇ ಆದ ಒಂದು ಸೊಬಗಿನಿಂದ ಕೂಡಿವೆ; ಬಹಳ ಉತ್ತೇಜಕವಾಗಿವೆ. ಇಲ್ಲಿ ನದಿ ಬೆಟ್ಟದಿಂದ ಕೆಳಕ್ಕೆ ಬಹು ರಭಸದಿಂದ ಹರಿಯುತ್ತಿದೆ. ಯಾತ್ರಿಕರು ಚಂದನವಾಡಿಯಲ್ಲಿ ಒಂದು ರಾತ್ರಿ ನಿಂತರು. ಡಾಕ್ಟರು ರಾಮದಾಸನನ್ನು ಎಷ್ಟು ಎಚ್ಚರದಿಂದ ನೋಡುತ್ತಿದ್ದನೆಂದರೆ ರಾತ್ರಿ ರಾಮದಾಸನಿಗೆ ಎರಡು ಕಂಬಳಿಗಳನ್ನು ಹೊದ್ದಿಸಿದೆ ಎನ್ನುವುದನ್ನು ದೃಢಪಡಿಸಿ ಕೊಳ್ಳುತ್ತಿದ್ದನು. ಉಳಿದ ಸ್ನೇಹಿತರೂ ಸಹ ರಾಮದಾಸನನ್ನು ಬಹು ಆದರ ದಿಂದ ಕಾಣುತ್ತಿದ್ದರು. ಆದರೆ ಪಂಡಿತರಿಗೂ ರಾಮಚರಣದಾಸನಿಗೂ ಸರಿಬೀಳಲಿಲ್ಲ. ಆದುದರಿಂದ ರಾಮಚರಣದಾಸನು ಡೇರೆಯನ್ನು ಬಿಟ್ಟು ಬಯಲಿನಲ್ಲಿ ಇತರ ಸಾಧುಗಳ ಸಂಗಡ ಇರುತ್ತಿದ್ದನು.

ಮಾರನೆಯ ದಿನ ಯಾತ್ರಿಕರು ಮುಂದೆ ಪ್ರಯಾಣ ಮಾಡಿದರು. ರಾಮದಾಸನನ್ನು ಶ್ರೀನಗರದಿಂದ ಮಟ್ಟಾನಿಗೆ ಕರೆತಂದಿದ್ದ ಪಂಡಿತನು ರಾಮ ದಾಸನಿಗೆ ಕಾನ್ವಾಸ್ ಬಟ್ಟೆಯ ಒಂದು ಜೊತೆ ಮೋಜವನ್ನು ಕೊಟ್ಟಿದ್ದನು. ರಾಮದಾಸನು ಇವನ್ನು ಹಾಕಿಕೊಂಡು ಸುಮಾರು ಮೂವತ್ತು ಮೈಲಿಗಳಷ್ಟು ನಡೆದು, ಅವು ಅನವಶ್ಯಕವಾದ ಭಾರವೆಂದು ಕಂಡುಬಂದುದರಿಂದ ಅವನ್ನು ಬಿಸಾಟು ಮುಂದೆ ಬರಿಗಾಲಿನಲ್ಲಿಯೇ ನಡೆಯುತ್ತಿದ್ದನು. ಉಣ್ಣೆಯ ಬಟ್ಟೆಯ ಅಂಗಿ, ಖಾದಿ ಬಟ್ಟೆಯ ತುಂಡು ಮತ್ತು ಆಗಾಗ್ಗೆ ಧರಿಸುತ್ತಿದ್ದ ಉಣ್ಣೆಯ ಟೋಪಿ ಬಿಟ್ಟರೆ, ರಾಮದಾಸನಲ್ಲಿ ಇನ್ನೇನೂ ಬಟ್ಟೆ ಇರಲಿಲ್ಲ. ಬೆಟ್ಟದ ಮೇಲೆ ಸ್ವೇಚ್ಛೆಯಾಗಿ ಓಡುವುದಕ್ಕೆ ಶರೀರ ಹಗುರವಾಗಿರಲೆಂದು ಅವನ ಇಷ್ಟ.

ರಾಮದಾಸನು ಬೆಟ್ಟವನ್ನು ಹತ್ತಿ ಹತ್ತಿ ಹೋದಹಾಗೆ ಅತಿ ಸುಂದರವಾದ ಪ್ರಕೃತಿ ದೃಶ್ಯಗಳನ್ನು ಕಂಡನು. ಅವು ರಾಮದಾಸನನ್ನು ಅತ್ಯಂತ ಆನಂದದಿಂದ ತುಂಬಿದುವು. ಈಗ ನೆಲ ದಾರಿಯುದ್ದಕ್ಕೂ ಸಸಿಗಳಿಂದಲೂ ಹುಲ್ಲಿನಿಂದಲೂ ಜಮಖಾನ ಹಾಸಿದಂತೆ ಇದ್ದಿತು. ಗಿಡಗಳಲ್ಲಿ ಬಣ್ಣಬಣ್ಣದ ಹೂಗಳಿದ್ದವು. ಇವು, ಒಂದು ಸಂತೋಷದ ಸಮಾರಂಭಕ್ಕಾಗಿ ದಾರಿಯಲ್ಲಿ ಹೊಸ ಹೂಗಳನ್ನು ಚೆಲ್ಲಿ ಹರಡಿದೆ ಎಂಬಂತೆ ಕಾಣುತ್ತಿದ್ದುವು.

ಇವರ ಮುಂದಿನ ಮಜಲು ವಾವ್‌ಜಿನ್. ಫೇಲ್‌ಗಾಮಿಗೆ ಕೆಲವು ಮೈಲಿಗಳ ಆಚೆ ನೀಲಗಂಗ ಎಂಬ ಸ್ಥಳವಿದೆ. ಇಲ್ಲಿ ಸ್ನಾನಮಾಡುವುದು ಪುಣ್ಯಕರವೆಂದು ಯಾತ್ರಿಕರು ಭಾವಿಸುತ್ತಾರೆ. ನದಿಯ ನೀರು ಬಹಳ ಕೊರೆಯುತ್ತದೆ. ನದಿಯ ದಂಡೆಯಲ್ಲಿ, ಯಾತ್ರಿಕರ ಗುಂಪು ಸ್ನಾನಕ್ಕೆ ಕಾದಿದ್ದಿತು. ರಾಮದಾಸನು ಅಲ್ಲಿ ಹೋಗಿ ಬಟ್ಟೆಯನ್ನು ತೆಗೆದಿಟ್ಟು, ಕೌಪೀನವನ್ನು ಮಾತ್ರ ಧಾರಣೆ ಮಾಡಿ ಕೊಂಡು, ದಡದ ಪಕ್ಕದಲ್ಲಿ ನೀರಿಗೆ ಹಾರಿ ಮೂರು ಸಲ ಮುಳಗಿದನು. ನದಿಯಿಂದ ಎದ್ದು ಬಂದರೆ ಚಳಿಯಿಂದ ಶರೀರ ಕಟ್ಟಿಗೆಯಂತೆ ಸೆಡೆತು ಕೊಂಡಿದ್ದಿತು. ಜೊತೆಯಲ್ಲಿದ್ದ ಪಂಡಿತರು ಅವನ ಮೈಯನ್ನು ಉಣ್ಣೆಬಟ್ಟೆ ಯಿಂದ ಚನ್ನಾಗಿ ತಿಕ್ಕಿ ಮತ್ತೆ ಬಟ್ಟೆಯನ್ನು ಹಾಕಿ ತಾವು ಒಂದು ಥರ್ಮೋಫ್ಲಾಸ್ಕಿ ನಲ್ಲಿ ತಂದಿದ್ದ ಬಿಸಿಚಹ ಒಂದು ಲೋಟವನ್ನು ಕುಡಿಸಿದರು. ರಾಮದಾಸನು ಮುಂದಕ್ಕೆ ಓಡಿದನು. ಪಂಡಿತರು ಹಿಂದೆಯೇ ಬಂದರು. ಸಾಯಂಕಾಲದ ಹೊತ್ತಿಗೆ ವಾವ್‌ಜಿನ್ ಪ್ರಸ್ಥಭೂಮಿ ಸಿಕ್ಕಿತು.

ವಾವ್‌ಜಿನ್-ವಾಯುಜಿನ್-ಎಂದರೆ ಪ್ರಚಂಡಮಾರುತ ಭೂತ. ಇಲ್ಲಿ ಸದಾ ಕಾಲದಲ್ಲಿಯೂ ಮಂಜಿನ ಗಡ್ಡೆಯಷ್ಟು ಶೀತಲವಾದ ಗಾಳಿಯ ಪ್ರಚಂಡ ಪ್ರವಾಹ ಗಳು ಬೀಸುತ್ತಿರುತ್ತವೆ. ಜೊತೆಗೆ ಅನೇಕ ಸಂದರ್ಭದಲ್ಲಿ ಮಳೆಯೂ ಬೀಳು ತ್ತಿರುತ್ತದೆ. ಆದುದರಿಂದ ಈ ಪ್ರಾಂತವೆಲ್ಲಾ ನೆನೆದು ಬಹಳ ಚಳಿಯಾಗಿರುತ್ತದೆ. ಅಲ್ಪ ಉಡುಪುಗಳನ್ನು ತಂದಿದ್ದ ಯಾತ್ರಿಕರು ಇಲ್ಲಿಯ ಅಸಾಧ್ಯ ಚಳಿಯಿಂದ ಕಂಗೆಟ್ಟು ಹೋದರು.

ಇಲ್ಲಿ ರಾಮದಾಸನ ಮೊದಲ ಮಾರ್ಗದರ್ಶಕ ಪಂಡಿತನು ರಾಮದಾಸನನ್ನು ತನ್ನ ಡೇರೆಗೆ ಊಟಕ್ಕೆ ಕರೆದುಕೊಂಡು ಹೋದನು. ಇಲ್ಲಿ ರಾಮದಾಸನು ವಿದ್ಯಾ ಶಾಲೆಗಳ ತನಿಖೆಯ ಮುಖ್ಯಾಧಿಕಾರಿಯಾದೊಬ್ಬ ವಯಸ್ಸಾದ ಮನುಷ್ಯನನ್ನು ಕಂಡನು. ಇವನ ಸಂಗಡ ರಾಮದಾಸನು ಆ ಪ್ರಸ್ಥಭೂಮಿಯ ಒಂದು ಬೆಟ್ಟ ವನ್ನು ಹತ್ತಿಹೋದನು.

ತಣ್ಣನೆಯ ಗಾಳಿಯನ್ನು ಸಹಿಸಲಾರದೆ ಆ ಅಧಿಕಾರಿ ಮಧ್ಯ ದಾರಿಯಲ್ಲಿ ಹಿಂದಕ್ಕೆ ಇಳಿದನು. ಅಲ್ಲದೆ ಮಳೆಯೂ ಪ್ರಾರಂಭವಾಗಿದ್ದಿತು. ರಾಮದಾಸನೂ ರಾಮಚರಣದಾಸನೂ ಬೆಟ್ಟದ ತುದಿಯನ್ನು ಸೇರಿ ಕತ್ತಲಾಗುವುದಕ್ಕೆ ಮುಂಚೆ ಕೆಳಗಿಳಿದರು.

ವಾವ್‌ಜಿನ್ನಿನಲ್ಲಿ ಆ ರಾತ್ರಿ ತಂಗಿದ್ದು ಇವರು ಮೂರನೇ ದಿನ ಪ್ರಯಾಣ ವನ್ನು ಮುಂದುವರಿಸಿದರು. ಸುಮಾರು ಒಂಬತ್ತು ಗಂಟೆಯ ಹೊತ್ತಿಗೆ ಶೇಷನಾಗ್ ಎಂಬ ಸ್ಥಳ ಸಿಕ್ಕಿತು. ಈಗ ಚಳಿ ಮತ್ತಷ್ಟು ಕ್ರೂರವಾಗುತ್ತಿದ್ದಿತು. ಶೇಷನಾಗ್ ಎಂಬುದು ವಿಸ್ತಾರವಾದ ವರ್ತುಳಾಕಾರದ ಒಂದು ಸಹಜಜಲಾಶಯ. ಇದು ಬೆಟ್ಟದ ಮಧ್ಯೆ ಇರುವ ಮಹತ್ತರವಾದ ಕಂದರ. ಒಂದು ಪಾರ್ಶ್ವದ ಪಟ್ಟೆಯನ್ನು

ತೆಗೆದುಹಾಕಿರುವ ಮರದ ಪೀಪಾಯಿಯ ಆಕಾರವಾಗಿದೆ. ನೀರು ಸ್ವಲ್ಪ ಮಾಸಲು ನೀಲಿ ಬಣ್ಣವಾಗಿದ್ದು ಸ್ವಚ್ಛವಾಗಿ ಹೊಳೆಯುತ್ತಿದ್ದಿತು. ರಾಮದಾಸನೂ ಜೊತೆಯವರೂ ಈ ದುಂಡಾದ ಸರೋವರದ ದಂಡೆಗೆ ಬಂದು ನೋಡಿದರೆ ನೀರು ಮಂಜಿನ ಗಡ್ಡೆಯಂತೆ ಶೀತಲವಾಗಿದ್ದಿತು. ರಾಮದಾಸನು ರಾಮಚರಣದಾಸನ ಕಡೆಗೆ ತಿರುಗಿ,

"ರಾಮಜಿ, ಬಟ್ಟೆಯನ್ನು ತೆಗೆ, ಸರೋವರದಲ್ಲಿ ಸ್ನಾನಮಾಡೋಣ" ಎಂದನು. ರಾಮಚರಣದಾಸನ ಜೀವ ಆ ಅನುಭವ ಬೇಡವೆಂದು ಹಿಂಜರಿಯಿತು.

ಅವನು "ನೀರು ಬಹಳ ಕೊರೆಯುತ್ತಿದೆ. ಇಲ್ಲಿ ಸ್ನಾನಮಾಡುವುದು ಬೇಡ" ಎಂದನು.

ರಾಮದಾಸನು "ಇಲ್ಲ, ರಾಮ. ಈ ಸರೋವರದಲ್ಲಿ ಸ್ನಾನಮಾಡುವುದು ಆವಶ್ಯಕ. ಈಜು ಬರುವುದಿಲ್ಲವಾದುದರಿಂದ ರಾಮದಾಸನು ದಡದಲ್ಲಿ ಸ್ನಾನ ಮಾಡುವನು. ಈಜು ಬರುವ ನೀನು ನೀರಿನೊಳಕ್ಕೆ ಧುಮಿಕಿ ಚನ್ನಾಗಿ ಈಜಬೇಕು. ನೀನು ಇನ್ನೂ ಕಿರಿಯ; ಪಟುವಾದ ತರುಣ. ಅನುಮಾನಿಸಲು ಕಾರಣವಿಲ್ಲ. ನಡಿ" ಎಂದು ಬಲವಂತ ಮಾಡಿದನು.

ರಾಮಚರಣದಾಸನು ತನ್ನ ಮೈಯನ್ನು ಮುಚ್ಚಿದ್ದ ಅಚ್ಚುಕಟ್ಟಾದ ಬೆಚ್ಚನೆ ಬಟ್ಟೆಗಳನ್ನು ಇಷ್ಟವಿಲ್ಲದೆ ತೆಗೆದನು. ರಾಮದಾಸನೂ ತನ್ನ ಮೇಲಿದ್ದ ಅಲ್ಪ ವಸ್ತ್ರವನ್ನು ತೆಗೆದಿಟ್ಟನು. ತಾನು ಮೊದಲು ನೀರಿನೊಳಗೆ ನಡೆದುಹೋಗಿ ಎದೆಮಟ್ಟಕ್ಕೆ ನೀರು ಬರುವ ಆಳ ಬಂದಾಗ ರಾಮಚರಣದಾಸನನ್ನು "ಹಾರು" ಎಂದು ಹೇಳಿದನು. ರಾಮಚರಣದಾಸನು ನೀರಿನೊಳಕ್ಕೆ ಹಾರಿ ಐದು ನಿಮಿಷಗಳಕಾಲ ಈಜಾಡಿ ದಡಕ್ಕೆ ಬಂದನು. ರಾಮದಾಸನು ಮೂರು ಸಲ ಮುಳುಗಿ ಹಿಂದಕ್ಕೆ ಬಂದನು. ಪಂಡಿತರು ತಮ್ಮ ಒರಟಾದ ವಸ್ತ್ರಗಳಿಂದ ರಾಮದಾಸನ ಶರೀರವನ್ನು ಉಜ್ಜಿ ಒರಸಲು ಕಾದಿದ್ದರು.

ನಂತರ ಯಾತ್ರಿಕರು ಮುಂದುವರಿದು ಸಾಯಂಕಾಲಕ್ಕೆ ಪಂಚತಾರಣಿಯನ್ನು ಸೇರಿದರು. ಪಂಚತಾರಣಿ ಶುಭ್ರವರ್ಣದ ಮಂಜುಗಡ್ಡೆಯ ಪದರಗಳಿಂದ ಆವೃತವಾಗಿ, ಎತ್ತರವಾದ ಬೆಟ್ಟಗಳ ಮಧ್ಯೆ ಇರುವ ಒಂದು ಸಮನಾದ ತಪ್ಪಲು. ಇಲ್ಲಿ ನದಿ ಮಂದಗಾಮಿನಿಯಾಗಿ ಪ್ರವಹಿಸುತ್ತದೆ. ಯಾತ್ರಿಕರು ನದಿಯ ದಡದಲ್ಲಿ ತಮ್ಮ ಡೇರೆಗಳನ್ನು ಹೊಡೆದರು. ಇಲ್ಲಿ ಒಂದು ವಿಷಯವನ್ನು ಹೇಳಬೇಕು. ಈ ಎತ್ತರ ಪ್ರದೇಶಗಳಲ್ಲಿ ಸೂರ್ಯರಶ್ಮಿ ಬೂದು ಬಣ್ಣದ ದಟ್ಟವಾದ ಮಂಜಿನ ತುಂತುರುಗಳಲ್ಲಿ ಮುಸಕುಮುಸಕಾಗಿ ಕಾಣಬರುತ್ತಿದ್ದಿತು. ಗಾಳಿ ಕಡಿಯುವ ಚಳಿಯಿಂದ ತುಂಬಿದ್ದಿತು. ಮಂಜು ನೆಲದ ಶಬಲವಾದ ಹಸುರಿಗೂ ಹಿಮ ಕವಿದಿರುವ ಬೆಟ್ಟಗಳಿಗೂ ವಿಲಕ್ಷಣವಾದ ಬೆಡಗನ್ನು ಕೊಡುತ್ತಿದ್ದಿತು.

ಸಾಯಂಕಾಲ ಐದು ಗಂಟೆಯ ಹೊತ್ತಿಗೆ ಪೆಷಾವರಿನ ಶಂಭುನಾಥನೆಂಬ ತರುಣ ಅಶ್ವಾರೋಹಿ ಬಂದಿಳಿದನು. ಅವನು ಆಂಗ್ಲರ ಮಾದರಿ ಉಡುಪನ್ನು ಧರಿಸಿದ್ದನು. ರಾಮದಾಸನು ಪ್ರಕೃತಿ ಸೌಂದರ್ಯದಲ್ಲಿ ಮಗ್ನನಾಗಿ ಬೆಟ್ಟಗಳ ಮೇಲಿನ ಮಂಜಿನದೃಶ್ಯವನ್ನು ಈಕ್ಷಿಸುತ್ತ ಒಂದು ಕಡೆ ನಿಂತಿದ್ದನು. ಶಂಭುನಾಥನು ಆ ಬಳಿಗೆ ಬಂದನು.

ಆಗ ರಾಮದಾಸನು ತನ್ನ ಭಾವನೆಯನ್ನು ಅನಿವಾರ್ಯವಾಗಿ ವ್ಯಕ್ತಪಡಿಸ ಬೇಕಾಯಿತು.

"ಎಷ್ಟು ಆಶ್ಚರ್ಯಕರವಾದ ದೃಶ್ಯವಿದು ! ಭಗವಂತನ ಈ ವ್ಯಕ್ತ ಸ್ವರೂಪ ಎಷ್ಟು ಭವ್ಯವಾಗಿದೆ ! **ಅವನು** ನಾನಾ ರೂಪಗಳನ್ನು ತಾಳಿದ್ದಾನೆ. ಆದರೆ ಈಗ ನಮ್ಮ ಕಣ್ಣಿಗೆ ಕಾಣುವ ಈ ದೃಶ್ಯವು ಕೇವಲ ವೈಭವದ್ದಾಗಿದೆ! ಸುತ್ತಲೂ ನೋಡು. ಎಲ್ಲಿಯೂ **ಅವನೇ**. ಮಂಜಿನಲ್ಲಿ, ಬೆಟ್ಟದಲ್ಲಿ, ನದಿಯಲ್ಲಿ, ಹಸುರ ತಪ್ಪಲಲ್ಲಿ........"

ರಾಮದಾಸನು ಸುಮ್ಮನಾದನು. ಯೋಚನೆಗಳು ಮಾಯವಾಗಿ, ಮಾತು ನಿಂತು ಸೋತುವು. ಆ ದೃಶ್ಯ ಶುದ್ಧಾಂಗವಾಗಿ ಅವರ್ಣನೀಯ. ರಾಮದಾಸನ ಹೃದಯದಿಂದ ಉದ್ಭವಿಸಿದ ಭಾವನೆಗಳ ಉದ್ಗಾರವನ್ನು ಆಲಿಸಿ ಶಂಭುನಾಥ ನಲ್ಲೂ ಮಾರ್ಪಾಡಾಯಿತು. ಇದುವರೆಗೂ ನಿರ್ವರ್ಣವಾಗಿ ಕಾಂತಿಹೀನವಾಗಿದ್ದ ಅವನ ಮುಖದಲ್ಲಿ ಹರ್ಷತೋರಿ ಒಂದು ಮಂದಸ್ಮಿತ ನಲಿಯಿತು.

ಅವನು "ಸ್ವಾಮಿಜಿ, ನಿಮ್ಮ ದರ್ಶನ ಪಡೆದ ನಾನು ಭಾಗ್ಯಶಾಲಿ. ನಾನು ಮನಸ್ಸಿನ ದುಗುಡದಿಂದ ಖಿನ್ನನಾಗುತ್ತಿದ್ದೆ. ಇದು ರೋಗ ಬರುವುದರ ಲಕ್ಷಣ ವೆಂದು ಹೆದರಿದ್ದೆ. ನಿಮ್ಮ ದರ್ಶನವೂ ನಿಮ್ಮ ಉತ್ತೇಜಕವಾಣಿಯೂ ನನ್ನನ್ನು ಪಾತಾಳದಿಂದ ಮೇಲಕ್ಕೆ ಎತ್ತಿದುವು. ಈಗ ನನಗೆ ಹುಮ್ಮಸ್ಸು ಉಂಟಾಗಿದೆ, ಸಂತೋಷವನ್ನು ಅನುಭವಿಸುತ್ತಿದ್ದೇನೆ. ನಿಮ್ಮ ದರ್ಶನ ದೊರೆತದ್ದು ನನ್ನ ಪುಣ್ಯ" ಎಂದು ಉದ್ಗರಿಸಿದನು.

ಅನಂತರ ಅವನು ತನ್ನ ತಾಯಿಗೂ ಸ್ನೇಹಿತರಿಗೂ ರಾಮದಾಸನ ಪರಿಚಯ ಮಾಡಿಕೊಟ್ಟನು. ಆ ಮಾತೆ ಪುಣ್ಯಾತ್ಮಳು. ಎಲ್ಲರೂ ರಾಮದಾಸನ ಮೇಲೆ ಪ್ರೀತಿ ದಯೆಗಳನ್ನು ಮಳೆಗರೆದರು.

### (iii) ಕಷ್ಟಕ್ಕೆ ಈಡಾದ ಹೆಂಗಸು-ಅಮರನಾಥ ಗುಹೆ

ಪಂಚತಾರಣಿ ಅಮರನಾಥದೇವಾಲಯದಿಂದ ನಾಲ್ಕು ಮೈಲಿ ದೂರ ಮಾತ್ರವಿದೆ. ಯಾತ್ರಿಕರು ಸಾಧಾರಣವಾಗಿ ಪಂಚತಾರಣಿಯಲ್ಲಿ ಬಿಡಾರ ಮಾಡಿ ಅಮರನಾಥನ ದರ್ಶನಕ್ಕಾಗಿ ಕೆಲವು ಗಂಟೆಗಳಕಾಲ ಹೋಗಿ ಪಂಚತಾರಣಿಯಲ್ಲಿ ರುವ ತಮ್ಮ ಡೇರೆಗಳಿಗೆ ಹಿಂತಿರುಗುತ್ತಾರೆ. ರಾತ್ರಿ ಕಳೆಯಿತು. ಡಾಕ್ಟರ ಡೇರೆ ಯಲ್ಲಿರುವವರು ಬೆಳಿಗ್ಗೆ ಸುಮಾರು ಒಂಬತ್ತು ಗಂಟೆಗೆ ಹೊರಟು ಆ ಚಿಕ್ಕ

ಪ್ರವಾಸ ಮಾಡಿ ಮಧ್ಯಾಹ್ನ ಒಂದು ಗಂಟೆಯ ಹೊತ್ತಿಗೆ ಹಿಂತಿರುಗಿ, ಆ ದಿನವೇ ಪಂಚತಾರಣಿಯಿಂದ ಹೊರಟು ಅದೇ ರಾತ್ರಿ ಪಾವ್‌ಜಿನ್ನನ್ನು ದಾಟಬೇಕೆಂದು ನಿಷ್ಕರ್ಷೆಯಾಯಿತು.

ಎಂಟು ಗಂಟೆ ಸಮಯದಲ್ಲಿ ಡಾಕ್ಟರ ಡೇರೆಯಲ್ಲಿ ಒಂದು ಪ್ರಸಂಗ ನಡೆಯಿತು. ಅದನ್ನು ಇಲ್ಲಿ ತಿಳಿಸಬೇಕಾಗಿದೆ. ಡಾಕ್ಟರೂ ಡೇರೆಯಲ್ಲಿದ್ದ ಪಂಡಿತರೂ ಸರದಿಯ ಮೇರೆ ರಾಮದಾಸನ ಕಾಲುಗಳನ್ನು ಒತ್ತುವುದು ವಾಡಿಕೆ. ಈ ಸೇವೆಯನ್ನು ಮಾಡುವುದರಲ್ಲಿ ಅವರಿಗೆ ತುಂಬಾ ಆನಂದ. ಪಂಚತಾರಣಿಯಲ್ಲಿ ರಾಮದಾಸನು ಡೇರೆಯಲ್ಲಿ ಕುಳಿತಿದ್ದಾಗ ಡಾಕ್ಟರು ಒಂದು ಕಾಲನ್ನೂ, ಇನ್ನೊಬ್ಬ ಸ್ನೇಹಿತನು ಇನ್ನೊಂದು ಕಾಲನ್ನೂ ಒತ್ತುವುದರಲ್ಲಿ ತೊಡಗಿದ್ದರು. ಈ ಸಮಯದಲ್ಲಿ ಕೃಶಾಂಗಿಯಾದ, ನಿರ್ಬಲಳಾದ, ಒಬ್ಬ ವೃದ್ಧ ಯಾತ್ರಿಕಳು ಡೇರೆಯ ಬಾಗಿಲಿಗೆ ಬಂದು ಆರ್ತಳಾಗಿ ಕೂಗಿದಳು. ಅವಳ ಮೈಮೇಲೆ ತೆಳ್ಳನೆ ಒಂದು ಹತ್ತಿಯ ಸೀರೆ ಮಾತ್ರ ಇದ್ದುದರಿಂದ ಚಳಿಯಿಂದ ಶರೀರಾದ್ಯಂತವೂ ನಡುಗುತ್ತಿದ್ದಿತು. ಏನಾದರೂ ಬೆಚ್ಚನೆ ಬಟ್ಟೆ ಬೇಕೆಂದು ಅವಳು ಬಹಳ ದೈನ್ಯದಿಂದ ಬೇಡಿದಳು. ಅವಳು ಅನೇಕ ಸಲ ಬೇಡಿದರೂ ಯಾರೂ ಕಿವಿಗೆ ಹಾಕಿಕೊಳ್ಳಲಿಲ್ಲ. ದುಃಖಿತೆಯಾದ ಆ ಬಡವಳಿಗೆ ಒಂದು ಉಣ್ಣೆಯ ಬಟ್ಟೆಯನ್ನು ಕೊಡುವುದಕ್ಕೆ ಯಾರೂ ಮನಸ್ಸು ಮಾಡಲಿಲ್ಲ. ಈ ಸ್ನೇಹಿತರು ಚಳಿ ತಡೆಯುವುದಕ್ಕೆ ಬೇಕಾದಷ್ಟು ಬಟ್ಟೆ, ಹೊದಿಕೆಗಳನ್ನು ತಂದಿದ್ದರಾದುದರಿಂದ ಯಾರಾದರೂ ಆ ಭಿಕ್ಷುಕಳಿಗೆ ಅವಳ ಕಷ್ಟದ ಗಳಿಗೆಯಲ್ಲಿ ಸಹಾಯಮಾಡಬಹುದೆಂದು ರಾಮದಾಸನು ಎಣಿಸಿದನು.

ಆಕೆಗೆ ಸಹಾಯಮಾಡಬೇಕೆಂದು ರಾಮದಾಸನು ಸ್ನೇಹಿತರಿಗೆ ಸೂಚಿಸಿದಾಗ ಅವರು ಒಬ್ಬರಾದರೂ ತಪ್ಪದೆ ಅದು ಆಗುವುದಿಲ್ಲವೆಂದು ಹೇಳಿದರು. ಕೊಡಬಹುದಾದ ಹೆಚ್ಚಿನ ಬಟ್ಟೆ ಯಾವುದೂ ಇಲ್ಲ ಎಂಬ ನೆವ ಹೇಳಿದರು. ರಾಮದಾಸನಿಗೆ ದಾನವಾಗಿ ಬಂದಿದ್ದ, ಡಾಕ್ಟರ ವಶದಲ್ಲಿದ್ದ, ನಿಲುವಂಗಿಯ ಜ್ಞಾಪಕವಾಯಿತು. ಅದನ್ನು ಆಕೆಗೆ ಕೊಡಬೇಕೆಂದು ರಾಮದಾಸನು ಡಾಕ್ಟರನ್ನು ಬೇಡಿದನು. ಇದಕ್ಕೂ ಕೂಡ ಎಲ್ಲರೂ ಪ್ರತಿಭಟಿಸಿದರು.

ಡಾಕ್ಟರು "ಸ್ವಾಮಿಜಿ, ನಿಲುವಂಗಿ ನಿಮ್ಮ ಉಪಯೋಗಕ್ಕಾಗಿ ಇದೆ. ಇದನ್ನು ಆಕೆಗೆ ಕೊಡಲಾರೆ" ಎಂದು ಉತ್ತರಕೊಟ್ಟನು.

ರಾಮದಾಸನು ಡಾಕ್ಟರ ಕಡೆ ತಿರುಗಿ, "ಒಳ್ಳೇದು, ಸ್ನೇಹಿತರೆ. ರಾಮದಾಸನ ಕಾಲನ್ನು ಒತ್ತಲು ಏಕೆ ನಿಮಗಿಷ್ಟು ಆಶೆ? ಅದರಿಂದ ನಿಮಗೇನು ದೊರೆಯುತ್ತದೆ?" ಎಂದು ಪ್ರಶ್ನಿಸಿದನು.

ಡಾಕ್ಟರು "ನಿಮ್ಮ ಕಾಲನ್ನು ಒತ್ತುವುದರಿಂದ ನನಗೆ ಸುಖ ಕಾಣುತ್ತದೆ" ಎಂದು ಉತ್ತರಕೊಟ್ಟನು.

ರಾಮದಾಸನು "ನಿಮಗೆ ಸಂತೋಷವಾಗುತ್ತದೆಂದು ತಿಳಿದು, ಈ ಸೇವೆಯನ್ನು ಮಾಡಲು ನಿಮಗೆ ರಾಮದಾಸನು ಅನುಮತಿಯನ್ನು ಕೊಟ್ಟಿದ್ದಾನೆ. ರಾಮದಾಸನಿಗಿಂತಲೂ ಹೆಚ್ಚಾಗಿ ಈ ಬಡವಳಿಗೆ ಬೆಚ್ಚನೆ ಬಟ್ಟೆಯ ಅವಶ್ಯಕತೆ ಇದ್ದರೂ, ರಾಮದಾಸನ ಇಷ್ಟದಂತೆ, ನಿಲುವಂಗಿಯನ್ನು ಆಕೆಗೆ ಕೊಟ್ಟು, ರಾಮದಾಸನಿಗೆ ಹರ್ಷವನ್ನುಂಟುಮಾಡುವುದು ನಿಮಗೆ ಬೇಕಾಗಿಲ್ಲ" ಎಂದನು.

ಹೀಗೆಂದು ರಾಮದಾಸನು ಕಾಲುಗಳನ್ನು ತಟಕ್ಕನೆ ಹಿಂದಕ್ಕೆಳೆದುಕೊಂಡು ಆ ಸ್ನೇಹಿತರಿಗೆ ಈ ಮಾತನ್ನು ಹೇಳಿ ಮೂದಲಿಸಿದನು.

"ಈ ಬಡವಳ ಕಷ್ಟವನ್ನು ನಿವಾರಿಸುವುದರ ಮೂಲಕ ರಾಮದಾಸನಿಗೆ ಸಂತೋಷವನ್ನುಂಟುಮಾಡಲು ನೀವು ಒಪ್ಪದಿರುವುದರಿಂದ, ರಾಮದಾಸನೂ ಈ ಸೇವೆಯಿಂದ ನಿಮಗೆ ಉಂಟಾಗುವ ಸಂತೋಷವನ್ನೀಯಲು ನಿರಾಕರಿಸಿದ್ದಾನೆ."

ರಾಮದಾಸನ ಈ ನಿಲುವಿನಿಂದ ಡಾಕ್ಟರ ಮೇಲೂ ಅವನ ಸ್ನೇಹಿತರ ಮೇಲೂ ಅವನು ಅಪೇಕ್ಷಿಸಿದ್ದ ಪರಿಣಾಮವಾಯಿತು. ಡಾಕ್ಟರು ತಕ್ಷಣ ಆ ನಿಲುವಂಗಿಯನ್ನು ಮುಚ್ಚಿಟ್ಟಿದ್ದ ಸ್ಥಳದಿಂದ ತಂದು ರಾಮದಾಸನ ಮೇಲೆ ಎಸೆದನು. ರಾಮದಾಸನು ಕೂಡಲೇ ಅದನ್ನು ಆ ವೃದ್ಧ ಭಿಕ್ಷುಕಳಿಗೆ ಕೊಟ್ಟನು.

"ಈಗ ನೀವು ರಾಮದಾಸನ ಕಾಲುಗಳನ್ನು ನಿಮ್ಮ ಇಷ್ಟಬಂದಷ್ಟು ಒತ್ತಬಹುದು" ಎಂದು ರಾಮದಾಸನು ಮುಡಿಸಿಕೊಂಡಿದ್ದ ಕಾಲುಗಳನ್ನು ನೀಡಿದನು. ನಂತರ ಅವರು ಸೇವೆಗೆ ಆರಂಭಿಸಿದರು.

ಸ್ವಲ್ಪ ಹೊತ್ತಿನ ಮೇಲೆ ಇವರು ಅಮರನಾಥನ ದರ್ಶನಕ್ಕೆ ಹೊರಟರು. ಬೆಟ್ಟದ ಅಂಚಿನಲ್ಲಿ ಸುತ್ತಿಕೊಂಡು ಹೋಗುತ್ತಿದ್ದ, ಕಿರಿದಾದ ಒಂದು ಓಣಿಯಲ್ಲಿ ನಾಲ್ಕು ಮೈಲಿಗಳಷ್ಟು ನಡೆದು, ಇವರು ಬಯಲಾದ ಇಡಗುತಡಗಾದ ಕಲ್ಲುಗುಂಡಿನ ತಪ್ಪಲನ್ನು ಸೇರಿದರು. ಅದರ ಬಲಗಡೆ ನದಿಹರಿಯುತ್ತಿದೆ. ಎಡಗಡೆ ಬೆಟ್ಟದ ಮಧ್ಯೆ ಒಂದು ದೊಡ್ಡ ಡೊಗರು ಬಾಯಿ ಬಿಟ್ಟುಕೊಂಡಿದೆ. ರಾಮದಾಸನಿಗೆ ರಾಮಚರಣದಾಸನು ಕಣ್ಮರೆಯಾದನು. ಹದಿಮೂರು ಸಾವಿರಕ್ಕೆ ಮೇಲ್ಪಟ್ಟದೆಂದು ಗಣತಿಯಾದ ಆ ಮಹತ್ತರವಾದ ಗೊಂದಲಗೊಂಡ ಯಾತ್ರಿಕರ ಸಂದಣಿಯಲ್ಲಿ ಅವನು ತಪ್ಪಿಹೋದನು.

ನದಿಯಲ್ಲಿ ಸ್ನಾನಮಾಡಿ ರಾಮದಾಸನು ಗುಹೆಗೆ ಹೋದನು. ಗುಹೆ ಬೆಟ್ಟದಲ್ಲಿ ಅಗಲವಾಗಿ ಬಾಯಿ ತೆರೆದುಕೊಂಡಿರುವ ಬೃಹದಾಕಾರದ ಒಂದು ಸಹಜವಾದ ಡೊಗರು. ಅದರಲ್ಲಿ ಆಗಲೇ ನೂರಾರು ಜನ ಯಾತ್ರಿಕರು ಸೇರಿದ್ದರು. ಪೂಜೆಮಾಡುವ ಸ್ಥಳದಲ್ಲಿ ಹಿಮಗಡ್ಡೆಯ ಒಂದು ಶಿವಲಿಂಗವಿದೆ. ಯಾತ್ರಿಕರು ಅರ್ಪಿಸಿದ್ದ ವಸ್ತ್ರ ಮುಂತಾದವುಗಳಿಂದ ಮೂರ್ತಿ ಮುಚ್ಚಿಹೋಗಿದ್ದುದರಿಂದ ರಾಮದಾಸನಿಗೆ ಅದರ ದರ್ಶನವಾಗಲಿಲ್ಲ. ಶಿವಲಿಂಗದ ಎಡಬಲಗಳಲ್ಲಿ ದೊಡ್ಡ ಮಂಜಿನ ಗಡ್ಡೆಗಳಿವೆ. ಇವು ಪಾರ್ವತಿ ಮತ್ತು ಗಣೇಶನ ಪ್ರತೀಕಗಳು. ಶಿವನ

ಮೂರ್ತಿ ಮೊದಲ ಪಕ್ಷದಲ್ಲಿ ಚಂದ್ರನು ಬೆಳದಂತೆ ವೃದ್ಧಿಯಾಗುತ್ತದೆಂದೂ ಅದು ಕಿರಿದಾದಂತೆ ತಾನೂ ಗಾತ್ರದಲ್ಲಿ ಕುಗ್ಗುತ್ತದೆಂದೂ ಹೇಳುವುದನ್ನು ರಾಮದಾಸನು ಕೇಳಿದ್ದಾನೆ. ದೇವಸ್ಥಾನದ ಒರಟಾದ ಕಲ್ಲುಛಾವಣಿಯ ಅಡಿಯಲ್ಲಿ ಎರಡು ಬಿಳಿಯ ಪಾರಿವಾಳಗಳು ಆಡುತ್ತಿದ್ದುದು ರಾಮದಾಸನಿಗೆ ಕಂಡಿತು. ಈ ಸಂಬಂಧ ವಾಗಿ ಕಥೆಯೊಂದಿದೆ.

ಯುಗಾಂತರದಲ್ಲಿ ಪರಶಿವನೂ ಅವನ ಪತ್ನಿಯೂ ಈ ಗುಹೆಯಲ್ಲಿ ವಾಸ ವಾಗಿದ್ದಾಗ ಆಕೆ ಕೇಳಿಕೊಂಡ ಮೇರೆಗೆ ಅವನು ಆಕೆಗೆ ಅಮರಕಥೆ ಎಂದರೆ ಅಮರತ್ವದ ಗುಟ್ಟಿನ ಕಥೆಯನ್ನು ಹೇಳಿದನಂತೆ. ಈಶ್ವರ ಭಗವಾನನು ಕಥೆ ಹೇಳುತ್ತಿದ್ದ ಹಾಗೆಯೇ ಪಾರ್ವತಿದೇವಿ ನಿದ್ರಾಪರವಶಳಾಗಿ ಮೈಮರೆತಳು. ಅದೇ ಕಾಲದಲ್ಲಿ ಗುಹೆಯ ಛಾವಣಿಯಲ್ಲಿ ಗೂಡು ಮಾಡಿಕೊಂಡಿದ್ದ ಎರಡು ಪಾರಿವಾಳಗಳು ಕಥೆಯನ್ನು ಆದರದಿಂದ ಕೇಳುತ್ತಿದ್ದುವಂತೆ. ಪಾರ್ವತಿ ದೇವಿಗೆ ಪ್ರತಿಯಾಗಿ ಅವು ಹೂಂಗುಟ್ಟುತ್ತಿದ್ದುವಂತೆ. ಅಲ್ಲಿಂದಾಚೆಗೆ ಆ ಪಾರಿವಾಳ ಗಳಿಗೆ ಅಮರತ್ವ ಸಿದ್ಧಿಸಿದುದಲ್ಲದೆ, ಆ ಪಾರಿವಾಳಗಳ ಜಾತಿಯೇ ಹೂಂಗುಟ್ಟುವ ವಾಡಿಕೆಯನ್ನು ಸ್ವೀಕರಿಸಿತು. ಆ ಎರಡು ಪಾರಿವಾಳಗಳೇ ಈಗ ಜೀವಂತ ವಾಗಿವೆಯೆಂದೂ ಗುಹೆಯಲ್ಲಿ ಕಾಣುವವೆಂದೂ ಹೇಳುತ್ತಾರೆ.

ಪರಿಶುದ್ಧ ಪಾವನ ವಾತಾವರಣ, ಸುತ್ತಣ ದೃಶ್ಯಗಳ ವೈಭವ, ಮತ್ತು ಸಾವಿರಾರು ಯಾತ್ರಿಕರ ದರ್ಶನ ಇವು ರಾಮದಾಸನಲ್ಲಿ ಹರ್ಷೋತ್ಕರ್ಷ ತರಂಗ ಗಳನ್ನು ಎಬ್ಬಿಸಿದುವು. ಗುಹೆಯ ಬಾಗಿಲಲ್ಲಿ ರಾಮಚರಣದಾಸನು ಸಿಕ್ಕಿದನು. ಸ್ನಾನದ ವಿಷಯ ಕೇಳಿದಾಗ ಅವನು ತನಗೆ ಆಗಲೇ ಸ್ನಾನವಾಯಿತೆಂದು ತಿಳಿಸಿದನು.

ಸ್ನಾನ ಮತ್ತು ದರ್ಶನಗಳನ್ನು ಮುಗಿಸಿಕೊಂಡು ಯಾತ್ರಿಕರ ತಂಡ ಪಂಚ ತಾರಣಿಯ ಪಾಳ್ಯಕ್ಕೆ ಹಿಂತಿರುಗಿತು. ಡಾಕ್ಟರು ತನ್ನ ಸಿಬ್ಬಂದಿಯೊಡನೆ ಬೆಟ್ಟ ದಿಂದ ಇಳಿದು ಹಿಂದಕ್ಕೆ ಪ್ರಯಾಣ ಮಾಡಿದನು. ಇವರು ಕತ್ತಲಾಗುವುದಕ್ಕೆ ಮುಂಚೆ ವಾವ್‌ಜಿನ್ನಿಗೆ ಆಚೆ ಒಂದು ಗುಡ್ಡದ ಪಕ್ಕದ ತಗ್ಗಿನಲ್ಲಿ ಬಿಡಾರ ಮಾಡಿ ದರು. ಇಲ್ಲಿ ಡಾಕ್ಟರಿಗೆ ಒಬ್ಬ ಸಾಧು ಚಳಿ ತಡೆಯಲಾರದೆ ವಾವ್‌ಜಿನ್ನಿನಲ್ಲಿ ದೇಹ ತ್ಯಾಗ ಮಾಡಿದನೆಂಬ ವಾರ್ತೆ ಮುಟ್ಟಿತು. ಇಷ್ಟು ಜನ ಯಾತ್ರಿಕರಲ್ಲಿ ಮರಣಕೆ ತುತ್ತಾದವನು ಈ ಒಬ್ಬನೇ.

ಬೆಳಗಿನ ಮುಂಜಾನೆ ಇವರು ಮತ್ತೆ ಬೆಟ್ಟವನ್ನಿಳಿಯಲು ಪ್ರಾರಂಭಿಸಿದರು. ಇಲ್ಲಿಂದ ಮುಂದೆ ದಾರಿ ಸಹಜವಾಗಿ ಒಂದೇ ಸಮನೆ ಇಳುವರಿಯಾಗಿದ್ದು ರಾಮ ದಾಸನು, ರಾಮಚರಣದಾಸನು ಹಿಂದೆಯೇ ಬರುತ್ತಿರಲು ಹುಚ್ಚು ವೇಗದಿಂದ ಓಡುತ್ತಾ ಆಸ್ಪತ್ರೆ ಪರಿವಾರ ಬರುವುದಕ್ಕೆ ಎಷ್ಟೋ ಮುಂಚೆ ಫೇಲ್‌ಗಾಮುವನ್ನು ಮುಟ್ಟಿದನು.

ಈಸಲ ಬೇರೆ ಸ್ಥಳದಲ್ಲಿ ಡೇರೆಯನ್ನು ಹೊಡೆದಿದ್ದುದರಿಂದ ಮಿಷನರಿ ರಾಮದಾಸನ ನೆಲೆಯನ್ನು ಹಿಡಿಯದೆ ಹೋದನು. ಇಲ್ಲವೆ ರಾಮದಾಸನ ವಿಷಯವನ್ನೂ, ಕ್ರೈಸ್ತ ಪ್ರಾರ್ಥನಾಲಯದಲ್ಲಿ ರಾಮದಾಸನು ಉಪನ್ಯಾಸಮಾಡ ಬೇಕೆಂಬುದನ್ನೂ ತೀರಾ ಮರೆತನು. ಅಂತು ಅವನು ರಾಮದಾಸನನ್ನು ಸಂಧಿಸಲಿಲ್ಲ. ದೇವರ ಇಚ್ಛೆ!

ಈಗ ವೇಗವಾಗಿ ಪ್ರಯಾಣ ನಡೆಸಿದ್ದರಿಂದ ಮಾರನೆ ಸಾಯಂಕಾಲಕ್ಕೆ ಯಾತ್ರಿಕರು ಶ್ರೀನಗರವನ್ನು ಸೇರಿದರು. ರಾಮದಾಸನೂ ರಾಮಚರಣದಾಸನೂ ನೇರವಾಗಿ ಜಾನಕೀನಾಥನ ಮನೆಗೆ ಹೋದರೆಂಬುದನ್ನು ಹೇಳಬೇಕಾಗಿಲ್ಲ.

ಜಾನಕೀನಾಥನ ಮನೆಯ ಸುಮಾರು ಎಲ್ಲರೂ ಜೊತೆಯಾಗಿ, ಚೆನಾರ್ ಬಾಗನ್ನು ನೋಡಲು ಹೊರಟು, ಡಾಲ್ ಸರೋವರವನ್ನು ದೋಣಿಯಲ್ಲಿ ದಾಟಿ ಚೆನಾರ್‌ಬಾಗನ್ನು ಮುಟ್ಟಿದರು. ಈ ಉದ್ಯಾನದಲ್ಲಿ ರಾಕ್ಷಸಾಕಾರದ ಚೆನಾರ್ ಮರಗಳು ತುಂಬಿವೆ. ಸರೋವರಕ್ಕೆ ಎದುರಾಗಿ ನಿಂತರೆ ಈ ಸ್ಥಳದಿಂದ ಕಾಣುವ ನೋಟ ಭವ್ಯವಾಗಿದ್ದಿತು. ದೂರದಲ್ಲಿ ಮಸಕು ನೀಲದ ಬೆಟ್ಟಗಳು, ಚಲನೆ ಇಲ್ಲದೆ ನಿಂತಿರುವ ಅಪಾರವಾದ ನೀರಿನ ರಾಶಿ, ಮೇಲೆ ಮೋಡವಿಲ್ಲದ ಸ್ವಚ್ಛವಾದ ತೆರಪಾದ ಆಕಾಶ, ಇವುಗಳ ಮಿಳಿತ ಮನಮೋಹಕವಾದ ಚಿತ್ರವಾಗಿದ್ದಿತು. ರಾಮದಾಸನು ಚೆನಾರ್‌ಮರಗಳ ತಂಪಾದ ನೆರಳಿನಲ್ಲಿ ಸ್ವಲ್ಪ ಹೊತ್ತು ಓಡಿ ಕುಣಿದು ಕುಪ್ಪಳಿಸುತ್ತಿದ್ದು, ತಟಕ್ಕನೆ ಅಲ್ಲಿ ಕಾಣಿಸಿದ ಉದ್ದವಾಗಿ ಬೆಳದಿದ್ದ ಒಂದು ತೆಳುವಾದ ಚೆನಾರ್ ಮರವನ್ನು ಹತ್ತಿದನು. ರಾಮಚರಣದಾಸನೂ ಹಿಂದೆಯೇ ಹತ್ತಿದನು.

ರಾಮದಾಸನು ಕಪಿಯಂತೆ ಅತಿ ಜಾಗ್ರತೆಯಲ್ಲಿ ಮರವನ್ನು ಹತ್ತಿ ಹೋಗು ತ್ತಿದ್ದ ಹಾಗೆ ಜಾನಕೀನಾಥನ ಮನೆಯವರು ಆಶ್ಚರ್ಯದಿಂದ ಬಾಯಿಬಿಟ್ಟುಕೊಂಡು ನೋಡುತ್ತ ನಿಂತಿದ್ದರು. ಈ ಆಶ್ಚರ್ಯದೊಂದಿಗೆ 'ವಿಚಿತ್ರವಾದ ಸಂತೋಷವೂ ಬೆರೆತಿದ್ದಿತು. ರಾಮದಾಸನ ಅವಿಶ್ರಾಂತವಾದ ಚಟುವಟಿಕೆಯ ಈ ಪ್ರದರ್ಶನ ವನ್ನು ನೋಡುವೆವೆಂದು ಅವರು ನಿರೀಕ್ಷಿಸಿರಲಿಲ್ಲ. ವೃಕ್ಷದ ತುಟ್ಟ ತುದಿಯನ್ನು ಸೇರಿದಾಗ ರಾಮದಾಸನು "ಹರಿಃ ಓಂ" ಎಂದು ಗಂಟಲೆತ್ತಿ ಮೂರು ಬಾರಿ ಕೂಗಿದನು. ಈ ಕೂಗನ್ನು ಕೇಳಿದವರ ಮೈ "ಜುಂ" ಎಂದಿತು.

ಮರದಿಂದ ಕೆಳಕ್ಕೆ ಇಳಿದು ನಂತರ ರಾಮದಾಸನು, ರಾಮಚರಣದಾಸನು ಹಾಕಿ ತೋರಿಸುತ್ತಿದ್ದ, ಆಸನಗಳನ್ನು ನೋಡಿದನು. ರಾಮದಾಸನನ್ನು ಅಗಲಿದ್ದ ಕಾಲದಲ್ಲಿ ರಾಮಚರಣದಾಸನು ಸುಮಾರು ಮೂವತ್ತು ವಿಧವಾದ ಆಸನಗಳನ್ನು ಕಲಿತಿದ್ದನು. ಅಭ್ಯಾಸಬಲದಿಂದ ಆತನ ದೇಹ ವಿವಿಧ ಆಕಾರಗಳನ್ನು ತಳೆಯು ವಂತೆ ಮೃದುವಾಗಿರುವುದು ಸಗ್ಗುತ್ತಿರುವುದು ಈ ಪ್ರದರ್ಶನಗಳಿಂದ ಕಾಣ ಬಂದಿತು. ಅವನು ಶರೀರವನ್ನು ಎಷ್ಟೋ ರೀತಿಯಲ್ಲಿ ಸುಲಭವಾಗಿ ಬಗ್ಗಿಸಿ

ಮುದುರುತ್ತಿದ್ದನು. ಎಲ್ಲರೂ ಈ ಆಟವನ್ನು ತುಂಬಾ ಕುತೂಹಲದಿಂದಲೂ ಸಂತೋಷದಿಂದಲೂ ನೋಡಿದರು. ಸ್ವಲ್ಪ ಫಲಾಹಾರದನಂತರ ಎಲ್ಲರೂ ಅಲ್ಲಿಂದ ಹೊರಟು ಸಾಯಂಕಾಲಕ್ಕೆ ಜಾನಕೀನಾಥನ ಮನೆಗೆ ಬಂದು ಸೇರಿದರು.

---

# ಅಧ್ಯಾಯ ೩೮

## ಶ್ರೀನಗರ

### (i) ರಾಮದಾಸನು ರಾಮನನ್ನೇ ಪ್ರತಿಭಟಿಸುವುದು

ರಾಮದಾಸನು ಬಹಳ ಕಾಲ ಕಾಶ್ಮೀರ ಪ್ರಾಂತದಲ್ಲಿ ನಿಂತುದರಿಂದ ಹಿಂದೂಸ್ಥಾನದ ಇತರ ಭಾಗಗಳ ಸ್ನೇಹಿತರಿಗೆ ಕಳವಳವುಂಟಾಗಿ, ಅವರು ಅವನಿಗೆ ಆ ಪರ್ವತ ಪ್ರಾಂತವನ್ನು ಬಿಟ್ಟು ಸಮಭೂಮಿಗೆ ಬರಬೇಕೆಂದು ಒತ್ತಾಯಪಡಿಸಿ ಕಾಗದಗಳನ್ನು ಸುರಿಸುತ್ತಿದ್ದರು. ತಂತಿಯ ಮೇಲೆ ತಂತಿಗಳನ್ನೂ ಕಳುಹಿಸುತ್ತಿದ್ದರು. ರಾಮದಾಸನು ಶ್ರೀನಗರವನ್ನು ಬಿಟ್ಟುಹೋಗುವುದು ಜಾನಕೀನಾಥನಿಗೂ ಅಮರನಾಥನಿಗೂ ತೀರಾ ಅಸಮ್ಮತ. ರಾಮದಾಸನು ಮುಂದೆ ಕಾಶ್ಮೀರದಲ್ಲೇ ನಿಲ್ಲಬೇಕೆಂದೂ ಅವನು ಹರಿಪರ್ವತ ಅಥವ ಹರವನದ ಬಳಿ ಇರುವುದಕ್ಕೆ ಏರ್ಪಾಡು ಮಾಡುವುದಾಗಿಯೂ ಅವರು ಸೂಚಿಸಿದರು. ಆದರೆ ರಾಮದಾಸನಿಗೆ ರಾವಲ್ಪಿಂಡಿ, ಸಂಯುಕ್ತ ಸಂಸ್ಥಾನ, ಕಾಥೇವಾಡ, ಬೊಂಬಾಯಿ ಮತ್ತು ದಕ್ಷಿಣ ಜಿಲ್ಲೆಗಳ ಸ್ನೇಹಿತರು ತನ್ನನ್ನು ದಕ್ಷಿಣ ದೇಶಕ್ಕೆ ಸೆಳೆಯುತ್ತಿರುವುದು ಕಾಣಬಂದಿತು. ಶ್ರೀನಗರವನ್ನು ಬಿಟ್ಟು ಹೊರಡುವ ಮಾತೆತ್ತಿದಕೂಡಲೆ ಆ ಭಕ್ತಿಪೂರಿತ ಸಹೋದರರು ಅಡ್ಡಿಮಾಡುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಇಂಡಿಯಾದ ಸ್ನೇಹಿತರಿಂದ ರಾಮದಾಸನಿಗೆ ಬರುವ ಕಾಗದಗಳನ್ನು ಬಹು ಒಳ್ಳೆಯ ಉದ್ದೇಶದಿಂದಲೇ ಮುಚ್ಚಿಡಲು ಏರ್ಪಾಡು ಮಾಡಿದರು. ಕಾಗದಗಳನ್ನು ಮುಚ್ಚಿಡುವುದು ಫಲಕಾರಿಯಲ್ಲವೆಂದು ತಿಳಿದ ಮೇಲೆ ಅವರು ಈ ಚೇಷ್ಟೆ ಬಿಡಬೇಕಾಯಿತು.

ಆಗ ತಾಯಿ ರುಕುಮಾಬಾಯಿಯ ಸಂಬಂಧಿಗಳಾದ ಕನ್ನಡ ಜಿಲ್ಲೆಯ ಸಾರಸ್ವತರು ಗೋಪಾಲರಾಯರೂ ಅವರ ಪತ್ನಿ ಗಿರಿಜಾಬಾಯಿಯವರೂ ಶ್ರೀನಗರದಲ್ಲಿದ್ದರು. ರಾಮದಾಸನ ವಿಚಾರ ತಿಳಿದು ಅವನನ್ನು ನೋಡಲು ಬಹಳವಾಗಿ ಅಪೇಕ್ಷಿಸಿದರು. ಗೋಪಾಲರಾಯರು ಅಮರನಾಥಬಕ್ಷಿಗೆ ಕಾಗದ ಬರೆದು, ಕೆಲವು ದಿನಗಳ ಮಟ್ಟಿಗೆ ರಾಮದಾಸನನ್ನು ತಮ್ಮೊಡನೆ ಇಟ್ಟುಕೊಳ್ಳ

ಬೇಕೆಂಬ ಇಷ್ಟವಿರುವುದಾಗಿ ತಿಳಿಸಿದರು. ಈ ಕಾಗದದ ಸಂಗತಿ ಗೊತ್ತಾದರೆ ರಾಮುದಾಸನು ತಮ್ಮನ್ನು ಬಿಟ್ಟುಹೋಗುವನೆಂಬ ಭೀತಿಯಿಂದ ಅಮರನಾಥನು ಈ ಕಾಗದದಲ್ಲಿಯ ಮಾತನ್ನು ಮುಚ್ಚಿಟ್ಟನು.

ಮಧ್ಯೆ ಜಾನಕೀನಾಥನು ಶ್ರೀನಗರದ ಆಚೆ ಉಪನಗರಗಳಲ್ಲಿ ನಿರ್ಜನ ಪ್ರದೇಶದಲ್ಲಿರುವ ಒಬ್ಬ ಕಾಶ್ಮೀರಿಸಾಧುವಿನ ದರ್ಶನಕ್ಕೆ ರಾಮುದಾಸನನ್ನು ಕರೆದುಕೊಂಡು ಹೋಗುವುದಾಗಿ ಹೇಳಿದನು. ಈ ಸಾಧು ಕೆಲವು ವರ್ಷಗಳಿಂದ ಮೌನವ್ರತವನ್ನು ಆಚರಿಸುತ್ತಿದ್ದನಂತೆ. ರಾಮುದಾಸನು ಮೊದಲು ಜಾನಕೀನಾಥ ನೊಡನೆ ಹೋಗಲು ಸಮ್ಮತಿಸಿದನು. ಆದರೆ ನಡುದಾರಿಯಲ್ಲಿ **ರಾಮನು** ಅವನು ಹಿಂತಿರುಗಬೇಕೆಂದು ಬಯಸಿದ್ದರಿಂದ, ಶ್ರೀನಗರಕ್ಕೆ ಹಿಂತಿರುಗಿದನು. ಜಾನಕೀ ನಾಥನೂ ಇತರ ಸ್ನೇಹಿತರೂ ಬಲವಂತ ಮಾಡಿದರೂ ಕೇಳಲಿಲ್ಲ.

ಅದೇ ರಾತ್ರಿ ಅಮರನಾಥನು ಇನ್ನು ಹೆಚ್ಚುಕಾಲ ಗೋಪಾಲರಾಯರ ಕಾಗದದ ವಿಚಾರವನ್ನು ತಿಳಿಸದಿರುವುದು ಸರಿಯಲ್ಲವೆಂದು ಭಾವಿಸಿ, ಅದನ್ನು ಅವನಿಗೆ ಕೊಟ್ಟನು. ರಾಮುದಾಸನು ಈಗ ಖಂಡಿತವಾದ ತೀರ್ಮಾನಕ್ಕೆ ಬಂದನು. "ಜಾನಕೀನಾಥ, ರಾಮುದಾಸನನ್ನು ನೋಡಲು ಬಹು ಇಷ್ಟವೇನೂ ಇಲ್ಲದ ಮೌನಿಸಾಧುವನ್ನು ನೋಡುವುದಕ್ಕೆ ಎತ್ತಲೋ ಹೋಗುವ ಪ್ರತಿಯಾಗಿ ರಾಮದಾಸನು ಗೋಪಾಲರಾಯರ ಆಹ್ವಾನವನ್ನು ಅಂಗೀಕರಿಸಬೇಕೆಂಬುದು **ರಾಮನ** ಇಚ್ಛೆ. ಆದುದರಿಂದ ರಾಮುದಾಸನು ನಾಳೆ ಬೆಳಿಗ್ಗೆ ಗಾಂದರ್‌ಬಲ್‌ಗೆ ಹೊರಡುತ್ತಾನೆ. ಗೋಪಾಲರಾಯರು ಅಲ್ಲಿ ಒಂದು ದೋಣಿಮನೆಯಲ್ಲಿರುವ ರೆಂದು ತಿಳಿದುಬಂದಿದೆ. ರಾಮುದಾಸನು ಅವರೊಂದಿಗೆ ಕೆಲವು ದಿನಗಳು ನಿಲ್ಲುವನು. ರಾಮುದಾಸನ ಮೇಲೆ ಅವರಿಗಿರುವ ಪ್ರೀತಿ ಮತ್ತು ಉತ್ಕಟೇಚ್ಛೆ ಮೌನಿಸಾಧುವಿನ ದರ್ಶನಕ್ಕೆ ಕರೆದುಕೊಂಡು ಹೋಗಬೇಕೆಂಬ ನಿಮ್ಮ ಏರ್ಪಾಡಿಗೆ ಅಡ್ಡಿ ತಂದಿದೆ" ಎಂದನು.

ರಾಮುದಾಸನ ಅಗಲಿಕೆ ಜಾನಕೀನಾಥನಿಗೆ ದೊಡ್ಡ ಪೆಟ್ಟು ಬಿದ್ದಂತೆಯೇ. ರಾಮುದಾಸನ ತೀರ್ಮಾನವನ್ನು ಕೇಳಿ ಅವನಿಗೆ ಗಾಬರಿಯಾಯಿತು. ಅಮರ ನಾಥನಿಗೂ ಮತ್ತು ಪರಿಶುದ್ಧತೆ, ಸಹಜಭಾವ, ಮತ್ತು ಭಕ್ತಿಯಲ್ಲಿ ಆದರ್ಶ ವ್ಯಕ್ತಿ ಗಳಾದ ಜಾನಕೀನಾಥನ ಪುತ್ರಿಯರಿಗೂ, ಜಾನಕೀನಾಥನಂತೆಯೇ ದುಃಖ ವಾಯಿತು. ಆದರೆ ರಾಮುದಾಸನು ತನ್ನೊಡೆಯನ ಆಜ್ಞೆಯನ್ನು ಪರಿಪಾಲಿಸಲೇ ಬೇಕಾಗಿದ್ದಿತು.

ಮಾರನೆಯ ಬೆಳಿಗ್ಗೆ ರಾಮಚರಣದಾಸನೊಡನೆ ರಾಮುದಾಸನು ಗಾಂದರ್ ಬಲ್‌ಗೆ ಹೊರಡಲು ಎದ್ದುನಿಂತನು. ಆದರೆ ಜಾನಕೀನಾಥನು ಬಾಗಿಲಲ್ಲಿ ಅಡ್ಡ ನಿಂತು, "ಸ್ವಾಮಿಜಿ ನೀವು ನನ್ನ ಮನೆಯನ್ನು ಹೇಗೆ ಬಿಟ್ಟು ಹೋಗುತ್ತೀರೋ ನೋಡುತ್ತೇನೆ. ನೀವು ಆಚೆಗೆ ಹೋಗದಂತೆ ನಾನು ಅಡ್ಡಿ ಮಾಡುತ್ತೇನೆ.

ನೀವು ಹೋಗಕೂಡದು. ನಾನೇ ನಿಮ್ಮ **ರಾಮ**. ನನ್ನನ್ನು ಬಿಟ್ಟು ಹೋಗಕೂಡ ದೆಂಬುದು **ರಾಮನ** ಆಜ್ಞೆ" ಎಂದನು.

ರಾಮದಾಸನಿಗೆ ಉತ್ಕಟವಾದ ಸ್ಥಿರನಿಶ್ಚಯ ಉದ್ರೇಕವಾಯಿತು. ಎಷ್ಟು ದೊಡ್ಡ ಯಾವ ಅಡಚಣೆ ಬಂದರೂ ಸಗ್ಗಲು ಅವನಿಗೆ ಒಪ್ಪಿಗೆಯಿಲ್ಲ. ಅವನು ಮಾತನಾಡಿದನು. ಅವನ ವಾಕ್ಯಗಳು ಒಂದೇಸಮನಾಗಿ ಅಧಿಕಾರ ವಾಣಿಯಲ್ಲಿ ಘಂಟಾರವವಾಗಿ ಹೊರಬಿದ್ದುವು.

"ಜಾನಕೀನಾಥ, ರಾಮದಾಸನು ಹೊರಡಬೇಕು. ಅವನು ಅಡ್ಡಿಗೆ ಸಗ್ಗುವನಲ್ಲ. **ರಾಮನೇ** ಎದುರಿಗೆ ನಿಂತು ಅಡ್ಡಿಮಾಡಿದರೂ ಅವನು **ಅವನನ್ನೂ** ಲಕ್ಷಿಸದೆ ಹೋಗುವನು."

ಈ ಮಾತುಗಳೂ ಅವುಗಳ ಉಚ್ಚಾರಣೆಯ ರೀತಿಯೂ ಜಾನಕೀನಾಥನಿಗೆ ರಾಮದಾಸನೊಂದಿಗೆ ಸದರವಾಡಬಾರದೆಂಬ ತಿಳಿವನ್ನು ಉಂಟುಮಾಡಿದುವು. ಅವನು ದಾರಿ ಬಿಟ್ಟು ರಾಮದಾಸನ ಪ್ರಯಾಣಕ್ಕೆ ಸಮ್ಮತಿಸಿದನು. ರಾಮದಾಸನು ಟಾಂಗಾದಲ್ಲಿ ಹೋಗಬೇಕೆಂದು ಅವನು ಸಲಹೆ ಕೊಟ್ಟನು. ಪ್ರಯಾಣ ಹನ್ನೊಂದು ಮೈಲಿ ಮಾತ್ರವಿದ್ದುದರಿಂದ ರಾಮದಾಸನು ನಡೆದು ಹೋಗಲು ಬಯಸಿದನು. ಹಣ್ಣು ಹಾಲನ್ನು ಉಪಾಹಾರವಾಗಿ ಸ್ವೀಕರಿಸಿ ಜಾನಕೀನಾಥ ಮತ್ತು ಅವನ ಮನೆಯವರಿಂದ ಬೀಳ್ಕೊಂಡನು. ರಾಮಚರಣದಾಸನು ಅವನ ಜೊತೆಗೆ ಹೊರಟನು.

ಹಗಲು ಸುಮಾರು ಹನ್ನೊಂದು ಗಂಟೆಯ ಹೊತ್ತಿಗೆ ಇವರು ಸಿಂಧೂ ನದಿಯ ದಡಕ್ಕೆ ಬಂದರು. ಇಲ್ಲಿ ಅನೇಕ ದೋಣಿಮನೆಗಳಿದ್ದುವು. ಕೆಲವು ನಿಮಿಷ ವಿಚಾರಿಸಿ ರಾಮಚರಣದಾಸನು ಗೋಪಾಲರಾಯರ ವಾಸದ ಆ ಮನೆ ದೋಣಿಯನ್ನು ಕಂಡುಹಿಡಿದನು.

ಗೋಪಾಲರಾಯರೂ ಅವರ ಪತ್ನಿಯೂ ರಾಮದಾಸನನ್ನು ಅತ್ಯಂತ ಸಂತೋಷದಿಂದ ಸ್ವಾಗತಿಸಿದರು. ಈ ಮನೆದೋಣಿ ಚೊಕ್ಕವಾದ ಸುಸಜ್ಜಿತ ವಾದ ವಾಸಗೃಹವುಳ್ಳ ನಾವೆ. ಅದರಲ್ಲಿ ಆರು ಕೊಟಡಿಗಳು ಮತ್ತು ಮುಂಭಾಗದ ಕೊಟಡಿಯ ಮೇಲೆ ಒಂದು ಬಿಸಿಲು ಮಚ್ಚು ಇದ್ದುವು. ಕುಳಿತುಕೊಳ್ಳುವ ಕೊಟಡಿ, ಊಟದ ಕೊಟಡಿ, ಎರಡು ಮಲಗುವ ಕೊಟಡಿಗಳು, ಒಂದು ಉಗ್ರಾಣ ಮತ್ತು ಒಂದು ಸ್ನಾನದ ಮನೆ. ಇಷ್ಟು ಇದ್ದುವು. ಕಿಟಕಿಗಳನ್ನು ಅಂದವಾದ ಕೆಲಸದ ಪರದೆಗಳಿಂದ ಅಲಂಕರಿಸಿ ನೆಲದ ಮೇಲೆ ಜಮಖಾನ ಹಾಸಿದ್ದಿತು. ದೋಣಿಗೆ ವಿದ್ಯುಚ್ಛಕ್ತಿ ದೀಪಗಳಿದ್ದುವು. ದೋಣಿಯನ್ನು ಸುತ್ತಣ ಭೂಮುಖದ ಮನೋಹರವಾದ ದೃಶ್ಯಗಳು ಕಾಣುವಂಥ ಒಂದು ಸ್ಥಳದಲ್ಲಿ ಕಟ್ಟಿಹಾಕಿದ್ದಿತು. ಸ್ವಚ್ಛವಾದ ನೀಲಿಬಣ್ಣದ ನೀರಿಗೆ ಪ್ರಸಿದ್ಧಿಯಾದ ಸಿಂಧೂನದಿ ನಿದಾನವಾಗಿ ಸುಳಿಯುತ್ತ ಪ್ರವಹಿಸುತ್ತಿದ್ದಿತು.

ಇಲ್ಲಿ ಒಂದುವಾರ ಇದ್ದ ನಂತರ ಗೋಪಾಲರಾಯರು ಮನೆದೋಣಿಯನ್ನು ಡಾಲ್ ಸರೋವರದ ಮೇಲೆ ಶಂಕರಾಚಾರ್ಯರ ಪರ್ವತದ ಬುಡದಲ್ಲಿರುವ ಗಾಗ್ರಿಬಲ್ ಎಂಬ ಸ್ಥಳದಲ್ಲಿ ನಿಲ್ಲಿಸಲು ಏರ್ಪಡಿಸಿದರು. ರಾಮದಾಸನ ವಿಷಯದಲ್ಲಿ ಗೋಪಾಲರಾಯರೂ ಗಿರಿಜಾಬಾಯಿಯೂ ಅಸದೃಶವಾದ ಆದರಾತಿಶಯಗಳಿಂದ ಮೇರೆಹರಿಯುತ್ತಿದ್ದರು. ಅವರು ಆದರ್ಶ ದಂಪತಿಗಳು, ಒಂದು ಜೊತೆ ಪಾರಿವಾಳ ಹಕ್ಕಿಗಳಂತೆ ಒಬ್ಬರನ್ನೊಬ್ಬರು ಪ್ರೀತಿಸುತ್ತ ಮಕ್ಕಳಂತೆ ಸರಳರಾಗಿ ನಿರ್ದೋಷಿಗಳಾಗಿ ಸರಸವಾಗಿರುತ್ತಿದ್ದರು.

ದೃಢಾಂಗರಾದ ಮುಸ್ಲಿಂ ಅಂಬಿಗರು ದೋಣಿಯನ್ನು ಡಾಲ್ ಸರೋವರದ ಕಡೆಗೆ ನಡೆಯಿಸಿಕೊಂಡು ಹೋಗುತ್ತಿದ್ದಾಗ, ರಾಮದಾಸನು ರಾಮಚರಣದಾಸನೊಂದಿಗೆ ಮೆಲ್ಲಗೆ ಸಂಭಾಷಿಸಲು ಅವಕಾಶ ದೊರೆಯಿತು.

ರಾಮದಾಸನು "ರಾಮ, ನೀನು ರಾಮದಾಸನನ್ನು ಬಿಟ್ಟಿರಲು ಸಿದ್ಧನಾಗಬೇಕು. ಇಷ್ಟರಲ್ಲಿಯೇ ರಾಮದಾಸನು ಸಮಭೂಮಿಯ ಕಡೆ ಹೊರಡುವವನಾಗಿದ್ದಾನೆ. ನೀನು ಈ ಉತ್ಕೃಷ್ಟವಾದ ದೇಶವನ್ನು ಬಿಟ್ಟು ರಾಮದಾಸನೊಂದಿಗೆ ಬರುವುದು ಅವನಿಗೆ ಇಷ್ಟವಿಲ್ಲ. ನೀನು ಕೆಲವು ವರ್ಷ ಕಾಶ್ಮೀರ ದೇಶದಲ್ಲಿ ಇರಬಹುದು. ನಿನ್ನ ಸಾಧನೆಗೆ ಇದು ಸರಿಯಾದಸ್ಥಳ. ನೀನು ಮರಳಿ ರಾಮದಾಸನಿಗೆ ಕಾಣುವಾಗ ನೀನು ಅವನಿಗೆ ಆತ್ಮಜ್ಞಾನದ ಕಾಂತಿಯಿಂದ ಬೆಳಗುವ ಮುಖವನ್ನೂ ಅನಂತತತ್ವದ ದರ್ಶನದಿಂದ ತುಂಬಿರುವ ಕಣ್ಣುಗಳನ್ನೂ ತೋರಬೇಕು. ನಿನ್ನ ಹೃದಯಾಂತರ್ಯಾಮಿಯಾದ ಭಗವಂತನಲ್ಲಿ ಸಂಪೂರ್ಣ ನಂಬಿಕೆ ಇಡು. **ಆತನು** ಈ ಚಳಿರಾಜ್ಯದಲ್ಲಿ ನೀನಿರುವಷ್ಟು ಕಾಲದಲ್ಲಿ ನಿನಗೆ ಬೇಕಾದ ಸೌಕರ್ಯ ಸುಖಗಳನ್ನು ಕಲ್ಪಿಸುವನು" ಎಂದು ಹೇಳಿದನು.

ರಾಮದಾಸನಿಗೇ ಅಂಟಿಕೊಂಡಿದ್ದ ಈ ಹುಡುಗನಿಗೆ ಅವನಿಂದ ಅಗಲಬೇಕೆಂಬ ಭಾವನೆಯಿಂದ ಮರಳಿ ಕಳವಳ ಉಂಟಾದದ್ದು ಕಂಡಿತು. ಅವನು ಗೊಣಗಿದನು; ಅಸಮಾಧಾನಪಟ್ಟನು. ರಾಮದಾಸನ ಸಲಹೆ ಕೊನೆಗೆ ರಾಮಚರಣದಾಸನ ಅಭ್ಯುದಯಕ್ಕೆ ಕಾರಣವಾದ್ದರಿಂದ ಅದರಂತೆ ನಡೆಯುವುದು ಆವಶ್ಯಕವೆಂದು ಅವನನ್ನು ನಂಬಿಸಲು ರಾಮದಾಸನು ತನ್ನ ಸಾಂತ್ವನ ಶಕ್ತಿಯನ್ನೆಲ್ಲ ಬಳಸಿದನು. ಕೊನೆಗೆ ಅವನು ರಾಮದಾಸನ ಸಲಹೆಯಂತೆ ನಡೆಯುವುದಾಗಿ ಒಪ್ಪಿಕೊಂಡನು. ಝೀಲಂ ನದಿಯಲ್ಲಿ ಒಂದು ಆಸ್ಪತ್ರೆಯ ಎದುರಿಗೆ ಎರಡು ದಿವಸ ತಂಗಿದ್ದು ಮನೆ ದೋಣಿಯನ್ನು ಸರೋವರಕ್ಕೆ ನಡೆಸಿ ಗಾಗ್ರಿಬಲ್ ಹತ್ತಿರ ಲಂಗರು ಹಾಕಲಾಯಿತು.

## (ii) ಭಗವಂತನ ಮಹಿಮೆಯನ್ನು ಸರ್ವವಸ್ತುಗಳಲ್ಲೂ ಕಾಣು

ಗಾಗ್ರಿಬಲ್‌ಗೆ ಹೋದ ಕೆಲವು ದಿವಸಗಳ ನಂತರ ರಾಮಚರಣದಾಸನು ಅನಂತನಾಗಕ್ಕೆ ಪ್ರಯಾಣಮಾಡಿದನು. ಆ ಮೇಲೆ ಇವರ ಜೊತೆಗೆ ಒಬ್ಬ ಹೊಸ

ಅತಿಥಿಯೂ ಬಂದು ಸೇರಿದನು. ಈತನು ಒಬ್ಬ ಸಿಖ್ ವಕೀಲನು. ಇವನೂ ದೋಣಿಯಲ್ಲಿ ನಿಂತನು.

ಗೋಪಾಲರಾಯರು ಅಮೃತಸರದ ಖಾಲ್ಸಾ ಕಾಲೇಜಿನ ವೈಸ್‌ಪ್ರಿನ್ಸಿಪಾಲ್ ಆಗಿದ್ದರು. ರಜದಲ್ಲಿ ವಿಹಾರಾರ್ಥವಾಗಿ ಕಾಶ್ಮೀರಕ್ಕೆ ಬಂದಿದ್ದರು. ಅವರೂ ಅವರ ಪತ್ನಿಯೂ ವಾಡಿಕೆಯ ಯಾತ್ರೆಯ ದಿನಗಳಿಗೆ ಒಂದೆರಡು ದಿನ ಮುಂಚಿತವಾಗಿ ಅಮರನಾಥ ಗುಹೆಗೆ ಭೇಟಿಕೊಟ್ಟಿದ್ದರು. ಈ ಕಾರಣದಿಂದ ರಾಮದಾಸನು ಗುಹೆಗೆ ಹೋದವೇಳೆ ಇವರನ್ನು ಅಲ್ಲಿ ಸಂದರ್ಶಿಸಲು ಅವಕಾಶ ಆಗಲಿಲ್ಲ. ಗೋಪಾಲರಾಯರು ಉದಾರ ಹೃದಯದ ಉದಾತ್ತಮನಸ್ಕರಾದ ಜೀವ. ಅವರ ಸ್ನೇಹಿತರು ವಿಶೇಷವಾಗಿ ಸಿಕ್ಖರು. ಆದುದರಿಂದ ಅವರ ಮನಸ್ಸು ಸಿಖ್‌ಮತದ ಕಡೆವಾಲಿದ್ದಿತು. ಸಿಖ್ ಮತಸ್ಥಾಪಕ ಗುರುನಾನಕರ ವಿಷಯದಲ್ಲಿ ಅವರಿಗೆ ತುಂಬಾ ಗೌರವ. ಆತನ ಸಿದ್ಧಾಂತಗಳನ್ನು ನೇರವಾಗಿ ತಿಳಿಯಲೋಸುಗ ಇವರು "ಗುರುಮುಖಿ" ಭಾಷೆಯನ್ನು ಅಭ್ಯಾಸಮಾಡಿದ್ದರು. ಗುರು ಅರ್ಜುನ ಸಿಂಗ್ ಎಂಬುವರಿಂದ ರಚಿತವಾದ "ಸುಃಖ್‌ಮಣಿ" ಗ್ರಂಥವು ಸಿಕ್ಖರಲ್ಲಿ ಬಹು ಜನಪ್ರಿಯವಾಗಿದೆ. ಗೋಪಾಲರಾಯರು ಪ್ರತಿದಿನವೂ ಮಲಗುವ ಮುಂಚೆ ಈ ಗ್ರಂಥವನ್ನು ಓದುವುದನ್ನು ನಿಯಮಮಾಡಿಕೊಂಡಿದ್ದರು. (ಭಗವನ್ನಾಮ ಮಹಿಮೆಯಲ್ಲಿ ಗುರುನಾನಕರಿಗೆ ತುಂಬಾ ನಂಬಿಕೆ.) (ಮನಸ್ಸನ್ನು ಅಂಕೆಯಲ್ಲಿಡುವುದಕ್ಕೂ ಮತ್ತು ಆಧ್ಯಾತ್ಮಿಕ ಧ್ಯಾನಕ್ಕೂ ಅವರು ನಿಯಮಿಸಿದ ಏಕಮಾತ್ರ ಸಾಧನವ್ರತ ಭಗವನ್ನಾಮದ ಮತ್ತು ಭಗವನ್ಮಹಿಮೆಯ ಸಂಕೀರ್ತನೆ.)

ಒಂದು ದಿನ ಗೋಪಾಲರಾಯರು, ಶ್ರೀನಗರಕ್ಕೆ ಪ್ರಯಾಣಮಾಡಲು ಉದ್ಯುಕ್ತನಾಗಿದ್ದ ಒಬ್ಬ ಸಿಖ್ ಸಾಧುವಿನ ವಿಚಾರವನ್ನು ಪ್ರಸ್ತಾಪಿಸಿದರು. ಅವರು ಆತನನ್ನು ತಮ್ಮ ಆಧ್ಯಾತ್ಮಿಕ ಗುರುವೆಂದು ಭಾವಿಸಿರುವುದಾಗಿಯೂ, ರಾಮದಾಸನಿಗೆ ಆತನ ಭೇಟಿಮಾಡಿಸಬೇಕೆಂದು ತಮಗೆ ಬಹು ಆಸೆ ಇರುವುದಾಗಿಯೂ ತಿಳಿಸಿದರು. ಇವರು ಗಾಗ್ರಿಬಲ್‌ಗೆ ಸೇರಿದ ಕೆಲವು ದಿನಗಳ ಮೇಲೆ ಸಾಧು ಬಂದನು. ಡಾಲ್ ಸರೋವರದ ಮಧ್ಯಕ್ಕೆ ಚಾಚಿಕೊಂಡಿರುವ ಸಣ್ಣ ಒಂದು ಹಸಿರು ಭೂಮಿಯ ಶಾಂತವಾತಾವರಣದಲ್ಲಿ ರಾಮದಾಸನು ಈತನನ್ನು ಇವನ ಸ್ನೇಹಿತರೊಂದಿಗೆ ನೋಡುವ ಸಂದರ್ಭ ಒದಗಿತು. ಸಾಧುವಿನ ಹೆಸರು ಭಾಯಿವೀರಸಿಂಗ್. ಈತನನ್ನು ಗೌರವಿಸುವವರೂ ಈತನ ಶಿಷ್ಯರೂ ಪ್ರೀತಿಗಾಗಿ ಈತನನ್ನು ಪಿತಾಜಿ ಎಂದು ಕರೆಯುತ್ತಿದ್ದರು. ಈತನು ಹಸುಗೂಸಿನಂಥ ಒಬ್ಬ ದೈವಭಕ್ತ. ಈತನಿಗೆ ರಾಮದಾಸನ ಮೇಲೆ ಬಹು ಪ್ರೇಮ ಉಂಟಾಯಿತು. ನಂತರ ಉಪದೇಶಗಳು ಭಕ್ತಿ ಮತ್ತು ಭಗವನ್ನಾಮಮಹಿಮೆಗಳ ವಿಚಾರವಾಗಿ ಇಬ್ಬರಿಗೂ ಸ್ವಲ್ಪಹೊತ್ತು ಸಂಭಾಷಣೆ ನಡೆಯಿತು.

ರಾಮುದಾಸನು ಬೆಳಗು ಮುಂಜಾನೆಯನ್ನು ಶ್ರೀ ಶಂಕರಾಚಾರ್ಯ ಪರ್ವತ ವನ್ನೇರಿಹೋಗಿ, ಭಗವದ್ಧ್ಯಾನದಲ್ಲಿ ಮಗ್ನನಾಗುವುದರಲ್ಲಿ ಬಳಸುತ್ತಿದ್ದನು. ಬೆಟ್ಟದ ತುದಿಯ ಮೇಲೆ ನಿಂತಾಗ ಕಾಣುತ್ತಿದ್ದ ಪ್ರಕೃತಿಸೌಂದರ್ಯದ ತಟಾಕಗಳ ಮತ್ತು ಶೈಲಶೃಂಗಗಳ ಮನಮೋಹಕವಾದ ದೃಶ್ಯ ರಾಮುದಾಸನ ಚೇತನವನ್ನು ಸೆರೆಹಿಡಿಯುತ್ತಿದ್ದಿತು. ಪರ್ವತದ ಮೇಲೆ ಮನಸ್ಸಿ ಅಲೆದಾಡು ತ್ತಿದ್ದಾಗ ಒಂದು ಸಲ ಅವನಿಗೆ ಒಂದು ಗುಹೆ ಕಾಣಿಸಿತು. ಒಂದು ದಿನ ಅವನು ಬೆಟ್ಟಹತ್ತುವಲ್ಲಿ ಗೋಪಾಲರಾಯರೂ ಅವರ ಪತ್ನಿಯೂ ಅವನ ಸಂಗಡ ಬಂದರು. ರಾಮುದಾಸನಿಗೆ ಬೆಟ್ಟವನ್ನು ನೇರವಾಗಿ ಹತ್ತುವ ಅಭ್ಯಾಸ. ಆದ್ದರಿಂದ ಬೆಟ್ಟದ ಮೇಲೆ ಅವನ ಜೊತೆಗೆ ಬಂದಾಗ ಅವನು ಅಳಿಲಿನಂತೆ ಹತ್ತಿ ಓಡುತ್ತಿದ್ದುದರಿಂದ ಈ ಸ್ನೇಹಿತರಿಗೆ ಬಹಳ ಶ್ರಮವಾಯಿತು.

ಒಂದು ದಿನ ಗುಜರಾತಿ ಯುವಕನೊಬ್ಬನು ರಾಮುದಾಸನನ್ನು ಹುಡುಕಿ ಕೊಂಡು ದೋಣಿಮನೆಗೆ ಬಂದನು. ಅವನು ಲಿಂಬ್ಡಿ ಸಂಸ್ಥಾನದ ಥಾಕೂರ್ ಸಾಹೇಬರ ಜೇಷ್ಠಪುತ್ರ ಯುವರಾಜರ ಕಾರ್ಯದರ್ಶಿ. ರಾಮುದಾಸನನ್ನು ಸಂದರ್ಶಿಸಬೇಕೆಂದು ಥಾಕೂರ್ ಸಾಹೇಬರಿಂದ ಮಗನಿಗೆ ತಂತೀ ವರ್ತಮಾನ ಬಂದಿದ್ದಿತು. ಯುವರಾಜರು ಆ ಕಾಲದಲ್ಲಿ ಶ್ರೀನಗರದಲ್ಲಿ ವಾಸಿಸುತ್ತಿದ್ದರು. ಅವರ ವಾಸದ ದೋಣಿ ದಿವಂಗತ ಮಹಾರಾಜರ ಅರಮನೆಯ ಮುಂಭಾಗದಲ್ಲಿ ಯಿಥೀಲಂ ನದಿಯಲ್ಲಿ ಲಂಗರ್ ಹಾಕಿದ್ದಿತು. ಅವರ ಮೋಟಾರ್ ವಾಹನ ರಾಮುದಾಸನನ್ನು ಅಲ್ಲಿಗೆ ಕರೆದುಕೊಂಡು ಹೋಯಿತು.

ಯುವರಾಜರ ಕಾಲ ಅನೇಕಾನೇಕ ಕಾರ್ಯ ಗೌರವಗಳಿಂದ ತುಂಬಿದ್ದಿತು. ಅವರೇ ಅದನ್ನು ತಿಳಿಸಿದರು. ಆದುದರಿಂದ ಯುವರಾಜರಲ್ಲಿ ರಾಮುದಾಸನಿಗೆ ಐದು ನಿಮಿಷಗಳ ಕಾಲ ಮಾತ್ರ ಸಂಭಾಷಣೆ ದೊರೆಯಿತು. ಆಗ ಮರ್ಯಾದೆಯ ಕ್ಷೇಮಲಾಭಪ್ರಸ್ತಾಪ ಮಾತ್ರ ಆಯಿತು.

ಇದೇ ಕಾಲದಲ್ಲಿ ರಾಮುದಾಸನು "ಸೈನ್ಯದ ಆಡಿಟ್ ಡೈರೆಕ್ಟರ್" ಎಂಬ ಹುದ್ದೇದಾರ ಕೆ. ಸದಾಶಿವರಾಯರನ್ನು ಕಂಡನು. ಈತನೂ ಕಾಶ್ಮೀರಕ್ಕೆ ಸಂಸಾರ ಸಮೇತ ವಿಹಾರಾರ್ಥವಾಗಿ ಬಂದಿದ್ದರು. ಇವರು ತಮ್ಮ ಪತ್ನಿ ಮತ್ತು ಇಬ್ಬರು ಪುತ್ರಿಯರೊಡನೆ ವಾಸದ ದೋಣಿಗೆ ದಯ ಮಾಡಿಸಿದ್ದರು. ಇದಾದ ಸ್ವಲ್ಪದರಲ್ಲಿ ದುರ್ಗಾದಾಸ್ ನಗರಕಟ್ಟಿ, ಸದಾಶಿವರಾಯರಿಗೂ ಅವರ ಸಂಸಾರಕ್ಕೂ, ಗೋಪಾಲರಾಯರಿಗೂ ಅವರ ಪತ್ನಿಗೂ ಮತ್ತು ರಾಮುದಾಸನಿಗೂ ತಮ್ಮ ಬಂಗಲೆಗೆ ಬರಬೇಕೆಂದು ಆಹ್ವಾನ ಕಳುಹಿಸಿದನು. ಇಲ್ಲಿ ಎರಡು ದಿನ ಎಲ್ಲರೂ ಆನಂದದಿಂದ ಇದ್ದರು.

ಒಂದು ಪ್ರಾತಃಕಾಲ ರಾಮುದಾಸನು ದುರ್ಗಾದಾಸನೂ ಗೋಪಾಲ ರಾಯರೂ ಬಂಗಲೆಯ ಮುಂದೆ ಒಂದು ಚಿನಾರ್ ವೃಕ್ಷದ ಬುಡದಲ್ಲಿ ಕುಳಿತು,

ಗೋಪಾಲರಾಯರು ಹೊಸದಾಗಿ ಕೊಂಡುಕೊಂಡಿದ್ದ ರತ್ನಗಳ ಸತ್ಯತೆಯನ್ನೂ ಬೆಲೆಯನ್ನೂ ಚರ್ಚಿಸುತ್ತಿದ್ದುದನ್ನು ಕಂಡನು. ರಾಮದಾಸನು ಹತ್ತಿರಕ್ಕೆ ಹೋದಾಗ, ದುರ್ಗಾದಾಸನು ಒಂದು ಕ್ಷೀರಮಣಿಯನ್ನು ರಾಮದಾಸನ ಕೈಗೆ ಕೊಟ್ಟು "ಎಷ್ಟು ಸುಂದರವಾದ ಮಣಿ!" ಎಂದು ಆಶ್ಚರ್ಯವನ್ನು ತೋರ್ಪಡಿಸಿದನು.

ರಾಮದಾಸನು ತಕ್ಷಣ ಬಗ್ಗಿ ನೆಲದಿಂದ ಒಂದು ಕಲ್ಲುಚೂರನ್ನು ತೆಗೆದು ಕೊಂಡು ತೋರಿಸುತ್ತ, "ನೀವು ಸೌಂದರ್ಯವನ್ನು ಈ ಕಲ್ಲಿನಲ್ಲೂ ಗಾಂಭೀರ್ಯವನ್ನು ಆ ದೂರದ ಬೆಟ್ಟದಲ್ಲೂ ಏಕೆ ಕಾಣಲಾರಿರಿ? ಪ್ರತಿಯೊಂದೂ ದೇವರ ಸೃಷ್ಟಿ. ಪ್ರತಿಯೊಂದೂ ಸೌಂದರ್ಯವನ್ನು ಹೊರಸೂಸುತ್ತಿದೆ. ಹೀಗಿರುತ್ತ ಆ ಒಂದು ಮಣಿಯನ್ನು ಮಾತ್ರ ಏಕೆ ಹೊಗಳಬೇಕು?" ಎಂದು ಉತ್ತರಕೊಟ್ಟನು. ಇಬ್ಬರೂ ಮೆಲುನಗೆ ನಕ್ಕು ಸುಮ್ಮನಾದರು.

ಕಬೀರ್ ಉದ್ಧವರು ಮುಂಚಿನಂತೆಯೇ ರಾಮದಾಸನನ್ನು ಪ್ರೀತಿ ಆದರ ಗಳಿಂದ ಕಾಣುತ್ತಿದ್ದರು.

ಇದೇ ಕಾಲದಲ್ಲಿ ರಾಮದಾಸನು ಗೋಪಾಲರಾಯ ದಂಪತಿಗಳು ಮತ್ತು ಒಬ್ಬ ಮಾರ್ಗದರ್ಶಕನೊಂದಿಗೆ ಶ್ರೀನಗರದ ಹೆಸರುವಾಸಿಯಾದ ರೇಷ್ಮೆ ಕಾರ್ಖಾನೆ ಯನ್ನು ನೋಡಲು ಹೋದನು. ಅಲ್ಲಿಯ ಮುಸ್ಲಿಂ ವಿಚಾರಣಕರ್ತನು ವಿಶ್ವಾಸಿ ದಾಕ್ಷಿಣ್ಯಪರನು. ಅವನು ಇವರನ್ನು ಕಾರ್ಖಾನೆಯಲ್ಲೆಲ್ಲ ಕರೆದುಕೊಂಡುಹೋದನು. ರೇಷ್ಮೆಗೂಡಿನಿಂದ ಬರುವ ತಂತು ಯಂತ್ರ ಸಲಕರಣೆಗಳಲ್ಲಿ ಹಾಯ್ದು ಥಳ ಥಳಿಸುವ ನಯವಾದ ನೂಲು ಆಗುವ ಸಮಸ್ತ ವಿಧಾನವನ್ನು ವಿಶದಪಡಿಸಿದನು. ರೇಷ್ಮೆಗೂಡುಗಳನ್ನು ನೀರಿನಲ್ಲಿ ಕುದಿಯಿಸುವುದಕ್ಕಾಗಿ ಮಾಡಿರುವ ಸಾಧನದ ಮುಂದೆ ನಿಂತು ಆ ವಿಧಾನವನ್ನು ವಿವರಿಸುವಾಗ ಆತನು ಸ್ವಲ್ಪ ವ್ಯಸನದಿಂದ "ನಾನೇನು ಮಾಡಲಿ, ಪ್ರತಿದಿನವೂ ಸಾವಿರಾರು ನಿರಪರಾಧಿ ರೇಷ್ಮೆ ಹುಳುಗಳನ್ನು ಸಾಯಿಸುವುದು ನನ್ನ ದೌರ್ಭಾಗ್ಯ" ಎಂದು ಅನಿವಾರ್ಯವಾಗಿ ವಿಷಾದವನ್ನು ಸೂಚಿಸಿದನು. ನಂತರ ಎಲ್ಲರೂ ದುರ್ಗಾದಾಸನ ಬಂಗಲೆಗೆ ಹಿಂತಿರುಗಿದರು.

ಸೇರಿದ್ದವರು ಚೆದರುವ ಮುಂಚೆ, ಸದಾಶಿವರಾಯರು ತಮಗೆ ರಾವಲ್ಪಿಂಡಿಗೆ ವರ್ಗವಾಗಿರುವುದೆಂದೂ ರಾಮದಾಸನು ದಕ್ಷಿಣ ಪ್ರಾಂತ ಪ್ರಯಾಣ ಮಾಡುವ ಸಂದರ್ಭದಲ್ಲಿ ರಾವಲ್ಪಿಂಡಿ ಮೂಲಕ ಹೋಗುವುದಾದರೆ ತಮ್ಮ ಮನೆಗೆ ಬರ ಬೇಕೆಂದೂ ಅಪೇಕ್ಷಿಸಿದರು. ರಾಮದಾಸನು ಗೋಪಾಲರಾವ್ ಮತ್ತು ಗಿರಿಜಾ ಬಾಯಿ ಇವರೊಡನೆ ಅವರ ಮನೆ ದೋಣಿಯನ್ನು ಸೇರಿದನು.

ರಾಮದಾಸನು ದಿನಾ ಶ್ರೀ ಶಂಕರಾಚಾರ್ಯ ಪರ್ವತದ ಮೇಲೆ ತಿರುಗಾಡು ವಾಗ ಅನೇಕ ಸಲ ಅದರ ಮೇಲಣ ಗುಹೆಯೊಳಕ್ಕೆ ಹೋಗುತ್ತಿದ್ದನು. ಈ ಗುಹೆ ರಾಮದಾಸನ ಮೇಲೆ ವಿಚಿತ್ರವಾದ ಒಂದು ಆಕರ್ಷಣೆಯನ್ನು ಬೀರುತ್ತಿರುವಂತೆ

ಕಂಡಿತು. ಬೆಳದಿಂಗಳ ರಾತ್ರಿ ಗೋಪಾಲರಾಯರು ತಮ್ಮ ಪತ್ನಿಯನ್ನೂ ರಾಮ ದಾಸನನ್ನೂ ಸರೋವರದಲ್ಲಿ ವಿಹಾರಕ್ಕೆ ಕರೆದೊಯ್ಯುತ್ತಿದ್ದರು. ಕಾಶ್ಮೀರದ ಮನಮೋಹಕ ಪ್ರಕೃತಿಸೌಂದರ್ಯದ ಮಧ್ಯದ ಆ ರಾತ್ರಿಗಳ ವಿಭವವನ್ನು ಬಣ್ಣಿಸಲಸಾಧ್ಯ. ಕೆಲವು ಸಲ ಇವರು ಸರೋವರದ ತಂಪಾದ ನೀರಿನಲ್ಲಿ ಸ್ನಾನವನ್ನು ಮಾಡುತ್ತಿದ್ದರು.

ಒಂದು ದಿನ ಇವರು ಅದಕ್ಕಾಗಿ ಏರ್ಪಡಿಸಿದ ಗೊಂಡೋಲದಲ್ಲಿ ಕಾಶ್ಮೀರದ ಪ್ರಸಿದ್ಧ ಉದ್ಯಾನವನಕ್ಕೆ ಹೋದರು. ಹಿಂದಕ್ಕೆ ಬರುತ್ತ ದೋಣಿ ಸರೋವರದ ಮಧ್ಯದಲ್ಲಿರುವಾಗ ಒಂದು ಬಿರುಗಾಳಿ ಎದ್ದಿತು. ಅದರಿಂದ ದೋಣಿ ಭಯಾನಕ ವಾಗಿ ತೂಗಾಡಿತು. ಒಳಗಿದ್ದವರು ಭೀತರಾದರು. ಆದರೆ ರಾಮದಾಸನು ಬಹು ಸಂತೋಷದಿಂದ ಕುಣಿದಾಡುತ್ತಿದ್ದನು. ಇದನ್ನು ನೋಡಿ ಅವರು ವಿಸ್ಮಿತರಾದರು. ಅಂತು ಬಿರುಗಾಳಿ ನಿಂತು ಇವರೆಲ್ಲ ಸುರಕ್ಷಿತವಾಗಿ ಮನೆಗೆ ಬಂದು ಸೇರಿದರು.

ಇಸ್ಪೀಟಿನ ಪಟ್ಟಿನ ಆಟ ಆಡಲು ಯಾರಾದರೂ ಸಿಕ್ಕದೆಹೋದಾಗ ಗೋಪಾಲ ರಾಯರು ರಾಮದಾಸನನ್ನು ಆ ಸ್ಥಳಕ್ಕೆ ಭರ್ತಿ ಮಾಡಿಕೊಳ್ಳುತ್ತಿದ್ದರು. ಇವರು ಬೋಲ್ಶೆವಿಕ್ ಎಂಬ ಆಟವನ್ನೂ ಆಡುತ್ತಿದ್ದರು. ಈ ಆಟದಲ್ಲಿ ರಾಮದಾಸನು ಒಂದೊಂದು ಸಲವೂ! ನಿರ್ಲಕ್ಷ್ಯದ ಹುಚ್ಚೇರಿದ ಬೋಲ್ಶೆವಿಕ್ ಆಗಿಬಿಡುತ್ತಿದ್ದನು.

ಒಂದು ದಿನ ಗಿರಿಜಾಬಾಯಿಗೆ ಅವಳ ತಂದೆಯವರಿಂದ ಆಕೆಯ ತಾಯಿಗೆ ಬಹಳ ಖಾಯಿಲೆಯಾಗಿದೆ ಎಂದು ಹೊನ್ನಾವರದಿಂದ ತಂತಿ ವರ್ತಮಾನ ಬಂದಿತು. ಈ ಸುದ್ದಿಯಿಂದ ಆಕೆಗೆ ಕಳವಳವಾಗಿ ಆಕೆ ಚಿಂತಾಕ್ರಾಂತಳೂ ಖಿನ್ನಳೂ ಆದಳು. ಆ ಸಾಯಂಕಾಲ ರಾಮದಾಸನು ದೋಣಿಯ ಬಿಸಿಲು ಮಚ್ಚಿನಮೇಲೆ ಒಬ್ಬನೇ ಕುಳಿತಿದ್ದಾಗ ಆಕೆ ಓಡಿಬಂದು ಎರಡು ಕೈಗಳನ್ನೂ ಜೋಡಿಸಿ ತನ್ನ ತಾಯ ವಿಷಯದಲ್ಲಿ ತನ್ನ ವ್ಯಾಕುಲ ಅಗಿಯುವುದನ್ನು ತಿಳಿಸಿದಳು.

"ರಾಮದಾಸರೇ, ನನ್ನ ತಾಯಿಗೆ ಈ ವೇಳೆಗೆ ಗುಣವಾಗಿದೆಯೆಂದೂ ಈ ವಿಚಾರವನ್ನು ತಿಳಿಸುವ ತಂತಿ ನಾಳೆ ಬರುತ್ತದೆಂದೂ ನೀವು ಭರವಸೆ ಕೊಟ್ಟರೆ ನನ್ನ ಮನಸ್ಸಿನ ಅಸಹನೀಯವಾದ ದುಃಖದ ಭಾರವನ್ನು ಇಳಿಸಿದಹಾಗೆ ಆಗುತ್ತದೆ" ಎಂದು ಬೇಡಿಕೊಂಡಳು.

ರಾಮದಾಸನು "ತಾಯಿ, ಭಗವಂತನನ್ನು ನಂಬು, ಎಲ್ಲ ಸರಿಹೋಗುತ್ತದೆ" ಎಂದು ಉತ್ತರ ಕೊಟ್ಟನು.

ಈ ಧೈರ್ಯದ ಮಾತುಗಳನ್ನು ಕೇಳಿ ಅವಳ ಚಿಂತೆ ಮಾಯವಾಗಿ ಆಕೆ ಮೊದಲಿನಂತೆ ಚಟುವಟಿಕೆಯ ಹರ್ಷಚಿತ್ತದ ಹುಡುಗಿಯಾದಳು. ಆಕೆಯ ಪರಿಶುದ್ಧ ವಾದ ಮತ್ತು ಸರಳವಾದ ನಂಬಿಕೆಯಿಂದ ಅವಳ ಇಚ್ಛೆ ಫಲಿಸಿತು. ಮಾರನೆಯ ದಿನ ಆಕೆಯ ತಾಯಿ ಗಂಡಾಂತರದಿಂದ ಪಾರಾದಳೆಂದು ಆಕೆಯ ತಂದೆಯಿಂದ ತಂತಿ ಬಂದಿತು.

## (iii) ಗುಹೆಯೊಳಗೆ ಶಾಂತಿ

ಗೋಪಾಲರಾಯರ ವಿಶ್ರಾಂತಿ ಕಾಲ ಪೂರೈಸುತ್ತ ಬಂದಿತು. ಆತ ರಾಮದಾಸನನ್ನು ತನ್ನೊಡನೆ ಅಮೃತಸರಕ್ಕೆ ಕರೆದುಕೊಂಡು ಹೋಗುವುದಾಗಿ ಸೂಚಿಸಿದರು. ರಾವಲ್ಪಿಂಡಿಗೆ ಹೋಗಲು ಒಂದು ಪ್ರತ್ಯೇಕ ಮೋಟಾರ್ ಕಾರನ್ನು ಬಾಡಿಗೆಗೆ ಗೊತ್ತುಮಾಡಿದರು. ಆದರೆ ರಾಮದಾಸನಿಗೆ ಗುಹೆಯ ಮೇಲೆ ಪ್ರೇಮ ಹೆಚ್ಚಾಗಿದ್ದುದರಿಂದ ಅವನು ಇವರೊಡನೆ ಪ್ರಯಾಣ ಮಾಡಲು ಆಗಲಿಲ್ಲ. ಅವನು ಆ ಗುಹೆಯಲ್ಲಿ ಕೆಲವುದಿನ ಇರಬೇಕೆಂಬುದು ದೈವೇಚ್ಛೆಯಾಗಿದ್ದಿತು. ಅವನು ಈ ವಿಚಾರವನ್ನು ಗೋಪಾಲರಾಯರಿಗೆ ತಿಳಿಸಿದನು. ಈ ಮಾತಿನಿಂದ ಅವರಿಗೆ ತುಂಬ ಅಸಮಾಧಾನವಾಯಿತು. ಆದರೆ ನಿರ್ವಾಹವಿಲ್ಲದೆ ಸುಮ್ಮನಾದರು. ಅವರಿಗೆ ರಾಮದಾಸನನ್ನು ಕುರಿತು ಇದ್ದ ಬಹಳ ಚಿಂತೆ, ಅವರನ್ನು ಆ ಸಿಖ್ ಸಾಧು ಭಾಯಿ ವೀರಸಿಂಗ್‌ನಲ್ಲಿ ರಾಮದಾಸನನ್ನು ಎಚ್ಚರದಿಂದ ನೋಡಿಕೊಳ್ಳಿ ಎಂದು ಪ್ರಾರ್ಥಿಸುವಂತೆ ಮಾಡಿತು. ಅವರು ಪತ್ನಿಯೊಡನೆ ಶ್ರೀನಗರವನ್ನು ಬಿಟ್ಟರು. ಅದೇದಿನ ಸಾಯಂಕಾಲ ರಾಮದಾಸನು ಗುಹೆಯನ್ನು ಪ್ರವೇಶಿಸಿದನು. ಬಾಗಿಲು ಚಿಕ್ಕದಾಗಿದ್ದರೂ ಗುಹೆಯ ಒಳಗೆ ವಿಸ್ತಾರವಾಗಿದ್ದಿತು. ಬೆಟ್ಟದ ಮೇಲೆ ಮೇಯುವ ಆಡುಗಳು ಗುಹೆಯೊಳಗೆ ಹೋಗುತ್ತಿದ್ದುದರಿಂದ ಒಳಗೆ ನೆಲ ಗಂಜಲ ಹಿಕ್ಕೆಯಿಂದ ಬಹಳ ಕೊಳಕಾಗಿದ್ದಿತು. ಗುಹೆಯ ಬಾಗಿಲಲ್ಲಿ ಒಂದು ಸಣ್ಣ ಚಿನಾರ್ ಗಿಡವೂ ಅದರ ಕೆಳಗೆ ಒಂದು ಚಪ್ಪಡಿಯೂ ಇದ್ದುವು.

ಆಗ ರಾಮದಾಸನ ಬಳಿ ಗೋಪಾಲರಾಯರು ಕೊಟ್ಟಿದ್ದ ಕಾವಿ ಬಣ್ಣದ ತೆಳ್ಳನೆಯ ಕಾಶ್ಮೀರದ ಸಾಧಾರಣವಾದ ಶಹಲು ಮಾತ್ರ ಇದ್ದಿತು; ಮತ್ತೇನೂ ಇರಲಿಲ್ಲ. ಗುಹೆಯ ನೆಲ ಎರಡು ಹಂತವಾಗಿದ್ದಿತು. ಒಳಗೆ ಹೋಗುತ್ತಲೂ ತಗ್ಗು ಅದರ ಕೊನೆಗೆ ಎತ್ತರವಾದ ಜಗಲಿ. ಅದು ಗುಹೆಯ ಡೊಗರಾದ ಹಿಂದಲ ಗೋಡೆಯುವರಿಗೂ ಇದ್ದಿತು. ಜಗಲಿಯೂ ನೆಲವೂ ಇಡಗುತಡಗಾಗಿ ನೆಲದ ಮೇಲೆ ಮೊನುಚಾದ ಹರಳುಕಲ್ಲು ದಟ್ಟವಾಗಿ ಅಲ್ಲಲ್ಲೇ ಬಿದ್ದಿದ್ದುವು. ಬೆಳಗಿನಹೊತ್ತಿನಲ್ಲೂ ಗುಹೆಯಲ್ಲಿ ಬೆಳಕು ಸಾಲದೆ ಮಸಕಾಗಿರುತ್ತಿದ್ದಿತು. ಸೂರ್ಯಾಸ್ತಮಯ ಸಮಯಕ್ಕೆ ಭಾಯಿ ವೀರಸಿಂಗನು ರಾಮದಾಸನನ್ನು ಹುಡುಕಿಕೊಂಡು ಅವಸರ ವಸರವಾಗಿ ಬೆಟ್ಟದ ಮೇಲಕ್ಕೆ ಬಂದು,

"ನೀವು ಈ ಗುಹೆಯಲ್ಲಿ ನಿಲ್ಲುವುದಾಗಿ ಕೇಳಿದೆ. ನಿಮಗೇನುಬೇಕೊ ಅಪ್ಪಣೆಕೊಟ್ಟರೆ ಒದಗಿಸುತ್ತೇನೆ" ಎಂದನು.

"ರಾಮದಾಸನಿಗೆ ಏನೂ ಬೇಕಿಲ್ಲ" ಎಂದು ರಾಮದಾಸನು ಹೇಳಿದನು.

"ಇಲ್ಲ. ಅದೆಲ್ಲ ನಡೆಯುವುದಿಲ್ಲ. ನಿಮಗೆ ಊಟ, ಕಂಬಳಿ, ಮತ್ತು ಹೊದೆಯುವ ರಗ್ಗುಗಳನ್ನು ಕಳುಹಿಸುತ್ತೇನೆ" ಎಂದು ಆತ ಉತ್ಸಾಹದಿಂದ ನುಡಿದನು.

"ರಾಮುದಾಸನು ಕೆಲವು ದಿವಸ ಊಟ ಉಪಚಾರಗಳಿಲ್ಲದೆ ಇಲ್ಲಿರಬೇಕೆಂದು ಬಯಸುತ್ತಾನೆ. ಆದುದರಿಂದ ನೀವು ಯಾವ ಶ್ರಮವನ್ನೂ ತೆಗೆದುಕೊಳ್ಳಬೇಡಿ" ಎಂದು ರಾಮುದಾಸನು ಹೇಳಿದನು.

ಭಾಯಿ ವೀರಸಿಂಗನು, "ಈ ವಿಷಯದಲ್ಲಿ ನಿಮ್ಮ ಮಾತಿಗೆ ಸಮ್ಮತಿಸಲಾರೆ. ನಿಮಗೆ ಆಹಾರವನ್ನು ಒದಗಿಸುವುದಕ್ಕೂ ಮತ್ತು ನಿಮ್ಮ ಅನುಕೂಲಗಳನ್ನು ನೋಡಿಕೊಳ್ಳುವುದಕ್ಕೂ ನನಗೆ ಅಪ್ಪಣೆ ಕೊಡಬೇಕು. ನಾನು ಇದನ್ನು ಅಪಾರ ಗೌರವವೆಂದು ಭಾವಿಸುತ್ತೇನೆ. ಉಪವಾಸವಿರುವುದಕ್ಕೆ ನಿಮ್ಮನ್ನು ಎಂದಿಗೂ ಬಿಡೆ. ನಿಮಗೇನು ಬೇಕು ಹೇಳಿ. ಅಷ್ಟು ಸುಲಭವಾಗಿ ನನ್ನನ್ನು ನೂಕಿಬಿಡ ಬಹುದೆಂದು ತಿಳಿಯಬೇಡಿ" ಎಂದನು.

ನಿಜವಾಗಿ ಆ ನಿರ್ಜನ ಪ್ರದೇಶದಲ್ಲಿ ಅನ್ನಾಹಾರದ ಯೋಚನೆ ಇಲ್ಲದೆ ಕೆಲವು ದಿವಸಗಳು ಇರಬೇಕೆಂದು ರಾಮುದಾಸನಿಗೆ ಅಭಿಲಾಷೆ. ಆದರೆ ಆ ಸಾಧು ಹಟಹಿಡಿದುದರಿಂದ ರಾಮುದಾಸನು ಒಪ್ಪಬೇಕಾಯಿತು.

"ಒಳ್ಳೇದು ಮಹರಾಜ್, ಮಧ್ಯಾಹ್ನಕ್ಕೆ ಸ್ವಲ್ಪ ಹಾಲು ಅನ್ನವನ್ನು ತಂದುಕೊಡಿ. ಮತ್ತೇನೂ ಬೇಡ" ಎಂದು ರಾಮುದಾಸನು ಒಪ್ಪಂದವನ್ನು ಸೂಚಿಸಿದನು.

ಆತನು ಕೂಡಲೆ "ಹೇಗೆ ಬೇಡ ? ಸಾಯಂಕಾಲದ ಹೊತ್ತಿಗೇನು ? ಸ್ವಲ್ಪ ಹಣ್ಣು ಹಾಲನ್ನಾದರೂ ನೀವು ತೆಗೆದುಕೊಳ್ಳುವುದು ನನ್ನ ಇಷ್ಟ" ಎಂದನು.

ತನಗೆ ಊಟಮಾಡಿಸಲೇಬೇಕೆಂದು ಹಟ ಹಿಡಿದ ಈತನ ಕೈಯಲ್ಲಿ ರಾಮು ದಾಸನು ಅಸಹಾಯನಾದನು. ಸಾಧು ಹೊರಟುಹೋದನು. ಕತ್ತಲಾಗಲು ರಾಮುದಾಸನು ಗುಹೆಯ ಒಳಗೆ ಹೋಗಿ, ಎತ್ತರವಾದ ಜಗಲಿಯ ಮೇಲೆ ಕುಳಿತು ತೆಳ್ಳಗಿರುವ ಶಹಲಿನ ಸ್ವಲ್ಪ ಭಾಗವನ್ನು ಹಾಸಿಕೊಂಡು ನೊರಜುಗಲ್ಲಿನ ಮೇಲೆ ಬೆನ್ನು ಮೇಲೆ ಮಲಗಿದನು.

ರಾತ್ರಿ ಹತ್ತುಗಂಟೆ ಸಮಯಕ್ಕೆ ಸಾಧುವಿನ ಆಳು, ನೋಡುವುದಕ್ಕೆ ಚನ್ನಾಗಿದ್ದ ದಪ್ಪ ಹುಡುಗ, ಕೈಯಲ್ಲಿ ಲಾಂದ್ರವನ್ನು ಹಿಡಿದುಕೊಂಡು ದಪ್ಪ ಹೊಡಕೆಯ ಚಾಪೆ ಮತ್ತು ಕೆಲವು ಕಂಬಳಿಗಳನ್ನು ತೆಗೆದುಕೊಂಡು ಬಂದನು. ರಾಮುದಾಸನು ತಾನು ಮಲಗಿದ್ದ ಕಡೆ ಚಾಪೆಯನ್ನು ಹಾಸಿ, ಒಂದು ಕಂಬಳಿಯನ್ನು ಮಡಿಸಿ ತಲೆದಿಂಬಿಗಿಟ್ಟುಕೊಂಡು ಉಳಿದುವನ್ನು ಹಿಂದಕ್ಕೆ ಕೊಟ್ಟು, ಆ ಹುಡುಗನಿಗೆ ಅವನು ಹೊರಟುಹೋಗಬಹುದೆಂದು ತಿಳಿಸಿದನು.

ಗುಹೆ ರಾತ್ರಿಯಲ್ಲಿ ಕಗ್ಗತ್ತಲಾಗಿದ್ದಿತು. ರಾಮುದಾಸನು ಚಾಪೆಯ ಮೇಲೆ ಕಾಲನ್ನು ನೀಡಿಕೊಂಡು ಮೇಲೆ ಶಹಲನ್ನು ಹೊದ್ದುಕೊಂಡನು. ಗುಹೆಯ ಒಳಭಾಗ ಶಾಖವಾಗಿದ್ದುದರಿಂದ ಹೆಚ್ಚು ಚಳಿಯಾಗಲಿಲ್ಲ. ಅವನು ರಾತ್ರಿಯಲ್ಲಾ ಎಚ್ಚರವಾಗಿಯೇ ಇದ್ದನು. ಸಮ ರಾತ್ರಿಯ ಮೇಲೆ ಮಗ್ಗುಲಲ್ಲಿ ಸರಸರ ಶಬ್ದವೂ

ಇಲಿಗಳದೆಂಬಂತೆ ಕೀಚುಧ್ವನಿಯೂ ಕೇಳಿಸಿದುವು. ಇವುಗಳಿಂದ ರಾಮದಾಸನಿಗೆ ಯಾವ ವಿಧದಲ್ಲಿಯೂ ತೊಂದರೆಯಾಗಲಿಲ್ಲ.

ರಾತ್ರಿ ಕಳೆದು ಬೆಳಗಾಯಿತು. ರಾಮದಾಸನು ಹೊರಗೆ ಬಂದು ಚಿನಾರ್ ಮರದ ಬುಡದಲ್ಲಿನ ಚಪ್ಪಡಿಯ ಮೇಲೆ ಕುಳಿತು, ಸುತ್ತಣ ಸರೋವರ, ಬೆಟ್ಟ, ಮತ್ತು ಹಸಿರಾಗಿರುವ ಸಸ್ಯಸಂಪತ್ತಿಯ ಸೌಂದರ್ಯವನ್ನು ಮನವಾರೆ ಪಾನ ಮಾಡಿದನು. ಮಧ್ಯಾಹ್ನವಾಗುತ್ತ ಗುಹೆಯೊಳಕ್ಕೆ ಹೋದನು.

ಈಗ ಒಬ್ಬ ವೃದ್ಧ ಮಹಮ್ಮದೀಯನು ರಾಮದಾಸನ ಭೇಟಿಗೆ ಬಂದನು. ಗುಹೆಯೊಳಗೆ ರಾಮದಾಸನು ವಾಸವಿರುವುದನ್ನು ನೋಡಿ ಆಶ್ಚರ್ಯವನ್ನು ವ್ಯಕ್ತಪಡಿಸಿ, “ಈ ಗುಹೆಯಲ್ಲಿ ಎರಡು ಹಾವಿರುವುದು ನಿಮಗೆ ಗೊತ್ತಿದೆಯೆ ? ಅನೇಕ ಆಡು ಈ ಗುಹೆಯನ್ನು ಹೊಕ್ಕು ಅವುಗಳ ವಿಷದ ಹಲ್ಲಿಗೆ ತುತ್ತಾಗಿವೆ. ನಿಮ್ಮ ತಲೆ ಇರುವ ಕಡೆ ಎರಡು ಅಂಗುಲದ ಒಂದು ರಂಧ್ರ ಇದೆ ನೋಡಿ. ಅದೇ ಅವುಗಳಿರುವ ಸ್ಥಳ. ಅವುಗಳಿಂದ ನಿಮಗೇನೂ ತೊಂದರೆಯಾಗಲಿಲ್ಲವೆ ? ಎಷ್ಟು ಕಾಲದಿಂದ ಇಲ್ಲಿದ್ದೀರಿ ?” ಎಂದು ಕೇಳಿದನು.

ರಾಮದಾಸನು, “ರಾಮದಾಸನು ನಿನ್ನೆ ಸಾಯಂಕಾಲದಿಂದ ಇಲ್ಲಿ ಇದ್ದಾನೆ. ರಾತ್ರಿ ಇಲಿಗಳ ಕೂಗು ಮತ್ತು ಏನೋ ಸರಸರ ಶಬ್ದ ವಿನಃ ಇನ್ನೇನೂ ತೊಂದರೆಯಾಗಲಿಲ್ಲ” ಎಂದನು.

ಅವನು ಕಣ್ಣುಗಳನ್ನು ಅರಳಿಸಿಕೊಂಡು, ಗಡ್ಡದ ತಲೆಯನ್ನು ಅಲ್ಲಾಡಿಸುತ್ತ “ಆಹಾ ! ಅವು ಹಾವುಗಳು. ನೀವು ತಿಳಿದುಕೊಂಡಿರುವಂತೆ ಇಲಿಗಳಲ್ಲ. ಇಲಿಗಳ ಕೀಚಲು ಧ್ವನಿಯಂತೆ ಹಾವುಗಳು ಕೂಗುತ್ತವೆ. ಗುಹೆಗೆ ನಾನು ಬಂದು ಬಹಳ ಕಾಲವಾಯಿತು. ಹಾವು ಬಿಟ್ಟುಹೋಗಿರಬಹುದೆಂದು ತಿಳಿದಿದ್ದೆ. ಅವು ಇನ್ನೂ ಇಲ್ಲಿಯೇ ಇವೆಯೆಂದು ಈಗ ಗೊತ್ತಾಯಿತು. ನನ್ನ ಮಾತು ಕೇಳಿ. ಈ ಹಾಳು ಸ್ಥಳವನ್ನು ಒಡನೆ ಬಿಡಿ. ನಿನ್ನೆ ರಾತ್ರಿ ನಿಮ್ಮನ್ನು ಅವು ಹೇಗೋ ಉಳಿಸಿದುವು. ಮುಂದೆ ಏನಾಗುತ್ತದೋ ಹೇಳುವಂತಿಲ್ಲ” ಎಂದು ಹೇಳಿದನು.

ರಾಮದಾಸನು “ರಾಮದಾಸನಿಗೆ ಭಯವಿಲ್ಲ. ಅವನು ಈ ಗುಹೆಯಲ್ಲಿ ಭಗವಂತನ ರಕ್ಷೆಯಲ್ಲಿ **ಅವನ** ಅಪ್ಪಣೆಯನ್ನನುಸರಿಸಿ ಇದ್ದಾನೆ. ಆದ್ದರಿಂದ ಅವನು ಇಲ್ಲೇ ಇರುವನು” ಎಂದು ಉತ್ತರ ಕೊಟ್ಟನು.

ಆ ಮುದುಕನು ಗಂಭೀರ ಅನುಮಾನದ ನೋಟದಿಂದ ತಲೆದೂಗಿದನು. ನಂತರ ಸಂಭಾಷಣೆ ಬೇರೆ ಮಾರ್ಗಕ್ಕೆ ತಿರುಗಿತು. ಆ ಗುಹೆಯಲ್ಲಿ ಮೂವತ್ತು ವರ್ಷಗಳ ಕಾಲ ಇದ್ದ ಒಬ್ಬ ಮುಹಮ್ಮದೀಯ ಸಾಧುವಿನ ವಿಷಯವನ್ನು ಆತ ಹೇಳಿದನು. ಇದು ಇಪ್ಪತ್ತುವರ್ಷದ ಹಿಂದಿನ ಮಾತು. ರಾಮದಾಸನಿಗೆ ಎರಡನೆಯ ಸಲ ಎಚ್ಚರಿಕೆ ಹೇಳಿ ಆ ದಯಾಳುವಾದ ವೃದ್ಧನು ಹೊರಟು ಹೋದನು.

ಭಾಯಿ ವೀರಸಿಂಗನ ಆಳುಹುಡುಗ ಮಧ್ಯಾಹ್ನ ಸಾಯಂಕಾಲ ಅನ್ನ ಹಾಲನ್ನು ಕ್ರಮವಾಗಿ ತಂದುಕೊಡುತ್ತಿದ್ದನು. ಕೆಲವು ಸಲ ರಾಮದಾಸನು ದೇವಸ್ಥಾನದ ಶಿಖರಕ್ಕಿಂತಲೂ ಕೆಳಗಿನ ಶಿಖರದಲ್ಲಿ ಕುಳಿತು ಆನಂದಸಮಾಧಿಯಲ್ಲಿ ಮಗ್ನನಾಗಿ ಊಟದ ವೇಳೆ ಗುಹೆಗೆ ಹೋಗಬೇಕೆಂಬುದನ್ನು ಮರೆಯುವನು. ಆದರೂ ಆ ನಿಷ್ಠಾವಂತನಾದ ಬಾಲಕನು ಕೈಯಲ್ಲಿ ಅನ್ನದ ಬುಟ್ಟಿಯನ್ನು ಹಿಡಿದುಕೊಂಡು ಮೆಲ್ಲನೆ ರಾಮದಾಸನನ್ನು ಹುಡುಕಿ, ಅವನನ್ನು ಎಲ್ಲಿ ಕಂಡರೆ ಅಲ್ಲಿಯೇ ಅವನಿಗೆ ಊಟ ಮಾಡಿಸುತ್ತಿದ್ದನು.

ಭಾಯಿ ವೀರಸಿಂಗ್, ಜಾನಕೀನಾಥ, ಶಂಭುನಾಥ ಮತ್ತು ಹಲವರು ಸಿಖ್ ಸ್ನೇಹಿತರು ಬೆಳಗಿನ ಹೊತ್ತು ಬಂದು, ನೀರಿಗಾಗಿ ಗಡಿಗೆಗಳು, ಚಳಿಯಾಗದಂತೆ ಉರಿಹಾಕಲು ಇದ್ದಿಲು, ಕಾಂಗ್ಡಿ, ಬೆಂಕಿ ಕಡ್ಡಿ, ಇವನ್ನು ಒದಗಿಸುತ್ತಿದ್ದರು. ಆದರೆ ರಾಮದಾಸನು ಈ ಸಾಮಗ್ರಿಯನ್ನು ಉಪಯೋಗಿಸಲಿಲ್ಲ. ರಾಮದಾಸನು ಶಂಭುನಾಥನನ್ನು ಪಂಚತಾರಣಿಯಲ್ಲಿ ಕಂಡಿದ್ದನು. ಈತನು ರಾಮದಾಸನನ್ನು ಅವನು ಗುಹೆ ಬಿಟ್ಟು ಹೋಗುವಾಗ, ತನ್ನ ಮನೆಗೆ ಬಂದು ಕೆಲವು ಕಾಲ ನಿಲ್ಲಬೇಕೆಂದು ಕೇಳಿಕೊಂಡನು.

ರಾಮದಾಸನು ಒಂದು ವಾರ ಗುಹೆಯೊಳಗೆ ವಾಸಿಸಿದನು. ಈ ಕಾಲದಲ್ಲಿ ಅವನು ಸ್ನಾನಮಾಡಲಿಲ್ಲ, ನೀರನ್ನು ಪಾನ ಮಾಡಲಿಲ್ಲ, ಉಪಯೋಗಿಸಲಿಲ್ಲ. ನೀರು ದೊರೆಯುವುದು ಬೆಟ್ಟದ ಬುಡದ ಸರೋವರದಲ್ಲಿ; ಗುಹೆಗೆ ಮೂರು ಫರ್ಲಾಂಗು ಕೆಳಗೆ. ಆ ಕಾಲದಲ್ಲಿ ರಾಮದಾಸನು ಬೆಟ್ಟದಿಂದ ಇಳಿಯಲೇ ಇಲ್ಲ.

ಏಳನೆಯ ದಿನದ ರಾತ್ರಿ ಅವನಿಗೆ ಒಂದು ವಿಚಿತ್ರ ಅನುಭವವಾಯಿತು. ಆಗ ನಡುರಾತ್ರಿಗೆ ಮೀರಿದ ಸಮಯ, ಗುಹೆಯ ಒಳಗೆ ವಾಡಿಕೆಯಂತೆ ಕಗ್ಗತ್ತಲು ಇದ್ದದಿದ್ದಹಾಗೆ ನೀಲಮಿಶ್ರ ವರ್ಣದ ಜಾಜ್ವಲ್ಯಮಾನವಾದ ತೇಜಸ್ಸು ಗುಹೆಯ ಒಳಗನ್ನು ಬೆಳಗಿತು. ಆ ಬೆಳಕಿನಲ್ಲಿ ತಾನು ಲೀನವಾದಂತೆ ರಾಮದಾಸನಿಗೆ ಭಾಸವಾಯಿತು. ಆ ಪ್ರಕಾಶ ಕೆಲವು ಕ್ಷಣ ಮಾತ್ರ ಇದ್ದು ಕ್ರಮಕ್ರಮವಾಗಿ ಅದೃಶ ವಾಯಿತು. ಗುಹೆ ಮತ್ತೆ ಕತ್ತಲ ಆಳದಲ್ಲಿ ಮುಳುಗಿತು.

ಎಂಟನೇ ದಿವಸ ಪ್ರಾತಃಕಾಲ, ಎಂದರೆ ಕಾಂತಿ ಕಾಣಿಸಿಕೊಂಡ ಮಾರನೆಯ ದಿನ, ರಾಮದಾಸನು ಗುಹೆಯನ್ನು ಬಿಟ್ಟು ಭಾಯಿ ವೀರಸಿಂಗನ ಕುಟಿಯಲ್ಲಿ ಮೂರ್ತನಾದನು. ಸಾಧು ಅವನನ್ನು ಆದರದಿಂದ ಸ್ವಾಗತಿಸಿದನು.

---

# ಅಧ್ಯಾಯ ೩೯

## ಶ್ರೀನಗರ–ರಾವಲ್ಪಿಂಡಿ–ಅಮೃತಸರ

### (i) ಅಪಾಯಕರವಾದ ಸಾಹಸ

ಭಾಯಿವೀರಸಿಂಗನ ಕುಟೀಯಿಂದ ರಾಮದಾಸನನ್ನು ಶಂಭುನಾಥನು ಶ್ರೀನಗರದ ಪೇಟೆಯಲ್ಲಿ ಅಮೀರಾಕದಲ್‌ನಲ್ಲಿರುವ ತನ್ನ ಮನೆಗೆ ಕರೆದುಕೊಂಡು ಹೋದನು. ಶಂಭುನಾಥನ ಮಾತಾಪಿತೃಗಳೂ ಇತರ ಸಂಬಂಧಿಗಳೂ ರಾಮದಾಸನ ವಿಷಯದಲ್ಲಿ ತುಂಬ ಪ್ರೀತಿ ಆದರಗಳನ್ನು ತೋರಿಸಿದರು. ರಾಮದಾಸನು ಅವರ ಜೊತೆಯಲ್ಲಿ ಸುಮಾರು ಹದಿನೈದು ದಿನ ಇದ್ದನು. ಆ ಕಾಲದಲ್ಲಿ ಶ್ರೀ ಶಂಕರಾಚಾರ್ಯರ ಗುಹೆಯ ಎದುರಿಗಿರುವ ಪರ್ವತ ಶ್ರೇಣಿಗಳಲ್ಲೆಲ್ಲಾ ಅತ್ಯಂತ ಎತ್ತರವಾದ ಬೆಟ್ಟವನ್ನು ಹತ್ತಬೇಕೆಂಬ **ರಾಮನ** ಆಜ್ಞೆಯನ್ನು ರಾಮದಾಸನು ಶಂಭುನಾಥನಿಗೆ ತಿಳಿಸಿದನು. ಬೆಟ್ಟವನ್ನು ಹತ್ತಿಹೋಗುವ ಯೋಚನೆ ಶಂಭುನಾಥನ ಊಹೆಗೂ ರುಚಿಸಿ ಅವನು ಈ ವಿಹಾರದಲ್ಲಿ ತಾನೂ ಜೊತೆಗೆ ಬರುವುದಾಗಿ ಹೇಳಿದನು.

ಅದೇ ಪ್ರಕಾರ ಇವರು ಒಂದು ಪ್ರಾತಃಕಾಲ ಹೊತ್ತಿಗೆ ಮುಂಚೆ ಈ ಉದ್ಯಮಕ್ಕೆ ಹೊರಟರು. ಶಂಭುನಾಥನು ಚಹ ತುಂಬಿದ ಒಂದು ಥರ್ಮೋಫ್ಲಾಸ್ಕನ್ನೂ ರೊಟ್ಟಿ ಬಿಸ್ಕತ್ತು ಬೆಣ್ಣೆ ಹಣ್ಣುಗಳನ್ನು ತುಂಬಿದ ಒಂದು ಚೀಲವನ್ನೂ ಜೊತೆಗೆ ತೆಗೆದುಕೊಂಡನು. ಬೆಟ್ಟದ ಬುಡದವರೆಗೂ ಮೋಟಾರ್‌ಕಾರಿನಲ್ಲಿ ಪ್ರಯಾಣ ಸಾಗಿತು. ಅಲ್ಲಿಂದ ಇವರು ಬೆಟ್ಟವೇರತೊಡಗಿದರು. ಬಹಳ ನೇರವಾಗಿ ಏರುವ ದಾರಿಯನ್ನು ಹಿಡಿದರು. ತಾವು ಮುಟ್ಟಬೇಕಾಗಿದ್ದ ಶಿಖರವನ್ನು ಗುರಿಯಾಗಿಟ್ಟುಕೊಂಡು ಮೇಲು ಮೇಲಕ್ಕೆ ಹತ್ತಿದರು. ಕೆಳಗಿನಿಂದ ನೋಡಿದರೆ ಬೆಟ್ಟದ ತುದಿ ಬಹು ಎತ್ತರವಾಗೇನೂ ಕಾಣುತ್ತಿರಲಿಲ್ಲ. ಆದರೆ ಹತ್ತಿ ಹತ್ತಿ ಹೋದಹಾಗೆ ಅದು ಮೊದಲಿನಷ್ಟೇ ಮೇಲಿರುವಂತೆ ಕಾಣಿಸಿತು. ಒಂದಾದ ಮೇಲೆ ಒಂದರಂತೆ, ಏಳು ಬೆಟ್ಟಗಳನ್ನು ದಾಟಿದ ಮೇಲೆ, ಇವರು ತಾವು ಕೊನೆಯಾಗಿ ಸೇರಬೇಕಾದ ಶಿಖರದ ಬುಡವನ್ನು ಮುಟ್ಟಿದರು.

ನಾಲ್ಕು ಬೆಟ್ಟಗಳನ್ನೇರುವವರೆಗೂ ಇವರು ಒರಟಾದ ಒಂದು ಕಾಲುದಾರಿಯಲ್ಲಿ ನಡೆದರು. ಇಲ್ಲಿಂದ ಮುಂದಕ್ಕೆ ದಾರಿಯ ಗುರುತಿರಲಿಲ್ಲ. ಇವರು ಪೊದೆಗಳ, ಕಲ್ಲು ಕೊರಕಲುಗಳ ಮಧ್ಯೆ ಮತ್ತು ದಪ್ಪ ಬಂಡೆಗಳ ಮೇಲೆ ದಾರಿ ಮಾಡಿಕೊಂಡು ಹೋಗಬೇಕಾಯಿತು. ಇವರನ್ನು ನೋಡಿ ಓಡಿಹೋದ ಎರಡು ನರಿಗಳನ್ನು ಬಿಟ್ಟರೆ ಇವರಿಗೆ ಇನ್ನಾವ ಪ್ರಾಣಿಯೂ ಕಾಣಿಸಲಿಲ್ಲ. ಇನ್ನು ಕೊನೆಯ

ದಾವ ಅತ್ಯುನ್ನತ ಶಿಖರವನ್ನು ಸುತ್ತಿಕೊಂಡಾಗಲಿ, ನೇರವಾಗಿಯಾಗಲಿ ಏರಬೇಕು. ಸುತ್ತಿಕೊಂಡು ಹೋಗುವುದು ಸುಲಭವಾದದ್ದು. ರಾಮುದಾಸನು ಎರಡನೆಯ ಮಾರ್ಗವನ್ನು ಅನುಸರಿಸಿದನು. ಕಂದುಬಣ್ಣದ ಹುಲ್ಲಿನ ದಟ್ಟವಾದ ಗುತ್ತಿಯನ್ನು ಕೈಹಿಡಿಕೆಯನ್ನಾಗಿ ಮಾಡಿಕೊಂಡು ನಾಗಾಲಿನಿಂದ ಏರಿದನು. ಶಂಭುನಾಥನು ಹಿಂದೆಯೇ ಬಂದನು. ಸುಮಾರು ಅರ್ಧದಾರಿ ಹತ್ತಿದಮೇಲೆ ರಾಮುದಾಸನಿಗೆ ಒಂದು ನುಣುಪಾದ ಸಣ್ಣ ಬಂಡೆ ಕಾಣಿಸಿತು. ರಾಮುದಾಸನು ಅದನ್ನು ಎಟಕಿಸಿ ಕೊಂಡು, ಅದರ ಮೇಲೆ ಕುಳಿತು, ಶಂಭುನಾಥನು ತನ್ನ ಸಮಕ್ಕೆ ಬರಲು ಶ್ರಮಪಡುತ್ತಿರುವುದನ್ನು ಕಂಡನು. ಶಂಭುನಾಥನ ಮುಖ ಉದ್ರೇಕದಿಂದ ಕೆಂಪೇರಿದ್ದಿತು. ರಾಮುದಾಸನು ಕೆಳಗಿನ ಕಂದರದ ಕಡೆ ದೃಷ್ಟಿಯನ್ನು ಬೀರಿದಾಗ ಅಪೂರ್ವವಾದ ಅದ್ಭುತವಾದ ದೃಶ್ಯ ಕಾಣಬಂದಿತು. ಆ ತಲೆತಿರುಗಿಸುವ ಎತ್ತರದಿಂದ ಕಾಲಕೆಳಗೆ ಅಗಲವಾದ ಆಳವಾದ ಡೊಗರು ಭಯಾನಕವಾಗಿ ಬಾಯಿ ತೆರೆದಿದ್ದಿತು. ಶಂಭುನಾಥನು ಸಮೀಪಿಸಿದಾಗ ರಾಮುದಾಸನು “ರಾಮು, ಕೆಳಗೆ ನೋಡು, ಎಂತಹ ಭವ್ಯ ದೃಶ್ಯ!” ಎಂದು ಹೇಳದೆ ಇರಲಾಗಲಿಲ್ಲ. ಶಂಭುನಾಥನು ಕ್ಷಣ ಕಾಲ ಆ ಕಡೆಗೆ ತಲೆಯನ್ನು ತಿರುಗಿಸಿದನು. ನಿಸ್ಸಹಾಯ ನಾಗಿ “ಸ್ವಾಮಿಜಿ, ನಾನು ಹೋದೆ! ಹಿಡಿದುಕೊಳ್ಳಿ ಹಿಡಿದುಕೊಳ್ಳಿ! ಜಾರಿ ಹೋಗುತ್ತಿದ್ದೇನೆ!” ಎಂದು ಎರಡು ಕೈಗಳನ್ನೂ ಮೇಲೆ ಚಾಚಿದನು. ತಕ್ಷಣವೇ ರಾಮುದಾಸನು ಅವನ ಕೈಗಳನ್ನು ತನ್ನ ಎರಡು ಕೈಗಳಿಂದಲೂ ಭದ್ರವಾಗಿ ಹಿಡಿದುಕೊಂಡು ಮಾನವ ಶಕ್ತಿಯನ್ನು ಮೀರಿದ ಶಕ್ತಿಯಿಂದ ಶಂಭುನಾಥನನ್ನು ಅನಾಮತ್ತು ತಾನು ಕುಳಿತಿದ್ದ ಬಂಡೆಯ ಮೇಲಕ್ಕೆ ಎಳೆದುಕೊಂಡನು. ಆ ಮೇಲೆ ಐದು ನಿಮಿಷಕಾಲ ಶಂಭುನಾಥನು ಕಣ್ಣುಮುಚ್ಚಿಕೊಂಡಿದ್ದು ಆ ಮೇಲೆ ಮೂರ್ಛೆ ಯಿಂದ ಎಚ್ಚರಗೊಂಡನು.

ಆ ಮೇಲೆ ಅವನು, “ಸ್ವಾಮಿಜಿ, ಇನ್ನು ನೀವು ನನಗೆ ಕೆಳಗೆ ನೋಡು ಎಂದು ಹೇಳಬೇಡಿ. ಗಭೀರವಾದ ಆ ಭೀಕರ ಪಾತಾಳವನ್ನು ಸ್ವಲ್ಪ ನೋಡಿದ್ದಕ್ಕೇ ನನ್ನ ತಲೆ ತಿರುಗಿತು. ನೀವು ಹಿಡಿದು ಎಳೆದುಕೊಳ್ಳದಿದ್ದರೆ ನಾನು ಬೆಟ್ಟದ ಕೆಳಕ್ಕೆ ಉರುಳಿಬಿದ್ದು ಖಂಡಿತ ನಾಶವಾಗುತ್ತಿದ್ದೆ” ಎಂದನು.

ಅವರು ಇನ್ನೂ ಮೇಲಕ್ಕೆ ಹತ್ತಿ ಬೆಟ್ಟದ ಮೇಲೆ ಹುಲುಸಾಗಿ ಬೆಳೆದಿದ್ದ ಎತ್ತರವಾದ ಹುಲ್ಲಿನಲ್ಲಿ ಒಂದೇ ಸಮನಾಗಿ ಮುಂದರಿದು ಕೊನೆಗೆ ಶಿಖರದ ತುದಿಯನ್ನು ಸೇರಿದರು. ಆಗ ಸುಮಾರು ಮಧ್ಯಾಹ್ನ ಮೂರು ಗಂಟೆಯ ಸಮಯ. ಅವರು ಹುಲ್ಲಮೇಲೆ ಕುಳಿತು ಆ ಅಸಾಧ್ಯ ಎತ್ತರದಿಂದ ಕಾಶ್ಮೀರವನ್ನು ಸಾವ ಧಾನವಾಗಿ ನೋಡಿದರು. ರಾಮುದಾಸನು ಅಲ್ಲಿಂದ ಕಂಡ ದೃಶ್ಯ ವರ್ಣನಾ ತೀತವಾದದ್ದು. ಅದು ಅನಂತಾಕಾಶದ ವಿಸ್ತಾರದ ಒಂದು ದೃಶ್ಯ. ದೂರದಲ್ಲಿ ಎದ್ದಿರುವ ಬೆಟ್ಟಗಳ ಮಸಕಾದ ಆಕಾರ; ಗಾಜಿನಂತೆ ಮಿನುಗುತ್ತಿದ್ದ ಅನೇಕಾನೇಕ

ಸರೋವರಗಳು; ಇವುಗಳ ಮಧ್ಯೆ ಅಲ್ಲಲ್ಲಿ ವಿಶಾಲವಾದ ಹಸಿರು ಪಯಿರು, ಸಸ್ಯಸಮೃದ್ಧಿ.

ಶಂಭುನಾಥನಿಗೆ ಆಯಾಸವಾಗಿದ್ದಿತು. ಆದರೂ ಅವನು ಹರ್ಷವಾಗಿ ಚಟುವಟಿಕೆಯಾಗಿಯೇ ಇದ್ದನು. ಅವನು ಥರ್ಮೋಫ್ಲಾಸ್ಕಿನ ತಿರುಪು ಮುಚ್ಚಳ ವನ್ನೂ ತಿಂಡಿಯ ಚೀಲವನ್ನೂ ತೆರೆದನು. ಇಬ್ಬರೂ ಆಹಾರವನ್ನು ತೆಗೆದು ಕೊಳ್ಳುವ ಅಧಿಕಾರವನ್ನು ಶ್ರಮಪಟ್ಟು ಗಳಿಸಿದ್ದರು. ಅದನ್ನು ಹಸಿವಾರ ಭೋಗಿಸಿದರು. ಸುಮಾರು ಅರ್ಧ ಗಂಟೆಯ ಕಾಲ ವಿಶ್ರಮಿಸಿಕೊಂಡರು. ಕತ್ತಲಾಗುವ ಮುಂಚೆ ಬೆಟ್ಟದಿಂದಿಳಿಯಬೇಕಾದ್ದರಿಂದ ಬೇಗನೆ ಹೊರಡಬೇಕು ಎಂದು ಶಂಭುನಾಥನು ಸೂಚಿಸಿದನು. ಹತ್ತಿಬಂದ ದಾರಿಯನ್ನು ಬಿಟ್ಟು ಬೇರೊಂದು ಇಳಿಜಾರಾದ ದಾರಿಯಲ್ಲಿ ಇಳಿಯಬೇಕೆಂದು ನಿಷ್ಕರ್ಷೆಯಾಯಿತು. ಈ ದಾರಿಯಲ್ಲಿ ಜಾಗ್ರತೆಯಾಗಿ ನೆಲವನ್ನು ಮುಟ್ಟಬಹುದೆಂಬಂತೆ ಕಾಣುತ್ತಿದ್ದಿತು.

ಇವರು ಕೂಡಲೆ ಈ ಇಳಿಜಾರಿನಿಂದ ಇಳಿಯಲು ಆರಂಭಿಸಿದರು. ಸ್ವಲ್ಪದೂರ ಇಳಿದ ಮೇಲೆ ಅಗಾಧವಾದ ಕಂದರ ಸಿಕ್ಕಿ ಮುಂದೆ ಹೋಗದಂತೆ ಅಡಚಣೆಯನ್ನು ಒಡ್ಡಿತು. ಪಕ್ಕದ ಇನ್ನೊಂದು ಇಳುವರಿಯಲ್ಲಿ ಇಳಿದು ಹೋದರೆ ಅಲ್ಲಿಯೂ ಇಂತಹುದೇ ಒಂದು ಕಂದರ ಕಾಣಿಸಿತು. ಮತ್ತೊಂದು ದಿಕ್ಕಿನಲ್ಲಿ ಹೊರಟು ಅಲ್ಲಿ ಒತ್ತಾಗಿ ಬೆಳೆದಿದ್ದ ಮರಗಳ ಕೊಂಬೆಗಳ ಸಹಾಯದಿಂದ ಇಳಿಯಲಾಯಿತು. ಇಲ್ಲಿಯೂ ನೆಟ್ಟಗೆ ಇದ್ದ ಇನ್ನೊಂದು ಕಂದರ ದಾರಿಯನ್ನು ತಡೆಯಿತು. ಇಲ್ಲಿ ರಾಮದಾಸನಿಗೆ ಕಂದರದ ಗೋಡೆಯಲ್ಲಿ ಕೆಲವು ಮರದ ಬೇರುಗಳು ಕಾಣಿಸಿ ಅವನು ಅವುಗಳ ಸಹಾಯದಿಂದ ಇಳಿಯಲು ಯತ್ನಮಾಡಿದನು. ಆಗ ಶಂಭುನಾಥನು,

"ಸ್ವಾಮಿಜಿ, ನಾನು ಆ ದಾರಿಯಲ್ಲಿ ನಿಮ್ಮೊಡನೆ ಬರಲಾರೆ. ದಯವಿಟ್ಟು ಆ ದಾರಿಯನ್ನು ಬಿಟ್ಟುಬಿಡಿ" ಎಂದು ಅಡ್ಡಿಮಾಡಿದನು.

ಆದುದರಿಂದ ರಾಮದಾಸನು ಈ ಪ್ರಯತ್ನವನ್ನು ಬಿಡಬೇಕಾಯಿತು. ಇಷ್ಟು ಹೊತ್ತಿಗೆ ಸಂಜೆ ಹತ್ತಿರವಾಗುತ್ತ ಕಪ್ಪು ವಸ್ತ್ರವನ್ನು ಧರಿಸಿರುವ ನಿಶೆಯನ್ನು ಕರೆದು ಸಂಜ್ಞೆಮಾಡುವಂತೆ ಕಾಣುತ್ತಿದ್ದಿತು. ರಾಮದಾಸನೂ ಗೆಳೆಯನೂ ಸ್ವಲ್ಪ ಹೊತ್ತು ಮರಗಳ ಕೆಳಗೆ ವಿಶ್ರಾಂತಿ ತೆಗೆದುಕೊಂಡರು.

ಶಂಭುನಾಥನು "ಸ್ವಾಮಿಜಿ, ಬೆಟ್ಟವನ್ನಿಳಿಯಲು ದಾರಿ ಸಿಕ್ಕದೆ ಹೋದರೆ ಏನುಮಾಡುವುದು" ಎಂದು ಪ್ರಶ್ನಿಸಿದನು.

ರಾಮದಾಸನು "ಮಾಡುವುದೇ ? ಮತ್ತೇನು, ರಾತ್ರಿ ಇಲ್ಲೇ ಇರುವುದು" ಎಂದು ಉತ್ತರ ಕೊಟ್ಟನು.

ಶಂಭುನಾಥನು ಘಾಬರಿಯಿಂದ "ಅಯ್ಯೋ ! ನಾನು ರಾತ್ರಿ ಈ ಹಾಳು ಸ್ಥಳದಲ್ಲಿರಲಾರೆ. ಕಾಡುಮೃಗಗಳೆಂದರೆ ನನಗೆ ಹೆದರಿಕೆ. ಅವು ತಮ್ಮ ಗವಿಗಳಿಂದ

ಹೊರಗೆ ಬರುವ ಸಮಯವಾಯಿತು. ಸ್ವಾಮಿಜಿ, ನಾವು ಹತ್ತಿಬಂದ ಅದೇ ದಾರಿಯನ್ನು ಹುಡುಕೋಣ" ಎಂದನು.

ಆದರೆ ಇವರು ಹತ್ತಿಬಂದಿದ್ದ ಆ ದಾರಿಯೂ ತಪ್ಪಿಹೋಯಿತು. ವಿಸ್ತಾರವಾದ ಬೆಟ್ಟಗಳ ಸಾಲುಗಳ ಮಧ್ಯದ ದಿಕ್ಕುತೋಚದ ಉಬ್ಬುತಗ್ಗುಗಳಲ್ಲಿ ಇಬ್ಬರೂ ಸಿಕ್ಕಿಕೊಂಡಿದ್ದರು. ಹಳೇ ದಾರಿಯನ್ನು ಹುಡುಕುವ ಉದ್ದೇಶದಿಂದ ಇವರು ಅರ್ಧ ಗಂಟೆಗೆ ಮೇಲ್ಪಟ್ಟು ಅಲೆದಾಡಿದರು; ಅದು ವ್ಯರ್ಥವಾಯಿತು. ಶಂಭುನಾಥನಿಗೆ ಕ್ಷಣಕ್ಷಣಕ್ಕೂ ಉದ್ರೇಕ ವ್ಯಾಕುಲ ಹೆಚ್ಚಾಯಿತು. ಕೊನೆಗೆ ಇವರು ಕಾಲುದಾರಿಯ ಜಾಡನ್ನು ಮುಟ್ಟಿದರು. ಇದನ್ನು ಕಂಡಾಗ ಶಂಭುನಾಥನ ಆನಂದಕ್ಕೆ ಪಾರ ಇಲ್ಲ. ತಡೆಯಲಾರದ ಸಂತೋಷದಿಂದ ಅವನು ಕುಣಿದು ಕುಪ್ಪಳಿಸಿ ಹಾರುತ್ತಾ,

"ಸ್ವಾಮಿಜಿ, (ನೀವೇ ನನ್ನಪಾಲಿಗೆ ದೇವರು.) ದಾರಿಗೆ ಕರೆದುಕೊಂಡು ಬಂದಿರಿ. ಜಾಗ್ರತೆ ಹೋಗೋಣ ನಡೆಯಿರಿ", ಎಂದು ಕಿರಿಚಿದನು.

ಇಲ್ಲಿಂದ ಮುಂದಣ ದಾರಿಯನ್ನು ಶಂಭುನಾಥನು ಒಂದು ಕುದುರೆಯಂತೆ ಪೂರ್ಣ ವೇಗದಿಂದ ಧಾವಿಸಿ ಇಳಿದು ಮುಗಿಸಿದನು. ದಾರಿಯಲ್ಲಿ ಅಪಾಯಕರ ವಾಗಿ ಧುಮುಕಿದನು ; ವಿವೇಚನೆಯಿಲ್ಲದೆ ಅಜಾಗ್ರತೆಯಿಂದ ವರ್ತಿಸಿದನು. ರಾಮದಾಸನು ಅವನ ಹಿಂದೆಯೇ ಓಡುತ್ತಿದ್ದನು. ಸೂರ್ಯನು ಮುಳಗಿದ್ದನು. ಮುಸುಕಿನ ಹಿಂದೆ ಕತ್ತಲೆ ಒಂದೇ ಸಮನಾಗಿ ಮುಂದರಿಯುತ್ತಿದ್ದಿತು. ಬೆಟ್ಟದ ಬುಡಕ್ಕೆ ಹತ್ತಿರ ಬಂದ ಮೇಲೆ ಇವರು ಎಡಗಡೆ ತಿರುಗಿ ಒಂದು ಪಾಳು ಜಾಗಕ್ಕೆ ಬಂದರು. ಇಲ್ಲಿ ಐದು ನಿಮಿಷ ವಿಶ್ರಮಿಸಿಕೊಂಡು, ನಂತರ ಛಷ್ಮಶಾಹಿ ಎಂಬ ಈ ಪ್ರದೇಶದ ಪ್ರಸಿದ್ಧವಾದ ನೀರಿನ ಬುಗ್ಗೆಯ ಸಮೀಪದಲ್ಲಿ ರಸ್ತೆಯನ್ನು ಸೇರಿ ದರು. ಈ ಬುಗ್ಗೆಗೆ ಹೋಗಿ, ಬೇಕಾದಷ್ಟು ನೀರನ್ನು ಕುಡಿದರು. ಈ ಬುಗ್ಗೆಯ ನೀರಿನಲ್ಲಿ ಖಾಯಿಲೆಯನ್ನೂ ವ್ರಣಗಳನ್ನೂ ವಾಸಿಮಾಡುವ ಮಹತ್ತರ ಗುಣಗಳಿವೆ ಯೆಂದು ಪ್ರತೀತಿ. ಧನಿಕರೂ ಖಾಯಿಲೆಯವರೂ ಕುಡಿಯುವುದಕ್ಕೆ ಈ ನೀರನ್ನು ತರಿಸಿಕೊಳ್ಳುತ್ತಾರೆ.

ಆಮೇಲೆ ಇವರು ಊರಕಡೆ ಹೆಜ್ಜೆ ಇಟ್ಟರು. ಮಧ್ಯದಾರಿಯಲ್ಲಿ ಇವರನ್ನು ಊರಿಗೆ ಕರೆದುಕೊಂಡು ಹೋಗಲು ಬರುತ್ತಿದ್ದ ಶಂಭುನಾಥನ ಮೋಟಾರ್‌ಕಾರ್ ಸಿಕ್ಕಿತು. ಕಾರಿನೊಳಕ್ಕೆ ಹಾರಿ ಕುಳಿತು ಇವರು ಏಳೂವರೆ ಗಂಟೆಯ ಹೊತ್ತಿಗೆ ಅವನ ಮನೆಯನ್ನು ಮುಟ್ಟಿದರು.

### (ii) ದೈವೇಚ್ಛೆಯಂತೆ ಆಗಲಿ

ಇನ್ನೊಂದು ದಿನ ರಾಮದಾಸನು ಅಚ್ಛಾಬಲ್ ಎಂಬ ಸ್ಥಳಕ್ಕೆ ಭೇಟಿ ಕೊಟ್ಟನು. ಇದು ಕಾಶ್ಮೀರದ ಅತಿ ಅದ್ಭುತವಾದ ರಮ್ಯಸ್ಥಾನ. ಇದು ಸಣ್ಣ

ಆದರೂ ಬಹು ಚನ್ನಾಗಿ ತಿದ್ದಿರುವ ಉದ್ಯಾನಕ್ಕೂ ನೀರಿನ ಬುಗ್ಗೆಗೂ ಹೆಸರುವಾಸಿಯಾಗಿದೆ. ಜೊತೆಯಲ್ಲಿ ಶಂಭುನಾಥನೂ ಅವನ ತಂದೆಯೂ ಇದ್ದರು. ಅಲ್ಲಿಂದ ಹೊರಡಬೇಕೆಂದಿರುವಾಗ ಇವರಿಗೆ ಶ್ರೀ ರಾಮಕೃಷ್ಣ ಸಂಸ್ಥೆಗೆ ಸೇರಿದ ಒಬ್ಬ ಸಂನ್ಯಾಸಿ ದೊರೆತನು. ರಾಮುದಾಸನು ಅವನೊಡನೆ ಕೆಲವು ನಿಮಿಷ ಮಾತನಾಡಿದನು.

ರಾಮುದಾಸನು ಝೀಲಂ ನದಿಯ ಆಚೆಯ ಕೊನೆಗೆ ದೋಣಿಯಲ್ಲಿ ಹೋಗಲು ಶಂಭುನಾಥನು ಏರ್ಪಾಡು ಮಾಡಿದ ಒಂದು ವಿಹಾರ ಪ್ರಯಾಣವನ್ನು ಮಾಡಿದನು. ರಾಮುದಾಸನೂ, ಒಬ್ಬ ಸಿಖ್ ವ್ಯಾಪಾರಿಯೂ, ಅಲ್ಲದೆ ದೋಣಿಯಲ್ಲಿ ಹಗುರವಾದ ಮಿಷನ್‌ಗಳ ಪ್ರಚಾರಕನಾದ ಜರ್ಮನ್ ಒಬ್ಬನೂ ಮತ್ತು ಚಟುವಟಿಕೆಯ ಇವನ ಇಬ್ಬರು ಹೆಣ್ಣು ಮಕ್ಕಳೂ ಇದ್ದರು. ಜರ್ಮನಿಯವನು ದೋಣಿಗೆ ಹಗುರವಾದ ಇಂಜನ್ನನ್ನು ಜೋಡಿಸಿ ಅದರ ಕಾರ್ಯವನ್ನು ಪರೀಕ್ಷಿಸುತ್ತಿದ್ದನು. ದೋಣಿ ಈಗ ನೀರಿನ ಮೇಲೆ ರಭಸದಿಂದ ಸಾಗುತ್ತಿದ್ದಿತು. ಹುಡುಗಿಯರು ತುಂಬಾ ಹರ್ಷವಾಗಿ ಮೆಲ್ಲಗೂ ಗಟ್ಟಿಯಾಗಿಯೂ ನಗುತ್ತಿದ್ದರು. ಜರ್ಮನನಿಗೆ ರಾಮುದಾಸನ ಮೇಲೆ ಪ್ರೀತಿಯುಂಟಾಯಿತು. ಅವನು ತನಗೆ ಹಿಂದೂಸ್ಥಾನದ ಯೋಗಿಗಳಲ್ಲಿ ವಿಶೇಷ ಗೌರವವಿದೆಯೆಂದು ಹೇಳಿದನು. ಸಂಕೋಚವಿಲ್ಲದೆ ರಾಮುದಾಸನೊಂದಿಗೆ ನಾನಾ ವಿಷಯಗಳನ್ನು ಪ್ರಸ್ತಾಪಿಸಿದನು. ಎಲ್ಲರೂ ನದಿಯ ಮೇಲೆ ಹತ್ತು ಮೈಲಿ ಪ್ರಯಾಣ ಮಾಡಿ ತಂಪಾದ ಒಂದು ಸ್ಥಳದಲ್ಲಿ ಒಂದು ಗಂಟೆ ವಿಶ್ರಮಿಸಿಕೊಂಡು ನದಿಯಲ್ಲಿ ಸ್ನಾನ ಮಾಡಿ ಹರ್ಷವಾಗಿ ತಿಂಡಿಯನ್ನು ತಿಂದರು. ಹಿಂತಿರುಗಿದ ವೇಳೆ ಬೀಳ್ಕೊಡುವಾಗ, ಆ ಜರ್ಮನನು ತಾನು ಬೊಂಬಾಯಿಗೆ ಜಾಗ್ರತೆ ಹೊರಡುವುದಾಗಿ ಹೇಳಿ ರಾಮುದಾಸನೇನಾದರೂ ಕ್ಷಿಪ್ರದಲ್ಲಿ ಆ ಪಟ್ಟಣಕ್ಕೆ ಬಂದರೆ ತಾನು ಅವನನ್ನು ನೋಡಬೇಕೆಂಬ ಅಪೇಕ್ಷೆಯನ್ನು ತಿಳಿಸಿ ಬೊಂಬಾಯಿಯಲ್ಲಿಯ ತನ್ನ ವಿಳಾಸದ ಕಾರ್ಡನ್ನು ಕೊಟ್ಟನು. ರಾಮುದಾಸನು ಈ ಕಾರ್ಡನ್ನು ಭದ್ರವಾಗಿಟ್ಟುಕೊಂಡನು.

ಶಂಭುನಾಥನ ಮನೆಯಿಂದ ರಾಮುದಾಸನು ದುರ್ಗಾದಾಸನ ಬೇಡಿಕೆಯಂತೆ ಅವನ ವಿಶಾಲವಾದ ಮನೆಗೆ ಬದಲಾಯಿಸಿ ಅವನೊಂದಿಗೆ ಇನ್ನೊಂದು ವಾರದಷ್ಟು ಕಾಲ ಉಳಿದನು. ಆಗ ರಾಮುದಾಸನು ದುರ್ಗಾದಾಸನೊಂದಿಗೆ ಎಷ್ಟೋ ಸಲ ಸಂಭಾಷಣೆ ನಡೆಸಿದನು. ರಾಮುದಾಸನಿಗೆ ಈತನು ವಿದ್ಯಾವಂತ ಎನ್ನುವುದೂ ವಿಷಯಗಳನ್ನು ಚನ್ನಾಗಿ ಅರಿತವನು ಎನ್ನುವುದೂ ಕಂಡಿತು. ಇವನಲ್ಲಿ ವಿವೇಚನಾಶಕ್ತಿಯ ಜೊತೆಗೆ ಅಪಾರವಾದ ತಿಳಿವಳಿಕೆಯ ಭಂಡಾರ ಸೇರಿದ್ದಿತು. ಅವನು ಯಾವುದೆಂದರೆ ಆ ವಿಷಯದ ಮೇಲೆ ಮಾತನಾಡಬಲ್ಲನು. ಆತನೊಡನೆ ಸಾಧಾರಣವಾಗಿ ಸಂಭಾಷಣೆ ಮಾಡುವುದು ಬುದ್ಧಿಗೆ ಒಂದು ಹಬ್ಬದೂಟ. ಅವನು ಇತರ ವಿಷಯಗಳ ಮೇಲೆ ಎಷ್ಟೋ ಅಷ್ಟೇ ಸುಲಭವಾಗಿ ಧರ್ಮ ಮತ್ತು ತತ್ತ್ವ

ಶಾಸ್ತ್ರಗಳ ಮೇಲೂ ಮಾತನಾಡಬಲ್ಲನು. ಅವನು ಕಬೀರ್ ಮಹಾರಾಜರನ್ನೂ ಮತ್ತು ಅವರ ಗ್ರಂಥಗಳನ್ನೂ ಬಹಳ ಮೆಚ್ಚಿಕೊಂಡಿದ್ದನು. ಒಂದು ದಿನ ಕಬೀರ್ ಮಹಾರಾಜರ ಅತ್ಯಂತಗಹನ ತತ್ವ ಸಂಬಂಧದ ಪದ್ಯಗಳ ಮೂಲವನ್ನು ಓದಿ ಹೇಳಿ ಸ್ವತಃ ಹಿಂದಿಯಲ್ಲಿ ಪ್ರವೀಣನಾದ್ದರಿಂದ ರಾಮದಾಸನಿಗೆ ವ್ಯಾಖ್ಯಾನಮಾಡಿ ವಿವರಿಸಿದನು. ಆ ಉದಾತ್ತ ಸಂದೇಶದ ಹೃದಯವನ್ನು ಗ್ರಹಿಸಿ ಅರ್ಥವನ್ನು ಸ್ಪಷ್ಟಪಡಿಸಿದನು.

ಒಂದು ಮಧ್ಯಾಹ್ನ ರಾಮದಾಸನು, ದುರ್ಗಾದಾಸನ ಅಳಿಯ ಬೊಂಬಾಯಿನಿಂದ ಹೊಸದಾಗಿ ಪತ್ನೀ ಸಮೇತನಾಗಿ ಬಂದಿದ್ದ ಭವಾನೀಶಂಕರರಾಯನೊಂದಿಗೆ ಮೋಟಾರುಕಾರಿನಲ್ಲಿ ಶ್ರೀನಗರಕ್ಕೆ ಐವತ್ತು ಮೈಲಿ ದೂರದಲ್ಲಿರುವ ವೆರಿನಾಗ್ ಎಂಬ ಸ್ಥಳಕ್ಕೆ ಹೋದನು. ಈ ಸ್ಥಳವು ಕಾಶ್ಮೀರದ ಇತರ ರಮ್ಯ ಸ್ಥಳಗಳಂತೆ ಮನೋಹರವಾದ ದೃಶ್ಯವನ್ನು ತೋರಿತು. ಇದು ಬೆಟ್ಟದ ಮೇಲೆ ಒಂದು ನಿರ್ಜನ ಪ್ರದೇಶ. ಮರಗಳಿಂದ ತುಂಬಾ ನೆರಳಾಗಿ ಅನೇಕ ಬುಗ್ಗೆಗಳನ್ನೊಳಗೊಂಡಿದೆ. ಎರಡು ಸ್ಥಳಗಳಲ್ಲಿ ಸಹಜವಾದ ಬುಗ್ಗೆಗಳಿಂದ ಕೊಳವೆಗಳಂತೆ ನೀರು ಹರಿಯುತ್ತಿರುವುದನ್ನು ರಾಮದಾಸನು ಕಂಡನು. ಇಲ್ಲಿ ಒಂದೆರಡು ಗಂಟೆಗಳ ಕಾಲವಿದ್ದು ಇವರು ಸಾಯಂಕಾಲಕ್ಕೆ ಮುಂಚೆ ಶ್ರೀನಗರಕ್ಕೆ ಹಿಂತಿರುಗಿದರು.

ಇನ್ನೊಂದು ದಿನ ಈ ಸ್ನೇಹಿತರು ರಾಮದಾಸನನ್ನು ಮೋಟಾರ್‌ಕಾರಿನಲ್ಲಿ ಬೆಟ್ಟದ ಮೇಲಿನ ಕಿರಿದಾದ ಗವಿಯನ್ನು ನೋಡಲು ಮಟ್ಟಾನಿಗೆ ಕರೆದುಕೊಂಡು ಹೋದರು.

ಭವಾನೀ ಶಂಕರರಾಯನು ಕಾಶ್ಮೀರಕ್ಕೆ ಬೇಸಿಗೆ ರಜದಲ್ಲಿ ಬಂದಿದ್ದು, ರಜ ಪೂರೈಸುತ್ತ ಬಂದುದರಿಂದ ಬೊಂಬಾಯಿಗೆ ಹಿಂದಿರುಗಿ ಪ್ರಯಾಣ ಮಾಡಬೇಕಾಗಿದ್ದಿತು. ರಾಮದಾಸನು ಅವನ ಜೊತೆಯಲ್ಲಿ ಹೊರಡುವುದಾಗಿ ಸೂಚಿಸಿದನು. ಆದರೆ ದುರ್ಗಾದಾಸನು ರಾಮದಾಸನ ಮೇಲಣ ಮಹತ್ತಾದ ಪ್ರೀತಿಯಿಂದ ಅಡ್ಡಿ ಮಾಡಿ ತನ್ನೊಂದಿಗೆ ಇನ್ನೂ ಕೆಲವು ಕಾಲವಿರಬೇಕೆಂದು ರಾಮದಾಸನನ್ನು ಬೇಡಿಕೊಂಡನು. ಅವನ ಇಬ್ಬರು ಮಕ್ಕಳು ಕಬೀರ್ ಉದ್ಧವ ಸಹಾ ತಂದೆಯ ಜೊತೆಗೆ ಸೇರಿಕೊಂಡರು. ಆದರೆ ರಾಮದಾಸನ ನಿಶ್ಚಯ ದೃಢವಾಗಿದ್ದಿತು. ಅವನು ಬೆಳಗಿನ ದಿನ ಹೊರಡಬೇಕು. ರಾವಲ್ಪಿಂಡಿಗೆ ಹೋಗುವ ಬಸ್ಸಿನಲ್ಲಿ ಇಬ್ಬರಿಗೆ ಸ್ಥಳಕ್ಕೆ ಏರ್ಪಾಡಾಯಿತು. ಪ್ರಯಾಣಕ್ಕೆ ಗೊತ್ತಾದ ದಿನ ಬೆಳಗ್ಗೆ ಹಿಂದಿನ ದಿನ ಮೀಸಲಾಗಿಟ್ಟಿದ್ದ ಎರಡು ಸ್ಥಳಗಳೂ ಬೇರೆ ವಿಧದಲ್ಲಿ ಭರ್ತಿಯಾದುವೆಂದೂ, ಆ ದಿನ ಹೊರಡುವ ಇತರ ಬಸ್ಸುಗಳಲ್ಲಿ ಸ್ಥಳ ದೊರೆಯಲಾರದೆಂದೂ ಟೆಲಿಫೋನ್ ಮೂಲಕ ಸಮಾಚಾರ ಬಂದಿತು. ಭವಾನೀಶಂಕರರಾಯನು ಒಂದು ಪರೀಕ್ಷೆಗೆ ಕುಳಿತುಕೊಳ್ಳಬೇಕಾಗಿದ್ದುದರಿಂದ ನೇಮಕವಾದ ಕಾಲಕ್ಕೆ ಹೋಗಲೇಬೇಕಾಗಿದ್ದಿತು. ಈ ವರ್ತಮಾನವನ್ನು ಕೇಳಿ ಅವನಿಗೆ ಬಹಳ ಯೋಚನೆಗಿಟ್ಟಿತು. ಏಕೆಂದರೆ ಆ

ಗೊತ್ತಾದ ದಿವಸ ಹೊರಟರೆ ಮಾತ್ರ ಅವನು ಬೊಂಬಾಯಿಗೆ ಸಕಾಲದಲ್ಲಿ ಸೇರುವುದು ಸಾಧ್ಯವಾಗಿದ್ದಿತು.

ಆಗ ದುರ್ಗಾದಾಸನು ರಾಮದಾಸನ ಬಳಿಗೆ ಬಂದು,

"ರಾಮದಾಸರೇ, ನೀವು ಹೊರಡಕೂಡದೆಂಬುದೇ **ರಾಮನ** ಇಚ್ಛೆ. ಇನ್ನೊಂದು ತಿಂಗಳುಮಟ್ಟಿಗಾದರೂ ನೀವು ನನ್ನ ಸಂಗಡ ಇರಬೇಕು. ಅದಕ್ಕಾಗಿಯೇ ನಿಮ್ಮ ಪ್ರಯಾಣಕ್ಕೆ **ರಾಮನು** ಅಡ್ಡಿ ಹಾಕಿದ್ದಾನೆ. ಭವಾನೀ ಶಂಕರ ರಾಯರಿಗೆ ಹೇಗಾದರೂ ಸ್ಥಳ ಕೊಡಿಸೋಣ. ಆದರೆ ನಿಮಗೆ ಮಾತ್ರ ಸ್ಥಳ ಇರುವುದಿಲ್ಲ. ಎಂದರೆ ನೀವು ಇಲ್ಲಿಯೇ ನಿಲ್ಲಬೇಕು" ಎಂದನು.

ರಾಮದಾಸನು " **ರಾಮನಿ**ಚ್ಛೆ ಇದ್ದಂತೆ ಆಗಲಿ" ಎಂದು ಮಾತ್ರ ಉತ್ತರ ಕೊಟ್ಟನು.

ಐದು ನಿಮಿಷಗಳೊಳಗಾಗಿ, ಬೇರೆ ಒಂದು ಬಸ್ಸಿನಲ್ಲಿ ಎರಡು ಸ್ಥಳಗಳಿಗೆ ಏರ್ಪಾಡಾಗಿದೆ ಎಂದು ಟೆಲಿಫೋನ್ ವರ್ತಮಾನ ಬಂದಿತು.

ದುರ್ಗಾದಾಸನು "ನಿಮ್ಮ **ರಾಮನು** ಪವಾಡಕಾರನೆಂದು ನಾನು ಈಗ ಒಪ್ಪಿಕೊಳ್ಳಬೇಕಾಯಿತು" ಎಂದನು.

ರಾಮದಾಸನು, "**ಅವನು** ಇಚ್ಛಿಸಟ್ಟಾಗ ಆ ಇಚ್ಛೆಯನ್ನು ನಡೆಸಿಕೊಳ್ಳುವುದಕ್ಕೆ ಅವನಿಗೆ ಯಾವುದೂ ಅಡ್ಡಿಬರಲಾರದು. **ಅವನ** ಸಂಕಲ್ಪ ಸಂರಾಟ್ ಸಂಕಲ್ಪ" ಎಂದನು.

ಅಂತೆಯೇ ರಾಮದಾಸನು ಪ್ರೀತಿಯುಕ್ತರಾದ ಆ ಮನೆಯವರೆಲ್ಲರಿಂದ ಅಪ್ಪಣೆ ಪಡೆದು ಒಂದು ಬಸ್ಸಿನಲ್ಲಿ ಭವಾನೀಶಂಕರರಾಯನ ಮಗ್ಗುಲಲ್ಲಿ ಕುಳಿತುಕೊಂಡನು. ಬಸ್ಸು ರಾವಲ್ಪಿಂಡಿಗೆ ಬೆಟ್ಟದ ಹಾದಿಯಲ್ಲಿ ವೇಗದಿಂದ ಹಾರಿತು.

## (iii) ಸಹವಾಸದಂತೆ ನಡತೆ

ರಾತ್ರಿ ದೊಮೇಲ್‌ನಲ್ಲಿ ಪ್ರಯಾಣಿಕರ ಬಂಗಲೆಯಲ್ಲಿ ತಂಗಿದ್ದು ಇವರು ಮಾರನೆಯ ಬೆಳಗಾಗ ಮುಂದರಿದರು. ದಾರಿಯುದ್ದಕ್ಕೂ ಮನಮೋಹಕವಾದ ಭೂಮುಖದ ಉದಾರ ವೈಭವ, ಜಲಪಾತಗಳ ಧ್ವನಿ, ಸ್ಫಟಿಕಸದೃಶ ಜಲದ ಸ್ವಚ್ಛ ಝರಿಗಳು ಇವುಗಳಿಂದ ರಾಮದಾಸನು ಆನಂದಪಟ್ಟನು. ಸಾಯಂಕಾಲಕ್ಕೆ ಬಹು ಮುಂಚಿತವಾಗಿ ಇವರು ರಾವಲ್ಪಿಂಡಿಯನ್ನು ಸೇರಿದರು. ಜ್ವಾಲಾಜಿಗೆ ಹೋಗಿದ್ದಾಗ ರಾಮದಾಸನಿಗೆ ಸಿಕ್ಕಿ ಅವನನ್ನು ಅತಿಪ್ರೀತಿಯಿಂದ ಕಂಡಿದ್ದ ಜೀವನ್‌ದಾಸನಿಗೆ ರಾಮದಾಸನ ಆಗಮನದ ವಿಷಯವನ್ನು ಮುಂಚಿತವಾಗಿ ತಂತಿಯ ಮೂಲಕ ತಿಳಿಸಿದ್ದಿತು. ಆದರೆ ಆತನು ಎಷ್ಟೇ ಪ್ರಯತ್ನಪಟ್ಟರೂ ರಾಮದಾಸನನ್ನು ಬಸ್ ನಿಲ್ದಾಣದಲ್ಲಿ ಕಾಣಲು ಆಗಲಿಲ್ಲ. ಆದುದರಿಂದ ರಾಮದಾಸನು ಸಂಜೆಗೆ ಬೊಂಬಾಯಿಗೆ ಹೋಗುವವನಾಗಿದ್ದ ಭವಾನೀಶಂಕರರಾಯ

ನಿಂದ ಬೀಳ್ಕೊಂಡು, ಜೀವನ್‌ದಾಸನ ವಿಳಾಸ ಗೊತ್ತಿದ್ದುದರಿಂದ ಅವನ ಮನೆಯನ್ನು ಹುಡುಕಿಕೊಂಡು ಹೋಗಿ ಅವನ ಸಣ್ಣ ನಿವಾಸದ ಬಾಗಿಲಲ್ಲಿ ನಿಂತನು. ಜೀವನ್‌ದಾಸನ ಪತ್ನಿ ರಾಮುದಾಸನನ್ನು ಕಂಡೊಡನೆಯೇ ಬಹಳ ಆದರದಿಂದ ಅವನನ್ನು ಒಳಕ್ಕೆ ಕರೆದು, ಅವನನ್ನು ಮಂಚದ ಮೇಲೆ ಕುಳ್ಳಿರಿಸಿ, ಅವನ ಕಾಲುಗಳನ್ನು ಒತ್ತಲು ಆರಂಭಿಸಿದಳು. ಇಷ್ಟರಲ್ಲಿಯೇ ಜೀವನ್‌ದಾಸನು ಮನೆಗೆ ಬಂದನು. ರಾಮುದಾಸನು ತಮ್ಮಲ್ಲಿ ಬಂದನೆಂದು ಈ ಧನ್ಯ ದಂಪತಿಗಳ ಆನಂದಕ್ಕೆ ಮೇರೆ ಇಲ್ಲವಾಯಿತು. ಇವರ ಚಿಕ್ಕ ಮಗನಿಗೂ ತುಂಬ ಆನಂದ.

ನೆರಹೊರೆಯ ಭಕ್ತಮಾತೆಯರು ಬೆಳಗೂ ಬೈಗೂ ರಾಮುದಾಸನ ದರ್ಶನಕ್ಕಾಗಿ ಗುಂಪು ಗುಂಪಾಗಿ ತುಂಬಿದರು. ಜೀವನ್‌ದಾಸನ ಚಿಕ್ಕದಾದ ಮನೆ ಜನರಿಂದ ಕಿಕ್ಕಿರಿಯಿತು. ಸಾಯಂಕಾಲದ ಹೊತ್ತು ಸ್ನೇಹಿತರು ರಾಮುದಾಸನನ್ನು ಊರ ಆವರಣದ ಆಚೆ ಒಂದು ಉಪವನಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಇಲ್ಲಿ ಅವನು ಅವರಿಗೆ ಭಕ್ತಿ ಮತ್ತು ಭಗವನ್ನಾಮದ ಮಹಿಮೆಯ ವಿಚಾರವಾಗಿ ಉಪನ್ಯಾಸ ಕೊಡುತ್ತಿದ್ದನು. ಒಂದು ಸಲ ಇವನು ಹನ್ನೆರಡು ಜನ ಸ್ನೇಹಿತರೊಂದಿಗೆ ವನಕ್ಕೆ ಹೋಗುತ್ತಿದ್ದಾಗ ದಾರಿಹೋಕನೊಬ್ಬನು ರಾಮುದಾಸನು ಕಾಷಾಯ ವಸ್ತ್ರಗಳನ್ನು ಧರಿಸಿ ಸಂಸಾರಿಗಳೊಂದಿಗೆ ಇರುವುದನ್ನು ನೋಡಿ ಎಚ್ಚರಿಕೆಯ ನುಡಿಯನ್ನು ನುಡಿದನು.

"ಜೋಕೆ ! ಪ್ರಪಂಚ ಮಾಯೆ ಎಂದು ಇವರಿಗೆ ಉಪದೇಶಿಸಬೇಡ. ಹಾಗೆ ಮಾಡಿದರೆ ನೀನು ಅವರನ್ನು ತಪ್ಪುದಾರಿಗೆ ಎಳೆದಂತಾಗುತ್ತದೆ."

ಇವರಿಗೆ ಎಂದರೆ ಜೊತೆಯಲ್ಲಿದ್ದ ಸ್ನೇಹಿತರಿಗೆ. ಆ ಎಚ್ಚರದ ಗೆಳೆಯ ಹೋಗು ಹೋಗುತ್ತ ಈ ಮಾತನ್ನಾಡಿದನು.

ರಾಮುದಾಸನಿಗೆ ಪ್ರಪಂಚ ಈಗ ಮಿಥ್ಯವಾಗಿರಲಿಲ್ಲ. ಅವನು ಅದನ್ನು ಭಗವಂತನ ಆಕಾರ ಮತ್ತು ಚಲನ ರೂಪವಾದ ಅಭಿವ್ಯಂಜನವೆಂದು ಗಣಿಸುವ ಸ್ಥಿತಿಗೆ ಬಂದಿದ್ದನು. ಪ್ರಪಂಚ ಅವನಿಗೆ ದೈವಜೀವನದಿಂದ ತುಂಬಿರುವ ಭಗವಂತನ ಒಂದು ಬೃಹನ್ಮೂರ್ತಿ ಎಂಬುದಾಗಿ ಪ್ರಕಟವಾಗಿ ಕಾಣುತ್ತಿದ್ದಿತು.

ರಾಮುದಾಸನು ರಾವಲ್ಪಿಂಡಿಯಲ್ಲಿ ಒಂದು ವಾರ ಇದ್ದನು. ಆ ಕಾಲದಲ್ಲಿ ಎರಡು ದಿನವನ್ನು ಅವನು ಸದಾಶಿವರಾಯರ ಮತ್ತು ಅವರ ಮನೆಯವರ ಜೊತೆಯಲ್ಲಿ ಸಂತೋಷದಿಂದ ಕಳೆದನು.

ರಾಮುದಾಸನು ಆಮೇಲೆ ಹೋದದ್ದು ಅಮೃತಸರಕ್ಕೆ. ಗೋಪಾಲರಾಯರಿಗೆ ಮುಂಚಿತವಾಗಿಯೇ ವರ್ತಮಾನವನ್ನು ಕೊಟ್ಟದ್ದುದರಿಂದ ಅವರು ಅಲ್ಲಿ ಅವನನ್ನು ಸ್ವಾಗತಿಸಲು ಸ್ಟೇಷನ್ನಿಗೆ ಬಂದಿದ್ದರು. ಅವರ ಪತ್ನಿ ಗಿರಿಜಾಬಾಯಿ ತನ್ನ ತೌರು ಮನೆಗೆ ಹೋಗಿದ್ದಳು. ಗೋಪಾಲರಾಯರು ಒಬ್ಬ ಸೇವಕನೊಂದಿಗೆ ಖಾಲ್ಸ ಕಾಲೇಜಿನ ಭವ್ಯವಾದ ಮೈದಾನದಲ್ಲಿಯ ತಮ್ಮ ಬಂಗಲೆಯಲ್ಲಿದ್ದರು.

ಖಾಲ್ಸಾ ಕಾಲೇಜು ಮುಖ್ಯವಾಗಿ ಸಿಖ್ ಜನರ ವಿದ್ಯಾಭ್ಯಾಸಕ್ಕಾಗಿ ಏರ್ಪಟ್ಟಿರುವ ಸಂಸ್ಥೆ. ಅದು ಭವ್ಯವಾದ ಕಟ್ಟಡಗಳ ಸ್ತೋಮ. ಒಂದು ಸಾವಿರ ವಿದ್ಯಾರ್ಥಿಗಳಿಗೆ ಸಾಕಾಗುವಷ್ಟು ಊಟ ವಸತಿಯ ವಿಸ್ತಾರವಾದ ಕಟ್ಟಡಗಳಿವೆ. ಅದರ ವಿಶಾಲವಾದ ಪ್ರಾಕಾರದಲ್ಲಿಯೇ ಎಲ್ಲ ಅಧ್ಯಾಪಕರಿಗೂ ಉಪಾಧ್ಯಾಯರಿಗೂ ವಸತಿ ಗೃಹಗಳಿವೆ. ಇಲ್ಲಿಗೇ ಸೇರಿ ಒಂದು ಟಪ್ಪಾಲ ಆಫೀಸೂ ಇದೆ. ಇದನ್ನು ಒಂದು ವ್ರಜ ಎಂದು ಹೇಳಬಹುದು.

ಪ್ರತಿದಿನವೂ ಪ್ರಾತಃಕಾಲದಲ್ಲಿ ಎಲ್ಲಾ ವಿದ್ಯಾರ್ಥಿಗಳಿಗೂ ಧರ್ಮ ಸಂಬಂಧವಾದ ಶಿಕ್ಷಣ ಕೊಡಲು ವಿಶೇಷ ತರಗತಿಯನ್ನು ಏರ್ಪಡಿಸಿದ್ದಾರೆ. ಆಗ ವಿದ್ಯಾರ್ಥಿಗಳಿಂದ ಸ್ತೋತ್ರಗಳನ್ನು ಹಾಡಿಸಿ ಅವರು ಸಿಕ್ಖರ ವೇದವಾದ ಗ್ರಂಥಸಾಹೇಬ್ ಎಂಬ ಪುಸ್ತಕದ ವಾಚನ ವ್ಯಾಖ್ಯಾನಗಳನ್ನು ಕೇಳುವಂತೆ ಏರ್ಪಡಿಸಿದೆ. ಇಲ್ಲಿ ಸ್ವಚ್ಛವಾದ ಹರಿಯುವ ನೀರಿನ ತಟಾಕ ಇದೆ. ಇದರಲ್ಲಿ ವಿದ್ಯಾರ್ಥಿಗಳು ಪ್ರಾತಃಸ್ನಾನ ಆಹ್ನಿಕಗಳನ್ನು ಮಾಡುತ್ತಾರೆ.

ಗೋಪಾಲರಾಯರು ಪರಿಚಯ ಮಾಡಿಕೊಟ್ಟು ರಾಮುದಾಸನಿಗೆ ಕಾಲೇಜಿನ ಕೆಲವರು ಅಧ್ಯಾಪಕರ ಮತ್ತು ಉಪಾಧ್ಯಾಯರ ಗುರುತಾಯಿತು. ಇವರು ರಾಮುದಾಸನ ಬಳಿಗೆ ಅನೇಕ ವೇಳೆ ಬಂದು ಅವನನ್ನು ತಮ್ಮ ಮನೆಗಳಿಗೆ ಭೋಜನಕ್ಕೆ ಕರೆದರು. ಅವರೆಲ್ಲರೂ ಸಿಕ್ಖರು. ಸಿಖ್ ಜನರು ಕಾರ್ಯವಾಸಿಗಳು, ದಯಾಳುಗಳು, ಸಜ್ಜನರು. ಬೆಳಿಗ್ಗೆ ಮತ್ತು ಸಾಯಂಕಾಲ ಗೋಪಾಲರಾಯರು ತಮ್ಮ ಮೋಟಾರ್ ಬೈಸ್ಕಲ್ಲಿನ ಮೇಲೆ ರಾಮುದಾಸನನ್ನು ವೀರ್‌ಸಿಂಗ್ ಸಾಧುವಿನ ಭೇಟಿಗಾಗಿ ಕರೆದುಕೊಂಡು ಹೋಗುತ್ತಿದ್ದರು. ಈ ವೇಳೆಗೆ ಈ ಸಾಧು ಕಾಶ್ಮೀರದಿಂದ ಅಮೃತಸರಕ್ಕೆ ಹಿಂತಿರುಗಿದ್ದನು. ಈತನು ಪ್ರೀತಿ ಆದರಗಳ ಮೂರ್ತಿಯಾಗಿದ್ದನು. ಇಲ್ಲಿ ರಾಮುದಾಸನು "ವಡ್ಡ ಸಂತಜಿ" ಎಂಬ ಒಬ್ಬ ವೃದ್ಧ ಸಾಧುವನ್ನು ಕಂಡನು. ದಿನ ಕಳೆದು ಆತನಿಗೂ ರಾಮುದಾಸನ ಮೇಲೆ ತೀರಾ ಪ್ರೀತಿಯುಂಟಾಯಿತು. ಆತನು ದಿನವೂ ಬೆಳಗಿನ ಜಾವ ಮೂರು ಗಂಟೆಗೆ ರಾಮುದಾಸನನ್ನು ನೋಡಲು ಬಹು ದೂರದಿಂದ ಗೋಪಾಲರಾಯರ ಮನೆಗೆ ಬರುವನು. ರಾಮುದಾಸನನ್ನು ಆಲಂಗಿಸಿ ಅವನ ಭುಜಗಳ ಸುತ್ತ ಕೈಹಾಕಿ ಅಪ್ಪಿಕೊಂಡು,

"ನೀವು ಬಿರುವ ಸುವಾಸನೆಯನ್ನು ಉಸಿರೆಳೆಯಲು ಬರುತ್ತಿದ್ದೇನೆ. ನಿಮ್ಮ ಸಂಗಡ ಇರುವುದು ನನ್ನನ್ನು ಆನಂದಪಾರವಶ್ಯದಿಂದ ತುಂಬುತ್ತದೆ" ಎಂದು ಹೇಳುವನು.

ಒಂದು ಸಲ ರಾಮುದಾಸನು ಭಾಯಿವೀರಸಿಂಗನ ಮಹಡಿಯ ಮೇಲಿರುವ ಪೂಜೆಯ ಕೊಟಡಿಯಲ್ಲಿ ಕೆಲವು ಸಾಧುಗಳು ಮತ್ತು ಭಕ್ತರೊಂದಿಗೆ ಕುಳಿತಿದ್ದನು. ಸಿಕ್ಖರ ವೇದವಾದ ಗ್ರಂಥಸಾಹೇಬ್ ಗ್ರಂಥವನ್ನು ಭಕ್ತರು ಸರದಿಯ ಮೇಲೆ ಓದುತ್ತಿದ್ದರು. ಆಗ ಬಾಗಿಲಬಳಿ ಇದ್ದ ಒಬ್ಬನು ಈ ಸತ್ಸಂಗಕ್ಕೆ

ತನ್ನನ್ನು ಸೇರಿಸಿಕೊಳ್ಳಬೇಕೆಂದು ಪ್ರಾರ್ಥಿಸಿ ಹೇಳಿಕಳುಹಿಸಿದನು. ಭಾಯಿ ವೀರಸಿಂಗ್ ವಡ್ಡಸಂತಜಿ ಇವರ ಮಧ್ಯೆ ಆಲೋಚನೆ ನಡೆದು ಅವರು ಇವನು ಅಯೋಗ್ಯನೆಂದೂ ಗಲಾಟೆ ಮಾಡುತ್ತಾನೆಂದೂ, ಇವನನ್ನು ಒಳಕ್ಕೆ ಬಿಡಕೂಡದೆಂದೂ ನಿರ್ಧರಿಸಿದರು. ಆಗ ರಾಮದಾಸನು ಮಧ್ಯೆ ಮಾತನಾಡಿದನು. ಆಸಕ್ತಿಯಿಂದ ಬಂದಿರುವ ಭಕ್ತನ ವಿಷಯದಲ್ಲಿ ಯಾಚನೆ ಮಾಡಿದನು.

ರಾಮದಾಸನು ಹೇಳಿದ್ದು ಇದು: "ನೀವು ಅವನನ್ನು ಶುದ್ಧಾಂತಃಕರಣ ನಲ್ಲವೆಂದು ಭಾವಿಸಿದರೆ, ನಿಮ್ಮ ಸಹವಾಸದಲ್ಲಿ ಅವನನ್ನು ಸೇರಿಸಿಕೊಳ್ಳುವುದಕ್ಕೆ ಅದು ಮತ್ತಷ್ಟು ಪ್ರಬಲವಾದ ಕಾರಣ. ತನ್ನ ಪ್ರಭಾವಕ್ಕೆ ಒಳಗಾದ ಎಂಥವನ ಹೃದಯವನ್ನೂ ಪರಿಶುದ್ಧ ಮಾಡುವುದಕ್ಕೆ ಪೂರ್ಣಸಮರ್ಥವಾದ ಶಕ್ತಿ ಸತ್ಸಂಗ. ಅವನು ತಾನಾಗಿ ಇದನ್ನು ಬಯಸುತ್ತಿರುವುದರಿಂದ ಅದನ್ನು ಇಲ್ಲವೆನ್ನಬೇಡಿ." ಮೊದಲು ಸಾಧುಗಳು ಇದಕ್ಕೆ ಸಮ್ಮತಿಸಲಿಲ್ಲ. ಕೊನೆಗೆ ಒಪ್ಪಬೇಕಾಯಿತು. ಆತನನ್ನು ಒಳಕ್ಕೆ ಬರಲು ಬಿಟ್ಟರು. ಅವನು ಇವರೊಡನೆ ಕುಳಿತಿದ್ದು ಕೆಲವು ನಿಮಿಷಗಳ ನಂತರ ಹೊರಟು ಹೋದನು. ನಂತರ ದುಶ್ಚರಿತ್ರನ ಸಂಸರ್ಗ ಪ್ರಭಾವಗಳು ಎಂಥ ಅನರ್ಥಗಳನ್ನು ಉಂಟುಮಾಡಬಲ್ಲದೆಂಬುದನ್ನು ತಿಳಿಸಲು ತನ್ನದೊಂದುವಿಚಿತ್ರ ಅನುಭವವನ್ನು ಸಂತ ಭಾಯಿವೀರಸಿಂಗನು ವಿವರಿಸಿದನು.

ಒಂದು ಸಲ ಒಬ್ಬ ಹೆಂಗಸು ನನ್ನಲ್ಲಿ ಕಷ್ಟದ ಸ್ಥಿತಿಯಲ್ಲಿ ಬಂದಳು. ಈಚೆಗೆ ತಾನು ಸಹಿಸಲಾಗದ ತಲೆ ಶೂಲೆಗೆ ಒಳಗಾಗಿದ್ದಳೆಂದು ಹೇಳಿ ಔಷಧ ಬೇಕೆಂದು ಕೇಳಿದಳು. ತಲೆನೋವು ಹೇಗೆ ಪ್ರಾರಂಭವಾಯಿತೆಂದು ಕೇಳಿದರೆ ಒಬ್ಬ ಪರಿವ್ರಾಜಕ ಸಾಧುವಿನಿಂದ ಒಂದು ಮಂತ್ರದ ಉಪದೇಶ ಪಡೆದಾಗಿನಿಂದ ಹೀಗಾಗಿದೆ, ಎಂದು ಹೇಳಿದಳು. ಆಗಿನಿಂದೀಚೆಗೆ ಮಂತ್ರೋಚ್ಚಾರಣೆ ಮಾಡಿದಾಗಲೆಲ್ಲ ತಲೆಯಲ್ಲಿ ತೀವ್ರವಾದ ಶೂಲೆಯುಂಟಾಗುತ್ತದೆಯೆಂದಳು. ಮಂತ್ರೋಚ್ಚಾರಣೆ ಯನ್ನು ಬಿಟ್ಟುಬಿಡೆಂದು ನಾನು ಅವಳಿಗೆ ಸಲಹೆ ಕೊಟ್ಟೆನು. ಅವಳು ತಾನು ಆ ಸಾಧುವನ್ನು ಗುರುವಾಗಿ ಭಾವಿಸಿರುವುದಾಗಿಯೂ, ಮಂತ್ರೋಚ್ಚಾರಣೆಯನ್ನು ಬಿಡುವುದಿಲ್ಲವಾಗಿಯೂ ಹೇಳಿದಳು. ಮಂತ್ರೋಚ್ಚಾರಣೆಯನ್ನು ಬಿಡುವುದೊಂದೇ ಮಾರ್ಗವೆಂದು ನಾನು ನಿಯಮಿಸಿದೆನು. ಅದಕ್ಕೆ ಒಪ್ಪದೆ ಅವಳು ಹೊರಟು ಹೋದಳು. ಕೆಲವು ದಿವಸಗಳ ಮೇಲೆ ಮರಳಿ ಬಂದಳು. ಅವಳ ಸ್ಥಿತಿ ಮೊದಲಿ ಗಿಂತ ಬಹು ಶೋಚನೀಯವಾಗಿದ್ದಿತು. ತಲೆಶೂಲೆ ತೀರಾ ತಡೆಯಲಾಗದೆ ಇದ್ದಿತು. ಮಂತ್ರೋಚ್ಚಾರಣೆಯನ್ನು ಬಿಡಬೇಕೆಂದು ಪುನಃ ನಾನು ಹೇಳಲು, ಅವಳು ಹಾಗೆ ಮಾಡಲು ಯತ್ನಿಸಿದೆ ಆದರೆ ಮಂತ್ರ ತನ್ನನ್ನು ಹಿಡಿದುಕೊಂಡಿರು ವಂತೆ ಕಾಣುವುದರಿಂದ ಅದು ಸಾಧ್ಯವಾಗಲಿಲ್ಲ ಎಂದು ಹೇಳಿದಳು. ಆಗ ನಾನು ಮಂತ್ರದ ಪ್ರಭಾವವನ್ನು ಕಡಮೆ ಮಾಡಲು ಒಂದೇ ದಾರಿ, ದುರ್ಭಾಷೆಯಲ್ಲಿ ಆ ಗುರುವನ್ನು ಕುರಿತ ಅಸಹ್ಯವನ್ನು ನುಡಿಯಬೇಕು. ಮಂತ್ರಕ್ಕೂ ತನಗೂ

ಇನ್ನು ಮುಂದಕ್ಕೆ ಸಂಬಂಧವಿಲ್ಲವೆಂದು ನಿರಾಕರಿಸಬೇಕು, ಎಂದು ಸಲಹೆ ಮಾಡಿದೆನು. ಆಕೆಗೆ ಸಾಧುವಿನಲ್ಲಿ ತುಂಬಾ ಗೌರವವಿದ್ದುದರಿಂದ ಅವಳು ಈ ಸಲಹೆಯನ್ನು ಖಂಡಿತವಾಗಿ ನಿರಾಕರಿಸಿ ಹೊರಟು ಹೋದಳು.

ಒಂದು ವಾರದ ನಂತರ ಆಕೆ ಮೂರನೆಯ ಆವರ್ತಿ ಬಂದಳು. ಆಗ ತಲೆ ನೋವಿನ ಬಾಧೆಯಿಂದ ಸಂಪೂರ್ಣವಾಗಿ ಗುಣಹೊಂದಿ ತುಂಬಾ ಹರ್ಷವಾಗಿದ್ದಳು. ತಲೆನೋವು ಹಿಂದಿನ ವಾರ ಸಹಿಸಲು ತೀರಾ ಅಸಾಧ್ಯವಾದುದರಿಂದ ನನ್ನ ಸಲಹೆಯಂತೆ ನಡೆಯಬೇಕಾಯಿತೆಂದೂ ಮಂತ್ರೋಚ್ಚಾರಣೆ ಮಾಡುವುದಿಲ್ಲವೆಂದು ದೃಢನಿಶ್ಚಯಮಾಡಿದಳೆಂದೂ ಈ ನಿಶ್ಚಯವನ್ನು ಗುರುವನ್ನು ನಿಂದಿಸಿ ಅವನನ್ನು ನೀಚನೆಂದು ವರ್ಣಿಸಿದ ಮೇಲೆ ಮಾಡಿದಳೆಂದೂ ಹೇಳಿದಳು. ತಕ್ಷಣವೇ ತಲೆನೋವು ನಿಂತು ಮಂತ್ರದ ಪೀಡನ ನಾಶವಾಯಿತಂತೆ. ಆಮೇಲೆ ಅವಳು ಎಂದಿನಂತೆ ಸುಖವಾಗಿದ್ದಳು. ಆದುದರಿಂದ ಜೀವನದಲ್ಲಿ ಪಶುವೃತ್ತಿಯ ಮನುಷ್ಯನ ಸಂಸರ್ಗಕ್ಕಿಂತ ಹೆಚ್ಚಿನ ಕೇಡು ಯಾವುದೂ ಇಲ್ಲವೆಂದು ಭಾವಿಸುತ್ತೇನೆ. ಅಂತಹವನು ಭಾವುಕರೂ ಮೃದು ಸ್ವಭಾವದವರೂ ಆದ ಸರಳ ಹೃದಯರಿಗೆ ತನ್ನ ಸ್ವಭಾವವನ್ನು ಸುಲಭವಾಗಿ ಅಂಟಿಸಬಲ್ಲನು. ಅದೇ ನಿಯಮ ಪ್ರಕಾರ ನಮ್ಮ ಉದ್ಧಾರಕ್ಕೂ ಶಾಂತಿಗೂ, ಪರಿಶುದ್ಧ ವರ್ತನೆಯ ನಿಷ್ಕಲ್ಮಷ ಹೃದಯದ ಮನುಷ್ಯನ ಸಹವಾಸದಷ್ಟು ಉತ್ತಮ ಮಾರ್ಗ ಬೇರೆ ಇಲ್ಲ."

---

# ಅಧ್ಯಾಯ ೪೦

## ಅಮೃತಸರ–ಛತ್ರರಪುರ

### (i) ಸಿಕ್ಖರ ಸ್ವರ್ಣ ದೇವಾಲಯ

ಒಂದು ಸಂಜೆ ಗೋಪಾಲರಾಯರು ರಾಮದಾಸನನ್ನು ಸಿಕ್ಖರ ಮುಖ್ಯ ಗುರುದ್ವಾರವಾದ ಪ್ರಸಿದ್ಧ ಸ್ವರ್ಣ ದೇವಾಲಯವನ್ನು ನೋಡಲು ಕರೆದುಕೊಂಡು ಹೋದರು. ಈ ದೇವಸ್ಥಾನ ಒಂದು ದೊಡ್ಡ ತಟಾಕದ ಮಧ್ಯೆ ಇದೆ. ಹೊರಗಿನ ನೆಲದಿಂದ ಇದಕ್ಕೆ ಹೋಗಲು ತಟಾಕದ ಒಂದು ಕಡೆಯಿಂದ ಒಂದು ಸೇತುವೆ ಇದೆ. ತಟಾಕದ ಸುತ್ತ ನಾಲ್ಕು ದಡಗಳಲ್ಲಿಯೂ, ನಾನಾ ಬಣ್ಣದ ಥಳಥಳಿಸುವ ಚಚ್ಚೌಕವಾದ ಅಮೃತಶಿಲೆಯ ಹಲಗೆಗಳನ್ನು ಚಿತ್ರವಾಗಿ ಹದಿಸಿದ್ದಾರೆ. ನೋಟಕರು ಈ ಶಿಲೆಗಳ ಮೇಲೆ ಸರೋವರವನ್ನು ಪ್ರದಕ್ಷಿಣೆ ಮಾಡಿ ಆಮೇಲೆ ಸೇತುವೆಯ ಮೇಲೆ ಹೋಗಿ ದೇವಸ್ಥಾನವನ್ನು ಹೊಕ್ಕರು. ಇದರಲ್ಲಿ ಪ್ರವೇಶ ಮಾಡಲು ಸರ್ವರಿಗೂ ಅವಕಾಶ ಉಂಟು. ಜಾತಿ ಮತ ಬಣ್ಣಗಳ ಭೇದವಿಲ್ಲ. ಬರುವವರು

ಪಾದರಕ್ಷೆಗಳನ್ನು ಹೊರಗೆ ಬಿಟ್ಟು ಕಾಲು ತೊಳೆದುಕೊಂಡು ಹೋಗಬೇಕು. ರುಮಾಲನ್ನು ತೆಗೆಯಕೂಡದು. ಇಷ್ಟು ಮಾತ್ರ ನಿರ್ಬಂಧ. ಸರೋವರಕ್ಕೆ ಪ್ರವೇಶ ಮಾಡುವ ಸ್ಥಳದಲ್ಲಿ ಕಾಲುಗಳನ್ನು ತೊಳೆದುಕೊಳ್ಳಲು ಎರಡು ನಲ್ಲಿಗಳಿವೆ. ಅಲ್ಲಿ ಬಿಡುವ ಪಾದರಕ್ಷೆಗಳ ಕಾವಲಿಗಾಗಿ ಒಬ್ಬ ನೌಕರನೂ ಇರುತ್ತಾನೆ.

ಇನ್ನು ದೇವಸ್ಥಾನ. ಇದು ಅಂದವಾದ ಕಟ್ಟಡ. ಮಾಳಿಗೆಯ ನಾಲ್ಕು ಮೂಲೆಗಳಲ್ಲೂ ಸಣ್ಣಗೋಪುರಗಳು; ಮಧ್ಯದಲ್ಲಿ ಭುವನೇಶ್ವರಿ. ನೆಲಹೊರತು ದೇವಾಲಯದ ಉಳಿದ ಭಾಗಕ್ಕೆಲ್ಲಾ ಚಿನ್ನದ ತಗಡನ್ನು ಹೊಡೆದಿದೆ. ಮೇಲ್ಛಾವಣಿ, ಭುವನೇಶ್ವರಿಗಳು, ಗೋಡೆಗಳು ಎಲ್ಲ ಚಿನ್ನದವು. ದೇವಸ್ಥಾನದ ನಾಲ್ಕು ಕಡೆಯೂ ಇರುವ ಕೈಸಾಲೆಯಿಂದ ಗರ್ಭಗುಡಿಗೆ ಹೋದರೆ, ಮಧ್ಯದಲ್ಲಿ ಹಸನಾದ ರೇಷ್ಮೆ ಬಟ್ಟೆ ಹೊದಿಸಿ ಹೂವು ಹಾರಗಳಿಂದ ಅಲಂಕರಿಸಿರುವ ಪೀಠದ ಮೇಲೆ ಒಂದು ದೊಡ್ಡ ಪುಸ್ತಕ ಕಾಣುತ್ತದೆ. ಅದು "ಗ್ರಂಥ್‌ಸಾಹೇಬ್." ಈ ಕೊಟಡಿಯೇ ಮುಖ್ಯ ಪ್ರಾರ್ಥನ ಮಂದಿರ. ಇಲ್ಲಿ ಈ ಪವಿತ್ರ ಗ್ರಂಥದ ಎದುರಲ್ಲಿ ಉತ್ತಮ ಸಂಗೀತಗಾರರು ಪಕ್ಕವಾದ್ಯಗಳೊಡನೆ ಕೀರ್ತನ ಮಾಡಲು ನೆರೆಯುತ್ತಾರೆ. ನಾಟಕ ಶಾಲೆಗಳಲ್ಲಿರುವಂತೆ ಪ್ರೇಕ್ಷಕರ ಮಹಡಿ ಇದೆ. ಇಲ್ಲಿಗೆ ಹತ್ತಿ ಹೋಗಲು ಮೆಟ್ಟಿಲುಗಳಿವೆ. ಪ್ರೇಕ್ಷಕರು ಮಹಡಿಯಲ್ಲಿ ಕುಳಿತು ಕೆಳಗೆ ನಡುಮನೆಯಲ್ಲಿ ನಡೆಯುವ ಕೀರ್ತನವನ್ನು ಆಲಿಸುತ್ತಾರೆ. ಬೆಳಗಿನ ಝಾಮ ಮೂರು ಗಂಟೆಯಿಂದ ರಾತ್ರಿ ಹತ್ತು ಹನ್ನೆರಡು ಗಂಟೆಯವರೆಗೂ ಕೀರ್ತನವಾಗುತ್ತಲೇ ಇರುತ್ತದೆ. ಸಾವಿರಾರು ಜನ, ಇವರಲ್ಲಿ ಸಿಕ್ಖರೇ ಹೆಚ್ಚು, ಪ್ರತಿದಿನವೂ ಈ ದೇವಾಲಯಕ್ಕೆ ಬರುತ್ತಾರೆ. ಇಲ್ಲಿಗೆ ಮೊದಲು ಸಲ ಹೋದಾಗ ರಾಮದಾಸನು ಸ್ವಲ್ಪ ಕಾಲ ಮಾತ್ರ ಇದ್ದನು. ಇನ್ನೊಂದು ದಿನ ಗೋಪಾಲರಾಯರೊಂದಿಗೆ ಬೆಳಗಿನ ಝಾಮ ಮೂರು ಗಂಟೆಗೇ ಬಂದು, ಬೆಳಗಾಗುವವರೆಗೂ ಮಹಡಿಯ ಗ್ಯಾಲರಿಯಲ್ಲಿ ಕುಳಿತನು. ನಡುಮನೆಯಿಂದ ಮೇಲಕ್ಕೆ ಇವನಿಗೆ ಕೇಳಿ ಬರುತ್ತಿದ್ದ ಸಂಗೀತ ಬಹು ಮನೋಹರವಾಗಿ ಇದ್ದಿತು. ಕೊಳದ ಆಚೆ, ದೇವಾಲಯಕ್ಕೆ ಅಭಿಮುಖವಾಗಿ, ಸಿಕ್ಖರ ಪ್ರಸಿದ್ಧ ಹತ್ತು ಗುರುಗಳಲ್ಲಿ ಒಬ್ಬ ಗುರುವಿನ ಮಠವಿದೆ.

ಈ ದೇವಾಲಯವನ್ನು ಮುಸಲ್ಮಾನ್ ಧಾಳಿಕಾರರ ಹಾವಳಿಯಿಂದ ರಕ್ಷಿಸಲು ತಮ್ಮ ಪೂರ್ವಜರು ಮಾಡಿದ ಪ್ರಚಂಡ ಯುದ್ಧಗಳನ್ನು ವರ್ಣಿಸುವುದರಲ್ಲಿ ಸಿಕ್ಖರಿಗೆ ಹೆಮ್ಮೆ. ಈ ದೇವಾಲಯದ ರಕ್ಷಣೆಯಲ್ಲಿ ಎಷ್ಟೋ ಅಮೂಲ್ಯ ಸಿಖ್ ರಕ್ತ ತಟಾಕಕ್ಕೂ ಮತ್ತು ಸುತ್ತಲೂ ಹರಿದಿದೆ. ಸಿಖ್ ಜನರು ಈಗಲೂ ಶೌರ್ಯ ಮತ್ತು ದೃಢ ಸಂಕಲ್ಪಗಳಿಂದ ಭೂಷಿತರಾದ ಯೋಧ ಜನಾಂಗ. ಇವರಲ್ಲಿ ಈ ಯೋಧ ಶೀಲವನ್ನು ಬಿತ್ತಿದವರು ಅವರ ಪರಮೋತ್ಕೃಷ್ಟ ಗುರುಗಳಲ್ಲಿ ಒಬ್ಬನಾದ ಗುರು ಗೋವಿಂದ್. ಆ ಗುರು ತಾನು ಭಯರಹಿತನಾದ ಯೋಧನಾಗಿದ್ದು, ಅವರ ಧಾರ್ಮಿಕನಾಯಕನೂ ಆಗಿದ್ದನು. ಈತನು ತನ್ನ ಅನುಯಾಯಿಗಳಿಗೆ ಶಿಕ್ಷಣಕೊಟ್ಟು

ತಮ್ಮ ಧರ್ಮವನ್ನೂ ಮತ್ತು ಪವಿತ್ರ ದೇವಾಲಯವನ್ನೂ ವಿದೇಶಿಯರ, ಅದರಲ್ಲೂ ಮುಸಲ್ಮಾನರ, ಧಾಳಿಗಳಿಂದ ರಕ್ಷಿಸಲು ಸೇನೆಯನ್ನು ನಿರ್ಮಿಸಿದನು. ಸಿಕ್ಖರ ವಿಶಿಷ್ಟ ಲಾಂಛನಗಳು ಬೆಳೆಸಿರುವ ಗಡ್ಡ ಮತ್ತು ಹುಟ್ಟು ತಲೆಗೂದಲು. ಇದನ್ನು ಎತ್ತಿ ನೆತ್ತಿಯ ಮೇಲೆ ಗಂಟುಹಾಕಿ ಅದರ ಮೇಲೆ ತಪ್ಪದೆ ಒಂದು ದೊಡ್ಡ ಪೇಟ ವನ್ನು ಧರಿಸುತ್ತಾರೆ. ಒಂದು ಮುಂಗೈಗೆ ಒಂದು ಕಬ್ಬಿಣದ ತಂತಿಯ ಬಳೆ, ಸೊಂಟದಲ್ಲಿ ಜೋಲುವ ಕೃಪಾಣ ಎಂದರೆ ಒಂದು ಚಿಕ್ಕ ಕತ್ತಿ ಇರುತ್ತವೆ. ಸಿಕ್ಖರು ಸ್ವಭಾವವಾಗಿ ಸಭ್ಯರು, ದಯಾಳುಗಳು. ಇವರು ಗುರುನಾನಕರನ್ನು ಅತ್ಯಂತ ಗೌರವದಿಂದ ಕಂಡರೂ ಇತರ ಧರ್ಮಗಳ ಸಾಧುಗಳ ಮತ್ತು ಅವತಾರ ಪುರುಷರ ಮಹತ್ವವನ್ನೂ ಒಪ್ಪುತ್ತಾರೆ.

ಗುರುನಾನಕರು ಅವರ ಚರಿತ್ರೆಯಲ್ಲಿ ಕಂಡು ಬರುವಂತೆ ಮಹಿಮಾ ಪುರುಷರು. ಅವರ ಕಾಲದಲ್ಲಿ ಅವರು ಅನೇಕ ಪವಾಡಗಳನ್ನು ಮಾಡಿದ್ದರೆಂದು ಹೇಳುತ್ತಾರೆ. ಇವರ ಅತಿ ಮಾನುಷ ಕರ್ಮಗಳಲ್ಲಿ ಬಹು ಸಲ ಹೊಗಳತಕ್ಕದ್ದು ಇವರು ಮಕ್ಕಾವನ್ನು ತಿರುಗುವಂತೆ ಮಾಡಿದುದು. ಇವರು ಪರಿವ್ರಾಜಕ ಜೀವನ ದಲ್ಲಿ ಮಕ್ಕಾದಲ್ಲಿದ್ದಾಗ ಮುಸಲ್ಮಾನರ ಶ್ರೇಷ್ಠದೇವಾಲಯದ ಕಡೆ ಕಾಲುನೀಡಿ ಮಲಗಿಕೊಂಡಿದ್ದರಂತೆ. ತಮ್ಮ ಪವಿತ್ರ ದೇವಾಲಯಕ್ಕೆ ಅಗೌರವ ತೋರುತ್ತಿ ದ್ದಾರೆಯೆಂದು ಮುಸಲ್ಮಾನರು ಇವರ ಕಾಲುಗಳನ್ನು ಬೇರೆ ಬೇರೆ ಕಡೆಗೆ ತಿರುಗಿ ಸಿಟ್ಟರಂತೆ. ಅವರ ಈ ಕರ್ಮವನ್ನನುಸರಿಸಿ ಮಕ್ಕಾವೂ ತಿರುಗಿತಂತೆ. ಇತರ ಹಿಂದೂಗಳಲ್ಲಿ ವಾಡಿಕೆ ಇರುವ ಜಾತಿಭೇದ ವಿಗ್ರಹಾರಾಧನೆಗಳಲ್ಲಿ ಸಿಕ್ಖರಿಗೆ ನಂಬಿಕೆ ಯಿಲ್ಲ. ಸಿಖ್ ಸ್ತ್ರೀಯರು ಸುಶಿಕ್ಷಿತರು. ಅನುಕರಿಸಿ ಬಂದಿರುವ ಹಳೆಯ ಪದ್ಧತಿ ಘೋಷಾವನ್ನು ಇವರು ತ್ಯಜಿಸಿದ್ದಾರೆ. ಹಾಗೆಯೇ ಈಗಿನ ಅನಾರೋಗ್ಯ ಕರವಾದ ನವನಾಗರಿಕ ಪದ್ಧತಿಗಳಿಗೂ ಇವರು ಸಿಕ್ಕಿಬಿದ್ದಿಲ್ಲ. ಸಿಕ್ಖರು ತಮ್ಮ ಹೆಸರುಗಳ ಕೊನೆಗೆ ಸಿಂಹ ವಾಚಕವಾದ ಸಿಂಗ್ ಎಂಬ ಪದವನ್ನು ಸೇರಿಸುತ್ತಾರೆ. ನಿಜವಾಗಿಯೂ ಇವರು ಮೃಗರಾಜನಂತೆ ಗಾಂಭೀರ್ಯ, ಧೈರ್ಯ, ಶೌರ್ಯದ ಜನ. ಇವರ ಅಕಾಲಿ ದಳಗಳು ಪ್ರದರ್ಶಿಸಿದ ಭಾಸ್ವರ ಶೌರ್ಯ ನಿನ್ನೆಮೊನ್ನೆಯ ಚರಿತ್ರೆ.

ರಾಮದಾಸನು ಒಟ್ಟಿನಲ್ಲಿ ಹದಿನಾಲ್ಕು ದಿನ ಅಮೃತಸರದಲ್ಲಿದ್ದು ನಂತರ ಝಾನ್ಸಿಗೆ ಪ್ರಯಾಣ ಮಾಡಿದನು.

## (ii) ರಾಮನಾಮದ ಗುಟ್ಟು

ಎಂದಿನಂತೆ ರಾಮದಾಸನು ಝಾನ್ಸಿಯಲ್ಲಿ ರಾಮಮಂದಿರಕ್ಕೆ ಹೋಗಿ ನಿಂತನು. ಪಂಡಾಜಿ ರಾಮದಾಸನನ್ನು ಬಾಚಿ ತಬ್ಬಿಕೊಂಡು ಸ್ವಾಗತಿಸಿದನು. ರಾಮಕಿಂಕರ, ಮಹದೇವ ಪ್ರಸಾದ್, ಮತ್ತು ಇತರ ಸ್ನೇಹಿತರು ರಾಮದಾಸನಿಗೆ ಎಂದಿನಂತೆಯೇ ಪ್ರೀತ್ಯಾದರಗಳನ್ನು ತೋರಿಸಿದರು. ಇಲ್ಲಿಗೆ ರಾಮದಾಸನ

ಭೇಟಿಗಾಗಿ ಅಲಹಾಬಾದಿನಿಂದ ರಾಮಚಂದ್ರಗುಪ್ತನು, ಗಣೇಶಪ್ರಸಾದನೆಂಬ ಹೊಸ ಸ್ನೇಹಿತನನ್ನೂ ಕರೆದುಕೊಂಡು ಬಂದನು.

ಮಹೋಬದ ಒಂದು ಆಹ್ವಾನ ರಾಮದಾಸನನ್ನು ಅಲ್ಲಿಗೆ ಒಯ್ದಿತು. ಆವನು ಗೋಃಕಾರ್ .ಪರ್ವತದ ಗುಹೆಯಲ್ಲಿ ಪುನಃ ಹತ್ತು ದಿವಸ ಕಾಲ ನಿಂತನು. ಜಗನ್ನಾಥ ಮತ್ತು ಇತರರು ಅವನಿಗೆ ಆಹಾರವನ್ನು ಒದಗಿಸಿದರು. ಒಂದು ಮಧ್ಯಾಹ್ನ ಒಬ್ಬ ಯುವಕನು ರಾಮದಾಸನನ್ನು ನೋಡಲು ಬಂದನು. ಇವನ ಹಣೆ ಮಂಡಿಗಳ ಮೇಲೆ ಘಾಯಗಳಿದ್ದುವು. ಇವನು ಇವುಗಳ ಸಂಬಂಧವಾದ ಕಥೆಯನ್ನು ಹೇಳಿದನು.

"ಮಹಾರಾಜ್, ನಿಮ್ಮ ದರ್ಶನಕ್ಕಾಗಿ ನಿನ್ನೆ ಸಾಯಂಕಾಲ ಹೊರಟೆ. ಇಲ್ಲಿಗೆ ಅರ್ಧದಾರಿ ಬಂದಾಗ ಕತ್ತಲು ಕವಿದಿತು. ಮಸಕು ಬೆಳಕಿನಲ್ಲಿ ನನಗೆ ನಡುರಸ್ತೆಯಲ್ಲಿ ಒಂದು ದೊಡ್ಡ ಚಿರತೆ ಹಿಂಗಾಲ ಮೇಲೆ ಕುಳಿತು ಕ್ರೂರವಾಗಿ ನನ್ನನ್ನೇ ನೋಡುತ್ತಿದ್ದುದು ಕಂಡಿತು. ನನಗೆ ಬಹಳ ಹೆದರಿಕೆಯಾಯಿತು. ಕಿರಿಚಿಕೊಂಡು ಹಿಂದಿರುಗಿ ಸಿಕ್ಕಾಪಟ್ಟೆ ಓಡಿದೆ. ಕತ್ತಲಲ್ಲಿ ಕಲ್ಲುಗಳ ಮೇಲೆ ಅನೇಕ ಸಲ ಮುಗ್ಗರಿಸಿಬಿದ್ದೆ. ಅಂತೂ ಆ ದುಷ್ಟ ಪ್ರಾಣಿಯಿಂದ ಪಾರಾಗಿ ಮನೆ ಸೇರಿದೆ. ಪ್ರಾಣಭಯದಿಂದ ಓಡುತ್ತಿರುವಾಗ ಬಿದ್ದುದರ ಗುರುತುಗಳು ನಿಮಗೆ ಈಗ ಕಾಣುವ ಈ ಘಾಯಗಳು."

ಛತ್ತರಪುರದಿಂದ ಬಂದ ಒಂದು ಆಹ್ವಾನದ ಮೇಲೆ ರಾಮದಾಸನು ಮಹೋಬದಿಂದ ಅಲ್ಲಿಗೆ ಪ್ರಯಾಣ ಮಾಡಿ ಅಲ್ಲಿ ಕೃಷ್ಣದೇವಾಲಯದಲ್ಲಿ ನಿಂತನು. ಭವನೀಪ್ರಸಾದನು ತನ್ನ ಪ್ರೀತಿ ಸತ್ಕಾರಗಳಲ್ಲಿ ರಾಮದಾಸನನ್ನು ಮುಳುಗಿಸಿದನು. ಸ್ವಾಮಿ ನಿರ್ಭಯಾನಂದಜಿಯವರು ತಮ್ಮ ಪತ್ನಿಯೊಡನೆ ನವಗಾಂವದಲ್ಲಿರುವುದಾಗಿ ಇಲ್ಲಿ ತಿಳಿದು ರಾಮದಾಸನು ಅವರ ದರ್ಶನಕ್ಕಾಗಿ ಆ ಹಳ್ಳಿಗೆ ಹೋದನು. ಮೋಟಾರ್ ಬಸ್ಸಿನಲ್ಲಿ ಪ್ರಯಾಣ ಮಾಡಿ ಅವರಿದ್ದ ಸ್ಥಳವನ್ನು ಒಂದು ಸಂಜೆ ಮುಟ್ಟಿದನು. ರಾಮದಾಸನನ್ನು ಕಂಡು ಆ ಸಭ್ಯದಂಪತಿಗಳಿಬ್ಬರಿಗೂ ಅತ್ಯಾನಂದವಾಯಿತು. ಆದರೆ ರಾಮದಾಸನು ಅವರೊಂದಿಗೆ ನಿಂತ ಕಾಲ ಅಲ್ಪ. ಏಕೆಂದರೆ ಸುಮಾರು ಏಳೂವರೆ ಗಂಟೆ ಸಮಯದಲ್ಲಿ ಭವಾನೀಪ್ರಸಾದನು ತನ್ನ ಸಾಧ್ವಿ ಪತ್ನಿಯೊಂದಿಗೆ ಹಠಾತ್ತಾಗಿ ಮೋಟಾರ್ ಕಾರಿನಲ್ಲಿ ಬಂದಿಳಿದನು. ಛತ್ತರಪುರದ ಮಹಾರಾಜರು ರಾಮದಾಸನ ದರ್ಶನಕ್ಕಾಗಿ ಆತುರರಾಗಿದ್ದಾರೆಂದೂ, ಕೂಡಲೆ ರಾಮದಾಸನು ಛತ್ತರಪುರಕ್ಕೆ ಹೊರಡಬೇಕೆಂದೂ ಇವರು ಒತ್ತಾಯಮಾಡಿದರು. ಆದುದರಿಂದ ರಾಮದಾಸನು ಆ ರಾತ್ರಿಯೇ ಛತ್ತರಪುರಕ್ಕೆ ಹಿಂದಿರುಗಿದನು.

ಮಾರನೆ ದಿನ ಹೊತ್ತಿಗೆ ಮುಂಚೆ, ಮಹಾರಾಜರ ಕಾರ್ಯದರ್ಶಿ ಭವಾನೀ ಪ್ರಸಾದನ ಮಗ ಗುಲಾಬ್‌ರಾಯ್ ರಾಮದಾಸನನ್ನು ಅರಮನೆಗೆ ಕರೆದುಕೊಂಡು ಹೋದನು. ಮಹಾರಾಜರು ಜರ್ಝರಿತ ವೃದ್ಧರು; ಕೃಶಿಸಿ ದುರ್ಬಲರಾಗಿದ್ದರು. ರಾಮದಾಸನು ಇವರ ಪಕ್ಕದಲ್ಲಿ ಕುಳಿತನು.

ಇವರು "ಮೂವತ್ತು ವರ್ಷಗಳಿಗೆ ಮೇಲಿಂದಲೂ ನಾನು ರಾಮನಾಮವನ್ನು ಜಪಿಸುತ್ತಿದ್ದೇನೆ. ಆದರೂ ಮನಸ್ಸು ಎಂದಿನಂತೆಯೇ ಚಂಚಲವಾಗಿದೆ. ಹೀಗಿರುವಾಗ ಆಶಾಗ್ರಸ್ತವಾದ ಮನಸ್ಸಿನ ಹೋರಾಟವನ್ನು ನಿಲ್ಲಿಸುವ ಶಕ್ತಿ ರಾಮನಾಮಕ್ಕೆ ಇದೆಯೆಂದು ಹೇಳಲು ಹೇಗೆ ಸಾಧ್ಯ?" ಎಂದು ಪ್ರಶ್ನಿಸಿದರು.

"ಮನುಷ್ಯನು ನಿಷ್ಕಾಮವಾಗಿ ಎಂದರೆ, ಪ್ರಾಪಂಚಿಕ ವಿಷಯಗಳನ್ನು ಬಯಸದೆ, ಮುಕ್ತಿ ಶಾಂತಿಗಳನ್ನು ಗಳಿಸುವ ಒಂದೇ ಉದ್ದೇಶದಿಂದ ಮಾಡಿದರೆ ಮಾತ್ರ ರಾಮನಾಮಜಪದಿಂದ ಶಾಂತಿ ದೊರೆಯುತ್ತದೆ. ಇನ್ನಾವುದನ್ನೂ ಒಲ್ಲದೆ ಅವನ ಪಾದಾರವಿಂದದಭಕ್ತಿ ಒಂದೇ ಬೇಕೆಂದು ತೀವ್ರ ಶ್ರದ್ಧೆಯ ಹೃದಯ ದಿಂದ ಬೇಡಿಕೊಂಡರೆಯೇ ಭಗವಂತನು ನಮ್ಮ ಬೇಡಿಕೆಯನ್ನು ನೀಡುತ್ತಾನೆ. ಆದ್ದರಿಂದ ರಾಮನಾಮದ ಗುಟ್ಟು ಜೀವನದ ಗುರಿಯನ್ನು ಸಾಧಿಸುವುದಕ್ಕಾಗಿ ಜಪಿಸುವುದರಲ್ಲಿದೆ. ಆ ಗುರಿ ಅಮರತ್ವ ಎಂದರೆ ದೈವಸಾಯುಜ್ಯ" ಎಂದು ರಾಮದಾಸನು ಉತ್ತರ ಕೊಟ್ಟನು.

ಅವರು "ನೀವು ಹೇಳುವುದು ತೀರ ಸರಿಯಾದ ಮಾತು. ನಿಷ್ಕಾಮಭಕ್ತಿ ಹೊಂದುವುದು ಬಹಳ ಕಷ್ಟ" ಎಂದು ಹೇಳಿ ಸಂಭಾಷಣೆಯನ್ನು ಬೇರೆ ವಿಚಾರಕ್ಕೆ ತಿರುಗಿಸಿ "ನನ್ನ ನೌಕರನೊಬ್ಬನು ಗುಂಡಿನೇಟಿನಿಂದ ತುಂಬಾ ಕಂಗೆಟ್ಟಿದಾನೆ. ಇವನು ಒಂದು ಬೇಟೆಗೆ ಹೋಗಿದ್ದವರಲ್ಲಿ ಒಬ್ಬ. ಗುಂಪಿನಲ್ಲಿದ್ದ ಇನ್ನೊಬ್ಬನ ಅಜಾಗರೂಕತೆಯಿಂದ ಗುಂಡು ಇವನ ತೊಡೆಗೆ ಬಿದ್ದಿತು. ಇವನ ಸ್ಥಿತಿ ತೀರಾ ಅಪಾಯವಾಗಿದೆ. ಇವನಿಗೆ ನಿಮ್ಮ ದರ್ಶನಲಾಭವನ್ನು ಕೊಡ ಬೇಕೆಂದು ನಾನು ಕೇಳಿಕೊಳ್ಳುತ್ತೇನೆ, ನಿಮ್ಮ ಆಶೀರ್ವಾದದಿಂದ ಇವನಿಗೆ ಗುಣವಾಗುತ್ತದೆಂದು ನನ್ನ ನಂಬಿಕೆ" ಎಂದರು.

ಅದೇ ಪ್ರಕಾರ ರಾಮದಾಸನನ್ನು ಏಟು ಬಿದ್ದಿದ್ದವನ ಗುಡಿಸಲಿಗೆ ಕರೆದು ಕೊಂಡು ಹೋದರು. ರಾಮದಾಸನು ಬಳಿಸಾರಿದಾಗ ಅವನು ನೋವಿನಿಂದ ಹೊರಳಾಡುತ್ತಿದ್ದನು. ಅವನ ಸಂಬಂಧಿಗಳು ಬಹು ಕಳವಳಪಡುತ್ತ ಅವನ ಸುತ್ತಗುಂಪು ಕಟ್ಟಿಕೊಂಡಿದ್ದರು. ಅವನ ಮೈಮೇಲೂ ಏಟು ಬಿದ್ದಿದ್ದ ಭಾಗದ ಮೇಲೂ ರಾಮದಾಸನು ಕೈಯಾಡಿಸುವಂತೆ ಮಾಡಿದರು. ಆಮೇಲೆ ರಾಮ ದಾಸನು ಗುಲಾಬ್‌ರಾಯ್ ಜೊತೆಯಲ್ಲಿ ಮನೆಗೆ ಹಿಂತಿರುಗಿದನು. ಮರುದಿನ ಮಹಾರಾಜರ ಮೋಟಾರಿನಲ್ಲಿ ಛತ್ತರಪುರವನ್ನು ಬಿಟ್ಟು ನವಗಾಂವಕ್ಕೆ ಹೊರಟನು. ಅಲ್ಲಿ ಸಾಧುಗಳೊಂದಿಗೆ ಭೋಜನ ಮಾಡಿ ಅದೇ ಕಾರಿನಲ್ಲೇ ಹರ್ಪಾಲ್ಪುರ ರೈಲ್ವೆ ಸ್ಟೇಷನ್ನಿಗೆ ಪ್ರಯಾಣ ಮಾಡಿ, ಅಲ್ಲಿ ರೈಲಿನಲ್ಲಿ ಕುಳಿತು ಝಾನ್ಸಿಯನ್ನು ಮುಟ್ಟಿದನು. ಆ ಅಪಾಯವಾದ ಗಾಯದಿಂದ ಮಹಾರಾಜರ ಸೇವಕನಿಗೆ ವಾಸಿಯಾಯಿತೆಂದು ಅನಂತರ ರಾಮದಾಸನಿಗೆ ತಿಳಿಯಿತು. ದೇವರ ಅನುಗ್ರಹ.

# ಅಧ್ಯಾಯ ೪೧

## ಲಿಂಬ್ಡಿ

### (i) ರಾಮದಾಸನಿಗೆ ಬೇಕಾದುದು ನಿನ್ನ ಮನಸ್ಸು

ಯೂನ್ನಿಯಿಂದ ರಾಮದಾಸನು ಕಾಥೇವಾಡದ ಕಡೆಗೆ ಪ್ರಯಾಣ ಮಾಡಿ ವಧ್ವಾನ್ ಪಟ್ಟಣದಲ್ಲಿ ಕೆಲವುದಿನ ನಿಂತನು. ಸುಮಾರು ಹಿಂದಿನ ಸಲದವೇ ಕಾರ್ಯಕ್ರಮ ನಡೆದವು. ಅವನು ಬಾಲಮಂದಿರಕ್ಕೂ ಮತ್ತು ಜೀವರಾಜ್ ಬಾಲುವಿನ ಕುಟಗೂ ಭೇಟಿ ಕೊಟ್ಟನು. ಅವನು ಡಾಕ್ಟರ್ ಶುಕ್ಲನಲ್ಲಿ ಇಳಿದನು. ಡಾಕ್ಟರೂ ಆತನ ಶುದ್ಧ ಹೃದಯದ ಪತ್ನಿಯೂ ರಾಮದಾಸನನ್ನು ತುಂಬ ಪ್ರೀತಿಯಿಂದ ನೋಡಿಕೊಂಡರು. ಇಲ್ಲಿಯ ವಸತಿ ಮುಗಿದ ಮೇಲೆ ಲಿಂಬ್ಡಿಯ ಸ್ನೇಹಿತರು ರಾಮದಾಸನನ್ನು ಆ ಸಂಸ್ಥಾನಕ್ಕೆ ಕರೆದುಕೊಂಡು ಹೋದರು.

ಹಿಂದಿನ ಸಲಗಳಂತೆ ರಾಮದಾಸನು ಕಾಂತಿಲಾಲನ ಮನೆಯಲ್ಲಿಳಿದುಕೊಂಡನು. ಇಲ್ಲಿ ಪ್ರೇಕ್ಷಕರ ನುಗ್ಗಾಟದ ಹಳೆಯಕತೆ ಮತ್ತೆನಡಿಯಿತು. ರಾಜಾರಾಮರೂ ಎಲಿಜಬೆತ್‌ಮಾತೆಯೂ ರಾಮದಾಸನನ್ನು ನೋಡಲು ಆ ಮನೆಗೆ ಬಂದರು. ಪೂರ್ವದ ಕಲ್ಲುಸಕ್ಕರೆಮಾತೆಯರು ಅವನನ್ನು ನೋಡಲು ಸಕ್ಕರೆ ಹರಳುಗಳ ಕಾಣಿಕೆಯೊಡನೆ ಪ್ರತಿ ದಿನವೂ ಬಂದರು. ಧನಿಕರಾದ ಉಗರ್ ಚಂದ್‌ಸೇಟ್ ಮೋಹನ್‌ಭಾಯ್ ಸಹೋದರರು ದಿನಕ್ಕೆರಡು ಸಲ ಬರುತ್ತಿದ್ದರು. ಭೋಜನದ ಆಹ್ವಾನಗಳು ಎಲ್ಲ ಕಡೆಗಳಿಂದಲೂ ಸುರಿದುವು. ಇಲ್ಲಿ ರಾಮದಾಸನಿಗೆ ಪೋಪಟ್‌ಭಾಯ್ ಮತ್ತು ಜೋಷಿ ಎಂಬ ಇಬ್ಬರು ಹೊಸ ಮಿತ್ರರ ಪರಿಚಯವಾಯಿತು.

ಪೋಪಟ್‌ಭಾಯಿ ಒಂದು ತಿಂಗಳಿಗೆ ಮೇಲ್ಪಟ್ಟಕಾಲ ರಾಮದಾಸನಿಗೆ ಅಂಟಿದನು. ಅವನು ಶುದ್ಧ ಮತ್ತು ಸ್ವಾರ್ಥರಹಿತನಾದ ಜೀವ. ಹುಟ್ಟನಿಂದ ಜೈನ, ಮಹಾತ್ಮಾ ಗಾಂಧಿಯವರ ಅಚ್ಛಿನ್ನ ಶಿಷ್ಯ. ಅಹಮದಾಬಾದಿನ ಸಬರಮತಿ ಆಶ್ರಮದಲ್ಲಿ ಕೆಲವು ವರ್ಷಗಳಿದ್ದು ಸಂಸ್ಕಾರವನ್ನು ಪಡೆದಿದ್ದನು. ತಲೆಯಿಂದ ಕಾಲುವರೆಗೂ ಖಾದೀ ಧರಿಸಿದ್ದನು. ಊಟದ ನೇಮವಿಟ್ಟುಕೊಂಡಿದ್ದನು. ಉಪ್ಪು ಮತ್ತು ಖಾರಗಳನ್ನು ತ್ಯಜಿಸಿದ್ದನು. ಇವನು ಸರಳ, ನಿಷ್ಕಪಟ; ಭಗವಂತನ ಎಂದರೆ ಮಾನವಕೋಟಿಯ ಸದಾ ಸಿದ್ಧ ಸೇವಕ. ಇವನು ರಾಮದಾಸನನ್ನು ಬಹಳ ಮೆಚ್ಚಿಕೊಂಡನು, ಅವನಲ್ಲಿ ಪ್ರೀತನಾದನು. ಹೀಗಾಗಿ ಸದಾ ರಾಮದಾಸನ ಸಂಗಡಲೇ ಇರುತ್ತಿದ್ದನು.

ಜೋಷಿ ಆ ಸಂಸ್ಥಾನದ ಮ್ಯುನಿಸಿಪಲ್ ಸಂಸ್ಥೆಯ ಅಧ್ಯಕ್ಷ. ಬಹಳ ವರ್ಷ ದಕ್ಷಿಣಆಫ್ರಿಕಾ ದೇಶದಲ್ಲಿದ್ದು, ಮಹಾತ್ಮಾಗಾಂಧಿಯವರು ನಡೆಸಿದ ಇತಿಹಾಸಪ್ರಸಿದ್ಧವಾದ ಅಸಹಕಾರ ಚಳುವಳಿಯಲ್ಲಿ ಸಾವಿರಾರುಮಂದಿಯೊಡನೆ ಭಾಗವಹಿಸಿ, ಕಾರಾಗೃಹ ವಾಸವನ್ನು ಬಯಸಿ ಅನುಭವಿಸಿದವರಲ್ಲಿ ಒಬ್ಬನು. ಈತನು ರಾಮುದಾಸನನ್ನು ತನ್ನ ಮನೆಗೆ ಕರೆದನು. ಈತನೂ ಈತನ ವಿನಯ ಶೀಲೆಯಾದ ಪತ್ನಿಯೂ, ಸುಟಿಯಾದ ಮಕ್ಕಳೂ ರಾಮುದಾಸನನ್ನು ಬಹಳವಾಗಿ ಆದರಿಸಿ ಪ್ರೀತಿಯಿಂದ ಕಂಡರು.

ಒಂದು ದಿನ ರಾಮುದಾಸನು ಉಗರ್‌ಚಂದ್ ಸೇಟನ ಮನೆಯಲ್ಲಿ ಅನೇಕ ಸ್ನೇಹಿತರೊಂದಿಗೆ ಭೋಜನ ಮಾಡಿದನು. ಭೋಜನಾನಂತರ ಅವನು ಆ ಭವ್ಯ ಮಂದಿರದ ಸತ್ಕಾರ ಕೊಟಡಿಯಲ್ಲಿ ಕುಳಿತಿರುವಾಗ ಸೇಟನು ಅರೆ ವಿನೋದವಾಗಿ,

"ಸ್ವಾಮಿ, ನಾನು ವ್ಯಾಪಾರಿ, ದಳ್ಳಾಳಿ, ತುಂಬಾ ಹಣವಂತ. ನನಗೆ **ರಾಮನ** ದರ್ಶನ ಮಾಡಿಸುವುದಾದರೆ ನಿಮಗೆ ಧಾರಾಳವಾದ ಕಮಿಷನ್ನು ಕೊಡು ತ್ತೇನೆ. ನನಗೆ **ಅವನನ್ನು** ನೋಡಬೇಕೆಂದು ಬಹು ಆಶೆ" ಎಂದು ಹೇಳಿದನು.

ರಾಮುದಾಸನು "ಆಗಲಿ. ರಾಮುದಾಸನು ಕೇಳುವಂಥ ದಳ್ಳಾಳಿಯನ್ನು ನೀನು ಕೊಡುವುದಾದರೆ, ರಾಮುದಾಸನು ನಿನಗೆ **ರಾಮನನ್ನು** ತೋರಿಸಬಲ್ಲನು. ರಾಮುದಾಸನಿಗೆ ನಿನ್ನ ಧನ ಬೇಡ. ರಾಮುದಾಸನು ನಿನ್ನಿಂದ ಅಪೇಕ್ಷಿಸುವ ಪದಾರ್ಥವನ್ನು ಕೊಡುತ್ತೇನೆಂದು ಮೊದಲು ಭರವಸೆ ಕೊಡು, ಅನಂತರ **ರಾಮನನ್ನು** ಅವನ ಪೂರ್ಣ ದಿವ್ಯ ಸ್ವರೂಪದಲ್ಲಿ ಕಾಣುವೆ" ಎಂದು ಉತ್ತರ ಕೊಟ್ಟನು.

ಸೇಟ್ ಬಹಳ ಉತ್ಸುಕತೆಯಿಂದ "ನಿಮಗೆ ಬೇಕಾದುದು ಏನು?" ಎಂದು ಪ್ರಶ್ನೆ ಮಾಡಿದನು.

ರಾಮುದಾಸನು "ಅದೇನೆಂದು ತಿಳಿಸುವುದಕ್ಕೆ ಮುಂಚೆ ರಾಮುದಾಸನಿಗೆ ಭಾಷೆ ಕೊಡುತ್ತೀಯೋ?" ಎಂದನು.

ಸೇಟು ಸ್ವಲ್ಪ ಕಾಲ ಯೋಚಿಸಿ, "ನಾನು ಮುಂಚೆ ಭಾಷೆ ಕೊಡಲಾರೆ. ನೀವು ಕೇಳುವ ದಳ್ಳಾಳಿ ಏನೆಂದು ದಯವಿಟ್ಟು ತಿಳಿಸಿ. ಅದನ್ನು ಕೊಡಲು ನನಗೆ ಶಕ್ತಿ ಇದೆಯೋ ಇಲ್ಲವೋ ನಂತರ ಹೇಳುತ್ತೇನೆ" ಎಂದನು.

ರಾಮುದಾಸನು ಈ ಮಾತನ್ನು ಇಲ್ಲಿಗೇ ಬಿಡಬೇಕೆಂದಿದ್ದನು. ಆದರೆ ಸೇಟು ದಳ್ಳಾಳಿವಿಷಯವನ್ನು ತಿಳಿಸಬೇಕೆಂದು ಒತ್ತಾಯಮಾಡಿದುದರಿಂದ ಅವನು ಕೊನೆಗೆ,

"**ರಾಮನ** ದರ್ಶನಕ್ಕೆ ಪ್ರತಿಯಾಗಿ ರಾಮದಾಸನು ನಿನ್ನಿಂದ ಅಪೇಕ್ಷಿಸು ವುದು ನಿನ್ನ ಮನಸ್ಸು. ಅದನ್ನು ಸಂಪೂರ್ಣವಾಗಿ ರಾಮದಾಸನಿಗೆ ಕೊಟ್ಟು ಬಿಡು, **ರಾಮನನ್ನು** ಎದುರೆದುರಿಗೆ ನೋಡುವೆ" ಎಂದು ತಿಳಿವಳಿಕೆ ಕೊಟ್ಟನು.

ಸೇಟು ಕೈಗಳನ್ನೆತ್ತಿ, ಚಕಿತನಾಗಿ, "ಓ! ಅದು ಅಸಾಧ್ಯ" ಎಂದು ಉತ್ತರವಿತ್ತನು.

ರಾಮದಾಸನು "ಸರಿ. ಈ ಮನೆ, ನಿನ್ನ ಭಾರಿಹಣ, ಆಸ್ತಿ, ಸಂಬಂಧಿಕರು, ನಿನಗೆ ಸೇರಿದವರೆನ್ನುವುದಕ್ಕೂ, ಇವನ್ನೆಲ್ಲ ಕುರಿತು ಕಳವಳ, ತೊಂದರೆ, ಕಷ್ಟಗಳನ್ನನುಭವಿಸುವುದಕ್ಕೂ ನಿನ್ನ ಮನಸ್ಸನ್ನಿಟ್ಟುಕೊಂಡಿರಬೇಕೆಂದಿದ್ದೀ! ಹಾಗಾದರೆ ನಿನ್ನ ಇಷ್ಟ! ನಿಜವೇನೆಂದರೆ, ನಮ್ಮ ಮನಸ್ಸನ್ನು ದೇವರ ಧ್ಯಾನಕ್ಕೆ ಮೀಸಲಾಗಿಟ್ಟು ನಿನ್ನದೆಂದು ಸಂಗದಿಂದ ಕಾಣುವ ಸಕಲವನ್ನೂ **ಅವನ** ಪಾದಾರ ವಿಂದದಲ್ಲಿ ಅರ್ಪಿಸಿದ ಹೊರತು ನೀನು **ಅವನನ್ನು** ಪಡೆಯಲಾರೆ. ಒಂದೇ ಮಾತಿನಲ್ಲಿ ಹೇಳಬೇಕಾದರೆ, **ಅವನಲ್ಲಿ** ಸಂಪೂರ್ಣ ಮತ್ತು ಅನನ್ಯವಾದ ಶರಣತೆಯೇ **ಅವನ** ಅನುಗ್ರಹ ದರ್ಶನಗಳನ್ನು ಪಡೆಯಲು ಅಧಿಕಾರವನ್ನು ತರುತ್ತದೆ" ಎಂದನು.

ಈ ಸಲ ರಾಜಾರಾಮರೂ ಎಲಿಜಬೆತ್ ಮಾತೆಯೂ ರಾಮದಾಸನಮೇಲೆ ಪ್ರೀತಿಯಿಂದ ಮೇರೆಹರಿಯುತ್ತಿದ್ದರು. ಅವನಿಗೆ ರಾಜಾರಾಮರ ಅರಮನೆ ಮತ್ತು ಎಲಿಜಬೆತ್ ಮಾತೆಯ ಬಂಗಲೆಯಿಂದ ಅನೇಕ ಸಲ ಆಹ್ವಾನಗಳು ಬಂದವು. ಒಂದು ಸಲ ಎಲಿಜಬೆತ್ ಮಾತೆ "ಶ್ರೀಕೃಷ್ಣ ನಿವಾಸ" ಎಂಬ ತನ್ನ ಮನೆಯಲ್ಲಿ ಕೆಲವೇ ಜನರ ಒಂದು ಭೋಜನಕ್ಕೆ ಏರ್ಪಾಟು ಮಾಡಿದ್ದಳು. ಆ ಪ್ರಾತಃಕಾಲವೆ ಆಕೆ ತನ್ನ ಉದ್ಯಾನದಲ್ಲಿ ಅನೇಕ ಸಾಧುಗಳ ಮೇಳವನ್ನು ಏರ್ಪಡಿಸಿದಳು.

ಕಾಥೇವಾಡದಲ್ಲಿ ಪ್ರಸಿದ್ಧನಾದ ಪ್ರಕಾಶಾನಂದನೆಂಬ ಒಬ್ಬ ಸಾಧು ಈ ಕಾಲದಲ್ಲಿ ಲಿಂಬ್ಡಿಯಲ್ಲಿದ್ದನು. ಮೇಲೆ ಕಂಡ ಉದ್ಯಾನವನದ ಸಂತೋಷಕೂಟದಲ್ಲಿ ರಾಮದಾಸನಿಗೆ ಈತನನ್ನು ಮೊದಲು ಸಂಪರ್ಕಮಾಡುವ ಪುಣ್ಯ ದೊರೆಯಿತು. ಈತನಿಗೆ ಐವತ್ತು ವರ್ಷಗಳಿಗೆ ಮೇಲ್ಪಟ್ಟ ವಯಸ್ಸಾಗಿದ್ದಿತು. ಈತನು ಕುಳ್ಳಾಗಿ ಸ್ಥೂಲಕಾಯದವನಾಗಿದ್ದನು. ಇವನು ಮೈಮೇಲೆ ಮಾಸಿದ ಒಂದು ಚಿಂದಿ ಮೆತ್ತೆಯನ್ನು ಹೊದೆಯುವನು. ಕೈಯ್ಯಲ್ಲಿ ಒಂದು ಮುಡಕೆ ಎರಡು ಕೋಲುಗಳನ್ನು ಹಿಡಿದಿರುವನು. ರಾತ್ರಿಹೊತ್ತು ವಿಶೇಷವಾಗಿ ಸ್ಮಶಾನದಲ್ಲಿ ಇರುವುದು ಇವನ ಇಷ್ಟವೆಂದು ಪ್ರತೀತಿ. ಇವನು ಮೆಲ್ಲಗೆ ನಿದಾನವಾಗಿ ಮಾತ ನಾಡುವನು. ಇವನ ನಡೆನುಡಿಯಲ್ಲಿ ನಿಷ್ಕರ್ಷೆ ಜ್ಞಾನ ಸರಳತೆ ಕಾಣುವುವು. ಈ ಮಹಾತ್ಮನಲ್ಲದೆ ಇಬ್ಬರು ಮೂವರು ಜೈನಸಾಧುಗಳೂ ಬಂದಿದ್ದರು. ಇವರಲ್ಲಿ ಒಬ್ಬನು ರಾಮದಾಸನನ್ನು ಕಾಣಲೆಂದೇ ಹದಿನೈದು ಮೈಲಿಗಳ ದೂರದಿಂದ

ನಡೆದು ಬಂದಿದ್ದನು. ರಾಜಾರಾಮರು, ಜೋಷಿ, ಪೋಪಟ್‌ಭಾಯ್ ಮತ್ತು ಕಾಂತಿಲಾಲ್ ಆಗ ರಾಮದಾಸನ ಸಂಗಡವಿದ್ದರು.

ರಾಜಾರಾಮರು ಹಾಸ್ಯವಾಗಿ "ರಾಮದಾಸರೇ, ನಾನು ಇನ್ನು ಮುಂದೆ ನಿಮಗೆ ಬಟ್ಟೆಗಳೇನನ್ನೂ ಕೊಡುವುದಿಲ್ಲ. ಹೋದಸಲ ನಾನು ಕೊಟ್ಟ ಬೆಲೆ ಬಾಳುವ ಬಟ್ಟೆಗಳನ್ನು ಯಾರೋ ದುರಾಶೆಯ ಬ್ರಾಹ್ಮಣನಿಗೆ ಕೊಟ್ಟುಬಿಟ್ಟಿರಿ" ಎಂದರು.

ರಾಮದಾಸನು "ಆತನನ್ನು ನೀವು ಹೇಗೆಬೇಕಾದರೂ ಕರೆಯಬಹುದು. ಆದರೆ ರಾಮದಾಸನ ಪಾಲಿಗೆ ಆತನು **ರಾಮ**" ಎಂದು ಉತ್ತರ ಹೇಳಿ, ಮತ್ತೆ "ನೀವು ಬಟ್ಟೆ ಕೊಡುವ ಮಾತಿಗೆ ಹೇಳಬೇಕು. ಅವು ಬೇಕೆಂದು ರಾಮ ದಾಸನು ನಿಮ್ಮನ್ನು ಕೇಳಲಿಲ್ಲ. ಅವು ರಾಮದಾಸನಿಗೆ ಬೇಕಾಗಿಯೂ ಇಲ್ಲ. ಅವನಿಗೆ ಬೇಕಾದಾಗ ಭಗವಂತ ದೊರಕಿಸುತ್ತಾನೆ" ಎಂದು ಎರಡು ಮಾತನ್ನು ಸೇರಿಸಿದನು.

ಭೋಜನಾನಂತರ ಎಲ್ಲರೂ ಹೊರಟುಹೋದರು.

ಎಲಿಜಬೆತ್ ಮಾತೆ ರಾಮದಾಸನನ್ನು ರಾಜಾರಾಮರ ಸಹೋದರಿಯ ಮನೆಗೆ ಕರೆದುಕೊಂಡು ಹೋದಳು. ಆಕೆ ಇವರನ್ನು ಬಹಳ ಆದರದಿಂದ ಸ್ವಾಗತಿಸಿದಳು. ಇಲ್ಲಿ ರಾಮದಾಸನಿಗೆ ಎಲಿಜಬೆತ್ ಮಾತೆಯ ವಿಲಕ್ಷಣ ನಮ್ರತೆ ಮತ್ತು ಸಿರಹಂಕೃತಿ ಕಾಣಬಂದವು. ನೆಲದಮೇಲಿನ ಜಮಖಾನದ ಮೇಲೆ ಒಂದು ಮೆತ್ತೆಯನ್ನು ರಾಮದಾಸನಿಗೆ ಆಸನವಾಗಿ ತೋರಿಸಿ, ಎಲಿಜಬೆತ್‌ಮಾತೆಗೆ ಕುರ್ಚಿಯಮೇಲೆ ಕುಳ್ಳಿರುವಂತೆ ಹೇಳಿದರು. ಆದರೆ ಕುರ್ಚಿಯಮೇಲೆ ಕುಳಿತರೆ ರಾಮದಾಸನಿಗಿಂತ ಎತ್ತರವಾದ ಸ್ಥಾನವನ್ನು ಸ್ವೀಕರಿಸಿದಂತಾಗುತ್ತದೆಂದು ಆಕೆ ಅದಕ್ಕೆ ಒಪ್ಪಲಿಲ್ಲ. ರಾಮದಾಸನ ಮಗ್ಗುಲಲ್ಲೇ ಜಮಖಾನದಮೇಲೆ ಕುಳಿತಳು. ಮನೆಯಿಂದ ಹೊರಟು ಮೆಟ್ಟಲಿಳಿಯುವಾಗ ರಾಮದಾಸನು ಮೆಟ್ಟಲುಗಳನ್ನು ಹಾರುತ್ತ ಧುಮುಕುತ್ತ ಇಳಿದನು. ಮಾತೆ ವಿಶ್ವಾಸದಿಂದ "ರಾಮದಾಸರೇ ಎಚ್ಚರ! ತೂಕ ತಪ್ಪೀತು" ಎಂದಳು.

"ತಾಯಿ, ರಾಮದಾಸನು ಎಂದೂ ತೂಕ ತಪ್ಪುವುದಿಲ್ಲ" ಎಂದು ರಾಮ ದಾಸನು ಭಾವಗರ್ಭಿತವಾಗಿ ಉತ್ತರಕೊಟ್ಟನು.

ಮಾತೆ ನಗುತ್ತ "ರಾಮದಾಸರೆ, ನೀವು ಬಹು ಚತುರರು. ನಿಮ್ಮದು ಯಾವಾಗಲೂ ಸಿದ್ಧ ಹಾಸ್ಯ" ಎಂದಳು.

ರಾಮದಾಸನು ಕಾಂತಿಲಾಲನ ಮನೆಗೆ ಹಿಂತಿರುಗಿದನು.

### (ii) ಅವರನ್ನು ಮೋಸಗೊಳಿಸುವುದು ಯಾವುದು – ಒಂದು ವಿವರಣೆ

ಒಂದು ದಿನ ಆ ಊರಿನ ಜೈನ ಸಾಧುಗಳ ಆಶ್ರಮದಿಂದ ರಾಮದಾಸನಿಗೆ ಆಹ್ವಾನ ಬಂದಿತು. ಅವನ ಜೊತೆಯಲ್ಲಿ ಅಲ್ಲಿಗೆ ಪೋಪಟ್‌ಭಾಯಿ ಹೋದನು.

ಎಲಿಜಬೆತ್‌ಮಾತೆಯ ತೋಟದ ಆ ನೆನೆಯಬೇಕಾದ ಸಂತೋಷಕೂಟದಲ್ಲಿ ಭಾಗಿಗಳಾಗಿದ್ದ ಸಾಧುಗಳೂ ಸೇರಿ ಹನ್ನೆರಡು ಜನ ಸಾಧುಗಳು ಆಗ ಚರ್ಚಾ ವಿಷಯವಾಗಿದ್ದ ಅಹಿಂಸಾ ತತ್ವವನ್ನು ಕುರಿತು ಅವನೊಡನೆ ದೀರ್ಘಚರ್ಚೆ ನಡೆಸಿದರು. ಅವರು ಅವನಿಗೆ ದ್ವಂದ್ವಾತೀತ ತ್ರಿಗುಣಾತೀತ ಅವಸ್ಥೆಗಳ ವಿಚಾರ ವಾಗಿ ಅನೇಕ ಪ್ರಶ್ನೆಗಳನ್ನು ಹಾಕಿದರು. ರಾಮದಾಸನು ಕೊಡುವ ಉತ್ತರಗಳಲ್ಲಿ ಒಂದು ಎಳೆ ವಿನೋದವೂ ಸೇರಿದ್ದು ಸಾಧುಗಳನ್ನು ಮತ್ತೆ ಮತ್ತೆ ನಗುವಂತೆ ಮಾಡಿತು. ಅವರ ಮುಖಂಡನು ರಾಮದಾಸನನ್ನು ಬಹು ಗಂಭೀರವಾದ ವ್ಯಾಕುಲದಿಂದ,

"ಸ್ವಾಮಿ, ನೀವು ನೀರು ಕುಡಿಯುವುದಕ್ಕೆ ಮುಂಚೆ ಅದನ್ನು ಬಟ್ಟೆಯಲ್ಲಿ ಶೋಧಿಸುವುದಿಲ್ಲವೆ?" ಎಂದು ಪ್ರಶ್ನಿಸಿದನು.

ರಾಮದಾಸನು ''ನೀರು ಕೊಳಕಾಗಿದ್ದ ಹೊರತು ಶೋಧಿಸುವುದೆನ್ನುವುದಕ್ಕೆ ರಾಮದಾಸನು ಪ್ರಾಮುಖ್ಯ ಕೊಡುವುದಿಲ್ಲ. ರಾಮದಾಸನು ಅನೇಕವೇಳೆ ಬೊಗಸೆಯಿಂದ ಪಾನಮಾಡಿದ ಹರಿಯುವ ನದಿಯ ನೀರನ್ನು ಶೋಧಿಸಬೇಕಾಗಿರ ಲಿಲ್ಲ'' ಎಂದು ಉತ್ತರ ಕೊಟ್ಟನು.

ಆತನು ''ನೀರಿನಲ್ಲಿ ಕ್ರಿಮಿಗಳಿವೆ. ನೀವು ಅವುಗಳನ್ನು ಕುಡಿದು ನಾಶ ಮಾಡುತ್ತೀರಿ!'' ಎಂದನು.

ರಾಮದಾಸನು "ನೀವು ಶೋಧಿಸಿ ಅದನ್ನೇ ಮಾಡುತ್ತೀರಿ. ಅಲ್ಲದೆ ಚೆನ್ನಾಗಿ ಶೋಧಿಸಿದ ನೀರಿನ ಬಿಂದುಗಳಲ್ಲಿಯೂ, ಸಣ್ಣ ಸಣ್ಣ ಕ್ರಿಮಿಗಳು ತೇಲು ತ್ತಿರುತ್ತವೆ. ಇದು ಬರಿಯ ಕಣ್ಣಿಗೆ ಕಾಣಿಸುವುದಿಲ್ಲ. ದೊಡ್ಡದಾಗಿ ವಿಸ್ತರಿಸಬಲ್ಲ ಸೂಕ್ಷ್ಮದರ್ಶಕ ಯಂತ್ರದಲ್ಲಿ ನೋಡಿದರೆ ಬಿಂದುಗಳಲ್ಲಿ ಅಸಂಖ್ಯಾತ ಸಜೀವ ಕ್ರಿಮಿಗಳು ಇರುವುದು ದೃಷ್ಟಿಗೆ ಕಾಣಬರುತ್ತದೆ. (ಆರೋಗ್ಯವಾಗಿರಬೇಕಾದರೆ ಸ್ವಚ್ಛವಾದ ನೀರನ್ನು ಕುಡಿಯುವುದು ಆವಶ್ಯಕ.) ಜಠರಾಗ್ನಿಯಲ್ಲಾಗಲಿ, ಶೋಧಕ ಸಾಧನಗಳಲ್ಲಾಗಲಿ ಕುದಿಸುವುದರಿಂದಾಗಲಿ, ನೀರಿನಲ್ಲಿರುವ ಕ್ರಿಮಿಗಳು ನಾಶವಾಗುವುದು ತಪ್ಪಿದ್ದಲ್ಲ" ಎಂದು ಉತ್ತರಕೊಟ್ಟನು.

ಮಾತು ಇನ್ನೂ ನಡೆಯುತ್ತಿರುವಾಗ ಪೋಪಟ್‌ಭಾಯ್ ಹಿಂದಿನಿಂದ ರಾಮ ದಾಸನ ಬಟ್ಟೆಯನ್ನು ಎಳೆದು ಇಲ್ಲಿಗೆ ಸಂಭಾಷಣೆಯನ್ನು ನಿಲ್ಲಿಸಿ ತಾವು ಹಿಂದಕ್ಕೆ ಹೊರಡಬಹುದೆಂದು ಸೂಚಿಸಿದನು. ಆದರೆ ರಾಮದಾಸನಿಗೆ ಸಾಧುಗಳು ಸಂತೋಷ ವಾಗಿ ಮಾತನಾಡುತ್ತಿದ್ದುದರಿಂದ ತಮಾಷೆಯ ಪ್ರಶ್ನೆಗಳಿಗೆ ಉತ್ತರ ಕೊಡುತ್ತಾ ಇನ್ನೂ ಸ್ವಲ್ಪಕಾಲ ನಿಲ್ಲಬೇಕೆನಿಸಿತು. ಸ್ವಲ್ಪ ಹೊತ್ತಾಗುತ್ತಲು ಪೋಪಟ್‌ಭಾಯಿ ಆತುರಪಡುತ್ತಿದ್ದುದರಿಂದ ಅವನು ಸಾಧುಗಳಿಂದ ಬೀಳ್ಕೊಳಬೇಕಾಯಿತು.

ಕಾಂತಿಲಾಲನ ಮನೆಗೆ ಹಿಂತಿರುಗಿ ಹೋಗುವಾಗ ದಾರಿಯಲ್ಲಿ ಪೋಪಟ್ ಭಾಯಿ "ಸ್ವಾಮಿಜಿ, ಜೈನ ಸಾಧುಗಳು ಉದ್ದಕ್ಕೂ ನಿಮ್ಮನ್ನು ಹಾಸ್ಯಮಾಡುತ್ತ

ಇದ್ದುದು ನಿಮಗೆ ಗೊತ್ತಾಗಲಿಲ್ಲವೆ ? ಆದುದರಿಂದಲೇ ನನಗೆ ಬೇಸರವಾಗಿ ಆದಷ್ಟು ಬೇಗ ಅಲ್ಲಿಂದ ಹೊರಡಬೇಕೆನ್ನಿಸಿತು" ಎಂದನು.

ರಾಮದಾಸನು "ರಾಮು, ನೀನು ತಿಳಿದುಕೊಂಡದ್ದು ತಪ್ಪು. ಅವರು ಎಷ್ಟು ದಯೆತೋರಿದರು ! ರಾಮದಾಸನಿಗೆ ಅವರ ಹರ್ಷದ ಸಹವಾಸ ಸುಖಕರವಾಗಿಯೇ ಇದ್ದಿತು" ಎಂದು ಉತ್ತರ ಕೊಟ್ಟನು.

ಪೋಪಟ್ ಭಾಯಿ "ಅದೇ ನೋಡಿ ಸ್ವಾಮಿ. ನಿಮ್ಮ ಈ ಅಕುಟಿಲ ಸ್ವಭಾವವೇ ನನಗೆ ಹುಚ್ಚು ಹಿಡಿಸಿರುವುದು, ನನ್ನನ್ನೂ, ಇತರ ಸರ್ವರನ್ನೂ ನಿಮ್ಮಲ್ಲಿಗೆ ಸೆಳೆದಿರುವುದು" ಎಂದನು.

ಸಾಯಂಕಾಲದ ಹೊತ್ತು ಕಾಂತಿಲಾಲನ ಮನೆಯಲ್ಲಿ ರಾಮನಾಮ ಸಂಕೀರ್ತನೆ ನಡೆಯುತ್ತಿದ್ದಿತು. ಪೋಪಟ್‌ಭಾಯಿ ಮಧುರ ಕಂಠದಿಂದ ಭಜನೆ ನಡೆಸುತ್ತಿದ್ದನು. ವಢ್ವಾನ್ ಪಟ್ಟಣದಿಂದ ಡಾಕ್ಟರ್ ಶುಕ್ಲ ಮತ್ತು ಇತರ ಸ್ನೇಹಿತರು ಅನೇಕವೇಳೆ ದಯಮಾಡಿಸುತ್ತಿದ್ದರು.

ರಾಮದಾಸನು ಪ್ರತಿದಿನವೂ ಬೆಳಿಗ್ಗೆ ಎಲಿಜಬೆತ್ ಮಾತೆಯ ಬಂಗಲೆಗೆ ಭೇಟಿ ಕೊಡುತ್ತಿದ್ದುದು ಹಾಗೆಯೇ ನಡೆಯಿತು. ಅಲ್ಲಿ ಅವನು ರಾಜಾರಾಮರನ್ನೂ ಪ್ರಕಾಶಾನಂದರನ್ನೂ ಕಾಣುತ್ತಿದ್ದನು.

ರಾಮದಾಸನು ವೃದ್ಧ ರಾಣಿ ಬಾಮಾ ಸಾಹೇಬರ ಇಚ್ಛೆಯಂತೆ ಅವರ ಅರಮನೆಗೂ ಹೋಗಬೇಕಾಯಿತು. ಆ ಪುಣ್ಯಾತ್ಮಳು ಎಂದಿನಂತೆ ಆದರಿಸಿ ಸತ್ಕರಿಸಿದಳು.

ಆಕೆ "ಎಷ್ಟೇ ಪ್ರಯತ್ನಪಟ್ಟರೂ ನಮಗೆ ಶಾಂತಿ ದೊರೆಯುವುದಿಲ್ಲವಲ್ಲ. ಇದಕ್ಕೇನು ಕಾರಣ ?" ಎಂದು ಪ್ರಶ್ನಿಸಿದಳು.

ಇದಕ್ಕೆ ರಾಮದಾಸನು "ರಾಮದಾಸನಿಗೆ ಕಬೀರ್ ಮಹಾರಾಜನ ಜನಪ್ರಿಯವಾದ ಹಾಡು 'ನೀರಿನೊಳಗಿದ್ದರೂ ಮೀನಿಗೆ ದಾಹ. ಇದನ್ನು ನೋಡಿದರೆ ನನಗೆ ನಗದಿರಲು ಸಾಧ್ಯವೇ ಇಲ್ಲ' ಎಂದು ಹೇಳುವುದು ಜ್ಞಾಪಕಕ್ಕೆ ಬರುತ್ತದೆ. ಹಾಗೆಯೇ ನಾವು ಸರ್ವದಾ ಪರಿಶುದ್ಧ ಆನಂದದ ಪಾರರಹಿತ ಸಾಗರದಲ್ಲಿ ಜೀವಿಸುತ್ತ ಓಡಾಡುತ್ತ ಬಾಳುತ್ತ ಇದ್ದರೂ ನಾವು ದುಃಖಿಗಳೆಂದು ಗೊಣಗುಟ್ಟುತ್ತಿದ್ದೇವೆ" ಎಂದು ಉತ್ತರ ಹೇಳಿದನು.

ಚೆನ್ನಾಗಿ ಓದಿ ಪಾರಂಗತಳಾಗಿದ್ದ ಆಕೆ "ನಿಜ. ಮೀನು ಒಂದು ಪಕ್ಕವಾಗಿ ಹೊರಳಿದರೇನೇ ಅದಕ್ಕೆ ನೀರು ಕುಡಿಯಲು ಸಾಧ್ಯ, ಇಲ್ಲವಾದರೆ ಇಲ್ಲ" ಎಂದಳು.

ರಾಮದಾಸನು "ಹೌದು, ನಮ್ಮ ವಿಚಾರದಲ್ಲಿ (ಒಂದು ಪಕ್ಕವಾಗಿ ಹೊರಳುವುದೆಂದರೆ ಸಂಪೂರ್ಣವಾಗಿ ಭಗವಂತನ ಇಚ್ಛಾಧೀನರಾಗುವುದು) ಆಗ ನಮ್ಮಲ್ಲಿ ಅನುರಕ್ತಿಯ ಪೀಯೂಷ ತುಂಬುವುದು" ಎಂದು ಉತ್ತರ ಕೊಟ್ಟನು.

ಒಂದು ಪ್ರಾತಃಕಾಲ ಎಲಿಜಬೆತ್ ಮಾತೆ ರಾಮದಾಸನನ್ನು, ಅಮೆರಿಕಾ ದೇಶದಿಂದ ಬಂದು ಸಂಚಾರ ಮಾಡುತ್ತಿದ್ದ, ಸತಿ ಪಿಮ್ ಎಂಬ ಯುವತಿಗೆ ಪರಿಚಯ ಮಾಡಿಕೊಟ್ಟಳು. ಮೊದಲು ಸಲ ಆಕೆ ಮಹಾತ್ಮಾ ಗಾಂಧಿಯವರ ಸತ್ಯಾಗ್ರಹದ ವಿಷಯ ಮತ್ತು ಅವರೊಂದಿಗೆ ತಾನು ನಡೆಯಿಸಿದ ಸಂಭಾಷಣೆಯ ವಿಚಾರ ಮಾತನಾಡಿದಳು. ಮಹಾತ್ಮರನ್ನೂ ಅವರ ಸಾರ್ವಜನಿಕ ಕಾರ್ಯದ ಸೂತ್ರಗಳನ್ನೂ ಕುರಿತು ಆಕೆ ಕಲುಷಿತವಾದ ಅಭಿಪ್ರಾಯವನ್ನು ಇಟ್ಟುಕೊಂಡಿದ್ದಳು. ಸಂಭಾಷಣೆಯ ಕೊನೆಯ ಭಾಗದಲ್ಲಿ ರಾಮದಾಸನು ಆಕೆಗೆ ಮಹಾತ್ಮರ ತತ್ವಗಳ ವಿಚಾರದಲ್ಲಿ ಆಕೆ ಅವಶ್ಯವಾಗಿ ಭಿನ್ನಾಭಿಪ್ರಾಯಪಡಬಹುದು, ಆದರೆ ಆಕೆ ಮಾಡುತ್ತಿದ್ದಂತೆ ಮಹಾತ್ಮರಿಗೆ ಯಶಸ್ಸನ್ನಾಗಲಿ ದೊಡ್ಡಸ್ತಿಕೆಯನ್ನಾಗಲಿ ಗಳಿಸುವ ಉದ್ದೇಶವನ್ನು ಆರೋಪಿಸುವುದು ತಪ್ಪಾಗುತ್ತದೆಂದು ತಿಳಿಸಿದನು. ಹಿಂದೂದೇಶ ಸ್ವಾವಲಂಬಿಯಾಗಿ ಸ್ವತಂತ್ರವಾಗಿರುವುದು ಸರಿಯೇ ಹೊರತು ಬೇರೆಯೇನಲ್ಲ ಎಂದು ಆಕೆ ಒಪ್ಪತಕ್ಕದ್ದಾಗಿದೆ ಎಂದೂ ಹೇಳಿದನು. ಹಿಂದೂಸ್ಥಾನ ಜೀವನಕ್ಕೆ ಮುಖ್ಯ ಪದಾರ್ಥಗಳನ್ನು ಎಂದರೆ ಬೇಕಾದ ಆಹಾರವನ್ನೂ ಬಟ್ಟೆಯನ್ನೂ ತನ್ನ ಬೆಳೆ ಕೈಗಾರಿಕೆಗಳಿಂದ ತಾನೇ ಒದಗಿಸಿಕೊಳ್ಳಲು ಕಲಿಯಬೇಕು. ಹಿಂದೂಸ್ಥಾನ ಪ್ರಪಂಚದ ಇತರ ಭಾಗಗಳ ಸಂಪರ್ಕವಿಲ್ಲದೆ ಇರುವುದು ಉತ್ತಮವೆಂದು ರಾಮದಾಸನ ತಿಳಿವಳಿಕೆಯಲ್ಲ. ಹಾಗೆ ಮಾಡಿದರೆ ಹಿಂದೂದೇಶ ನಶಿಸಿ ಅಳಿದಂತೆಯೇ. ಅದು ಪ್ರಪಂಚದ ಇತರ ದೇಶಗಳೊಡನೆ ಧಾರಾಳವಾಗಿ ಸಂಬಂಧ ಬೆಳಸಬೇಕು. ಆದರೆ ಅಂತಹ ಸಂಬಂಧ ಸಮಾನಭಾವನೆ ಸ್ವಾತಂತ್ರ್ಯಗಳ ಮೇಲೆ ನಿಂತಿರಬೇಕು. ದ್ವೇಷದ ಪಂಥ ಹಾಳುಮಾಡುತ್ತದೆ. ಮಹಾತ್ಮಾ ಗಾಂಧಿಯವರ ಹೇಳಿಕೆ ಮತ್ತು ಕಾರ್ಯಗಳಲ್ಲೆಲ್ಲಾ ರಾಮದಾಸನು ಸಮ್ಮತಿಸದಿರಬಹುದು. ಆದರೆ ಅವರ ವಿಷಯದಲ್ಲಿ ಅವನಿಗೆ ಬಹಳ ಗೌರವ ಮತ್ತು ಪ್ರೇಮ. ಹಾಗೆಯೇ ಈಕೆಗೂ ಇತರರಿಗೂ ಇರಬೇಕು.

ಅದೇ ದಿನ ಮಧ್ಯಾಹ್ನ ಸೇಟ್ ಮೋಹನಲಾಲನ ಮನೆಯಲ್ಲಿ ಒಂದು ಸಮಾರಂಭವಿದ್ದಿತು. ಈ ಸಲ ಮೂವರು ಮಹಿಳೆಯರು ಸೇರಿದ್ದರು. ಒಬ್ಬೊಬ್ಬರೂ ಒಂದೊಂದು ದೇಶದವರು. ಎಲಿಜಬೆತ್ ಮಾತೆ ತಿಳಿದಂತೆ ಆಂಗ್ಲಳು. ಸತಿ ಪಿಮ್ ಅಮೇರಿಕಾ ದೇಶದವಳು. ಹೊಸದಾಗಿ ಬಂದಿದ್ದ ಕುಮಾರಿ ಕ್ರೌಸ್ ಜರ್ಮನಿ ದೇಶದವಳು. ರಾಜಾರಾಮರ ಚಿಕ್ಕಮಗ ಪ್ರತಾಪಸಿಂಗರೂ ದಯಮಾಡಿಸಿದ್ದರು.

ಎಲಿಜಬೆತ್ ಮಾತೆ ರಾಮದಾಸನಿಂದ ರಚಿತವಾದ "At the Feet of God" ಎಂಬ ಎರಡನೆಯ ಪುಸ್ತಕಕ್ಕೆ ಒಂದು ಪ್ರೀತಿಯುಕ್ತವಾದ ಮುನ್ನುಡಿಯನ್ನು ಬರೆದು ಪ್ರಚಾರಕ್ಕೆ ಸಹಾಯ ಮಾಡಿದ್ದಳು. ಆಕೆ ಪುಸ್ತಕದ ಪ್ರತಿಗಳನ್ನು

ತಂದು ಈ ಮಹಿಳೆಯರಿಗೆ ಕೊಡಲು ರಾಮದಾಸನ ಕೈಗೆ ಕೊಟ್ಟಳು. ಮಹಿಳೆಯರು ರಾಮದಾಸನ ಸ್ವಹಸ್ತಾಕ್ಷರವನ್ನು ಅಪೇಕ್ಷಿಸಿದುದರಿಂದ ಆ ಪುಸ್ತಕಗಳಲ್ಲಿ ರಾಮದಾಸನು "ಪ್ರೀತಿಗೌರವ" ಎಂಬ ಶಬ್ದಗಳನ್ನು ಬರೆದು, "ನಿಮ್ಮ ಶಿಶು ರಾಮದಾಸನಿಂದ" ಎಂದು ರುಜುಮಾಡಿದನು. ಹಿಂದೆ ಒಂದುಸಲ ಎಲಿಜಬೆತ್ ಮಾತೆಯು ಇಷ್ಟದಂತೆ ಆಕೆಗೆ ಪುಸ್ತಕವನ್ನು ಕೊಡುವಾಗ ರಾಮದಾಸನು ಇದೇ ಶಬ್ದಗಳನ್ನು ಬರೆದಿದ್ದನು. ಆ ಪ್ರತಿ ಆಕೆಯ ಬಳಕೆಯಲ್ಲಿದ್ದಿತು. ಇತರ ಮಹಿಳೆಯರಿಗೆ ಕೊಟ್ಟ ಪುಸ್ತಕದಲ್ಲಿಯೂ ಅದೇ ಸರಣಿಯ ಶಬ್ದಗಳನ್ನು ನೋಡಿ, ತಾನು ಮತ್ತು ರಾಮದಾಸಮಾತ್ರ ಇದ್ದಾಗ ಈಕೆ "ರಾಮದಾಸರೇ, ನಿಮ್ಮ (ತನ್ನನ್ನು ನಿರ್ದೇಶಿಸಿ ಕೊಂಡು) ಈ ತಾಯಿಯ ವಾತ್ಸಲ್ಯ ಇತರರ ವಾತ್ಸಲ್ಯಕ್ಕಿಂತ ದೊಡ್ಡದೆಂದು ನೀವು ಭಾವಿಸುವುದಿಲ್ಲವೆ ? ಇತರ ತಾಯಿದಿರಿಗೆ ನಿಮ್ಮ ಮೇಲಿರುವ ವಾತ್ಸಲ್ಯ ನನಗೆ ನಿಮ್ಮಲ್ಲಿರುವ ವಾತ್ಸಲ್ಯ ಇವುಗಳ ಸಂಭಾವನೆಯಲ್ಲಿ ನೀವು ವ್ಯತ್ಯಾಸ ಕಾಣುವಿರೆಂದು ನಾನುಭಾವಿಸಿದ್ದೆ" ಎಂದಳು.

"ರಾಮದಾಸನಿಗೆ ಎಲ್ಲ ಮಾತೆಯರು ಒಂದೇ ಸಮ" ಎಂದು ರಾಮದಾಸನು ಉತ್ತರವಿತ್ತನು.

ಸತಿ ಪಿವ್ ಸಬರಮತಿ ಆಶ್ರಮಕ್ಕೆ ಸ್ವಲ್ಪಹಿಂದೆ ಹೋಗಿದ್ದಳು. ಅದರ ಕ್ರಮಗಳ ವಿಚಾರವಾಗಿ ಸ್ವಲ್ಪ ಸಂಭಾಷಣೆ ನಡೆಯಿತು. ಅದನ್ನು ರಾಮದಾಸನು ಸುಮ್ಮನೆ ಕೇಳುತ್ತಿದ್ದನು. ಈ ವಿಚಾರ ಕೊನೆಗಂಡ ನಂತರ ಅವನು ಕುಮಾರಿ ಕ್ರಾಸಳ ಸಂಗಡ ನಾಲ್ಕು ಮಾತನಾಡಿದನು. ಈ ಯುವತಿ ಜೈನಮತವನ್ನವಲಂಬಿಸಿ ಆಬುಪರ್ವತದಲ್ಲಿ ಅನೇಕ ತಿಂಗಳು ಕಠಿನವಾದ ವ್ರತಸಾಧನೆಯಲ್ಲಿದ್ದಳು. ಆಕೆ ನಡೆನುಡಿಯಲ್ಲಿ ಸರಳವಾಗಿ ಮಕ್ಕಳಂತಿದ್ದಳು. ಸಾಮಾನ್ಯ ವಸ್ತ್ರಗಳನ್ನು ಧಾರಣೆಮಾಡುತ್ತಾ, ಕಪಟವನ್ನರಿಯದೆ, ಸದಾ ಹೃಷ್ಟಳಾಗಿ ಅತಿವಿದಗ್ಧೆಯಲ್ಲದೆ ಇದ್ದಳು. "ದೇವನ ಪದತಲದಲ್ಲಿ" "At the Feet of God" ಎಂಬ ಪುಸ್ತಕದ ಕೆಲವು ಹಾಳೆಗಳನ್ನು ಅಲ್ಲಲ್ಲಿ ಓದಿದಳು.

"ರಾಮದಾಸ್, ನಿಮ್ಮ ಸಿದ್ಧಾಂತವನ್ನು ನಾನು ಒಪ್ಪುವುದಿಲ್ಲ. ಕಲುಷಿತವಾದ ಮತ್ತು ಬಂಧನಕ್ಕೆ ಸಿಲುಕಿರುವ ಆತ್ಮನನ್ನು ಶುದ್ಧಿಮಾಡಿ ಬಂಧವಿಮೋಚನೆ ಮಾಡಲು ಪುರುಷಾರ್ಥದಿಂದಲೇ, ಎಂದರೆ ಅಚಲಿತವಾದ ಕಠಿಣ ತಪಶ್ಚರ್ಯದಿಂದಲೇ ಸಾಧ್ಯವೆಂದು ನಂಬುತ್ತೇನೆ. (ಆತ್ಮನು ಮೂಲತಃ ಮತ್ತು ನಿರಂತರವಾಗಿ ಶುದ್ಧ, ಬಂಧನರಹಿತ) ಎಂಬ, ಮತ್ತು ಅಜ್ಞಾನ ಆತ್ಮನನ್ನು ಮೋಡದಂತೆ ಆವರಿಸಿದೆ ಎಂಬ ಸಿದ್ಧಾಂತವನ್ನು ನಾನು ಒಪ್ಪುವುದಿಲ್ಲ. ಅಲ್ಲದೆ ಬರಿಯ ಈ (ಆವರಣದ ನಾಶವೇ ಮೋಕ್ಷ) ವೆಂದು ವೇದಾಂತಿಗಳು ಹೇಳುವುದನ್ನು ನಾನು ನಂಬುವುದಿಲ್ಲ" ಎಂದಳು.

ರಾಮದಾಸನು "ತಾಯಿ, ನಿಜವನ್ನು ನೀವು ಯಾವದಾರಿಯಲ್ಲಾದರೂ ಸಾರಬಹುದು. ಪ್ರಶ್ನೆ ಇರುವುದು ಇಷ್ಟೆ. ಗುರಿಯನ್ನು ಮುಟ್ಟಲು ಯಾವುದು ಅತ್ಯಂತ ಸುಲಭ ಮತ್ತು ಜಾಗ್ರತೆಯ ದಾರಿ" ಎಂದನು.

ಹಣ್ಣು ಮತ್ತು ಹಾಲಿನ ಉಪಾಹಾರಾನಂತರ ಎಲ್ಲರೂ ತೆರಳಿದರು. ಈಗ ರಾಮದಾಸನಿಗೆ ಕಾಥೇವಾಡದ ದೂರವಾದ ಮೂಲೆಯಲ್ಲಿರುವ ಜುನಾಗಡ ಸಂಸ್ಥಾನದ ಉನ್ನದಿಂದ ಕರೆಬಂದಿತು. ಈ ಸಂಸ್ಥಾನಕ್ಕೆ ರಾಮದಾಸನು ಹೋಗಿದ್ದಾಗ ಸಂಗಡವಿದ್ದ ಮಗನ್‌ಲಾಲನು ಈಗ ಉನ್ನದಲ್ಲಿ ಉಪಾಧ್ಯಾಯನಾಗಿದ್ದನು. ಅಲ್ಲಿಗೆ ರಾಮದಾಸನನ್ನು ಎಳೆಯಲು ಇವನೇ ಕಾರಣ. ರಾಮದಾಸನೊಂದಿಗೆ ಪೋಪಟ್ ಭಾಯಿಯೂ ಹೊರಟನು.

ಲಿಂಬ್ಡಿಯನ್ನು ಬಿಡುವ ಮುನ್ನ ರಾಮದಾಸನು ಎಲಿಜಬೆತ್ ಮಾತೆಗೆ ಕೊನೆಯ ಭೇಟಿಯನ್ನು ಕೊಟ್ಟನು. ಹೊರಡುವಾಗ ಆಕೆ,

"ರಾಮದಾಸ್, ನೀವು ಆತ್ಮಸಾಧನೆಯಲ್ಲಿ ಕೊನೆಯ ಭೂಮಿಕೆಯ ಹಿಂದಿನ ಭೂಮಿಕೆಯನ್ನು ಮುಟ್ಟದ್ದೀರಿ. ನೀವು ಇನ್ನೂ ಉನ್ನತ ಸ್ಥಿತಿಯನ್ನು ಪಡೆಯಬೇಕು. ನೀವೇ ಧನ್ಯರು. ಇದೆಲ್ಲ ನಿಮ್ಮ ಪೂರ್ವಜನ್ಮಗಳ ಸಂಸ್ಕಾರದ ಫಲ" ಎಂದಳು.

ರಾಮದಾಸನು ಕೈಗಳನ್ನು ಜೋಡಿಸಿ ವಂದಿಸುತ್ತಾ "ರಾಮದಾಸನು ಯಾವ ಮಟ್ಟಕ್ಕೇರಿದ್ದಾನೋ, ಅದು ಮೇಲೋ ಕೆಳಗೋ, ತಿಳಿಯದು. ಅದನ್ನು ತಿಳಿಯಬೇಕೆಂಬ ಆಕಾಂಕ್ಷೆಯೂ ಅವನಿಗಿಲ್ಲ. ಅವನು ಕೇವಲ ಭಗವಂತನು ಎಲ್ಲಿ ಇಟ್ಟರೆ ಅಲ್ಲಿ ಇರುತ್ತ ತೃಪ್ತನಾಗಿದ್ದಾನೆ" ಎಂದನು.

---

## ಅಧ್ಯಾಯ ೪೨

### ಉನ್ನ–ಬೊಂಬಾಯಿ

#### (i) ಔಷಧವಾಗಿ ಕೊಟ್ಟ ವಿಷ

ಸಕಾಲದಲ್ಲಿ ರಾಮದಾಸನು ಪೋಪಟ್ ಭಾಯಿಯೊಂದಿಗೆ ಕಾಥೇವಾಡದ ಸಮುದ್ರತೀರದ ಒಂದು ಮುಖ್ಯ ಬಂದರಾದ ವೀರಾವಲನ್ನು ಸೇರಿದನು. ಇಲ್ಲಿ ಇವರು ಒಬ್ಬ ಗುಜರಾತಿ ಡಾಕ್ಟರ ಆಸ್ಪತ್ರೆಯಲ್ಲಿ ತಂಗಿದರು. ಸಂಜೆಗೆ ಡಾಕ್ಟರು ಊರಲ್ಲಿ ಒಬ್ಬ ಭಕ್ತ ಗೃಹಸ್ಥನ ಕೀರ್ತನೆ ಮತ್ತು ಉಪನ್ಯಾಸಕ್ಕೆ ಇಬ್ಬರನ್ನೂ ಕರೆದುಕೊಂಡು ಹೋದನು. ಭಾಗವತಪುರಾಣದ ಪ್ರಕಾರ ಶ್ರೀ ಕೃಷ್ಣನ ದೊಡ್ಡ

ಸಂಸಾರದ ಜನರಾದ ಯಾದವರು ತಮ್ಮಲ್ಲೇ ಕದನಮಾಡಿ ತಮ್ಮ ಕುಲವನ್ನೇ ನಾಶಮಾಡಿಕೊಂಡ ಸ್ಥಳವಾದ ಪ್ರಭಾಸ ಪಟ್ಟಣವನ್ನೂ ಇವರು ನೋಡಿದರು. ಇಲ್ಲಿ ಒಂದು ವಿಶಾಲವಾದ ಮೈದಾನದಲ್ಲಿ, ಒಂದು ಚಿಕ್ಕ ಬೇಲಿಯ ಆವರಣದಲ್ಲಿ ಒಂದು ಪುರಾತನ ಅಶ್ವತ್ಥವೃಕ್ಷವಿದೆ. ಬೇಲಿ ತಗ್ಗಾದ ಗೋಡೆಗಳ ಮೇಲೆ ಕಬ್ಬಿಣದ ಸಲಾಕೆಗಳಿಂದ ಮಾಡಿದ್ದು. ಒಂದು ಗೋಡೆಯುಲ್ಲಿನ ಗೂಡಿನಲ್ಲಿ ಶ್ರೀ ಕೃಷ್ಣನ ಪವಳಿಸಿರುವ ವಿಗ್ರಹವಿದೆ. ದಾರಿಯಲ್ಲಿ ಹೋಗುವ ಒಬ್ಬ ಬೇಡನ ಬಾಣ ತಗಲಿದ್ದರಿಂದ ಶ್ರೀ ಕೃಷ್ಣನು ದೇಹವನ್ನು ನೀಗಿದ ಸ್ಥಳ ಇದೆಂದು ಹೇಳುತ್ತಾರೆ.

ಉನ್ನಕ್ಕೆ ಹೋಗುವ ಒಂದು ಸಾಮಾನಿನ ದೋಣಿಯಲ್ಲಿ ರಾಮದಾಸನು ವೀರಾವಲ್‌ನಿಂದ ಪ್ರಯಾಣಮಾಡುವ ಏರ್ಪಾಡಾಯಿತು. ಈ ದೋಣಿಗೆ ಮೇಲೆ ಆಚ್ಛಾದನವಿರಲಿಲ್ಲ. ಅದು ಸಾಮಾನಿನ ಚೀಲಗಳಿಂದ ಭರ್ತಿಯಾಗಿದ್ದಿತು. ದೋಣಿ ಬಂದರಿಂದ ರಾತ್ರಿ ಹೊರಡಬೇಕಾಗಿದ್ದುದರಿಂದ ರಾಮದಾಸನೂ ಮತ್ತು ಪೋಪಟ್‌ಭಾಯಿಯೂ ಜಾಗ್ರತೆಯಾಗಿಯೇ ದೋಣಿಯನ್ನೇರಿದರು. ಆಗ ಹಿಮಗಾಲವಾದುದರಿಂದ ಚಳಿ ಬಹಳ. ಕೊರೆಯುವ ಕಡಲಗಾಳಿ ದೋಣಿಯ ಮೇಲೆ ಪೂರ್ಣ ರಭಸದಿಂದ ಬೀಸುತ್ತಿದ್ದಿತು. ರಾಮದಾಸನಿಗೂ ಪೋಪಟ್ ಭಾಯಿಗೂ ಹೆಚ್ಚಿನ ಬಟ್ಟೆಗಳಿರಲಿಲ್ಲ. ಅವರು ಮೂಟೆಗಳ ಸಂದಿಯಲ್ಲಿ ಮುದುರಿ ಕೊಂಡು, ತಮ್ಮಲ್ಲಿದ್ದ ಒಂದೇ ಒಂದು ಹತ್ತಿಯ ಬಟ್ಟೆಯನ್ನು ಹೊದೆದು ಕೊಂಡರು. ರಾತ್ರಿ ಹತ್ತುಗಂಟೆ ಸುಮಾರಿಗೆ ದೋಣಿ ತೀರದಿಂದ ಹೊರಟಿತು. ಅದು ಬೆಳಗಾಗುವ ಹೊತ್ತಿಗೆ ಉನ್ನವನ್ನು ಸೇರಬಹುದೆಂದು ಮೊದಲ ಎಣಿಕೆ. ಆದರೆ ಗಾಳಿಯ ಅಭಾವದಿಂದ ದೋಣಿ ಬಹುಮೆಲ್ಲನೆ ಮುಂದರಿಯಿತು. ಬೆಳಗಾದರೂ ಅವರು ಇನ್ನೂ ಉನ್ನದಿಂದ ದೂರದಲ್ಲಿದ್ದರು. ರಾತ್ರಿಯ ಕೊರೆತದ ನಂತರ ಬೆಳಿಗ್ಗೆ ಬಿಸಿಲಿನ ತಾಪ ಬಂದಿತು. ಹಗಲೆಲ್ಲಾ ಇವರು ಬಿಸಲಿನ ತಾಪದಲ್ಲಿ ಹುರಿದಂತಾದರು. ಉನ್ನ ಮುಟ್ಟುವಾಗ್ಗೆ ಸಂಜೆ ಆರು ಗಂಟೆಗೆ ಮೀರಿದ್ದಿತು. ಒಬ್ಬೊಬ್ಬರಿಗೆ ಒಂದೊಂದು ಬಾಳೆಯಹಣ್ಣು ಹೊರತು ಬೇರೆ ಆಹಾರವಿರಲಿಲ್ಲ. ಕುಡಿಯುವುದಕ್ಕೆ ನೀರು ಇಲ್ಲ. ಅರ್ಧ ಉಪವಾಸ ಆಯಿತು.

ಇಳಿಯುವ ಸ್ಥಳದಲ್ಲಿ ಗಾಳಿಯಲ್ಲಿ ತುಂಬಿದ್ದ ಒಣಗಿದ ಮೀನಿನ ವಾಸನೆಯನ್ನು ಪೋಪಟ್‌ಭಾಯಿ ತಡೆಯಲಾರದೆ ಹೋದನು. ಕಟುವಾದ ಭಾಷೆಯಿಂದ ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿ ಹಿಂದಕ್ಕೆ ಹೋಗುವಾಗ ಬೇರೆ ದಾರಿಯಲ್ಲಿ ಹೋಗೋಣವೆಂದನು.

ದೋಣಿಯಿಂದ ಇಳಿದಾಗ ಇವರು ಮಗನ್‌ಲಾಲನನ್ನೂ ಇನ್ನೊಬ್ಬ ಸ್ನೇಹಿತನನ್ನೂ ಕಂಡರು. ಅವರು ಇವರನ್ನು ಸ್ವಾಗತಿಸಲು ಬಂದಿದ್ದರು. ಇವರು ಆರುಮೈಲಿ ದಾರಿ ನಡೆದ ಮೇಲೆ ಉನ್ನ ಸಿಕ್ಕಿತು. ರಾಮದಾಸನೂ ಪೋಪಟ್

ಭಾಯಿಯೂ ಮಗನ್‌ಲಾಲನೊಂದಿಗೆ ಒಂದು ದೊಡ್ಡ ಕಟ್ಟಡದ ಕೆಳಗಿನ ಅಂತಸ್ತಿನಲ್ಲಿದ್ದ ಅವನ ಕೊಟಡಿಗಳಲ್ಲಿ ಇಳಿದುಕೊಂಡರು. ಆ ಕಟ್ಟಡದ ಮೇಲಿನ ಅಂತಸ್ತಿನಲ್ಲಿ ಒಬ್ಬ ಪಾರ್ಸಿ ಔಷಧ ವ್ಯಾಪಾರಿ ಸಂಸಾರಸಮೇತ ವಾಸವಿದ್ದನು. ಮಗನ್‌ಲಾಲನು ಒಂಟಿಯಾಗಿದ್ದನು.

ರಾಮದಾಸನು ಬಂದಿದ್ದಾನೆಂಬ ವರ್ತಮಾನ ಊರಿನಲ್ಲಿ ಹರಡಿ, ಅವನನ್ನು ನೋಡಲು ಅನೇಕರು ಬಂದರು. ಇವರಲ್ಲಿ ಒಬ್ಬ ಪಾರ್ಸಿ ಡಾಕ್ಟರು ಮಹದೇವಿಯು, ಒಬ್ಬ ಖೋಜ, ಮತ್ತು ಕೆಲವು ಉಪಾಧ್ಯಾಯರು ಇದ್ದರೆನ್ನುವುದನ್ನು ಹೇಳಬೇಕು.

ಡಾಕ್ಟರ್ ಮಹದೇವಿಯು ಮತ್ತು ಪಾರ್ಸಿ ಔಷಧದ ವ್ಯಾಪಾರಿ ರಾಮದಾಸನನ್ನು ಭೋಜನಕ್ಕೆ ಕರೆದರು. ಅವರ ಮನೆ ಮಕ್ಕಳೂ ಗೃಹಿಣಿಯರೂ ರಾಮದಾಸನನ್ನು ಬಹಳ ಆದರದಿಂದ ಕಂಡರು. ಪಾರ್ಸಿ ಔಷಧವ್ಯಾಪಾರಿ ಸಮಾಧಾನಿಯಾದ ಶ್ರದ್ಧಾವಂತ ಸರಳಜೀವಿ. ಅವನು ಪ್ರಾಯಶಃ ಎಲ್ಲ ಹೊತ್ತನ್ನೂ ರಾಮದಾಸನ ಸಂಗಡ ಕಳೆದನು. ಅವನು ರಾಮನಾಮದಿಂದ ಎಷ್ಟು ಮುಗ್ಧನಾದನೆಂದರೆ ಅವನು ಸದಾ ಅದನ್ನು ಪಠಿಸಲು ಆರಂಭಿಸಿದನು. ಒಂದು ದಿನ ಒಂದು ಘಟನೆ ನಡೆಯಿತು. ಅದು ಅವನಿಗೆ ದೇವರಲ್ಲಿದ್ದ ನಂಬಿಕೆಯನ್ನು ದೃಢಪಡಿಸಲು ಕಾರಣವಾಯಿತು.

ಈ ಔಷಧ ವ್ಯಾಪಾರಿ ಮಿತ್ರ ರಾಮದಾಸನೊಂದಿಗೆ ಕುಳಿತಿದ್ದಾಗ ಗಂದಿಗೆ ಸಾಮಾನುಗಳ ಸಂಚಾರಿ ಪ್ರಸಾರಕನೊಬ್ಬನು ಈತನನ್ನು ಕಾಣಲು ಬಂದನು. ವ್ಯಾಪಾರದ ವಿಚಾರ ಮಾತನಾಡುತ್ತ, ಪಾರ್ಸಿ ಅವನನ್ನು ಒಂದು ವಿಷಪದಾರ್ಥವನ್ನು ಕೊಡು ಎಂದು ಕೇಳಿದನು. ಸ್ವಲ್ಪವೇ ಕಾಲದ ಹಿಂದೆ ತಾನು ಆ ಪದಾರ್ಥವನ್ನು ತಕ್ಕಷ್ಟು ಕೊಟ್ಟಿದ್ದರಿಂದ ಅದು ಇಷ್ಟು ಬೇಗನೆ ಖರ್ಚಾಗಿರುವುದಕ್ಕೆ ಪ್ರಸರಕನು ಆಶ್ಚರ್ಯಪಟ್ಟನು. ಆಗ ಒಂದು ಸಲದ ಔಷಧಕ್ಕೆ ಉಪಯೋಗಿಸಬಹುದಾದ ಆ ವಿಷದ ಪರಮಾವಧಿಪ್ರಮಾಣ ಚರ್ಚೆಗೆ ಬಂದಿತು. ಆಗ ಆ ದಿವಸ ಪ್ರಮಾದದಿಂದ ಆ ಪ್ರಮಾಣದ ಇಪ್ಪತ್ತರಷ್ಟನ್ನು ಸೇರಿಸಿ ಒಂದು ಸಲದ ಔಷಧವನ್ನು ಒಬ್ಬ ರೋಗಿಗೆ ಕೊಟ್ಟಿದ್ದಂತೆ ಪಾರ್ಸಿಗೆ ಜ್ಞಾಪಕವಾಯಿತು ಔಷಧದ ಸೇವನೆಯ ಕಾಲ ಸಾಯಂಕಾಲ ಏಳುಗಂಟೆ. ಇಲ್ಲಿ ಚರ್ಚೆಯಾಗುತ್ತಿದ್ದಾಗ ಸುಮಾರು ಅದೇ ಸಮಯ. ತನ್ನ ಅಚಾತುರ್ಯದಿಂದ ಸಂಭವಿಸಬಹುದಾದ ಘಟನೆಗೆ ತೀರಾ ಗಾಬರಿಯಾಗಿ ಪಾರ್ಸಿ ಸಾವಕಾಶ ಮಾಡದೆ ರೋಗಿಯ ಮನೆಗೆ ಓಡಿದನು. ಅವನ ಪುಣ್ಯದಿಂದ ರೋಗಿ ಆ ಮರಣಕರವಾದ ವಿಷದ ಔಷಧವನ್ನು ಸೇವನೆ ಮಾಡಿರಲಿಲ್ಲ. ಪಾರ್ಸಿ ಔಷಧದ ಪೊಟ್ಟಣವನ್ನು ಕಿತ್ತುಕೊಂಡು ರಾಮದಾಸನು ಕುಳಿತಿದ್ದ ಕಡೆಗೆ ಹಿಂದಕ್ಕೆ ಓಡಿಬಂದು, ಕಣ್ಣಿನಲ್ಲಿ ಆನಂದಾಶ್ರುವನ್ನು ಸುರಿಸುತ್ತಾ ಭಾವದ ಉದ್ವೇಗದಿಂದ ರಾಮದಾಸನ ಕಾಲಿಗೆ

ಬಿದ್ದು "ಸ್ವಾಮಿಜಿ, ಈದಿನ ನೀವು ನನ್ನನ್ನು ಗಲ್ಲಿನಿಂದ ಪಾರುಮಾಡಿದಿರಿ. ಎಲ್ಲಾ ನಿಮ್ಮ ಕೃಪೆ" ಎನ್ನುತ್ತಾ ನಡೆದ ಸಂಗತಿಯನ್ನು ಹೇಳಿದನು.

ರಾಮದಾಸನು "ಅಣ್ಣ, ನಿನ್ನನ್ನುಳಿಸಿದುದು ದೇವರ ಸ್ಮರಣೆ; ಯಾವಾಗಲೂ ರಕ್ಷಕನು ಭಗವಂತನೇ" ಎಂದು ಉತ್ತರ ಕೊಟ್ಟನು.

ಈ ತನ್ನ ಅಚಾತುರ್ಯಕ್ಕೆ ಪ್ರಾಯಶ್ಚಿತ್ತವಾಗಿ, ಆ ವ್ಯಾಪಾರಿ ಮೂರು ದಿವಸದ ಉಪವಾಸವನ್ನು ಕೈಗೊಂಡನು; ನೀರೇ ಆಹಾರ. ರಾಮನಾಮ ತುಟಿಯಿಂದ ಅಗಲಲಿಲ್ಲ. ಅವನು ರಾತ್ರಿ ನಿದ್ರೆಯನ್ನೂ ಬಿಟ್ಟನು. (ರಾಮಮಂತ್ರ ಅವನ ನಾಲಗೆಯ ಮೇಲೆ ಸಂತತವಾಗಿ ಮೊಳಗಿತು.)

ಖೋಜ ಸ್ನೇಹಿತನ ಕಬ್ಬಿನ ತೋಟಕ್ಕೆ ಹೋಗಿದ್ದುದು, ಊರಹೊರ ವಳಯದ, ಮಹಾದೇವನ ದೇವಸ್ಥಾನಕ್ಕೆ ಭೇಟಿಕೊಟ್ಟುದು, ರಾಮದಾಸನು ಉನ್ನದಲ್ಲಿ ಇದ್ದ ಕಾಲದ ಪೂರ್ವಭಾಗದ ಇತರ ಕಾರ್ಯಕ್ರಮ. ಕಬ್ಬಿನ ತೋಟದಲ್ಲಿ ತಣ್ಣಗಿದ್ದ ಕಬ್ಬಿನ ರಸವನ್ನು ಕುಡಿಯಲು ಕೊಟ್ಟರು. ಉನ್ನಾವಸತಿಯ ಉತ್ತರ ಭಾಗದಲ್ಲಿ ರಾಮದಾಸನನ್ನು ಮಗನ್‌ಲಾಲನು ಉಪಾಧ್ಯಾಯನಾಗಿದ್ದ ಹೈಸ್ಕೂಲಿನ ಹುಡುಗರ ಎರಡು ಪ್ರಾಥಮಿಕ ಶಾಲೆಗಳ ಹುಡುಗಿಯರ ಬಳಿಗೆ ಕರೆದುಕೊಂಡು ಹೋದರು. ಈ ಎಲ್ಲ ಸ್ಥಳಗಳಲ್ಲಿಯೂ ರಾಮದಾಸನು "ವಿದ್ಯಾರ್ಥಿಗಳ ಸರಿಯಾದ ನಡತೆ" ಎಂಬ ವಿಷಯವನ್ನು ಕುರಿತು ಸಣ್ಣ ಉಪನ್ಯಾಸ ಮಾಡಿದನು.

ಹೈಸ್ಕೂಲಿನಿಂದ ಹಿಂದಕ್ಕೆ ಬರುವಾಗ ರಾಮದಾಸನು ದಾರಿಯಲ್ಲಿ ಹುಡುಗರು ಆಟದ ಮೈದಾನದಲ್ಲಿ ಆಡುತ್ತಿದ್ದ ಕ್ರಿಕೆಟ್ ಆಟದಲ್ಲಿ ಅವರೊಂದಿಗೆ ಸೇರಿದನು. ರಾಮದಾಸನು ಚಂಡೆಸೆಯಲು ನಿಂತಾಗ ಮೊದಲನೆಯ ಚಂಡಿನಿಂದಲೇ ಮಧ್ಯದ ವಿಕೆಟ್ ಹಾರಿಹೋಯಿತು. ಪ್ರೇಕ್ಷಕರು ನಗುತ್ತಿರಲು ರಾಮದಾಸನು ಆಟದ ಮೈದಾನದಿಂದ ಹೊರಟನು.

ಒಂದು ಆಕಸ್ಮಿಕದಿಂದ ಮೃತಿ ಹೊಂದಿದ್ದ ಒಬ್ಬ ಯುವಕನ ಮೃತ ದೇಹದ ಪರೀಕ್ಷೆ ಆಸ್ಪತ್ರೆಯಲ್ಲಿ ನಡೆಯುತ್ತಿದ್ದಿತು. ಡಾಕ್ಟರ ಅನುಮತಿ ಪಡೆದು ಪೋಪಟ್‌ಭಾಯಿ ಇದನ್ನು ನೋಡಲು ನಿಂತನು. ಮನುಷ್ಯನ ದೇಹದೊಳಗಿರುವ ಅಂಗಗಳನ್ನೆಲ್ಲಾ ಗಮನವಿಟ್ಟು ಪರೀಕ್ಷಿಸಿ ಶವದ ಪರೀಕ್ಷೆ ಮುಗಿದೊಡನೆ ರಾಮದಾಸನ ಬಳಿಗೆ ಬಂದು ಅವನು,

"ಸ್ವಾಮಿಜಿ, ನಮ್ಮ ದೇಹದಲ್ಲಿರುವ ಜಠರ ನೋಡಿದರೆ ಬಹು ಸಣ್ಣಚೀಲ. ಅದಕ್ಕೆ ನಾವು ಏಕೆ ಇಷ್ಟು ಆಹಾರವನ್ನು ತುಡಿಯುತ್ತೇವೆಂದು ನನಗೆ ಆಶ್ಚರ್ಯ. ಜಠರದ ಪ್ರಮಾಣವನ್ನು ನೋಡಿದರೆ ಅದಕ್ಕೆ ಸ್ವಲ್ಪ ಆಹಾರ ಸಾಕು. ನಾವು ಹೆಚ್ಚಾಗಿ ತುಂಬಿ ಅದನ್ನು ಗುಡಾಣದ ಹಾಗೆ ಊದಿಸಿ ಬೊಜ್ಜು ಬೆಳೆಸುತ್ತೇವೆಂದು ತೋರುತ್ತದೆ" ಎಂದನು.

ರಾಮದಾಸನು ನಕ್ಕನು. ತಮಾಷೆಯದಾದರೂ ವಿವೇಚನೆಯಿಂದ ಕೂಡಿದ ಈ ಮಾತನ್ನು ಕೇಳಿದ ಇತರರೂ ನಕ್ಕರು.

ಡಾಕ್ಟರ್ ಮಹದೇವಿಯಸು ತಿಲಕರಸಿದ್ಧಾಂತದ ಅನುಯಾಯಿ. ಅವನಿಗೂ ರಾಮದಾಸನಿಗೂ ಅಹಿಂಸಾ ತತ್ವದ ವಿಚಾರವಾಗಿ ಅನೇಕ ಚರ್ಚೆಗಳಾದುವು.

ರಾಮದಾಸನು ಉನ್ನದಲ್ಲಿ ಒಂದು ವಾರಕ್ಕೆ ಹೆಚ್ಚಾಗಿ ಇದ್ದನು. ಮುಂದಣ ಪ್ರಯಾಣದ ಕಾಲ ಒದಗಿತು. ಪೋಪಟ್‌ಭಾಯಿ ಸಮುದ್ರ ಮಾರ್ಗವಾಗಿ ಪ್ರಯಾಣಮಾಡಲು ಒಪ್ಪಲಿಲ್ಲ. ಆದುದರಿಂದ ಇವರನ್ನು ವೀರಾವಲ್‌ಗೆ ಒಯ್ಯಲು ಒಂದು ಎತ್ತಿನ ಗಾಡಿಯನ್ನು ಗೊತ್ತುಮಾಡಿದರು. ದಾರಿ ಬಹಳ ಕೆಟ್ಟುಹೋಗಿದೆ ಯೆಂದು ಮೊದಲೇ ಎಚ್ಚರಿಕೆ ಕೊಟ್ಟರು. ಗಾಡಿಯನ್ನು ಅರ್ಧ ಮಟ್ಟಕ್ಕೆ ಹುಲ್ಲಿಂದ ತುಂಬಿ ಅದರಮೇಲೆ ದಪ್ಪವಾದ ಮೆತ್ತೆಯನ್ನು ಹಾಸಿ ಎರಡು ದಿಂಬುಗಳನ್ನು ಇಟ್ಟರು. ಗಾಡಿಯ ಪಕ್ಕಗಳಲ್ಲಿ ಸಡಿಲಾಗಿ ಹಗ್ಗ ಕಟ್ಟಿದ್ದಿತು. ಗಾಡಿ ಮುಂದರಿದಂತೆ ಇವರಿಗೆ ಕುಳಿತುಕೊಳ್ಳುವುದು ಅಸಾಧ್ಯವಾಯಿತು. ಎತ್ತುಗಳು ಘಟ್ಟಿಮುಟ್ಟಾಗಿದ್ದುದರಿಂದ ಬಂಡಿಯನ್ನು ಆ ಪೆಡಸಾದ ಇಡುಗು ತಡಗು ನೆಲದಲ್ಲಿ ಕಲ್ಲುಗುಂಡುಗಳ ಮೇಲೆ, ನಿರ್ದಾಕ್ಷಿಣ್ಯವಾಗಿ ಎಳೆದುಕೊಂಡು ಹೋಗುತ್ತಿದ್ದುವು. ಗಾಡಿ ಪಕ್ಕದಿಂದ ಪಕ್ಕಕ್ಕೆ ಹೊರಳುತ್ತಾ, ಆಗಾಗ್ಗೆ ಬಡಿಯುತ್ತ ಕುಕ್ಕುತ್ತ ಸಾಗುತ್ತಿದ್ದಿತು. ಗಾಡಿಯೊಳಗಿದ್ದವರು ಪುನಃ ಪುನಃ ಒಬ್ಬರ ಮೇಲೊಬ್ಬರು ಬಿದ್ದು ಡಿಕ್ಕಿಕೊಡುತ್ತಿದ್ದರು. ಹಗ್ಗದ ಮಧ್ಯದ ಅಗಲವಾದ ಸಂದಿನಲ್ಲಿ ಎಸೆದು ದಾರಿಯ ಮೇಲಕ್ಕೆ ಬಿದ್ದೇವೆಂಬ ಭೀತಿಯಿಂದ, ಪ್ರಾಣ ರಕ್ಷಣೆಗಾಗಿ ಸಡಿಲವಾದ ಹಗ್ಗವನ್ನು ಗಟ್ಟಿಯಾಗಿ ಹಿಡಿದುಕೊಳ್ಳಬೇಕಾಗಿದ್ದಿತು. ನಿದ್ರೆ ವಿಶ್ರಾಂತಿಯ ಮಾತೇ ಇಲ್ಲ. ಎಷ್ಟು ಪ್ರಯತ್ನಪಟ್ಟರೂ ಒಂದು ನಿಮಿಷಕ್ಕೆ ಹೆಚ್ಚಾಗಿ ಅವರು ಇದ್ದಂತೆ ಇರುವುದು ಸಾಧ್ಯವಾಗಲಿಲ್ಲ. ರಾಮದಾಸನೂ ಪೋಪಟ್‌ಭಾಯಿಯೂ, ಸಮುದ್ರದಿಂದ ತೆಗೆದು ಮರಳಿನಮೇಲೆ ಎಸೆದವೇಳೆ ಒದ್ದಾಡುತ್ತ, ಒಂದರ ಮೇಲೊಂದು ಹಾರುತ್ತಿರುವ ಎರಡು ಮೀನುಗಳಂತಿದ್ದರು.

ಗಾಡಿ ಢಬುಂ ಎಂದು ಕುಕ್ಕುವುದರಿಂದಲೂ ಇಬ್ಬರ ದೇಹಗಳೂ ತಾಟ್ಟಾಡು ತ್ತಿದ್ದುದರಿಂದಲೂ ಅವರ ಒಳಗಿನ ಮೂಳೆಗಳೇ ಕಟಕಟ ಶಬ್ದಮಾಡುತ್ತಿದ್ದಂತೆ ಕಂಡಿತು. ಈ ಬಗೆಯ ಅಸಾಧಾರಣ ಅನುಭವಕ್ಕೆ ರಾಮದಾಸನು ಬಿದ್ದು ಬಿದ್ದು ನಕ್ಕು ಬಹುಮಟ್ಟಿಗೆ ನಿಜವಾಗಿ "ಕಾವಲಿಯಿಂದ ತಪ್ಪಿಸಿಕೊಂಡು ಉರಿಯೊಳಕ್ಕೆ ಬಿದ್ದಂತೆ" ಎಂದು ಉಸಿರಿದನು. ಪೋಪಟ್‌ಭಾಯಿ ಮೌನವಾಗಿದ್ದನು. ವೀರಾವಲ್ ಸೇರಲು ನಲವತ್ತೆಂಟು ಮೈಲಿ ದೂರ ಸಾಗಬೇಕು. ಪ್ರಯಾಣಕ್ಕೆ ಏನಿಲ್ಲವೆಂದರೆ ಇಪ್ಪತ್ತನಾಲ್ಕು ಗಂಟೆಗಳ ಕಾಲ ಬೇಕು. ಇವರು ದೂರದೂರದ ದಾರಿಯಮಗ್ಗುಲ ಹಳ್ಳಿಗಳಲ್ಲಿ ನಾಲ್ಕುಸಲ ಒಂದೊಂದು ಗಂಟೆ ನಿಂತರು. ವೀರಾವಲ್ ಇನ್ನು ಹತ್ತು ಮೈಲಿ ಮಾತ್ರ ಇರುವಾಗ ರಾಮದಾಸನು ಗಾಡಿಯಿಂದ

ಘುಷುಕಿ, ನಡೆದುಕೊಂಡು ಹೋಗುವುದಾಗಿ ಹೊರಟನು. ಪೋಪಟ್‌ಭಾಯಿ ಹಾಗೆಯೇ ಮಾಡಿದನು. ಮುಚ್ಚಂಜೆಗೆ ಇವರು ವೀರಾವಲನ್ನು ಸೇರಿದರು.

ಗಾಡಿ ಆ ಮೇಲೆ ಬಂದಿತು. ಒಂದು ದಿಂಬು ಎಲ್ಲಿಯೋ ದಾರಿಯಲ್ಲಿ ಬಿದ್ದು ಹೋಗಿರಬೇಕು. ಇದು ಹೊರತು ಇನ್ಯಾವ ತೊಂದರೆಯೂ ಆಗಿರಲಿಲ್ಲ. ಆ ರಾತ್ರಿ ಇವರು ಒಬ್ಬ ತರುಣವ್ಯಾಪಾರಿಗೆ ಸೇರಿದ ದೊಡ್ಡಒಂದು ಮಳಿಗೆಯ ಮೂರನೆಯಅಂತಸ್ತಿನ ಒಂದು ಸಣ್ಣ ಕೊಟಡಿಯಲ್ಲಿ ಇದ್ದರು.

ಪೋಪಟ್‌ಭಾಯಿ ಸರಳ ರೂಢಿಗಳ ಮನುಷ್ಯ. ಧೂಮಪಾನವೆಂದರೆ ಅವನಿಗೆ ಅಂತರ್ಯದಿಂದ ಬೇಸರ. ಧೂಮಪಾನಮಾಡುವವರನ್ನು ಕಂಡರೆ ಅವನು ಅದರಿಂದಾಗುವ ಬಹುವಿಧದ ಕೆಡುಕನ್ನು ತಿಳಿಸಿ, ಅದನ್ನು ಬಿಟ್ಟುಬಿಡಿರೆಂದು ಬುದ್ಧಿವಾದ ಹೇಳುತ್ತಿದ್ದನು. ಆದರೂ ಆಶ್ಚರ್ಯಕರವಾದ ವಿಧಿವಿಲಾಸದಿಂದ, ಅವನಪಾಲಿಗೆ, ಧೂಮಪಾನ ಮಾಡುವ ರಾಮದಾಸನ ಬೀಡಿಗಳನ್ನು ಇಟ್ಟು ಕೊಂಡಿರುವ ಹೊಣೆ ಬಂದಿತು. ರಾಮದಾಸನ ಮೇಲಿನ ಅಪಾರಗೌರವದಿಂದ ಅವನು ರಾಮದಾಸನ ಈ ಅಭ್ಯಾಸವನ್ನು ಹೇಯವೆಂದು ಭಾವಿಸುವುದಕ್ಕೆ ಅವಕಾಶ ವಾಗಲಿಲ್ಲ. ಆ ಚಿಕ್ಕ ಕೊಟಡಿಯಲ್ಲೇ ರಾಮದಾಸನು ಬೀಡಿಯನ್ನು ಸೇದಿದನು. ಕಿಟಕಿಗಳು ಸಣ್ಣವು ಮತ್ತು ಎತ್ತರದಲ್ಲಿದ್ದವು. ಆದ್ದರಿಂದ ಬೀಡಿಯ ಹೊಗೆಯ ಸ್ತೋಮ ಬೇಗನೆ ದಟ್ಟವಾಗಿ ಕೊಟಡಿಯಲ್ಲಿ ತುಂಬಿತು.

ರಾಮದಾಸನು "ರಾಮಜಿ, ಬೀಡಿಯ ದುರ್ವಾಸನೆ ಇದರ ವಾಡಿಕೆಯಿಲ್ಲದ ನಿಮ್ಮ ಮೂಗಿಗೆ ದುಸ್ಸಹವಾಗಿರಬೇಕು" ಎಂದನು.

ಪೋಪಟ್‌ಭಾಯಿ ತಕ್ಷಣವೇ "ಶುದ್ಧಾಂಗವಾಗಿ ಇಲ್ಲ. ಅದಕ್ಕೆ ಪ್ರತಿಯಾಗಿ, ನೀವು ಸೇದುವ ಹೊಗೆ ವಾತಾವರಣವನ್ನು ಶುದ್ಧಿಮಾಡುತ್ತಿದೆ" ಎಂದನು. ಸತ್ಯವಾಗಿ ನೋಡಿದರೆ, ನಿಜವಾಗಿ ಪ್ರೀತಿಯಿದ್ದವರಿಗೆ ಕುಂದು ಕಾಣಿಸುವುದಿಲ್ಲ. ಇದೇ ಪ್ರೀತಿಯ ಘನತಮ ಲಕ್ಷಣ.

### (ii) ದೇವರುಮಾಡುವುದೆಲ್ಲಾ ಒಳ್ಳೆಯದಕ್ಕೇ

ಪೋಪಟ್‌ಭಾಯಿ ತನ್ನ ಊರಾದ ವಢ್ವಾನ್ ಪಟ್ಟಣಕ್ಕೆ ಹೋಗಬೇಕಾ ಗಿದಿದ್ದುದರಿಂದ ವೀರಾವಲ್‌ನಲ್ಲೇ ರಾಮದಾಸನಿಂದ ಬೇರೆಯಾದನು. ರಾಮದಾಸನು ಬೊಂಬಾಯಿಗೆ ಹೋಗುವ ಬಿ. ಐ. ಎಸ್. ಎನ್. ಜಹಜನ್ನು ಹತ್ತಿದನು. ಜಹಜು ವೀರಾವಲನ್ನು ರಾತ್ರಿ ಬಿಟ್ಟು ಮರುದಿನ ಸಾಯಂಕಾಲಕ್ಕೆ ಬೊಂಬಾಯಿ ಬಂದರನ್ನು ಮುಟ್ಟಿತು. ರಾಮದಾಸನು ನೇರವಾಗಿ ಸಂಜೀವ ರಾಯರ ಕೊಟಡಿಗೆ ಹೋಗಿ ಸಂಜೀವರಾಯರಿಗೂ ಅವರ ಪತ್ನಿಗೂ ಅನಿರೀಕ್ಷಿತ ವಾದ ಸಂತೋಷವನ್ನುಂಟುಮಾಡಿದನು.

ಈ ಸಲ ರಾಮದಾಸನು ಬೊಂಬಾಯಲ್ಲಿ ಎರಡುವಾರಕ್ಕೆ ಮೇಲ್ಪಟ್ಟ ಕಾಲ ನಿಂತು, ಒಂದರಮೇಲೆ ಒಂದರಂತೆ ಕಾರ್ಯಕ್ರಮಗಳಲ್ಲಿ ಭಾಗಿಯಾಗ

ಬೇಕಾಯಿತು. ಬೆಳಗು ಮುಂಜಾನೆಯಿಂದ ರಾತ್ರಿ ಬಹಳ ಹೊತ್ತಿನವರೆಗೂ, ಬೊಂಬಾಯಿನ ನಾನಾಭಾಗಗಳಿಂದ ನೂರಾರು ಜನರು ರಾಮದಾಸನನ್ನು ನೋಡಲು ಹರಿದು ಬರುತ್ತಿದ್ದರು. ಅವನು ಸದಾ ಇಲ್ಲಿ ಅವರೊಡನೆ ಮಾತ ನಾಡುತ್ತಾ, ಇಲ್ಲಿ ಹಾಡು ಬಲ್ಲ ಭಕ್ತರ ಇಂಪಾದ ಕೀರ್ತನದಿಂದ ಸುಖಿಸುತ್ತಾ ಇದ್ದನು. ಈ ಭಕ್ತರಲ್ಲಿ ರತ್ನಾಕರನೆಂಬ ಯುವಕನು ಗಾಮ್‌ದೇವಿಯ ಸಾರಸ್ವತ ಸಂಘದ ಸಭಾಮುಂದಿರದಲ್ಲಿ ರಾಮದಾಸನು ಎರಡು ಉಪನ್ಯಾಸ ಮಾಡುವಂತೆ ಏರ್ಪಾಡು ಮಾಡಿದನು. ಒಂದೊಂದು ಉಪನ್ಯಾಸಕ್ಕೂ ತುಂಬಿ ಸಭೆ ನೆರೆದಿದ್ದಿತು. ಬಂದಿದ್ದವರು ಹೆಚ್ಚಾಗಿ ಸಾರಸ್ವತರು. ಮೊದಲ ಉಪನ್ಯಾಸ ಆಂಗ್ಲ ಭಾಷೆಯಲ್ಲಿ "ಜೀವನ ಧ್ಯೇಯ"ವನ್ನು ಕುರಿತಿದ್ದಿತು. ಎರಡನೆಯದು ಕೊಂಕಣಿ ಭಾಷೆಯಲ್ಲಿ "ಕರ್ಮಯೋಗ"ದ ಮೇಲೆ. ಎರಡನೆಯದಕ್ಕೆ ಸಾರಸ್ವತ ಮಹಿಳೆಯರು ಹೆಚ್ಚಾಗಿ ಬಂದಿದ್ದರು.

ರಾಮದಾಸನು ಯಾವಾಗಲೂ ಸಮಯಸ್ಫೂರ್ತಿಯಿಂದ ಉಪನ್ಯಾಸಮಾಡು ತ್ತಿದ್ದನು. ಹೀಗೆ ಅವನು ಉಪನ್ಯಾಸ ಮಾಡುವಾಗ ಅವನು ಅನುಭವಿಸುತ್ತಿದ್ದ ಆನಂದವೇ ಶಬ್ದರೂಪವಾಗಿ ಪ್ರವಹಿಸುತ್ತಿದ್ದಿತು. ಆ ಕಾಲದಲ್ಲಿ ಅವನು ಸಂಪೂರ್ಣ ಆನಂದದಲ್ಲಿ ಮಗ್ನನಾಗಿರುತ್ತಿದ್ದನು. ಅವನು ಆ ಮಾತೃವತ್ ಸಭೆಯಮುಂದೆ ಒಂದು ಮಗುವಿನಂತೆ ಧಾರಾಳವಾಗಿ ಮಾತನಾಡಿದನು. ಏಕೆಂದರೆ ಸಭೆಗೆ ಬಂದಿದ್ದ ಮಿತ್ರರೂ ಮಾತೆಯರೂ ಅವನ ಮಾತನ್ನು ಬಹು ಪ್ರೀತಿಯಿಂದ ಸಾವಧಾನವಾಗಿ ಕೇಳುತ್ತಿದ್ದರು.

"ಜೀವನ ಧ್ಯೇಯ"ವನ್ನು ಕುರಿತ ಅವನ ಉಪನ್ಯಾಸದ ಸಾರಾಂಶ ಹೀಗಿದ್ದಿತು:—"ಅತ್ಯಂತಶ್ರೇಷ್ಠ ವರವಾದ ಈ ಮಾನವ ಜನ್ಮವನ್ನು ದೇವರು ನಮಗೆ ದಯಪಾಲಿಸಿರುವುದು ಪರತತ್ತ್ವವಾದ ತನ್ನನ್ನು ಸಾಕ್ಷಾತ್ಕಾರಮಾಡಿ ಕೊಳ್ಳುವುದಕ್ಕಾಗಿ. ಅವನು ಅನಂತಆನಂದ; ಅನಂತಶಾಂತಿ; ಸ್ವರೂಪನು. ಸಾಕ್ಷಾತ್ಕಾರವೆಂದರೆ ವಿಶ್ವದರ್ಶನ. ಎಂದರೆ ಮೂರ್ತಿರಹಿತ ಸುಪ್ರಶಾಂತ ಪರಿಶುದ್ಧ ಅವಿಕಾರ ಸರ್ವವ್ಯಾಪಿಯಾದ ಸತ್ವದೊಂದಿಗೆ ನಾವು ಒಂದಾಗಿರುವೆವು ಎಂಬುದನ್ನು ಸದಾ ಗ್ರಹಿಸಿರುವುದು. ಸಮಸ್ತ ವಸ್ತುಗಳೂ ವಿಕಾರಗಳೂ ಆ ಸತ್ಯದ ಅಭಿವ್ಯಂಜನವೆಂದು ಭಾವಿಸುವುದು. ಅವಿಚ್ಛಿನ್ನವಾದ ಸ್ಮೃತಿ ಪ್ರವಾಹದಿಂದಲೂ ಮನನದಿಂದಲೂ ಸತ್ಯದ ಏಕಾಗ್ರಚಿತ್ತಧ್ಯಾನಕ್ಕೆ ಮನಸ್ಸನ್ನು ಶ್ರುತಿಮಾಡುವು ದರಿಂದ ಈ ಉದಾತ್ತಸ್ಥಿತಿ ಸಿದ್ಧಿಸುತ್ತದೆ. ಸತ್ಯದಕಡೆಗೆ ನಾವು ಎಷ್ಟು ಮುಂದರಿ ಯುವೆವೆನ್ನುವುದು ಅದನ್ನು ಪಡೆಯುವ ವಿಷಯದಲ್ಲಿಯ ನಮ್ಮ ಶ್ರದ್ಧೆ ಮತ್ತು ತೀವ್ರತೆಯನ್ನು ಅವಲಂಬಿಸಿರುತ್ತದೆ. ಸತ್ಯವೇ ನಮ್ಮ ಜೀವನದ ಗುರಿಯೆಂದು ನಾವು ಮನಗಂಡಾಗ ಅದನ್ನು ಸಮೀಪಿಸುವ ನಮ್ಮ ಹೆಜ್ಜೆ ಸುಲಭವಾಗುತ್ತದೆ, ವೇಗವಾಗುತ್ತದೆ. ಜೀವನದ ಗುರಿ, ಅದರ ಈ ಅಂತಿಮ ಸಾಫಲ್ಯಕ್ಕಿಂತ

ಕಡಮೆಯಾದ ಬೇರೆ ಏನೂ ಆಗಬಾರದು. ಚಿತ್ತವೃತ್ತಿಯ ಮತ್ತು ಪ್ರಯತ್ನದ ಏಕಾಗ್ರತೆ ಇದಕ್ಕೆ ಮೊದಲಸಾಮಗ್ರಿ. ಚಿತ್ತವೃತ್ತಿಯ ಏಕಾಗ್ರತೆಗೆ ಭಗವನ್ನಾಮವನ್ನು ಸದಾ ಜಪಿಸುವುದು ಅತ್ಯಂತ ಸುಲಭೋಪಾಯ. ಯಾವನು ಭಗವನ್ನಾಮವನ್ನು ಸಂಪಾದಿಸಿದ್ದಾನೋ ಅವನು ಸತ್ಯವನ್ನು ಸಂಪಾದಿಸಿದ್ದಾನೆ. ರಾಮದಾಸನನ್ನು ಆನಂದದಲ್ಲಿಯೂ ಶಾಂತಿಯಲ್ಲಿಯೂ ಓಲಾಡುವಂತೆ ಮಾಡಿರುವುದು ಯಾವುದು? (ಭಗವನ್ನಾಮ)! ಭಗವನ್ನಾಮದ ಪ್ರಭಾವವನ್ನು ತೋರಿಸುವ ಜೀವಂತ ನಿದರ್ಶನವಾಗಿ ರಾಮದಾಸನು ನಿಮ್ಮ ಮುಂದೆ ಇದ್ದಾನೆ."

ಸ್ನೇಹಿತರು ರಾಮದಾಸನನ್ನು ಸೆಂಟಾಕ್ರೂಸ್ ಮತ್ತು ಮಾತುಂಗಕ್ಕೆ ಕರೆದರು. ಇಲ್ಲಿಯೂ ಅವನು ಎರಡು ಉಪನ್ಯಾಸ ಮಾಡಬೇಕಾಯಿತು. ತನ್ನ ಮಹಿಮೆ ಮತ್ತು ನಾಮಪ್ರಭಾವವನ್ನು ಪ್ರಶಂಸಿಸಲು ತನ್ನ ದಾಸನೂ ಕಂದನೂ ಆದ ರಾಮದಾಸನನ್ನು ಒಂದು ಅಜ್ಞಾತಚರ್ಯದಿಂದ ಬೊಂಬಾಯಿಯ ರಂಗದೀಪಕ್ಕೆ ಎಳೆಯುವುದು ಭಗವಂತನ ಇಚ್ಛೆಯಾಗಿದ್ದಿತು.

ಸೆಂಟಾಕ್ರೂಸಿನಲ್ಲಿ ಭಾಷಣಮಾಡುವ ವೇಳೆ "ದೇವನು ಮಾಡುವುದೆಲ್ಲಾ ಒಳ್ಳೆಯದಕ್ಕೇ" ಎಂಬ ಸ್ವರ್ಣಸೂತ್ರವನ್ನು ಕುರಿತು ಮಾತನಾಡುತ್ತ, ಈ ತತ್ವದ ಅಡಿಯ ಗಾಢಸತ್ಯವನ್ನು ವಿಶದಪಡಿಸಲು, ಸಾಮಾನ್ಯವಾಗಿ ತಿಳಿದಿರುವ ಒಂದು ಕತೆಯನ್ನು ರಾಮದಾಸನು ಹೇಳಿದನು.

ಒಂದು ಸಲ ಒಬ್ಬ ದೊರೆ, ಮಂತ್ರಿ ಮತ್ತು ಪರಿವಾರಸಮೇತನಾಗಿ ಬೇಟೆಯಾಡಲು ಕಾಡಿಗೆ ಹೋದನು. ಮಂತ್ರಿ ಬಹು ಬುದ್ಧಿಶಾಲಿಯೆಂದು ಪ್ರಸಿದ್ಧಿ. ಅವನು "ದೇವರುಮಾಡುವುದೆಲ್ಲ ಒಳ್ಳೆಯದಕ್ಕೇ" ಎಂಬುದಾಗಿ ತಿಳಿದಿದ್ದನು. ಯಾರಾದರೂ ತಮ್ಮ ಕಷ್ಟ ದುಃಖ ದೌರ್ಭಾಗ್ಯದಲ್ಲಿ ಅವನ ಬುದ್ಧಿವಾದವನ್ನು ಕೇಳಲು ಬಂದರೆ ಅವನು ಆಗ ಅವರಿಗೆ ಈ ತತ್ವವನ್ನು ನಂಬುವಂತೆ ಮಾಡಿ ಸಮಾಧಾನಪಡಿಸುತ್ತಿದ್ದನು.

ಬೇಟೆಯಾಡುವುದರಲ್ಲಿ ದೊರೆಯೂ ಮಂತ್ರಿಯೂ ಪರಿವಾರವನ್ನು ಅಗಲಿ ವಿಸ್ತಾರವಾದ ಕಾಡಿನಲ್ಲಿ ಒಳಗಡೆ ಬಹುದೂರಹೋಗಿ ಕೊನೆಗೆ ದಾರಿ ತಪ್ಪಿದರು. ಸೂರ್ಯನು ನೆತ್ತಿಗೇರಿದನು. ದೊರೆ ಹಸಿವು ಆಯಾಸದಿಂದ ಬಳಲಿದ್ದನು. ಇವರು ಒಂದು ಮರದ ನೆರಳಿನಲ್ಲಿ ವಿಶ್ರಮಿಸಿಕೊಂಡರು.

ದೊರೆ "ಮಂತ್ರಿಯೇ ಹಸಿವಿನ ಕ್ಷೋಭೆಯಿಂದ ನಾನು ತಲ್ಲಣಿಸುತ್ತಿದ್ದೇನೆ. ತಿನ್ನುವುದಕ್ಕೆ ಏನಾದರೂ ತಂದುಕೊಡಬಲ್ಲೆಯಾ?" ಎಂದು ಮಂತ್ರಿಯನ್ನು ಕೇಳಿದನು.

ಮಂತ್ರಿ ಸುತ್ತ ನೋಡಿದನು. ಮರಗಳಲ್ಲಿ ಹಣ್ಣುಗಳು ಕಾಣಿಸಿದುವು. ಒಂದು ಮರವನ್ನು ಹತ್ತಿ ಕೆಲವು ಕಳಿತ ಹಣ್ಣುಗಳನ್ನು ಕಿತ್ತು ತಂದು ದೊರೆಗೆ ಸಮರ್ಪಿಸಿದನು. ದೊರೆ ಆ ಹಣ್ಣುಗಳನ್ನು ತಿನ್ನಬೇಕೆಂಬ ಅವಸರದಲ್ಲಿ ಅವನ್ನು

ಕುಯ್ಯುತ್ತ ತನ್ನ ಒಂದು ಬೆರಳಿನ ಕೊನೆಯನ್ನು ಕತ್ತರಿಸಿ ಕೊಂಡನು. ಗಾಯಪಟ್ಟ ಬೆರಳಿನಿಂದ ರಕ್ತ ಹರಿಯುತ್ತಿರಲು ದೊರೆ ನೋವಿನಿಂದ ಕಿರಿಚುತ್ತಾ, ಹಣ್ಣನ್ನೂ ಚಾಕುವನ್ನೂ ಬಿಸಾಟನು.

"ಅಯ್ಯೋ ಮಂತ್ರಿಯೇ, ಎಷ್ಟು ನೋಯುತ್ತಿದೆ" ಎಂದು ಕೂಗಿದನು.

ಮಂತ್ರಿ "ದೇವರು ಮಾಡುವುದೆಲ್ಲ ಒಳ್ಳೆಯದಕ್ಕೇ" ಎಂದು ಸಮಾಧಾನ ವಾಗಿ ನುಡಿದನು.

ಮೊದಲೇ ಬೇಸರಗೊಂಡಿದ್ದ ದೊರೆಗೆ ಈ ಮಾತು ಕೇಳುತ್ತಲೆ ಸಿಟ್ಟು ಮಿತಿ ಮೀರಿತು. ಅವನು ಅತಿಯಾಗಿ ರೇಗಿ,

"ಹುಚ್ಚ, ನಿನ್ನ ತತ್ವೋಪದೇಶವನ್ನು ಕೊನೆಗಾಣಿಸು; ಅದನ್ನು ಕೇಳಿ ಸಾಕಾಗಿದೆ. ನಾನು ಕ್ರೂರವಾದ ನೋವಿನಿಂದ ನರಳುತ್ತಿರುವಾಗ, ನೀನು ನನಗೆ ಕೊಡಬಲ್ಲ ಒಂದೇ ಸಮಾಧಾನ 'ದೇವರು ಮಾಡುವುದೆಲ್ಲ ಒಳ್ಳೆಯದಕ್ಕೆ' ಎನ್ನುವುದೆ? ನೋವು ನಿಜವಾಗಿದೆ, ತೀಕ್ಷ್ಣವಾಗಿದೆ. ಹೀಗಿರುವಾಗ ಒಳ್ಳೆಯದಕ್ಕೆ ಹೇಗಾದೀತು? ಹೊರಡು. ಇನ್ನು ಮುಂದೆ ನೀನು ನನಗೆ ಬೇಕಾಗಿಲ್ಲ; ನನ್ನ ಕಣ್ಣೆದುರಿಗಿರಬೇಡ. ಪುನಃ ನಿನ್ನ ಮುಖವನ್ನು ತೋರಿಸಬೇಡ" ಎಂದು ಗದರಿಸಿದನು. ದೊರೆ ತನ್ನನ್ನು ತಡೆದುಕೊಳ್ಳಲಾರದೆ ಮೇಲಕ್ಕೆದ್ದು, ಮಂತ್ರಿಯನ್ನು ಕೋಪದಿಂದ ಒದೆದು, ಕೂಡಲೆ ತೊಲಗಬೇಕೆಂದು ಆಜ್ಞೆ ಮಾಡಿದನು. ಹೊರಟು ಹೋಗುವಾಗಲೂ ಮಂತ್ರಿ "ದೇವರು ಮಾಡುವುದೆಲ್ಲಾ ಒಳ್ಳೆಯದಕ್ಕೇ" ಎಂದು ಸಮಾಧಾನವಾಗಿ ಮತ್ತೆ ಹೇಳಿದನು.

ಈಗ ದೊರೆ ಒಬ್ಬಂಟಿಗನಾದನು. ಅವನು ತನ್ನ ಬಟ್ಟೆಯಿಂದ ಸ್ವಲ್ಪವನ್ನು ಹರಿದು ಗಾಯವಾದ ಬೆರಳಿಗೆ ಕಟ್ಟಿಕೊಂಡು ಚಿಂತಿಸುತ್ತಾ ಕುಳಿತಿದ್ದನು. ಆಗ ದೃಢಾಂಗರಾದ ಇಬ್ಬರು ಮನುಷ್ಯರು ಇವನ ಕಡೆಗೆ ಬಂದರು. ಒಡನೆ ಅವನ ಮೇಲೆಬಿದ್ದು ಅವನ ಕೈಕಾಲನ್ನು ಕಟ್ಟಿದರು. ಅವರು ಆಕಾರದಲ್ಲಿ ರಾಕ್ಷಸರಾಗಿದ್ದರು. ಅವರೊಡನೆ ಸೆಣಸುವುದು ಹೆಣಗುವುದು ತೀರಾ ನಿರುಪಯೋಗವಾಗಿದ್ದಿತು.

ದೊರೆ ಆಗ ಭಯದಿಂದ, "ನನ್ನನ್ನೇನು ಮಾಡುವಿರಿ?" ಎಂದು ಪ್ರಶ್ನಿಸಿದನು.

ಅವರು "ನಿನ್ನನ್ನು ನಮ್ಮ ದೇವತೆ ಕಾಳಿಗೆ ಬಲಿಕೊಡುವುದಕ್ಕಾಗಿ ತೆಗೆದು ಕೊಂಡಿದೇವೆ. ಅವಳಿಗೆ ವರ್ಷಕ್ಕೊಂದುಸಲ ಒಬ್ಬ ಮನುಷ್ಯನನ್ನು ಬಲಿಕೊಡುವುದು ನಮ್ಮ ಪದ್ಧತಿ. ಆ ಕಾಲ ಬಂದಿದೆ. ಬಲಿಗಾಗಿ ಒಬ್ಬ ಮನುಷ್ಯನನ್ನು ಹುಡುಕು ತ್ತಿದ್ದೆವು. ನೀನು ಸಿಕ್ಕಿದ್ದು ನಮ್ಮ ಅದೃಷ್ಟ" ಎಂದರು.

ಸೆರೆಹಿಡಿದವರ ಈ ಮಾತನ್ನು ಕೇಳಿ ದೊರೆ ತೀರಾ ಗಾಬರಿಯಾದನು. ಅವನು "ನನ್ನನ್ನು ಬಿಟ್ಟುಬಿಡಿ; ನಾನು ರಾಜ್ಯದ ದೊರೆ, ಆದುದರಿಂದ ನೀವು ನನ್ನನ್ನು ಕೊಲ್ಲತಕ್ಕದ್ದಲ್ಲ" ಎಂದು ಪ್ರತಿಯಾಗಿ ವಾದಿಸಿದನು.

ಅವರು ನಕ್ಕು ಹೇಳಿದರು :

"ಹಾಗಾದರೆ ಈ ವರ್ಷದ ಬಲಿ ಅಸಾಧಾರಣದ್ದು. ಈ ಸಲ ಬಲಿಗೆ ಒಬ್ಬ ಶ್ರೇಷ್ಠ ಮನುಷ್ಯನನ್ನು ತಂದಿರುವುದರಿಂದ ನಮ್ಮ ದೇವಿ ಕಾಳಿ ಸುಪ್ರೀತಳಾಗುತ್ತಾಳೆ, ನಡೆ."

ಅವರು ಈ ಬಲಿಯನ್ನು ಅಲ್ಲಿಗೆ ಅಷ್ಟೇನೂ ದೂರವಲ್ಲದ ಕಾಳಿಕಾ ದೇವಸ್ಥಾನಕ್ಕೆ ಎಳೆದುಕೊಂಡು ಹೋದರು. ಬಲಿಪೀಠದ ಮೇಲೆ ಅವನನ್ನು ಸರಿಯಾಗಿ ನಿಲ್ಲಿಸಿದುದೂ ಆಯಿತು. ಇನ್ನೇನು ತಲೆ ಕತ್ತರಿಸಬೇಕೆನ್ನುವಾಗ, ಪೂಜಾರಿ ದೊರೆಯ ಎಡಗೈ ಬೆರಳಿಗೆ ಬಟ್ಟೆ ಸುತ್ತಿದ್ದದನ್ನು ನೋಡಿ ಅದನ್ನು ಬಿಚ್ಚಿದನು. ಬೆರಳಿನ ಒಂದು ಭಾಗ ಕತ್ತರಿಸಿ ಹೋಗಿರುವುದನ್ನು ಕಂಡನು. ಆಗ ಅವನು "ದೇವತೆಗೆ ಬಲಿ ಕೊಡಲು ಈ ಮನುಷ್ಯ ಯೋಗ್ಯವಲ್ಲ. ಇವನ ಕಟ್ಟನ್ನು ಬಿಚ್ಚಿರಿ, ದೇವತೆಗೆ ಬೇಕಾದುದು ಅಂಗ ಹೀನನಲ್ಲದ ಮನುಷ್ಯ. ನೀವು ತಂದಿರುವ ಮನುಷ್ಯನ ದೇಹ ವಿಕಲವಾಗಿದೆ. ಇವನ ಬೆರಳಿನಲ್ಲಿ ಒಂದು ಚೂರು ಹೋಗಿದೆ. ಇವನನ್ನು ಬಿಟ್ಟುಬಿಡಿ" ಎಂದು ಹೇಳಿದನು.

ಅವನ ಮಾತಿನಂತೆ ದೊರೆಯನ್ನು ಕಟ್ಟಿದ್ದ ಹಗ್ಗಗಳನ್ನು ಬಿಚ್ಚಿ ಆ ಜನರು ಅವನನ್ನು ಬಿಡಿಸಿ ತೊಂದರೆ ಇಲ್ಲದೆ ಹೊರಟು ಹೋಗಲು ಬಿಟ್ಟರು.

ಈಗ, ದೊರೆ ತನ್ನ ಬೆರಳು ಕತ್ತರಿಸಿ ಹೋಗಿ ಗಾಯವಾದಾಗ ಮಂತ್ರಿ ಹೇಳಿದ್ದ "ದೇವರು ಮಾಡುವುದೆಲ್ಲಾ ಒಳ್ಳೆಯದಕ್ಕೇ" ಎಂಬ ಮಾತನ್ನು ಜ್ಞಾಪಕ ಮಾಡಿಕೊಂಡನು. ನಿಜವಾಗಿಯೂ ಅದೃಷ್ಟವಶಾತ್ ಹಾಗೆ ಬೆರಳು ಕತ್ತರಿಸಿದ್ದರಿಂದ ಹೊರತಾಗಿ ಈ ವೇಳೆಗೆ ಅವನು ಸತ್ತಿರುತ್ತಿದ್ದನು. ಅವನು ತನ್ನ ಮಂತ್ರಿಗೆ ತಾನು ಮಾಡಿದ ಅಪಚಾರಕ್ಕಾಗಿ ಬಹಳ ಪಶ್ಚಾತ್ತಾಪಪಟ್ಟನು. ಪ್ರಾಯಶ್ಚಿತ್ತ ರೂಪವಾಗಿ ಅವನ ಕ್ಷಮಾಪಣೆಯನ್ನು ಬೇಡಲು ಆತುರಪಟ್ಟನು. ಆದ್ದರಿಂದ ಅವನು ಮಂತ್ರಿಯನ್ನು ಹೆಸರು ಹಿಡಿದು ಕೂಗುತ್ತಾ ಕಾಡಿನಲ್ಲೆಲ್ಲಾ ಅಲೆದನು. ಕೊನೆಗೆ ಅವನನ್ನು ಕಂಡನು. ಮಂತ್ರಿ ಒಂದು ಮರದ ಕೆಳಗೆ ವಿಶ್ರಮಿಸಿಕೊಳ್ಳುತ್ತಿದ್ದನು. ಅವನ ಬಳಿಗೆ ಹೋಗಿ ರಾಜನು ಅವನನ್ನು ಬಹಳ ಪ್ರೀತಿಯಿಂದ ತಬ್ಬಿಕೊಂಡು, "ಮಿತ್ರ ! ನಿನ್ನ ಮೇಲೆ ನಡೆಯಿಸಿದ ಕ್ರೌರ್ಯಕ್ಕೆ ನಾನು ನಿನ್ನ ಕ್ಷಮಾಪಣೆಯನ್ನು ಬೇಡುತ್ತೇನೆ. ನೀನು ಹೇಳುತ್ತಿದ್ದ ಸ್ವರ್ಣಸೂತ್ರದ ಸತ್ಯ ನನಗೆ ನಿದರ್ಶನಕ್ಕೆ ಬಂದಿತು." ಎಂದು ಹೇಳಿದನು.

ನಂತರ ಆತನು ತಾನು ದೇವತೆಗೆ ಬಲಿಯಾಗಬೇಕಾಗಿದ್ದದ್ದನ್ನೂ ಚಾಕುವಿನ ಏಟಿನಿಂದ ಕೈಯಲ್ಲಿ ಉಂಟಾಗಿದ್ದ ಗಾಯದ ದೆಸೆಯಿಂದ ಹೇಗೆ ಬಿಡುಗಡೆಯಾಯಿತೆಂಬುದನ್ನೂ ಹೇಳಿದನು.

ಮಂತ್ರಿ ಉತ್ತರ ಹೇಳಿದನು :

"ಪ್ರಭು ! ತಾವು ನನಗೇನೂ ಕೆಟ್ಟುದನ್ನು ಮಾಡಲಿಲ್ಲ. ಆದುದರಿಂದ ನಾನು ಕ್ಷಮಿಸಬೇಕಾದುದು ಏನೂ ಇಲ್ಲ. ನಿಜವಾಗಿ ತಾವು ನನ್ನನ್ನುಳಿಸಿದ್ದೀರಿ.

ತಾವು ನನ್ನನ್ನು ಒದೆದು ನೂಕಿದಾಗ "ದೇವರು ಮಾಡುವುದೆಲ್ಲಾ ಒಳ್ಳೆಯದಕ್ಕೇ" ಎಂದು ನಾನು ಅದೇ ಮಾತುಗಳನ್ನು ಹೇಳಿದ್ದು ತಮಗೆ ಜ್ಞಾಪಕವಿರಬಹುದು. ಇದು ನನ್ನ ವಿಷಯದಲ್ಲಿಯೂ ನಿಜವಾಗಿ ಪರಿಣಮಿಸಿದೆ. ಏಕೆಂದರೆ ತಾವು ನನ್ನನ್ನು ಓಡಿಸದೆ ಇದ್ದಿದ್ದರೆ ತಮ್ಮನ್ನು ಕಾಳಿಯ ಭಟರು ಹಿಡಿದಾಗ ನಾನು ತಮ್ಮ ಸಂಗಡ ಇರುತ್ತಿದ್ದೆ. ತಾವು ಬಲಿಗೆ ಯೋಗ್ಯರಲ್ಲವೆಂದು ಕಂಡಾಗ ದೇವರ ದಯೆಯಿಂದ ತಮಗುಂಟಾಗಿದ್ದ ನ್ಯೂನತೆ ನನ್ನಲ್ಲಿರಲಿಲ್ಲವಾಗಿ ಅವರು ನನ್ನನ್ನು ಬಲಿಕೊಡುತ್ತಿದ್ದರು. ಆದುದರಿಂದ ಭಗವಂತನು ಮಾಡುವುದೆಲ್ಲಾ ಒಳ್ಳೆಯದಕ್ಕೇ"

ಈ ಕಥೆ ರಾಮದಾಸನ ಭಾಷಣವನ್ನು ಕೇಳಲು ಸೇರಿದ್ದ ಮಿತ್ರರ ಮನಸ್ಸಿನ ಮೇಲೆ ಗಾಢವಾದ ಪರಿಣಾಮವನ್ನುಂಟುಮಾಡಿತು.

### (iii) ಶಿವನ ತಲೆಯ ಮೇಲೆ ನಾಟ್ಯ

ಲಿಂಬ್ಡಿಯ ಕಾಂತಿಲಾಲನ ಒಬ್ಬ ಅಣ್ಣ ದುರ್ಗಾಶಂಕರನು ಬೊಂಬಾಯಿ ನಲ್ಲಿ ವಾಸಮಾಡುತ್ತಿದ್ದನು. ರಾಮದಾಸನು ಬೊಂಬಾಯಿ ವಿ. ಜೆ. ಟೆಕ್ನಿಕಲ್ ಇನ್‌ಸ್ಟಿಟ್ಯೂಟನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಈತನು ಅವನ ಸಹಪಾಠಿಯಾಗಿದ್ದನು. ಆತನೂ ಧರ್ಮಪರಾಯಣೆಯಾದ ಆತನ ಪತ್ನಿಯೂ ರಾಮದಾಸನ ಭೇಟಿಗೆ ಅನೇಕ ಸಲ ಸಂಜೀವರಾಯರ ಮನೆಗೆ ಬರುತ್ತಿದ್ದರು. ದುರ್ಗಾಶಂಕರನು ರಾಮದಾಸನನ್ನು ಬೊಂಬಾಯಿ ಹತ್ತಿರವಿರುವ ಪ್ರಸಿದ್ಧವಾದ ಎಲಿಫೆಂಟಾ ಗವಿಗಳಿಗೆ ಕರೆದುಕೊಂಡು ಹೋಗುವೆನೆಂದನು.

ಒಂದು ದಿನ ಹೊತ್ತಿಗೆ ಮುಂಚೆ ಸುಮಾರು ಇಪ್ಪತ್ತು ಜನ ಈ ವಿಹಾರಕ್ಕೆ ಹೊರಟರು. ಇವರಲ್ಲಿ ಸ್ತ್ರೀಯರೂ ಇದ್ದರು. ಸಂಜೀವರಾವ್ ಮತ್ತು ರತ್ನಾಕರ್ ಇವರೂ ಕೂಟದಲ್ಲಿ ಸೇರಿದ್ದರು. ಇವರದೇ ಉಪಯೋಗಕ್ಕಾಗಿ ಗೊತ್ತುಮಾಡಿದ್ದ ಒಂದು ದೊಡ್ಡ ದೋಣಿಯನ್ನು ಇವರು ಏರಿದರು. ದೋಣಿ ಸಮುದ್ರದ ಮೇಲೆ ಏರಿ ಇಳಿದು ತೇಲಿಕೊಂಡು ಹೋಗುತ್ತಿದ್ದಾಗ, ಮಿತ್ರರು ಸಂಗಡ ತಂದಿದ್ದ ಕೈ ಹಾರ್ಮೋನಿಯಂ ವಾದ್ಯದೊಡನೆ ಉತ್ತಮವಾದ ಭಕ್ತಿಗೀತೆಗಳನ್ನು ಹಾಡುತ್ತಾ ಕೂಟಕ್ಕೆ ಮನರಂಜನೆ ಮಾಡುತ್ತಿದ್ದರು. ಮಧ್ಯಾಹ್ನದ ಹೊತ್ತಿಗೆ ಇವರು ಪ್ರಸಿದ್ಧವಾದ ಗವಿಗಳಿರುವ ಬೆಟ್ಟಕ್ಕೆ ಹೋಗುವ ಕಡುವನ್ನು ಸೇರಿದರು. ಇಳಿದ ನಂತರ ಭೋಜನಕ್ಕೆ ಶಾಂತವಾದ ಸ್ಥಳವನ್ನು ಹುಡುಕಿದರು. ನಾನಾ ತರಹ ತಿಂಡಿಗಳನ್ನು ತಂದಿದ್ದರು. ಊಟವಾದ ನಂತರ ಗವಿಗಳನ್ನು ನೋಡಲು ಹೊರಟರು.

ಇವರು ನೋಡಿದ ಮೊದಲ ಗವಿ ಆ ಗವಿಗಳಲ್ಲೆಲ್ಲಾ ಹೆಚ್ಚು ದೊಡ್ಡದು. ಅದು ವಿಶಾಲವಾದ ಒಂದು ಮಂಟಪ. ಒಂದು ದೊಡ್ಡ ಕಲ್ಲಿನ ಬಂಡೆಯಲ್ಲಿ ಕಡೆಯಲ್ಪಟ್ಟಿದೆ. ಸುಂದರವಾದ ಕೆತ್ತನೆ ಕೆಲಸದ ಹತ್ತಿರಹತ್ತಿರವಾಗಿ ಇರುವ ಕಂಬಗಳ ಮೇಲೆ ನಿಂತಿದೆ. ಗವಿಯ ಒಳಗಡೆ ಗರ್ಭ ಗುಡಿ ಇದೆ. ಅದರ ಎದುರು ಗೋಡೆಯಲ್ಲಿ ಮೂರು ಕೋಣೆಗಳಿವೆ. ಇವು ಕಲ್ಲಿನ ಮೇಲೆ ಕೆತ್ತಿರುವ ವಿಗ್ರಹಗಳನ್ನು ಒಳ

ಗೊಂಡಿವೆ. ಮಧ್ಯದ ವಿಗ್ರಹ ಮೂರು ಮುಖಗಳ ಒಂದು ದೈವದ ದೊಡ್ಡ ತಲೆ. ಕೆತ್ತನೆ ಕೆಲಸ ಬಹು ಸುಂದರವಾಗಿದೆ. ಮುಖಗಳು ಸೌಮ್ಯವಾಗಿ ಶಾಂತಿಯುತವಾಗಿವೆ. ಇದರ ಉಭಯ ಪಾರ್ಶ್ವಗಳಲ್ಲಿಯೂ ಮನುಷ್ಯನ ಎತ್ತರದ ವಿಗ್ರಹಗಳು ಇವೆ. ಇವೂ ಅದೇ ಚಾತುರ್ಯ ಮತ್ತು ಶಿಲ್ಪ ಕಲಾ ಕೌಶಲ್ಯದಿಂದ ಬೆಳಗುತ್ತಿವೆ. ಗವಿಯ ಬಲಗಡೆ ಒಂದು ಕೊಳ ಇದೆ. ಅದಕ್ಕೆ ಬೆಟ್ಟದ ಪಕ್ಕದಿಂದ ಹರಿಯುವ ಶಾಶ್ವತವಾದ ಒಂದು ಚಿಲುಮೆಯ ನೀರು ತುಂಬುತ್ತಿದೆ. ಎಡಗಡೆ ಕಲ್ಲಿನೊಳಗೆ ಕಡೆಯಲ್ಪಟ್ಟ ಒಂದು ಸಾಮಾನ್ಯ ದೇವಾಲಯ ಇದೆ. ಅದಕ್ಕೆ ಮುಂದುಗಡೆ ಒಂದು ಕೈಸಾಲೆ ಇದೆ.

ವಿಹಾರಿಗಳು ಅಂಗಳದಲ್ಲಿ ಕುಳಿತರು. ಮತ್ತೆ ಗಾಯಕರು ಆತ್ಮೋದ್ಧಾರಕವಾದ ತಮ್ಮ ಗಾಯನದಿಂದ ಅವರನ್ನು ಸಂತೋಷಪಡಿಸಿದರು. ಮಧ್ಯಾಹ್ನ ಮೂರು ಗಂಟೆ ಸುಮಾರಿಗೆ ನೋಡಬೇಕಾದ ಇತರ ಸ್ಥಳಗಳನ್ನು ಇವರು ಹುಡುಕಿಕೊಂಡು ಹೊರಟರು. ಬೆಟ್ಟದ ಬುಡದಲ್ಲಿ ಸುತ್ತ ಅನೇಕ ಸಣ್ಣ ಸಣ್ಣ ಗವಿಗಳು ಅಲ್ಲಲ್ಲಿ ಕಂಡು ಬಂದುವು. ಒಂದು ಕಡೆ ಒಂದು ಗುಹಾಲಯದಲ್ಲಿ ಒಂದು ದೊಡ್ಡದಾದ ಶಿವಲಿಂಗವನ್ನು ಕಂಡು ರಾಮದಾಸನು ಮುಂದಾಗಿ ಓಡಿ ಹೋಗಿ ಅದನ್ನೇರಿ, ಆನಂದದಿಂದ ನರ್ತನ ಮಾಡಲಾರಂಭಿಸಿದನು. ಹಿಂದೆ ಬಂದ ಸ್ನೇಹಿತರು ಶಿವನ ಮೂರ್ಧ್ನದಲ್ಲಿ ರಾಮದಾಸನು ನೃತ್ಯ ಮಾಡುವುದನ್ನು ಕಂಡು ಆಶ್ಚರ್ಯಪಟ್ಟರಲ್ಲದೆ ಹರ್ಷವೂ ಪಟ್ಟರು. ಆ ಲಿಂಗ ಎತ್ತರದಲ್ಲಿ ಐದು ಅಡಿಗೆ ಹೆಚ್ಚಾಗಿ ವ್ಯಾಸದಲ್ಲಿ ಮೂರು ಅಡಿಗೆ ಮೇಲೆ ಇದೆ.

ನಾಲ್ಕು ಗಂಟೆಯಾಗುತ್ತಿರುವಂತೆ ಇವರು ಮನೆಗೆ ಹಿಂದಕ್ಕೆ ಹೊರಟರು. ಈಗ ದೋಣಿ ಸಮುದ್ರದ ಅಲೆಗಳ ಮೇಲೆ ಮೊದಲಿಗಿಂತ ಹೆಚ್ಚು ಗಂಭೀರವಾಗಿ ತೇಲಾಡುತ್ತ ಒಮ್ಮೆ ಹಾರುತ್ತ ಒಮ್ಮೆ ಎದ್ದು ಬೀಳುತ್ತ ಇದ್ದಿತು. ಸಂಜೆಯ ತಂಪಾದ ಮಾರುತ ಇವರ ಮೇಲೆ ಹಾಯ್ದು ಇವರನ್ನು ಆ ದಿವಸದ ಆನಂದದ ಸವಿ ನೆನಪಿನಲ್ಲಿ ಮುಳುಗಿಸಿದ್ದಿತು. ಸಾಯಂಕಾಲದ ಹೊತ್ತಿಗೆ ಇವರು ಪಟ್ಟಣವನ್ನು ಮುಟ್ಟಿದರು.

ಈಗ ರಾಮದಾಸನಿಗೆ ಕಾಸರಗೋಡಿನಲ್ಲಿರುವ ಆನಂದರಾಯರನ್ನು ಕುರಿತು ಆ ಸ್ಥಳದ ಬಳಿಯ ಪಿಲಕುಂಜಿ ಬೆಟ್ಟದ ಮೇಲೆ ಒಂದು ಆಶ್ರಮವನ್ನು ಸ್ಥಾಪಿಸಬೇಕೆಂಬ ಅಪೇಕ್ಷೆಯನ್ನು ತಿಳಿಸಿ ಒಂದು ಕಾಗದ ಬರೆಯುವಂತೆ **ರಾಮನ** ಪ್ರೇರಣೆಯಾಯಿತು. ಆ ಆಶ್ರಮವನ್ನು ("ಆನಂದಾಶ್ರಮ") ಎಂದು ಕರೆಯಬೇಕೆಂದೂ ಇವನು ಸೂಚಿಸಿದನು.

ಬೊಂಬಾಯಿನಲ್ಲಿದ್ದ ದಿವಸಗಳೆಲ್ಲ ಅವಿಶ್ರಾಂತವಾದ ಆನಂದದ ಆವರ್ತಗಳಿಂದ ತುಂಬಿದ್ದುವು. ಭಗವನ್ನಾಮ ದೂರವಾಗಿ ವಿಸ್ತಾರವಾಗಿ ಹರಡಿತು.

# ಅಧ್ಯಾಯ ೪೩

## ಎರ್ನಾಕುಲಂ-ಕಾಸರಗೋಡು-ಅನಗರ್-ಸೊಲ್ಲಾಪುರ

### (i) ಪವಾಡಗಳು

ಸೊಲ್ಲಾಪುರದ ಸ್ನೇಹಿತರು ರಾಮುದಾಸನನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಬಹಳ ಆಶೆಯುಳ್ಳವರಾಗಿದ್ದರು. ಆದಕಾರಣ ರಾಮುದಾಸನು ಮೊದಲು ಈ ಜಿಲ್ಲೆಗೆ ಪ್ರಯಾಣ ಮಾಡಿದ್ದು. ಇಲ್ಲಿ ಹಿಂದಿನ ಸಲಗಳಂತೆ ಬಹು ಸಂಖ್ಯಾತ ಜನ ಸ್ತೋಮಗಳು ಅವನಿಗೆ ಹೆಚ್ಚು ಉತ್ಸಾಹದಿಂದ ಸ್ವಾಗತವನ್ನು ನೀಡಿದುವು. ಜನರು ರಾಮುದಾಸನನ್ನು ಹಳ್ಳಿಯಿಂದ ಹಳ್ಳಿಗೆ ಮೆರವಣಿಗೆ ಮಾಡಿ ಕರೆದುಕೊಂಡು ಹೋಗಿ ಪ್ರಾಚ್ಯ ದೇಶಗಳ ಲಕ್ಷಣವಾದ ವೈಭವ ಅಟ್ಟಹಾಸದೊಡನೆ ಗೌರವಿಸಿದರು. ರಾಮುದಾಸನು ಒಂದು ಹಳ್ಳಿಯಲ್ಲಿ ಒಂದು ವಾರ ನಿಂತನು. ಅಲ್ಲಿಯ ಜನರಲ್ಲಿ ಅಸದೃಶವಾದ ಭಕ್ತಿ ಉದ್ರೇಕವಾಯಿತು. ಎಲ್ಲಾ ಜಾತಿಮತಗಳ ಜನರೂ ಒಂದಾಗಿ ಸೇರಿದರು; ಕೀರ್ತನೆ, ಭಜನೆ, ಹರಿಕಥೆ ಮತ್ತು ಹಬ್ಬದೂಟಗಳು ವಾಡಿಕೆಯ ಕಾರ್ಯಕ್ರಮಗಳಾದುವು.

ಜನಾರ್ದನಪಂತ್ ಮತ್ತು ಪ್ರೇಮಸಿಂಗ್ ರಾಮುದಾಸನ ನಚ್ಚಿನ ಸಂಗಡಿಗರಾದರು. ಅದರಲ್ಲಿಯೂ ಪ್ರೇಮಸಿಂಗನು ಭಕ್ತಿಯಿಂದ ತೀರಾ ಹುಚ್ಚನಾಗಿದ್ದನು. (ಭಕ್ತಿಯ ಉದ್ರೇಕದಿಂದ ದಿನಗಟ್ಟಲೆ ಶರೀರ ಸ್ಮರಣೆಯಾಗಲಿ, ಬಾಹ್ಯ ಪ್ರಪಂಚ ಜ್ಞಾನವಾಗಲಿ, ಇಲ್ಲದಂತೆ ಭಾವಪರವಶನಾದನು.) ಹಗಲನ್ನೂ ಇರುಳನ್ನೂ ಭಗವನ್ನಾಮವನ್ನು ಹಾಡುತ್ತ ನರ್ತನ ಮಾಡುವುದರಲ್ಲಿ ಕಳೆಯುತ್ತಿದ್ದನು.

ತಾಯಂದಿರು ರಾಮುದಾಸನನ್ನು ಕಂಡು ಆನಂದಪರವಶರಾಗುತ್ತಿದ್ದರು. ಗೋವಿಂದ ಜೋಷಿಯ ಪತ್ನಿ ದಿನವೂ ಸಾಯಂಕಾಲದ ಹೊತ್ತಿನಲ್ಲಿ ಕೈಯಲ್ಲಿ ಉಪ್ಪನ್ನು ಹಿಡಿದು ದೃಷ್ಟಿ ಪರಿಹಾರಾರ್ಥವಾಗಿ ರಾಮುದಾಸನ ಮುಖಕ್ಕೆ "ಇಳಿ" ತೆಗೆಯುತ್ತಿದ್ದಳು. ಹಿಂದೂ ತಾಯಂದಿರು ತಮ್ಮ ಮಕ್ಕಳಿಗೆ "ದೃಷ್ಟಿ" ಪರಿಹಾರಕ್ಕಾಗಿ ಈ ರೀತಿ ಮಾಡುವ ಪದ್ಧತಿ ಇದೆ. ಪ್ರೇಮಸಿಂಗನು ತನ್ನೂರಾದ ದಿಕ್ಸಲ್‌ಗೆ ರಾಮುದಾಸನನ್ನು ಕರೆದುಕೊಂಡು ಹೋಗಿ ದೊಡ್ಡ ಜನಸ್ತೋಮದ ಎದುರಲ್ಲಿ, ಅವನಿಗೆ ಹಾಲು, ಮೊಸರು, ತುಪ್ಪ, ಜೇನು ತುಪ್ಪ, ಸಕ್ಕರೆಗಳಿಂದ ಸ್ನಾನ ಮಾಡಿಸಿದನು. ಇದನ್ನು (ಪಂಚಾಮೃತ ಅಭಿಷೇಕ) ಎಂದು ಕರೆಯುತ್ತಾರೆ.

ರಾಮುದಾಸನು ಖಂಡಾಲಿ ಎಂಬ ಒಂದು ಹಳ್ಳಿಗೆ ಹೋದಾಗ ಒಂದು ಹಾಸ್ಯ ಪ್ರಸಂಗ ನಡೆಯಿತು. ಆ ಊರಿನ ಶ್ಯಾನುಭೋಗನು ರಾಮುದಾಸನಿಗೆ ಆಹ್ವಾನ ಕೊಟ್ಟನು. ರಾಮುದಾಸನ ಜೊತೆಗೆ ಹಿಂದಣ ಗ್ರಾಮಗಳಿಂದ ಐವತ್ತಕ್ಕೂ ಹೆಚ್ಚು ಜನ ಸ್ನೇಹಿತರು ಬಂದಿದ್ದರು. ಈ ಪ್ರಾಂತದಲ್ಲೆಲ್ಲಾ ಗೃಹಸ್ಥರು

ಹಬ್ಬದ ಊಟಕ್ಕೆ ಒದಗಿಸುವ ಆಹಾರವೆಂದರೆ ಸಿಹಿ ರೊಟ್ಟಿ ಮತ್ತು ಲಾಡು. ಊಟಕ್ಕೆ ಸ್ವಲ್ಪ ಹೊತ್ತಿಗೆ ಮುಂಚೆ ಎಲ್ಲರೂ ಸೇರಿದ್ದಾಗ ರಾಮದಾಸನು ಒಬ್ಬ ಹುಡುಗನನ್ನು ಕರೆದು ಸ್ವಲ್ಪ ಬೇವಿನ ಸೊಪ್ಪನ್ನು ತರಲು ಹೇಳಿದನು. ಈ ಸ್ಥಳದಲ್ಲಿ ಬೇವಿನ ಗಿಡಗಳು ಸಾಮಾನ್ಯ. ಬೇವಿನ ಸೊಪ್ಪು ಬಾಯಿಗೆ ಕಹಿಯಾಗಿರುವುದಾದರೂ ಅದರಲ್ಲಿ ರೋಗ ನಿವಾರಕ ಗುಣಗಳಿವೆ. ಹುಡುಗನು ಸೊಪ್ಪನ್ನು ತರುತ್ತಲು, ರಾಮದಾಸನು ಅದನ್ನು ತನ್ನೊಡನೆ ತಿನ್ನುವುದಕ್ಕೆ ಸ್ನೇಹಿತರನ್ನು ಕರೆದನು. ಇದನ್ನು ಕೇಳಿ ಸ್ನೇಹಿತರ ಮುಖಗಳ ಭಾವ ಹರ್ಷವಾಗಿದ್ದದ್ದು ವ್ಯತಿರಿಕ್ತವಾಗಿ ಮಾರ್ಪಟ್ಟಿತು. ಒಬ್ಬೊಬ್ಬರೂ ಏನಾದರೂ ಒಂದು ಕುಂಟು ನೆಪವನ್ನು ಹೇಳಿ ಬೇವಿನ ಸೊಪ್ಪನ್ನು ತಿನ್ನದೆ ಜಾರಿಕೊಂಡರು. ಕೊನೆಗೆ ರಾಮದಾಸನೊಬ್ಬನೇ ತನ್ನ ಪಾಲಿನ ಸೊಪ್ಪನ್ನು ತಿನ್ನಬೇಕಾಯಿತು. ಊಟದ ಹೊತ್ತಿಗೇನೋ ಒಬ್ಬರೂ ತಪ್ಪಿಸಿಕೊಳ್ಳದೆ ಎಲ್ಲ ಮಿತ್ರರೂ ಸಿದ್ಧರಾದರು.

ರಾಮದಾಸನು ಮೂವತ್ತಕ್ಕೆ ಮೇಲ್ಪಟ್ಟ ಸಂಖ್ಯೆಯ ಹಳ್ಳಿಗಳಿಗೆ ಹೋದನು. ಅದು ರಾಮದಾಸನಿಗೂ ಹಳ್ಳಿಯವರಿಗೂ ಎಂದೂ ಇಲ್ಲದ ಸಂಭ್ರಮ, ಓಡಾಟ ಮತ್ತು ಆನಂದಗಳ ಕಾಲ. ರಾಮದಾಸನಿಂದ ಬಹಳ ಆಕೃಷ್ಟನಾಗಿ ಕಾಣುತ್ತ ಸದಾ ಅವನ ಸಂಗವನ್ನು ಬಯಸುತ್ತಿದ್ದವರಲ್ಲಿ ಒಬ್ಬನು ಈ ಪುಸ್ತಕದಲ್ಲಿ ಹಿಂದೆ ಪ್ರಸ್ತಾಪಿಸಿರುವ ಮಾರುತಿ ಎಂಬ ಹುಡುಗ.

ರೈಲ್ವೇ ಸ್ಟೇಷನ್ನಾದ ಕೇಮ್ ಎಂಬಲ್ಲಿಗೆ ಹೊರಡುವ ಮುನ್ನ ರಾಮದಾಸನು ಅನಗರ್‌ನಲ್ಲಿ ಎಂಟು ದಿವಸ ನಿಲ್ಲಬೇಕಾಯಿತು. ಈ ಎಂಟು ದಿವಸಗಳೂ ಗ್ರಾಮಸ್ಥರಿಗೆ ಕೀರ್ತನ, ಭಜನ ಮತ್ತು ಹಬ್ಬದೂಟಗಳಲ್ಲಿ ವಿಶ್ರಾಂತಿ ಇಲ್ಲದ ಚಟುವಟಿಕೆಯ ದಿನಗಳಾಗಿದ್ದವು. ಕೊನೆಯ ದಿವಸ ಸಾವಿರಾರು ಜನರು ಸೇರಿ, ಓಲಗ ಮತ್ತು ಬ್ಯಾಂಡು ವಾದ್ಯಸಮೇತ ರಾಮದಾಸನನ್ನು ಊರಿನ ಕೇರಿ ಸಂದಿಗಳಲ್ಲಿ ಮೆರವಣಿಗೆಯಲ್ಲಿ ಕರೆದುಕೊಂಡು ಹೋದರು. ದೇವಸ್ಥಾನದ ಮರ್ಯಾದೆಗಳಾದ ಪತಾಕೆ ಮುಂತಾದವುಗಳನ್ನು ಅವನ ಮುಂಭಾಗದಲ್ಲಿ ಹಿಡಿದಿದ್ದರು. ಊರ ಹೊರಗಿನವರೆಗೂ ಜನಗಳ ಗುಂಪು ಹಿಂದೆ ಬಂದಿತು. ಅಲ್ಲಿ ರಾಮದಾಸನು ಇವರಿಂದ ಬೀಳ್ಕೊಂಡು, ಅಲ್ಲಿಂದ ನಾಲ್ಕು ಮೈಲಿಗಳ ದೂರದಲ್ಲಿರುವ ಸ್ಟೇಷನ್ನಿಗೆ ಓಡಿದನು. ಸುಮಾರು ಐವತ್ತು ಜನ ಅವನನ್ನು ಹಿಂಬಾಲಿಸಿದರು.

ಮುಂಚಿತವಾಗಿಯೇ, ರಾಮದಾಸನ ಆಗಮನ ವಿಷಯವನ್ನು ಸ್ಟೇಷನ್ ಮಾಸ್ಟರಿಗೆ ಹೇಳಿ ಕಳುಹಿಸಲಾಗಿದ್ದಿತು. ಆತನು ಭಕ್ತಿಯುಳ್ಳ ಬ್ರಾಹ್ಮಣ. ರೈಲು ಬರುವುದಕ್ಕೆ ಮುಂಚೆ ಒಂದು ಗಂಟೆಯ ಕಾಲ ರಾಮದಾಸನಿಗೆ ಸತ್ಕಾರ ಮಾಡಬೇಕೆಂಬ ಅಭಿಲಾಷೆ ಅವನಿಗೆ ಇದ್ದಿತು. ರಾಮದಾಸನೂ ಸಂಗಡಿಗರೊಂದಿಗೆ ಸಾಯಂಕಾಲಕ್ಕೆ ಸ್ಟೇಷನ್ನನ್ನು ಮುಟ್ಟಿದನು. ಇವರನ್ನು ನೇರವಾಗಿ ಸ್ಟೇಷನ್ ಮಾಸ್ಟರ ಮನೆಗೆ ಕರೆದುಕೊಂಡು ಹೋದರು. ಸ್ಟೇಷನ್ ಮಾಸ್ಟರು ಹನ್ನೆರಡಕ್ಕಿಂತ

ಹೆಚ್ಚು ಜನರನ್ನು ನಿರೀಕ್ಷಿಸಿರಲಿಲ್ಲ. ಆದ್ದರಿಂದ ಅಷ್ಟು ಮಂದಿಗೆ ಸಾಕಾಗುವಷ್ಟು ಅಡಿಗೆಯನ್ನು ಮಾಡಿಸಿದ್ದನು. ಆದರೆ ಬಂದ ಜನ ಐವತ್ತಕ್ಕೆ ಮೀರಿದ್ದಿತು. ಸ್ಟೇಷನ್ ಮಾಸ್ಟರಿಗೂ ಅವನ ಮನೆಯವರಿಗೂ ಇಷ್ಟು ಜನರನ್ನು ಹೇಗೆ ತೃಪ್ತಿಪಡಿಸುವುದೆಂಬ ಕಳವಳ ಉಂಟಾಯಿತು. ಹೊಸದಾಗಿ ಅಡಿಗೆ ಮಾಡಲು ಕಾಲವಿರಲಿಲ್ಲ. ಯತ್ನವಿಲ್ಲದೆ ಎಲ್ಲರನ್ನೂ ಊಟಕ್ಕೆ ಕುಳ್ಳಿರಿಸಿದರು. ಅದೇನು ಆಶ್ಚರ್ಯವೋ! ಮಾಡಿದ್ದ ಅಡಿಗೆ ಎಲ್ಲರಿಗೂ ಸಾಕಾಯಿತು. ಯಾವುದೂ ಸಾಲದೆ ಹೋಗಲಿಲ್ಲ. ಭೋಜನಾನಂತರ ಮನೆಯ ಒಬ್ಬ ವೃದ್ಧೆ ಹೊರಗೆ ಬಂದು, ಕೈಗಳನ್ನು ಮುಗಿಯುತ್ತಾ, "ಭಗವಂತನ ಲೀಲೆ ಅದ್ಭುತವಾಗಿದೆ. ಈ ದಿವಸ ನಮ್ಮ ಮನೆಯಲ್ಲಿ ಒಂದು ಪವಾಡ ನಡೆದಿದೆ" ಎಂದಳು.

ಭೋಜನಾ ನಂತರ ಎಲ್ಲರೂ ರೈಲ್ವೆ ಸ್ಟೇಷನ್ ಪ್ಲಾಟ್‌ಫಾರಂ ಮೇಲೆ ಕುಳಿತರು. ಸುಮಾರು ಹದಿನೈದು ನಿಮಿಷಗಳ ಕಾಲ ಪ್ರೇಮ್‌ಸಿಂಗನು ತನ್ನ ಸುಶ್ರಾವ್ಯ ಕಂಠದಲ್ಲಿ ಬ್ರಹ್ಮಾನಂದರ ದೇವರ ನಾಮಗಳನ್ನು ಹಾಡಿ ಮನರಂಜನೆ ಮಾಡಿದನು. ರೈಲು ಜಾಗ್ರತೆಯಾಗಿಯೇ ಬಂದಿತು. ರಾಮದಾಸನು ಕೆಲವು ಮಿತ್ರರೊಂದಿಗೆ ರೈಲಿನಲ್ಲಿ ಕುಳಿತನು. ರಾಮದಾಸನನ್ನು ಬೀಳ್ಕೊಡಲು ಬಂದಿದ್ದವರಲ್ಲೊಬ್ಬನು, ತಾನು ತಂದಿದ್ದ ಕಡಲೇಕಾಯಿ, ಕಲ್ಲು ಸಕ್ಕರೆ ಮತ್ತು ಪುರಿಯ ಒಂದು ಸಣ್ಣ ಚೀಲವನ್ನು ರಾಮದಾಸನಿಗೆ ಕೊಟ್ಟನು. ಇದನ್ನು ತಾನು ಕುಳಿತ ಗಾಡಿಯ ಬಾಗಿಲ ಬಳಿ ಗುಂಪು ಕೂಡಿ ಪ್ಲಾಟ್‌ಫಾರಂ ಮೇಲಿದ್ದ ಮಿತ್ರರಿಗೆ ಪ್ರಸಾದವಾಗಿ ಹಂಚಬೇಕೆಂದು ಯೋಚಿಸಿ ರಾಮದಾಸನು ತಿನಸನ್ನು ಒಂದೊಂದು ಹಿಡಿಯಂತೆ ತೆಗೆದು ಧಾರಳವಾಗಿ ಹಂಚಲಾರಂಭಿಸಿದನು. ಇದನ್ನು ನೋಡಿ ಇತರ ಗಾಡಿಗಳಲ್ಲಿದ್ದ ಪ್ರಯಾಣಿಕರೂ ಗುಂಪು ಗುಂಪು ಇಳಿದು ರಾಮದಾಸನ ಬಳಿಗೆ ಬಂದು ಪ್ರಸಾದಕ್ಕೆ ಕೈ ಚಾಚಿದರು. ರಾಮದಾಸನು ಚೀಲದಿಂದ ಪ್ರಸಾದವನ್ನು ತೆಗೆದು ಹಂಚುತ್ತಲೇ ಹೋದನು. ಇದರ ಆಶ್ಚರ್ಯವೇನೆಂದರೆ ಚೀಲ ಬರಿಯದಾಗದಿದ್ದುದೇ. ರೈಲು ಹೊರಡುವವರೆಗೆ ನೂರಕ್ಕೆ ಮೀರಿದ ಜನಗಳಿಗೆ ಪ್ರಸಾದ ವಿನಿಯೋಗವಾಗಿದ್ದರೂ ಚೀಲದಲ್ಲಿ ಇನ್ನೂ ಸ್ವಲ್ಪ ಪ್ರಸಾದ ಉಳಿದೇ ಉಳಿಯಿತು.

ಈಗ ಸೊಲ್ಲಾಪುರ ಜಿಲ್ಲೆಯ ಪಂಢರಪುರದ ಸುತ್ತ ಇರುವ ಗ್ರಾಮಸ್ಥರ ಸ್ವಭಾವವನ್ನು ವಿವರಿಸುವುದು ಅಪ್ರಕೃತವಾಗಲಾರದು. ಸರಳ ಸ್ವಭಾವದ ಈ ಹಳ್ಳಿಗರು ನಿಷ್ಕಪಟಿಗಳು, ಸತ್ಯಸಂಧರು, ಅಲ್ಲದೆ ದಯಾವಂತರು, ಅತಿಥಿ ಸತ್ಕಾರ ನಿರತರು. ಇವರ ಮನೆಯ ಬಾಗಿಲಿಗೆ ಬಂದ ಯಾವ ಪ್ರಯಾಣಿಕನನ್ನಾಗಲಿ, ಅತಿಥಿಯನ್ನಾಗಲಿ ಸತ್ಕರಿಸದೆ ಕಳುಹಿಸುವುದಿಲ್ಲ. ಇವರು ವಿನೀತರು, ಆಡಂಬರವಿಲ್ಲದವರು. (ಮನೆಗೆ ಬಂದವರನ್ನು ಪಂಢರೀನಾಥ ವಿಠೋಬನೆಂದೇ ಭಾವಿಸುತ್ತಾರೆ) ಅತಿಥಿ ಕೂಡ ಪಂಢರೀನಾಥನೇ ತಮ್ಮನ್ನು ಆದರಿಸುತ್ತಿದ್ದಾನೆಂದು

ತಿಳಿಯುತ್ತಾನೆ. ಇವರ ಜೀವನ ಬಹಳ ಸಾಮಾನ್ಯವಾದದ್ದು. ಇವರು ಸಾಮಾನ್ಯ ವಾದರೂ ಆರೋಗ್ಯಕರವಾದ ಭೋಜನ ಮತ್ತು ಹಿಂದಿನ ಕಾಲದ ಪದ್ಧತಿಯು ದಪ್ಪನಾದ ಉಡುಪು ಇವುಗಳಿಂದ ತೃಪ್ತರಾಗಿದ್ದಾರೆ. ಇವರು ದೃಢಕಾಯರು, ಕಾರ್ಯ ಪರರು. ಇವರು ಕಾಲವನ್ನು ಗಣನೆ ಮಾಡುವುದಿಲ್ಲ. ಆದ್ದರಿಂದ ಅದರ ಸಂಕಲೆ ಯಿಂದ ಬಂಧಿತರಾಗಿ ಇಲ್ಲ. ಇವರು ಬಹಳ ಮಟ್ಟಿನ ಸಹಾನುಭೂತಿಯುಳ್ಳವರು ಧಾರಾಳಬುದ್ಧಿಯುಳ್ಳವರು ಮತ್ತು ತಮ್ಮ ಸುಖವನ್ನು ತೊರೆದು ಇತರರನ್ನು ಸಂತುಷ್ಟಿಗೊಳಿಸುವ ಸದ್ಗುಣವುಳ್ಳವರು. ಅನುಮಾನಪಟ್ಟುಕೊಂಡು, ತಮ್ಮ ಮನಸ್ಸಿಗಾಗಲಿ ಇತರರ ಮನಸ್ಸಿಗಾಗಲಿ ವ್ಯಥೆಯುನ್ನುಂಟುಮಾಡುವವರಲ್ಲ. ಭಗವಂತನ ವ್ಯಾಪಾರದಲ್ಲಿ ಸಂಪೂರ್ಣವಾಗಿ ನಂಬಿಕೆಯನ್ನಿಟ್ಟು ಸದಾ ಅವನ ಇಚ್ಛಾಧೀನರಾಗಿ ವರ್ತಿಸುತ್ತಾರೆ. ಇವರ ಸ್ತ್ರೀಯರೂ ಇದೇ ತರದ ನಿಷ್ಕಳಂಕ ಸ್ವಭಾವದವರು.

## (ii) ನೇರವಾದಪೆಟ್ಟು

ಏಕಾದಶಿ ದಿವಸಕ್ಕೆ ರಾಮದಾಸನನ್ನು ಪಂಢರಪುರಕ್ಕೆ ಪುನಃ ಕರೆದು-ಕೊಂಡು ಹೋದರು. ಅಲ್ಲಿ ರಾಮದಾಸನು ಹಿಂದೆ ಹಳ್ಳಿಗಳಿಗೆ ಹೋದವೇಳೆ ಸಂಧಿಸಿದ್ದ ಭಕ್ತ ವೃಂದವನ್ನು ಪುನಃ ಸಂದರ್ಶಿಸಿದನು. ಅಕಲ್‌ಕೋಟೆಯಿಂದ ಆಹ್ವಾನ ಬಂದುದರಿಂದ ಪಂಢರಪುರದಿಂದ ಅಲ್ಲಿಗೆ ಪ್ರಯಾಣ ಹೊರಟು ಅವನು ದಾರಿಯಲ್ಲಿ ಒಂದು ದಿನದಮಟ್ಟಿಗೆ ಸೊಲ್ಲಾಪುರದಲ್ಲಿ ನಿಂತನು.

ಜೊತೆಯಲ್ಲಿದ್ದ ಪ್ರೇಮ್‌ಸಿಂಗನು ಒಬ್ಬ ದೊಡ್ಡ ಭಕ್ತನಾಗಿದ್ದ ತನ್ನ ಸಂಬಂಧಿಯ ಮನೆಯಲ್ಲಿ ಉಳಿಯಬೇಕೆಂದು ರಾಮದಾಸನನ್ನು ಪ್ರಾರ್ಥಿಸಿದನು. ರಾಮದಾಸನು ಸಮ್ಮತಿಸಿದ್ದರ ಮೇಲೆ ಜನಾರ್ದನಪಂತ್, ಪ್ರೇಮ್‌ಸಿಂಗ್, ಮಾರುತಿ, ಮತ್ತು ಮಾಧವರಾವ್ ಎಲ್ಲ ಕೂಡಿ ಆ ಭಕ್ತನ ಮನೆಗೆ ಹೋದರು. ಅಲ್ಲಿ ಒಬ್ಬ ಹೆಸರುವಾಸಿಯಾದ ಸಾಧು ಮೊದಲೇ ಅತಿಥಿಯಾಗಿ ಬಂದಿದ್ದನು. ರಾಮದಾಸನು ಒಳ ಹೋಗುವ ವೇಳೆಗೆ ಆ ಸಾಧುವಿನ ಗುರುವಿನ ಭಾವಚಿತ್ರಕ್ಕೆ ಪೂಜೆ ಸಂಭ್ರಮದಿಂದ ನಡೆಯುತ್ತಿದ್ದಿತು. ರಾಮದಾಸನು ಪೂಜೆಯಾಗುತ್ತಿದ್ದ ಕೈಸಾಲೆಗೆ ನೇರವಾಗಿ ಹೋದನು. ಭಾವಚಿತ್ರದ ಮಗ್ಗುಲಲ್ಲಿ ಸಾಧುವಿನ ಆಸನ ಕ್ಕಾಗಿ ಮೆತ್ತೆಗಳನ್ನು ಹಾಕಿದ್ದಿತು. ರಾಮದಾಸನಿಗಾಗಿ ಒಂದು ಕೃಷ್ಣಾಜಿನವನ್ನು ಇಟ್ಟುಕೊಂಡಿದ್ದ ಪ್ರೇಮ್‌ಸಿಂಗನು ಅದನ್ನು ಆ ಮೆತ್ತೆಯ ಮೇಲೆ ಹಾಸಿ ಅದರ ಮೇಲೆ ಕುಳಿತುಕೊಳ್ಳಲು ರಾಮದಾಸನಿಗೆ ಸಂಜ್ಞೆ ಮಾಡಿದನು. ರಾಮದಾಸನು ಯಾವ ಅರಿವೂ ಇಲ್ಲದೆ ಹಾಗೆ ಅದರ ಮೇಲೆ ಕುಳಿತನು. ಸಾಧು ಸಂಭ್ರಮದಿಂದ ಪೂಜೆ ಮಾಡುತ್ತಿರಲಾಗಿ ನೆರೆದಿದ್ದ ಜನರೆಲ್ಲರೂ ನಿಂತುಕೊಂಡು ನೋಡುತ್ತಿದ್ದರು. ಪೂಜೆ ಮುಗಿದ ನಂತರ ಸಾಧು, ರಾಮದಾಸನ ಅಗೌರವವಾದ ವರ್ತನೆಯನ್ನು

ಖಂಡಿಸಿ, ತನ್ನ ಅಸಮಾಧಾನವನ್ನು, ಪ್ರದರ್ಶಿಸಲು, ರಾಮುದಾಸನ ಕಡೆ ತಿರುಗಿಯೂ ನೋಡದೆ ಮನೆಯ ಒಳಗಿನ ಕೊಟಡಿಯೊಂದನ್ನು ಪ್ರವೇಶಿಸಿದನು. ಆಗಿದ್ದುದೇನಂದರೆ ಸಾಧುವಿಗಾಗಿ ಹಾಸಿದ್ದ ಮೆತ್ತೆಯ ಮೇಲೆ ಪ್ರೇಮ್‌ಸಿಂಗನು ತಿಳಿಯದೆ ರಾಮುದಾಸನನ್ನು ಕುಳ್ಳಿರಿಸಿದ್ದನು. ಸಾಧು ರಾಮುದಾಸನ ಅತಿ ಅಹಂಕಾರದಿಂದ ಕುದಿದು ಬೆಂದಿರಬೇಕು.

ಆದರೆ ರಾಮುದಾಸನು ಯಾವುದನ್ನೂ ಹಚ್ಚಿಕೊಳ್ಳದೆ ಸುಮ್ಮನಿದ್ದನು. ಪ್ರೇಮ್‌ಸಿಂಗನು ಅಸಮಾಧಾನವನ್ನು ಊಹಿಸಿ ತಾನು ಮಾಡಿದ ತಪ್ಪಿಗೆ ಪರಿಹಾರ ರೂಪವಾಗಿ ರಾಮುದಾಸನ ಮಗ್ಗುಲಲ್ಲಿ ಇನ್ನೊಂದು ಆಸನವನ್ನು ಸಿದ್ಧಮಾಡಿ, ಸಾಧುವನ್ನು ಹೊರಗೆ ಬಂದು ಅದನ್ನು ಅಲಂಕರಿಸಬೇಕೆಂದು ಬೇಡಿಕೊಂಡನು. ಸಾಧು ಮನಸ್ಸಿಲ್ಲದೆ ಅಸಮಾಧಾನವನ್ನು ತೋರ್ಪಡಿಸುತ್ತ ಬಂದು ಕುಳಿತನು. ಪ್ರೇಮ್‌ಸಿಂಗನು ಇಬ್ಬರಿಗೂ ಹೂವಿನ ಹಾರಗಳನ್ನು ಹಾಕಿ ಪ್ರಣಾಮಮಾಡಿದನು. ಇನ್ನೂ ಸಾಧುವಿಗೆ ಸಮಾಧಾನವಾಗಲಿಲ್ಲ.

ಸಾಧು ರಾಮುದಾಸನನ್ನು ನಿಮ್ಮ ಗುರು ಯಾರೆಂದು ಪ್ರಶ್ನಿಸಿದನು. ಅದಕೆ ರಾಮುದಾಸನು ("ರಾಮುದಾಸನ ಗುರು ಅವನ ಹೃದಯದಲ್ಲಿಯೂ ಇತರ ಎಲ್ಲರ ಹೃದಯದಲ್ಲಿಯೂ ವಾಸಿಸುತ್ತಿರುವನು") ಎಂದು ಉತ್ತರ ಕೊಟ್ಟನು. ಇದನ್ನು ಕೇಳಿ ಸಾಧು ಹೀನಾಯವನ್ನು ಸೂಚಿಸಿ ಮುಸುಕುಟ್ಟಿ ಎದ್ದು ಹೋದನು.

ಸಾಧುವಿನ ಕಾರ್ಯಕ್ರಮದಲ್ಲಿ ವಾಡಿಕೆಯಂತೆ ಆ ದಿವಸ ಸಾಯಂಕಾಲ ಶಕಪುರುಷನಾದ ಶಿವಾಜಿ ಮಹಾರಾಜನ ಉದ್ಧಾಮ ಗುರು ಸಮರ್ಥರಾಮದಾಸ ಸದ್ಗುರುಗಳಿಂದ ರಚಿತವಾದ ಪ್ರಸಿದ್ಧ ಗ್ರಂಥ (ದಾಸಬೋಧೆಯ) ಪಠನ ನಡೆಯುತ್ತಿದ್ದಿತು. ವ್ಯಾಖ್ಯಾನದಲ್ಲಿ ಮೊದಲು ಸಾಧು ರಾಮುದಾಸನನ್ನು ಕುರಿತು ಪ್ರಚ್ಛನ್ನವಾಗಿ ವ್ಯಂಗ್ಯವನ್ನು ·ನುಡಿಯುತ್ತಾ, ಕೊನೆಗೆ ಈ ಮುಕ್ತಾಯಕ್ಕೆ ಏರಿದನು. "ಈಗಿನಕಾಲದಲ್ಲಿ ಯಾವ ದಾರಿಹೋಕನೂ ಕಾಷಾಯವಸ್ತ್ರಗಳನ್ನು ಧರಿಸಿ, ತಾನೂ ಗುರುವೆಂದು ತೋರಿಸಿಕೊಳ್ಳುತ್ತಾ, ಶಿಷ್ಯಾರ್ಜನೆಗಾಗಿ ಊರಿಂದೂರು ತಿರುಗುವುದು ಸಾಧಾರಣವಾಗಿ ಹೋಗಿದೆ" ಎಂದು ಹೇಳಿ, "ಇಲ್ಲಿ ಕುಳಿತಿರುವ ಸಾಧುವೂ ಅಂತಹ ಜನರಲ್ಲೊಬ್ಬನು" ಎನ್ನುತ್ತ ರಾಮುದಾಸನ ಕಡೆಗೆ ನೇರವಾಗಿ ಬೆರಳನ್ನು ತೋರಿಸಿದನು. ಈ ಆರೋಪಣೆಯನ್ನು ಕೇಳಿ ರಾಮುದಾಸನು ಮುಗುಳ್ನಗೆ ನಗುವುದು ಹೊರತು ಬೇರೆ ಇನ್ನೇನನ್ನೂ ಮಾಡುವಂತಿರಲಿಲ್ಲ. ಪ್ರವಚನವಾದ ನಂತರ ತರುಣ ಮಾರುತಿಯನ್ನು ಗೀತೆಯ ("ಸರ್ವಧರ್ಮಗಳನ್ನೂ ಬಿಟ್ಟು ನನಗೇ ಶರಣಾಗತನಾಗು, ಯೋಚಿಸಬೇಡ. ಎಲ್ಲಾ ಪಾಪಗಳಿಂದಲೂ ನಿನ್ನನ್ನು ನಾನು ಮುಕ್ತನನ್ನಾಗಿ ಮಾಡುತ್ತೇನೆ") ಎಂಬ ಎಲ್ಲಲ್ಲಿಯೂ ಉದಾಹರಿಸುವ "ಸರ್ವಧರ್ಮಾನ್ ಪರಿತ್ಯಜ್ಯ" ಎಂದು ಆದಿಯಾಗುವ ಮಹಾಶ್ಲೋಕವನ್ನು ವಿವರಿಸಲು ಕೇಳಲಾಯಿತು. ಹುಡುಗನು ತಡೆಬಡೆಯಿಲ್ಲದೆ,

ಅರ್ಧಗಂಟೆಯಕಾಲ ಉಪನ್ಯಾಸ ಮಾಡಿ, ವ್ಯಾಖ್ಯಾನ ಮಾಡಿದನು. ಕೊನೆಯಲ್ಲಿ ಸಾಧು ರಾಮದಾಸನನ್ನು ಹಿಂದೀ ಭಾಷೆಯಲ್ಲಿ ಏನಾದರೂ ಕೆಲವು ಮಾತುಗಳನ್ನಾಡಬೇಕೆಂದು ಕೇಳಿದನು.

ಪ್ರಾರಂಭದಲ್ಲಿ, ರಾಮದಾಸನು ವಿಶ್ವವ್ಯಾಪನೆಯ ದರ್ಶನದ ವಿಚಾರವಾಗಿ ಮಾತನಾಡುತ್ತಾ, ಇದು ಎಲ್ಲ ಆಧ್ಯಾತ್ಮಸಾಧನೆಯ ಗುರಿ ಎಂದು ಒತ್ತಿ ಹೇಳಿದನು. ನಂತರ ಇದನ್ನು ಪಡೆಯುವ ವಿಧಾನವನ್ನು ವಿಶದಪಡಿಸಿದನು. ಈ ಮಹಾದರ್ಶನ ವನ್ನು ಪಡೆಯಲು ಅವಶ್ಯಕಗುಣವಾದ ಮನಸ್ಸಿನ ಮತ್ತು (ಹೃದಯದ ಪರಿಶುದ್ಧತೆಗೆ ಸಾಧುಗಳ ಸೇವೆ ಮತ್ತು ರಾಮನಾಮಸ್ಮರಣೆಗಳೇ ಸಾಧನವೆಂದು ವಿವರಿಸಿದನು) ಒಬ್ಬ ಸಾಧುವಿನ ಸೇವೆ ಮಾಡುವ ಪುಣ್ಯ ದೊರೆತಿರುವುದರಿಂದ ಅವರೇ ಧನ್ಯರೆಂದು ಅಲ್ಲಿ ನೆರೆದಿದ್ದ ಭಕ್ತವೃಂದವನ್ನು ಶ್ಲಾಘಿಸಿದನು. ತನ್ನ ಮಗ್ಗುಲಲ್ಲಿ ಇರುವ ಸಾಧುವನ್ನು ತೋರಿಸುತ್ತಾ, ಸೇವೆ ಮಾಡಿ ಪುಣ್ಯಪಡೆಯಲು ಆ ಭಕ್ತರುಗಳಿಗೆ ಒಬ್ಬ ಸಾಧು ದೊರೆತಿರುವರೆಂದು ಹೇಳಿ ಇಂತಹ ದೇವದತ್ತವಾದ ಸುಸಮಯವನ್ನು ಕಳೆದುಕೊಳ್ಳಬಾರದೆಂದು ಅವರಿಗೆ ಒತ್ತಿಹೇಳಿದನು.

ರಾತ್ರಿಗೆ ರಾಮದಾಸನನ್ನು ವ್ಯಾಪಾರಿಯಾದ ಒಬ್ಬ ಭಕ್ತನ ಮನೆಗೆ ಕರೆದು ಕೊಂಡು ಹೋದರು. ಹಿಂದೆ ಈತನು ರಾಮದಾಸನನ್ನು ಅನಗರ್‌ನಲ್ಲಿ ಸತ್ಕರಿ ಸಿದ್ದನು. ರಾಮದಾಸನು ಇವನ ಮನೆಗೆ ಹೋದಾಗ, ಆತನು ಎಲ್ಲಿಯೋ ಹೊರಗೆ ಹೋಗಿದ್ದನು. ಆದರೆ ಧರ್ಮಿಷ್ಠೆಯಾದ ಆತನ ಪತ್ನಿ, ರಾಮದಾಸನನ್ನೂ ಮತ್ತು ಸಂಗಡಿಗರನ್ನೂ ಸ್ವಾಗತಿಸಿದಳು. ಪ್ರೇಮ್‌ಸಿಂಗನ ಸಂಬಂಧಿಯ ಮನೆ ಯಲ್ಲಿ ಪರಿಚಿತನಾಗಿದ್ದ ಸಾಧು, ಮಾರನೆಯ ದಿವಸ ತಾನು ಯೋಗವಾಸಿಷ್ಠವನ್ನು ವಿವರಿಸುವೆನೆಂದೂ, ಅಗ್ಗೆ ಬರಬೇಕೆಂದೂ ಕೇಳಿಕೊಂಡಿದ್ದನು. ಆದರೆ ರಾಮ ದಾಸನು ಅಲ್ಲಿಗೆ ಹೋಗಕೂಡದೆಂದು ಪ್ರೇಮ್‌ಸಿಂಗನು ಖಂಡಿತವಾಗಿ ನಿರೋ ಧಿಸಿದನು. ಅಲ್ಲಿ ಸೇರಿದ್ದ ಸ್ನೇಹಿತರು, ಆ ಸಾಧು ರಾಮದಾಸನ ವಿಚಾರವಾಗಿ ತೋರಿಸಿದ ನಡತೆಯನ್ನು ಖಂಡಿಸಿದರು. ಆದರೆ ರಾಮದಾಸನು ಮಧ್ಯೆ ಬಾಯಿ ಹಾಕಿ, "**ರಾಮನೇ** ಈ ರೀತಿ ಆಟವಾಡುತ್ತಿದ್ದಾನೆಂಬುದನ್ನು ನೀವು ಏಕೆ ಮರೆಯುತ್ತೀರಿ? **ರಾಮನು** ಅನೇಕ ವೇಷಗಳನ್ನು ಧರಿಸುತ್ತಾನೆ" ಎಂದನು.

ಮಾರನೆಯದಿನ, ಹೊತ್ತಿಗೆಮುಂಚೆ ಈ ಗುಂಪು ಸೊಲ್ಲಾಪುರದಿಂದ ಅಕಲ್‌ಕೋಟೆಗೆ ಮೋಟಾರುಬಸ್ಸಿನಲ್ಲಿ ಹೊರಟಿತು. ಮಧ್ಯಾಹ್ನದ ಹೊತ್ತಿಗೆ ಇವರು ಆ ಊರನ್ನು ಸೇರಿ ತಾಕ್ಸಾಡೆ ಎಂಬ ಮಿತ್ರನ ಮನೆಯಲ್ಲಿ ಇಳಿದರು. ಆತನು ಆದರಸತ್ಕಾರಗಳ ಮೂರ್ತಿಯಾಗಿದ್ದನು. ಆತನು ಆ ಊರಿನಲ್ಲಿ ಪ್ರಸಿದ್ಧನಾಗಿದ್ದ ಅಕಲ್‌ಕೋಟೆಬಾವ ಎಂಬ ಸಾಧುವಿನ ಸಮಾಧಿಯ ದೇವಸ್ಥಾನದಲ್ಲಿ ರಾಮದಾಸನು ಆಂಗ್ಲಭಾಷೆಯಲ್ಲಿ ಉಪನ್ಯಾಸಮಾಡಲು ಏರ್ಪಾಡು ಮಾಡಿದ್ದನು. ಈ ಸಮಾರಂಭಕ್ಕೆ ಕೆಲವು ಗಂಟೆಗಳ ಪೂರ್ವ,

ವಯಸ್ಕನಾದ ಒಬ್ಬ ವಕೀಲನು ತನ್ನ ಹತ್ತಿರಸಂಬಂಧಿಯೊಬ್ಬನು ಮೃತನಾಗಿದ್ದುದರಿಂದ ದುಃಖದಿಂದ ಕಂದಿದ್ದವನು, ರಾಮುದಾಸನನ್ನು ನೋಡಲು ಬಂದನು. ಸಂಭಾಷಣೆಮಾಡುತ್ತಾ, ಅವನು ಭಗವಂತನಿದ್ದಾನೆಂಬ ನಂಬಿಕೆಯನ್ನು ಬಾಯಿತುಂಬ ಖಂಡಿಸಿದನು. ರಾಮುದಾಸನು ಆತನೊಡನೆ ಕೆಲವು ಮಾತನಾಡಿದನು. ಇದರಿಂದ ಆತನ ಮನಸ್ಸು ಬಹಳ ಮಾರ್ಪಟ್ಟಿತು. ಆತನು ರಾಮುದಾಸನನ್ನು ತನ್ನ ಮನೆಗೆ ಕರೆದುಕೊಂಡುಹೋಗಿ ತುಂಬ ವಿನಯ ಮತ್ತು ಆದರದಿಂದ ನಡೆದುಕೊಂಡನು.

ಸಾಯಂಕಾಲ, ದೇವಸ್ಥಾನದಲ್ಲಿ ರಾಮುದಾಸನ ಉಪನ್ಯಾಸ ಕಾಲದಲ್ಲಿ ಸೇರಿದ್ದ ಬಹು ಸಂಖ್ಯೆಯ ಸ್ನೇಹಿತರಲ್ಲಿ, ಈ ವಕೀಲನೂ ಒಬ್ಬನಾಗಿ ರಾಮುದಾಸನ ಎದುರಿಗೇ ಕುಳಿತಿದ್ದನು. ರಾಮುದಾಸನು ಸುಮಾರು ನಲವತ್ತೈದು ನಿಮಿಷಗಳ ಕಾಲ ಉಪನ್ಯಾಸ ಮಾಡಿದನು. ಅವನಿಗೆ ವಕೀಲನ ಕಣ್ಣುಗಳಲ್ಲಿ ನೀರು ಧಾರಾವಹವಾಗಿ ಹರಿಯುತ್ತಿದ್ದದ್ದು ಕಂಡಿತು. (ದೇವರಲ್ಲಿ ನಂಬಿಕೆ ಇಡಬೇಕೆಂದೂ, ದೇವರ ವಿಚಾರದಲ್ಲಿ ತುಂಬ ಭಕ್ತಿಯನ್ನು ಬೆಳಸಿಕೊಳ್ಳಬೇಕೆಂದೂ ರಾಮುದಾಸನು ಪದೇ ಪದೇ ಉಪದೇಶಿಸಿದ್ದು ಆತನ ಮನಸ್ಸಿಗೆ ಚೆನ್ನಾಗಿ ಹಿಡಿಯಿತೆಂದು ವ್ಯಕ್ತವಾಯಿತು.)

ಆ ರಾತ್ರಿಯೇ ರಾಮುದಾಸನು ಅಕಲ್‌ಕೋಟೆಯಿಂದ ಬೆಂಗಳೂರಿಗೆ ಹೊರಡಬೇಕಾಗಿದ್ದಿತು. ಸ್ಟೇಷನ್ ಊರಿಗೆ ಆರು ಮೈಲಿ ದೂರ. ಇವನನ್ನು ಸ್ಟೇಷನ್ನಿಗೆ ಒಯ್ಯಲು ಒಂದು ಟಾಂಗಾ ಗಾಡಿಯನ್ನು ಗೊತ್ತುಮಾಡಿದರು. ವಕೀಲಸ್ನೇಹಿತನು ರಾಮುದಾಸನನ್ನು ಬೀಳ್ಕೊಡಲು ಕಾದಿದ್ದನು; ಟಾಂಗಾ ಗಾಡಿ ಹೊರಡುವ ಸಮಯದಲ್ಲಿ, ಭಾವೋದ್ವೇಗದಿಂದ ಪರಾಜಿತನಾದನು; ರಾಮುದಾಸನ ಅಗಲಿಕೆಯ ಕಾರಣದಿಂದ ಆತನು ಅತ್ತುಬಿಟ್ಟನು. ನಂತರ ಟಾಂಗಾ ಗಾಡಿ ಸ್ಟೇಷನ್ನನ್ನು ಸಮೀಪಿಸುತ್ತಿದ್ದಾಗ, ರಾಮುದಾಸನಿಂದ ಬೇರೆಯಾಗಬೇಕಲ್ಲಾ ಎಂಬ ದುಃಖದಿಂದ, ಎಷ್ಟು ಪ್ರಯತ್ನ ಮಾಡಿದರೂ ಸಮಾಧಾನವಾಗದೆ, ಮಾರುತಿ ಮಗುವಿನಂತೆ ಅತ್ತುಬಿಟ್ಟನು. ಗೀತಾಶ್ಲೋಕಗಳನ್ನು ವಿವರಿಸುವಾಗ ಅವನು ಹೇಳುವ ದೊಡ್ಡ ದೊಡ್ಡ ತತ್ವಗಳನ್ನು ಅವನಿಗೆ ಜ್ಞಾಪಿಸಿ, ಜನಾರ್ದನಪಂತನು ಅವನನ್ನು ಈ ರೀತಿ ಶೋಕವನ್ನು ಪ್ರದರ್ಶಿಸಿದುದಕ್ಕೆ ಆಕ್ಷೇಪಿಸಿದನು.

ಸ್ಟೇಷನ್ನನ್ನು ಮುಟ್ಟಿದ್ದಾಯಿತು. ರೈಲು ಬಂದಿತು. ಪ್ರೇಮ್‌ಸಿಂಗ್ ಮತ್ತು ಮಾಧವರಾವ್ ಕೂಡ ಅಳುವುದಕ್ಕೆ ಆರಂಭಿಸಿದರು. ಇವರ ರೋದನದ ಮಧ್ಯದಲ್ಲಿ, ರಾಮುದಾಸನೂ, ಬೆಂಗಳೂರಿನವರೆಗೂ ಅವನ ಜೊತೆಗೆ ಬರುವನಾಗಿದ್ದ ಜನಾರ್ದನಪಂತನೂ, ರೈಲಿನಲ್ಲಿ ಕುಳಿತು ಸೊಲ್ಲಾಪುರ ಜಿಲ್ಲೆಯನ್ನು ಬಿಟ್ಟರು.

## (iii) ಒಬ್ಬ ತಾಯಿಗೆ ಪ್ರತ್ಯಕ್ಷವಾದದ್ದು

ಸಕಾಲದಲ್ಲಿ ರೈಲು ಬೆಂಗಳೂರು ಸ್ಟೇಷನ್ ಬಳಿ ವೇಗ ತಗ್ಗಿ ನಿಂತಿತು. ರೈಲನ್ನು ಇಳಿದ ಒಡನೆ ಇವರು ಇವರನ್ನು ಇದಿರುಗೊಳ್ಳಲು ಸ್ಟೇಷನ್ನಿಗೆ ಬಂದಿದ್ದ ಭವಾನೀ ಶಂಕರರಾಯನೊಂದಿಗೆ ನೇರವಾಗಿ ಮಲ್ಲೇಶ್ವರಕ್ಕೆ ಹೋದರು. ಈ ಸಲ ರಾಮದಾಸನು ಬೆಂಗಳೂರಿನಲ್ಲಿ ಕೆಲವು ದಿವಸಗಳು ಮಾತ್ರ ಇದ್ದನು. ಜನಾರ್ದನಪಂತನು ಹರಿಕಥೆಮಾಡಿ ಭಕ್ತರಾದ ಈ ಮನೆಯವರಿಗೆ ಸಂತೋಷ ವನ್ನುಂಟುಮಾಡಿದನು. ಇಲ್ಲಿಂದ ಹೊರಡುವ ದಿವಸ ಬಂದಾಗ ಜನಾರ್ದನ ಪಂತನು ಮುಂಚಿತವಾಗಿ ಹೊರಡುವ ರೈಲಿನಲ್ಲಿ ತನ್ನ ಊರಿಗೆ ಪ್ರಯಾಣ ಮಾಡಿದನು. ರಾಮದಾಸನಿಂದ ಬೀಳ್ಕೊಳ್ಳುವಾಗ ಅವನೂ ಅತ್ತನು. ಆಗ ರಾಮದಾಸನು "ರಾಮಜಿ, ಏನು ನೀನು ಮಾಡುತ್ತಿರುವುದು? ಮಾರುತಿ ಹೀಗೆ ದುಃಖಪ್ರದರ್ಶನ ಮಾಡಿದಾಗ, ನೀನು ಹೇಳಿದ ವಿಷಯವೇನು?" ಎಂದು ಜ್ಞಾಪಿಸಿದನು.

ರಾಮದಾಸನು ಗೊತ್ತಾದ ಹೊತ್ತಿನಲ್ಲಿ ಹೊರಟನು. ಆಗ ರಾತ್ರಿ. ಅವನ ಮುಂದಣ ಗುರಿ ಕೊಚ್ಚಿ ಸಂಸ್ಥಾನದ ಎರ್ನಾಕುಲಂ. ರಾಮದಾಸನು ಕುಳಿತಿದ ಗಾಡಿ ತುಂಬಿದ್ದಿತು. ಅವನಿಗೆ ಒಂದು ಸಣ್ಣ ಬೆಂಚಿನ ಮೂಲೆಯಲ್ಲಿ ಸ್ವಲ್ಪ ಸ್ಥಳ ದೊರೆಯಿತು. ಒಬ್ಬ ಪ್ರಯಾಣಿಕನು ಆ ಬೆಂಚಿನ ಮೇಲೆ ಕಾಲುಗಳನ್ನು ನೀಡಿ ಕೊಂಡು ಮಲಗಿದ್ದನು. ರಾಮದಾಸನು ಸಾಧ್ಯವಾದಷ್ಟು ಈತನಿಗೆ ತೊಂದರೆ ಯಾಗದ ರೀತಿಯಲ್ಲಿ ಕುಳಿತನು. ಎದುರಿನ ಬೆಂಚಿನ ಮೇಲೆ ಮೂರು ಜನ ಕುಳಿತಿದ್ದರು. ಅವರಲ್ಲಿ ಇಬ್ಬರು ಮುಸಲ್ಮಾನರು. ಅವರು ಧರಿಸಿದ್ದ ಗಿಲೀಟಿನ ಪೇಟ ಮತ್ತು ಆಡಂಬರದ ದವಾಲೆಗಳನ್ನು ನೋಡಿದರೆ, ಅವರು ಯಾರೋ ಒಬ್ಬ ದೊಡ್ಡಮನುಷ್ಯರ ಸಿಪಾಯಿಗಳೆಂದು ಕಂಡು ಬಂದರು. ಆ ಕೆಂಪು ದವಾಲೆಗಳ ಮೇಲಿನ ಬಾದಾಮಿ ಆಕಾರದ ಹಿತ್ತಾಳೆಯ ಬಿಲ್ಲೆಗಳ ಮೇಲೆ ಕಂಡ ಅಕ್ಷರಗಳಿಂದ ಅವರು ಕೊಚ್ಚಿ ಸಂಸ್ಥಾನಕ್ಕೆ ಸೇರಿದವರೆಂದು ಗೊತ್ತಾಯಿತು. ರಾತ್ರಿಯಾದ ಹಾಗೆಲ್ಲಾ, ಇಬ್ಬರು ಸಿಪಾಯಿಗಳೂ ಕುಳಿತಕಡೆ ತೂಕಡಿಸಲಾರಂಭಿಸಿದರು. ಅವರಿಬ್ಬರಲ್ಲಿ ಹೆಚ್ಚು ವಯಸ್ಸಿನವನು, ಅಂದವಾಗಿ ಕಟ್ಟಿರುವ ಗಿಲೀಟಿನ ಪೇಟ ತಾನು ತೂಕಡಿಸುವಾಗ ಬಿದ್ದುಹೋದೀತೆಂದು ಅದನ್ನು ರಾಮದಾಸನ ಬೆಂಚಿನ ಮೇಲೆ ಅವನ ಪಕ್ಕದಲ್ಲಿರಿಸಿ, "ಏ! ನನ್ನ ಪೇಟ ನೋಡಿಕೋ! ಕೆಳಕ್ಕೆ ಬಿದ್ದೀತು ಜೋಕೆ! ಜಾಗರೂಕನಾಗಿ ನೋಡಿಕೊಳ್ಳುತ್ತಿರು" ಎಂದು ಕರ್ಕಶ ಧ್ವನಿಯಲ್ಲಿ ಆಜ್ಞೆಮಾಡಿದನು. ರಾಮದಾಸನು ಅಪ್ಪಣೆಯನ್ನು ಪಾಲಿಸುವುದಾಗಿ "ಹುಂ" ಎಂದನು.

ಸಿಪಾಯಿಗಳು ಆ ಮೇಲೆ ನಿದ್ರಾಪ್ರಪಂಚದಲ್ಲಿ ಆಳವಾಗಿ ಇಳಿದರು. ತನಗೆ ಒಪ್ಪಿಸಿದ್ದ ಅಮೂಲ್ಯವಾದ ಪೇಟವನ್ನು ಕಾಯುವುದರಲ್ಲಿ ರಾಮದಾಸನು

ನಿರತನಾದನು. ಸ್ವಲ್ಪ ಹೊತ್ತಿನಲ್ಲಿ ಬೆಂಚಿನ ಮೇಲೆ ಮಲಗಿದ್ದವನು ಕಾಲುಗಳನ್ನು ಪೂರಾ ನೀಡಿದುದರಿಂದ ರಾಮದಾಸನು ಬೆಂಚಿನ ತೀರಾ ಕೊನೆಯ ಅಂಚಿನ ಮೇಲೆ ಕುಳಿತುಕೊಳ್ಳಬೇಕಾಯಿತು. ಆದ್ದರಿಂದ ಆ ಪೇಟವನ್ನು ಎತ್ತಿಕೊಂಡು ಆ ಅಮೂಲ್ಯ ನ್ಯಾಸವನ್ನು ಅಕ್ಕರೆಯಿಂದ ತೊಡೆಯ ಮೇಲೆ ಇಟ್ಟುಕೊಳ್ಳಬೇಕಾಯಿತು. ಪ್ರಯಾಣಿಕನು ಇನ್ನೂ ಉದ್ದವಾದನು. ಎಷ್ಟು ಉದ್ದ ಬೇಕಾದರೂ ಆಗುವಂತೆ ಕಂಡದ್ದರಿಂದ, ರಾಮದಾಸನಿಗೆ ಈ ಮನುಷ್ಯನು ಸಾಮಾನ್ಯ ಪ್ರಾಣಿಯಲ್ಲ, ರಬ್ಬರ್ ಮನುಷ್ಯನಾಗಿರಬಹುದೆಂದು ಹೊಳೆಯಿತು. ಆಗ ರಾಮದಾಸನು ಎದುರು ಕಡೆಯ ಬೆಂಚಿನ ಕೆಳಗೆ ನೆಲದಮೇಲೆ ಸಾಮಾನಿರದೆ ಬಿಡುವಾಗಿದ್ದುದನ್ನು ಕಂಡು, ಪೇಟವನ್ನು ಹಿಡಿದುಕೊಂಡು, ಆ ಸ್ಥಳಕ್ಕೆ ಮೆತ್ತಗೆ ಜಾರಿದನು. ಪೇಟವನ್ನು ತನ್ನ ತಲೆಯ ಕಡೆ ತನ್ನ ಬಟ್ಟೆಯ ಮೇಲೆ ಇಟ್ಟು, ಬೆಂಚಿನ ಕೆಳಗೆ ನೆಟ್ಟಗೆ ಕುಳಿತುಕೊಳ್ಳುವುದಕ್ಕೆ ಸಾಧ್ಯವಿಲ್ಲದುದರಿಂದ ಒರಗಿಕೊಂಡು ಕುಳಿತನು.

ತನ್ನೊಳಗಿನ ಗಾಡಿಗಳಲ್ಲಿ ಕಿಕ್ಕಿರಿದಿದ್ದ ಪ್ರಯಾಣಿಕರು ನಾನಾ ವಿಚಿತ್ರ ಆಕಾರಗಳನ್ನು ಹೊಂದುತ್ತಿರುವುದನ್ನು ಲೆಕ್ಕಿಸದೆ ರೈಲು ಒಂದೇ ಸಮನಾಗಿ ಓಡುತ್ತಿದ್ದಿತು. ರಾಮದಾಸನಿಗೂ ನಿದ್ರೆ ಬಂದಿತು. ಪ್ರಾತಃಕಾಲದ ಬೆಳಕು ಕಿಟಕಿಯಲ್ಲಿ ಪ್ರವಹಿಸುವ ಸಮಯದಲ್ಲಿ, ಮೇಲಿನಿಂದ ಕೇಳಿಸಿದ, ಗರ್ಭನಿರ್ಭೇದಕವಾದ ಕರ್ಕಶವಾದ ವಿಜಾತೀಯ ಆಕ್ರಂದನದಿಂದ, ರಾಮದಾಸನಿಗೆ ಗಾಬರಿಯಾಗಿ ಎಚ್ಚರವಾಯಿತು. ಆ ಕೂಗು ಪೇಟದ ಮಾಲೀಕ ಸಿಪಾಯಿಯದಾಗಿದ್ದಿತು. ಅವನು ತನ್ನ ಪೇಟವನ್ನು ಹೊತ್ತುಕೊಂಡು ಹೋದ ಕಳ್ಳನ ಮೇಲೆ ಶಾಪಗಳನ್ನು ಹಾಕುತ್ತಿದ್ದನು. ಈಗ ರಾಮದಾಸನು ಕೈಯಲ್ಲಿ ಪೇಟವನ್ನು ಹಿಡಿದುಕೊಂಡು ಮೆಲ್ಲಗೆ ಮೂಲೆಯಿಂದ ತೆವಳಿಕೊಂಡು ಈಚೆಗೆ ಬಂದನು. ಪೇಟವನ್ನು ನೋಡಿದೊಡನೆಯೇ ಸಿಪಾಯಿ ಸಂತೋಷದಿಂದ ಹಾರಿ, ರಾಮದಾಸನ ಕೈಯಿಂದ ಪೇಟವನ್ನು ಕಿತ್ತುಕೊಂಡು "ಹಾಗಾದರೆ ನೀನು ಬೆಂಚಿನ ಕೆಳಗಿದ್ದೆ! ಆಹ! ಅದು ನನಗೆ ಹೇಗೆ ಗೊತ್ತಾಗಬೇಕು? ಸದ್ಯ, ನನ್ನ ಪೇಟ ದೊರೆಯಿತಲ್ಲಾ! ಅಲ್ಲಾ! ನಿನಗೆ ವಂದನೆ ಇರಲಿ!" ಎನ್ನುತ್ತಾ, ತುಂಬಾ ಸಮಾಧಾನದಿಂದ ತನ್ನ ಉದ್ದವಾದ ಬೂದು ಬಣ್ಣದ ಗಡ್ಡವನ್ನು ನೀವಿದನು.

ರಾಮದಾಸನು ಈಗ ಷೋರನೂರ್ ಜಂಕ್ಷನ್ನಿಗೆ ಬಂದನು. ಅಲ್ಲಿ ಸಂಜೀವರಾಯನನ್ನು ಕಂಡು ಅವನೊಂದಿಗೆ ಎರ್ನಾಕುಲಂಗೆ ಹೋಗುವ ರೈಲಿನಲ್ಲಿ ಕುಳಿತು ಮಧ್ಯಾಹ್ನಕ್ಕೆ ಆ ಊರನ್ನು ಸೇರಿದನು.

ಅವನು ಎಂದಿನಂತೆ ಸಂಜೀವರಾಯನ ಮನೆಯಲ್ಲಿ ಇಳಿದುಕೊಂಡನು. ಇಲ್ಲಿ ಬೆಳಗೂ ಸಾಯಂಕಾಲವೂ ಹಿಂದೆ ಬರುತ್ತಿದ್ದ ಅನೇಕ ಸ್ನೇಹಿತರು ಬಂದು, ರಾಮದಾಸನೊಡನೆ ಮಾತನಾಡಿಕೊಂಡು ಹೋಗುತ್ತಿದ್ದರು. ಕತ್ತಲಾದ ಮೇಲೆ

ದಿನವೂ ಸಂಜೀವರಾಯನ ಮನೆಯಲ್ಲಿ ಕೀರ್ತನೆ ನಡೆಯುತ್ತಿದ್ದಿತು. ಆತನ ಪತ್ನಿಯೂ, ಮಕ್ಕಳೂ ಮಧುರ ಕಂಠದಿಂದ ತುಕಾರಾಮ್ ಮಹಾರಾಜರ ಮತ್ತು ಇತರ ಸಂತರ ಅಭಂಗಗಳನ್ನೂ ದೇವರನಾಮಗಳನ್ನೂ ಹಾಡುತ್ತಿದ್ದರು. ವೀರರಾಘವ ಐಯ್ಯರ್ ಮತ್ತು ಕೆಲವು ಸ್ನೇಹಿತರು ಕೀರ್ತನೆ ಕಾಲದಲ್ಲಿ ಅಲ್ಲಿ ಇರುತ್ತಿದ್ದರು. ಸಂಗೀತವಾಗುತ್ತಿರುವ ಎರಡು ಗಂಟೆಗಳ ಕಾಲ ಸ್ನೇಹಿತರು ಭಗವಧ್ಯಾನದಲ್ಲಿ ಮಗ್ನರಾಗಿರುತ್ತಿದ್ದರು.

ವೀರರಾಘವಐಯ್ಯರಿಗೆ ಅದಕ್ಕೆ ಸ್ವಲ್ಪ ದಿನಗಳ ಹಿಂದೆ ಖಾಯಲೆಯಾಗಿದ್ದಾಗ ನಡೆದ ಒಂದು ಅಸಾಧಾರಣವಾದ ಘಟನೆಯನ್ನು ಇಲ್ಲಿ ಸ್ವಲ್ಪ ವಿಶದವಾಗಿ ವಿವರಿಸ ಬೇಕಾಗಿದೆ. ಸ್ವಲ್ಪಕಾಲದ ಹಿಂದೆ ಈತನಿಗೆ ಬಹಳ ಖಾಯಿಲೆಯಾಗಿ, ಉಳಿಯು ವುದೇ ಅಸಾಧ್ಯವಾಗಿ ತೋರಿತು. ಬಾಹ್ಯಪ್ರಪಂಚಜ್ಞಾನ ತಪ್ಪಿ, ಸನ್ನಿ ಮುಚ್ಚಿ ಕೊಂಡಿತು. ಒಂದು ರಾತ್ರಿಯೆಲ್ಲಾ ಹೀಗೆ ಕಳೆಯಿತು. ಪತಿಪರಾಯಣೆಯಾದ ಆತನ ಪತ್ನಿ ಮಗ್ಗುಲಲ್ಲೇ ಶುಶ್ರೂಷೆಮಾಡುತ್ತಾ, ಈ ಕಠಿಣಸ್ಥಿತಿಯ ರಾತ್ರಿಯಲ್ಲಿ ಅವನನ್ನು ಕಾಯುತ್ತಿದ್ದಳು. ಸಮರಾತ್ರಿಯಾದಮೇಲೆ ನಿದ್ರೆಯನ್ನು ತಡೆಯಲಾರದೆ ತೂಕಡಿಸಿದಳು. ಸ್ವಲ್ಪ ನಿದ್ರೆ ಬಂದಿತು. ವಾಡಿಕೆಯ ಆತಂಕದಿಂದ ಎಚ್ಚರವಾದಾಗ ಅವಳು ಒಂದು ವಿಚಿತ್ರ ದೃಶ್ಯವನ್ನು ಕಂಡಳು. ತನ್ನ ಪತಿಯ ಮಗ್ಗುಲಲ್ಲಿ ಅವನ ಹಾಸಿಗೆಯಮೇಲೆ ಒಬ್ಬ ಸಂನ್ಯಾಸಿ ಕುಳಿತಿದ್ದುದು ಕಾಣಿಸಿತು. ಆ ಸಮಯದಲ್ಲಿ ಈತನು ಒಳಕ್ಕೆ ಹೇಗೆ ಬಂದನೆಂದು ಆಕೆಗೆ ಆಶ್ಚರ್ಯ. ಆದರೆ ಇಂಥ ಆಶಾದಾಯಕ ದೃಶ್ಯದಿಂದ ಬೇಗನೆ ತನ್ನ ಪತಿಗೆ ಗುಣವಾಗುವುದೆಂಬ ಸಂತೋಷದಿಂದ ಆಕೆಯ ಮನಸ್ಸು ಉಬ್ಬಿತು. ಆ ದೃಶ್ಯ ಕಾಣಿಸಿದುದು ಕೇವಲ ಕೆಲವು ಕ್ಷಣಗಳವರೆಗೆ. ಸಾಧುವಿನ ಮೂರ್ತಿ ಮರೆಯಾಯಿತು. ಆದರೆ ಅವಳ ಹೃದಯ ಸಂತೋಷದಿಂದಲೂ ನಂಬಿಕೆಯಿಂದಲೂ ಸ್ಪಂದಿಸಿತು. ಬೆಳಗ್ಗೆ ವೀರರಾಘವಯ್ಯರಿಗೆ ಮೊದಲಿನಂತೆ ಪ್ರಜ್ಞೆ ಬಂದು ಸ್ಪಷ್ಟವಾಗಿ ಗುಣಮುಖವಾಗಿ ಕೆಲವು ದಿವಸಗಳೊಳಗಾಗಿ ಖಾಯಿಲೆ ಸಂಪೂರ್ಣವಾಗಿ ವಾಸಿಯಾಯಿತು. ಒಂದು ಸಂಗತಿ. ರಾಮದಾಸನು ಎರ್ನಾಕುಲಂಗೆ ಹೋದಾಗಲೆಲ್ಲಾ ವೀರರಾಘವ ಐಯ್ಯರ್ ಅವನನ್ನು ಸಂಜೀವರಾಯನ ಮನೆಯಲ್ಲಿ ನೋಡುತ್ತಿದ್ದನಾದರೂ ಅವನ ಪತ್ನಿ ರಾಮದಾಸನನ್ನು ನೋಡುವ ಸಂದರ್ಭವಿರಲಿಲ್ಲ.

ವೀರರಾಘವಐಯ್ಯರಿಗೆ ಸಂಪೂರ್ಣವಾಗಿ ವಾಸಿಯಾದಮೇಲೆ ಆಕೆ ಆ ರಾತ್ರಿ ತನಗೆ ಕಾಣಿಸಿದ ದೃಶ್ಯದ ವಿಚಾರವನ್ನು ತನ್ನ ಪತಿಗೆ ತಿಳಿಸಿದಳು. ತನಗೆ ಕಂಡ ಸಂನ್ಯಾಸಿಯ ಆಕಾರವನ್ನು ಸ್ಫುಟವಾಗಿ ವರ್ಣಿಸಿದಳು. ವೀರರಾಘವ ಐಯ್ಯರಿಗೆ ಆಶ್ಚರ್ಯಕರವಾಗಿದ್ದದ್ದು ಏನೆಂದರೆ, ಆಕೆಯ ವರ್ಣನೆ ವಿವರ ವಿವರದಲ್ಲಿ ಸರಿಯಾಗಿ ರಾಮದಾಸನಿಗೆ ಅನ್ವಯಿಸುವುದೆಂದು ಅವನಿಗೆ ತೋರಿತು. ಅದನ್ನು ಅವನು ಆಕೆಗೆ ಹೇಳಲು ಆಕೆಗೆ ರಾಮದಾಸನನ್ನು ನೋಡಬೇಕೆಂದು ಬಹು

ಅಪೇಕ್ಷೆಯಾಯಿತು. ಐಯ್ಯರು ಈ ಸಂಗತಿಯನ್ನು ತನ್ನ ಸ್ನೇಹಿತರನೇಕರಿಗೆ ಹೇಳಿದನು. ಈ ಸಲ ರಾಮದಾಸನು ಎರ್ನಾಕುಲಂನಲ್ಲಿ ಇದ್ದವೇಳೆ ವೀರರಾಘವ ಐಯ್ಯರ ಧರ್ಮಪತ್ನಿ ರಾಮದಾಸನನ್ನು ನೋಡಲೋಸುಗವೇ, ಮರ್ಯಾದೆಯ ವಸ್ತುಗಳನ್ನು ಸಂಜೀವರಾಯನ ಮನೆಗೆ ತೆಗೆದುಕೊಂಡು ಬಂದು, ಆ ಸ್ಮೃತಿ ಯೋಗ್ಯವಾದ ರಾತ್ರಿಯಲ್ಲಿ ಈಗ ರಾಮದಾಸನಲ್ಲಿ ನೋಡುತ್ತಿದ್ದ ಇದೇ ಸಂನ್ಯಾಸಿಯ ಮೂರ್ತಿಯನ್ನು ಕಂಡಿದ್ದೆನೆಂದು ತಾನು ನಿಶ್ಚಯಮಾಡಿಕೊಂಡು ಎಲ್ಲರಿಗೂ ನಂಬಿಕೆಯುಂಟಾಗುವಂತೆ ತಿಳಿಸಿದಳು. ಭಗವಂತನ ಲೀಲೆ ನಿಜವಾಗಿ ಆಶ್ಚರ್ಯ ಕರವಾದುದು. ಎರ್ನಾಕುಲಂನಲ್ಲಿ ಇರಬೇಕಾದ ದಿನ ಮುಗಿದು ರಾಮದಾಸನು ಅಲ್ಲಿಂದ ಹೊರಟು ಕಾಸರಗೋಡಿಗೆ ಪ್ರಯಾಣಮಾಡಿ ಆ ಊರನ್ನು ಸಕಾಲದಲ್ಲಿ ಸೇರಿದನು.

## (iv) ಆನಂದಾಶ್ರಮ

ರಾಮದಾಸನು ಕಾಸರಗೋಡನ್ನು ಮುಟ್ಟಿ, ಗುರುದೇವನ ಮತ್ತು ಇತರರ ದರ್ಶನ ಪಡೆದಮೇಲೆ, ಆನಂದರಾಯರ ಮನೆಯಲ್ಲಿ ನಿಂತನು. ಅವರ ಕಛೇರಿಯ ಕೆಲಸಕ್ಕಾಗಿ ಇರುವ ಸಣ್ಣ ಕೊಟಡಿಯಲ್ಲಿ ವಾಸಮಾಡಲು ಆರಂಭಿಸಿದನು. ಆನಂದರಾಯರು ರಾಮದಾಸನಿಗೋಸ್ಕರ ಒಂದು ಆಶ್ರಮ ವನ್ನು ಕಟ್ಟುವ ಯೋಚನೆಯಲ್ಲಿದ್ದರು. ರಾಮದಾಸನ ಬರುವಿಕೆಯನ್ನು ನಿರೀಕ್ಷಿಸುತ್ತಿದ್ದರು. ಅವರು ಒಂದು ಬೆಳಿಗ್ಗೆ ರಾಮದಾಸನನ್ನೂ ಇತರ ಕೆಲವರನ್ನೂ ಕರೆದುಕೊಂಡು ಆಶ್ರಮಕ್ಕೆ ಅನುಕೂಲವಾದ ಒಂದು ನಿವೇಶನವನ್ನು ಹುಡುಕಲು ಪಿಲಿಕುಂಜಿಬೆಟ್ಟಕ್ಕೆ ಹೋದರು. ಕೊನೆಗೆ ಒಂದು ಪ್ರಶಸ್ತವಾದ ಸ್ಥಳ ಕಾಣಿಸಿತು. ಇದು ಚಂದಾವಾರದ ಸಂಜೀವರಾಯರಿಗೆ ಸೇರಿದ್ದು. ಆತನೊಂದಿಗೆ ಪ್ರಸ್ತಾಪಿಸಿದಮೇಲೆ ಆತನು ಆ ಸಣ್ಣ ನಿವೇಶನವನ್ನು ಪೂರ್ಣವಾಗಿ ಆಶ್ರಮಕ್ಕೆ ದಾನಮಾಡುವುದಾಗಿ, ಮುಂದೆ ಯಾವ ಕಾಲದಲ್ಲಾದರೂ ಆಶ್ರಮ ಧಾರ್ಮಿಕ ಸಂಸ್ಥೆಯಾಗಿರುವುದು ನಿಂತುಹೋದರೆ ನಿವೇಶನ ತನಗೆ ಹಿಂದಕ್ಕೆ ಬರಬೇಕೆಂಬ ನಿಯಮದಮೇಲೆ ಒಪ್ಪಿದನು.

ಆಶ್ರಮನಿರ್ಮಾಣದ ಕೆಲಸವನ್ನು ಆನಂದರಾಯರು ಪಟ್ಟಾಗಿ ಹಿಡಿದು ಮಳೆಗಾಲ ಸಮಿಪಿಸುತ್ತಿದ್ದುದರಿಂದ ಜಾಗ್ರತೆ ನಡೆಸಿದರು. ಆಶ್ರಮದಲ್ಲಿ ಒಂದು ಸಣ್ಣ ಕೋಣೆ ಒಂದು ಚೌಕವಾದ ಕೈಸಾಲೆ ಇದ್ದುವು. ಕೋಣೆಯಲ್ಲಿ ಗೋಡೆಗೆ ಸೇರಿದಂತೆ ಮಂಚದಹಾಗಿರುವ ಜಗುಲಿ ಇದ್ದಿತು. ಕೈಸಾಲೆ ಬಂದವರು ಕುಳಿತುಕೊಳ್ಳುವುದಕ್ಕೂ ಕೀರ್ತನೆ ನಡೆಸುವುದಕ್ಕೂ ಆಗುವಂತಿದ್ದಿತು. ಆಶ್ರಮದ ಸುತ್ತ ನಾಲ್ಕು ಕಡೆಯೂ ತುಲಸೀಗಿಡಗಳ ಒಂದು ಪಟ್ಟಿಯನ್ನು ಬೆಳೆಸಿದರು. ಆ ಸ್ಥಳ ತನ್ನದೇ ಒಂದು ಶೋಭೆಯಿಂದ ಪ್ರಕಾಶಿಸುತ್ತಿದ್ದಿತು. ಆಶ್ರಮದ ದಕ್ಷಿಣ ಭಾಗದಲ್ಲಿ ಪಯಸ್ವಿನೀನದಿಯ ಸುಂದರವಾದ ದೃಶ್ಯ ಮತ್ತು ಹಸರುಗದ್ದೆಗಳು ಎದುರುಗಡೆ

ಎತ್ತರವಾದ ದಟ್ಟವಾದ ಮರಗಳಿಂದ ಕೂಡಿದ ಬೆಟ್ಟಗಳು ಕಂಗೊಳಿಸುತ್ತಿದ್ದುವು. ನದಿಯ ಪಾರ್ಶ್ವದಿಂದ ಬರುವ ತಂಪಾದ ಮಂದಮಾರುತ ಯಾವಾಗಲೂ ಆಶ್ರಮದ ಮೇಲೆ ಬೀಸುತ್ತಿದ್ದಿತು. ಪ್ರಾತಃಕಾಲದಲ್ಲೂ ಸಂಧ್ಯಾಕಾಲದಲ್ಲೂ ವಾಯುಮಂಡಲ ಪಕ್ಷಿಗಳ ಕಲಕಲಧ್ವನಿಯಿಂದ ತುಂಬುತ್ತಿದ್ದಿತು. ಆಶ್ರಮದಲ್ಲಿ ನಿಲ್ಲುವ ಮುಂಚೆ ರಾಮದಾಸನು ಮಂಗಳೂರಿಗೂ ಪುತ್ತೂರಿಗೂ ಅವಸರವಸರವಾಗಿ ಹೋಗಿ ಬಂದನು. ಕುಬೇರ್ ಆನಂದರಾಯರು ಇವನನ್ನು ಪುತ್ತೂರಿಗೆ ಕರೆದುಕೊಂಡು ಹೋಗಿದ್ದರು. ಇಲ್ಲಿ ರಾಮದಾಸನು ಪೋಲೀಸ್ ಇನ್ಸ್ಪೆಕ್ಟರ್ ಸುಂದರರಾಯರ ಮನೆಯಲ್ಲಿಳಿದಿದ್ದನು. ಅವನು ಬಂದಿರುವ ಸಮಾಚಾರವನ್ನು ಕೇಳಿ ಪುತ್ತೂರಿನ ಅನೇಕ ಸ್ನೇಹಿತರೂ ಮಾತೆಯರೂ ರಾಮದಾಸನನ್ನು ನೋಡಲು ಬಂದರು. ಹುಡುಗರ ಏಳ್ಗೆಯಲ್ಲಿ ಬಹಳ ಆಸಕ್ತಿಯನ್ನು ಹೊಂದಿದ್ದ ಒಬ್ಬ ಉದ್ಯಮ ಶಾಲಿಯಾದ ಯುವಕನು ಶಾಂತಿಶಿಬಿರವೆಂಬ ಹೆಸರಿನಿಂದ ಒಂದು ಪ್ರಯೋಗ ಪಾಠಶಾಲೆಯನ್ನು ತೆರೆದಿದ್ದನು. ಇದರಲ್ಲಿ ಹುಡುಗರಿಗೆ ದೇಹ ಮತ್ತು ಮನಸ್ಸು ಎರಡರ ಸಂಯಮದಲ್ಲಿಯೂ ಶಿಕ್ಷಣಕೊಡುತ್ತಿದ್ದರು; ಉಪ್ಪು ಕಾರವನ್ನು ಸೇರಿಸದೆ ಸಪ್ಪೆ ಆಹಾರವನ್ನು ಕೊಡುತ್ತಿದ್ದರು. ಈ ಸಂಸ್ಥೆಯನ್ನು ನಡೆಯಿಸುತ್ತಿದ್ದುದರ ಮುಖ್ಯ ಸೂತ್ರ ಬ್ರಹ್ಮಚರ್ಯಪಾಲನೆ. ವಿದ್ಯಾರ್ಥಿಗಳು ಹಿಂದೂಸ್ಥಾನದ ಪರಿಶುದ್ಧರಾದ ಯೋಗ್ಯರಾದ ನಿರ್ಭೀತರಾದ ಮಕ್ಕಳಾಗುವಂತೆ ಅವರ ಬಾಳು ನಡೆವಳಿಕೆಗಳಲ್ಲಿ ಕಟ್ಟುಮಾಡಿ ಅವರ ಪ್ರವೃತ್ತಿಯನ್ನು ಅಧೀನದಲ್ಲಿರಿಸಲು ಅನೇಕ ನಿಯಮಗಳನ್ನು ವಿಧಿಸಲಾಗಿದ್ದಿತು.

ಶ್ರದ್ಧಾವಂತನೂ, ಆಡಂಬರರಹಿತನೂ ಶುದ್ಧಜೀವಿಯೂ ಆದ ಹೈಸ್ಕೂಲ್ ಮುಖ್ಯೋಪಾಧ್ಯಾಯ ರಾಮನ್ ನಂಬಿಯಾರ್ ಎಂಬಾತನು ರಾಮದಾಸನನ್ನು ಈ ಸಂಸ್ಥೆಗೆ ಭೇಟಿಕೊಡಬೇಕೆಂದು ಆಹ್ವಾನಿಸಿದನು. ಹೀಗೆ ರಾಮದಾಸನು ಈ ಸಂಸ್ಥೆಯ ತರುಣ ಸಾಧಕರ ಮತ್ತು ಅವರ ದೇಶಪ್ರೇಮಿಯಾದ ನಾಯಕನ ಸಂಸರ್ಗವನ್ನು ಪಡೆದನು. ಬ್ರಹ್ಮಚರ್ಯದ ವಿಚಾರವಾಗಿ ಕೆಲವು ಹಿತೋಕ್ತಿಗಳನ್ನು ಹೇಳಬೇಕೆಂದು ಕೇಳಿಕೊಂಡಕಾರಣ ರಾಮದಾಸನು ಆ ಬಗ್ಗೆ ಒಂದು ಸಣ್ಣ ಭಾಷಣಮಾಡಿದನು.

ಪುತ್ತೂರಿನಲ್ಲಿ ನಿಂತ ವೇಳೆ ಸಂಭವಿಸಿದ ಗಮನಾರ್ಹವಾದ ಇನ್ನೊಂದು ವಿಚಾರ ಆ ಊರಿನ ವೃದ್ಧಸಾಧು ಶ್ರೀ ಕೃಷ್ಣರಾಯರ ಪ್ರಸಿದ್ಧವಾದ ಶ್ರೀ ಕೃಷ್ಣ ಮಂದಿರಕ್ಕೆ ಭೇಟಿ ಕೊಟ್ಟದ್ದು. ಆ ಸಾಧುವನ್ನು ಎಲ್ಲರೂ ಕುಟ್ಟನ್‌ಮಾಮ ಎಂದೇ ಕರೆಯುವ ವಾಡಿಕೆ. ಈತನು ದಯಾಮಯ ಮತ್ತು ಪ್ರೇಮಮೂರ್ತಿ. ದೇವತಾಸೇವೆಯಲ್ಲಿ ಅನನ್ಯ ಸಾಧಾರಣದ ಹೆಸರು ಪಡೆದು ಪರಿಶುದ್ಧ, ಭಕ್ತಿಯುಕ್ತ, ಸರಳಜೀವನವನ್ನು ನಡೆಸುತ್ತಿದ್ದನು. ಈ ಶ್ರೇಷ್ಠ ಸಾಧುವಿನ ಅಧ್ಯಕ್ಷತೆಯ ಈ ಕೃಷ್ಣಮಂದಿರದಲ್ಲಿ ಕೀರ್ತನೆ, ಭಜನೆ, ಪುರಾಣಪಠನ ಸದಾ ನಡೆಯುತ್ತಿದ್ದುವು.

ರಾಮದಾಸನು ಸುಂದರರಾಯರ ಮನೆಯಲ್ಲಿ ಭಕ್ತಿ ಮತ್ತು ಇದಕ್ಕೆ ಸಂಬಂಧಪಟ್ಟ ವಿಷಯಗಳ ಮೇಲೆ ಕೆಲವು ಉಪನ್ಯಾಸಗಳನ್ನು ಮಾಡಿದನು. ಈ ಉಪನ್ಯಾಸಗಳನ್ನು ಕೇಳಲು ಮಾತೆಯರೇ ಹೆಚ್ಚಾಗಿ ಬರುತ್ತಿದ್ದರು. ರಾಮದಾಸನನ್ನು ಅನೇಕ ಮನೆಗಳಿಗೆ ಭೋಜನಕ್ಕಾಗಿಯೂ, ಭಜನೆಗಾಗಿಯೂ ಕರೆದುಕೊಂಡು ಹೋಗುತ್ತಿದ್ದರು. ರಾಮದಾಸನ ಪೂರ್ವಾಶ್ರಮದ ಸಹೋದರ ನರಸಿಂಗರಾಯನೂ ರಾಮದಾಸನನ್ನು ಒಂದು ರಾತ್ರಿ ತನ್ನ ಮನೆಗೆ ಭೋಜನಕ್ಕೂ ಕೀರ್ತನಕ್ಕೂ ಕರೆದುಕೊಂಡು ಹೋಗಿದ್ದನು. ಇಲ್ಲಿ ರಾಮದಾಸನು ಗೋಪಾಲಪೈ ಎಂಬ ಭಕ್ತನ ಮೇಲೆ ರಾಮನಾಮ ಬೀರಿದ ಪ್ರಭಾವವನ್ನು ಗಮನಿಸಿದನು. ಈತನು ನಿದ್ರೆ ಮಾಡುವಾಗಲೂ ಇವನ ಬಾಯಿಂದ ರಾಮನಾಮ ಕೇಳಬರುತ್ತಿದ್ದಿತು. ಈತನ ಗೊರಕೆ ಕೂಡ ಗಟ್ಟಿಯಾದ ಮಂತ್ರೋಚ್ಚಾರಣೆಯ ರೀತಿಯಲ್ಲಿರುತ್ತಿದ್ದಿತು.

ರಾಮದಾಸನು ಕಾಸರಗೋಡಿಗೆ ಹಿಂತಿರುಗಿದ ಕೊಂಚ ಕಾಲದಲ್ಲೆ ಅವನು ಮಂಗಳೂರಿಗೆ ಹೋಗಿ ಅಲ್ಪಕಾಲವಿದ್ದನು. ಅಲ್ಲಿ ಸೀತಾರಾಮರಾಯರ ಮನೆಯಲ್ಲಿ ಇಳಿದುಕೊಂಡು ರುಕುಮಾಬಾಯಿಯ ತಂದೆಯ ಮನೆಯಲ್ಲಿ ಆ ತಾಯನ್ನು ಭೇಟಿಮಾಡಿದನು. ಸೀತಾರಾಮರಾಯರ ಮನೆಯಲ್ಲಿ ಇವನಿಗೆ ವಿದ್ಯಾವಂತನಾದ ಒಬ್ಬ ಪರಿವ್ರಾಜಕ ಸಾಧುವಿನ ಭೇಟಿಯಾಯಿತು. ಆತನು ರಾಮದಾಸನೊಂದಿಗೆ ದೇವರ ಇರುವಿಕೆಯ ಪ್ರಮಾಣದ ವಿಚಾರವಾಗಿ ಸಂಭಾಷಣೆಗೆ ಆರಂಭ ಮಾಡಿದನು. ರಾಮದಾಸನು ಆತನ ಸಂಗಡ ನಾಲ್ಕು ಮಾತನಾಡಿದನು. ಆದರೆ ಆತನು ನಂಬಿಕೆ ಇಲ್ಲದವನೆಂದೂ ಮತ್ತು ತೋರಿಸಿಕೊಟ್ಟುದನ್ನು ಒಪ್ಪುವವನಲ್ಲವಾಗಿಯೂ ಕಂಡುಬಂದುದರಿಂದ ರಾಮದಾಸನು ಹೆಚ್ಚಾಗಿ ಚರ್ಚೆಯಲ್ಲಿ ಪ್ರವೇಶಿಸಲು ಒಪ್ಪಲಿಲ್ಲ.

ಒಂದು ಮಧ್ಯಾಹ್ನ ರಾಮದಾಸನು ಕೆಲವು ಮಾತೆಯರೊಂದಿಗೆ ಮನೆಯ ಕೈಸಾಲೆಯಲ್ಲಿ ಕುಳಿತಿದ್ದಾಗ ಒಬ್ಬ ಯುವಕನು ಬಾಳೆಯ ಹಣ್ಣುಗಳ ಒಂದು ಗೊನೆಯನ್ನು ಹಿಡಿದುಕೊಂಡು ಅಂಗಳದ ಬಾಗಿಲಿನಲ್ಲಿ ನಿಂತಿದ್ದುದು ಕಾಣಿಸಿತು. ಇವನು ಅರ್ಧ ಗಂಟೆಯಕಾಲ ಅಂಗಳದ ಕಡೆಯೇ ನೋಡುತ್ತಾ ನಿಂತಿದ್ದನು. ಮಾತೆಯರೆಲ್ಲರೂ ಎದ್ದು ಹೋದಮೇಲೆ ಅವನು ಹತ್ತಿರಕ್ಕೆ ಬಂದು ರಾಮದಾಸನಿಗೆ ಹಣ್ಣಿನ ಗೊನೆಯನ್ನು ಕಾಣಿಕೆಯಾಗಿ ಕೊಟ್ಟು ಆವನ ಪಾದದ ಬಳಿ ದೀರ್ಘದಂಡ ಪ್ರಣಾಮಮಾಡಿದನು. ರಾಮದಾಸನು ಅವನನ್ನು ಮಗ್ಗುಲಲ್ಲಿ ಕುಳ್ಳಿರಿಸಿಕೊಂಡು ಭಗವನ್ನಾಮದಮಹಿಮೆ ಮತ್ತು ಭಗವಂತನನ್ನು ಕುರಿತ ನಿಜವಾದ ಭಕ್ತಿಯ ಆನಂದದ ವಿಚಾರವಾಗಿ ಬೋಧೆಮಾಡುತ್ತ ಹೋದನು. ರಾಮದಾಸನು ಮಾತನಾಡಿದಹಾಗೆ ಆ ಯುವಕನ ಕಣ್ಣುಗಳಲ್ಲಿ ಆನಂದಾಶ್ರು ತುಂಬಿ ಧಾರೆಯಾಗಿ ಕೆನ್ನೆಗಳ ಮೇಲೆ ಹರಿದುವು. ರಾಮದಾಸನು ಮಾತನ್ನು ನಿಲ್ಲಿಸಿದಾಗ ಆತನು ಮರಳಿ ರಾಮದಾಸನ ಪಾದದಲ್ಲಿ ದೀರ್ಘದಂಡ ಪ್ರಣಾಮಮಾಡಿ,

"ನನಗೆ ರಾಮಮಂತ್ರವನ್ನು ಉಪದೇಶಮಾಡಿ ಅನುಗ್ರಹಿಸಿ" ಎಂದು ಬೇಡಿಕೊಂಡನು.

ಕೂಡಲೆ ರಾಮದಾಸನು ಅವನಿಗೆ ರಾಮಮಂತ್ರವನ್ನು ಉಪದೇಶ ಮಾಡಿದನು. ಅನಂತರ ಆತನು ಹೊರಟುಹೋದನು. ರಾಮದಾಸನು ಮರುದಿನ ಕಾಸರಗೋಡಿಗೆ ಪ್ರಯಾಣಮಾಡಬೇಕಾಗಿದ್ದಿತು. ಪ್ರಯಾಣಕಾಲಕ್ಕೆ ಒಂದು ಗಂಟೆ ಮುಂಚೆ ಈ ಯುವಕನು ಹಠಾತ್ತಾಗಿ ಬಂದನು. ಅವನು ತೀರಾ ಬೇರೆಯ ಮನುಷ್ಯನಾಗಿದ್ದನು. ಅವನ ಮೇಲೆ ಕಾಷಾಯವಸ್ತ್ರವಿದ್ದಿತು; ತಲೆಗೆ ಮುಂಡನ ವಾಗಿದ್ದಿತು; ಕೈಯಲ್ಲಿ ಒಂದು ಲೋಟ ಇದ್ದಿತು.

ಇವನು ಹರ್ಷಚಿತ್ತನಾದ ಆರೋಗ್ಯವಂತನಾದ ಹುಡುಗ. ಇವನ ಕಣ್ಣು ಗಳಲ್ಲಿ ಧ್ಯಾನಸೂಚಕವಾದ ಹೊಳಪು ಕಾಣುತ್ತಿದ್ದಿತು. ಮಂಗಳೂರಿನಲ್ಲಿ ಒಂದು ಫಲಾಹಾರಮಂದಿರವನ್ನು ನಡೆಸುತ್ತಿದ್ದ ನಾಲ್ಕು ಜನ ಸಹೋದರರಲ್ಲಿ ಇವನು ಕಿರಿಯವನು. ಹಿರಿಯವನು ಭಕ್ತಜೀವ, ತನ್ನ ಕಾಲವನ್ನು ವಿಶೇಷವಾಗಿ ಕೀರ್ತನ ಭಜನೆಯಲ್ಲಿ ಕಳೆಯುತ್ತಿದ್ದನು. ರಾಮದಾಸನು ಈ ಯುವಕನ ಸಂನ್ಯಾಸ ಸ್ವೀಕಾರ ವಿವರವನ್ನು ಈ ಹಿರಿಯವನಿಂದ ಕೇಳಿ ತಿಳಿದನು. ರಾಮದಾಸನನ್ನು ಬಿಟ್ಟು ಹೋದದ್ದೇ ಈ ತಮ್ಮ, ಇವನ ಹೆಸರು ರಾಯು, ಕೂಡಲೆ ತಲೆಯನ್ನು ಕ್ಷೌರ ಮಾಡಿಸಿಕೊಂಡು, ತನ್ನ ಬಟ್ಟೆಗಳಿಗೆ ಕಾವಿ ಹಾಕಿಸಿ, ಪ್ರಥಮ ಭಿಕ್ಷಕ್ಕೆ ತನ್ನ ಸಹೋದರರ ಮನೆಯ ಮುಂದೆ ನಿಂತು ದೇವರ ಹೆಸರನ್ನು ಘೋಷಿಸಿ ಭಿಕ್ಷ ಬೇಡಿದನಂತೆ. ರಾಯುವಿನ ಬದಲಾವಣೆಯನ್ನು ನೋಡಿ ಅವನ ಸಹೋದರರಿಗೆ ವ್ಯಥೆಯೂ ವಿಸ್ಮಯವೂ ಆದುವು. ದೀಕ್ಷೆಯನ್ನು ಬಿಟ್ಟುಬಂದು ನಮ್ಮೊಡನೆ ವಾಸಮಾಡು ಎಂದು ಅವರು ಅವನಿಗೆ ಬುದ್ಧಿವಾದ ಹೇಳಿದರಂತೆ. ಅವನು ಅದಕ್ಕೆ "ನಾನು ನಿಮ್ಮಲ್ಲಿ ಯಾರಿಗಾಗಲಿ ಸಂಬಂಧಿಸಿದವನಲ್ಲ. ಇನ್ನು ಮೇಲೆ ನಿಮ್ಮವನಲ್ಲ. ಇನ್ನು ನಾನು ಭಗವಂತನ ವಸ್ತು, ನನ್ನ ಜೀವನ ಅವನ ಭಕ್ತಿ ಸೇವೆಗಳಿಗಾಗಿ ಇದೆ" ಎಂದನಂತೆ. ಭಿಕ್ಷ ದೊರೆತ ಮೇಲೆ ಅವನು ಅಲ್ಲಿಂದ ಹೊರಟು ನೆಟ್ಟಗೆ ಸೀತಾರಾಮರಾಯರ ಮನೆಗೆ ರಾಮದಾಸನ ಬಳಿಗೆ ಬಂದನು. ಅವನು ರಾಮದಾಸನೊಡನೆ ಕಾಸರಗೋಡಿಗೆ ಬಂದನು. ಆನಂದರಾಯರ ಮನೆಯಲ್ಲಿ ಒಂದು ವಾರವಿದ್ದು ಉತ್ತರ ಹಿಂದೂಸ್ಥಾನದ ಕಡೆಗೆ ತೆರಳಿದನು.

ಆಶ್ರಮದ ಕೆಲಸ ರಭಸದಿಂದ ಸಾಗಿತು. ಎಲ್ಲವೂ ಸಿದ್ಧವಾದ ನಂತರ ರಾಮದಾಸನು, ಕುಬೇರ್ ಆನಂದರಾಯರು, ಸವೂರ್ ಶಂಕರರಾಯರು ಮತ್ತು ಇತರ ಮಿತ್ರರೊಂದಿಗೆ ಭಗವನ್ನಾಮವನ್ನು ಹಾಡುತ್ತಾ ಆಶ್ರಮವನ್ನು ಪ್ರವೇಶಿಸಿ ದನು. ಆನಂದರಾಯರೂ ಮತ್ತು ಸವೂರ್ ಶಂಕರರಾಯರೂ ಈ ಸಮಾರಂಭ ಕ್ಕಾಗಿಯೇ ದಯಮಾಡಿಸಿದ್ದರು. ಗುರುದೇವನು ವೃದ್ಧಾಪ್ಯದಿಂದ ನಿಶ್ಯಕ್ತಿಯಾಗಿ ದ್ದರೂ, ಸಮಾರಂಭದಲ್ಲಿ ಭಾಗಿಯಾಲು ಅಪೇಕ್ಷಿಸಿದ್ದರಿಂದ ತಾನೂ ದಯ

ಮಾಡಿಸಿದ್ದನು. ಒಂದು ಗಂಟೆಗೆ ಮೇಲ್ಪಟ್ಟ ಕಾಲ ಭಜನೆ ನಡೆಯಿತು. ಭಕ್ತಿಪೂರಿತ ಮಾತೆಯರು ಕೆಲವು ಒಳ್ಳೆಯ ದೇವರನಾಮಗಳನ್ನು ಹಾಡಿದರು. ಕಾರ್ಯಕ್ರಮದ ಕೊನೆಯಲ್ಲಿ ರಾಮದಾಸನು ವಿಶ್ವದರ್ಶನದ ವಿಚಾರವಾಗಿ ಸುಮಾರು ಅರ್ಧ ಗಂಟೆಯ ಕಾಲ ಉಪನ್ಯಾಸ ಮಾಡಿದನು. ಪ್ರಸಾದ ವಿನಿಯೋಗ ವಾದ ನಂತರ ಮಿತ್ರರು ತೆರಳಿದರು.

---

# ಅಧ್ಯಾಯ ೪೪

## ಕಾಸರಗೋಡು

ಈ ಪುಸ್ತಕದ ಇದುವರೆಗಿನ ಅಧ್ಯಾಯಗಳನ್ನು ಕೆಲವು ವರ್ಷಗಳ ಹಿಂದೆ ಬರೆಯಲಾಯಿತು. ಕಥನವನ್ನು ಇಂದಿನವರೆಗೆ ತರುವುದಕ್ಕೋಸ್ಕರ ಮುಂದಣ ಅಧ್ಯಾಯಗಳನ್ನು ಈಗ ಸೇರಿಸುವುದಾಗಿದೆ. ರಾಮದಾಸನ ಇತ್ತೀಚಿನ ಅನು ಭವಗಳ ಪ್ರಮುಖ ವಿವರಣೆಗಳನ್ನು ಮಾತ್ರ ತಿಳಿಸಿ ಈ ಪೂರಕ ಅಧ್ಯಾಯಗಳನ್ನು ಆದಷ್ಟು ಸಂಕ್ಷೇಪವಾಗಿ ರಚಿಸಬೇಕೆಂದು ಯೋಚಿಸಿದೆ.

ಕಾಸರಗೋಡು ಆಶ್ರಮದಲ್ಲಿದ್ದ ಕಾಲವೂ ಉಲ್ಲೇಖಯೋಗ್ಯವಾದ ಕೆಲವು ಘಟನೆಗಳಿಂದ ಕೂಡಿದ್ದಿತು. ಆರಂಭದ ಭಾಗ, ಭಜನೆಗಾಗಿಯೂ, ರಾಮದಾಸನ ಉಪನ್ಯಾಸಗಳನ್ನು ಕೇಳುವುದಕ್ಕಾಗಿಯೂ, ಜನರು ಗುಂಪು ಗುಂಪಾಗಿ ಬಂದ ದ್ದನ್ನು ಹೊರತು ಮಿಕ್ಕಂತೆ ಸುಗಮವಾಗಿ ನಡೆಯಿತು. ಅನಂತರ ಕೊಂಚಕಾಲ ಉತ್ಸವಗಳಿಂದ ತುಂಬಿದ್ದಿತು. ಈ ಉತ್ಸವಗಳಲ್ಲಿ ಭಗವನ್ನಾಮ, ಭಗವನ್ಮಾ ಹಾತ್ಮ್ಯದ ಸಂಕೀರ್ತನೆ ಇಪ್ಪತ್ತುನಾಲ್ಕು ಗಂಟೆಗಳೂ ಅವಿರಳವಾಗಿ ನಡೆಯುತ್ತಿ ದ್ದಿತು. ಇದರಲ್ಲಿ ಕಾಸರಗೋಡಿನ ನೂರಾರುಜನ ಭಕ್ತರು ನೆರೆಯುತ್ತಿದ್ದರು.

ಆಧ್ಯಾತ್ಮ ಜ್ಞಾನಾಭಿಲಾಷೆಯುಳ್ಳ ತರುಣರೂ ವೃದ್ಧರೂ ಆಶ್ರಮವನ್ನರಸಿ ಬರುತ್ತಿದ್ದರು. ಇವರಲ್ಲಿ ನಿರಂತರ ಸಾಧಕರೆನ್ನಬಹುದಾದ ಕೆಲವರ ವಿಚಾರವನ್ನು ಹೇಳಬಹುದಾಗಿದೆ. ನಿರಂತರ ಸಾಧಕರೆಂದರೆ ಇವರು ರಾತ್ರಿಯಲ್ಲಿಯೂ ಆಶ್ರಮದಲ್ಲಿ ನಿಲ್ಲುತ್ತಿದ್ದರು. ರಾಮನಾಥಕಿಣಿ, ಕಂಡ, ಪೂರ್ಣಾನಂದ, ಮತ್ತು ಕೃಷ್ಣಪ್ಪ ಇವರು ಮುಖ್ಯ ಸಾಧಕರು. ರಾಮನಾಥಕಿಣಿ ಯುವಕ. ಇವನಿಗೆ ದೇವರಲ್ಲಿ ಅಚಲವಾದ ಭಕ್ತಿ ಇದ್ದುದು ಮಾತ್ರವಲ್ಲದೆ, ಪ್ರಪಂಚಸುಖದ ವಿಚಾರದಲ್ಲಿ ವಿರಕ್ತಭಾವವೂ ಇದ್ದಿತು. ಕೃಷ್ಣಪ್ಪನೂ ಅತ್ಯಂತ ಶ್ರದ್ಧಾವಂತನೂ ಉತ್ಸಾಹಶಾಲಿಯೂ ಆದ ಭಕ್ತ. ಕಂಡ ಮತ್ತು ಪೂರ್ಣಾನಂದರು ಗಳಿತ ವಯಸ್ಸಿನ ವೃದ್ಧರು. ಇವರು ತಮ್ಮ ಕಾಲವನ್ನು ಮುಖ್ಯವಾಗಿ ಭಜನೆ ಜಪಗಳಲ್ಲಿ ಕಳೆಯುತ್ತಿದ್ದರು. ಇವರು ಒಬ್ಬೊಬ್ಬರೂ ರಾಮದಾಸನನ್ನು ಅತ್ಯಂತ ಪ್ರೀತಿ ಆದರಗಳಿಂದ ಕಾಣುವರು. ರಾಮದಾಸನ

ಆಹಾರವನ್ನು ಆನಂದಬಾಯಿಯರು ಒದಗಿಸುತ್ತಿದ್ದರು. ಮಧ್ಯಾಹ್ನದ ಹೊತ್ತು ಸ್ವಲ್ಪ ಅನ್ನ, ಹಾಲು, ಪಲ್ಯ ; ರಾತ್ರಿಯಲ್ಲಿ ಹಾಲು ಮತ್ತು ಹಣ್ಣು. ಶಾಂತವಾದ ವಿವಿಕ್ತ ಪ್ರದೇಶದಲ್ಲಿದ್ದರೂ, ರಾಮದಾಸನು ಸಂಭಾಷಣೆ, ಪತ್ರವ್ಯವಹಾರ ಮುಂತಾದ ಕಾರ್ಯಗಳಲ್ಲಿ ರಾತ್ರಿ ಬಹಳ ಹೊತ್ತಿನವರೆಗೂ ಎದ್ದಿರುತ್ತಿದ್ದನು.

ಆಶ್ರಮದಲ್ಲಿದ್ದಾಗ ನಡೆದ ಕೆಲವು ಮುಖ್ಯ ಸಂಗತಿಗಳನ್ನು ಇಲ್ಲಿ ಈಗ ವಿವರಿಸಲಾಗುತ್ತದೆ.

ಮಾತಾ ಕೃಷ್ಣಾಬಾಯಿಯ ಚರಿತ್ರೆ ಆಗಲೇ ಒಂದು ಸಣ್ಣ ಪುಸ್ತಕದ ರೂಪದಲ್ಲಿ ಪ್ರಕಟಿಸಲ್ಪಟ್ಟಿದೆ. ಈಕೆ ಇನ್ನೂ ಕೆಲವು ಸ್ತ್ರೀಯರೊಂದಿಗೆ ಆಶ್ರಮಕ್ಕೆ ಬಂದಳು. ಆಗಿನಿಂದ ಈಕೆಗೆ ಆಶ್ರಮದ ಮೇಲೂ, ರಾಮದಾಸನ ಮೇಲೂ, ಅಭಿಮಾನ ವೃದ್ಧಿಯಾಗಿ, ಕೊನೆಗೆ ಈಕೆ ತನ್ನ ಜೀವಿತವನ್ನೇ ಭಗವಂತನ ಸೇವೆಗೆ ಅರ್ಪಿಸಿ ರಾಮದಾಸನೊಂದಿಗೆ ಸಹಕರಿಸುವುದರಲ್ಲಿ ಪ್ರಮುಖಳಾದಳು. ತೇಜೋಮಯವಾದ ವ್ಯಕ್ತಿತ್ವ, ಆಶ್ರಮದಲ್ಲಿ ಈಕೆ ಮಾಡಿದ ಮೌನವೂ ನಿಸ್ವಾರ್ಥವೂ ಆದ ಸೇವೆ, ಮತ್ತು ಸರ್ವರ ಮೇಲೆಯೂ ಸಮನಾಗಿ ಹರಿದ ಈಕೆಯ ಸ್ವಚ್ಛ ಪ್ರೇಮ, ಇವು ಈಕೆಯ ವ್ಯಕ್ತಿತ್ವದಿಂದ ಬೆಳಗಿ ಈಕೆಯ ಸಹಜವಾದ ಮಹಿಮೆಯನ್ನು ಪ್ರಕಟಿಸುತ್ತಿದ್ದುವು. ಹೀಗೆ ಈಕೆ ದೈವೀಮಾರ್ಗದಲ್ಲಿ, ಸಂಪೂರ್ಣ ಶ್ರದ್ಧೆಯಿಂದ ಮುಂದುವರಿಯುತ್ತಿದ್ದಾಗ ಅಸಂಖ್ಯಾತವಾದ ಪೀಡನೆಗಳನ್ನು ಅನುಭವಿಸಿದಳು. ಆದರೂ ಆ ಎಲ್ಲ ವೇಳೆಯೂ ಯಾವುದರಿಂದಲೂ ವಿಕಾರ ಹೊಂದದೆ, ಕ್ಷುಬ್ಧಳಾಗದೆ ತನ್ನ ಹರ್ಷಚಿತ್ತವನ್ನೂ ಮನಸ್ಸಮಾಧಾನವನ್ನೂ ಉಳಿಸಿಕೊಂಡಳು. ಆಕೆಯ ಆ ಕಣ್ಣುಕುಕ್ಕುವಂಥ ಪಾರಿಶುದ್ಧ್ಯದ ಪ್ರಭಾವದ ಆವರಣದಲ್ಲಿ ಸುಳಿದ ಸಾಧಕರು ಉದ್ಧಾರವಾದರು.

ರಾಮದಾಸನ ಪೂರ್ವಾಶ್ರಮದ ಪುತ್ರಿ ರಮಾಬಾಯಿ ತನ್ನ ಪತಿಯೊಡನೆ ಆಶ್ರಮಕ್ಕೆ ಸದಾ ಬರುತ್ತಿದ್ದಳು. ವೈರಾಗ್ಯದ ವಿಚಾರವನ್ನು ಮನಮುಟ್ಟುವಂತೆ ವ್ಯಾವರ್ಣಿಸಿದ ರಾಮದಾಸನ ಭಕ್ತಿವಿಷಯದ ಉಪನ್ಯಾಸಗಳನ್ನು ಗ್ರಹಿಸಿದಂತೆ ಆ ತರುಣಿಯ ಮನಸ್ಸು ಪ್ರಪಂಚದಿಂದ ವಿಮುಖವಾಯಿತು. ಆಕೆಯ ಹೃದಯದಲ್ಲಿ ಭಗವಂತನನ್ನು ಕುರಿತು ಭಕ್ತಿಯೂ, ಉತ್ಕಟೇಚ್ಛೆಯೂ ಮೂಡಿದುವು. ಅಲ್ಲಿಂದಾಚೆಗೆ ಆಕೆಯ ಮನಸ್ಸು ಘೋರವಾದ ಒಳತೋಟಿಯಲ್ಲಿ ಸಿಲುಕಿದಂತೆ ಕಂಡುಬಂದಿತು. ಅವಳಿಗೆ ಪ್ರಾಪಂಚಿಕ ವಿಷಯಗಳಲ್ಲಿ ಎಲ್ಲರುಚಿಯೂ ನಶಿಸಿ ಹೋಯಿತು. ಅವಳು ಮನೆಗೆಲಸವನ್ನು ಕಡಿಮೆಮಾಡಿ ಆಹಾರವನ್ನು ಮಿತವಾದ ಪರಿಮಾಣಕ್ಕೆ ಇಳಿಸಿ, ಕೊನೆಗೆ ತನ್ನ ಗೃಹಕಾರ್ಯಗಳಲ್ಲಿ ಎಲ್ಲ ಆಸಕ್ತಿ ಅಭಿಮಾನಗಳನ್ನೂ ತೊರೆದು ಭಗವಂತನ ಧ್ಯಾನದಲ್ಲಿ ಮಗ್ನಳಾದಳು. ಇದನ್ನು ನೋಡಿ ಸಹಜವಾಗಿ ಅವಳ ಗಂಡನಿಗೂ ಮತ್ತು ಮನೆಯವರಿಗೂ ಭೀತಿಯುಂಟಾಯಿತು. ರಾಮದಾಸನಿಗೆ ಅವಳು ಇಟ್ಟ ಒಂದೇ ಮೊರೆ "ನನ್ನನ್ನು ದೇವರನ್ನು ಪ್ರೀತಿಸುವಂತೆ

ಮಾಡು" ಎನ್ನುವುದು. ಈ ಸ್ಥಿತಿ ಕೆಲವು ತಿಂಗಳು ಇದ್ದಿತು. ಆದರೂ ರಾಮ ದಾಸನು ಎಷ್ಟೋ ಸಲ ಹೇಳಿ ಒಪ್ಪಿಸಿದ ಮೇಲೆ ಆಕೆ ಮೊದಲಿನ ಸ್ಥಿತಿಗೆ ಇಳಿದು, ದೇವರ ಮೇಲೆ ಇದ್ದ ಭಕ್ತಿ ಶ್ರದ್ಧೆಗಳನ್ನೇನೂ ಬಿಡದೆ ವಾಡಿಕೆಯ ಬಾಳನ್ನು ಬಾಳಿದಳು.

ಈ ಕಾಲದಲ್ಲಿ ಮಾತೆ ರುಕುಮಾಬಾಯಿ ಕಠಿಣವಾದ ಉಬ್ಬಸ ರೋಗದಿಂದ ನರಳುತ್ತಿದ್ದರೂ, ರಾಮದಾಸನೊಂದಿಗೆ ಇರಲು ಆಶ್ರಮಕ್ಕೆ ಬಂದಳು. ಆಶ್ರಮದ ಸಾಧಕರೂ, ಭಕ್ತರೂ, ಮುಖ್ಯವಾಗಿ ಕೃಷ್ಣಾಬಾಯಿಯೂ ಆಕೆಗೆ ಬಹಳ ಪ್ರೀತಿ ಗೌರವಗಳಿಂದ ಶುಶ್ರೂಷೆ ಮಾಡಿದರು. ರುಕುಮಾಬಾಯಿ ಧೈರ್ಯದಿಂದ ಆಶ್ರಮ ಜೀವನದ ಕಷ್ಟಗಳನ್ನು ಸಹಿಸಿದಳು. ಆದರೆ ರಾಮದಾಸನ ಒತ್ತಾಯದ ಮೇಲೆ ಮಗಳ ಮನೆಯಲ್ಲಿ ಇರಲು ಹಿಂತಿರುಗಿ, ಆಶ್ರಮಕ್ಕೆ ಒಮ್ಮೊಮ್ಮೆ ಬಂದು ಹೋಗು ತ್ತಿದ್ದಳು.

ಆಶ್ರಮ ಪ್ರಾರಂಭವಾದ ಕೂಡಲೇ ಕಾಸರಗೋಡಿನ ಪೂರ್ವ ವಯಸ್ಸಿನ ಶಾಲಾ ಉಪಾಧ್ಯಾಯಿನಿಯರಿಬ್ಬರು ಆಶ್ರಮಕ್ಕೆ ಕ್ರಮವಾಗಿ ಬರಲಾರಂಭಿಸಿದರು. ಇಬ್ಬರೂ ಅವಿವಾಹಿತೆಯರು. ಆದರೆ ನಿಜವಾಗಿ ಆತ್ಮಜ್ಞಾನ ಸಾಧಕರು. ಪರಿ ಶುದ್ಧತೆಯೂ, ಸದ್ವರ್ತನೆಯೂ ಅವರ ಮುಖದಮೇಲೆ ಶೋಭಿಸುತ್ತಿದ್ದುವು. ರಾಮದಾಸನು ಅವರಿಗೆ ರಾಮನಾಮ ಜಪದ ಮತ್ತು ಧ್ಯಾನದ ಅಭ್ಯಾಸ ಕ್ರಮ ವನ್ನು ತಿಳಿಸಿಕೊಟ್ಟನು. ಶ್ರದ್ಧೆ ಭಕ್ತಿಯಿಂದ ಅವರು ರಾಮದಾಸನ ಸಲಹೆ ಗಳನ್ನು ಪಾಲಿಸಿದರು. ಒಂದು ದಿನ ಇಬ್ಬರೂ ರಾಮದಾಸನನ್ನು ಕುರಿತು ಹೆಂಗಸು ಜೀವಮಾನವನ್ನೆಲ್ಲ ಬ್ರಹ್ಮಚರ್ಯದಲ್ಲೆ ನಡೆಸಬಹುದೆ? ಎಂದು ಪ್ರಶ್ನಿಸಿದರು. ರಾಮದಾಸನು "ಅವಶ್ಯವಾಗಿಯೂ" ಎಂದು ಉತ್ತರವಿತ್ತನು. ಇದನ್ನು ಕೇಳಿ ಅವರಿಗೆ ತುಂಬ ಸಂತೋಷವಾಯಿತು. ಅವರು ಕಠಿಣ ನಿಯಮಗಳನ್ನನುಸರಿಸುತ್ತಾ, ಮನೆಯಲ್ಲಿ ಸಂಜೆಯ ಭಜನೆಯನ್ನು ಆರಂಭಿಸಿ, ಆಹಾರವನ್ನು ಮಿತಿಯಲ್ಲಿಟ್ಟು, ಸಂಯಮಿತ ಪರಿಶುದ್ಧ ಜೀವನವನ್ನು ನಡೆಸಿದರು. ಧನ್ಯ ಮಾತೆಯರೇ! ದಿವ್ಯ ಜ್ಯೋತಿ ನಿಮ್ಮ ಹೃದಯದಲ್ಲಿಯೂ ಮತ್ತು ನಿಮ್ಮ ಜೀವನದ ಎಲ್ಲ ನಡವಳಿಕೆ ಗಳಲ್ಲಿಯೂ ಸದಾ ಬೆಳಗಲಿ!

ರಾಮದಾಸನು ಪತ್ರವ್ಯವಹಾರದ ಮೂಲಕ ಹಿಂದೂಸ್ಥಾನದ ನಾನಾ ಭಾಗ ಗಳಲ್ಲಿರುವ ಅಸಂಖ್ಯಾತ ಭಕ್ತರೊಂದಿಗೆ ಸಂಬಂಧವನ್ನಿಟ್ಟುಕೊಂಡಿದ್ದನು. ಆಶ್ರಮ ದಲ್ಲಿ ಒಂದು ವರ್ಷ ಕಳೆಯಿತು. ದೂರ ದೇಶದ ಸ್ನೇಹಿತರಿಗೆ, ರಾಮದಾಸನನ್ನು ನೋಡಬೇಕೆಂಬ ಅಪೇಕ್ಷೆಯುಂಟಾಗಿ, ರಾಮದಾಸನನ್ನು ಆಶ್ರಮದಿಂದ ಕದಲಿ ಸಂಚಾರ ಹೊರಡಬೇಕೆಂದು ಪ್ರಾರ್ಥಿಸುವ ಕಾಗದಗಳು ಎಲ್ಲಾ ಕಡೆಗಳಿಂದಲೂ ಬಂದು ಸುರಿಯುವುದು ಮೊದಲಾಯಿತು. ಸಂಚಾರ ಹೊರಡಲು ರಾಮನ ಪ್ರೇರಣೆ ಇರಲಿಲ್ಲವಾದುದರಿಂದ ರಾಮದಾಸನು ಆಶ್ರಮದಲ್ಲಿಯೇ ನಿಂತನು. ಪತ್ರ

ವ್ಯವಹಾರದ ಮೂಲಕ ಮಾಡಿದ ಪ್ರಯತ್ನ ವ್ಯರ್ಥವಾದುದರಿಂದ, ಮಹಾರಾಷ್ಟ್ರ ದೇಶದ ಸ್ನೇಹಿತರು ಆಶ್ರಮಕ್ಕೆ ಹೋಗಿ ರಾಮದಾಸನನ್ನು ಒಪ್ಪಿಸಿ ತನ್ನೊಡನೆ ಕರೆತರಲು ಜನಾರ್ದನ ಪಂತನನ್ನು ಕಳುಹಿಸಿದರು. ಜನಾರ್ದನ ಪಂತನೂ ಶ್ರೀ ಕೃಷ್ಣ ದೇಶಪಾಂಡೆಯೂ ಬಂದರು. ಇವರ ಆಗಮನದಿಂದ ಕಾಸರಗೋಡಿನ ಭಕ್ತರಿಗೆ ತುಂಬಾ ಆನಂದವಾಯಿತು. ಜನಾರ್ದನ ಪಂತನು ಹರಿಕಥೆ ಮಾಡಿದನು. ಅದಕ್ಕೆ ನೂರಾರು ಜನ ಸೇರಿದ್ದರು. ಜನಾರ್ದನ ಪಂತನು ರಾಮದಾಸನನ್ನು ಪ್ರಯಾಣ ಮಾಡುವಂತೆ ಒಪ್ಪಿಸಲು ನಿಷ್ಠೆಯಿಂದ ಪ್ರಯತ್ನ ಮಾಡಿದಗೂ, ರಾಮದಾಸನು ಅದಕ್ಕೆ ಒಪ್ಪಲಾಗಲಿಲ್ಲ. ರಾಮದಾಸನಿಗೆ ಆಗ ಇವರ ಪ್ರೀತಿಯ ಆಹ್ವಾನವನ್ನು ಮನ್ನಿಸಲು ಸ್ವಲ್ಪವೂ ಮನಸ್ಸಾಗಲಿಲ್ಲ. ದೇವರ ಸಂಕಲ್ಪ ಹಾಗೆ ಇದ್ದಿತು. ಜನಾರ್ದನಪಂತನಿಗೆ ತುಂಬಾ ಆಶಾಭಂಗವಾಯಿತು. ಹೊರಡುವ ವೇಳೆ ಅವನ ಕಣ್ಣಿನಲ್ಲಿ ನೀರು ತುಂಬಿತು. ಅವನು "ನಿಮ್ಮ ದರ್ಶನಕ್ಕಾಗಿ ಆತುರಪಡುತ್ತಿರುವ ಸೊಲ್ಲಾಪುರದ ಭಕ್ತರಿಗೆ ಏನು ಸಂದೇಶವನ್ನು ತೆಗೆದುಕೊಂಡು ಹೋಗಲಿ?"ಎಂದು ಕೇಳಿದನು. ("ಅವರು ರಾಮ ನಾಮವನ್ನು ಪಠಿಸುವುದನ್ನು ಬಿಡಬಾರದು. ರಾಮದಾಸನು ತಮ್ಮೊಂದಿಗೆ ಇರುವನೆಂದು ಭಾವಿಸಬೇಕು") ಎಂದು ತಾನು ಕೋರು ವುದಾಗಿ ಭಕ್ತರಿಗೆ ತಿಳಿಸಬೇಕೆನ್ನುವುದನ್ನು ಹೊರತಾಗಿ ರಾಮದಾಸನು ಇನ್ನೇನೂ ಉತ್ತರಕೊಡಲಾರದಾದನು. ಜನಾರ್ದನ ಪಂತನೂ, ಶ್ರೀ ಕೃಷ್ಣ ದೇಶಪಾಂಡೆಯೂ ಹೊರಟು ಹೋದರು. ಆಶ್ರಮಕ್ಕೆ ಭೇಟಿ ಕೊಟ್ಟು ರಾಮದಾಸನಿಗೆ ತಮ್ಮ ಸತ್ಸಂಗದ ಸಂತೋಷವನ್ನು ನೀಡಿದ ಸಾಧುಗಳಲ್ಲಿ ಸ್ವಾಮಿ ಪ್ರಣವಾನಂದರು, ಸ್ವಾಮಿ ಆನಂದಾಶ್ರಮರು ಮತ್ತು ದ್ವಾರಕಾದಾಸ ಇದ್ದರು.

ವೃದ್ಧ ಸಂನ್ಯಾಸಿಯಾದ ಸ್ವಾಮಿ ಪ್ರಣವಾನಂದರು ಉಚ್ಚತರದ ಉದಾತ್ತ ಜೀವಿ. ರಾಮದಾಸನನ್ನು ನೋಡಿದುದೇ ತಡ, ಅವರಿಗೆ ರಾಮದಾಸನ ಮೇಲೆ ಪ್ರೀತಿಯುಂಟಾಯಿತು. ಈ ಪ್ರೀತಿಯನ್ನು ತಾಯಿಗೆ ಶಿಶುವಿನ ಮೇಲಿರುವ ವಾತ್ಸಲ್ಯಕ್ಕೆ ಮಾತ್ರ ಹೋಲಿಸಬಹುದು. ಅವರಿದ್ದುದು ಬಹು ಕೊಂಚ ಕಾಲ, ಒಂದೇ ದಿವಸ. ರಾತ್ರಿ ರಾಮದಾಸನು ಭಗವನ್ನಾಮ ಪಠಿಸುತ್ತಾ, ಆನಂದದಲ್ಲಿ ನರ್ತನ ಮಾಡುವಾಗ ಅವರು ಅವನ ಜೊತೆಯಲ್ಲಿ ಸೇರಿದರು. ಸ್ವಾಮಿಗಳು ಕಾಸರಗೋಡಿನ ಭಕ್ತರ ಅಪೇಕ್ಷೆಯಂತೆ ಮುನಸಿಫ್ ಕೋರ್ಟಿನ ಟೆನಿಸ್ ಆಟವಾಡುವ ಸ್ಥಳದಲ್ಲಿ ಒಂದು ಉಪನ್ಯಾಸ ಮಾಡಿದರು. ಸ್ವಾಮಿಗಳ ಒತ್ತಾಯದ ಮೇಲೆ ರಾಮದಾಸನು ಅಧ್ಯಕ್ಷ ಪೀಠವನ್ನು ಸ್ವೀಕರಿಸಬೇಕಾಯಿತು. ಉಪನ್ಯಾಸ ಮುಗಿಯುತ್ತಲು, ರಾಮದಾಸನು ಮತಗಳ ಸಾಮರಸ್ಯದ ವಿಚಾರವಾಗಿ ಕೆಲವು ಮಾತುಗಳನ್ನಾಡಿದನು.

ನಂತರ ಕೆಲವು ಕಾಲದಲ್ಲಿ, ಸಾರಸ್ವತ ಮತದ ಮಠಾಧಿಪತಿಗಳಾದ ಸ್ವಾಮಿ ಆನಂದಾಶ್ರಮರು ಕಾಸರಗೋಡಿಗೆ ಬಂದು ಶ್ರೀ ಪಾಂಡುರಂಗ ದೇವಸ್ಥಾನದ

ಆವರಣದಲ್ಲಿಳಿದರು. ಸಹಜವಾಗಿಯೇ ಅವರ ದರ್ಶನಕ್ಕಾಗಿ ಅನೇಕ ಸಾರಸ್ವತ ಜನಗಳು ಹೋಗುತ್ತಿದ್ದರು. ಅವರಲ್ಲಿ ಒಬ್ಬ ಸ್ನೇಹಿತನು ಮತ್ತೆ ಮತ್ತೆ ಬಲವಂತ ಮಾಡಿದ್ದರಿಂದ ರಾಮದಾಸನನ್ನು ಮಠಾಧಿಪತಿಗಳ ದರ್ಶನಕ್ಕಾಗಿ ಕರೆದುಕೊಂಡು ಹೋದರು. ಒಂದು ಮನೆಯ ಮಹಡಿಯ ಮೇಲೆ, ಸಣ್ಣ ಕೊಟಡಿಯಲ್ಲಿ, ಸ್ವಾಮಿಗಳೆದುರಿಗೆ ಒಂದು ಕುರ್ಚಿಯಲ್ಲಿ ರಾಮದಾಸನನ್ನು ಕುಳ್ಳಿರಿಸಿದರು. ಆ ಸಮಾಜದ ಪ್ರಮುಖರೂ ಅಲ್ಲಿ ಸೇರಿದ್ದರು. ರಾಮದಾಸನು ಸ್ವಾಮಿಗಳಿಗೆ ಕ್ರಮ ವಾಗಿ ವಂದನೆ ಮಾಡಿ ಕುಳಿತನು. ಮೊದಲ ನೋಟದಲ್ಲಿಯೇ ಅವನಿಗೆ ಸ್ವಾಮಿಗಳು ಪರಿಶುದ್ಧರಾದ ಮಹಾತ್ಮರೆಂದು ಕಾಣಬಂದಿತು. ಅವರ ಸುಂದರವಾದ ಮುಖ ಮುದ್ರೆ ಸುತ್ತಲೂ ಆಧ್ಯಾತ್ಮಿಕ ಪ್ರಭೆಯನ್ನು ಪ್ರಸರಿಸಿದ್ದಿತು. ಅವರ ಸಂಸರ್ಗದಲ್ಲಿ ರಾಮದಾಸನು ತುಂಬಾ ನಿಶ್ಶಂಕೆಯನ್ನೂ, ಸಂತೋಷವನ್ನೂ ಅನುಭವಿಸಿದನು. ಯಾವ ಸಂಕೋಚವನ್ನೂ ಪಡದೆ ತನಗೆ ಕಾಶ್ಮೀರ ಮತ್ತು ಅಮರನಾಥ ಯಾತ್ರೆಗಳ ಸಂಚಾರದಲ್ಲಿ ಉಂಟಾದ ಘಟನೆಗಳ ವಿಷಯವನ್ನು ಹೇಳಲು ಪ್ರಾರಂಭಿಸಿದನು. ಕೆಲವು ಮಾತಿನಲ್ಲಿ ಕಾಶ್ಮೀರಿ ಜನರ ಸಿದ್ಧಾಂತ ಎಂದರೆ ಶಿವ ಮತ್ತು ಶಕ್ತಿಯ ವಿಷಯವನ್ನು ವಿವರಿಸಿದನು. ಸ್ವಲ್ಪ ಹೊತ್ತಿನ ಮೇಲೆ ಸ್ವಾಮಿಗಳ ಅಪ್ಪಣೆ ಪಡೆದು ಆಶ್ರಮಕ್ಕೆ ಹಿಂತಿರುಗಿದನು. ಕೆಲವು ದಿವಸಗಳಲ್ಲಿ ಸ್ವಾಮಿಗಳು ಶಿಷ್ಯರೊಡಗೂಡಿ ಆನಂದಾಶ್ರಮಕ್ಕೆ ಭೇಟಿ ಕೊಟ್ಟರು. ಈ ಸಂದರ್ಭ ಸ್ವಾಮಿಗಳ ವಿಶಾಲವಾದ ಮನಸ್ಸು, ದಯ ಮತ್ತು ಪ್ರೀತಿಯುಕ್ತವಾದ ಸ್ವಭಾವಕ್ಕೆ ಸೂಚಿಯಾಗಿದ್ದಿತು. ಅವರು ರಾಮದಾಸನೊಡನೆ ಸುಮಾರು ಒಂದು ಗಂಟೆಯ ಕಾಲವಿದ್ದರು. ಅಷ್ಟು ಹೊತ್ತು ರಾಮದಾಸನು ಮಾತ್ರ ಏಕಾಂತವಾಸ ಮತ್ತು ಸತ್ಸಂಗದ ಮಹತ್ತಿನ ವಿಚಾರವಾಗಿ ಕೆಲವು ಮಾತನಾಡಿದನು. ಅನಂತರ ಸ್ವಾಮಿಗಳು ಆಶ್ರಮವನ್ನು ಬಿಟ್ಟು ದೇವಸ್ಥಾನಕ್ಕೆ ತೆರಳಿದರು.

ದ್ವಾರಕಾದಾಸನು ಆಶ್ರಮದಲ್ಲಿ ಎರಡು ತಿಂಗಳಿಗಿಂತಲೂ ಹೆಚ್ಚುಕಾಲ ನಿಂತನು. ಸ್ವಾಭಾವಿಕವಾಗಿ ಈತನು ಭಕ್ತಿವಂತನೂ ಪರಿಶುದ್ಧ ಜೀವಿಯೂ ಆದರೂ ಇವನಲ್ಲಿ ಗಾಂಜಾಸೇವನೆಯ ಚಟವಿದ್ದಿತು. ಗಾಂಜಾಸೇವನೆಯ ಅಮಲು ಅನೇಕ ವೇಳೆ ಇವನ ಮನಸ್ಸನ್ನು ಪಲ್ಲಟಮಾಡಿ ಇವನನ್ನು ಘಾತಕನಾಗಿಯೂ ಶಿಡುಕನಾಗಿಯೂ ಮಾಡುತ್ತಿದ್ದಿತು. ಪ್ರತಿದಿವಸದ ಪೂಜೆಗಾಗಿ ಇವನು ಕೆಲವು ಹಿತ್ತಾಳೆಯ ವಿಗ್ರಹಗಳನ್ನು ಜೊತೆಯಲ್ಲಿಟ್ಟುಕೊಂಡಿದ್ದನು. ಪ್ರತಿದಿನವೂ ಸ್ನಾನಾನಂತರ ಕೈಸಾಲೆಯಲ್ಲಿ ದೇವರ ಪೂಜೆಗೆ ಕುಳ್ಳಿರುತ್ತಿದ್ದನು. ಈ ಸಮಯ ದಲ್ಲೇ ಮಾರ್‍ಕ್ಕೆ ಸಂಜೀವರಾಯರು ರಾತ್ರಿಯ ಹೊತ್ತು ಆಶ್ರಮಕ್ಕೆ ಬರುತ್ತಿದ್ದರು.

ಒಂದು ದಿವಸ ರಮಾಬಾಯಿಯ ಮನೆಗೆ ಭಜನೆಗಾಗಿ ಕರೆದಿದ್ದುದರಿಂದ ರಾಮದಾಸನು ಅಲ್ಲಿಗೆ ಹೋಗಿದ್ದನು. ಆಶ್ರಮದಲ್ಲಿ ರಾಮನಾಥಕಿಣಿ, ಮಾರ್ತ್ ಸಂಜೀವರಾಯರು, ದ್ವಾರಕಾದಾಸ ಮತ್ತು ಇನ್ನಿಬ್ಬರು ಭಕ್ತರು ಇದ್ದರು. ಭಜನೆ

ಯನ್ನು ಪೂರೈಸಿಕೊಂಡು ರಾತ್ರಿ ಸುಮಾರು ಒಂಬತ್ತು ಗಂಟೆಗೆ ರಾಮದಾಸನು ಆಶ್ರಮಕ್ಕೆ ಹಿಂತಿರುಗಿದನು. ಈ ಮಧ್ಯೆ ಆಶ್ರಮದಲ್ಲಿ ಒಂದು ಘಟನೆ ನಡೆದಿದ್ದಿತು. ದ್ವಾರಕಾದಾಸನು ಮಂಡಿಯನ್ನು ಸವರುತ್ತಾ, ಮುಖವನ್ನು ಹುಳ್ಳಗೆ ಮಾಡಿಕೊಂಡು ಒಂದು ಮೂಲೆಯಲ್ಲಿ ಕುಳಿತಿದ್ದನು. ನಡೆದಿದ್ದ ಕಥೆ ಹೊರಬಿದ್ದಿತು. ರಾಮದಾಸನು ಇಲ್ಲದಿದ್ದಾಗ ದ್ವಾರಕಾದಾಸನಿಗೂ ರಾಮನಾಥಕಿಣಿಗೂ ಸ್ನೇಹಪರವಾದ ಪೈಪೋಟಿ ಕಾಳಗ ಆಗಿ ಅದರ ಪರಿಣಾಮವಾಗಿ ದ್ವಾರಕಾದಾಸನು ಕೈಸಾಲೆಯಿಂದ ಕೆಳಗೆ ಬಿದ್ದು ಅವನ ಮಂಡಿ ಘಟ್ಟ ನೆಲದ ಮೇಲೆ ಬಲವಾಗಿ ಬಡಿದಿದ್ದಿತು. ಈ ಅಪಘಾತಕ್ಕೆ ಅವನು ಬೇಸತ್ತು ಗೊಣಗುಟ್ಟುತ್ತಿದ್ದನು. ರಾಮದಾಸನು ಅವನನ್ನು ಸಮಾಧಾನಪಡಿಸಿದನು. ಮಾರ್ಕ್ ಸಂಜೀವರಾಯರು ಹೊತ್ತಿಗೆ ಮುಂಚೆಯೇ ಮಲಗುವ ಪದ್ಧತಿ ಇಟ್ಟುಕೊಂಡಿದ್ದುದನ್ನು ಇಲ್ಲಿ ತಿಳಿಸಬೇಕಾಗಿದೆ. ಆದುದರಿಂದ ಪ್ರತಿಯೊಬ್ಬರನ್ನೂ ಜಾಗ್ರತೆಯಾಗಿ ಮಲಗಬೇಕೆಂದು ಅವರು ಒತ್ತಾಯಪಡಿಸುತ್ತಿದ್ದರು. ಆದ್ದರಿಂದ ಹತ್ತು ಗಂಟೆಯ ಸಮಯಕ್ಕೆ ಎಲ್ಲರೂ ಮಲಗಿದರು. ಸುಮಾರು ಹನ್ನೊಂದು ಗಂಟೆ ಇರಬಹುದು. ಆಗ ದ್ವಾರಕಾದಾಸನ ಕಡೆಯಿಂದ ಗಟ್ಟಿಯಾಗಿ ಗುಡುಗುಟ್ಟುವ ಶಬ್ದ ಬಂದು ಎಲ್ಲರಿಗೂ ಎಚ್ಚರವಾಯಿತು. ಮಾರ್ಕ್ ಸಂಜೀವರಾಯರು ಮೊದಲು ಕೂಗಿದರು. ಕಣ್ಣುಗಳನ್ನು ತಿಕ್ಕುತ್ತಾ, ದಿಂಬಿನ ಮೇಲಿಂದ ತಲೆಯನ್ನೆತ್ತಿ ಗಲಾಟೆ ಏನು ಎಂದು ಕೇಳಿದರು. ಹೊರಗೆ ಮಲಗಿದ್ದ ರಾಮನಾಥಕಿಣಿ, "ಗಲಭೆಗೆ ದ್ವಾರಕಾದಾಸನು ಕಾರಣ" ಎಂಬ ಸಂಗತಿಯನ್ನು ಅರಿಯಿಸಿದನು. ರಾಮದಾಸನು ಏನು ಪ್ರಸಂಗವೆಂದು ದ್ವಾರಕಾದಾಸನನ್ನು ಕೇಳಿದುದಕ್ಕೆ ಅವನು,

"ನನಗೆ ತೀರಿಕೊಂಡಿರುವ ನನ್ನ ತಂದೆಯ ಜ್ಞಾಪಕ ಈಗ ತಾನೆ ಬಂದು ಅವನನ್ನು ಕಳೆದುಕೊಂಡದ್ದಕ್ಕಾಗಿ ತಡೆಯದೆ ಅಳು ಬಂದಿತು" ಎಂದು ಉತ್ತರ ಕೊಟ್ಟನು. ಸಂಜೀವರಾಯರು "ನೀನು ಅವನನ್ನು ಒಂದು ದಿವಸ ನೋಡುವೆ. ಆಗ ಎಲ್ಲವೂ ಸರಿಯಾಗುತ್ತದೆ. ಸಧ್ಯಕ್ಕೆ ಮಲಗಿ ಆ ವಿಷಯವನ್ನು ಮರೆ" ಎಂದರು. ಸ್ವಲ್ಪ ಕಾಲ ನಿಶ್ಶಬ್ದವಾಗಿದ್ದಿತು. ಸಂಜೀವರಾಯರೂ, ಉಳಿದ ಎಲ್ಲರೂ ಮತ್ತೆ ಗಾಢ ನಿದ್ರೆಯಲ್ಲಿ ಮಗ್ನರಾದರು. ಹಲವು ನಿಮಿಷ ಕಳೆಯಲಿಲ್ಲ. ಹೃದಯ ವಿದ್ರಾವಕವಾದ ಭಯಂಕರವಾದ ಕಿರಿಚಾಟ ಸಂಜೀವರಾಯರನ್ನೂ, ಇತರರನ್ನೂ ಬೆಚ್ಚಿಸಿತು. ಈ ಸಲ ಸಂಜೀವರಾಯರು ಹಾಸಿಗೆಯಿಂದ ಹಾರಿ, ಸಣ್ಣಗೆ ಉರಿಯುತ್ತಿದ್ದ ಲಾಂದ್ರದ ಹತ್ತಿರ ಹೋಗಿ ಬತ್ತಿಯನ್ನು ಎತ್ತರಿಸಿ, ಲಾಂದ್ರವನ್ನು ಹಿಡಿದುಕೊಂಡು ನೇರವಾಗಿ ದ್ವಾರಕಾದಾಸನು ಮಲಗಿದ್ದ ಸ್ಥಳಕ್ಕೆ ಹೋದರು. ಹೋಗುವಾಗ "ದೆವ್ವವನ್ನು ಒಂದೇ ಸಲ ಬಿಡಿಸೋಣ. ದೆವ್ವ ಮರಳಿ ತನ್ನ ಚೇಷ್ಟೆಗೆ ಅರಂಭ ಮಾಡಿದೆ. ಅವನಿಗೇನಾಗಿದೆ ನೋಡೋಣ" ಎಂದು ಗೊಣಗುತ್ತಿದ್ದರು. ದ್ವಾರಕಾದಾಸನ ಮುಖದ ಮುಂದೆ ಲಾಂದ್ರವನ್ನು ಹಿಡಿದು

ಅದರ ತುಂಬ ಬೆಳಕು ಅವನ ಮೇಲೆ ಬೀಳುವಂತೆ ಮಾಡಿ, "ನಿನಗೆ ಏನಾಗಿದೆ?" ಎಂದು ಘಟ್ಟಿಯಾಗಿ ಕೂಗಿದರು. "ನಾನು ಜಲಬಾಧೆಗೆ ಹೋಗಬೇಕು" ಎಂಬ ಉತ್ತರ ಹೊರಟಿತು.

ಸಂಜೀವರಾಯರು "ಏಕೆ ಹೋಗಲಿಲ್ಲ?" ಎಂದು ಶಂಕೆಯಿಂದ ಕೇಳಿದರು.

ಇಷು ಹೊತ್ತಿಗೆ ರಾಮದಾಸನು ಸಂಜೀವರಾಯರ ಬದಿಗೆ ಬಂದು ನಿಂತಿದ್ದನು.

ದ್ವಾರಕಾದಾಸನು, "ಇಲ್ಲಿ ನೋಡಿ, ನಿಮಗೇನು ಕಣ್ಣಿಲ್ಲವೆ, ಕಾಣಿಸುವುದಿಲ್ಲವೆ? ನನ್ನ ಮಂಡಿ ಊದಿದೆ. ನಾನು ನಡೆಯಲಾರೆ" ಎನ್ನುತ್ತ ಮಂಡಿಯನ್ನು ತೋರಿಸಿದನು. ಅದರ ಮೇಲೆ ಟೆನ್ನಿಸ್ ಚೆಂಡಿನ ದಪ್ಪದ ಒಂದು ಬಾವು ಬಂದಿದ್ದಿತು.

ಸಂಜೀವರಾಯರು ಉಪಾಯವಂತರು, ಸ್ಫೂರ್ತಿವಂತರು. ಅವರು ಕಂಡನನ್ನೂ, ರಾಮನಾಥಕಿಣಿಯನ್ನೂ ಸಹಾಯಕ್ಕೆ ಕರೆದರು. ಗಾಂಜಾ ಸೇವನೆಯಿಂದ ದ್ವಾರಕಾದಾಸನ ದೇಹ ತೆಳ್ಳಗಾಗಿ ಕೃಶವಾಗಿದ್ದಿತು. ಸಂಜೀವರಾಯರ ಸಲಹೆಯಂತೆ ಕಂಡನೂ ಕಿಣಿಯೂ ಒಬ್ಬೊಬ್ಬರು ಒಂದು ಕಡೆ ದ್ವಾರಕಾದಾಸನ ಕಂಕುಳಿಗೆ ಕೈಹಾಕಿ ಅವನನ್ನು ಸುಲಭವಾಗಿ ಎತ್ತಿದರು. ಮಾರ್ಕ್ ಸಂಜೀವರಾಯರು ಲಾಂದ್ರವನ್ನು ಹಿಡಿದು ಮಾರ್ಗದರ್ಶಕರಾದರು. ಅವರ ವಾಡಿಕೆಯಾದ ತೂಗುವ ನಡೆಯ ದಾಟುಹೆಜ್ಜೆಯಿಂದ ಲಾಂದ್ರ ಸಮೇತ ಮುಂದೆ ನಡೆದರು. ಅವರ ಹಿಂದೆ ಕಂಡ ಮತ್ತು ಕಿಣಿ ದ್ವಾರಕಾದಾಸನ ವಕ್ರ ಕೃಶ ವಿಗ್ರಹವನ್ನು ಭೂಸ್ಪರ್ಶವಾಗದಂತೆ ಎತ್ತಿಕೊಂಡು ಹೋದರು. ರಾಮದಾಸನು ಈ ಮೆರವಣಿಗೆಯನ್ನು ನೋಡುತ್ತಾ ನಿಂತಿದ್ದನು. ಅವರು ದ್ವಾರಕಾದಾಸನನ್ನು ಒಂದು ಕಟ್ಟೆಯ ಬಳಿಗೆ ಕರೆದುಕೊಂಡು ಹೋದರು. ಅಲ್ಲಿಯ ಕೆಲಸವನ್ನು ಪೂರೈಸಿಕೊಂಡು ಅದೇ ಕ್ರಮ ಅದೇ ವಿಭವದ ಉತ್ಸವದಿಂದ ಅವನನ್ನು ತಂದು ಹಾಸಿಗೆಯ ಮೇಲೆ ಇಳಿಸಿದರು. ಮಾರ್ಕ್ ಸಂಜೀವರಾಯರು ಅವನಿಗೆ ಕೊನೆಯ ಬುದ್ಧಿವಾದವನ್ನು ಹೇಳಿದುದಲ್ಲದೆ ಎಚ್ಚರಿಕೆಯನ್ನು ಕೊಡುತ್ತ, ಮುಂದೆ ಕಿರಚಕೂಡದೆಂದು ಹೆದರಿಸಿ ಉಳಿದವರೊಂದಿಗೆ ಮಲಗಿ ವಿಶ್ರಾಂತರಾದರು.

ಪೂರ್ಣಾನಂದನು ಯಾವಾಗಲೂ ತನ್ನ ಸಮವಯಸ್ಸಿನವನಾದ ಮತ್ತು ಬಹಳ ಸ್ನೇಹಿತನಾದ ಕಂಡನೊಡನೆ ಧರ್ಮಸಿದ್ಧಾಂತದಲ್ಲಿನ ನಂಬಿಕೆ ಮತ್ತು ಪದ್ಧತಿಗಳ ವಿಚಾರವಾಗಿ ಚರ್ಚೆಮಾಡುತ್ತಿದ್ದನು. ಆಶ್ರಮದ ಹೊರಗಿನ ಕೈಸಾಲೆಗೆ ಒಂದು ಪಕ್ಕದಲ್ಲಿ ತಾಳೆಗರಿಗಳ ನೆರಿಕೆ ಇದ್ದಿತು. ಇದು ಕೈಸಾಲೆಯ ಅಂಚಿಗೆ ಸುಮಾರು ಒಂದಡಿ ಆಚೆಇದ್ದು ಇವೆರಡರ ಮಧ್ಯೆ ಒಂದು ಕತ್ತಲ ಸಂದು ಬಿಟ್ಟಿದ್ದಿತು. ಒಂದು ದಿನ ಪೂರ್ಣಾನಂದನು ಕೈಸಾಲೆಯ ಈ ಅಂಚಿನಲ್ಲಿ ಕುಳಿತು ಕಂಡನಿಗೆ ಬಹಳ ಶ್ರದ್ಧೆಯಿಂದ ಆಸನಗಳ ಬೇರೆ ಬೇರೆ ರೀತಿಯನ್ನು ತೋರಿಸು

ತ್ತಿದ್ದನು. ಹೀಗೆ ಮಾಡುವಲ್ಲಿ ಆ ನೆರಿಕೆಯಕಡೆಗೆ ಅವನ ಬೆನ್ನು ತಿರುಗಿದ್ದು ಪವನತಪ್ಪಿ, ಅವನು ಈ ಕತ್ತಲ ಸಂದಿಯಲ್ಲಿ ಬಿದ್ದನು. ಅವನ ಕೈಕಾಲುಗಳು ಮಾತ್ರ ಮೇಲೆ ಚಾಚಿ ಕಾಣುತ್ತಿದ್ದುವು. ದೊಡ್ಡದಾಗಿ ಕೂಗಾಟವಾಯಿತು. ನಮ್ಮ ಯೋಗಾಭ್ಯಾಸದಸಾಧಕನು ಹಾಸ್ಯಾಸ್ಪದವಾದ ಸಂದರ್ಭದಲ್ಲಿ ಸಿಕ್ಕಿಬಿದ್ದುದನ್ನು ನೋಡಿ ಘಟ್ಟಿಯಾಗಿ ನಗದಿರಲು ಯಾರಿಗೂ ಸಾಧ್ಯವಾಗಲಿಲ್ಲ. ದೃಢಾಂಗನಾಗಿ ಕಂಡನು ಮುಂದೆ ಹೋಗಿ ಪೂರ್ಣಾನಂದನ ಕೈಕಾಲುಗಳನ್ನು ಭದ್ರವಾಗಿ ಹಿಡಿದು ಈಚೆಗೆ ಎಳೆದು, "ಈ ಆಸನಕ್ಕೆ ಏನು ಹೆಸರು?" ಎಂದು ಕೇಳಿದನು.

ಒಂದು ದಿನ ಮಧ್ಯಾಹ್ನ ರಾಮದಾಸ ಪೂರ್ಣಾನಂದರು ಇಬ್ಬರೇ ಆಶ್ರಮದಲ್ಲಿದ್ದರು; ಕೈಸಾಲೆಯಲ್ಲಿ ಕುಳಿತಿದ್ದರು. ಆಗ ಪೂರ್ಣಾನಂದನ ತರುಣನಾದ ಮಗನು ಬಂದನು. ನೇರವಾಗಿ ರಾಮದಾಸನಿದ್ದ ಬಳಿಗೆ ಬಂದು ಅವನ ಎದುರಿಗೆ ಕುಳಿತುಕೊಂಡು, "ನೀವು ನನ್ನ ಶಿಷ್ಯರಾಗಲು ಒಪ್ಪಿದರೆ ನಿಮಗೆ ನಾನು ಪಾಠ ಹೇಳಕೊಡಲು ಬಂದಿದ್ದೇನೆ" ಎಂದನು. ರಾಮದಾಸನು "ರಾಮದಾಸ ನಿನ್ನ ಅತ್ಯಂತ ವಿನೀತಚೇಲ. ನೀನೇನನ್ನಾದರೂ ಹೇಳಿಕೊಡುವುದಾದರೆ ಅವನು ನಿನಗೆ ತುಂಬಾ ಕೃತಜ್ಞನಾಗಿರುತ್ತಾನೆ" ಎಂದು ಉತ್ತರ ಕೊಟ್ಟನು. ರಾಮದಾಸನು ಆ ತರುಣನ ಉತ್ತರವನ್ನು ಸಂಪೂರ್ಣ ವಿನೀತಭಾವದಿಂದ ನಿರೀಕ್ಷಿಸುತ್ತಿದ್ದನು. ಇದು ನಡೆಯುತ್ತಿರುವಾಗ ಪೂರ್ಣಾನಂದನಿಗೆ ತನ್ನ ಮಗನ ನಡವಳಿಕೆಯನ್ನು ನೋಡಿ ಮಿತಿಮೀರಿದ ಕೋಪ. ಆದರೆ ರಾಮದಾಸನು ಅವನಿಗೆ ಸುಮ್ಮನಿರು ಎಂದು ಸಂಜ್ಞೆ ಮಾಡಿದನು. ಅವನ ಮಗ ಹೇಳಿದನು:

"ನೀನು ತಿಳಿಯಬೇಕು. ಈ ಪ್ರಪಂಚವೆಲ್ಲವೂ **ರಾಮನ** ವ್ಯಕ್ತಸ್ವರೂಪ. (**ಆತನು** ಎಲ್ಲರಲ್ಲಿಯೂ ಎಲ್ಲಪ್ರಾಣಿಗಳಲ್ಲಿಯೂ ಸರ್ವಪದಾರ್ಥಗಳಲ್ಲಿಯೂ ಇದ್ದಾನೆ.) ಪರಮ ಮೋಕ್ಷವನ್ನು ಪಡೆಯಬೇಕೆಂಬ ಆಶೆಯಿದ್ದರೆ ಈ ದರ್ಶನವನ್ನು ಹೊಂದಬೇಕು. ತಿಳಿಯಿತೆ?"

ರಾಮದಾಸನು "ತಿಳಿಯಿತು, ತಮ್ಮ ಕೃಪೆಯಿಂದ" ಎಂದನು. ಪೂರ್ಣಾನಂದನು ಕೋಪದಿಂದ ಕುಣಿಯಬೇಕು, ಮಗನಮೇಲೆ ಶಾಪಗಳನ್ನು ಬೀರಬೇಕು; ಆದರೆ ತಡೆದುಕೊಂಡು ನಾಲಗೆಯನ್ನು ಬಿಗಿಹಿಡಿದಿದ್ದನು. ಇನ್ನಾವಪ್ರಶ್ನೆಗಳೂ ಇಲ್ಲ. ಸ್ವಲ್ಪಕಾಲ ಮೌನ. ಆಗ ಆ ಮಗನು ಮತ್ತೆ ಮಾತನಾಡಿದನು.

"ಸ್ವಾಮಿಜಿ, ನಿಮ್ಮನ್ನು ಒಂದು ಪ್ರಶ್ನೆ ಕೇಳಬೇಕೆಂದಿದ್ದೇನೆ."

"ಏನು ಪ್ರಶ್ನೆ ರಾಮಜಿ?" ಎಂದು ರಾಮದಾಸನು ಕೇಳಿದನು.

"ಇಗೋ ನೋಡಿ. ರಾತ್ರಿ ಧ್ಯಾನಕ್ಕೆ ಕುಳಿತಾಗ ಮನಸ್ಸು ಸಿಕ್ಕಿದ ಕಡೆಗೆ ಓಡುತ್ತದೆ. ನಿಶ್ಚಲ ಏಕಾಗ್ರತೆಯಿಂದ ಧ್ಯಾನವನ್ನು ದೃಢವಾಗಿರುವಂತೆ ಮಾಡಲು ಯಾವುದಾದರೂ ಒಂದು ಮಾರ್ಗವನ್ನು ತಿಳಿಸಬಲ್ಲಿರಾ?"

"ರಾಮು, ನಿನ್ನ ಮಾತು ಬಹಳ ವಿಚಿತ್ರ. ರಾಮುದಾಸನಿಗೆ ಗೊತ್ತಿಲ್ಲದ ಸಂಗತಿಯಾದ ದೈವಸಾಕ್ಷಾತ್ಕಾರವನ್ನು ಅವನಿಗೆ ಉಪದೇಶಮಾಡಲು ಬಂದಿರುವ ರಾಮುದಾಸನಗುರು ನೀನು ಎಂಬುದನ್ನು ಮರೆತಿದ್ದೀಯಾ? ಹೀಗಿರುವಾಗ ಮನಸ್ಸಿನ ಚಾಂಚಲ್ಯ ಮುಂತಾದ ಪ್ರಶ್ನೆಗಳು ಹೇಗೆ ಹುಟ್ಟುತ್ತವೆ? ನೀನು ನಿಜವಾಗಿ ರಾಮುನೇ".

ಆತನು ತಾಳ್ಮೆ ತಪ್ಪಿ "ಇಲ್ಲ. ಇಲ್ಲ. ನಾನು ರಾಮುನಲ್ಲ; ನಾನು ರಾವಣ. ನನಗೆ ಎರಡು ಕೊಡಿ; ಮುಂದೆ ಸರಿಯಾಗಿ ನಡೆದುಕೊಳ್ಳುವಂತೆ ಮಾಡಿ" ಎಂದು ಹೇಳುತ್ತಾ, ರಾಮುದಾಸನ ಪಾದಗಳ ಮೇಲೆ ತಲೆಯಿಟ್ಟನು. ರಾಮುದಾಸನು ಅವನನ್ನೆತ್ತಿ ನೋಡಿದರೆ, ಮುಖ ಕಣ್ಣೀರಿನಿಂದ ತೊಯ್ದುಹೋಗಿದ್ದುದು ಕಂಡಿತು. ಅವನು ಹೊರಟುಹೋದ ಸ್ವಲ್ಪಹೊತ್ತಿನಲ್ಲಿ ಪೂರ್ಣಾನಂದನಿಂದ, ಅವನ ಮಗನಿಗೂ ಅವನ ಸ್ನೇಹಿತರಿಗೂ, ಅವನು ರಾಮುದಾಸನಿಗೆ ಕೋಪಬರುವಂತೆ ಮಾಡಿದರೆ ಅವನಿಗೆ ತಾವು ತಿಂಡಿ ಕೊಡಿಸುವುದಾಗಿಯೂ, ಹಾಗೆ ಮಾಡದೆ ಸೋತರೆ ಅವನು ಅವರಿಗೆ ತಿಂಡಿ ಕೊಡಿಸಬೇಕೆಂದೂ ಪೇಟೆಯಲ್ಲಿ ಪಂದ್ಯ ಕಟ್ಟಿದ್ದುದು ತಿಳಿಯಿತು. ಪಾಪ! ಆ ಸ್ನೇಹಿತನು ಪಂದ್ಯವನ್ನು ಕಳೆದುಕೊಂಡನು.

ದ್ವಾರಕಾದಾಸನ ಮೂರ್ತಿಪೂಜೆ ಪ್ರತಿ ದಿನವೂ ಕ್ರಮವಾಗಿ ನಡೆಯು ತ್ತಿದ್ದಿತು. ಅವನು ಹಿಂದಿರುಗಿಹೊರಡಬೇಕಾದ ದಿನ ಸಮೀಪವಾಯಿತು. ಹಿಂದಣ ದಿವಸ ಎಂದಿನಂತೆ ವಸ್ತ್ರವನ್ನು ಹಾಸಿ ವಿಗ್ರಹಗಳನ್ನಿಟ್ಟು ಪೂಜೆ ಮಾಡು ತ್ತಿದ್ದನು. ಆಗ ರಾಮುದಾಸನು ಹೊರಗಡೆ ಆಸನದ ಮೇಲೆ ಕುಳಿತಿದ್ದನು. ವಾಡಿಕೆ ಯಿಂದ ಅಸ್ಪೃಶ್ಯನಾದ ಕಂಡನು—ಇದು ದ್ವಾರಕಾದಾಸನಿಗೆ ಅದಕ್ಕೆ ಹಿಂದಿನ ದಿನವೇ ಗೊತ್ತಾಗಿದ್ದಿತು—ಎಂದಿನಂತೆ ಆಶ್ರಮಕ್ಕೆ ಬಂದನು. ಆದರೆ ಈ ಸಲ ಅವನು ಪ್ರಯಾಣೋನ್ಮುಖನಾದ ದ್ವಾರಕಾದಾಸನಿಗೆ ಬೀಳ್ಕೊಡುವ ಕಾಣಿಕೆ ಯಾಗಿ ಬಾಳೆಯ ಹಣ್ಣಿನ ಒಂದು ಗೊನೆಯನ್ನು ತೆಗೆದುಕೊಂಡು ಬಂದನು. ಕಂಡನು ನೇರವಾಗಿ ಬಂದು ಬಾಳೆಯ ಹಣ್ಣಿನ ಗೊನೆಯನ್ನು ದ್ವಾರಕಾದಾಸನ ಪಾದಗಳಲ್ಲಿ ಅರ್ಪಿಸಲು ಹೋದಾಗ ಆತನು ಇದ್ದಿದಿದ್ದಂತೆ ರೇಗಿ, "ಹತ್ತಿರ ಬರುವುದಕ್ಕೆ ನಿನಗೆಷ್ಟು ಧೈರ್ಯ? ಮಡಿಯುಟ್ಟು ಪೂಜೆ ಮಾಡುತ್ತಿರುವುದು ನಿನಗೆ ಕಾಣಿಸುವುದಿಲ್ಲವೆ? ನನ್ನೆದುರಿಗೆ ನಿಲ್ಲಬೇಡ, ಹೊರಟು ಹೋಗು"ಎಂದು ಗದರಿಸಿದನು. ಈ ಕಠಿಣವಾದ ಮಾತುಗಳನ್ನು ಕೇಳಿ ಕಂಡನು ಹಿಂದೆ ಸರಿದು, ಸುಮ್ಮನೆ ಒಂದು ಮೂಲೆಗೆ ಹೋಗಿ ಕುಳಿತನು. ರಾಮುದಾಸನು ಇದೆಲ್ಲವನ್ನೂ ನೋಡುತ್ತಿದ್ದು, ತಾನಿದ್ದ ಸ್ಥಳದಿಂದೆದ್ದು, ಮೆಲ್ಲನೆ ದ್ವಾರಕಾದಾಸನ ಬಳಿಗೆ ಹೋದನು. ಏಕೆ ಹೀಗೆ ಬರುತ್ತಿದ್ದಾನೆಂಬುದು ದ್ವಾರಕಾದಾಸನಿಗೆ ಅರಿವಾಗು ವುದಕ್ಕೆ ಮುಂಚೆಯೇ ವಿಗ್ರಹಗಳನ್ನೂ, ಪೂಜೆಯ ಸಾಮಗ್ರಿಗಳನ್ನೂ ಅವು ಇದ್ದ ಬಟ್ಟೆಯಲ್ಲಿಯೇ ಮುದುರಿ, ಅದನ್ನೇ ಕವಣೆಯನ್ನಾಗಿ ಮಾಡಿಕೊಂಡು, ತನ್ನ

ಬಲವನ್ನೆಲ್ಲಾ ಉಪಯೋಗಿಸಿ ಬೀಸಿ, ಆಶ್ರಮದ ಬಲಗಡೆಯ ಗುಂಡಿಗೆ ಎಸೆದನು. ಇದನ್ನು ನೋಡಿ ದ್ವಾರಕಾದಾಸನು ಅಪ್ರತಿಭನಾಗಿ, ಭಯಭ್ರಾಂತಿಯನ್ನು ಸೂಚಿಸುವ ಕಣ್ಣುಗಳಿಂದ ರಾಮದಾಸನನ್ನು ದಿಟ್ಟಿಸಿದನು. ರಾಮದಾಸನು,

"ಇಲ್ಲಿ ನೋಡು ರಾಮಜಿ! ನಿನ್ನ ಸೇವೆ ಸ್ಪಷ್ಟವಾಗಿ ತಪ್ಪು ದಾರಿಗೆ ತಿರುಗಿದೆ", ಕಂಡನನ್ನು ತೋರಿಸುತ್ತಾ, "ಆ ಭಕ್ತನು ಪ್ರೇಮ ಗೌರವದಿಂದ ತುಂಬಿದ ಹೃದಯದೊಡನೆ ಬಂದು ನಿನಗೆ ಅಮೂಲ್ಯವಾದ ಕಾಣಿಕೆಯ ರೂಪವಾಗಿ ಫಲಗಳನ್ನು ಅರ್ಪಿಸುವುದರಲ್ಲಿದ್ದನು. ಅಂತಹವನನ್ನು ನೀನು ದೂರ ಮಾಡ ಲೆಣಿಸಿದೆ. ಎಂದರೆ ದೇವರ ಪ್ರೀತಿಯನ್ನೇ ನೀನು ದೂರಮಾಡಿದೆ. ಇನ್ನು ಮುಂದೆ ನಿನಗೆ ಜೀವವಿರುವ ಮನುಷ್ಯರೇ ದೇವರಾಗಿರಬೇಕು. ಆದುದರಿಂದ ನೀನು ಅನವಶ್ಯಕವಾಗಿ ಅವಮಾನಪಡಿಸಿರುವ ಕಂಡನ ಪಾದಗಳಿಗೆ ಬಿದ್ದು ಬೇಡಿಕೊ. ಅವನೇ ನಿನ್ನ **ರಾಮ**, ಭಗವಂತ, ಮತ್ತು ಸರ್ವಸ್ವ. ನಿನಗೆ ಆಗ ಬೇಕಾದುದು ಈ ದರ್ಶನ. ಹಿತ್ತಾಳೆಯ ವಿಗ್ರಹಗಳನ್ನು ಪೂಜಿಸುತ್ತ, ಮಾನವರಲ್ಲಿ ದ್ವೇಷಮಾಡುವುದು ಭಕ್ತಿಯಲ್ಲ. ನಿನ್ನ ಉಗ್ರವಾದ ತಪ್ಪಿತವನ್ನು ತಕ್ಷಣ ಸರಿಪಡಿಸಿಕೊಳ್ಳುವ ದಾರಿ ನೋಡು" ಎಂದನು. ದ್ವಾರಕಾದಾಸನು ಕೂಡಲೆ ಎದ್ದನು. ಹೋಗಿ ಕಂಡನ ಪಾದಗಳಿಗೆರಗಿದನು. ಅಲ್ಲಿಂದಾಚೆಗೆ ಆಶ್ರಮದಿಂದ ಹೊರಟು ಹೋಗುವವರೆಗೂ ಭಗವನ್ನಾಮ ಜಪ ಮಾಡುತ್ತ ಆಶ್ರಮಕ್ಕೆ ಬಂದ ಎಲ್ಲರಿಗೂ, ಅವರು ಯಾರೇ ಆಗಲಿ–ಪುರುಷರಾಗಲಿ ಸ್ತ್ರೀಯರಾಗಲಿ–ಯಾವ ಜಾತಿಯವರೇ ಆಗಲಿ, ಪಾದಗಳಿಗೆ ನಮಸ್ಕಾರ ಮಾಡುತ್ತಿದ್ದನು.

ಮಹಾರಾಷ್ಟ್ರ ಮತ್ತು ಉತ್ತರ ದೇಶದ ಭಕ್ತರ ಕರೆ ಬಲವತ್ತರವಾಯಿತು. ಕೊನೆಗೆ ಅದನ್ನು ತಡೆಯಲಾಗದೆ ಹೋಯಿತು. ಅಲ್ಲಿಗೆ ಹೋಗಿ ಅವರ ಅಭೀಷ್ಟ ವನ್ನು ಪೂರ್ಣ ಮಾಡಬೇಕೆಂದು **ರಾಮನ** ಆಜ್ಞೆಯಾಯಿತು. ಅದರಂತೆ ರಾಮ ದಾಸನು ಜನಾರ್ದನಪಂತನಿಗೆ ಬಂದು ತನ್ನನ್ನು ಕರೆದುಕೊಂಡು ಹೋಗು ಎಂದು ಪತ್ರಬರೆದನು.

ರಾಮದಾಸನು ಸಂಚಾರ ಹೊರಡುವ ವಾರ್ತೆ ಆಶ್ರಮಕ್ಕೆ ಸೇರಿದ್ದವರಲ್ಲಿ ದೊಡ್ಡ ಒಂದು ಗೊಂದಲವನ್ನೇ ಎಬ್ಬಿಸಿತು. ಇವರಲ್ಲಿ ಕೃಷ್ಣಾಬಾಯಿಗೆ ಹೆಚ್ಚಿನ ಯೋಚನೆಯಾಯಿತು. ಇಲ್ಲಿಯವರೆಗೂ ಈಕೆ ತಾನಿದ್ದ ಮನೆಯಲ್ಲಿ ಮಕ್ಕ ಳೊಡನೆ ರಾತ್ರಿ ಕಾಲವನ್ನು ಕಳೆಯುತ್ತಿದ್ದಳು. ಈಗ ರಾತ್ರಿ ಹೊತ್ತು ಆಶ್ರಮ ದಲ್ಲಿರಲು ಅಪ್ಪಣೆ ಕೊಡಬೇಕೆಂದು ಒತ್ತಾಯಪಡಿಸಿದಳು. ಮಾತೆ ರುಕುಮಾಬಾಯಿ ರೋಗದಿಂದ ನರಳುತ್ತಿದ್ದರೂ ಆಶ್ರಮದಲ್ಲಿಯೇ ಇದ್ದಳು. ಆದರೆ ಕೃಷ್ಣಾಬಾಯಿ ರಾತ್ರಿಯ ಹೊತ್ತು ಮಕ್ಕಳನ್ನು ಬಿಟ್ಟಿರುವುದಕ್ಕೆ ರಾಮದಾಸನು ಒಪ್ಪಲಿಲ್ಲ.

ಎಂದಿನಂತೆ ಒಂದು ದಿವಸ ಸಾಯಂಕಾಲ ರಾಮದಾಸನು ಆಕೆಗೆ ಮನೆಗೆ ಹೋಗಲು ಜ್ಞಾಪಿಸಿದನು. ನಿಜವಾಗಿ ಆಕೆ ಆಶ್ರಮದ ಸೇವೆಯಲ್ಲಿ ಎಷ್ಟು

ಮಗ್ನಳಾಗುತ್ತಿದ್ದಳೆಂದರೆ ಆಕೆ ಹೊತ್ತು ಕಳೆಯಿತೆನ್ನುವುದನ್ನು ತೀರ ಮರೆಯು ತ್ತಿದ್ದಳು. ಕತ್ತಲು ಕವಿಯುತ್ತ ಬಂದರೂ ಆಶ್ರಮದಿಂದ ಹೊರಡದೆ ಇರುವಳು. ಆ ಹೊತ್ತು ಆಕೆ ಮನೆಗೆ ಹೋಗಲು ಶುದ್ಧಾಂಗವಾಗಿ ಮನಸ್ಸಿಲ್ಲದೆ ಇದ್ದಳು. ಆಶ್ರಮದಲ್ಲಿ ನಿಲ್ಲಲು ಅಪ್ಪಣೆ ಕೊಡಬೇಕೆಂದು ರಾಮದಾಸನನ್ನು ಎಷ್ಟೋ ವಿಧವಾಗಿ ಬೇಡಿಕೊಂಡಳು. ಆದರೆ ಮನೆಯಲ್ಲಿ ಮಕ್ಕಳಿದ್ದುದರಿಂದ ರಾಮ ದಾಸನು ಒಪ್ಪಲಾಗಲಿಲ್ಲವಾಗಿ ಹೊರಟು ಹೋದಳು.

ಮಾರನೆಯ ಬೆಳಿಗ್ಗೆ ಎಂಟು ಗಂಟೆ ಸಮಯದಲ್ಲಿ ಒಬ್ಬ ರೈತನು ಬಂದು ಕೃಷ್ಣಾಬಾಯಿ ಬೆಟ್ಟದ ಮೇಲೆ ಭೂತಸ್ಥಾನದ ಬಳಿ ಕಾಡಿನಲ್ಲಿ ಬಿದ್ದಿರು ವುದಾಗಿಯೂ ಒಂದು ಕಾಲು ಊದಿದೆ ಎಂದೂ, ಸ್ಮೃತಿ ಅರ್ಧ ತಪ್ಪಿದೆಯೆಂದೂ ತಿಳಿಸಿದನು. ಕೂಡಲೆ ರಾಮದಾಸನೂ ಆಶ್ರಮದಲ್ಲಿದ್ದ ಇತರ ಕೆಲವರೂ ಆ ಸ್ಥಳಕ್ಕೆ ಓಡಿ ಹೋದರು. ಕೃಷ್ಣಾಬಾಯಿ ಒಂದು ಮರದ ಕೆಳಗೆ ಕುಳಿತಿದ್ದಳು. ಆಕೆಯ ಬಟ್ಟೆಗಳೆಲ್ಲಾ ಮಣ್ಣಾಗಿದ್ದುವು. ಒಂದು ಕಾಲು ಮಂಡಿಯವರೆಗೂ ಊದಿದ್ದಿತು. ರಾಮದಾಸನು ಸ್ನೇಹಿತರ ಸಹಾಯದಿಂದ ಆಕೆಯನ್ನು ಆಶ್ರಮಕ್ಕೆ ಕರೆದುಕೊಂಡು ಹೋದನು.

ಆಕೆಯೇ ಹೇಳಿದಳು: ರಾತ್ರಿ ಸ್ವಲ್ಪ ಹೊತ್ತು ಆಶ್ರಮದ ಹೊರಗಿನ ಅಂಗಳದಲ್ಲೂ, ಉಳಿದ ಹೊತ್ತನ್ನು ಆಕೆ ಬಿದ್ದಿದ್ದ ಕಾಡಿನಲ್ಲೂ ಕಳೆದಿದ್ದಳು. ಆಶ್ರಮದಲ್ಲಿ ನಿಲ್ಲಲು ರಾಮದಾಸನು ಅನುಮತಿ ಕೊಡದಿದ್ದುದು ಅವಳಿಗೆ ಬಹಳ ಸಂಕಟವನ್ನುಂಟುಮಾಡಿದ್ದಿತು. ಅವಳು ಮನೆಗೆ ಹೋಗಲಾರದೆ ಆದಳು. ಕಾಲು ಊದಿದ್ದಕ್ಕೆ ಕಾರಣ ಒಂದು ಹಾವು ಕಚ್ಚಿದ್ದು. ಆದರೂ ಆಕೆ ತೀರಾ ಶಾಂತಳಾಗಿದ್ದಳು. ಅವಳ ಮುಖ ಮೊದಲಿನಂತೆಯೆ ವರ್ಚಸ್ವಿಯಾಗಿದ್ದಿತು. ನೋವಿನ ಸ್ವಲ್ಪ ಕಲೆಯೂ ಅದನ್ನು ಕಂಗೆಡಿಸಿರಲಿಲ್ಲ. ಅಂತೂ ದೇವರ ದಯದಿಂದ ಆಕೆಗೆ ಗುಣವಾಯಿತು.

ಆಶ್ರಮಕ್ಕೆ ಬರುತ್ತಿದ್ದ ಶ್ರದ್ಧಾಳುಗಳಾದ ಸಾಧಕರಲ್ಲಿ ಪುತ್ತೂರಿನ ನಿವಾಸಿ ಗುಂಡನೆಂಬುವನೊಬ್ಬನಿದ್ದನು. ಇವನು ಬೊಂಬಾಯಲ್ಲಿ ಕೆಲಸದಲ್ಲಿದ್ದು ರಜ ಪಡೆದು ಬಂದಿದ್ದನು. ರಜ ಪೂರೈಸುವ ಕಾಲದಲ್ಲಿ ರಾಮದಾಸನನ್ನು ನೋಡಲು ಬಂದನು. ರಾಮದಾಸನೊಂದಿಗೆ ಸ್ವಲ್ಪ ಮಾತನಾಡುವುದರಲ್ಲೇ, ಇವನಲ್ಲಿ ಮಹತ್ತರವಾದ ಮಾರ್ಪಾಡು ಆಯಿತು. ಬೊಂಬಾಯಿಗೆ ಮರಳಿ ಕೆಲಸದ ಮೇಲೆ ಹೋಗುವ ಅಭಿಪ್ರಾಯವನ್ನು ತ್ಯಜಿಸಿ, ಅವನು ರಾಮದಾಸನನ್ನೇ ಅನುವರ್ತಿಸು ವುದಾಗಿ ನಿರ್ಧರಿಸಿದನು. ಅವನು ಕೇಳಿಕೊಂಡಂತೆ ರಾಮದಾಸನು ಅವನಿಗೆ ರಾಮ ಮಂತ್ರದ ಉಪದೇಶವನ್ನು ಕೊಟ್ಟನು. ಅರ್ಧ ಗಂಟೆಯ ಕಾಲ ಅದನ್ನು ಉಚ್ಚರಿಸುತ್ತಿರುವಾಗ್ಗೆ ಅವನು ಆಧ್ಯಾತ್ಮಿಕ ಭಾವನೆಯಿಂದ ಎಷ್ಟು ವಿವಶನಾದ ನೆಂದರೆ ಅವನು ಆನಂದ ಪಾರವಶ್ಯದಲ್ಲಿ ಕುಣಿಯಲಾರಂಭಿಸಿದನು. ಅಲ್ಲಿಂದಾಚೆಗೆ

ತನ್ನ ಮನಸ್ಸನ್ನೂ ಜೀವನವನ್ನೂ, ಅವನು ಭಗವಂತನ ಧ್ಯಾನಕ್ಕೂ, ಆಶ್ರಮದ ಸೇವೆಗೂ ಅರ್ಪಣೆ ಮಾಡಿದನು. ಅವನು ಸ್ವಭಾವದಿಂದ ಮೌನಿ, ವಿನೀತ, ಮುಂದೆ ನಿಲ್ಲುವವನಲ್ಲ, ಕಾರ್ಯತತ್ಪರ. ಅವನೊಬ್ಬ ಸರಳ ಶುದ್ಧ ಶ್ರೇಷ್ಠಜೀವ.

ಪ್ರಯಾಣದ ದಿನ ಬಂದೊದಗಿತು. ರಾಮದಾಸನು ಜನಾರ್ದನಪಂತನೊಂದಿಗೆ ಕಾಸರಗೋಡಿನಿಂದ ಪ್ರಯಾಣ ಮಾಡಿದನು. ಕೃಷ್ಣಾಬಾಯಿ, ರುಕುಮಾಬಾಯಿಯವರನ್ನು ಒಳಕೊಂಡು ರಾಮದಾಸನನ್ನು ಬೀಳ್ಕೊಡಲು ಬಂದಿದ್ದ ಅನೇಕ ಭಕ್ತರಿಂದ ರೈಲ್ವೆ ಸ್ಟೇಷನ್ನು ತುಂಬಿದ್ದಿತು.

---

## ಅಧ್ಯಾಯ ೪೫

### ಬೆಂಗಳೂರು-ಸೊಲ್ಲಾಪುರ

ರಾಮದಾಸನೂ, ಜನಾರ್ದನಪಂತನೂ ಸಕಾಲದಲ್ಲಿ ಬೆಂಗಳೂರನ್ನು ಸೇರಿ ಮಲ್ಲೇಶ್ವರದಲ್ಲಿ ಭವಾನೀಶಂಕರರಾಯನ ಮನೆಯಲ್ಲಿಳಿದರು. ಅವರು ಇಲ್ಲಿ ಇದ್ದುದು ಎರಡು ದಿನ ಮಾತ್ರ. ಮನೆಯ ಭಕ್ತರ ಇಷ್ಟದಂತೆ ಜನಾರ್ದನಪಂತನು ಕೀರ್ತನ ಮಾಡಿದನು. ಅದನ್ನು ಕೇಳಲು ನೆರೆಹೊರೆಯ ಜನರು ಬಂದಿದ್ದರು. ಆ ಸಮಯದಲ್ಲಿ ಮನೆಯಲ್ಲಿ ಯಾವುದೋ ಶುಭ ಕಾರ್ಯವನ್ನು ನಡೆಯಿಸಲು ಬಂದಿದ್ದ ಒಬ್ಬ ಪುರೋಹಿತನೂ ಇದ್ದನು. ಕೀರ್ತನಾ ನಂತರರಾಮದಾಸನು ವಿಶ್ರಾಂತಿಗಾಗಿ ಉಪಯೋಗಿಸುತ್ತಿದ್ದ ಕೊಟಡಿಗೆ ಹೋದಾಗ, ಪುರೋಹಿತನು ಒಳಕ್ಕೆ ಬಂದು ಕಠಿಣವಾಗಿ ಬುದ್ಧಿವಾದ ಹೇಳಿದನು; ಗೃಹಸ್ಥಧರ್ಮವನ್ನು ತ್ಯಜಿಸಿದುದಕ್ಕಾಗಿ ರಾಮದಾಸನನ್ನು ಬಹಳವಾಗಿ ಆಕ್ಷೇಪಿಸಿದನು. ರಾಮದಾಸನು ಇವನ ಕಹಿ ಮಾತುಗಳನ್ನು ಸುಮ್ಮನೆಯೆ ಕೇಳಿ, ನಗೆಯಿಂದ ವಿಷಯವನ್ನು ಮುಗಿಸಿದನು. ಅವನೊಂದಿಗೆ ವಿವರಣೆ ವಿಚಾರಗಳನ್ನು ಮಾಡುವುದು ನಿರುಪಯುಕ್ತವೆಂದು ಕಂಡಿತು.

ಬೆಂಗಳೂರಿನ ಪ್ರವಾಸ ಮುಗಿದು ಇವರು ಸೊಲ್ಲಾಪುರಕ್ಕೆ ಹೊರಟರು. ಸೊಲ್ಲಾಪುರ ಸ್ಟೇಷನ್ನಿನಲ್ಲಿ ಸ್ನೇಹಿತರ ಗುಂಪೊಂದು ಬಂದು ಕಾದಿದ್ದಿತು. ಇವರಲ್ಲಿ ಗೋವಿಂದ ರಾಮಕೃಷ್ಣ ಜೋಷಿಯೂ, ಇವನ ಅಳಿಯನೂ ಇದ್ದರು. ಇದೇ ಸಮಯದಲ್ಲಿ ಅಂಜನ್‌ಗಾಮಿನಲ್ಲಿ ಮಾಧವರಾವ್ ಕುಲಕರ್ಣಿಯ ಮನೆಯಲ್ಲಿ ಉತ್ಸವ ನಡೆಯುತ್ತಿದ್ದಿತು. ರಾಮದಾಸನು ಮೊದಲು ಈ ಉತ್ಸವಕ್ಕೆ ಹೋಗಿ, ನಂತರ ಉಪಲೈದುಮುಲದ ಕಡೆಗೆ ಪ್ರಯಾಣ ಮಾಡಬೇಕೆಂದು ಸೂಚನೆಯಾಯಿತು. ಇಲ್ಲಿ ಇವರ ಜೊತೆಗೆ ಪ್ರೇಮ್‌ಸಿಂಗನೂ ಬಂದು ಸೇರಿದನು. ಇವರೆಲ್ಲರೂ ಅಂಜನ್‌ಗಾಮನ್ನು ಸಕಾಲದಲ್ಲಿ ಮುಟ್ಟಿದರು. ಮಾಧವರಾಯನ

ಮನೆಯ ಉತ್ಸವ ಭರದಿಂದ ನಡೆಯುತ್ತಿದ್ದಿತು. ಮಾಧವರಾಯನ ಮತ್ತು ಇತರ ಭಕ್ತರ ಸಂಸರ್ಗದಲ್ಲಿ ರಾಮದಾಸನು ಬಹು ಸಂತೋಷವನ್ನನುಭವಿಸಿದನು.

ಗೋವಿಂದ ರಾಮಕೃಷ್ಣ ಜೋಷಿಯ ಅಳಿಯ ಅನಂತಬುವ ಕೀರ್ತನೆ ಮಾಡಿ ನೆರೆದಿದ್ದ ಜನಗಳನ್ನು ಸಂತೋಷಪಡಿಸಿದನು. ರಾಮದಾಸನು ಭಕ್ತಿಯನ್ನು ಕುರಿತು ಒಂದು ಉಪನ್ಯಾಸವನ್ನು ಮಾಡಬೇಕಾಯಿತು.

ಅಂಜನ್‌ಗಾಮಿನಿಂದ ರಾಮದಾಸ, ಜನಾರ್ದನಪಂತ್, ಪ್ರೇಮ್‌ಸಿಂಗ್ ಮತ್ತು ರಾಮದಾಸನನ್ನು ಕರೆದುಕೊಂಡು ಹೋಗಲು ಬಂದಿದ್ದ ಉಪಲೈದುಮಲದ ಇನ್ನಿಬ್ಬರು ಭಕ್ತರು ಇವರೆಲ್ಲ ಎತ್ತಿನ ಗಾಡಿಗಳಲ್ಲಿ ಹೊರಟರು. ಸಾಯಂಕಾಲಕ್ಕೆ ದಾರಿಯ ಪಕ್ಕದ ಯಾವಳಿ ಎಂಬ ಸಣ್ಣ ಹಳ್ಳಿಯನ್ನು ಮುಟ್ಟಿದರು. ರಾತ್ರಿ ಇಲ್ಲಿಳಿದುಕೊಂಡಿದ್ದು ಇವರೆಲ್ಲ ಬೆಳಗು ಮುಂಜಾನೆ ಉಪಲೈದುಮಲಕ್ಕೆ ಹೊರಟರು. ಉಪಲೈದುಮಲದ ಜನ ರಾಮದಾಸನಿಗೆ ನೀಡಿದ ಸ್ವಾಗತ ವರ್ಣಿಸಲಸದಳವಾಗಿದ್ದಿತು. ಎಲ್ಲ ಜಾತಿಮತಕೋಮುಗಳ ಗಂಡಸರು ಹೆಂಗಸರು ಮಕ್ಕಳು ಸ್ವಾಗತವನ್ನು ಬಹು ಯಶಸ್ವಿಯನ್ನಾಗಿ ಮಾಡಲು ಒಮ್ಮನಸ್ಸಿನಿಂದ ಸೇರಿದ್ದರು. ಬಾಣ, ಬಿರಸು, ಭಜನೆ, ತಾಳಮೇಳಗಳಿಂದ ಕೂಡಿದ ದೊಡ್ಡ ಮೆರವಣಿಗೆಯಲ್ಲಿ ರಾಮದಾಸನನ್ನು ಊರಿನ ಬೀದಿಗಳಲ್ಲಿ ಉತ್ಸವ ಮಾಡಿ ಕರೆದು ಕೊಂಡು ಹೋದರು. ಭಕ್ತಮಾತೆಯರು ಗುಡಿಸಿಲುಗಳ ಮುಂದೆ ಸಾರಿಸಿ, ಗುಡಿಸಿ ರಂಗವಲ್ಲಿ ಹಾಕಿ ಫಲಪುಷ್ಪ ಆರತಿಗಳೊಂದಿಗೆ ಹೊಸ್ತಿಲುಗಳಲ್ಲಿ ನಿಂತಿದ್ದರು. ಸುತ್ತಣ ದೃಶ್ಯ ಹಬ್ಬದ ದಿವಸದ ಕುರುಹುಗಳನ್ನು ತೋರುತ್ತಿದ್ದಿತು. ಮನೆಮನೆಗೂ ದಾರಿಯುದ್ದಕ್ಕೂ ತೋರಣಗಳನ್ನು ಕಟ್ಟಿದ್ದರು. ಮೆರವಣಿಗೆ ಊರಿನ ಬೀದಿ ಗಳನ್ನೆಲ್ಲ ಹಾಯ್ದು ಕೊನೆಗೆ ಬಾಬರಾವ್ ಕುಲಕರ್ಣಿಯ ಮನೆಯ ಮುಂದೆ ನಿಂತಿತು. ರಾಮದಾಸನು ಇಲ್ಲಿರಬೇಕೆಂದು ಗೊತ್ತುಮಾಡಿದ್ದರು. ಅವನನ್ನು ಅದರೊಳಕ್ಕೆ ಕರೆದುಕೊಂಡು ಹೋದರು. ಸಂಭ್ರಮದಿಂದ ಕೂಡಿದ ಜನರ ಗುಂಪು ಮನೆಯನ್ನು ಕಿಕ್ಕಿರಿದು ತುಂಬಿದ್ದಿತು. ದಿವ್ಯ ರಾಮಮಂತ್ರದ ನಿರಂತರ ಕೀರ್ತನ ಅಲ್ಲಿ ನೆರೆದಿದ್ದ ಪ್ರತಿಯೊಬ್ಬರ ಕಂಠದಿಂದಲೂ ಘಂಟಾಘೋಷವಾಗಿ ಹೊರಡುತ್ತಿದ್ದಿತು. ಕೂಡಲೆ ನರ್ತನಕ್ಕಾರಂಭವಾಯಿತು. ಆ ಊರಿನ ಮುಸಲ್ಮಾನರೂ ಈ ಸ್ವಾಗತ ಸಮಾರಂಭದಲ್ಲಿ ಹೃತ್ಪೂರ್ವಕವಾಗಿ ಭಾಗವಹಿಸಿದ್ದರು. ಹಿಂದೂ ಭಕ್ತರಿಗೆ ಆಶ್ಚರ್ಯವನ್ನುಂಟುಮಾಡುವಂತೆ ಒಬ್ಬ ಮುಸ್ಲಿಂ ಭಕ್ತನೂ ರಾಮನಾಮವನ್ನು ಘಟ್ಟಿಯಾಗಿ ಉಚ್ಚರಿಸುತ್ತಾ ನರ್ತನದಲ್ಲಿ ಭಾಗಿಯಾದನು. ರಾತ್ರಿಯೆಲ್ಲಾ ಸಂಕೀರ್ತನ ಮತ್ತು ನರ್ತನ ಆಗುತ್ತಿದ್ದುವು. ಭಗವನ್ನಾಮದ ಮಾಧುರ್ಯದಿಂದ ಉಂಟಾದ ಆನಂದದಲ್ಲಿ ಭಕ್ತರು ತಮ್ಮನ್ನೇ ಮರೆತಂತೆ ಕಾಣು ತ್ತಿದ್ದರು.

ರಾಮದಾಸನು ಈ ಗ್ರಾಮದಲ್ಲಿದ್ದದ್ದು ಹದಿನೆಂಟು ದಿನಗಳಿಗೆ ಮೇಲ್ಪಟ್ಟು ಬೆಳೆಯಿತು. ಸುತ್ತಣ ಹಳ್ಳಿಗಳಿಂದಲೂ ನೂರಾರು ಜನ ಬಂದು ಸಂದಣಿ ಹೆಚ್ಚಾಗಿದ್ದಿತು. ಗ್ರಾಮದ ಪ್ರತಿ ಒಬ್ಬರ ಬಾಯಿಂದಲೂ ಹೊರಡುತ್ತಿದ್ದ ದಿವ್ಯ "ರಾಮ" ನಾಮವು ಅಲ್ಲಿಯ ಗಾಳಿಯನ್ನು ತೀವ್ರ ಆಧ್ಯಾತ್ಮಿಕ ತೇಜಸ್ಸಿನಿಂದ ತೀವಿದ್ದಿತು.

ಭಜನೆ, ಕೀರ್ತನೆ, ಹಬ್ಬದೂಟ ಮತ್ತು ರಾಮದಾಸನ ಉಪನ್ಯಾಸಗಳ ಕಾರ್ಯ ಒಂದಾಗುತ್ತಲೊಂದು ಕ್ರಮವಾಗಿ ನಡೆದುವು. ಭಕ್ತರು ಮಹತ್ತಾದ ತಮ್ಮ ಸ್ವಚ್ಛಪ್ರೇಮವನ್ನು ಸರ್ವರೀತಿಯಲ್ಲಿಯೂ ರಾಮದಾಸನ ಮೇಲೆ ಸುರಿಸಿದರು. ಇಲ್ಲಿ ನಡೆದುದನ್ನೆಲ್ಲಾ ವಿಶದವಾಗಿ ತಿಳಿಸುವುದು ಪ್ರಯಾಸದ ಕೆಲಸವಾದೀತು. ಆದ್ದರಿಂದ ರಾಮದಾಸನು ಇಲ್ಲಿ ಪ್ರಮುಖವಾದ ಒಂದೆರಡು ವಿಷಯಗಳನ್ನು ಗುರುತಿಸುತ್ತಾನೆ.

ಆ ಗ್ರಾಮದ ಭಕ್ತರಲ್ಲಿ ಶೂದ್ರಜಾತಿಯ ಒಬ್ಬ ಚಿಕ್ಕವಯಸ್ಸಿನ ವಿಧವೆ ಇದ್ದಳು. ರಾಮದಾಸನು ಇಲ್ಲಿಗೆ ಬರುವುದಕ್ಕೆ ಒಂದು ತಿಂಗಳ ಮುಂಚಿನಿಂದಲೂ ಈ ಭಕ್ತೆ, ರಾಮದಾಸನು ತನ್ನ ಮನೆಗೆ ಬಂದು ತಾನುಮಾಡಿದ ಅಡಿಗೆಯನ್ನು ಭೋಜನಮಾಡಿದ ಮೇಲೆಯೇ ತಾನು ಆಹಾರ ತೆಗೆದುಕೊಳ್ಳುವುದೆಂದು ಸಂಕಲ್ಪಿಸಿ ಕಠಿಣವಾದ ಉಪವಾಸವ್ರತವನ್ನು ಕೈಕೊಂಡಿದ್ದಳು. ಈಕೆಯ ಹೆಸರು ಅಂಜನೀ ಮಾತೆ. ಈಕೆ ಬಂದು ರಾಮದಾಸನನ್ನು ಭೋಜನಕ್ಕೆ ಕರೆದಳು. ಈ ಮಧ್ಯೆ ಅಲ್ಲಿಯ ಭಕ್ತರು ರಾಮದಾಸನನ್ನು ಯಾರ ಯಾರ ಮನೆಗೆ ಯಾವ ಯಾವ ದಿವಸ ಭೋಜನಕ್ಕೆ ಕರೆದುಕೊಂಡು ಹೋಗಬೇಕೆಂಬುದನ್ನು ನಿರ್ಧರಿಸಿದ್ದರು. ಈಗ ರಾಮದಾಸನು ಈ ಮಾತೆಯ ಆಹ್ವಾನವನ್ನು ಭಕ್ತರ ಮುಂದಿಟ್ಟು, ಆ ಮಾತೆಯ ಪರವಾಗಿ ಬೇಡಿಕೊಂಡನು. ಭಕ್ತರಲ್ಲೊಬ್ಬನು ತನ್ನ ಸರದಿಯನ್ನು ಅಂಜನೀ ಮಾತೆಗಾಗಿ ಬಿಟ್ಟು ಕೊಡುವೆನೆಂದು ತಾನೇ ಒಪ್ಪಿದನು. ಆದುದರಿಂದ ದೇವತಾ ಸದೃಶಳಾದ ಆ ಮಾತೆ ಮಾಡಿದ್ದ ಅಮೃತೋಪಮ ಆಹಾರವನ್ನು ಭುಜಿಸುವ ಅತುಲ ಭಾಗ್ಯ ರಾಮದಾಸನಿಗೆ ದೊರೆಯಿತು.

ಒಂದು ದಿನ ಒಬ್ಬ ಮುಸಲ್ಮಾನನು ರಾಮದಾಸನನ್ನು ಆಮಂತ್ರಿಸಿದನು. ಅನೇಕ ಬ್ರಾಹ್ಮಣ ಭಕ್ತರೊಂದಿಗೆ ರಾಮದಾಸನು ಆತನ ಮನೆಗೆ ಹೋದನು. ಇದರಲ್ಲಿ ಅತ್ಯಾಶ್ಚರ್ಯ ಏನೆಂದರೆ, ಆ ಭಕ್ತ ಮುಸಲ್ಮಾನನು ಹಿಂದೂಗಳಂತೆ ಶಾಸ್ತ್ರೋಕ್ತವಾಗಿ ರಾಮದಾಸನ ಪಾದಪೂಜೆಯನ್ನು ನಡೆಸಲು ಮನಸ್ಸು ಮಾಡಿದುದು. ಪೂಜೆ ಮುಗಿದ ನಂತರ ಮುಸಲ್ಮಾನನು ತನ್ನ ಚಿಕ್ಕ ಗುಡಿಸಲ ಒಳಗೆ ಹೋಗಿ, ಬಹಳ ಕಾಲದಿಂದಲೂ ಖಾಯಿಲೆಯಿಂದ ನರಳುತ್ತಿದ್ದ ತನ್ನ ಹೆಂಡತಿಯನ್ನು ರಾಮದಾಸನು ಕುಳಿತಿದ್ದ ಕೈಸಾಲೆಗೆ ಎತ್ತಿ ತಂದು, ರಾಮದಾಸನ ಮುಗ್ಗುಲಲ್ಲಿ ಕುಳ್ಳಿರಿಸಿ, ರಾಮದಾಸನು ಆಕೆಯ ಮೇಲೆ ಕೈಯಾಡಿಸಬೇಕೆಂದು

ಬೇಡಿದನು. ಆಕೆಯ ಸ್ಥಿತಿಯಿಂದ ಅವಳು ಬಹಳ ಕಾಲದಿಂದ ಒಂದೇ ಸಮನಾಗಿ ಬರುತ್ತಿದ್ದ ಸೂಕ್ಷ್ಮ ಜ್ವರದಿಂದ ಅಸ್ವಾವಸ್ಥೆಗೆ ಇಳಿದಿದ್ದುದು ವ್ಯಕ್ತವಾಗುತ್ತಿದ್ದಿತು. ಆಕೆ ಬರಿಯ ಅಸ್ಥಿಪಂಜರವೇ ಆಗಿದ್ದಳು. ಆ ಮುಸಲ್ಮಾನನ ಇಚ್ಛೆಯಂತೆ ರಾಮ ದಾಸನು ಆಕೆಯ ತಲೆ ಮತ್ತು ಬೆನ್ನಿನ ಮೇಲೆ ತನ್ನ ಕೈಯಿಂದ ಸವರಿ, ಅವಳ ಗಂಡನು ತನಗೆ ಅರ್ಪಿಸಿದ ಹಾಲಿನಲ್ಲಿ ಅವಳಿಗೆ ಸ್ವಲ್ಪವನ್ನು ಕೊಟ್ಟು, ನಂತರ ಅಲ್ಲಿಂದ ಹೊರಟನು. ಕೆಲವು ದಿವಸಗಳ ನಂತರ, ರಾಮದಾಸನು ಇನ್ನೊಂದು ಹಳ್ಳಿಯಲ್ಲಿರುವಾಗ ಈ ಮಾತೆ ಸುಮಾರು ಒಂದು ವಾರ ಕಾಲದಲ್ಲಿ ಆರೋಗ್ಯ ಹೊಂದಿ ತನ್ನ ಗಂಡನೊಡನೆ ಹೊಲದಲ್ಲಿ ಕೆಲಸ ಮಾಡುತ್ತಿರುವುದಾಗಿ ರಾಮ ದಾಸನಿಗೆ ತಿಳಿಯಿತು. ಇಷ್ಟು ಪ್ರಭಾವಯುಕ್ತವಾದ ಸಂಕಲ್ಪದ ಮತ್ತು ಇಂಥ ನಿಗೂಢವಾದ ವರ್ತನೆಯ ಮಹಾಮಹಿಮ ದೇವನಿಗೆ ಎಲ್ಲ ಕೀರ್ತಿ ಸೇರಲಿ!

ಸಾಯಂಕಾಲದ ಹೊತ್ತಿನಲ್ಲಿ ರಾಮದಾಸನು ನದಿಯ ದಡಕ್ಕೆ ಹೋಗಿ ನರ್ತಿಸುತ್ತಿದ್ದನು. ನೂರಾರು ಜನ ಭಕ್ತರು ದಿವ್ಯ ರಾಮ ಮಂತ್ರವನ್ನು ಹಾಡುತ್ತ, ರಾಮದಾಸನೊಂದಿಗೆ ವರ್ತುಳಾಕಾರವಾಗಿ ನಿಂತು ನರ್ತನದಲ್ಲಿ ಭಾಗಿಗಳಾದರು. ಒಟ್ಟಿನಲ್ಲಿ ರಾಮದಾಸನು ಉಪಲೈದುಮಲದಲ್ಲಿದ್ದ ಕಾಲ ಪ್ರೇಮದ ಪರಮ ವಿಜಯ ದಿಂದ ಲಕ್ಷಿತವಾಗಿದ್ದಿತು. ಆದರ ಬೆಳಕಿನಲ್ಲಿ ಎಲ್ಲ ಜಾತಿಗಳೂ ಪೂರ್ಣ ಸಮತಾ ಮತ್ತು ಸಹೋದರ ಭಾವದಿಂದ ಬೆರತವು. ಭಗವಂತನ ಪ್ರೀತಿ ವ್ಯಕ್ತವಾದಲ್ಲಿ ವ್ಯಾಜ್ಯ ಮತ್ತು ವ್ಯಾಕುಲಗಳನ್ನು ಬೆಳೆಸುವ ವಾಡಿಕೆಯ ಭೇದಭಾವಗಳ ಅಂಧಕಾರ ದೂರವಾಗುತ್ತದೆ. (ಹೇ ಭಗವಂತ! ನಿನ್ನ ನಾಮಕ್ಕೆ ಸದಾ ಜಯವಾಗಲಿ!)

ಸ್ಥಳೀಯ ಮುಖ್ಯ ಭಕ್ತರಾದ ಕೆಲವರ ವಿಷಯವನ್ನು ಹೇಳದಿದ್ದರೆ ಉಪಲೈ ದುಮಲದ ಕಥೆ ಸಂಪೂರ್ಣವಾಗಲಾರದು. ರಘುನಾಥ ಮಹಾರಾಜ್, ಕೃಷ್ಣಾಜಿ ಪಂಢರೀನಾಥ್, ಬಾಪ್ಪಾಸಾಹೇಬ್, ಬಾಬಾರಾವ್ ಕುಲಕರ್ಣಿ ಮತ್ತು ಒಬ್ಬ ಗುಜರಾತಿ ವರ್ತಕ ಇವರುಗಳು ಮುಂದಾಳುಗಳಾಗಿ, ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸುವುದಕ್ಕೆ ಮಾತ್ರವಲ್ಲದೆ ಹಳ್ಳಿಗರ ಹೃದಯದಲ್ಲಿ ಭಗವನ್ನಾಮ ಬೀಜವನ್ನೂ ನೆಡುವುದರಲ್ಲಿ ತಮ್ಮ ಸಂಪೂರ್ಣ ಶ್ರದ್ಧೆಯ ಸೇವೆಯನ್ನು ನೀಡಿದರು.

ಹತ್ತಿರದ ಹಳ್ಳಿಯವರ ಒತ್ತಾಯದ ಆಹ್ವಾನದ ಮೇಲೆ ರಾಮದಾಸನು ಉಪಲೈದುಮಲವನ್ನು ಬಿಟ್ಟವನು ಭಾತಂಬರೆ, ಕೌಡುಗಾಂ, ಅಂಬೆಜವಲಿಗೆ ಮತ್ತು ಇತರ ಅನೇಕ ಹಳ್ಳಿಗಳಿಗೆ ಹೋಗಿದ್ದನು. ಎಲ್ಲ ಹಳ್ಳಿಗಳಲ್ಲೂ ರಾಮ ದಾಸನನ್ನು ನೋಡಲು ಸಾವಿರಾರು ಜನರು ಸೇರುತ್ತಿದ್ದರು. ಅಸ್ಪೃಶ್ಯರೆಂದು ಕರೆಯಿಸಿಕೊಳ್ಳುವ ಜಾತಿಯ ಜನರೂ ರಾಮದಾಸನ ಪಾದಸ್ಪರ್ಶನಕ್ಕಾಗಿ ಧಾರಾಳ ವಾಗಿ ಮುಂದೆ ಬರುತ್ತಿದ್ದರು. ಭಕ್ತಿ ಪ್ರೀತಿಗಳು ಹೊಳೆತುಂಬಿ ಏರಿದುವು. ಭಗವನ್ನಾಮ ಎಲ್ಲಾ ಕಡೆಯಲ್ಲಿಯೂ ಪಸರಿಸಿ, ಜನಗಳ ಹೃದಯವನ್ನು ಆನಂದ ಸಾಗರದಲ್ಲಿ ಮುಳುಗಿಸಿತು. ಪ್ರತಿ ಗ್ರಾಮದಲ್ಲೂ ರಾಮದಾಸನಿಗೆ ದೊರತ ಸ್ವಾಗತ

ವಿನತ ವಿವರದಲ್ಲಿ ಉಪಲೈದುಮಲವನ್ನು ಪ್ರವೇಶ ಮಾಡುವಾಗ ದೊರೆತ ಸ್ವಾಗತ ದಂತೆಯೇ ಇದ್ದಿತು.

ಈ ಸಮಯದಲ್ಲಿ ಪಂಢರಪುರದ ವರ್ಷಂಪ್ರತಿಯ ಕೃತ್ತಿಕೋತ್ಸವ ಹತ್ತಿರ ವಾಗುತ್ತಿದ್ದಿತು. ಆದ್ದರಿಂದ ಜನಾರ್ದನಪಂತ್ ಮತ್ತು ಇನ್ನಿತರ ಭಕ್ತರ ಸಲಹೆ ಯಂತೆ ರಾಮದಾಸನು ಈ ಉತ್ಸವಕ್ಕಾಗಿ ಪಂಢರಪುರಕ್ಕೆ ಹೋದನು. ಈ ಸಲ ರಾಮದಾಸನೂ ಸಂಗಡಿಗರೂ ಒಂದು ಧರ್ಮಶಾಲೆಯಲ್ಲಿ ಇಳಿದುಕೊಂಡರು. ವಿಠೋಬನ ದರ್ಶನಕ್ಕಾಗಿ ದೇವಸ್ಥಾನಗಳಿಗೆ ರಾಮದಾಸನನ್ನು ಕರದೊಯ್ದರು. ಇಲ್ಲಿ ನಿಂತ ಕೊನೆಯ ದಿನ ರಾಮದಾಸನು ಚಂದ್ರಭಾಗಾನದಿಯ ದಂಡೆಯಮೇಲೆ ಎತ್ತರವಾದ ಕೆಲವು ಮರಗಳ ನೆರಳಿನಲ್ಲಿ ಕೆಲವು ಗಂಟೆಗಳಿದ್ದನು. ಹಿಂದೆ ಸಂದರ್ಶಿಸಿದ್ದ ಅನೇಕ ಗ್ರಾಮಗಳವರು ಇಲ್ಲಿಗೆ ಬಂದಿದ್ದವರನ್ನು ರಾಮದಾಸನು ಕಂಡನು. ತನ್ನ ಸ್ಥಳವಾದ ಉಸ್ಮಾನಾಬಾದಿಗೆ ಬರಬೇಕೆಂದು ಅಲ್ಲಿಯ ವಕೀಲ ದಿಗಂಬರ ಕುಲಕರ್ಣಿಯಿಂದ ಆಹ್ವಾನ ದೊರೆಯಿತು. ಸೊಲ್ಲಾಪುರ ಜಿಲ್ಲೆಯಲ್ಲಿ ತನ್ನ ಸಂಚಾರ ಪೂರೈಸಿದ ನಂತರ ಅವನ ಅಪೇಕ್ಷೆಯನ್ನು ನಡೆಸುವುದಾಗಿ ರಾಮದಾಸನು ಆತನಿಗೆ ಮಾತುಕೊಟ್ಟನು.

ಪಂಢರಪುರದಿಂದ ಅಂಜನ್‌ಗಾವ್ ಮಾರ್ಗವಾಗಿ ರಾಮದಾಸನೂ ಸಂಗಡಿಗರೂ ಅನಗರ್‌ಗೆ ಹೋದರು. ಅವನು ಒಂದು ದಿನ ಅಂಜನ್‌ಗಾಮಿನಲ್ಲಿ ನಿಲ್ಲಬೇಕಾಯಿತು. ಈಗ ರಾಮದಾಸನೊಂದಿಗೆ ಹನ್ನೆರಡು ಜನ ಭಕ್ತರಿದ್ದರು. ಎಂದಿನಂತೆ ಎಲ್ಲರೂ ಮಾಧವರಾಯನ ಅತಿಥಿಗಳಾಗಿದ್ದರು. ಇಲ್ಲಿ ಗಮನಾರ್ಹವಾದ ಒಂದು ವಿಷಯ ನಡೆಯಿತು. ಮಾಧವರಾಯನೂ ಅವನ ಮನೆಯವರೂ ರಾಮ ದಾಸನನ್ನು ನೋಡಿ ತುಂಬ ಹರ್ಷಪಟ್ಟು, ದೊಡ್ಡ ಔತಣವನ್ನು ಏರ್ಪಡಿಸಲು ತೊಡಗಿದರು. ಈ ಮಧ್ಯೆ ಮಾಧವರಾಯನ ಸಂಬಂಧಿಯೊಬ್ಬ ಮುದುಕನು ಮಗ್ಗುಲ ಮನೆಯಲ್ಲಿ ಬಹಳ ಖಾಯಿಲೆಯಾಗಿದ್ದನು. ಆತನು ಅಸ್ವಾವಸ್ಥೆಯಲ್ಲಿದ್ದಾನೆಂದು ಅಂದಿನ ಉದಯದಲ್ಲಿ ತಿಳಿದು ಬಂದು ಮಾಧವರಾಯನಿಗೆ ಸ್ವಾಭಾವಿಕವಾಗಿ ಕಳವಳವಾಯಿತು. ಸುಮಾರು ಒಂಭತ್ತು ಗಂಟೆಯ ಹೊತ್ತಿಗೆ ಮಾಧವರಾಯನಿಗೂ ಮನೆಯವರಿಗೂ, ಆ ಮುದುಕ ತೀರಿಕೊಂಡನೆಂದು ವರ್ತಮಾನ ಬಂದಿತು. ಸಂಗತಿಯೇನೆಂದರೆ ನಂಬಿಕೆಯಿಂದಲೂ ವ್ಯವಹಾರದಲ್ಲೂ ಮಾಧವರಾಯನು ಆಚಾರಶೀಲ. ಹಿಂದೂಶಾಸ್ತ್ರದ ಪ್ರಕಾರ ಯಾರಾದರೂ ಹತ್ತಿರ ಸಂಬಂಧಿ ಕಾಲ ವಾದರೆ ಮನೆಯವರಿಗೆಲ್ಲಾ ಅಶೌಚ ಉಂಟಾಗುತ್ತದೆ. ಅಂಥ ಅಶೌಚ ಕಾಲಗಳಲ್ಲಿ ಯಾವ ಪೂಜಾಕಾರ್ಯಗಳಿಗೂ ಅವಕಾಶವಿಲ್ಲ. ಅವರನ್ನು ಮುಟ್ಟುವುದೂ, ಅವರು ಮಾಡಿದ ಅಡಿಗೆಯನ್ನು ಭುಂಜಿಸುವುದೂ ಶಾಸ್ತ್ರವಿರುದ್ಧವೆಂದೇ ಭಾವನೆ. ಸಂತೋಷದ ಈ ಸಮಯದಲ್ಲಿ ಬಂದ ಈ ದುಃಖವಾರ್ತೆಯಿಂದ ಮಾಧವರಾಯನು ತುಂಬಾ ಖಿನ್ನಮನಸ್ಕನಾದನು. ಭೋಜನಕ್ಕಾಗಿ ಆಗುತ್ತಿದ್ದ ಏರ್ಪಾಡೆಲ್ಲಾ

ಹಠಾತ್ ನಿಂತುಹೋಯಿತು. ಮಾಧವರಾಯನು ನೋವು ನಿರಾಶೆಯಿಂದ ಮ್ಲಾನವಾದ ಮುಖದೊಡನೆ ರಾಮದಾಸನಲ್ಲಿ ಬಂದು ದುಃಖದ ವಾರ್ತೆಯನ್ನು ತಿಳಿಸಿದನು. ಇದನ್ನು ಕೇಳಿ ರಾಮದಾಸನು ಏನೂ ಕೆಡಕಾಗಿಲ್ಲವೆಂದು ಭರವಸೆ ಕೊಡುತ್ತಾ, "ನಿಮ್ಮ ಸಮಾರಂಭಕ್ಕೆ ಭಗವಂತನು ಅಡ್ಡಿ ತರುವುದಿಲ್ಲ. ಆ ಮುದುಕ ಸತ್ತಿರಲಾರ. ಇನ್ನೇನು ವರ್ತಮಾನ ಬರುತ್ತದೋ ನೋಡೋಣ" ಎಂದನು. ಅದೇನು ಆಶ್ಚರ್ಯವೋ, ಸಂಭಾಷಣೆ ನಡೆದ ಕಾಲುಗಂಟೆಯೊಳಗಾಗಿ, ಸುದ್ದಿಗಾರನೊಬ್ಬನು ಓಡಿ ಬಂದು, ಮುದುಕನು ಇನ್ನೂ ಜೀವಿಸಿರುವನೆಂದೂ, ಅವನು ಸತ್ತಿದ್ದನೆಂಬ ಊಹೆ ತಪ್ಪೆಂದೂ ತಿಳಿಸಿದನು. ಇದನ್ನು ಕೇಳಿ ಮಾಧವರಾಯನಿಗೆ ಆದ ಆನಂದವನ್ನು ಉಲ್ಲೇಖಿಸುವುದಕ್ಕಿಂತಲೂ ಊಹಿಸುವುದು ಸುಲಭ. ಕೊಂಚ ಕಾಲ ಸಪ್ಪೆ ಬಿದ್ದುಹೋಗಿದ್ದ ಮನೆಯವರ ಮುಖಗಳಲ್ಲಿ ಹರ್ಷಮೂಡಿತು. ಅಡಿಗೆಯ ಕೆಲಸ ಭರದಿಂದ ಸಾಗಿತು. ಊಟವಾದ ನಂತರ ರಾಮದಾಸನನ್ನು ಆ ವೃದ್ಧನ ಬಳಿಗೆ ಕರೆದೊಯ್ದರು. ಆತನಿಗೆ ಇನ್ನೂ ಜೀವವಿದ್ದಿತು; ಆದರೆ ಸ್ಪಷ್ಟವಾದ ಬಾಹ್ಯಪ್ರಪಂಚಜ್ಞಾನವಿರಲಿಲ್ಲ. ಕೆಲವು ನಿಮಿಷ ಇದ್ದು ರಾಮದಾಸನು ಮಾಧವ ರಾಯನ ಮನೆಗೆ ಹಿಂತಿರುಗಿದನು. ನಾಲ್ಕು ಗಂಟೆ ಸಮಯದಲ್ಲಿ ರಾಮದಾಸನು ಅಂಜನ್‌ಗಾಮಿನಿಂದ ಹೊರಡುವ ವೇಳೆ ಮನೆಯವರಲ್ಲಿ ಕೊನೆಯವರು ಕೂಡ ಭೋಜನ ಮುಗಿಸಿದ ಮೇಲೆ, ಆ ಮುದುಕನು ಪ್ರಾಣಬಿಟ್ಟನೆಂದು ಕಡೆಯ ಮಾತಾಗಿ ವರ್ತಮಾನ ಬಂದಿತು.

ಅನಗರ್‌ನಲ್ಲಿ ಸ್ಥಳದ ಭಕ್ತರು ರಾಮದಾಸನನ್ನು ಹಿಂದಿನಂತೆಯೇ ಭಕ್ತಿ ವಿಶ್ವಾಸಗಳಿಂದ ಸ್ವಾಗತಿಸಿದರು. ಕೀರ್ತನ, ಭಜನ, ಭೋಜನಕೂಟ ಆ ಕಾಲದ ಕಾರ್ಯಕ್ರಮ ಆದುವು. ಇಲ್ಲಿ ಕೊಂಚ ಕಾಲವಿದ್ದು, ರಾಮದಾಸನೂ ಸಂಗಡಿಗರೂ ಉಪಲೈಗೆ ಪ್ರಯಾಣ ಮಾಡಿದರು. ಇಲ್ಲಿ ಮತ್ತೆ ರಾಮದಾಸನಿಗೆ ಗೋವಿಂದ ರಾಮಕೃಷ್ಣಜೋಷಿಯ ಆಡಂಬರರಹಿತವಾದ ಪುಣ್ಯಕುಟೀರದಲ್ಲಿ ಸ್ವಾಗತ ದೊರೆಯಿತು. ಆದರ್ಶ ದಂಪತಿಗಳಾದ ಗೋವಿಂದ ರಾಮಕೃಷ್ಣಜೋಷಿ ಮತ್ತು ಈತನ ಧರ್ಮಪತ್ನಿ ರಾಧಾಬಾಯಿ ಇವರ ಮೇರೆಹರಿದ ಪ್ರೀತಿ, ಸರಳ ವಿಶ್ವಾಸ, ಮತ್ತು ಉದ್ದಾಮ ಭಕ್ತಿಯನ್ನು ಯಾವ ಶಬ್ದಗಳು ತಕ್ಕ ರೀತಿಯಲ್ಲಿ ವಿವರಿಸಬಹುದು? ಇಲ್ಲಿ ಕೂಡ ಭಜನ, ಕೀರ್ತನ, ಭೋಜನಗಳ ಒಂದು ಸಂಪೂರ್ಣ ಕಾರ್ಯಕ್ರಮ ನಡೆಯಿತು.

ಅಷ್ಟಿ ಎಂಬ ಗ್ರಾಮದ ಜಹಗೀರ್‌ದಾರ್ ರಘುನಾಥ್ ಮಹಾರಾಜ್ ಯಶವಂತರ ಆಹ್ವಾನದ ಮೇಲೆ ರಾಮದಾಸನು ಉಪಲೈಯಿಂದ ಆ ಗ್ರಾಮಕ್ಕೆ ಹೋದನು. ರಾಮದಾಸನು ಜಹಗೀರ್‌ದಾರರ ಮನೆಗೆ ಹೋದಾಗ ಅವರ ಪತ್ನಿ ಬಹಿಷ್ಠೆಯಾಗಿದ್ದಳು. ಬ್ರಾಹ್ಮಣರ ಸಂಪ್ರದಾಯದಂತೆ ಈ ಕಾಲದಲ್ಲಿ ಸ್ತ್ರೀಯರು ಪ್ರತ್ಯೇಕವಾಗಿರಬೇಕು. ಯಾರನ್ನೂ ಮುಟ್ಟಕೂಡದು. ಹಾಗೆ ಮಾಡಿದರೆ

ವ್ಯೆಲಿಗೆಯಾಗುತ್ತದೆ ಎಂದು ತಿಳಿವಳಿಕೆ. ಅಡಿಗೆ ಕಾರ್ಯಗಳನ್ನು ನಿರ್ವಹಿಸುವ ವಿಚಾರದಲ್ಲಿ ಜಹಗೀರ್‌ದಾರರಿಗೆ ಯೋಚನೆಯುಂಟಾಯಿತು. ಪಕ್ಕದ ಮನೆ ಯಾಕೆಯ ಸಹಾಯದಿಂದ ಅತಿಥಿಗಳಿಗಾಗಿ ಅಡಿಗೆಮಾಡಿಸಿದರು. ತಾನು ಭಾಗಿಯಾಗಿರಲು ಅವಕಾಶವಿಲ್ಲದುದಕ್ಕಾಗಿ ಗೃಹಿಣಿಗೆ ತುಂಬ ಅಸಮಾಧಾನ ವಾಯಿತು. ರಾಮುದಾಸನ ಪಾದಸ್ಪರ್ಶಮಾಡುವ ಯೋಗವೂ ತನಗಿಲ್ಲವೆಂದು ಆಕೆ ಮನಸ್ಸಿನಲ್ಲೇ ಬಹಳ ವ್ಯಸನಪಟ್ಟಳು.

ಮೊದಲೇ ಏರ್ಪಡಿಸಿದ್ದಂತೆ ರಾಮುದಾಸನು ಜಹಗೀರ್‌ದಾರರೊಂದಿಗೆ ಒಂದು ದಿವಸದ ಮಟ್ಟಿಗೆ ನಿಲ್ಲುವುದಾಗಿದ್ದಿತು. ಆ ತಾಯಿ ಆಶೆಯಿಂದ ತಾನು ವಾಡಿಕೆಯಂತೆ ಮೂರುದಿವಸದ ವ್ಯೆಲಿಗೆಯನ್ನು ಕಳೆದು ಒಳಗೆ ಬರುವವರೆಗೂ ರಾಮುದಾಸನು ತಮ್ಮಲ್ಲಿ ನಿಲ್ಲಬೇಕೆಂದು ಪತಿಯ ಮೂಲಕ ಅವನನ್ನು ಪ್ರಾರ್ಥಿಸಿ ದಳು. ಆದರೆ ರಾಮುದಾಸನು ಸಮ್ಮತಿಸಲಾಗಲಿಲ್ಲ. ಆದ್ದರಿಂದ ಅದೇದಿನ ನಾಲ್ಕು ಗಂಟೆಯ ಹೊತ್ತಿಗೆ ಅವನು ಹೊರಟನು. ಅವನು ಈಚೆಗೆ ಬಂದಾಗ ಆ ತಾಯಿ ಮುಂಗಡೆಯ ಅಂಗಳದ ಒಂದು ಮೂಲೆಯಲ್ಲಿ ನಿಂತಿರುವುದು ಕಾಣಿಸಿತು. ರಾಮನಿಂದ ಹಠಾತ್ತಾಗಿ ಅಂತರ್ಯದಲ್ಲಿ ಆದ ಪ್ರೇರಣೆಯಂತೆ, ರಾಮುದಾಸನು ಆಕೆಯ ಬಳಿಗೆ ಹೋಗಿ, ತನ್ನ ಪಾದಸ್ಪರ್ಶಮಾಡಲು ಹೇಳಿದನು. ಆಕೆ ಅನುಮಾನಿಸಿದಳು. ತಾನು ಆಕೆಯ ಶಿಶುವಾದುದರಿಂದಲೂ ಮತ್ತು ಭಗವಂತನು ಇಂತಹ ಸಾಂಪ್ರದಾಯಕ ನಿರ್ಬಂಧಗಳಿಂದ ರಾಮುದಾಸನನ್ನು ಬಿಡುಗಡೆ ಮಾಡಿರುವುದರಿಂದಲೂ ಆಕೆ ಆತನನ್ನು ಮುಟ್ಟಿದರೆ ತಪ್ಪೇನೂ ಇಲ್ಲವೆಂದು ರಾಮುದಾಸನು ಆಕೆಗೆ ಧೈರ್ಯ ಹೇಳಿದನು. ಆ ತಾಯಿ ಸಂತೋಷಹಬ್ಬಿದ ಮುಖದಿಂದ ಇದನ್ನು ಅಂಗೀಕರಿಸಿ ತನ್ನ ಶಿರಸ್ಸನ್ನು ರಾಮುದಾಸನ ಪಾದಗಳ ಮೇಲಿಟ್ಟು ನಮಸ್ಕರಿಸಿದಳು. ಇದಾದಕೂಡಲೇ ರಾಮುದಾಸನು ತನಗಾಗಿ ಕಾದಿದ್ದ ಸ್ನೇಹಿತರಬಳಿಗೆ ಹೋದನು. ರಾಮುದಾಸನ ಈ ವರ್ತನೆಯಿಂದ ಅವರಿಗೆ ಬಹಳ ಆಶ್ಚರ್ಯವೇನೋ ಆಗಿರಬೇಕು. ಆದರೆ ಅವರು ಸಮಾಧಾನ ವಾಗಿದ್ದು ಇದನ್ನು ಒಪ್ಪಿಕೊಂಡರು.

ಇಲ್ಲಿ ಕೂಡ ರಾಮುದಾಸನಿಗೆ ಇಬ್ಬರು ಮುಸಲ್ಮಾನ ಸ್ನೇಹಿತರ ಪರಿಚಯ ವಾಗಿ ಅವರು ಅವನಿಗೆ ತುಂಬಾ ಪ್ರೀತಿಯನ್ನು ತೋರಿಸಿದರೆಂಬ ವಿಷಯವನ್ನು ಉಲ್ಲೇಖಿಸಬೇಕಾಗಿದೆ.

ಬೇರೆ ಅನೇಕ ಹಳ್ಳಿಗಳಲ್ಲಿ ಸಂಚರಿಸಿ ರಾಮುದಾಸನು ಸಂಗಡಿಗರೊಂದಿಗೆ ಖಂಡಾಲಿಗೆ ಬಂದನು. ವಾಮನರಾವ್ ಬಲವಂತ ಕುಲಕರ್ಣಿ ತನ್ನ ಅತಿಥಿಗಳ ಸತ್ಕಾರದಲ್ಲಿ ಎಂದಿನಂತೆಯೇ ಆದರ ತೋರಿದನು. ಬೇಗನೆಯೆ ರಾಮುದಾಸನನ್ನು ಉಸ್ಮಾನಾಬಾದಿಗೆ ಕರೆದುಕೊಂಡು ಹೋಗಲು ದಿಗಂಬರ ಕುಲಕರ್ಣಿ ಬಂದನು. ರೈಲಿನಲ್ಲಿ ಉಸ್ಮಾನಾಬಾದಿಗೆ ಹೋದರು. ರಾಮುದಾಸನು ದಿಗಂಬರ ಕುಲಕರ್ಣಿಯ

ಅತಿಥಿಯಾಗಿದ್ದನು. ಈ ಊರಿನ ಪ್ರವಾಸವು ಅನೇಕ ವಿಷಯಗಳಲ್ಲಿ ಜ್ಞಾಪಕಾರ್ಹ ವಾದುದು. ಈ ಪ್ರವಾಸಕ್ಕೆ ಸಂಬಂಧಿಸಿದ ಕೆಲವು ಮುಖ್ಯ ಘಟನೆಗಳನ್ನು ಇಲ್ಲಿ ವಿವರಿಸಿದೆ.

ರಾಮದಾಸನು ಇಲ್ಲಿಗೆ ಬಂದ ಮೂರನೆಯ ದಿವಸ ಅವನಿಗೆ ಇಬ್ಬರು ವರ್ತಕರಿಂದ ಆಹ್ವಾನಗಳು ಬಂದುವು. ಅವನನ್ನು ಮೊದಲು ಒಬ್ಬಾತನ ಮನೆಗೆ ಆಂಗ್ಲ ಸಂಗೀತ ವಾದ್ಯದೊಡನೆ ಮೆರವಣಿಗೆಯಲ್ಲಿ ಮೋಟಾರಿನಲ್ಲಿ ಕರೆದುಕೊಂಡು ಹೋದರು. ಈ ಮನೆಯಲ್ಲಿ ರಾಮದಾಸನಿಗೆ ದೊರೆತ ಸತ್ಕಾರ ರಾಜಯೋಗ್ಯ ವಾಗಿದ್ದಿತು. ಸ್ಪಷ್ಟವಾಗಿ ಈ ವರ್ತಕನು ತುಂಬ ಹಣಗಾರನಾಗಿರಬೇಕು. ಸಿಂಹಾಸನದಂತೆ ಭೂಷಿತವಾಗಿ ಅಲಂಕೃತವಾಗಿದ್ದ ಎತ್ತರದ ಆಸನದ ಮೇಲೆ ರಾಮದಾಸನನ್ನು ಕುಳ್ಳಿರಿಸಿದರು. ಅವನು ಆಸನದ ಮೇಲೆ ಕುಳಿತೊಡನೆಯೇ ತನ್ನ ಸಾಮಾನ್ಯ ಖಾದೀ ಬಟ್ಟೆಗಳೆರಡನ್ನೂ ತತ್ಕಾಲಕ್ಕೆ ತೆಗೆದು, ಜರತಾರಿ ರೇಷ್ಮೆ ವಸ್ತ್ರಗಳನ್ನು ಧಾರಣೆ ಮಾಡುವಂತೆ ವರ್ತಕನು ರಾಮದಾಸನನ್ನು ಒಡಂಬಡಿ ಸಿದನು. ರಾಮದಾಸನ ಮೈಗೂ, ಮುಖಕ್ಕೂ ಗಂಧವನ್ನು ಹಚ್ಚಿ, ಬಹಳ ಬೆಲೆಯ ನಾನಾ ಕಾಣಿಕೆಗಳನ್ನು ಹೇರಿದನು. ಪ್ರಸಾದವನ್ನು ಸ್ವೀಕರಿಸಿದ ಮೇಲೆ ರಾಮ ದಾಸನ ಫೋಟೋ ತೆಗೆದರು. ಹೊರಡುವ ಸಮಯದಲ್ಲಿ, ರಾಮದಾಸನು ಈ ವಸ್ತ್ರಗಳನ್ನೆಲ್ಲಾ ಬಿಚ್ಚಿ ಹಾಕಿ ತನ್ನ ಸಾಮಾನ್ಯದ ಖಾದಿ ಬಟ್ಟೆಯನ್ನು ಮತ್ತೆ ಹೊದೆದನು. ತಾನು ದಾನ ಮಾಡಿದ ಬೆಲೆ ಬಾಳುವ ವಸ್ತ್ರಗಳನ್ನೂ, ಇತರ ಪದಾರ್ಥಗಳನ್ನೂ ಸ್ವೀಕರಿಸಬೇಕೆಂದು ವರ್ತಕನು ರಾಮದಾಸನನ್ನು ಬೇಡಿದನು. ರಾಮದಾಸನು ವಂದನೆ ಹೇಳಿ ಇವನ್ನು ಒಲ್ಲೆನೆಂದು,

"ಹೊಳೆಯುತ್ತಿರುವ ಈ ವಸ್ತ್ರಗಳು ರಾಮದಾಸನಂತಹ ಅಲೆಯುತ್ತಿರುವ ಫಕೀರನಿಗೆ ಯೋಗ್ಯವಾದುವಲ್ಲ. ಆದುದರಿಂದ ಅವನು ಇವನ್ನು ತೆಗೆದುಕೊಳ್ಳ ದಿರುವುದನ್ನು ನೀವು ಕ್ಷಮಿಸಬೇಕು" ಎಂದನು.

ರಾಮದಾಸನು ಈ ವರ್ತಕನ ಮನೆಯನ್ನು ಬಿಟ್ಟು ಇನ್ನೊಬ್ಬ ವರ್ತಕನ ಸಂಗಡ ಹೋದನು. ಆತನು ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಅವನಿಗೆ ಇದೇ ಬಗೆಯ ಸತ್ಕಾರವನ್ನು ನಡೆಸಿದನು.

ದಿಗಂಬರ ಕುಲಕರ್ಣಿಯ ಮನೆ ನಿಜವಾಗಿ ಒಂದು ಭಜನೆ ಮಂದಿರವಾಗಿ ಬಿಟ್ಟಿತು. ಇಡೀ ಹಗಲೂ, ರಾತ್ರಿ ಬಹಳ ಹೊತ್ತಿನವರೆಗೂ, ಆ ಮನೆಯಲ್ಲಿ ಭಗವನ್ನಾಮ ಪ್ರತಿಧ್ವನಿತವಾಗುತ್ತಿದ್ದಿತು. ರಾಮದಾಸನು ಮಹಡಿಯ ಮೇಲಣ ವಿಶಾಲವಾದ ಒಂದು ಭವನದಲ್ಲಿ ಕುಳ್ಳಿರುವನು. ಅಲ್ಲಿ ನೆರೆದ ಭಕ್ತರೆಲ್ಲರೂ ಗೋಡೆಗಳ ಬಳಿ ಸಾಲಾಗಿ ನಿಂತು ಭಗವನ್ನಾಮವನ್ನು ಜೊತೆಯಾಗಿ ಸಂಕೀರ್ತನೆ ಮಾಡುತ್ತಿದ್ದರು. ಭಜನೆಗಳಲ್ಲಿ ದಿಗಂಬರ ಕುಲಕರ್ಣಿ ಪ್ರಮುಖ ಭಾಗವನ್ನು ವಹಿಸುತ್ತಿದ್ದನು. ರಾಮದಾಸನು ಇಲ್ಲಿಗೆ ಬಂದ ಮೂರನೆಯ ದಿನ ಆ ನೆರೆಯ

ಒಬ್ಬ ಹಿಂದು ವಕೀಲನು ಬಂದು ರಾಮದಾಸನ ಬಳಿ ಕುಳಿತಿದ್ದವನು, ಕೊನೆ ಕೊನೆಗೆ ನಾಮ ಸಂಕೀರ್ತನೆಯಲ್ಲಿ ಸೇರಿ, ಇತರರೊಂದಿಗೆ ನರ್ತನಕ್ಕೆ ಪ್ರಾರಂಭಿಸಿದನು. ಭಜನೆ ಮುಗಿದು ಎಲ್ಲವೂ ನಿಶ್ಯಬ್ದವಾಗಿರುವಾಗ ಈ ವಕೀಲನು ರಾಮದಾಸನ ಬಳಿ ಬಂದು ಅವನ ಎದುರಿಗೆ ಕುಳಿತನು.

ಕುಳಿತವನು ಹೀಗೆಂದನು: "ಸ್ವಾಮಿಜಿ, ನಾನು ಮಾರ್ಪಟ್ಟ ರೀತಿಯನ್ನು ನೀವು ಕೇಳಬೇಕೆಂದು ನನಗೆ ಬಹಳ ಆಸೆಯಾಗಿದೆ. ಅದು ಆಶ್ಚರ್ಯಕರವಾದ ರೀತಿಯಲ್ಲಿ ಆಯಿತು. ಮೊಟ್ಟ ಮೊದಲು ನಾನು ನಿಮಗೆ ತಿಳಿಸಬೇಕು, ಈಗ ಒಂದು ಗಂಟೆ ಹಿಂದಿನವರೆಗೂ ನಾನು ದೇವರ ವಿಷಯದಲ್ಲಿ ಘೋರಸಂದೇಹವಾದಿ. ನನ್ನ ಮನೆ ಈ ಮನೆಯ ಮಗ್ಗುಲಲ್ಲಿ ಇದೆ. ಇಲ್ಲಿ ನಡೆಯುತ್ತಿದ್ದ ಭಜನೆಯ ಶಬ್ದ ನನ್ನ ಮನೆಗೆ ಕೇಳಿಸುತ್ತಿದ್ದಿತು. ಭಜನೆಯೂ ಮತ್ತು ಮಹಡಿಯ ಮೇಲೆ ಥಡ ಥಡ ಶಬ್ದಗಳೂ ಕೇಳಬಂದಾಗ, ಇದು ಏನು ಗದ್ದಲ ಎಂದು ವಿಚಾರಿಸಿದೆ. ಒಬ್ಬ ಸಾಧು ಬಂದಿದ್ದಾನೆಂದೂ ಆದಕಾರಣ ಸಂಗೀತವೂ ನರ್ತನವೂ ಆಗುತ್ತಿವೆಯೆಂದೂ ಹೇಳಿದರು. ಯಾರೋ ಒಬ್ಬ ಅಲೆದಾಡಿಕೊಂಡಿರುವ ಸಂನ್ಯಾಸಿ ಮನೆಗೆ ಬಂದ ಮಾತ್ರಕ್ಕೆ ಮನೆಯವರು ಹೀಗೆ ಗಲಾಟೆ ಮಾಡುವುದು ಹುಚ್ಚುತನವೆಂದು ನಾನು ಯೋಚಿಸಿದೆ. ಮನೆಯವರನ್ನು ಹುಚ್ಚರೆಂದು ಯೋಚಿಸಿ ಮಾತ್ರ ಸುಮ್ಮನಾಗಲಿಲ್ಲ. ಇಲ್ಲಿ ಇಷ್ಟೊಂದು ಗಲಾಟೆಗೆ ಕಾರಣನಾದ ಸಾಧುವನ್ನು ನೋಡಬೇಕೆಂದು ಅಭಿಲಾಷೆಯಾಯಿತು. ಮಹಡಿಯ ಮೆಟ್ಟಲುಗಳ ಮೇಲೆ ನಿಂತು, ಒಂದು ಸಲ ಮಾತ್ರ ಇಣಿಕಿನೋಡಿ, ಹಿಂತಿರುಗಬೇಕೆಂದು ನಿರ್ಧರಿಸಿದೆ. ಅದರಂತೆ ಮನೆಯೊಳಕ್ಕೆ ಮೆಲ್ಲನೆ ಬಂದು, ಯಾವ ಮೆಟ್ಟಲಿನಿಂದ ಸರಿಯಾಗಿ ಸಾಧುವನ್ನು ಕಾಣಬಹುದೋ ಅಲ್ಲಿಯವರೆಗೂ ಮೆಟ್ಟಲುಗಳನ್ನು ಹತ್ತಿದೆ. ಸಾಧುವನ್ನು ಅಲ್ಲಿಂದಲೇ ನೋಡಿದ್ದಾಯಿತು. ಆದರೆ ನನ್ನ ಮನಸ್ಸು ಹಿಂತಿರುಗಲು ನಿರಾಕರಿಸಿತು. ಇನ್ನೂ ಮೇಲಕ್ಕೆ ಹತ್ತಿ, ಕೊಟಡಿಯೊಳಕ್ಕೆ ಹೋಗಬೇಕೆಂದು ತಡೆಯಲಾರದ ಉತ್ಕಟೇಚ್ಛೆ ಉಂಟಾಯಿತು. ಹಾಗೆಮಾಡಿದೆ. ನಡೆಯುತ್ತಿರುವ ವಿನೋದವನ್ನು ನೋಡುವುದರಲ್ಲಿ ಏನೂ ಬಾಧಕವಿರಲಾರದೆಂದು ಯೋಚಿಸಿದೆ. ವಿಚಿತ್ರವಾದ ಮನಸ್ಸಿನ ಭಾವನೆಯಿಂದ ಕುಳಿತು, ಭಜನೆ ನಡೆಯುವುದನ್ನು ಈಕ್ಷಿಸುತ್ತಿದ್ದೆ. ವಿದ್ಯಾವಂತರಾದ ಸ್ಥೂಲಕಾಯುದವರು ಹಾರುತ್ತಾ ಕುಣಿಯುತ್ತಿರುವುದನ್ನು ನೋಡಿ ನನಗೆ ನಗುಬಂದಿತು. ಅಷ್ಟಕ್ಕೆ ನಾನು ಸುಮ್ಮನಿರಲಾರದೆ ಹೋದೆ. ನಂತರ ಯೋಚನೆಗೆ ಆರಂಭವಾಯಿತು. ನಾನು ನನ್ನಷ್ಟಕ್ಕೆ ಮಂತ್ರವನ್ನು ಉಚ್ಚರಿಸಿದರೆ ಏನಾಗುತ್ತದೆ ? ಹಾಗೆ ಮಾಡಿದರೆ ಏನೂ ತಪ್ಪಾಗಲಾರದು ಎಂದು ಮಂತ್ರವನ್ನು ನನ್ನಷ್ಟಕ್ಕೆ ನಾನೇ ಗೊಣಗುವುದಕ್ಕೆ ಆರಂಭಿಸಿದೆ. ನನ್ನ ಕೈಗಳು ತಾವಾಗಿ ಮೆಲ್ಲನೆ ತಾಳಹಾಕಿದುವು. ಇತರರಂತೆ ನಾನೂ ಒಂದು ಮೂಲೆಯಲ್ಲಿ

ನಿಂತರೇನಾಗುತ್ತದೆ? ಅವರಂತೆ ನಾನು ಘಟ್ಟಿಯಾಗಿ ಕೂಗುವುದಿಲ್ಲ, ಸುಮ್ಮನೆ ತುಟಿಯನ್ನು ಅಲ್ಲಾಡಿಸಿ ಪಿಸುಗುಟ್ಟುತ್ತಿದ್ದರೆ ಯಾರಿಗೂ ಗೊತ್ತಾಗುವುದಿಲ್ಲ, ಎಂಬ ಭಾವನೆಯುಂಟಾಗಿ, ಆಲೋಚನೆಯನ್ನು ಕಾರ್ಯರೂಪಕ್ಕೆ ತಂದು ಎದ್ದು ದೂರ ಹೋಗಿ, ಒಂದು ಮೂಲೆಯಲ್ಲಿ ಇತರರೊಡನೆ ಸಾಲಿನಲ್ಲಿ ನಿಂತೆ. ತುಟಿಗಳು ಅಲುಗಿದುವು. ಕೇಳದಿರುವಂತೆ ಮಂತ್ರೋಚ್ಚಾರಣೆ ಮಾಡಿದೆ. ಕೈಗಳು ತಾಳಹಾಕುತ್ತಲೇ ಇದ್ದುವು. ಸ್ವಲ್ಪಘಟ್ಟಿಯಾಗಿ ಹಾಡಿದರೆ ಆ ಶಬ್ದ ಒಟ್ಟಿಗೆ ಕೇಳಿಬರುವ ಶಬ್ದದಲ್ಲಿ ಲೀನವಾಗಿ ಹೋಗುತ್ತದೆ. ಯಾರಿಗೂ ಗೊತ್ತಾಗುವುದಿಲ್ಲ, ಇದರಿಂದ ಯಾವ ಬಾಧಕವೂ ಉಂಟಾಗುವುದಿಲ್ಲ, ಎಂದು ಸ್ವಲ್ಪ ಘಟ್ಟಿಯಾಗಿ ಮಂತ್ರೋಚ್ಚಾರಣೆಗೆ ಆರಂಭಿಸಿದೆ. ಈ ಕಾಲವೆಲ್ಲಾ ನನ್ನ ಕಾಲು ನಿಂತಲ್ಲಿ ನಿಲ್ಲದೆ ಕೆರೆಯುತ್ತಿದ್ದುವು. ಕಾಲುಗಳನ್ನು ಮೇಲಕ್ಕೂ ಕೆಳಕ್ಕೂ ಸ್ವಲ್ಪ ನುಟ್ಟಿಗೆ ತೂಗಾಡಿದರೆ ಏನಾಗುತ್ತದೆ ಎಂಬ ಭಾವನೆಯುಂಟಾಗಿ ಕಾಲುಗಳನ್ನು ಆಡಿಸಿದೆನು. ಇಲ್ಲಿಯವರೆಗೆ ನನಗೆ ನಾನು ಏನು ಮಾಡುತ್ತೇನೆಂಬುದು ಅರಿವಾಗಿದ್ದಿತು. ಮುಂದೆ ಏನಾಯಿತೆಂದು ಹೇಳುವುದಕ್ಕೆ ನನಗೇ ಗೊತ್ತಿಲ್ಲ. ಇದನ್ನು ಒಪ್ಪಿಕೊಳ್ಳುತ್ತೇನೆ"

ನಿಜವನ್ನು ಹೇಳಬೇಕಾದರೆ ಈತನು ಎಲ್ಲರಿಗಿಂತಲೂ ಹೆಚ್ಚಾಗಿ ಕುಣಿದಿದ್ದನು, ಎಲ್ಲರಿಗಿಂತಲೂ ಹೆಚ್ಚು ಘಟ್ಟಿಯಾಗಿ ನಾಮಸಂಕೀರ್ತನೆ ಮಾಡಿದ್ದನು, ಎಲ್ಲರ ಕರತಾಡನಕ್ಕಿಂತಲೂ ಅಸಾಧ್ಯವಾಗಿ ಚಪ್ಪಾಳೆ ಹಾಕಿದ್ದನು.

ಈ ಕಥೆ ಮುಗಿದ ನಂತರ ಅಲ್ಲಿದ್ದವರೊಬ್ಬರು ರಾಮದಾಸನಿಂದ ಮಂತ್ರೋಪದೇಶ ಪಡೆಯಬೇಕೆಂಬ ಬುದ್ಧಿವಾದವನ್ನು ಅವನ ಕಿವಿಗೆ ಊದಿದರು. ಆತನು "ಅದರ ಅವಶ್ಯಕತೆ ಇಲ್ಲ. ನನಗೆಲ್ಲಾ ಗೊತ್ತು. ಉಪದೇಶ ಇರುವುದು ನಿಮ್ಮಂತಹ ಜನಗಳಿಗೆ" ಎಂದನು. ಸ್ವಲ್ಪದರಲ್ಲೇ ಹಿಂದಣ ದಿವಸ ರಾಮದಾಸನ ಫೋಟೋ ತೆಗೆದಿದ್ದವನು ಹನ್ನೆರಡು ಫೋಟೋಗಳನ್ನು ತೆಗೆದುಕೊಂಡು ಬಂದನು. ಅಲ್ಲಿದ್ದ ಭಕ್ತರು ಆತುರದಿಂದ ಒಂದೊಂದು ಪ್ರತಿಯನ್ನು ಕಿತ್ತುಕೊಂಡರು. ಅವರಲ್ಲಿ ಈ ವಕೀಲ ಸ್ನೇಹಿತ ಒಬ್ಬ. ತನ್ನ ಪ್ರತಿಯನ್ನು ಪಡೆದವನು ಇವನು ರಾಮದಾಸನ ಬಳಿಗೆ ಬಂದು, ಜೇಬಿನಿಂದ ಫೌಂಟನ್‌ಪೆನ್ನನ್ನು ತೆಗೆದು, ಫೋಟೋವನ್ನೂ, ಲೇಖಣಿಯನ್ನೂ ರಾಮದಾಸನಿಗೆ ಕೊಟ್ಟು, ಫೋಟೋ ಮೇಲ್ಭಾಗದಲ್ಲಿ ರಾಮ ಮಂತ್ರವನ್ನು ಬರೆದುಕೊಡಬೇಕೆಂದನು. ಉಪದೇಶ ತೆಗೆದುಕೊ ಎಂದು ಸೂಚಿಸಿದ್ದ ಸ್ನೇಹಿತನು, ಇದನ್ನು ನೋಡಿ ಘಟ್ಟಿಯಾಗಿ ನಕ್ಕು,

"ಸಿಕ್ಕಿಬಿದ್ದೆ. ಇದು ಉಪದೇಶವಲ್ಲದೆ ಮತ್ತೇನು?" ಎಂದು ಕೂಗಿದನು..

ವಕೀಲನು "ಇಲ್ಲ, ಸುಮ್ಮನೆ ಮಂತ್ರವನ್ನು ಬರೆದುಕೊಡಬೇಕೆಂದು ಕೇಳುತ್ತಿದ್ದೇನೆ. ಅಷ್ಟೆ" ಎಂದನು.

ಇನ್ನೊಂದು ದಿವಸ ರಾಮದಾಸನನ್ನು ಅಲ್ಲಿಯ ಹೈ ಸ್ಕೂಲಿಗೆ ಕರೆದರು. ಅಲ್ಲಿ ರಾಮದಾಸನು ವಿದ್ಯಾರ್ಥಿಗಳಿಗೆ ಕೆಲವು ಮಾತುಗಳನ್ನು ಹೇಳುವುದಲ್ಲದೆ ಬಹುಮಾನಗಳನ್ನು ವಿನಿಯೋಗ ಮಾಡಬೇಕಾಯಿತು.

ಒಂದರ ಹಿಂದೆ ಒಂದು ನಡೆದ ಇನ್ನೆರಡು ಘಟನೆಗಳು ಅತ್ಯಂತ ಅರ್ಥಗರ್ಭಿತ ವಾದವು. ಒಂದು ಮಧ್ಯಾಹ್ನ ಮೋಚಿ ಜಾತಿಗೆ ಸೇರಿದ ಸುಮಾರು ನಲವತ್ತು ಜನ ವೀಣೆ, ಮೃದಂಗ, ತಾಳಗಳ ಸಮೇತ ಭಗವನ್ನಾಮಸಂಕೀರ್ತನ ಮಾಡುತ್ತ ಬೀದಿಯಲ್ಲಿ ಮೆರವಣಿಗೆ ಮಾಡಿಕೊಂಡು ರಾಮದಾಸನನ್ನು ಕಾಣಲು ಬಂದರು. ರಾಮದಾಸನು ಇವರನ್ನು ವಕೀಲನ ಮನೆಯ ಮುಂಬಾಗಿಲ ಬಳಿ ಸಂದರ್ಶಿಸಿದನು. ರಾಮದಾಸನ ಹತ್ತಿರಕ್ಕೆ ಬಂದು ಅವನ ಪಾದವನ್ನು ಸ್ಪರ್ಶ ಮಾಡಬಹುದು ಎನ್ನು ವುದನ್ನು ಇವರು ಅಸಾಧಾರಣವಾದ ಭಾಗ್ಯವೆಂದು ಭಾವಿಸಿದರು. ಹೊರಡುವ ಮುನ್ನ, ಇವರು ರಾಮದಾಸನನ್ನು ಆ ರಾತ್ರಿ ಒಂಭತ್ತು ಗಂಟೆಗೆ ಅವನ ಗೌರ ವಾರ್ಥವಾಗಿ ತಮ್ಮ ಕೇರಿಯಲ್ಲಿ ಏರ್ಪಡಿಸಿದ್ದ ಕೂಟಕ್ಕೆ ಬರಬೇಕೆಂದು ಕರೆದರು. ಅದೇ ದಿವಸ ಊರಿನ ಪಾಂಡುರಂಗ ದೇವಸ್ಥಾನದಲ್ಲಿ ಬ್ರಾಹ್ಮಣ ಮುಖಂಡರು ಏರ್ಪಾಡು ಮಾಡಿದ್ದ ಹರಿಕಥೆಗೂ ಒಂದು ಆಹ್ವಾನ ಬಂದಿದ್ದಿತು. ಮೋಚಿಗಳ ಕೇರಿಯಲ್ಲಿ ಸಮಾರಂಭ ಪೂರೈಸಿದ ಒಡನೆ ನೇರವಾಗಿ ದೇವಸ್ಥಾನಕ್ಕೆ ಹೋಗತಕ್ಕ ದ್ದೆಂದು ನಿರ್ಧರವಾಯಿತು.

ರಾತ್ರಿ ಎಂಟು ಗಂಟೆಯ ಹೊತ್ತಿಗೆ ಮೋಚಿ ಜನರ ಗುಂಪು ದೊಡ್ಡದೊಂದು ರಾಮದಾಸನನ್ನು ಅವರ ಕೇರಿಗೆ ಕರೆದುಕೊಂಡು ಹೋಗಲು ಬಂದಿತು. ಅವನು ಅವರೊಡನೆ ಸೇರಿ ಬೀದಿಗಳ ಮೂಲಕ ಮೆರವಣಿಗೆ ಹೋದನು. ಅವನ ಸಂಗಡಿಗ ರೊಂದಿಗೆ ಊರಿನ ಅನೇಕ ಬ್ರಾಹ್ಮಣರೂ ಅವನ ಜೊತೆಗೆ ಬಂದರು. ಎಲ್ಲರೂ ಮೋಚಿಯವರ ಸಭೆಗೆ ಗೊತ್ತಾಗಿದ್ದ ಸ್ಥಳವನ್ನು ಸೇರಿದರು. ಇಲ್ಲಿ ರಾಮ ದಾಸನು ಕಂಡ ಸಭೆ ಊಹಿಸಲಾರದಷ್ಟು ದೊಡ್ಡದಾಗಿದ್ದಿತು. ಆವರಣವಿಲ್ಲದ ಒಂದು ಗುಡಿಸಿಲಿನಲ್ಲಿ ರಾಮದಾಸನನ್ನು ಕುಳ್ಳಿರಿಸಿ ಮೋಚಿಗಳ ಕುಲದ ಪ್ರಮುಖರು ಅವನಿಗೆ ಪಾದಪೂಜೆ ಮಾಡಿದರು. ನಂತರ ದರ್ಶನದ ಕಾರ್ಯಕ್ರಮ ಆರಂಭ ವಾಯಿತು. ಇದನ್ನು ಕಾಳಿನ ಗುಡ್ಡೆ ಮತ್ತು ಮಿಡತೆಗಳ ಪಡೆಯ ಕತೆಗೆ ಹೋಲಿಸ ಬಹುದು. ಗಂಡು, ಹೆಣ್ಣು, ಮಗು ಪ್ರತಿಯೊಬ್ಬರನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ರಾಮದಾಸನ ಬಳಿಗೆ ಕರೆತರುತ್ತಿದ್ದರು. ಸಾವಿರಾರು ಜನ ಸೇರಿದ್ದುದರಿಂದ ದರ್ಶನ ಸಮಾರಂಭ ಕ್ರಮವಾಗಿ ಸಾವಕಾಶವಾಗಿ ಕಾಲನಿಯಮವಿಲ್ಲದೆ ನಡೆಯಿತು. ರಾಮದಾಸನೊಡನೆ ಬಂದಿದ್ದ ಬ್ರಾಹ್ಮಣ ಸ್ನೇಹಿತರು, ಅಸ್ಪೃಶ್ಯರೆಂದು ಕರೆಯಲ್ಪ ಡುವ ಆ ಜನಗಳೊಂದಿಗೆ ಯಾವ ಭೇದಗಳೂ ಇಲ್ಲದೆ ಮೈಕೈಸೋಕಿ ಧಾರಾಳವಾಗಿ ಬೆರತುದಲ್ಲದೆ ಚಮ್ಮಾರರು ಹಂಚಿದ ಬುರುಗುಪ್ರಸಾದವನ್ನುಸಹ ಸ್ವೀಕರಿಸಿದರು. ಕಾಲ ಓಡಿತು. ಈ ಸಮಾರಂಭಕ್ಕೆ ಗೊತ್ತಾಗಿದ್ದ ಒಂದು ಗಂಟೆಯಕಾಲ

ಮೀರಿತು. ರಾಮುದಾಸನ ಸುತ್ತ ಒಂದು ಫರ್ಲಾಂಗ್ ದೂರ ಜನರು ಕಿಕ್ಕಿರಿದು ಗುಂಪಾಗಿ ನಿಂತಿದ್ದು ಅದರಲ್ಲಿ ತೂರಿ ಹೊರಕ್ಕೆ ಹೋಗುವುದು ಅಸಾಧ್ಯವೇ ಆಗಿದ್ದಿತು. ರಾಮುದಾಸನು ಕೆಲವು ಗೆಳೆಯರನ್ನು ವೇಳೆ ಎಷ್ಟೆಂದು ಕೇಳಿದನು. ಹನ್ನೊಂದು ಗಂಟೆ ಎಂದು ಗೊತ್ತಾಯಿತು. ರಾಮುದಾಸನು ದೇವಸ್ಥಾನದಲ್ಲಿ ಹತ್ತು ಗಂಟೆಗೆ ಇರತಕ್ಕದ್ದೆಂದು ಏರ್ಪಾಡಾಗಿದ್ದಿತು. ನಿಮಿಷ ನಿಮಿಷಕ್ಕೆ ಗುಂಪು ದೊಡ್ಡದಾಗುತ್ತಿರುವಾಗ ಅಲ್ಲಿಂದ ತಪ್ಪಿಸಿಕೊಂಡು ಹೋಗುವುದೆಲ್ಲಿ ಬಂದಿತು. ರಾಮುದಾಸನು ತಾನು ಕುಳಿತಿದ್ದ ಅಂಗಳದ ಅಂಚಿಗೆ ಬಂದು ನೋಡಿದನು. ದರ್ಶನಕ್ಕಾಗಿ ಮತ್ತೆ ಮತ್ತೆ ಕೂಗಾಡುತ್ತಿರುವ ಜನಗಳ ಅಸಂಖ್ಯಾತವಾದ ಗುಂಪು ಕಾಣಿಸಿತು. ದೋಣಿಯ ತಳದಿಂದ ಸಮುದ್ರಕ್ಕೆ ಹಾರುವವನಂತೆ ರಾಮುದಾಸನು ಹಠಾತ್ತಾಗಿ ಜನಗಳ ಮಧ್ಯೆ ಹಾರಿ ವಿದ್ಯುಚ್ಛಕ್ತಿಯ ತಂತಿಯಂತೆ ಜನಗಳ ಗುಂಪಿನಲ್ಲಿ ಹರಿದು ನುಸುಳಿ ಹಾರಿ ಉರಳಿ ನೀರಿನಲ್ಲಿ ಈಜಿದಂತೆಯೇ ಹಾಯ್ದು ಕೊನೆಗೆ ರಸ್ತೆಯನ್ನು ಸೇರಿ, ವಾಯುವೇಗದಲ್ಲಿ ಓಡಿದನು. ಆದರೆ ಅವನು ಓಡಿದ್ದು ದೇವಸ್ಥಾನದ ಕಡೆಗಲ್ಲ.ಒಬ್ಬ ವಕೀಲನ ಇಷ್ಟದಂತೆ ಆತನ ಮನೆಗೆ ಹೋದನು. ಅಲ್ಲಿ ಕಾಲು ಗಂಟೆ ಇದ್ದು, ನಂತರ ದೇವಸ್ಥಾನದ ಕಡೆಗೆ ಓಡಿದನು. ರಾಮುದಾಸನು ಮುಂದೆ ಹೋದ ಹಾಗೆಲ್ಲಾ ಮೋಚಿ ಜನಗಳ ಗುಂಪು ಗುಂಪೇ ಅವನನ್ನು ಹಿಂಬಾಲಿಸಿತು. ರಾಮುದಾಸನು ದೇವಸ್ಥಾನವನ್ನು ಮುಟ್ಟಿದನು. ಮಹಾದ್ವಾರದ ಬಳಿ ಸೀಮೆಎಣ್ಣೆಯ ದೊಡ್ಡ ಗ್ಯಾಸ್‌ದೀಪವಿದ್ದಿತು. ದೇವಸ್ಥಾನದ ಅಂಗಳದಲ್ಲಿ ವಿಶಾಲವಾದ ಚಪ್ಪರದ ಕೆಳಗೆ ಉತ್ತಮ ಜಾತಿಗಳ ಜನ ಸಾವಿರಕ್ಕೆ ಮೇಲ್ಪಟ್ಟು ನೆರೆದಿದ್ದರು. ರಾಮುದಾಸನು ನೇರವಾಗಿ ಹೊಕ್ಕು ಗುಂಪಿನಲ್ಲಿ ಹಾಯ್ದು ಹೋದನು. ಎಲ್ಲರೂ ಒಳಗೆ ರಾಮುದಾಸನ ಬರವನ್ನು ನಿರೀಕ್ಷಿಸುತ್ತ ಇದ್ದರು. ಅವನು ತನಗಾಗಿ ಸಿದ್ಧಮಾಡಿ ಅಲಂಕರಿಸಿದ್ದ ವೇದಿಕೆಯ ಮೇಲೆ ಹೋಗಿ ಕುಳಿತನು. ಇಲ್ಲಿ ಸೇರಿದ್ದ ಗುಂಪು ನಿಜವಾಗಿ ಬೃಹತ್ತರವಾದುದು. ರಾಮುದಾಸನು ಒಳಕ್ಕೆ ಬರುತ್ತಲೂ ಮೋಚಿ ಜನಗಳೂ ಅಡಚಣೆ ಇಲ್ಲದೆ ಒಳಗೆ ನುಗ್ಗಿ ಬ್ರಾಹ್ಮಣರ ಮಧ್ಯೆಯೇ ಸ್ಥಳಮಾಡಿಕೊಂಡು ಅವರೊಡನೆ ಬೆರತು ಕುಳಿತರು. ಅಸ್ಪೃಶ್ಯರೆಂದು ಹೀಯ್ಯಾಳಿಸಲ್ಪಡುತ್ತಿದ್ದ ಜನರನ್ನು, ಸಹನೆಯಿಲ್ಲದ ಬ್ರಾಹ್ಮಣರೊಂದಿಗೆ, ಅದರಲ್ಲೂ ದೇವಾಲಯದೊಳಗೆ ಪ್ರವೇಶ ಮಾಡುವಂತೆ ಮಾಡಿ, ಅವರ ಜೊತೆಯಲ್ಲಿ ಕಲೆಯುವಂತೆ ಮಾಡಿದ, ಆ ಭಗವಂತನ ಅದ್ಭುತ ವ್ಯಾಪಾರವನ್ನು ರಾಮುದಾಸನು ತಾನು ಕುಳಿತಿದ್ದ ಪೀಠದಿಂದ ನೋಡುತ್ತಿದ್ದನು. ಬ್ರಾಹ್ಮಣರು ಒಬ್ಬರ ಮುಖವನ್ನೊಬ್ಬರು ನೋಡಿದರು, ದುರುಗುಟ್ಟಿದರು, ಕಣ್ಣುಗಳನ್ನು ಮಿಟಕಿಸಿದರು, ಪಿಸಗುಟ್ಟಿದರು. ಸನ್ನಿವೇಶ ಬಹಳ ಕಠಿಣವಾಗಿದ್ದಿತು. ರಾಮುದಾಸನು ತನ್ನೆದುರಿನ ಅಪೂರ್ವ ದೃಶ್ಯವನ್ನು ನೋಡಿ, ಸುಮ್ಮನೆ ಮುಗುಳ್ನಗೆ ನಗುತ್ತಿದ್ದನು. ಇದ್ದಿದ್ದಂತೆ ಶಾಂತಿಯೂ ನಿಶ್ಯಬ್ದವೂ ನೆಲೆಗೊಂಡುವು. ಗಾದೆ

ಹೇಳುವಂತೆ, ಒಂದು ಗುಂಡುಸೂಜಿ ಬಿದ್ದರೆ ಸದ್ದು ಕೇಳಬಹುದಾಗಿದ್ದಿತು. ನೆರೆದ ಜನರಲ್ಲಿ ಅಂಥ ನಿಶ್ಯಬ್ದತೆಬೆಳೆಯಿತು. ರಾಮದಾಸನ ಒಂದು ಪಾರ್ಶ್ವದಲ್ಲಿ ಹರಿದಾಸನು ನಿಂತಿದ್ದನು. ಇವನು ಸ್ಥಳದ ಹೈಸ್ಕೂಲಿನ ಮುಖ್ಯೋಪಾಧ್ಯಾಯ, ಬೇರೆ ಯಾರೂ ಅಲ್ಲ. ಕೀರ್ತನಾರಂಭದಲ್ಲಿ ಈತನು,

"ಎಂದೂ ಇಲ್ಲದ ಈ ಜನ ಸಂದಣಿಯನ್ನು ನೋಡಿ, ನನ್ನ ನಾಲಗೆ ತನ್ನ ಕರ್ತವ್ಯವನ್ನು ನೆರವೇರಿಸಲಾರದಿದೆ. ನನಗೆ ವಿಶ್ವರೂಪದರ್ಶನ ಆಗುತ್ತಿದೆ ಎಂದು ಹೇಳಬೇಕು. (ಜಾತಿ ಮತ ವರ್ಣಭೇದಗಳು ಅಜ್ಞಾನ ಜನಿತವಾದವುಗಳೆಂದು ಕಾರ್ಯತಃ ಈಗ ಸಿದ್ಧಾಂತವಾಯಿತು.) (ಸರ್ವಪ್ರಾಣಿಗಳ ರೂಪದಿಂದ ವ್ಯಕ್ತವಾಗುತ್ತಿರುವವನು ಪರದೈವವೇ.) ಈ ದೃಶ್ಯವನ್ನು ನೋಡಿ ನಾನು ಧನ್ಯನಾದೆ" ಎಂದನು.

ಆತನು ಇಷ್ಟು ಮಾತ್ರವನ್ನು ಹೇಳಿ ಕೀರ್ತನೆಯನ್ನು ಮುಕ್ತಾಯ ಮಾಡಿದನು. ಒಂದರ ಹಿಂದೆ ಒಂದು ಸಂಭವಿಸಿದ ಈ ಎರಡು ಘಟನೆಗಳು ನಿಜವಾಗಿ ವರ್ಣನಾತೀತವಾದವು. (ಸರ್ವಪ್ರಾಣಿ ಸರ್ವಪದಾರ್ಥಗಳಲ್ಲಿ ಭಗವಂತನ ಸ್ವರೂಪವನ್ನು ಕಾಣುವ ದೃಷ್ಟಿದೊರೆತ ಮನುಷ್ಯನು ಎಂತಹ ಶಾಂತಿ, ಆನಂದ, ಎಂಥ ಬಂಧವಿಮೋಚನೆಗಳನ್ನು ಅನುಭವಿಸಬಲ್ಲನು)! ಆದರೆ ಈಗಿನ ಸ್ಥಿತಿಯಲ್ಲಿ ಅವನು ಮಾನವ ಮಾನವರ ಮಧ್ಯೆ ದ್ವೇಷ ಮತ್ತು ಕಲಹವನ್ನೆಬ್ಬಿಸುವ ಮಿಥ್ಯಾಚಾರಗಳ ದಾಸನಾಗಿದ್ದಾನೆ.

ರಾಮದಾಸನು ಮತ್ತು ಇತರರು ಹೊರಡುವ ಕಾಲ ಬಂದಿತು. ಅವನೂ ಸಂಗಡಿಗರೂ ಪ್ರಯಾಣ ಮಾಡಲು ಹೊರಟರು. ಇವರನ್ನು ರೈಲ್ವೆ ಸ್ಟೇಷನ್ನಿಗೆ ಕರೆದೊಯ್ಯಲು ಮೋಟಾರುಕಾರನ್ನು ಗೊತ್ತು ಮಾಡಿದರು. ಕಾರು ದಿಗಂಬರ ಕುಲಕರ್ಣಿಯ ಮನೆಯ ಬಾಗಿಲಲ್ಲಿ ಕಾದಿದ್ದಿತು. ಇವರು ಅದರಲ್ಲಿ ಕುಳಿತರು. ಸ್ಥಳದ ಭಕ್ತರು ರಾಮದಾಸನಿಗೆ ಸುಖಪ್ರಯಾಣವನ್ನು ಬಯಸಲು ಕಾರನ್ನು ಸುತ್ತಿಕೊಂಡಿದ್ದರು. ಕಾರು ಇನ್ನೇನು ಹೊರಡಬೇಕು, ಆ ಸಮಯದಲ್ಲಿ, ಭಕ್ತಿಮಾರ್ಗಕ್ಕೆ ನೂತನವಾಗಿ ಎಳೆಯಲ್ಪಟ್ಟದ್ದ ವಕೀಲಸ್ನೇಹಿತನು ಗುಂಪಿನಲ್ಲಿ ನುಗ್ಗಿ ಬಂದು, ಕಾರಿನ ಬಾಗಿಲನ್ನು ತೆಗೆದು, ತನ್ನ ತಲೆಯನ್ನು ರಾಮದಾಸನ ಪಾದಗಳ ಮೇಲೆ ಇಟ್ಟನು. ಕ್ಷಣ ಬಿಟ್ಟು ರಾಮದಾಸನು ಇವನನ್ನು ಎತ್ತಿದನು. ವಕೀಲನು ತಬ್ಬಲಿ ಮಗುವಿನಂತೆ ಬಿಕ್ಕಿ ಬಿಕ್ಕಿ ಅಳುತ್ತಿದ್ದುದು ಕಾಣಿಸಿತು. ರಾಮದಾಸನನ್ನು ದೃಷ್ಟಿಸುತ್ತಾ, ಅವನು ಬಿಕ್ಕಲ ಅಳುವಿನ ಮಧ್ಯೆ, "ಓ ಸ್ವಾಮಿಜಿ, ನನಗೆ ಮತ್ತೆ ತಮ್ಮ ದರ್ಶನ ಯಾವಾಗ?" ಎಂದನು. ಮೋಟಾರು ಚಲಿಸಿ ವೇಗ ಹೆಚ್ಚಿ ಹರಿದೋಡಿತು.

ಜನಾರ್ದನ ಪಂತನೊಡನೆ ಬೊಂಬಾಯಿ ರೈಲಿನಲ್ಲಿ ಕುಳಿತು ರಾಮದಾಸನು ಆ ಮಹಾ ನಗರಕ್ಕೆ ಪ್ರಯಾಣ ಮಾಡಿದನು.

# ಅಧ್ಯಾಯ ೪೭

## ಬೊಂಬಾಯಿ–ಸೋಜತ್ ರೋಡು–ಕಾಸರಗೋಡು

ಎಂದಿನಂತೆ ರಾಮದಾಸನು ಬೊಂಬಾಯಲ್ಲಿ ಸಂಜೀವರಾಯರ ಮನೆಯಲ್ಲಿ ನಿಂತನು. ಈ ಸಲ ಕೂಡ ಹತ್ತಿರ ಹತ್ತಿರ ಹಿಂದಣ ಸಲ ಏರ್ಪಟ್ಟಿದ್ದ ಕಾರ್ಯಕ್ರಮದಂಥ ಒಂದು ಕಾರ್ಯಕ್ರಮನ್ನು ಇಲ್ಲಿಯ ಮಿತ್ರರು ಏರ್ಪಡಿಸಿದರು. ರಾಮದಾಸನು ಅದನ್ನು ನಡೆಸಿದನು.

ಅವನು ಸಾರಸ್ವತ ಸಂಘದ ಸಭಾ ಮಂದಿರದಲ್ಲಿ ಕಿಕ್ಕಿರಿದ ಸಭೆಯಲ್ಲಿ ದೈವ ಸಾಕ್ಷಾತ್ಕಾರದ ವಿಷಯವಾಗಿ ಒಂದು ಉಪನ್ಯಾಸ ಮಾಡಿದನು. ಆಮೇಲೆ ಅವನನ್ನು ಸೆಂಟಾಕ್ರೂಸಿಗೆ ಕರೆದರು. ಜನಾರ್ದನಪಂತನು ಸಮರ್ಥರಾಮದಾಸರ ದಾಸಬೋಧೆಯ ಕೆಲವು ಭಾಗವನ್ನು ಪಠನಮಾಡಿ ವಿವರಿಸಿದನಂತರ, ರಾಮದಾಸನು ಸಲ್ಪ ಹೊತ್ತು ಭಕ್ತಿಯ ತತ್ವಗಳ ವಿಚಾರವಾಗಿ ಮಾತನಾಡಿದನು. ಸಂಜೀವರಾಯರ ಮನೆಯಲ್ಲಿ ಸಾಯಂಕಾಲ ಕೀರ್ತನವೂ ದಾಸಬೋಧೆಯಿಂದ ಜನಾರ್ದನ ಪಂತನ ಪ್ರವಚನವೂ ದಿನಚರಿಯಾದುವು. ಹಠಾತ್ತಾಗಿ ಅನಂತ ಬುವನೂ ಬಂದಿಳಿದನು. ಸಂಜೀವರಾಯರ ಇಷ್ಟದಂತೆ ಅವನು ಅವರ ಮನೆಯಲ್ಲಿ ಕೀರ್ತನ ಮಾಡಿದನು. ಅವನು ಒಳ್ಳೆಯ ಸಂಗೀತಗಾರ. ಅವನ ಇಬ್ಬರು ಮಕ್ಕಳು ಹಾರ್ಮೋನಿಯಂ ಮತ್ತು ತಬಲ ಬಾರಿಸುವುದರಲ್ಲಿ ಪ್ರವೀಣರು. ಅವರು ಅವನಿಗೆ ನೆರವಾಗಿದ್ದರು. ದೇವರನ್ನು ಸಾಕ್ಷಾತ್ಕಾರಮಾಡಿಕೊಳ್ಳಲು ಒಂದೇ ಸಮನಾದ ಶ್ರದ್ಧೆ ಮತ್ತು ಅಚಲಿತ ಭಕ್ತಿಯನ್ನು ಹೊಂದಲುಬಿಡದ, ಮಾನವನ ಮೊಂಡ ಸ್ವಭಾವಕ್ಕೆ ಹರಿಕಥೆಯಲ್ಲಿ ಅನಂತಬುವಾ ಒಂದು ಸರಿಯಾದ ಉಪಮಾನವನ್ನು ಹೇಳಿದನು. "ಮನೆಯ ತಾಯಿ ಮಗುವನ್ನು ತೊಟ್ಟಿಲಿನಲ್ಲಿ ತೂಗುತ್ತಾಳೆ ಮಗುವಿಗೆ ನಿದ್ದೆ ಬರುವಂತೆ ಮಾಡಿ, ಭಾವಿಯಿಂದ ನೀರನ್ನು ಸೇದಿಕೊಂಡು ಬರುವ ತನ್ನ ಕೆಲಸಕ್ಕಾಗಿ ಹೋಗುತ್ತಾಳೆ. ಕೊಡವನ್ನು ತುಂಬಿಕೊಂಡು ಮನೆಗೆ ಬರುತ್ತಾಳೆ. ಮಗು ಏನು ಮಾಡುತ್ತಿದೆ ಎಂದು ಇಣಿಕಿ ನೋಡುತ್ತಾಳೆ. ಅದು ಸುಖವಾಗಿ ನಿದ್ದೆ ಮಾಡುತ್ತಿರುವುದನ್ನು ಕಂಡು ಒಳಗೆ ಹೋಗಿ ನೀರನ್ನು ಪಾತ್ರೆಗೆ ಸುರಿದು, ಇನ್ನೊಂದು ಸಲ ನೀರನ್ನು ತರಲು ಅನುವಾಗಿ ಹೊರಡುವಾಗ, ಮಗುವಿನ ಮೆಲ್ಲನೆ ಅಳು ಕೇಳಬರುತ್ತದೆ. ತೊಟ್ಟಿಲಹತ್ತಿರ ಹೋಗಿ ಅವಳು ಅದನ್ನು ಒಂದು ಸಲ ತೂಗುತ್ತಾಳೆ. ಮಗು ನಿದ್ರಿಸುತ್ತದೆ. ಅವಳು ಮರಳಿ ಒಂದು ಕೊಡ ನೀರು ತರುವಾಗ ಮಗು ಮೊದಲಿಗಿಂತ ಹೆಚ್ಚು ಸಿಡುಕಾಗಿ ಸ್ವಲ್ಪ ಘಟ್ಟಿಯಾಗಿಯೇ ಅಳುತ್ತಿರುವುದನ್ನು ಕಾಣುತ್ತಾಳೆ. ತೊಟ್ಟಿಲಹತ್ತಿರ ಹೋಗಿ ಅದನ್ನು ಇನ್ನೊಂದು ಸಲ ತೂಗುತ್ತಾಳೆ. ಮಗು ಮರಳಿ ನಿದ್ರಿಸುತ್ತದೆ. ಹೀಗೆ ಒಂದು ಸಲ ಮತ್ತೊಂದು ಸಲ ತೂಗುವುದರಿಂದ ಮಗು ನಿದ್ರೆಯಲ್ಲಿ ಆಳುತ್ತದೆ." ಪ್ರಪಂಚದಲ್ಲಿ ಮಾನವರ

ಸ್ಥಿತಿ ಹೀಗೆಯೇ ಎನ್ನುವುದು ಅವನ ಮಾತಿನ ಮುಕ್ತಾಯ. ಅವರು ಭಗವಂತನಿಗಾಗಿ ಒಂದು ಸಲ ಕೂಗುತ್ತಾರೆ, ನಂತರ ಅವನನ್ನು ತೀರ ಮರೆಯುತ್ತಾರೆ. ಹೀಗೆ ಒಂದು ಜನ್ಮ ಕಳೆಯುತ್ತದೆ. ಇನ್ನೊಂದು ಜನ್ಮ ಬರುತ್ತದೆ. ಮಗು ಅಳುತ್ತದೆ, ಉತ್ತರಕ್ಷಣ ಎಲ್ಲವನ್ನೂ ಮರೆಯುತ್ತದೆ. ಹೀಗೆ ಇನ್ನೊಂದು ಜನ್ಮ ಕಳೆದು ಹೋಗುತ್ತದೆ. ಹೀಗೆಯೇ ಜನ್ಮಗಳು ಅಸಂಖ್ಯಾತವಾಗಿ ಕಳೆದುಹೋಗುತ್ತಿವೆ. (ಅಜ್ಞಾನನಿದ್ರೆಯಿಂದ ತೀರಾ ಎಚ್ಚೆತ್ತು ಭಗವಂತನಿಗಾಗಿ ಗಟ್ಟಿಯಾಗಿ ಅಳುವವರೆಗೂ ಜನನಮರಣಗಳ ಚಕ್ರದಿಂದ ಮುಕ್ತರಾಗಿ ಭಗವಂತನಲ್ಲಿ ನಿತ್ಯಸಾಯುಜ್ಯ ಪಡೆಯುವೆವೆಂದು ಆಶಿಸುವಂತಿಲ್ಲ.)

ಇಲ್ಲಿಗೆ ಬರುತ್ತಿದ್ದವರಲ್ಲಿ, ಜಿ. ಬಾಲಸುಬ್ರಹ್ಮಣ್ಯಮ್ ಎಂಬುವನ ವಿಚಾರ ತಿಳಿಸಬೇಕಾಗಿದೆ. ಪ್ರಥಮ ಸಂದರ್ಶನದಲ್ಲಿಯೇ ಅವನಿಗೆ ರಾಮದಾಸನಮೇಲೆ ವಿಚಿತ್ರವಾದ ಮೋಹ ಉಂಟಾಯಿತು. ಆಗ ಆತನು ಬೊಂಬಾಯಿಯ ಒಂದು ಪ್ರಸಿದ್ಧವಾದ ಬ್ಯಾಂಕಿನಲ್ಲಿ ಹೆಚ್ಚಿನ ಸಂಬಳದಮೇಲೆ ಶೀಘ್ರಲಿಪಿಗಾರಕೆಲಸ ದಲ್ಲಿದ್ದನು. ಐದು ನಿಮಿಷಕ್ಕೆ ಹೆಚ್ಚಾಗಿದ್ದಿರಲಾರದು. ಅಷ್ಟೇ ಹೊತ್ತು ರಾಮ ದಾಸನೊಡನೆ ಕುಳಿತಿದ್ದು ಇವನು ತಾನಾಗಿ ಉದ್ವೇಗದ ಉರುಬಿನಲ್ಲಿ ಎಂಬಂತೆ,

"ಸ್ವಾಮಿಜಿ ! ನಾನು ತಮ್ಮ ಜೊತೆಯಲ್ಲಿ ಬರುತ್ತೇನೆ. ತಮ್ಮ ಸಂಚಾರದಲ್ಲಿ ತಮ್ಮೊಡನೆ ಇರಬೇಕೆಂದು ನಿರ್ಧರಿಸಿದ್ದೇನೆ. ನಾನು ತಮ್ಮ ಶೀಘ್ರಲಿಪಿಗಾರ ನಾಗಿದ್ದುಕೊಂಡು ತಮ್ಮ ಉಪನ್ಯಾಸಗಳನ್ನೂ ಮಾತುಕತೆಗಳನ್ನೂ ಸರಿಯಾಗಿ ಬರೆದಿಡುವುದನ್ನು ನೋಡಿಕೊಳ್ಳುತ್ತೇನೆ. ತಮ್ಮೊಡನೆ ಅನ್ಯದೇಶಗಳಿಗಾದರೂ ಹೋಗಲು ಸಿದ್ಧನಾಗಿದ್ದೇನೆ" ಎಂದು ಹೇಳಿ ರಾಮದಾಸನ ಉತ್ತರವನ್ನು ನಿರೀಕ್ಷಿ ಸುತ್ತಿದ್ದನು. ರಾಮದಾಸನು ಅವನ ಕಡೆ ತಿರುಗಿ,

"ರಾಮ, ನಿನಗೆ ಮದುವೆಯಾಗಿಲ್ಲವೆ ? ನಿನಗೆ ಮನೆಯಲ್ಲಿ ಸಂಸಾರ ವಿಲ್ಲವೆ ? ನೀನು ಹೇಳುತ್ತಿರುವುದು ಏನು ? ಸಂಸಾರವನ್ನು ತ್ಯಜಿಸಿ ರಾಮ ದಾಸನನ್ನು ಹಿಂಬಾಲಿಸಬೇಕೆನ್ನುವಿಯಾ ?" ಎಂದನು.

ಆತನು "ಅದೊಂದೂ ನನಗೆ ಬೇಕಾಗಿಲ್ಲ. ನನ್ನ ಅದೃಷ್ಟವನ್ನು ತಮ್ಮ ಮಡಲಿಗೆ ಹಾಕುವುದೊಂದೇ ನನ್ನ ಯೋಚನೆ" ಎಂದನು. ನಂತರ ರಾಮ ದಾಸನು, ವಿಷಯವನ್ನು ಚೆನ್ನಾಗಿ ಆಲೋಚಿಸಿ ಆಮೇಲೆ ನಿರ್ಧರಕ್ಕೆ ಬರಬೇಕು ಎಂದು ಅವನಿಗೆ ಹೇಳಿದನು. ಆ ವಿಷಯ ಅಲ್ಲಿಗೆ ನಿಂತಿತು. ಆದರೆ ಅವನು ರಾಮದಾಸನನ್ನು ಮರೆಯಲಿಲ್ಲ. ಈ ವಾಕ್ಯಗಳನ್ನು ಹೇಳಿ ಬರೆಯಿಸುತ್ತಿರುವ ಈ ಹೊತ್ತು ರಾಮದಾಸನಿಗೆ ಆತನು ರಾಮನಗರದ ಆನಂದಾಶ್ರಮದ ಮೂಲಕ ದೇವರು ನಡೆಸುತ್ತಿರುವ ಮಹತ್ಕಾರ್ಯದಲ್ಲಿ ಹೆಚ್ಚು ಹೆಚ್ಚಾಗಿಸಂಪರ್ಕ ಹೊಂದುತ್ತಿರು ವುದು ಕಾಣಿಸುತ್ತಿದೆ. ನಿಜವಾಗಿ ನೋಡಿದರೆ, ರಾಮದಾಸನ ಜೀವನವನ್ನು ತನ್ನ ಸೇವೆಗೆಂದೇ ಮೀಸಲಾಗಿರಿಸಿದ ಭಗವಂತನು ಈ ಕಾರ್ಯನಿರ್ವಹಣೆಗೆ ಬೇಕಾಗುವ

ಯೋಗ್ಯ ಸಹಾಯಕರನ್ನು ರಾಮದಾಸನಿಗೆ ಒದಗಿಸುವುದರಲ್ಲಿ ಕೊರೆ ಮಾಡಿಲ್ಲ. ಭಗವಂತನೇ ಈ ಸಹಾಯಕ ರೂಪಗಳಲ್ಲಿ ತನ್ನ ಉದ್ದೇಶಗಳನ್ನು ಸಫಲಗೊಳಿಸು ತ್ತಿದ್ದಾನೆಂಬ ತಥ್ಯಾಂಶವನ್ನು ರಾಮದಾಸನು ಕಡೆಗಣಿಸುವಂತಿಲ್ಲ.

ಈ ಸಂಚಾರದಲ್ಲಿ ರಾಮದಾಸನೊಡನೆ ಬಹಳ ಗಾಢವಾದ ಸಂಸರ್ಗವನ್ನು ಹೊಂದಿದವರಲ್ಲಿ ಸಂಜೀವರಾಯರು ಮತ್ತು ರತ್ನಾಕರರಲ್ಲದೆ ಕಾರ್ನಾಡ್ ಗೋಪಾಲರಾವ್, ದುರ್ಗಾಶಂಕರ ಉಪಾಧ್ಯಾಯ ಮತ್ತು ಹಳದಿಪುರ ನಾರಾಯಣ ರಾವ್ ಇವರು ಇದ್ದರು. ಇಲ್ಲಿ ಜನಾರ್ದನಪಂತನು ಸೊಲ್ಲಾಪುರ ಜಿಲ್ಲೆಯ ನರ್ಸೀಡಕ್ಕೆ ಹಿಂತಿರುಗಬೇಕಾಗಿದ್ದುದರಿಂದ ರಾಮದಾಸನಿಂದ ಪ್ರತ್ಯೇಕವಾದನು.

ರಾಮದಾಸನು ಬೊಂಬಾಯಿಗೆ ಬಂದಿರುವ ವಿಚಾರವನ್ನು ತಿಳಿದು ವಢ್ವಾನಿನ ಭೂದರಭಾಯ್ ಮತ್ತು ಥೋಟಾಭಾಯ್ ರಾಮದಾಸನನ್ನು ತಮ್ಮ ಊರಿಗೆ ಕರೆದುಕೊಂಡು ಹೋಗಲು ಬಂದರು.

ವಢ್ವಾನಿನಲ್ಲಿ ರಾಮದಾಸನು ಹಿಂದಿನ ಸಲದಂತೆ ಡಾಕ್ಟರ್ ಶುಕ್ಲನ ಮನೆ ಯಲ್ಲಿಳಿದನು. ಈತನೂ ಈತನ ಪತ್ನಿ ಶಾಂತಾಬೆನ್ ರಾಮದಾಸನನ್ನು ತಮ್ಮ ಶುದ್ಧ ಪ್ರೇಮತರಂಗಿಣಿಯಲ್ಲಿ ಮಿಾಯಿಸಿದರು. ಭಜನೆ, ಥೋಟಾಭಾಯಿಯ ಭಕ್ತಿಗಾಯನ ಮತ್ತು ರಾಮದಾಸನ ಮಾತನ್ನು ಕೇಳಲು ದಿನದಿನವೂ ನೆರೆಯು ತ್ತಿದ್ದ ಪ್ರೇಕ್ಷಕರೊಡನೆ ಮಾತುಕತೆ ಇವು ನಿತ್ಯಕರ್ಮಗಳಾದುವು. ಅಲ್ಲಿಯ ಶಾಲಾ ಮುಖ್ಯೋಪಾಧ್ಯಾಯನ ಕೋರಿಕೆಯ ಮೇಲೆ ರಾಮದಾಸನು ಆ ಶಾಲೆಯ ಸಭಾಭವನದಲ್ಲಿ ಇದಕ್ಕಾಗಿ ನೆರೆದಿದ್ದ ವಿದ್ಯಾರ್ಥಿಗಳಿಗೆ ವಿಶ್ವಪ್ರೇಮದ ವಿಚಾರವಾಗಿ ಉಪನ್ಯಾಸ ಮಾಡಿದನು; ಹಾಗೆಯೇ ಬಾಲಮಂದಿರಗಳಿಗೂ ಭೇಟಿ ಕೊಟ್ಟನು.

ರಾಮದಾಸನು ಜೋರಾವರ್ ನಗರಕ್ಕೆ ಹೋಗಿ ಅಲ್ಲಿ ಒಂದು ರಾತ್ರಿ ಚುನ್ನಿಭಾಯಿಯ ಮನೆಯಲ್ಲಿ ನಿಂತು, ಹಾಗೆಯೇ ಆಗ ರೋಗದಿಂದ ಹಾಸಿಗೆ ಹಿಡಿದಿದ್ದ ಕಾಥೆವಾಡದ ಪ್ರಮುಖ ಕಾಂಗ್ರೆಸ್ ನಾಯಕನಾದ ಮಣಿಲಾಲ್ ಕೊಠಾರಿಯನ್ನೂ ಭೇಟಿ ಮಾಡಿದನು. ರಾಮದಾಸನನ್ನು ನೋಡಿ ಮಣಿಲಾಲನಿಗೆ ಆನಂದವಾಯಿತು. ಸಂಭಾಷಣೆ ಮಾಡುತ್ತಾ ಇವನು ರಾಮದಾಸನನ್ನು ತನಗೆ ವಾಸಿಯಾದಮೇಲೆ ತಾನು ರಾಜಕೀಯದಲ್ಲಿ ಭಾಗವಹಿಸುತ್ತಲೇ ಇರ ಬೇಕೆ ಎಂದು ಕೇಳಿದನು. ಆ ಕಾಲದಲ್ಲಿ ಮಹಾತ್ಮಾ ಗಾಂಧಿಯವರು ಕಾರಾ ಗೃಹದಲ್ಲಿದ್ದರು. ಅದರಿಂದ ಅವನು ಬಹಳ ಎದೆಗುಂದಿದ್ದನು. ರಾಮದಾಸನ ಬಂಧನರಹಿತವಾದ ಆನಂದಜೀವನ ತನಗೆ ಇದ್ದರೆ ಚೆನ್ನಾಗಿತ್ತೆಂದು ಎನಿಸುತ್ತದೆ ಎಂದು ಅವನು ಮಾತನ್ನು ಮೊದಲುಮಾಡಿದನು. ನೀವು ಕೈಕೊಂಡಿರುವ ಕೆಲಸ ದೊಡ್ಡದು, ಉದಾತ್ತವಾದದ್ದು ಎಂದು ರಾಮದಾಸನು ಉತ್ತರಕೊಟ್ಟನು. ರಾಜಕೀಯ ಕಾರ್ಯವನ್ನಾಗಲಿ ಮತ್ತಾವುದನ್ನೇ ಆಗಲಿ ಸ್ವಪ್ರಯೋಜನಾಭಿಲಾಷೆ ಯಿಂದ ಮಾಡುವುದಾದರೆ ಮನಸ್ಸಿಗೆ ಕೊರತೆ ಉಂಟಾಗುತ್ತದೆ. ಕಾರ್ಯಕ್ಷೇತ್ರದಲ್ಲಿ

ಬಂಧನವಿಲ್ಲದಿರುವುದರ ಗುಟ್ಟು ಮಮತೆ ಇಲ್ಲದಿರುವುದರಲ್ಲಿದೆ. ಇಲ್ಲಿ ನಮ್ಮಿಂದ ಅಪೇಕ್ಷಿತವಾದದ್ದೇನೆಂದರೆ ವಿಶ್ವವನ್ನು ನಿರ್ವಹಿಸುವ ನಾಯಕಶಕ್ತಿಗೆ ನಮ್ಮ ಸರ್ವ ಕರ್ಮವನ್ನೂ ನಿವೇದಿಸುವುದರ ಮೂಲಕ ಸಂಪೂರ್ಣವಾದ ಆತ್ಮಸಮರ್ಪಣೆ ಮಾಡುವುದು.

ಅವನು "ಅಯ್ಯೋ! ಅಹಂಭಾವನೆಯಿಂದ ಬಿಡಿಸಿಕೊಂಡು ಕಾರ್ಯ ಮಾಡುವುದೆಷ್ಟುಕಷ್ಟ! ನನಗೆ ನಾನು ತೀರಾ ಸಿಕ್ಕಿಕೊಂಡಿದ್ದೇನೆ ಎನ್ನಿಸುತ್ತದೆ. ಅಹಂಭಾವವನ್ನು ಬಿಟ್ಟು ಕಾರ್ಯ ಮಾಡಬಲ್ಲೆನೆಂದು ನಾನು ಎಣಿಸಲೂ ಆರೆ. ಅದು ಅಷ್ಟು ಕಷ್ಟ" ಎಂದನು.

"ಧ್ಯೇಯವನ್ನು ಸಾಧಿಸಲು ಮನಃಪೂರ್ವಕವಾದ ಪ್ರಯತ್ನ ಮಾಡಿದರೆ ಯಾವುದೂ ಕಷ್ಟವಿಲ್ಲ. ಭಗವಂತನ ಕೈಯೊಳಗಿನ ಮುಕ್ತವಾದ ನಿಮಿತ್ತಮಾತ್ರ ವಾಗಿ ದುಡಿಯುತ್ತ ಪ್ರಪಂಚದಲ್ಲಿ ಬಾಳುವುದು ತೀರಾ ಸಾಧ್ಯ" ಎಂದು ರಾಮ ದಾಸನು ಉತ್ತರ ಕೊಟ್ಟನು.

ಅವನು "ನಿಮ್ಮ ಅಭಿಪ್ರಾಯ ನಿಜವಿರಬಹುದು; ಏಕೆ ನಿಜವೇ; ಆದರೆ ನನಗೆ ಮಾತ್ರ ಅಂತಹ ಸ್ಥಿತಿ ಸಾಧ್ಯದ ಎಲ್ಲೆಯಲ್ಲಿಲ್ಲ. ಹೇಗಾದರೂ ಆಗಲಿ, ನಾನು ನಿಮ್ಮನ್ನು ಮರೆಯುವುದಿಲ್ಲ. ಪುನಃ ಎಂದಾದರೂ ನೀವು ಇಲ್ಲಿ ಬರುವಂತೆ ಮಾಡುತ್ತೇನೆ; ಇಲ್ಲವಾದರೆ ನಾನೇ ನಿಮ್ಮಲ್ಲಿಗೆ ಬರುತ್ತೇನೆ. ಈಗ ನಮ್ಮಿಬ್ಬರ ಮಧ್ಯೆ ಒಂದು ಅನುಬಂಧ ಪ್ರಾರಂಭವಾಗಿದೆ. ಅದು ಏತರಿಂದಲೂ ಛಿನ್ನವಾಗುವುದಿಲ್ಲ" ಎಂದು ಆವೇಶದಿಂದ ಹೇಳಿದನು.

"ಅನುಬಂಧ ಎನ್ನುವುದು ಯಾವಾಗಲೂ ಇದ್ದೇ ಇದೆ. ನಾವು ಸರ್ವದಾ ಏಕೀಭವಿಸಿ ಇರುತ್ತೇವೆ. ನಾವು ಅನಂತವಾಗಿ ಏಕೀಭವಿಸಿದವರೇ. ಇದನ್ನು ಅನುಭವ ಮಾಡಿಕೊಳ್ಳಿ" ಎಂದು ಹೇಳಿ, ರಾಮದಾಸನು ಸ್ವಲ್ಪ ಉಪಾಹಾರವನ್ನು ಸ್ವೀಕರಿಸಿ ಅವನಿಂದ ಬೀಳ್ಕೊಂಡನು.

ವಢ್ವಾನಿನಲ್ಲಿ ರಾಮದಾಸಾನುದಾಸನು ರಾಮದಾಸನನ್ನು ನೋಡಲೋಸುಗ ಉತ್ತರ ಹಿಂದೂಸ್ಥಾನದಿಂದ ಇಷ್ಟುದೂರ ಬಂದನು. ಯಾವುದೋ ರೋಗದಿಂದ ಅವನ ದೃಷ್ಟಿಪಾಟವ ಬಹು ಕಡಮೆಯಾಗಿದ್ದಿತು. ಆದರೂ ಅವನು ರಾಮದಾಸ ನೊಡನೆ ಕಾಥೇವಾಡದ ಪ್ರವಾಸದಲ್ಲಿ ಒಂದು ತಿಂಗಳ ಮೇಲ್ಪಟ್ಟು ಜೊತೆಯಲ್ಲೇ ಇದ್ದನು.

ವಢ್ವಾನಿನಿಂದ ರಾಮದಾಸನು ಲಿಂಬ್ಡಿಗೆ ಪ್ರಯಾಣ ಮಾಡಿದನು. ಲಿಂಬ್ಡಿ ಯಲ್ಲಿ ರಾಜಾರಾಮರು, ಎಲಿಜಬೆತ್‌ಮಾತೆ ಮತ್ತು ಎಷ್ಟೋ ಜನ ಹಿಂದಿನ ಮಿತ್ರರನ್ನು ಕಂಡನು. ಹಿಂದಿನಂತೆಯೇ ಕಾರ್ಯಕ್ರಮಗಳು ನಡೆದುವು.

ಎಲಿಜಬೆತ್ ಮಾತೆಯ ಸೂಚನೆಯ ಮೇಲೆ ರಾಮದಾಸನಿಗೆ ಆ ಸಂಸ್ಥಾನದ ಹೈಸ್ಕೂಲಿನಲ್ಲಿ ವಿಶ್ವಪ್ರೇಮದ ವಿಚಾರವಾಗಿ ಉಪನ್ಯಾಸ ಮಾಡಲು ಆಹ್ವಾನ

ಬಂದಿತು. ಸಭಾಭವನದಲ್ಲಿ ವಿದ್ಯಾರ್ಥಿಗಳ ದೊಡ್ಡ ಗುಂಪು ಸೇರಿದ್ದುದಲ್ಲದೆ, ರಾಮದಾಸನ ಬಳಿ ಎಲಿಜಬೆತ್ ಮಾತೆಯೂ, ಒಬ್ಬ ಆಂಗ್ಲ ಪಾದ್ರಿಯೂ, ಮತ್ತು ಪ್ರತಾಪಸಿಂಗರೂ ಕುಳಿತಿದ್ದರು. ರಾಮದಾಸನು ಸುಮಾರು ಮುಕ್ಕಾಲು ಗಂಟೆಯಕಾಲ ಪ್ರೇಮದ ಸರ್ವವ್ಯಾಪನೆಯನ್ನು ಕುರಿತು ಉಪನ್ಯಾಸ ಮಾಡಿದನು. ಇದು ರಾಮದಾಸನಿಗೆ ಬಹು ಪ್ರಿಯವಾದ ವಿಷಯ. ಅವನು ಭಾಷಣದಲ್ಲಿ ಹೀಗೆಂದು ಹೇಳಿದನು: ಒಂದೇ ಆದ ಶಾಶ್ವತ ವಿಶ್ವಜೀವನ ಒಟ್ಟು ಪ್ರಪಂಚ ವನ್ನೇ ವ್ಯಾಪಿಸಿ ಸಮಸ್ತ ಚರಾಚರದ ಹೃದಯದಲ್ಲಿ ನೆಲೆಸಿರುವುದನ್ನು ಕಾಣಬಲ್ಲ ದೃಷ್ಟಿಯನ್ನು ಪಡೆದರೆ ಮಾತ್ರ ಮಾನವ ಜನ್ಮ ಪರಿಪೂರ್ಣವಾಗುತ್ತದೆ. ಸೃಷ್ಟಿಯ ಎಲ್ಲ ವಸ್ತುಗಳಲ್ಲಿ ಸ್ವಭಾವವಾಗಿರುವ ಚೈತನ್ಯ ಚಲನಗಳು ಇಡೀ ಬ್ರಹ್ಮಾಂಡಕ್ಕೆ ಆಧಾರವಾಗಿರುವ ಮೂಲ ಸತ್ಯದಲ್ಲಿ ಆರಂಭವಾಗುತ್ತವೆ. ಉಪನ್ಯಾಸದ ಕೊನೆಯಲ್ಲಿ ಅವನು ಈ ಸಿದ್ಧಾಂತವನ್ನು ಪುಷ್ಟೀಕರಿಸಲು ಪ್ರಪಂಚದ ಅವತಾರಪುರುಷರ ಬೋಧೆಗಳಿಂದ ನಿದರ್ಶನಗಳನ್ನು ಕೊಟ್ಟನು.

"ಬುದ್ಧ, ಕೃಷ್ಣ, ಮಹಾವೀರ ಮತ್ತು ಮುಹಮ್ಮದ್ ಇವರೆಲ್ಲರೂ ವಿಶ್ವ ಪ್ರೇಮವನ್ನು ಪ್ರತಿಪಾದಿಸಿದರು. ಪರಾತ್ಪರತತ್ವ ಎಂದರೆ ಭಗವಂತನ ವರಿಷ್ಠಗುಣ ಪ್ರೇಮ ಎಂದು ಅವರ ಬೋಧೆಗಳು ಪದೇ ಪದೇ ಸಾರಿವೆ. ಪ್ರೇಮವನ್ನು ಮನಗಂಡು ಅದನ್ನು ನಮ್ಮಲ್ಲಿ ಕಾರ್ಯಕಾರಿಯಾಗಿ ಮಾಡಬೇಕಾದರೆ ನಮ್ಮ ಹೃದಯ ಪರಿಶುದ್ಧತೆಯಿಂದ ಥಳಥಳಿಸಬೇಕು, ನಮ್ಮ ಚಿತ್ತ ಜ್ಞಾನದಿಂದ ಬೆಳಗಬೇಕು. ಇವೆರಡು ನಿಯಮಗಳು ಪೂರ್ತಿಯಾದ ಹೊರತು ಯಾವನೂ ನಿತ್ಯಪ್ರಕಾಶವೂ ಲೋಕವಿಸ್ತಾರವೂ ಪ್ರೇಮಮೂರ್ತಿಯೂ ಆದ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಒಯ್ಯುವ ಅಮರ ಸಾಮ್ರಾಜ್ಯದೊಳಕ್ಕೆ ಪ್ರವೇಶಿಸಲಾರನು."

ಉಪನ್ಯಾಸ ಮುಗಿದ ನಂತರ ಕ್ರೈಸ್ತಪಾದ್ರಿ ರಾಮದಾಸನನ್ನು ಅವನ ಉಪನ್ಯಾಸದ ಬಗ್ಗೆ ಶ್ಲಾಘಿಸಿ, ಅವತಾರ ಪುರುಷರಹೆಸರುಗಳನ್ನು ಹೇಳುವುದರಲ್ಲಿ ರಾಮದಾಸನು ಉಳಿದವರ ಜೊತೆಯಲ್ಲಿ ಯೇಸುಕ್ರೀಸ್ತನ ಹೆಸರನ್ನು ತಿಳಿಸದಿದ್ದುದು ದೊಡ್ಡನ್ಯೂನತೆ ಎಂದು ಜ್ಞಾಪಿಸಿದನು. ಯೇಸುಕ್ರೀಸ್ತನ ಹೆಸರನ್ನು ಹೇಳದೆ ಬಿಟ್ಟಾಗ್ಯೂ ತಾನು ಯೇಸುಕ್ರೀಸ್ತನಲ್ಲಿ ಅತ್ಯಂತ ಗೌರವವನ್ನಿಟ್ಟಿರುವುದಾಗಿಯೂ, ಅವನನ್ನು ವಿಶ್ವಪ್ರೇಮದ ಮಹತ್ವವನ್ನು ವ್ಯಕ್ತಮಾಡಿಕೊಟ್ಟ ಶ್ರೇಷ್ಠ ನಿದರ್ಶನ ವೆಂದು ತಾನು ತಿಳಿದುಕೊಂಡಿರುವುದಾಗಿಯೂ ರಾಮದಾಸನು ಹೇಳಿದನು.

ಆ ಮೇಲೆ ಸ್ವಲ್ಪ ಹೊತ್ತಿನಲ್ಲಿ ರಾಮದಾಸನಿಗೆ ಈ ಪಾದ್ರಿಯನ್ನು ಆತನ ಬಂಗಲೆಯಲ್ಲಿ ಸಂದರ್ಶಿಸುವ ಸಂದರ್ಭ ಒದಗಿತು. ಈ ಮಿಷನರಿ ಯೇಸುಕ್ರೀಸ್ತನಲ್ಲಿ ಅತಿಶಯ ಪ್ರೀತಿ ಇಟ್ಟಿರುವುದು ವ್ಯಕ್ತವಾಗಿದ್ದಿತು. ಆತನು " ನೀವು ಏಕೆ ಕ್ರೀಸ್ತನ ಅನುಯಾಯಿಯಾಗುವುದಿಲ್ಲ ?" ಎಂದು ಕೇಳಿದನು.

ರಾಮದಾಸನು "ರಾಮದಾಸನು ಕ್ರೀಸ್ತನನ್ನು ತನ್ನ ಹೃದಯದಲ್ಲೇ ಪ್ರತಿಷ್ಠಿಸಿದ್ದಾನೆ. ಅಲ್ಲದೆ ಸದಾ ಅವನೊಂದಿಗೆ ತಾನು ಬೆರೆತಿರುವುದನ್ನು ಅನುಭವಿಸಿದ್ದಾನೆ. ನಿವಾದರೋ ಕ್ರೀಸ್ತನು ನಿಮ್ಮಿಂದ ಹೊರಗಿನ ಒಂದು ತತ್ತ್ವ, ನಿಮ್ಮಿಂದ ಬೇರೆಯಾದ ಅವನೊಡನೆ ಸಂಸರ್ಗಪಡೆಯಬೇಕಾಗಿದೆ ಎಂದು ತಿಳಿದಿರುವಂತೆ ಕಾಣುತ್ತದೆ. (ಯೇಸು ನಿಜವಾಗಿಯೂ ನಮ್ಮ ಜೀವ, ಆತ್ಮ, ಮತ್ತು ಶರೀರಗಳ ನಾಯಕ) ('ಭಗವಂತನರಾಜ್ಯ ನಿಮ್ಮೊಳಗಿದೆ') ಎಂದು ಆತ ಹೇಳಿಲ್ಲವೆ? ನಿಜವಾಗಿ ಭಗವಂತ ಅಥವಾ ಕ್ರೀಸ್ತ ಸದಾ ನಮ್ಮೊಳಗೇ ಇದ್ದಾನೆ" ಎಂದು ಉತ್ತರ ಕೊಟ್ಟನು.

ರಾಮದಾಸನು ಲಿಂಬ್ಡಿಯಿಂದ ಪ್ರಯಾಣ ಮಾಡಬೇಕಾದಕಾಲ ನಿಶ್ಚಯವಾಗಿದ್ದಿತು. ಆದರೆ ರಾಜಾರಾಮರು ಅದರ ಮಾರನೆಯ ದಿನ ಅರಮನೆಯಲ್ಲಿ ತಮ್ಮ ದಿವಂಗತ ರಾಣಿಸಾಹೇಬರ ಜ್ಞಾಪಕಾರ್ಥವಾಗಿ ಭಾಗವತ ಸಪ್ತಾಹ ಪ್ರಾರಂಭ ಮಾಡುವವರಾಗಿದ್ದುದರಿಂದ, ಒಂದು ದಿನದ ಮಟ್ಟಿಗೆ ಪ್ರಯಾಣವನ್ನು ಮುಂದುವರಿಸಬೇಕೆಂದು ರಾಜಾರಾಮರೂ ಎಲಿಜಬೆತ್ ಮಾತೆಯೂ ಅವನನ್ನು ಒತ್ತಾಯಪಡಿಸಿದರು. ಈ ಕಾರ್ಯದ ಮೊದಲು ದಿವಸ ಮಾತ್ರ ಇರಲು ರಾಮದಾಸನೊಪ್ಪಿದನು. ಸಪ್ತಾಹ ಏಳು ದಿವಸ ನಡೆಯತಕ್ಕದ್ದು. ಆದ್ದರಿಂದ ಅದರ ಪ್ರಾರಂಭದ ದಿನ ರಾಮದಾಸನು ಆ ಸಂಸ್ಥಾನದ ವೃದ್ಧ ಪಂಡಿತನೊಬ್ಬನು ಪಾರಾಯಣ ಮಾಡಿದ ಭಾಗವತದ ಶ್ರವಣಕ್ಕಾಗಿ ನೆರೆದ ಭಕ್ತವೃಂದದ ಮಧ್ಯೆ ಕೆಲವು ಗಂಟೆಗಳ ಕಾಲ ಕುಳಿತನು. ಮಾರನೆಯ ದಿನ ಲಿಂಬ್ಡಿಯಿಂದ ಪ್ರಯಾಣ ಮಾಡಿದನು.

ರಾಮದಾಸನು ಡಾಕ್ಟರ್ ಶುಕ್ಲ ಮತ್ತು ಪೋಪಟ್‌ಭಾಯಿಯೊಡನೆ ಧಂದುಕ ಎಂಬ ದೂರದ ಒಂದು ಹಳ್ಳಿಗೆ ಹೋದನು. ಅಲ್ಲಿಯ ಶಾಲೆಯ ಮುಖ್ಯೋಪಾಧ್ಯಾಯಿನಿ ರೇವಾಬೆನ್ ಅವನನ್ನು ತಮ್ಮಲ್ಲಿ ಬರಬೇಕೆಂದು ಕೇಳಿಕೊಂಡಿದ್ದಳು. ಅವಳು ಇದಕ್ಕಾಗಿ ವಢ್ವಾನಕ್ಕೆ ಬಂದಿದ್ದಳು. ರಾಮದಾಸನು ಆಕೆಯ ಆದರದ ನೆರಳಲ್ಲಿ ಒಂದು ದಿವಸ ನಿಂತನು.

ಧಂದುಕದಿಂದ ರಾಮದಾಸನೂ ಸಂಗಡಿಗರೂ ವಢ್ವಾನ್ ಮೂಲಕ ನೇರವಾಗಿ ರಾಜಕೋಟೆಗೆ ಪ್ರಯಾಣ ಮಾಡಿದರು. ಈ ಪ್ರಯಾಣದಲ್ಲಿ ರಾಮದಾಸನ ಜೊತೆಗೆ ಇಬ್ಬರು ಗೆಳೆಯರು ಮಾತ್ರ ಇದ್ದರು. ಪೋಪಟ್‌ಭಾಯ್ ಮತ್ತು ರಾಮದಾಸಾನುದಾಸ. ರಾಜಕೋಟೆಯಲ್ಲಿ ಅವನಿಗೆ ದೈವಭಕ್ತನಾದ ಪರಿಶುದ್ಧ ಜೀವಿ ಮಾಧವರಾವ್ ರಾವಲ್ ಎಂಬುವನ ಪರಿಚಯವಾಯಿತು. ಈ ಯುವಕ ತನ್ನ ಜೀವನದ ಆದಿಭಾಗವನ್ನು ಪ್ರಸಿದ್ಧಸಾಧು ನಾತುರಾಮಶರ್ಮರ ಆಶ್ರಮದಲ್ಲಿ ಕಳೆದು, ಕಠಿನವಾದ ಸಾಧನವನ್ನು ಮಾಡಿದ್ದನು. ಈಗ ರಾಜಕೋಟೆಯಲ್ಲಿ ಸರ್ಕಾರಿ ಕೆಲಸದಲ್ಲಿದ್ದನು. ರಾಮದಾಸನೂ ಅವನ ಜೊತೆಯ ಮಿತ್ರರೂ

ಪ್ರಯಾಣಿಕರ ಬಂಗಲೆಯಲ್ಲಿ ಇಳಿದರು. ಮಾಧವರಾಮನ ಭಕ್ತಿಭಾವನೆ ಅವನು ಭಜನೆಯಲ್ಲಿ ಹಾಡಿ ಆನಂದಪರವಶನಾದಾಗ ಕಾಣುತ್ತಿದ್ದಿತು. ಇವರು ಮಾರನೆ ದಿನ ರಾಜಕೋಟೆಯಿಂದ ಹೊರಟು ನಿಷ್ಕರ್ಷಿಸಿದ್ದಂತೆ ಸಕಾಲದಲ್ಲಿ ವೀರಾವಲ್ ಮುಟ್ಟಿದರು. ಅಲ್ಲಿಂದ ಬಾಡಿಗೆ ಮೋಟಾರ್ ವಾಹನದಲ್ಲಿ ಪ್ರಯಾಣಮಾಡಿ, ಮಗನ್‌ಲಾಲನಿರುವ ಉನ್ನಗ್ರಾಮವನ್ನು ಸೇರಿದರು.

ಈ ಸಲ ರಾಮುದಾಸನೂ ಮಿತ್ರರೂ ಡಾಕ್ಟರ್ ಮಹದೇವಿಯನ ನಿವಾಸದ ಬಳಿ ರೋಗಿಗಳ ಉಪಯೋಗಕ್ಕಾಗಿ ಹೊಸದಾಗಿ ಕಟ್ಟಿದ್ದ ಆಸ್ಪತ್ರೆಯ ಬಿಡಾರದಲ್ಲಿ ನಿಂತರು. ಅಲ್ಲಿಯ ಸ್ನೇಹಿತರು ಹಿಂದಿನ ಸಲದಂತೆಯೇ ರಾಮುದಾಸನನ್ನು ವಿಶೇಷ ಪ್ರೀತಿ ಆದರಗಳಿಂದ ಸತ್ಕರಿಸಿದರು. ಕೆಲವು ದಿವಸಗಳ ನಂತರ ಹಿಂದೂಗಳಿಗೂ ಮುಸ್ಲಿಮರಿಗೂ ಹೊಡೆದಾಟವಾಗಿ ಎರಡು ಕಡೆಯವರಿಗೂ ವಿಶೇಷ ಗಾಯ ಗಳಾದುವು. ಈ ಉಭಯ ಮತದವರ ಮಧ್ಯೆ ಇರುವ ವೈಮನಸ್ಸಿನಿಂದ ಹಿಂದೂಸ್ಥಾನದ ಅನೇಕ ಕಡೆಗಳಲ್ಲಿ ಆಗಾಗ್ಗೆ ಗಲಭೆಗಳು ಆಗುತ್ತವೆ. ಇದು ಉಭಯ ಮತಗಳ ಮುಖಂಡರುಗಳಿಗೂ ನಿವಾರಿಸಲು ಕಷ್ಟವಾದ ಶೋಚನೀಯ ಸಮಸ್ಯೆಯನ್ನು ಎತ್ತಿ ನಿಲ್ಲಿಸಿದೆ. ಉಭಯರಲ್ಲಿಯೂ ಬೇಕಾಗಿರುವುದು ಅನ್ಯಮತ ಸಂಪ್ರದಾಯವನ್ನು ಕುರಿತು ಗೌರವ. ಮುಸಲ್ಮಾನರಲ್ಲಿಯೂ ಹಿಂದೂಗಳಲ್ಲಿಯೂ ಉತ್ಕೃಷ್ಟವಾದ ಸಂಪ್ರದಾಯಗಳಿವೆ. ಆದರೂ ಇವರು ಒಬ್ಬರೊಂದಿಗೊಬ್ಬರು ಹೊಡೆದಾಡುವುದು ಅವರು ತಮ್ಮ ವೈಭವಯುಕ್ತವಾದ ಇತಿಹಾಸವನ್ನು ಇಲ್ಲವೆ ತಿಳಿದುಕೊಂಡಿಲ್ಲ., ಇಲ್ಲವೆ ಬೇಕೆಂದು ಮರೆತಿದ್ದಾರೆ ಎನ್ನುವುದನ್ನು ಪ್ರಕಟಿಸುತ್ತದೆ.

ಉನ್ನ ಗ್ರಾಮದಲ್ಲಿ ಒಂದು ವಾರವಿದ್ದು ರಾಮುದಾಸನೂ ಪೋಪಟ್ ಭಾಯಿಯೂ ಸ್ನೇಹಿತರಿಂದ ಬೀಳ್ಕೊಂಡು ಪುನಃ ವಢ್ವಾನ್ ಕಡೆ ಪ್ರಯಾಣ ಮಾಡಿದರು. ರಾಮುದಾಸಾನುದಾಸನು ನೇತ್ರಚಿಕಿತ್ಸೆಗಾಗಿ ನಿಲ್ಲಲೆಂದು ಡಾಕ್ಟರ್ ಮಹದೇವಿಯನು ತಿಳಿಸಿದುದರಿಂದ ಆತನು ನಿಲ್ಲುವುದಾಗಿ ನಿರ್ಧರಿಸಿದನು.

ವಢ್ವಾನನ್ನು ಸಕಾಲದಲ್ಲಿ ಮುಟ್ಟಿ ರಾಮುದಾಸನು ಡಾಕ್ಟರ್ ಶುಕ್ಲನೊಂದಿಗೆ ಅಹಮುದಾಬಾದಿಗೆ ಬಂದನು.

ಅಹಮುದಾಬಾದಿಗೆ ಹೋಗುತ್ತ ಇವರು ದಾರಿಯಲ್ಲಿ ಒಂದು ಸ್ಟೇಷನ್ನಿ ನಲ್ಲಿಳಿದು, "ಮಸ್ತ್‌ರಾಮ್" ಎಂಬ ಪ್ರಸಿದ್ಧನಾದ ಸಾಧು ಯಾವುದೋ ಕಾಲದಲ್ಲಿ ವಾಸಿಸುತ್ತಿದ್ದನೆಂದು ಪ್ರತೀತಿ ಇರುವ ಒಂದು ಆಶ್ರಮದಲ್ಲಿ ಆಗ ಇದ್ದ ಒಬ್ಬ ಜೈನ ಸಾಧುವಿನ ದರ್ಶನಕ್ಕೆ ಹೋದರು. ಸಾಧು ಪೂರ್ವಾಶ್ರಮದಲ್ಲಿ ಐರೋಪ್ಯ ಜಾತಿಯವನಂತೆ.

ಇವರು ಸಕಾಲದಲ್ಲಿ ಅಹಮುದಾಬಾದನ್ನು ಮುಟ್ಟಿ ಡಾಕ್ಟರ್ ಶುಕ್ಲನ ಸಹೋದರನ ಮನೆಯಲ್ಲಿಳಿದರು. ಇಲ್ಲಿ ರಾಮುದಾಸನನ್ನು ಕಾಣಲು ಸ್ಥಳದ ಅನೇಕ ಜನ ಸ್ನೇಹಿತರು ಬಂದರು. ವಿದ್ಯಾಪೀಠಗಳ ಒಬ್ಬ ಪದವೀಧರನು ಸಾಧುಗಳ

ಜಾತಿಯನ್ನೇ ಕುರಿತು ನಿಷ್ಕಾರಣವಾಗಿ ನಿಂದೆ ನುಡಿದಾಗ ರಾಮುದಾಸನು ಕಠಿನ ಶಬ್ದಗಳಿಂದ ಅವನನ್ನು ಭಂಗಿಸಬೇಕಾಯಿತು. ಇದು ಹೊರತು ಬೇರೆ ಗಮನಾರ್ಹವಾದ ವಿಷಯ ಏನೂ ನಡೆಯಲಿಲ್ಲ.

ಅಹಮದಾಬಾದಿನಿಂದ ರಾಮುದಾಸನು ಡಾಕ್ಟರ್ ರಾವಲ್ ವಾಸವಾಗಿದ್ದ ಸೋಜತ್‌ರೋಡಿಗೆ ಹೋದನು. ರೈಲಿನಲ್ಲಿ ಪ್ರಯಾಣ ಮಾಡುತ್ತಿರುವಾಗ ಆಬುರೋಡ್ ಸ್ಟೇಷನ್ನಿನಲ್ಲಿ ಒಬ್ಬ ಗುಜರಾತಿ ಭಕ್ತನು ರಾಮುದಾಸನನ್ನು ಇಳಿಯ ಬೇಕೆಂದು ಒತ್ತಾಯ ಮಾಡಿದನು. ರಾಮುದಾಸನು ಆ ಸ್ನೇಹಿತನ ಮತ್ತು ಭಕ್ತಿ ವಂತರಾದ ಅವನ ಮನೆಯವರ ಸಂಸರ್ಗದಲ್ಲಿ ಒಂದು ರಾತ್ರಿಯನ್ನು ಆನಂದದಲ್ಲಿ ಕಳೆದನು. ಸಂಸಾರದಲ್ಲಿರುತ್ತ ದೇವರಲ್ಲಿ ಸಂಪೂರ್ಣವಾದ ಭಕ್ತಿಯನ್ನಿಟ್ಟು ಜೀವನಪಥ ನಡೆಯಿಸುವುದು ಹತ್ತಿರ ಹತ್ತಿರ ಅಸಾಧ್ಯವೆಂದು ಗೃಹಸ್ಥರು ಅನೇಕ ಸಲ ಹೇಳಿದ್ದಾರೆ. ಈ ಗುಜರಾತಿ ಮಿತ್ರನ ಮನೆಯ ವಿಚಾರದಲ್ಲಿ ಈ ಭಾವನೆ ಸುಳ್ಳಾಗಿ ಪರಿಣಮಿಸಿದ್ದಿತು. ಮನೆಯವರೆಲ್ಲರೂ ದೇವರ ಧ್ಯಾನದಲ್ಲಿ ಜೀವಿಸುತ್ತ ವ್ಯವಹರಿಸುತ್ತ ಬಾಳುತ್ತ ಇದ್ದರು. ಮನೆಯಲ್ಲಿ ಸದಾ ಸೌಮ್ಯಗುಣವೂ ಶಾಂತಿಯೂ ನೆಲೆಸಿದ್ದುವು. ಈತನು ಪರಿಶುದ್ಧ ಜೀವಿ; ಒಂದು ಅಲ್ಪ ಅಧಿಕಾರ ದಿಂದ ಬಂದ ಸ್ವಲ್ಪ ವರಮಾನದಷ್ಟರಿಂದ ಕೇವಲ ಜೀವನಮಾತ್ರವನ್ನು ನಡೆಸು ತ್ತಿದ್ದನು. ದೊರೆಗಳೂ ಚಕ್ರವರ್ತಿಗಳೂ ಈತನು ಅನುಭವಿಸುತ್ತಿದ್ದ ತೃಪ್ತಿಯನ್ನು ತಾವು ಬಯಸಬಹುದಾಗಿದ್ದಿತು. ಆತನು ಅಷ್ಟು ಪರಿಶುದ್ಧನೂ, ಸರಳಜೀವಿಯೂ, ಮತ್ತು ಪ್ರೇಮಮಯನೂ ಆಗಿದ್ದನು. ಈ ಯುವಕನು ಜೀವನವನ್ನು ನಡೆಯಿ ಸುತ್ತಿದ್ದ ಮನೋಧರ್ಮದಿಂದ ನಡೆಯುವುದಾದರೆ ಜೀವನ ಧನ್ಯವೇ ಸರಿ.

ಮಾರನೆಯ ದಿನ ರಾಮುದಾಸನು ಮುಂದಕ್ಕೆ ಪ್ರಯಾಣ ಮಾಡಿದನು. ಗುಜರಾತಿ ಸ್ನೇಹಿತನು ಕೆಲವು ಸ್ಟೇಷನ್ನುಗಳವರೆಗೂ ಅವನೊಂದಿಗೆ ಬಂದು ಆಮೇಲೆ ಹಿಂತಿರುಗಿದನು. ರಾಮುದಾಸನು ಸೋಜತ್‌ರೋಡ್ ಸ್ಟೇಷನ್ನನ್ನು ಮುಟ್ಟಿದನು. ಡಾಕ್ಟರ್ ರಾವಲ್ ಬಂದು ಅಲ್ಲಿ ರಾಮುದಾಸನಿಗಾಗಿ ಆತುರ ದಿಂದ ಕಾದಿದ್ದನು. ರಾಮುದಾಸನು ಇವನೊಂದಿಗೆ ಕೆಲವು ದಿನವನ್ನು ಶಾಂತವಾಗಿ ಕಳೆದನು. ಒಂದು ಸಾಯಂಕಾಲ ಡಾಕ್ಟರ್ ರಾವಲ್ ರಾಮುದಾಸನನ್ನು ದೂರದ ಒಂದು ರೈಲ್ವೆ ಸೇತುವೆಯ ಬಳಿಗೆ ಕರೆದುಕೊಂಡು ಹೋದನು. ಇಬ್ಬರೂ ಒಂದು ಸರಿಯಾದ ಸ್ಥಳದಲ್ಲಿ ಕುಳಿತರು. ಆಮೇಲೆ ನಡೆದ ಮಾತಿನಲ್ಲಿ ರಾಮುದಾಸನು ಮಾನವನ ನಡೆಯನ್ನು ವಿಧಾಯಿಸಲರ್ಹವಾದ ಮೂರು ಮುಖ್ಯ ಸೂತ್ರಗಳನ್ನು ವಿವರಿಸಿದನು. ಇವು (ಯುಕ್ತ ಆಹಾರ, ಯುಕ್ತಕರ್ಮ, ಯೋಗ್ಯಸಹವಾಸ.)

"ಯುಕ್ತವಾದ ಆಹಾರವೆಂದರೆ ದೇಹದಲ್ಲಾಗಲಿ ಮನಸ್ಸಿನಲ್ಲಾಗಲಿ ಘರ್ಷಣೆ ಯನ್ನುಂಟು ಮಾಡುವ ಸಂಬಾರದಿಂದ ರಹಿತವಾದ ಆಹಾರ. ಸಾತ್ವಿಕ ಎಂಬ ಆಹಾರ ಈ ಜಾತಿಯದು. ಆಹಾರದಲ್ಲಿ ತ್ಯಜಿಸಬೇಕಾದದ್ದು ಯಾವ

ದೆಂದರೆ ಮನಸ್ಸನ್ನು ಆಸೆಯ ಸುಳಿಯಲ್ಲಿ ಸಿಕ್ಕಿಸಿ ದೇಹದಲ್ಲಿ ರೋಗಗಳನ್ನುಂಟು ಮಾಡುವ ಪದಾರ್ಥ. ಇಂಥ ಆಹಾರಕ್ಕೆ ರಾಜಸ ಎಂದರೆ ತೀಕ್ಷ್ಣ, ತಾಮಸ ಎಂದರೆ ಪೂತಿ ಎಂಬ ಶಬ್ದಗಳು ಅನ್ವಯಿಸುತ್ತವೆ.

†ಯುಕ್ತಕರ್ಮ ಎಂದರೆ ಅಹಂಭಾವನೆ ತೀರಾ ಇಲ್ಲದಿರುವ ಕರ್ಮ. ಇದರಲ್ಲಿ ಅಹಿಂಸಾ ಹಿಂಸಾಗಳ ವಿಚಾರ ಅನ್ವಯಿಸುವುದೇ ಇಲ್ಲ. ಸ್ವಪ್ರಯೋಜನ ವನ್ನು ಸಾಧಿಸುವ ಉದ್ದೇಶದ ಎಲ್ಲಾ ಕೆಲಸವನ್ನೂ ಬಿಡಬೇಕು. ಅದು ಹಿಂಸೆಯ ಸ್ವಭಾವದ್ದಾದರೂಅಷ್ಟೆ,ಅಹಿಂಸೆಯ ಸ್ವಭಾವದ್ದಾದರೂಅಷ್ಟೆ. ಆದುದರಿಂದ ಸ್ವಾರ್ಥ ಇಲ್ಲದ್ದೇ ಯುಕ್ತಕರ್ಮ. ಸ್ವಾರ್ಥತೆಯಿಂದ ಮಾಡುವ ಕರ್ಮ ಅಯುಕ್ತಕರ್ಮ.

ಮೇಲುಜಾತಿಯವನೇ ಆಗಲಿ, ಕೀಳುಜಾತಿಯವನೇ ಆಗಲಿ, ಪಾಶ್ಚಾತ್ಯ ನಾಗಲಿ, ಪೌರ್ವಾತ್ಯನಾಗಲಿ ಅಡ್ಡಿಇಲ್ಲ, (ಯಾರ ಸಹವಾಸದಲ್ಲಿ ಉಚ್ಚಸ್ಥಿತಿಗೆ ಏರಿದ ಭಾವನೆಯುಂಟಾಗುತ್ತದೋ, ಮನಸ್ಸು ಶುದ್ಧವಾಗುತ್ತದೋ, ಅಥವಾ ತನ್ನ ಆಂತರಿಕ ವಿಚಾರದಲ್ಲಿಯೇ ಮಗ್ನವಾಗಿ ಅನಂತದ ಶಾಂತಿಯನ್ನು ಮುಟ್ಟು ತ್ತದೋ ಅದು ಯೋಗ್ಯ ಸಹವಾಸ.) ಸಹವಾಸದ ಯಾವ ಈ ವ್ಯಕ್ತಿಗಳ ಸಂಸರ್ಗ ದಲ್ಲಿ ನಿನ್ನ ಮನಸ್ಸು ಅಪರಿಶುದ್ಧವಾಗುತ್ತದೋ ಅಥವಾ ಇಂದ್ರಿಯಗಳ ಸಂಯಮ ತಪ್ಪುತ್ತದೋ ಅಂತಹವರು ಉತ್ತಮೋತ್ತಮ ಜಾತಿ ಅಥವಾ ಕುಲಕ್ಕೆ ಸೇರಿದವ ರಾದರೂ ಅವರ ಸಹವಾಸವನ್ನು ತ್ಯಜಿಸು. (ಪರಿಶುದ್ಧರ ಸಂಗ ಮಾಡು;) ಅಪರಿಶುದ್ಧರ ಸಂಗವನ್ನು ತ್ಯಜಿಸು. ಇದನ್ನೇ ಇತರ ವಿಷಯಗಳನ್ನು ಗಣನೆಗೆ ತೆಗೆದುಕೊಳ್ಳದೆ ಸದಾ ಸತ್ಯವಾದ ಪ್ರಮಾಣವಾಗಿಟ್ಟುಕೊಳ್ಳಬೇಕು".

ರಾವಲ್‌ನ ಜೊತೆಯಲ್ಲಿ ಸ್ವಲ್ಪಕಾಲವಿದ್ದು ರಾಮದಾಸನು ಆಗ್ರಾಕ್ಕೆ ರೈಲಿನಲ್ಲಿ ಹೊರಟನು.

ರಾಮದಾಸನು ಪ್ರಯಾಣ ಮಾಡಿದ್ದು ಎಂದಿನಂತೆ ಮೂರನೆಯ ತರಗತಿಯ ಗಾಡಿಯಲ್ಲಿ. ಕೆಲವು ಸ್ಟೇಷನ್ನುಗಳು ಕಳೆದನಂತರ, ಅದೇ ರೈಲಿನಲ್ಲಿಯೇ ಸ್ವಂತ ಸೆಲೂನ್ ಕಾರಿನಲ್ಲಿ ಪ್ರಯಾಣಮಾಡುತ್ತಿದ್ದ ಲಿಂಬ್ಡಿಸಂಸ್ಥಾನದ ಥಾಕೂರ್ ಸಾಹೇಬ್ ರಾಜಾರಾಮರಿಗೆ ರಾಮದಾಸನು ಆ ರೈಲಿನಲ್ಲಿ ಪ್ರಯಾಣ ಮಾಡು ತ್ತಿರುವ ವಿಷಯ ಗೊತ್ತಾಯಿತು. ಅವರು ರಾಮದಾಸನ ಬಳಿಗೆ ಬಂದು ತಾವು ಬೇರೆ ಒಂದು ರೈಲಿಗೆ ಹೋಗಬೇಕಾಗಿದ್ದ ಮುಂದಿನ ನಿಲ್ದಾಣದವರೆಗಾದರೂ ರಾಮದಾಸನು ತಮ್ಮ ಸೆಲೂನ್ ಕಾರಿಗೆ ಬರಬೇಕೆಂದು ಕೇಳಿಕೊಂಡರು. ರಾಜಾ

---

†ಸಾಧುಕರ್ಮ ಕಿಮಿತ್ಯತ್ರ ನಿಶ್ಚಯಂ ಕೃತವಾನ್ ಪ್ರಭುಃ
ಅಹಂಕಾರ ಕೃತಂ ದುಷ್ಟಂ; ಹಿಂಸಾऽಹಿಂಸೇನ ಲಿಪ್ಯತಃ
ಸ್ವಾರ್ಥಹೇತೋಃ ಕೃತಂ ತ್ಯಾಜ್ಯಂ, ಹಿಂಸಾऽಹಿಂಸಾಪಿ ವಾऽಸ್ತುತತ್
ತಸ್ಮಾದಹನ್ತಾಹೀನಂ ಸದ್ ಅಸನ್ನೂನಮಹಂ ಕೃತಂ
ಎಸ್. ಕೆ. ಮಾಡಿರುವ ಗೀರ್ವಾಣ ಭಾಷಾಂತರ, ೨೨—೯—೩೭

ರಾಮರು ದೆಹಲಿಗೆ ಪ್ರಯಾಣ ಮಾಡುತ್ತಿದ್ದರು. ಇವರ ಸೆಲೂನ್ ಕಾರಿನಲ್ಲಿ ಎಲ್ಲ ಸೌಕರ್ಯವನ್ನುಳ್ಳ ಒಂದು ಸಣ್ಣ ಭಾಗವಿದ್ದಿತು. ರಾಜಾರಾಮರೊಂದಿಗೆ ಎಲಿಜಬೆತ್ ಮಾತೆ ಪ್ರಯಾಣಮಾಡುವಾಗ ಇದನ್ನು ಉಪಯೋಗಿಸುತ್ತಿದ್ದಳು. ರಾಮದಾಸನು ಈ ಸಣ್ಣ ಭಾಗವನ್ನು ಬಳಸಿದನು. ಅದಕ್ಕೆ ಮುಂಚೆ ರಾಜಾ ರಾಮರೊಂದಿಗೆ ಸರ್ವಸಮತಾದೃಷ್ಟಿಯ ಮಹತ್ವದ ವಿಚಾರವಾಗಿ ನಾಲ್ಕು ಮಾತನ್ನಾಡಿದನು. ಅನಿರೀಕ್ಷಿತವಾಗಿ ದೊರೆತ ಈ ಸಂಯೋಗ ತುಂಬಾ ಆನಂದ ದಾಯಕವಾಗಿದ್ದಿತು. ಬೇರೆ ರೈಲಿಗೆ ಹೋಗಬೇಕಾಗಿದ್ದ ನಿಲ್ದಾಣದಲ್ಲಿ ರಾಜಾ ರಾಮರನ್ನು ಬಿಟ್ಟು ರಾಮದಾಸನು ಮೂರನೆಯ ತರಗತಿಯ ಗಾಡಿಗೆ ಬಂದು ಕುಳಿತನು.

ರಾಮದಾಸನ ಆಗಮನದ ಸಂಗತಿಯನ್ನು ಪೂರ್ವಭಾವಿಯಾಗಿ ರಾಮಚಂದ್ರ ಗುಪ್ತನಿಗೆ ತಿಳಿಸಿದ್ದಿತು. ಅವನು ಇವನನ್ನು ಕಾಣಲು ಆಗ್ರಾ ಸ್ಟೇಷನ್ನಿನಲ್ಲಿ ಬಂದು ಕಾದಿದ್ದನು. ಅವನು ರಾಮದಾಸನನ್ನು ಊರೊಳಕ್ಕೆ ಕರೆದುಕೊಂಡು ಹೋಗಿ ಒಂದು ದೇವಾಲಯದ ಆವರಣದಲ್ಲಿ ಹೊಸದಾಗಿ ಕಟ್ಟಿದ್ದ ಒಂದು ಸಣ್ಣ ಧರ್ಮ ಶಾಲೆಯಲ್ಲಿಳಿಸಿದನು. ಇಲ್ಲಿ ರಾಮದಾಸನು ಸ್ಥಳದ ಅನೇಕ ಭಕ್ತರು ಮತ್ತು ಸ್ನೇಹಿತರನ್ನು ಕಂಡನು.

ಆಗ್ರಾನಗರದ ತಾಜ್‌ಮಹಲ್ ಕಟ್ಟಡ ಜಗತ್ಪ್ರಸಿದ್ಧವಾದ ಕಟ್ಟಡವೆಂಬುದು ಎಲ್ಲರಿಗೂ ತಿಳಿದ ವಿಷಯ. ರಾಮದಾಸನು ರಾಮಚಂದ್ರಗುಪ್ತನೊಂದಿಗೆ ಮನಮೋಹಕವಾದ ಈ ಕಟ್ಟಡವನ್ನು ನೋಡಲು ಹೋದನು. ತಾಜ್‌ಮಹಲಿನ ಮನೋಹರ ಸೌಂದರ್ಯವನ್ನು ವರ್ಣಿಸುವುದರಲ್ಲಿ ಎಷ್ಟೋ ಜನ ಊಹಾವಂತ ಕವಿಗಳೂ ಲೇಖಕರೂ ತಮ್ಮ ಪ್ರತಿಭೆಯನ್ನು ದುಂದುಮಾಡಿದ್ದಾರೆ. ಅವರಲ್ಲಿ ಒಬ್ಬನು ತಾಜ್‌ಮಹಲ್ ಅಮೃತಶಿಲೆಯಿಂದ ನಿರ್ಮಿಸಿದ ಒಂದು ಕನಸು ಎಂದಿದ್ದಾನೆ. ಇದು ಸತ್ಯ. ಈ ಕಟ್ಟಡ ಷಹಜಹಾನನ ಪತ್ನಿ ಮಮ್‌ತಾಜ್ ಬೇಗಮಳ ಜ್ಞಾಪಕಾರ್ಥವಾಗಿ ನಿರ್ಮಿತವಾಗಿದೆ. ಈ ಸಮಾಧಿ ಮೊಗಲ್ ಶಿಲ್ಪದ ಕುಶಲ ಕಲೆಯನ್ನು ಪ್ರದರ್ಶಿಸುತ್ತದೆ. ಇಲ್ಲಿ ಅದನ್ನು ಸಂಪೂರ್ಣವಾಗಿ ವರ್ಣಿಸ ಬೇಕಾದರೆ ಅನೇಕ ಪುಟಗಳು ಬೇಕು. ರಾಮದಾಸನು ತಾಜ್‌ಮಹಲನ್ನು ಪ್ರವೇಶಿಸಿ, ಗೋಡೆಗಳ ಮೇಲಣ ಮತ್ತು ಮಧ್ಯದ ಭುವನೇಶ್ವರಿಯ ಕೆತ್ತನೆ ಯನ್ನೂ, ಚಿತ್ರದ ಮಾಟಗಳನ್ನೂ ನೋಡಿದನು. ನಂತರ ಈಚೆಗೆ ಬಂದು, ಆ ಕಟ್ಟಡದ ನಾಲ್ಕು ಗೋಪುರಗಳಲ್ಲಿ ಒಂದನ್ನು ಏರಿ, ಸುತ್ತಣ ವಿಸ್ತಾರವಾದ ಪ್ರಕೃತಿ ಸೌಂದರ್ಯವನ್ನೂ, ಸಮಾಧಿಯ ಹಿಂಭಾಗದಲ್ಲಿಯೇ ಹರಿಯುತ್ತಿರುವ ಯಮುನಾ ನದಿಯನ್ನೂ ನೋಡುತ್ತ ನಿಂತನು. ಕಟ್ಟಡದ ಮುಂಭಾಗದಲ್ಲಿ ಸುಂದರವಾದ ಉದ್ಯಾನವನಗಳನ್ನೂ ಸಮಮೂಲೆಯ ಕೊಳಗಳನ್ನೂ ನಿರ್ಮಿಸಿರುವುದರಿಂದ ಆ ಸ್ಥಳದ ಮಾಯೆ ಹೆಚ್ಚಿದೆ.

ರಾಮದಾಸನು ಅನಂತರ ನೋಡಿದುದು ಆಗ್ರಾದ ಆ ದೊಡ್ಡ ಕೋಟೆ. ಅಸಂಖ್ಯಾತವಾದ ಮಹಲುಗಳ ದೃಶ್ಯದಿಂದ ರಾಮದಾಸನ ನೋಟ ನಲಿಯಿತು. ಅವುಗಳಲ್ಲಿಯೂ ಶಿಲ್ಪಿ ತನ್ನ ಕಲಾಕೌಶಲ್ಯವನ್ನೂ ಅವಿರಳವಾದ ಶ್ರಮವನ್ನೂ ವಿನಿಯೋಗಿಸಿದ್ದಾನೆ. ಅವು ಕೂಡ ಮೊಗಲ್ ಸಂಪ್ರದಾಯದ ಕಟ್ಟಡಗಳು. ಕೋಟೆಯಿಂದ ಈಚೆಗೆ ಬರುವಾಗ ಹೊರಗಡೆ ಮೈದಾನದಲ್ಲಿ ಮಿಡತೆಗಳ ಒಂದು ಗುಂಪು ಇಳಿಯುತ್ತಿರುವುದು ಕಾಣಿಸಿತು. ಸರ್ವರಿಗೂ ತಿಳಿದಿರುವಂತೆ ಈ ಪ್ರಾಣಿ ಪೈರನ್ನು ಹಾಳುಮಾಡುವ ಅತಿ ದುಷ್ಟ ಜಂತು. ಇವು ಎಲ್ಲಿ ಇಳಿಯುತ್ತವೋ ಅಲ್ಲಿಯ ಪೈರುಪಚ್ಚೆಗಳನ್ನೆಲ್ಲಾ ನಾಶಮಾಡುತ್ತವೆ.

ಝಾನ್ಸಿಯಿಂದ ಕರೆಬಂದುದರಿಂದ ರಾಮದಾಸನು ಅಲ್ಲಿಗೆ ಹೋದನು. ಅಲ್ಲಿಯ ಸ್ನೇಹಿತರು—ಅದರಲ್ಲಿಯೂ ಮಹದೇವ ಪ್ರಸಾದನು—ರಾಮದಾಸನ ಆಗಮನವನ್ನೇ ಆದರದಿಂದ ನಿರೀಕ್ಷಿಸುತ್ತಿದ್ದರು. ರಾಮದಾಸನನ್ನು ಕಂಡೊಡನೆ ಸಂತೋಷದ ಆಧಿಕ್ಯದಿಂದ ಪರವಶರಾದರು. ಈ ಸಲ ರಾಮದಾಸನು ಊರಿಂದ ದೂರವಾಗಿ ರೈಲ್ವೆ ಸ್ಟೇಷನ್ನಿನ ಮಾರ್ಗದ ಮಗ್ಗುಲಲ್ಲಿ ಒಂದು ಕುಟಿಯಲ್ಲಿಳಿದನು. ಈಗ ರಾಮದಾಸನಿಗೆ ಪಿಳಿಕೋಟ ಆಶ್ರಮದಲ್ಲಿ ಅವನು ಯಾರ ಆದರದ ಕಾವಲಿನಿಂದ ತಪ್ಪಿಸಿಕೊಂಡು ಬಂದಿದ್ದನೋ ಆ ಸ್ವಾಮಿ ರಾಮಾನಂದರನ್ನು ಮತ್ತೆ ಸಂದರ್ಶಿಸುವ ಅನಿರೀಕ್ಷಿತವಾದ ಸುಖ ದೊರೆಯಿತು. ಅವರೂ ರಾಮದಾಸನನ್ನು ಕಾಣುವುದರಲ್ಲಿ ನಿಷ್ಕಪಟವಾದ ಸಂತೋಷವನ್ನು ವ್ಯಕ್ತಪಡಿಸಿದರು. ಮಾರನೆಯ ದಿನ ಸ್ವಾಮಿ ರಾಮಾನಂದರು ಪ್ರಯಾಣಮಾಡಿದುದರಿಂದ ಕುಟಿಯಲ್ಲಿ ರಾಮದಾಸ ನೊಬ್ಬನೇ ಉಳಿದನು. ಝಾನ್ಸಿಯ ಹಳೆಯ ಸ್ನೇಹಿತರೆಲ್ಲ ರಾಮದಾಸನಿಗೆ ತಮ ಸಹವಾಸ ಸುಖವನ್ನು ಒದಗಿಸಿದರು. ಮಹದೇವ ಪ್ರಸಾದನು ಹಗಲು ರಾತ್ರಿ ರಾಮದಾಸನ ಬಳಿಯಲ್ಲಿಯೇ ಇರುತ್ತಿದ್ದನು.

ಆ ಮೇಲೆ ಎರಡು ಮೂರು ದಿನ ತ್ರಿವೇಣೀ ಪ್ರಸಾದನು ರಾಮದಾಸನನ್ನು ಝಾನ್ಸಿಯಿಂದ ಹೊರಕ್ಕೆ ಲಲಿತಪುರಕ್ಕೂ ಮತ್ತು ದೇಶೀಯ ರಾಜ್ಯವಾದ ತ್ರಿಕಮ್‌ಗಡಕ್ಕೂ ಕರೆದುಕೊಂಡು ಹೋಗಿದ್ದನು. ನಂತರ ರಾಮದಾಸನು ಮಹೋಬ, ಕಾಂಚ್, ಜಾಲಿಗಾಂಗಳಿಗೂ ಹೋಗಿದ್ದನು. ಈ ಸಂದರ್ಭದಲ್ಲಿ ಅವನು ಜಗನ್ನಾಥ, ವಂಕೀಲಾಲ್ ಗುಪ್ತ, ಮತ್ತು ಗಣೇಶ ಬಾಜಪೈ ಇವರನ್ನು ಕಂಡನು.

ಝಾನ್ಸಿಯಲ್ಲಿ ಒಂದು ವಾರವಿರುವುದರೊಳಗೆ ರಾಮದಾಸನಿಗೆ ಒಂದು ಕಾಗದ ಬಂದಿತು. ರಮಾಬಾಯಿ ಕಾಸರಗೋಡಿನಿಂದ ಬರೆದಿದ್ದ ಆ ಕಾಗದದಲ್ಲಿ ಗುರುದೇವನು ರಾಮದಾಸನನ್ನು ನೋಡಲು ಅಪೇಕ್ಷೆಪಟ್ಟಿರುವುದಾಗಿ ತಿಳಿಸಿದ್ದಿತು. ಮತ್ತು ರಮಾಬಾಯಿ ರಾಮದಾಸನು ಗುರುದೇವನ ಇಚ್ಛೆಯನ್ನು ಸಲ್ಲಿಸುವುದರಲ್ಲಿ ಸಾವಕಾಶ ಮಾಡಬಾರದೆಂದು ಸೂಚಿಸಿದ್ದಳು. ರಾಮದಾಸನಿಗೆ ಏನು ಮಾಡ

ಬೇಕೆಂದು ಗೊತ್ತಾಗಲಿಲ್ಲ. ಹಿಂದೂಸ್ಥಾನದ ಎಲ್ಲಾ ಭಾಗಗಳ ಪ್ರವಾಸವನ್ನು ಮುಗಿಸಿದ ಹೊರತು ಕಾಸರಗೋಡಿಗೆ ಹೋಗಬಾರದೆಂದು ಅವನ ಮನಸ್ಸು. ಆದರೂ ಸರ್ವ ವಿಚಾರದಲ್ಲೂ ರಾಮದಾಸನನ್ನು ನೋಡಿಕೊಳ್ಳುತ್ತಿದ್ದ ತ್ರಿವೇಣೀ ಪ್ರಸಾದನ ಸಲಹೆಯನ್ನು ಕೇಳಿದುದಕ್ಕೆ ಅವನು ಈ ಕರೆಯನ್ನು ಮನ್ನಿಸಲೇ ಬೇಕೆಂದು ದೃಢವಾದ ಸೂಚನೆ ಕೊಟ್ಟನು. ಸಾವಕಾಶ ತಕ್ಕದ್ದಲ್ಲವೆಂದೂ ಆ ದಿನವೇ ಪ್ರಯಾಣಮಾಡಬೇಕೆಂದೂ ಹೇಳಿದನು. ರಾಮದಾಸನು ಒಪ್ಪಿದನು. ತ್ರಿವೇಣೀಪ್ರಸಾದ್ ರಾಮದಾಸನನ್ನು ಝಾನ್ಸಿ ಸ್ಟೇಷನ್ನಿಗೆ ಕರೆದುಕೊಂಡು ಹೋಗಿ ಅವನಿಗೆ ಕಾಸರಗೋಡು ಸ್ಟೇಷನ್ನಿಗೆ ಒಂದು ನೇರವಾದ ಟಿಕೇಟನ್ನು ತೆಗೆದುಕೊಟ್ಟು ಅವನನ್ನು ಮದರಾಸಿಗೆ ಹೊರಡುವ ರಾತ್ರಿ ರೈಲಿನಲ್ಲಿ ಕುಳ್ಳಿರಿಸಿದನು. ರಾಮದಾಸನು ಗುರುದೇವನ ದರ್ಶನವನ್ನು ಪಡೆಯಲು ದಕ್ಷಿಣಾಭಿಮುಖವಾಗಿ ಹಾರಿಹೋಗುತ್ತಿದ್ದನು. ಸಕಾಲದಲ್ಲಿ ಮದರಾಸನ್ನು ಮುಟ್ಟಿ, ಅಲ್ಲಿ ಮೈಲಾಪುರದಲ್ಲಿ ಡಾಕ್ಟರ್ ಜಿ.ಎಸ್. ಕತ್ರೆಯವರ ಮನೆಯಲ್ಲಿದ್ದು, ಮಾರನೆಯ ದಿನ ಮಂಗಳೂರು ಟಪ್ಪಾಲು ರೈಲಿನಲ್ಲಿ ಕುಳಿತು ಕಾಸರಗೋಡನ್ನು ಸೇರಿದನು. ರೈಲಿನಿಂದ ಇಳಿದವನೇ ಗುರುದೇವನ ದರ್ಶನಕ್ಕಾಗಿ ನೇರವಾಗಿ ಆನಂದರಾಯರ ಮನೆಗೆ ಹೋದನು. ರಾಮದಾಸನನ್ನು ಕಂಡು ಗುರುದೇವನಿಗೆ ಅತ್ಯಾನಂದವಾಯಿತು. ಗುರುದೇವನು ಆಗ ಹಾಸಿಗೆ ಹಿಡಿದು ಮಲಗಿದಂತಾಗಿದ್ದನು. ಸ್ವಲ್ಪ ಕಾಲಾನಂತರ ರಾಮದಾಸನು ಆನಂದಾಶ್ರಮಕ್ಕೆ ತೆರಳಿದನು. ಕೃಷ್ಣಾಬಾಯಿ, ಗಾದೆಯ ಚಾತಕಪಕ್ಷಿಯಂತೆ ರಾಮದಾಸನ ಆಗಮನವನ್ನೇ ನಿರೀಕ್ಷಿಸುತ್ತಿದ್ದಳು. ಮೊದಲಿನಂತೆ ಆಶ್ರಮಕ್ಕೆ ಬರಲು ಪ್ರಾರಂಭಮಾಡಿ ರಾಮದಾಸನಿಗೆ ತನ್ನ ಪ್ರೀತಿಪುರಸ್ಸರವಾದ ಸೇವೆಯನ್ನು ಸಲ್ಲಿಸಿದಳು.

ರಾಮದಾಸನು ಮೊದಲು ಉದ್ದೇಶಿಸಿದ್ದ ಪ್ರವಾಸವನ್ನು ಪೂರ್ಣಮಾಡಲು ಉತ್ತರ ದೇಶಕ್ಕೆ ಮತ್ತೆ ಹೊರಡುವುದೇ ಎಂಬ ವಿಚಾರ ಚರ್ಚೆಗೆ ಬಂದಿತು. ಮುಂದಣ ಕಾರ್ಯವೇನೆಂದು ರಾಮದಾಸನಿಗೇ ನಿರ್ಧರವಾಗಿರಲಿಲ್ಲ. ಸುಮಾರು ಹತ್ತು ದಿವಸಗಳ ನಂತರ ಜನಾರ್ದನಪಂತನು ರಾಮದಾಸನು ಆನಂದಾಶ್ರಮಕ್ಕೆ ಹಿಂತಿರುಗಿದ ವಿಚಾರವನ್ನು ತಿಳಿದು, ಹಠಾತ್ತಾಗಿ ಬಂದನು. ರಾಮದಾಸನು ಉತ್ತರ ಹಿಂದೂಸ್ಥಾನದ ನಾನಾ ಸ್ಥಳಗಳಿಗೆ ಅಲ್ಲಿಯ ಮಿತ್ರರ ಅಪೇಕ್ಷೆಯನ್ನನು ಸರಿಸಿ ಹೋಗುವಲ್ಲಿ ಅವನೊಂದಿಗಿರಲು ಪಂತನು ಸಾಕಾದಷ್ಟು ದೀರ್ಘಕಾಲದ ರಜವನ್ನು ತೆಗೆದುಕೊಂಡಿದ್ದನು. ಅವನು ಪಂಜಾಬ್ ಮತ್ತು ಕಾಶ್ಮೀರ ದೇಶವನ್ನು ನೋಡಲು ಬಹಳ ಕುತೂಹಲಪಡುತ್ತಿದ್ದನು. ಆದುದರಿಂದ ಅವನು ರಾಮದಾಸನು ಉತ್ತರ ಹಿಂದೂ ಸ್ಥಾನದ ಪ್ರವಾಸಕ್ಕಾಗಿ ಪುನಃಹೊರಡಬೇಕೆಂದೂ ತಾನು ಸಂಗಡ ಬರುವುದಾಗಿಯೂ ಸೂಚಿಸಿದನು. ರಾಮದಾಸನು ಒಪ್ಪಿದನು. ಕಾಸರಗೋಡು ಭಕ್ತರಲ್ಲಿ ಇದರಿಂದ ಮರಳಿ ಕಳವಳವೆದ್ದಿತು. ಈ ಪ್ರವಾಸದ

ಎಲ್ಲಾ ಹೊರೆಯನ್ನೂ ಅವರು ಜನಾರ್ದನಪಂತನ ಮೇಲೆ ಹೊರಿಸಿ ಅವನನ್ನು ಚನ್ನಾಗಿ ಆಕ್ಷೇಪಿಸಿದರು. ಇವನ ಮೇಲೆ ಇಂತಹ ಆಪಾದನೆ ಬಂದುದು ಇದೇ ಮೊದಲು. ರಾಮದಾಸನೊಂದಿಗೆ ಪ್ರಯಾಣ ಮಾಡುವಾಗ ಇವನಿಗೆ ಇದೇ ಬಗೆಯ ಇನ್ನೂ ಎಷ್ಟೋ ಕಠಿಣ ಪ್ರಸಂಗಗಳೊದಗಿದುವು.

---

## ಅಧ್ಯಾಯ ೪೭

### ರಾವಲ್ಪಿಂಡಿ-ಕಾಸರಗೋಡು

ನಿಶ್ಚಿತವಾದ ದಿನ ರಾಮದಾಸನು ಜನಾರ್ದನಪಂತನೊಡನೆ ಕಾಸರಗೋಡಿನಿಂದ ಮತ್ತೊಮ್ಮೆ ಉತ್ತರ ದೇಶವನ್ನು ಕುರಿತು ಪ್ರಯಾಣ ಮಾಡಿದನು. ಮದರಾಸನ್ನು ಸೇರಿ, ಮರಳಿ ಡಾಕ್ಟರ್ ಕತ್ರೆಯವರ ಮನೆಯಲ್ಲಿ ಒಂದು ದಿನವಿದ್ದು ಇವರು ನಾಗಪುರಕ್ಕೆ ರೈಲಿನಲ್ಲಿ ಹೊರಟರು. ನಾಗಪುರದಲ್ಲಿ ಕಲ್ಲೆ ಸದಾಶಿವ ರಾಯರ ಮನೆಯಲ್ಲಿ ಎರಡು ದಿನವಿದ್ದು ಮುಂದೆ ಮತ್ತೂ ಉತ್ತರಕ್ಕೆ ಪ್ರಯಾಣ ಮಾಡಿ ಮರಳಿ ಝಾನ್ಸಿಯನ್ನು ಸೇರಿದರು. ಈ ಸಲ ಇಲ್ಲಿ ರಾಮದಾಸನು ಸುಮಾರು ಹತ್ತು ದಿವಸ ಇದ್ದನು. ಇಲ್ಲಿ ಅವನು ಸ್ವಾಮಿ ನಿರ್ಭಯಾನಂದಜಿ ಮತ್ತು ಪುರ್ಣಾನಂದರನ್ನು ಕಂಡನು.

ಗೊತ್ತಾದದಿನ ರಾಮದಾಸನು ಜನಾರ್ದನಪಂತನೊಂದಿಗೆ ರಾವಲ್ಪಿಂಡಿಗೆ ನೇರವಾಗಿ ಪ್ರಯಾಣ ಮಾಡಿದನು. ಅಲ್ಲಿ ಅವನು ವಾಡಿಕೆಯಂತೆ ಪಂಡಿತ ಜೀವನ್ ದಾಸನ ಮನೆಯಲ್ಲಿ ಇಳಿದುಕೊಂಡನು. ಇಲ್ಲಿ ಹೆಚ್ಚು ಕಾಲ ನಿಲ್ಲಲಿಲ್ಲ. ಅವನಿಗೆ ಮೊದಲು ಕಾಶ್ಮೀರ ಪ್ರವಾಸವನ್ನು ಮುಗಿಸಬೇಕೆಂದು ಆತುರ. ಆ ಮೇಲೆ ಹಿಂದಕ್ಕೆ ಬರುವಾಗ ಕೆಲವು ದಿವಸಗಳು ಇಲ್ಲಿ ನಿಲ್ಲಬಹುದು. ಹೀಗಾಗಿ ಅವನೂ ಜನಾರ್ದನಪಂತನೂ ಆಮೇಲೆ ಮೂರು ನಾಲ್ಕು ದಿನದಲ್ಲಿ ಪಂಡಿತ ಜಾನಕೀನಾಥನ ಮನೆಯ ಆದರದ ನೆರಳಲ್ಲಿ ಬಂದು ನಿಂತರು. ಜಾನಕೀನಾಥನೂ ಅವನ ಮನೆಯವರೂ ಹಿಂದಿನಂತೆ ಪ್ರೀತ್ಯಾದರಗಳನ್ನು ತೋರಿಸಿದರು. ಆಗ ಪಂಡಿತ ಅಮರನಾಥನೂ ಅಲ್ಲಿದ್ದನು. ರಾಮದಾಸನು ಈ ಸಲ ಶ್ರೀನಗರದಲ್ಲಿ ಹತ್ತು ದಿನಗಳು ಮಾತ್ರ ಇದ್ದನು. ಇಲ್ಲಿ ಜನಾರ್ದನಪಂತನ ವಿಚಾರವಾಗಿ ಒಂದು ಮಾತನ್ನು ಹೇಳುವುದು ಅಪ್ರಕೃತವಾಗಲಾರದು. ರಾಮದಾಸನ ಸಹವಾಸದಲ್ಲಿ ಇರುವುದರಿಂದ ತಾನು ಸಂತೋಷವಾಗಿರುವೆನೆಂದು ಆತನು ಯೋಚಿಸಿದ್ದನು. ಅವನ ಅನುಭವ ಅದಕ್ಕೆ ತೀರಾ ವ್ಯತಿರಿಕ್ತವಾಗಿ ಪರಿಣಮಿಸಿತು. ಆಂಗ್ಲ ಭಾಷೆಯ ಪರಿಚಯವಿಲ್ಲದ್ದು ಅವನಿಗೆ ದೊಡ್ಡ ಕೊರತೆಯಾಯಿತು. ರಾಮದಾಸನು ಹೋದಕಡೆ ಮಿತ್ರರ ಸಂಗಡ ಎಲ್ಲಾ ಆಂಗ್ಲ ಭಾಷೆಯಲ್ಲಿ ಮಾತನಾಡುತ್ತಿದ್ದನು. ಅಲ್ಲದೆ ಶಾಸ್ತ್ರೀಯ ಆಚಾರದ ವಾತಾವರಣದಲ್ಲಿ ಹುಟ್ಟಿ ಬೆಳದ ಜನಾರ್ದನ

ಪಂತನಿಗೆ ಆಗ ತಾನು ಜೊತೆಯಾಗಿ ಬೆರೆಯ ಬೇಕಾಗಿ ಬಂದ ಈ ಜನಗಳ ಆಚಾರ ತೀರಾ ಅರುಚಿಯಾಯಿತು. ಅವನು ಶ್ರೀನಗರಕ್ಕೆ ಬಂಡಾಗ ಪಂಡಿತರ ಈ ನಾಡಿನಲ್ಲಿ ಆದರ್ಶವ್ಯವಹಾರವನ್ನು ಕಾಣಬಹುದೆಂದು ನಿರೀಕ್ಷಿಸಿದ್ದನು. ಆದರೆ ತನ್ನ ತಿಳಿವಳಿಕೆ ತಪ್ಪೆಂದು ಗೊತ್ತಾಗಿ ಅವನಿಗೆ ತಲ್ಲಣವಾಗಿರಬೇಕು. ಊರಿನ ಕೊಳೆತುನಾರುವ ಗಾಳಿ, ಗಾಳಿ ಬೆಳಕಿಗೆ ಅವಕಾಶ ಕೊಡದ ಇಲ್ಲಿಯ ಪಂಡಿತರ ಮಣ್ಣಿನ ಮನೆಗಳು, ಮಾಂಸಾಹಾರ, ಮತ್ತು ಜನರ ಕೊಳಕು ಪದ್ಧತಿಗಳು, ಅವನು ನೀರೀಕ್ಷಿಸಿದ್ದುವಲ್ಲ. ಷಾಲಿಮಾರ್ ಮತ್ತು ನಿಷದ್ ಬಾಗ್ ಉದ್ಯಾನವನಗಳನ್ನು ನೋಡಲು ಹೋಗುವಾಗ ಇವರು ಒಂದು ಕಾಲುವೆಯನ್ನು ಮುಸಲ್ಮಾನ ಅಂಬಿಗರು ನಡೆಯಿಸುತ್ತಿದ್ದ ಒಂದು ದೋಣಿಯಲ್ಲಿ ದಾಟಬೇಕಾಯಿತು. ಪೂಗಿಗೆ ಸೆಲೆಬಡಿಯುವ ಆ ಕಾಲುವೆಯ ದುರ್ವಾಸನೆ ಪಂತನಿಗೆ ಸಹಿಸಲಸಾಧ್ಯವಾಯಿತು. ಕಾಲುವೆಯ ಈ ದುರ್ವಾಸನೆಗೆ ಮುಸುಗುಟ್ಟುತ್ತ ಪಂತನು ಮುಖವನ್ನು ಹಿಂಡಿ ಕೊಳ್ಳುತ್ತಿರುವುದನ್ನು ನೋಡಿದಾಗ ರಾಮದಾಸನಿಗೆ ಪಂತನು ತಾನು ಶ್ರೀನಗರಕ್ಕೆ ಬಂದುದ್ದು ತಪ್ಪಾಯಿತೆಂದು ಪಶ್ಚಾತ್ತಾಪಪಡುತ್ತಿರುವನೆನ್ನುವುದು ಸುಲಭವಾಗಿಯೇ ವ್ಯಕ್ತವಾಯಿತು. ಸಾಲದುದಕ್ಕೆ ಒಂದು ವಾರದ ನಂತರ ರಾಮದಾಸನು ತಾನು ಮುಂದೆ ಪ್ರಯಾಣ ಮಾಡಲು ಅನುಮತಿ ಬೇಕೆಂದು ಪಂಡಿತರಿಗೆ ಸೂಚಿಸಿದಾಗ ಅವರು ರಾಮದಾಸನು ತಮ್ಮಲ್ಲಿಂದ ಜಾಗ್ರತೆ ಹೊರಟದ್ದಕ್ಕೆ ಜನಾರ್ದನಪಂತನೇ ಕಾರಣನೆಂದು ಊಹಿಸಿ ಇವನನ್ನು ಹತ್ತಿರ ಹತ್ತಿರ ಸಿಗಿದು ಹಾಕಿದರು.

ಅಲ್ಲಿಂದ ಹೊರಡುವ ಮುಂಚೆ ರಾಮದಾಸನೂ ಪಂತನೂ ಶಂಭುನಾಥನ ಸಂಗಡ ಕೆಲವು ದಿನಗಳು ನಿಂತರು. ಒಂದು ರಾತ್ರಿ ಜಾನಕೀನಾಥನು ರಾಮದಾಸನನ್ನು ನೋಡಲು ಅಲ್ಲಿಗೆ ಬಂದವನು ತಿರುಗಾಡಿಕೊಂಡು ಬರಲು ಅವನನ್ನು ಹತ್ತಿರದ ಮೈದಾನಕ್ಕೆ ಕರೆದುಕೊಂಡುಹೋದನು. ನಡೆಯುತ್ತಿರುವಾಗ ಜಾನಕೀನಾಥನು ರಾಮದಾಸನೊಂದಿಗೆ ಒಂದು ದೀರ್ಘ ಸಂಭಾಷಣೆ ನಡೆಸಿದನು. ಅದರ ಸಾರಾಂಶವೇನೆಂದರೆ, ರಾಮದಾಸನು ಒಂದುಸಲ ಇಚ್ಛಿಪಟ್ಟು ಜಾನಕೀನಾಥನಿಗೆ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಡಬೇಕು ಎನ್ನುವುದು. ಶರಣನಾಗುವುದೇ ಗುರಿಯಾಗಿದ್ದ ಭಾಗದಲ್ಲಿ, ರಾಮದಾಸನು ಒಂದೇಒಂದು ಆಶೀರ್ವಾದದ ಬಲದಿಂದ ಜಾನಕೀನಾಥನಿಗೆ ಆ ಸ್ಥಿತಿಯನ್ನುಂಟುಮಾಡಬೇಕು. ಇದಕ್ಕೆ ಉತ್ತರವಾಗಿ ರಾಮದಾಸನು, "ಆತ್ಮಸಮರ್ಪಣೆ ಮುಖ್ಯವಾಗಿ ಸಾಧಕನ ಅಥವ ಭಕ್ತನ ಪ್ರಯತ್ನವನ್ನು ಅವಲಂಬಿಸಿದ್ದು. ಭಗವಂತನು ನಾವು ನಮ್ಮ ಇಚ್ಛೆಯಿಂದ ತನ್ನ ಕೈಯಲ್ಲಿ ಆಯುಧಗಳಾಗಬೇಕೆಂದು ಬಯಸುತ್ತಾನೆ. ಭಕ್ತನು ಅವಶ್ಯಕವಾದ ಯೋಗ್ಯತೆಯನ್ನು ಪಡೆದಾಗ ದೇವರ ಕೃಪೆ ಆತನಮೇಲೆ ಇಳಿಯುತ್ತದೆ" ಎಂದು ಅವನಿಗೆ ತಿಳಿವಳಿಕೆ ಕೊಟ್ಟನು.

ಜಾನಕೀನಾಥನು ಒಪ್ಪಲಿಲ್ಲ. ತಾನು ತೀರ ದುರ್ಬಲ ಅಶಕ್ತ; ಶರಣನಾಗಲು ಬೇಕಾದ ಸಾಧನವನ್ನು ತಾನು ಮಾಡಲಾರ; ತನಗಾಗಿ ಎಲ್ಲವನ್ನೂ ಭಗವಂತನೇ ಆಗಮಾಡಿಸಬೇಕು; ತಾನು ಶರಣನಾಗಬೇಕಾದರೆ ಅದನ್ನು ಹೊಂದಲು ಬೇಕಾದ ಪರಿಸ್ಥಿತಿ ದೊರೆಯುವಂತೆ ಭಗವಂತನೇ ನೋಡಿಕೊಳ್ಳಬೇಕು. ಒಂದೇ ಮಾತಿನಲ್ಲಿ ಹೇಳಬೇಕಾದರೆ ಭಗವಂತನು ಕರುಣಿಸಬಹುದಾದ ವರಗಳಲ್ಲೆಲ್ಲಾ ಸರ್ವೋತ್ಕೃಷ್ಟವಾದುದನ್ನು ಭಗವಂತನು ತನ್ನಮೇಲೆ ಸುರಿಯಬೇಕು ಎಂಬುದು ಅವನ ನಿರೀಕ್ಷೆ.

ಇದಕ್ಕೆ ರಾಮದಾಸನು "ಭಗವಂತನೊಬ್ಬನೇ ನಿಜವಾಗಿ ಶಕ್ತ, ಆ ಶಕ್ತಿಯೇ ನಿನ್ನ ಜೀವನವನ್ನು ತಿದ್ದಬೇಕಾದದು, ದೈವಿಕವಾದ ಮಾರ್ಪಾಡನ್ನು ತರತಕ್ಕದು, ಎಂದು ಅರಿತಿರುವೆಯಾದುದರಿಂದ ಇನ್ನು ಶರಣಾಗತಿಯ ಪ್ರಶ್ನೆ ಎಲ್ಲಿ ಉಳಿದಿದೆ? ನಿನಗೆ ಆಗಲೇ ನಿಜ ತಿಳಿದಿದೆ. ನಿನ್ನ ಚಿಂತೆ ಒದ್ದಾಟ ಇವುಗಳಲ್ಲಿ ಅರ್ಥವಿಲ್ಲ. ಈ ಭಾವನೆಗಳನ್ನು ನೀನು ತೋರ್ಪಡಿಸುತ್ತ ಇದೀಯೆ. ಇದನ್ನು ನೀನು ವಿನೋದಕ್ಕಾಗಿ ಮಾಡುತ್ತಿದ್ದೀಯೆ ಎಂದು ರಾಮದಾಸನು ಗ್ರಹಿಸುತ್ತಾನೆ" ಎಂದು ಉತ್ತರಕೊಟ್ಟನು.

ಅವನಿಗೆ ನಂಬಿಕೆ ಹುಟ್ಟಲಿಲ್ಲ. ಮಾತು ರಾತ್ರಿ ಬಹಳ ಹೊತ್ತಿನವರೆಗೂ ನಡೆದಿತು. ಕೊನೆಗೆ ಕಂಡುದರಲ್ಲಿ ಜಾನಕೀನಾಥನ ಈ ಮಾತೆಲ್ಲ ಸರಸದ ಆಟ ಹೊರತು ಮತ್ತೇನೂ ಅಲ್ಲವೆಂದು ಗೊತ್ತಾಯಿತು.

ಪ್ರಯಾಣಕ್ಕೆ ಗೊತ್ತಾದ ದಿನ ರಾಮದಾಸನು ಶ್ರೀನಗರದ ಬೆಟ್ಟಗಳನ್ನು ಬಿಟ್ಟು ಮೈದಾನಕ್ಕೆ ಪ್ರಯಾಣ ಮಾಡಿದನು. ರಾವಲ್ಪಿಂಡಿಗೆ ಪುನಃ ಬಂದೇ ಬಂದನು. ಇಲ್ಲಿ ಅವನು ಸ್ವಾಮಿ ಆನಂದಸ್ವರೂಪರನ್ನು ಸಂದರ್ಶಿಸಿದನು. ಇವರು ಊರ ಹೊರಗೆ ಹೊರಚ್ಚಾಗಿದ್ದ ಒಂದು ಮನೆಯಲ್ಲಿ ವಾಸವಾಗಿದ್ದರು. ರಾಮದಾಸನು ಪ್ರತಿ ದಿವಸವೂ ಸಂಜೆಯಲ್ಲಿ ಅವರಲ್ಲಿಗೆ ಹೋಗುತ್ತಿದ್ದನು. ಇವರ ಕೊಟಡಿಯಲ್ಲಿ ರಾಮದಾಸನ ಉಪನ್ಯಾಸಗಳನ್ನು ಕೇಳಲು ಎಲ್ಲಾ ಪಂಥಗಳ ಭಕ್ತಜನರೂ ಸೇರುತ್ತಿದ್ದರು.

ಒಂದು ದಿನ, ರಾಮದಾಸನಿಗೆ ತುಂಬ ಮರುಳು ಹೋಗಿ ದಿನವೂ ಭಾಷಣಕ್ಕೆ ಬರುತ್ತಿದ್ದ ಒಬ್ಬ ಸಿಖ್ ಭಕ್ತನು ಗುರು ಅರ್ಜುನ ಸಿಂಗರ "ಸುಖ್‌ಮಣಿ" ಗ್ರಂಥದಿಂದ ಕೆಲವು ಪದ್ಯಗಳನ್ನೋದಿ ನೆರೆದ ಜನಕ್ಕೆ ಅರ್ಥವನ್ನು ವಿವರಿಸಿದನು. ಗುರು ಅರ್ಜುನಸಿಂಗರು "ಸುಖ್‌ಮಣಿ"ಯಲ್ಲಿ ಜೀವನದ ಅತ್ಯಂತ ಆನಂದದ ಸ್ಥಿತಿ ಎಂದರೆ ಆಧ್ಯಾತ್ಮ ಪ್ರಕಾಶ, ಸಂತರ ಕೃಪೆಯಿಂದ ಮಾತ್ರ ದೊರೆಯುವದೆಂದು ಸಿದ್ಧಾಂತ ಮಾಡಿದಾರೆ. ಎಷ್ಟೇ ಕಠಿಣವಾದ ರೀತಿಯ ಯಾವ ಸಾಧನವೇ ಆಗಲಿ, ತಪಸ್ಸೇ ಆಗಲಿ, ಸಾಧಕನಿಗೆ ಈ ಪರಮ ಪದವಿಗೆ ಅಧಿಕಾರವನ್ನು ಕೊಡಲಾರದೆಂದು ಆತನ ಮತ. ಸಂತನು ತನ್ನ ಕೃಪೆಯ ಬೆಳಕನ್ನು ತನ್ನ ಬಳಿಗೆ ಬಂದ

ವರಲ್ಲಿ ಯಾರ ಮೇಲೆಯೋ ಬೀರಲು ಮನಸ್ಸು ಮಾಡುತ್ತಾನೆ. ಆ ಕ್ಷಣ ಆ ಭಾಗ್ಯ ಶಾಲಿಜೀವ ಮೋಕ್ಷವನ್ನು ಪಡೆಯುತ್ತದೆ. ಸಾಧುವಿನ ಕೃಪೆಯನ್ನು ಹೊಂದು ವುದಕ್ಕೆ ಅಥವಾ ಹೊಂದದಿರುವುದಕ್ಕೆ ಸಾಧಕನ ಅರ್ಹತೆ ಅಥವಾ ಅನರ್ಹತೆ ಎಂಬ ನಿಯಮಗಳಾವುವೂ ಇಲ್ಲ. ದೈವಕೃಪೆಯುಂಟಾಗುವುದು ಸಾಧಕನ ಅರ್ಹತೆಯನ್ನನುಸರಿಸುವುದಾದರೆ ಅದು ಸರ್ವಶಕ್ತವಾದದ್ದೆಂದು ಹೇಳಿಸಿ ಕೊಳ್ಳಲಾರದು ಎಂದು ಅವರು ವಾದಿಸಿದ್ದಾರೆ. ಈ ವಾದ ಸಾಧುವಾದುದು. ಸರ್ವಶಕ್ತವಾದುದರಿಂದ ಕೃಪೆಯನ್ನು ಸ್ವೀಕರಿಸಲು ಸಾಧಕನಲ್ಲಿ ಯಾವ ವಿಧವಾದ ಅರ್ಹತೆಯೂ ಅವಶ್ಯಕವಿಲ್ಲ. ಅನುಗ್ರಹದ ಅಬಾಧಿತವಾದ ಶಕ್ತಿ । ಪೂರ್ಣವಾಗಿ ಸಂತನ ಕೈಯಲ್ಲಿ ಇರುತ್ತದೆನ್ನುವುದು ಆತನ ನಿರ್ಧಾರ. ತಾನು ಯಾರನ್ನೇ ಬಯಸಿ ದರೆ ಅವನನ್ನು ಸಂತನು ಉದ್ಧರಿಸುತ್ತಾನೆ, ಹರಸುತ್ತಾನೆ, ಮತ್ತು ಬಂಧನದಿಂದ ಬಿಡಿಸುತ್ತಾನೆ. ಇದು ಅನುಗ್ರಹದ ನಿರ್ವಿವಾದವಾದ ನಿಯಮ.

ಇನ್ನೊಂದು ಸಲ ರಾಮದಾಸನು ಕೆಲವರು ಸ್ನೇಹಿತರ ಇಷ್ಟದಂತೆ ಅವರ ಲ್ಲೊಬ್ಬನ ಮನೆಯಲ್ಲಿದ್ದ ಸಂನ್ಯಾಸಿಯ ದರ್ಶನಕ್ಕಾಗಿ ಹೋದನು. ಸ್ವಾಮಿ ಆನಂದ ಸ್ವರೂಪರು, ಜೀವನ್‌ದಾಸ್, ಮತ್ತು ಇಬ್ಬರು ಮೂವರು ಜೊತೆಯಾಗಿ ಆ ಮನೆಗೆ ಬಂದರು. ಸಂನ್ಯಾಸಿ ಬಹಳ ನಮ್ರನಾಗಿದ್ದನು. ರಾಮದಾಸನನ್ನು ಬಹು ಪ್ರೀತಿಯಿಂದಲೂ ದಯೆಯಿಂದಲೂ ಕಂಡನು. ರಾಮದಾಸನು ಸಂನ್ಯಾಸಿಯ ಪಕ್ಕದಲ್ಲಿ ಕುಳಿತುಕೊಂಡನು. ಇತರರೂ ಹಾಗೆಯೇ ಮಾಡಿದರು. ಸಂಭಾಷಣೆ ಯಲ್ಲಿ ರಾವಲ್ಪಿಂಡಿ ಮತ್ತು ಇತರ ಸ್ಥಳಗಳಲ್ಲಿ ಅನೇಕ ಶಿಷ್ಯರುಗಳನ್ನುಳ್ಳವನು ಮತ್ತು ಪತಂಜಲಿ ಮಹರ್ಷಿಯ ರಾಜಯೋಗವನ್ನು ಅಭ್ಯಾಸ ಮಾಡಿದವನು ಎಂದು ಕಂಡ ಈ ಸಂನ್ಯಾಸಿ ರಾಮದಾಸನಿಗೆ "ಮನಸ್ಸನ್ನು ಅಧೀನದಲ್ಲಿಡುವುದಕ್ಕೆ ಯಾವುದು ಉತ್ತಮ ಮಾರ್ಗವೆಂದು ನಿಮ್ಮ ಭಾವನೆ?" ಎಂದು ಪ್ರಶ್ನೆ ಹಾಕಿದನು.

ರಾಮದಾಸನು "ತನ್ನ ಅನುಭವದಿಂದ ಹೇಳುವುದಾದರೆ ರಾಮದಾಸನು ಸಂತತವಾದ ಭಗವನ್ನಾಮದ ಉಚ್ಚಾರಣೆ ಸುಲಭವಾಗಿ ಏಕಾಗ್ರಚಿತ್ತವನ್ನು ತರುತ್ತದೆಂದು ಖಚಿತವಾಗಿ ಹೇಳಬಲ್ಲನು" ಎಂದನು.

ಸಂನ್ಯಾಸಿ "ನಿಮ್ಮ ಮಾರ್ಗದ ವಿಚಾರದಲ್ಲಿ ನನ್ನ ಅಭಿಪ್ರಾಯವನ್ನು ತಿಳಿಸುವ ಮುನ್ನ, ನನ್ನ ಅನುಭವದ ಸ್ವಲ್ಪವನ್ನು ನಿಮಗೆ ವಿವರಿಸುತ್ತೇನೆ" ಎಂದು ಹೇಳಿ ಮುಂದುವರಿದನು. "ಮನಸ್ಸಿನ ಚಾಂಚಲ್ಯವನ್ನು ಅಧೀನಕ್ಕೆ ತರಲು ನಾನು ಎಷ್ಟೋ ವರುಷಗಳಿಂದ ಬಹಳ ಕಷ್ಟಪಟ್ಟಿದ್ದೇನೆ. ಅಷ್ಟಾಂಗ ಯೋಗದ ಕ್ರಮವನ್ನು ಅನುಸರಿಸಿದ್ದೇನೆ, ಸಾತ್ವಿಕಾಹಾರದ ಕಠಿನ ಸೂತ್ರಗಳನ್ನನು ಸರಿಸಿ ಆಹಾರವನ್ನು ನಿಯಮಿಸಿಕೊಂಡೆನು. ಕೆಲವು ತಿಂಗಳು ಹೃಷೀಕೇಶಕ್ಕೆ ಬಹುದೂರದಲ್ಲಿ ಗಂಗಾನದಿಯ ದಡದ ಮೇಲೆ ಏಕಾಕಿಯಾಗಿ ವಾಸಮಾಡಿದೆನು.

ಅಲ್ಲಿರುವಷ್ಟು ಕಾಲವೂ ಕ್ರಮವಾಗಿ ಆ ಸಾಧನೆಯನ್ನು ಮಾಡಿದೆನು. ಇಷ್ಟು ಪ್ರಯತ್ನ ಮಾಡಿದರೂ ಎಷ್ಟೂ ಏಕಾಗ್ರಚಿತ್ತ ದೊರೆಯಲಿಲ್ಲವೆಂಬುದು ಕಂಡಿತು. ಆಗ ಬಹಳ ಎದೆಗುಂದಿ ನಿರಾಶನಾದೆನು. ಬದುಕಿರುವುದು ಜುಗುಪ್ಸೆಯಾಗಿ ನದಿಗೆ ಧುಮುಕಿ ಆತ್ಮಹತ್ಯ ಮಾಡಿಕೊಳ್ಳಬೇಕೆಂದು ಯೋಚಿಸಿದೆನು. ಹೇಗೋ ಈ ಯೋಚನೆಯನ್ನು ತಡೆದುಕೊಂಡೆನು. ಇಲ್ಲಿ ಈಗ ಹಗಲು ರಾತ್ರಿ ನನ್ನನ್ನು ಬಹಳವಾಗಿ ಬಾಧಿಸುವ ಈ ಪ್ರಶ್ನೆಯನ್ನು ಕೇಳುತ್ತಿದ್ದೇನೆ. ಆದರೆ ನೀವು ಸೂಚಿಸಿರುವ ಮಾರ್ಗ ಫಲದಾಯಕವಾಗಬಹುದೆಂದು ನನಗೆ ಕಾಣದೆ ಇದೆ. ನನಗೆ ಅದರಲ್ಲಿ ನಂಬಿಕೆ ಇಲ್ಲ. ಇದೇ ನನ್ನ ನಿರ್ವಂಚನೆಯ ಮತ್ತು ಪರಾಮರ್ಶದ ಅಭಿಪ್ರಾಯ" ಎಂದು ಹೇಳಿದನು.

ಇದಕ್ಕೆ ರಾಮದಾಸನು "ಸ್ವಾಮಿಜಿ, ಏಕಾಗ್ರಚಿತ್ತಕ್ಕೆ ಅತ್ಯಂತ ಸಾಧಕವಾದದ್ದೆಂದು ರಾಮದಾಸನು ಸಮರ್ಥಿಸುವ ವಿಧಾನವನ್ನು ತಕ್ಕಷ್ಟು ಪರೀಕ್ಷಿಸದೆ ನಿರಾಕರಿಸುವುದರಲ್ಲಿ ನೀವು ತೀರ ನಿಷ್ಪ್ರಮಾಣವಾಗಿ ವರ್ತಿಸುತ್ತಿದೀರೆಂದು ಕಾಣುತ್ತದೆ. ಭಗವನ್ನಾಮದ ಉಚ್ಚಾರಣೆಯ ಪ್ರಭಾವದ ವಿಚಾರವನ್ನು ರಾಮದಾಸನು ಅವರಿವರಿಂದ ಕೇಳಿ ಅಥವಾ ಗ್ರಂಥಗಳಿಂದ ಸಂಗ್ರಹಿಸಿ ವಿವರಿಸಲಿಲ್ಲ. ಅವನು ಸ್ವಾನುಭವದ ಆಧಾರದಿಂದ ಮಾತನಾಡುತ್ತಿದ್ದಾನೆಂದು ನೀವು ನಂಬಬಹುದು. ನೀವು ತಿಳಿಯಲಪೇಕ್ಷಿಸಿದ್ದರಿಂದ ರಾಮದಾಸನು ನಿಮ್ಮ ಸಮಸ್ಯೆಗೆ ತನಗೆ ತೋರಿದ ಪರಿಹಾರವನ್ನು ತಿಳಿಸಿದನು" ಎಂದನು.

ಆತನು "ಭಕ್ತಿಪಂಥದಲ್ಲಿ ನನಗೆ ನಂಬಿಕೆ ಇಲ್ಲ. ಭಾವ ಪ್ರಧಾನವಾದ ಮತ ನನಗೆ ಒಪ್ಪಿಗೆಯಿಲ್ಲ. ಭಕ್ತಿಯೂ ಭಗವನ್ನಾಮದ ಉಚ್ಚಾರಣೆಯೂ ಸಾಧಕನನ್ನು ದೈವ ಸಾಕ್ಷಾತ್ಕಾರಕ್ಕೆ ಒಯ್ಯುವವೆಂದು ಹೇಳುವವರನ್ನು ಕುರಿತು ನನಗೆ ಬೇಸರ. ನನ್ನ ದಾರಿಯನ್ನೇನೋ ನಾನು ಇನ್ನೂ ಕಂಡಿಲ್ಲ. ಆದರೆ ಭಕ್ತಿ ಸರಿಯಾದ ದಾರಿಯಲ್ಲವೆಂಬುದನ್ನು ಬಲ್ಲೆನು" ಎಂದನು.

ಸಂನ್ಯಾಸಿ ಈ ನಿಶ್ಚಿತವಾದ ಮತ್ತು ಕೊನೆಯ ನಿರ್ಧಾರಕ್ಕೆ ಬಂದುದನ್ನು ನೋಡಿ, ಇದುವರೆಗೂ ಸಾವಧಾನವಾಗಿ ಸಂಭಾಷಣೆಯನ್ನು ಕೇಳುತ್ತಿದ್ದ ಸ್ವಾಮಿ ಆನಂದ ಸ್ವರೂಪರು, ಸಾಧುವಿನ ಕಡೆಯ ವಾಕ್ಯಗಳಿಂದ ಕೋಪಗೊಂಡರು. ರೋಷದ ಧ್ವನಿಯಿಂದ ಅವರು ಸಂನ್ಯಾಸಿಯನ್ನು ಹೀಗೆ ಛೀಗುಟ್ಟಿದರು.

"ಹಾಗಿದ್ದರೆ ನೀವು ಆ ಪ್ರಶ್ನೆಯನ್ನು ಕೇಳಬೇಕಾದದ್ದೇನಿದ್ದಿತು ? ಕಲಿತುಕೊಳ್ಳುವವನ ಭಾವನೆಯಿಂದ ಪ್ರಶ್ನೆಯನ್ನು ಕೇಳಿದ ಮೇಲೆ ಉತ್ತರ ರೂಪವಾಗಿ ದೊರೆತ ಬುದ್ಧಿವಾದವನ್ನು ತೆಗೆದುಕೊಳ್ಳಬೇಕಾಗಿದ್ದಿತು. ವಿಷಯಪರಿಜ್ಞಾನ ಸ್ವಲ್ಪವಾದರೂ ಇಲ್ಲದೆ ನೀವು ಅಭಿಪ್ರಾಯವನ್ನು ವಿರೋಧಿಸುತ್ತಿದ್ದೀರಿ. ಸ್ವಾಮಿಯವರು ಅನುಮಾನಕ್ಕೆ ಆಸ್ಪದವಿಲ್ಲದ ಹಾಗೆ ನಿಮ್ಮ ಸಮಸ್ಯೆಗೆ ಉತ್ತರ ಕೊಟ್ಟಿದ್ದಾರೆ. ಅದರಂತೆ ನಡೆಯುವುದು ಅಥವಾ ಬಿಡುವುದು ನಿಮ್ಮ ಇಷ್ಟ ಎನ್ನು

ವುದು ಸರಿ; ಆದರೆ ನೀವು ಅದನ್ನು ಔದ್ಧತ್ಯದಿಂದ ನಿರಾಕರಿಸಬಾರದಾಗಿದ್ದಿತು. ನಿಮಗೆ ಸಲಹೆ ಮಾಡಿರುವ ವಿಧಾನವನ್ನು ಅನುಸರಿಸಿ ನೋಡಬೇಕೆಂದು ಹೇಳಿದ್ದಾಗಿದೆ. ಯಾವ ಕಾರಣದಿಂದಲೇ ಆಗಲಿ, ನೀವು ಇದುವರೆಗೆ ಅನುಸರಿಸಿದ ಮಾರ್ಗದಲ್ಲಿ ತೀರಾ ಪರಾಜಿತರಾಗಿದ್ದೀರಿ ಎನ್ನುವುದು ಸ್ಪಷ್ಟವಾಗಿದೆ. ಆದರೂ ನೀವು ಗುರುವೆಂದು ವರ್ತಿಸುತ್ತಾ ಅನೇಕ ಶಿಷ್ಯರನ್ನು ಅರ್ಜಿಸುತ್ತಿರುವುದು ವಿಚಿತ್ರ. ಅವರಿಗೆ ಏನು ಕಲಿಸುತ್ತೀರಿ ? ಗಂಗಾನದಿಯಲ್ಲಿ ಮುಳುಗಿ ಸಾಯಿರಿ ಎಂದೇ ಇರಬೇಕು. ಸಾಧುಗಳಾದ ಜನರನ್ನು ಬೆಳ್ಳಿಸಿ ಅವರ ಮನೆಗಳಲ್ಲಿ ನಿಂತು ಅದರಿಂದ ಬದುಕುತ್ತೀರಿ ? ನಿಮ್ಮ ಆಹಾರವನ್ನು ಸಂಪಾದಿಸಲೋಸುಗ ಕೆಲಸ ಮಾಡಲು ನಿಮಗೆ ದಾರ್ಢ್ಯವಿದೆ. ಪ್ರಪಂಚವನ್ನು ಮೋಸಗೊಳಿಸಲು ನೀವು ಧರಿಸಿರುವ ಈ ನಿಮ್ಮ ಕಾಷಾಯವಸ್ತ್ರಗಳನ್ನು ತ್ಯಜಿಸಿರಿ. ಪ್ರಮಾಣಿಕರಾಗಿರಿ. ಆತ್ಮವಂಚನೆ ಮಾಡದಿರಿ. ಮುಗ್ಧರಾದ ಕೆಲಜನರು ನಿಮ್ಮ ನಿಷ್ಪ್ರಯೋಜಕ ಮಾರ್ಗದಲ್ಲಿ ಅಡಿ ಇಡದೆ ಉಳಿಯುವಂತೆ ಮಾಡಿ. ಇದು ನಿಮಗೆ ನನ್ನ ಸಲಹೆ. ಅದರಂತೆ ನಡೆದು ಬದುಕಿಕೊಳ್ಳಿ "

ಸ್ವಾಮಿ ಆನಂದ ಸ್ವರೂಪರು ಸಂನ್ಯಾಸಿಯನ್ನು ಆಕ್ಷೇಪಿಸುತ್ತಿದ್ದಾಗ ರಾಮದಾಸನು ಆತನನ್ನು ನೋಡುತ್ತಲೇ ಇದ್ದನು. ಅಷ್ಟು ಹೊತ್ತು ಅವನ ಮುಖ ಅಭಿಮಾನದ ಮಂದಹಾಸದಿಂದ ಬೆಳಗುತ್ತಿದ್ದಿತು. ಅವನು ಅಪ್ರತಿಭನಾಗದೆ ತಣ್ಣಗೆ ಕುಳಿತಿದ್ದನು. ಅವನು ಸ್ವಾಮಿ ಆನಂದಸ್ವರೂಪರ ಕಡೆಗೆ ತಿರುಗಿ ಮೆಲ್ಲನೆ ಮೃದುವಾಗಿ ಸಮಾಧಾನದ ಧ್ವನಿಯಲ್ಲಿ ಹೀಗೆಂದನು.

"ಸ್ವಾಮಿಜಿ, ನೀವು ಪ್ರದರ್ಶಿಸಿರುವ ಈ ಕೋಪಸ್ವಭಾವ ನಿಮ್ಮ ಉಡುಪಿಗೆ ತಕ್ಕದ್ದಲ್ಲ. ನಿಮ್ಮ ಅಮೂಲ್ಯ ಶಕ್ತಿಯ ಬಹಳವನ್ನು ಈ ಕೋಪದ ಕುದಿಯಲ್ಲಿ ವ್ಯರ್ಥವಾಗಿ ಕಳೆದಿರಿ. ನಾನೊಬ್ಬ ದೀನ ಜೀವ, ನೀವು ದೊಡ್ಡ ಮಹಾತ್ಮರು. ನನ್ನ ವಿಷಯವಾಗಿ ನನಗೆ ದುಃಖವಿಲ್ಲ. ಆದರೆ ನಿಮಗೆ ನೀವೇ ಮಾಡಿಕೊಂಡ ಅಪಘಾತಕ್ಕೆ ನಾನು ಉದ್ದೇಶಿಸದೆ ಕಾರಣನಾದೆನಲ್ಲಾ ಎಂದು ನನಗೆ ವಿಷಾದವಾಗುತ್ತದೆ."

ಆ ಪ್ರಸ್ತಾಪ ಅಲ್ಲಿಗೆ ನಿಂತಿತು. ಸಮಾಗಮ ಮುಗಿದು ರಾಮದಾಸನು ಇತರ ಸ್ನೇಹಿತರೊಂದಿಗೆ ಮನೆಯಿಂದ ಹೊರಕ್ಕೆ ಬಂದನು. ಸಂನ್ಯಾಸಿ ಇವರನ್ನು ಬೀಳ್ಕೊಡಲು ಬೀದಿಗೆ ಬಂದನು. ರಾಮದಾಸನಿಗೆ ಸಂನ್ಯಾಸಿಯನ್ನು ಆನಂದದಿಂದ ಅಪ್ಪಿಕೊಳ್ಳದಿರಲು ಆಗಲಿಲ್ಲ. ಇದನ್ನು ನೋಡಿ ಸ್ವಾಮಿ ಆನಂದಸ್ವರೂಪರಿಗೆ ತುಂಬಾ ಆಶ್ಚರ್ಯ ಉಂಟಾಗಿರಬೇಕು.

ಇನ್ನೊಂದುದಿನ ಆ ಊರಿನ ಭಕ್ತಮಾತೆಯರ ಇಷ್ಟಾನುಸಾರ ರಾಮದಾಸನು ಇನ್ನೊಂದು ಧಾರ್ಮಿಕ ಸಂಸ್ಥೆಯಲ್ಲಿ ಕೃಷ್ಣಪ್ರೇಮವನ್ನು ಕುರಿತು ಉಪನ್ಯಾಸ ಮಾಡಿದನು. ಆ ಸಂದರ್ಭದಲ್ಲಿ ಇನ್ನೂರಕ್ಕಿಂತ ಹೆಚ್ಚು ಸ್ತ್ರೀಯರು ಸೇರಿದ್ದರು.

ಅದು ಮಹಿಳೆಯರಿಗಾಗಿಯೇ ಏರ್ಪಡಿಸಿದ್ದ ಸಭೆ. ರಾಮದಾಸನು ಹಿಂದೀ ಭಾಷೆಯಲ್ಲಿ ಒಂದು ಗಂಟೆಯ ಕಾಲ ಮಾತನಾಡಿದನು. ಪ್ರೀತಿಯ ಭವ್ಯತೆಯ ವಿವರಣೆಯಲ್ಲಿ ರಾಮದಾಸನು ತನ್ನ ಆತ್ಮವನ್ನು ಒಂದು ಆನಂದಪ್ರವಾಹವಾಗಿ ಸುರಿದುಕೊಂಡನು. ಶ್ರೀಕೃಷ್ಣನ ಜೀವನದಲ್ಲಿ ಭಕ್ತರನ್ನು ಕುರಿತ ಭಗವಂತನ ಪ್ರೀತಿ ಭಾಸ್ವರವಿಭವದಿಂದ ಕಂಡುಬರುವ ಅನೇಕ ಪರಿಣಾಮಕಾರಕ ಸನ್ನಿವೇಶಗಳನ್ನು ವಿವರಿಸಿದನು. (ಶ್ರೀಕೃಷ್ಣನು ಅನಂತ ಪ್ರೇಮ ಜ್ಞಾನ ಆನಂದಗಳ ಮೂರ್ತಿ) ಎಂಬ ಉದ್ಗಾರದಿಂದ ವ್ಯಾಖ್ಯಾನವನ್ನು ಉಪಸಂಹಾರಮಾಡಿದನು.

ಮಾತೆಯರು ಈ ಉಪನ್ಯಾಸವನ್ನು ನಿಶ್ಚಲ ಗಮನದಿಂದ ಕೇಳಿ ಬಹಳ ಆನಂದಪಟ್ಟರು. ಅವರು ಶ್ರೀಕೃಷ್ಣನ ಆರಾಧಕರು. ಅವನೇ ಅವರ ಜೀವ, ಆತ್ಮ, ಸರ್ವಸ್ವ. ಧನ್ಯಮಾತೆಯರೇ, ನಿಮಗೆ ಸದಾ ಶ್ರೀಕೃಷ್ಣನ ನಾಮ ಮತ್ತು ಪ್ರೇಮದ ಸಮ್ಮೋಹಕ ಮಂತ್ರದಿಂದ ಬರುವ ವಿವಶತೆ ನಿರಂತರವಾಗಲಿ.

ಉಪನ್ಯಾಸ ಮುಗಿದ ನಂತರ, ರಾಮದಾಸನು ಜೀವನ್‌ದಾಸನ ಮನೆಗೆ ಹಿಂತಿರುಗಿ ಬಂದು ಬಿಸಿಲುಮಚ್ಚಿನಮೇಲೆ ಕುಳಿತಿದ್ದನು. ಕೆಳಗಡೆ ಮನೆಯಮುಂದೆ ಒಂದು ವಾಗ್ವಾದ ನಡೆಯುತ್ತಿದ್ದುದು ಕೇಳಿಸಿತು. ಅದು ಶಾಂತವಾದಮೇಲೆ ಒಬ್ಬನು ಒಳಗೆ ಬಂದು, ವಾಗ್ವಾದ ಮಾಡುತ್ತಿದ್ದವರ ವಿಚಾರವನ್ನು ತಿಳಿಸಿದನು. ಇಬ್ಬರು ಗೂಢಚಾರ ಪೋಲೀಸಿನವರು ಉಪನ್ಯಾಸದ ವೇಳೆ ಅಲ್ಲಿದ್ದು ಜೀವನ್‌ದಾಸನ ಮನೆಯವರೆಗೂ ರಾಮದಾಸನನ್ನು ಹಿಂಬಾಲಿಸಿದ್ದರೆಂದು ಗೊತ್ತಾಯಿತು. ಸಂಗತಿ ಏನೆಂದರೆ, ರಾಮದಾಸನು ಒಂದು ಖಾದಿವಸ್ತ್ರವನ್ನು ಧರಿಸಿದ್ದನು. ಜನಾರ್ದನಪಂತನು ಖಾದಿವಸ್ತ್ರಗಳನ್ನು ಧರಿಸಿದ್ದುದಲ್ಲದೆ ಬಿಳಿಯದೊಂದು ಖಾದಿ ಟೋಪಿಯನ್ನು ಧಾರಣೆಮಾಡಿದ್ದನು. ಗೂಢಚಾರ ಪೋಲೀಸಿನವರು ರಾಮದಾಸನನ್ನು ಸಂನ್ಯಾಸಿವೇಷಧಾರಿಯಾದ ಒಬ್ಬ ರಾಜಕೀಯ ವ್ಯಕ್ತಿಯೆಂದು ಯೋಚಿಸಿದರು. ರಾಮದಾಸನ ಉಪನ್ಯಾಸದಲ್ಲಿ ಆಕ್ಷೇಪಕರವಾದ ವಿಷಯ ಏನೂ ಇರಲಿಲ್ಲವಾದುದರಿಂದ ರಾಮದಾಸನ ಪೂರ್ವೋತ್ತರ ಉದ್ದೇಶ ಇವು ಏನೆಂಬುದನ್ನು ವಿಚಾರಿಸಲು ಮನೆಯವರೆಗೂ ಬಂದರು. ಜೀವನ್‌ದಾಸನ ಪತ್ನಿಯಿಂದ ಸಮರ್ಪಕವಾದ ಉತ್ತರ ದೊರೆತು ಹೊರಟುಹೋದರು.

ಪಂಜಾಬಿನಲ್ಲಿರುವಾಗ ರಾಮದಾಸನನ್ನು ಜೀವನ್‌ದಾಸನು ತನ್ನ ಗ್ರಾಮವಾದ ಹಾಸ್ರೋಗೆ ಸಣ್ಣ ಒಂದು ಪ್ರವಾಸಕ್ಕೆ ಕರೆದುಕೊಂಡುಹೋದನು. ಅಲ್ಲಿ ರಾಮದಾಸನು ಸ್ಥಳದ ಅನೇಕ ಭಕ್ತರ ಪರಿಚಯವನ್ನು ಪಡೆದನು. ಇವರಲ್ಲಿ ವಿಶಾಲದೃಷ್ಟಿಯ ಒಬ್ಬ ಮುಸಲ್ಮಾನನೂ ಇದ್ದನು. ರಾಮದಾಸನು ರಾವಲ್ಪಿಂಡಿಯಲ್ಲಿ ಅನೇಕ ಭಕ್ತರಿಂದ ಅವರ ಮನೆಗಳಲ್ಲಿ ಆದರವನ್ನೂ ಅತಿಥಿಸತ್ಕಾರವನ್ನೂ ಪಡೆದ ಸಂಗತಿಯನ್ನು ಇಲ್ಲಿ ಸೂಚಿಸಲೇಬೇಕು. ಇವರಲ್ಲಿ ಗುರುದಾಸರಾಮ್ ಮತ್ತು ಒಬ್ಬ ಸಿಖ್‌ಸರದಾರ ಇದ್ದರು.

ರಾವಲ್ಪಿಂಡಿಯಿಂದ ಬಂದೊಡನೆಯೇ ರಾಮದಾಸನು ಆಗ್ರಾಕ್ಕೆ ಪ್ರಯಾಣ ಮಾಡಿ ಸಕಾಲದಲ್ಲಿ ಅಲ್ಲಿ ಸೇರಿದನು. ಇಲ್ಲಿ ಅವನೂ ಜನಾರ್ದನಪಂತನೂ ಹಿಂದಿನ ಅದೇ ದೇವಸ್ಥಾನದ ಪ್ರಾಕಾರದೊಳಗಣ ಕಟ್ಟಡದಲ್ಲಿ ಇಳಿದರು. ಈ ಪ್ರವಾಸದಲ್ಲಿ ರಾಮದಾಸನು ವೈಶ್ಯರ ವಿದ್ಯಾರ್ಥಿನಿಲಯದಲ್ಲಿ ಒಂದು ಉಪನ್ಯಾಸ ಮಾಡಿದನು. ಇಲ್ಲಿಯ ವಿದ್ಯಾರ್ಥಿಗಳು ಅವನಿಗೆ ಅನೇಕ ಪ್ರಶ್ನೆಗಳನ್ನು ಹಾಕಿದರು. ರಾಮದಾಸನು ತನ್ನ ಜೀವನ ಅನುಭವಗಳಿಂದ ಅವರ ತೊಡಕುಗಳನ್ನು ಬಿಡಿಸಿದನು. ಅವರೆಲ್ಲರೂ ಹರ್ಷಚಿತ್ತರಾಗಿ ರಾಮದಾಸನನ್ನು ತುಂಬಾ ಪ್ರೀತಿಯಿಂದ ಕಂಡರು.

ದೇವಸ್ಥಾನದಲ್ಲಿದ್ದಾಗ ಭೇಟಿಗೆ ಬಂದವರಲ್ಲಿ ಇಟಾವದ ಸುರಜ್‌ನಾರಾಯಣ ಮತ್ತು ಹೃದಯನಾರಾಯಣ ಎಂಬುವರಿಬ್ಬರು ಇದ್ದರು. ಇವರು ರಾಮದಾಸ ಜನಾರ್ದನಪಂತರನ್ನು ಇಟಾವಕ್ಕೆ ಕರೆದುಕೊಂಡುಹೋಗಿ ಅಲ್ಲಿ ಇಬ್ಬರನ್ನೂ ಥಿಯಾಸಫಿ ಭವನದಲ್ಲಿ ಇಳಿಸಿದರು. ಇಲ್ಲಿಯೂ ಸ್ಥಳದ ಅನೇಕ ಸ್ನೇಹಿತರು ಸಾಯಂಕಾಲದಲ್ಲಿ ರಾಮದಾಸನ ಉಪನ್ಯಾಸಗಳನ್ನು ಕೇಳಲು ಆ ಭವನಕ್ಕೆ ಬರುತ್ತಿದ್ದರು. ಇತರಸ್ಥಳಗಳಂತೆ ಇಲ್ಲಿಯೂ ರಾಮದಾಸನಿಗೆ ಅತ್ಯಂತ ಆನಂದದಲ್ಲಿ ಕಾಲಕಳೆಯಿತು.

ರಾಮದಾಸನನ್ನು ಇಲ್ಲಿಂದ ಹೃದಯನಾರಾಯಣನು ತನ್ನ ತಂದೆ ತಾಯಿ ವಾಸವಾಗಿದ್ದ ಮೈನ್ಪುರಿಗೆ ಕರೆದುಕೊಂಡುಹೋದನು. ಅವನ ಮನೆಯವರೆಲ್ಲ ರಾಮದಾಸನನ್ನು ಬಹು ಸಂತೋಷದಿಂದ ಬರಮಾಡಿಕೊಂಡರು. ರಾಮದಾಸನು ಅವರ ಸ್ವಚ್ಛ ಪ್ರೇಮಯುಕ್ತ ಸಂಸರ್ಗದಲ್ಲಿ ಒಂದು ರಾತ್ರಿಯನ್ನು ಕಳೆದನು. ಹೃದಯನಾರಾಯಣನ ತಂದೆ ಧರ್ಮನಾರಾಯಣನು ಒಬ್ಬ ಮಹನೀಯ, ಉದಾತ್ತಜೀವಿ. ತಂದೆಯ ಅನರ್ಘ ಗುಣಗಳೇ ಪ್ರತಿಭಾಶಾಲಿಗಳಾದ ಅವನ ಮಕ್ಕಳಲ್ಲಿದ್ದುವು. ಮತ್ತೆ ಇಟಾವಕ್ಕೆ ಹಿಂದಕ್ಕೆ ಬಂದು ರಾಮದಾಸನೂ ಜನಾರ್ದನಪಂತನೂ ಅಲ್ಲಿಂದ ಹೊರಟು ದಾರಿಯಲ್ಲಿ ಕಾಶೀ ಪ್ರಯಾಗಗಳನ್ನು ಹಾಯ್ದು ಧನ್ಬಾದ್‌ಗೆ ಪ್ರಯಾಣ ಮಾಡಿದರು.

ಧನ್ಬಾದ್‌ನಲ್ಲಿ ಗುಜರಾತಿ ಸ್ನೇಹಿತ ರತಿಲಾಲ್ ರಾಮದಾಸನಿಗಾಗಿ ಸ್ಟೇಷನ್ನಿನಲ್ಲಿ ಕಾದಿದ್ದನು. ರತಿಲಾಲ್ ಬಂಗಾಳಾದೇಶದ ಒಳಭಾಗದಲ್ಲಿ ಕಲ್ಲಿದ್ದಲಿಗೆ ಪ್ರಸಿದ್ಧವಾದ ಒಂದು ಪ್ರದೇಶ ಕತ್ರಾಸ್‌ಘರ್‌ನಲ್ಲಿ ವಾಸವಾಗಿದ್ದನು. ಇವರು ಸ್ಟೇಷನ್ನಿನಿಂದ ರತಿಲಾಲ್‌ನೊಂದಿಗೆ ಕತ್ರಾಸ್‌ಘರ್‌ಗೆ ಮೋಟಾರುಗಾಡಿಯಲ್ಲಿ ಪ್ರಯಾಣಮಾಡಿದರು. ಇಲ್ಲಿ ರಾಮದಾಸನು ಸುಮಾರು ಒಂದು ವಾರ ನಿಂತನು. ಆಗ ಅವನು ಆ ಅವಕಾಶವನ್ನು ಉಪಯೋಗಿಸಿಕೊಂಡು ಕಲ್ಲಿದ್ದಲು ಗಣಿಗಳನ್ನು ನೋಡಿದನು. ಇಲ್ಲಿ ನಡೆದ ಒಂದು ಸಣ್ಣ ಪ್ರಸಂಗ ಗಮನಾರ್ಹವಾದುದು. ಅದು ಸತ್ಯಾಗ್ರಹಿಗಳ ಧಾರಣಾಚರಣೆ ಉಲ್ಬಣವಾಗಿದ್ದ ಕಾಲ. ಸಣ್ಣ ವಿದ್ಯಾರ್ಥಿಗಳು ಸತ್ಯಾಗ್ರಹದಲ್ಲಿ ತೀವ್ರ ಆಸಕ್ತಿ ವಹಿಸಿ ಅದರಲ್ಲಿ ಭಾಗವಹಿಸುತ್ತಿದ್ದರು.

ಮನೆಯ ಒಬ್ಬ ಹುಡುಗ ಧಾರಣದಲ್ಲಿ ನಿರ್ಭೀತನಾಗಿದ್ದನು. ಒಂದು ಸಾರಾಯಿ ಅಂಗಡಿಯ ಬಳಿ ಸತ್ಯಾಗ್ರಹ ಮಾಡಿದನೆಂದು ಪೋಲೀಸಿನವರು ಇವನನ್ನು ಹಿಡಿದರಂತೆ. ಪೋಲೀಸಿನವರು ವಾಡಿಕೆಯಂತೆ ಇವನನ್ನು ಪ್ರಶ್ನೆ ಮಾಡಿದರು.

"ನಿಮ್ಮ ತಂದೆಯಾರು ?"

"ಮಹಾತ್ಮಾ ಗಾಂಧಿ"

"ನಿಮ್ಮ ಮನೆ ಇರುವುದು ಎಲ್ಲಿ ?" ಎಂದು ಪೋಲೀಸಿನವನ ಮುಂದಿನ ಪ್ರಶ್ನೆ.

"ಸೆರೆಮನೆ" ಎಂದು ತಕ್ಷಣ ಹುಡುಗನಿಂದ ಉತ್ತರ ಬಂದಿತು.

ಇದರಮೇಲೆ ಹುಡುಗನನ್ನು ಬಿಟ್ಟುಬಿಟ್ಟು ಮನೆಗೆ ಕಳುಹಿಸಿದರು.

ಕತ್ರಾಸ್‌ಘರ್‌ನಲ್ಲಿ ಒಂದು ವಾರವಿದ್ದು, ರಾಮದಾಸನೂ ಜನಾರ್ದನ ಪಂತನೂ ಕಲ್ಕತ್ತೆಗೆ ಪ್ರಯಾಣಮಾಡಿ ಅಲ್ಲಿ ಪರಬ್ ಮತ್ತು ಬಿ. ಎಸ್. ರಾವ್ ಇವರ ಮನೆಯಲ್ಲಿಳಿದರು. ಇವರಿಬ್ಬರೂ ಒಂದೇ ಕಟ್ಟಡದಲ್ಲಿದ್ದವರು, ರಾಮದಾಸನು ಕಲ್ಕತ್ತೆಯಲ್ಲಿದ್ದ ಪ್ರಥಮ ಭಾಗದ ದಿನಗಳನ್ನು ತಮ್ಮತಮ್ಮಲ್ಲಿ ಹಂಚಿಕೊಂಡರು. ಶನಿವಾರದ ದಿನ ರಾತ್ರಿ ಇವರು ತಮ್ಮ ಜೊತೆಯ ಕೆಲವು ಸ್ನೇಹಿತರೊಂದಿಗೆ ಬಿಸಿಲುಮಚ್ಚಿಗೆ ಹೋಗಿ ತಮ್ಮದೇ ತರದ ಧ್ಯಾನ ಮತ್ತು ಆಧ್ಯಾತ್ಮಿಕ ಸಂಭಾಷಣೆಯಲ್ಲಿ ರಾತ್ರಿಯೆಲ್ಲಾ ಜಾಗರಣೆ ಮಾಡುತ್ತಿದ್ದರು. ರಾಮದಾಸನು ಒಂದು ಸಲ ಇವರೊಂದಿಗೆ ಇದರಲ್ಲಿ ಸೇರಿದ್ದನು. ಇಬ್ಬರು ಸ್ನೇಹಿತರೂ ತಮ್ಮ ಪ್ರವಾಸಿ ಅತಿಥಿಗಳಿಬ್ಬರನ್ನೂ ಆದರದಿಂದ ಮೇರೆಹರಿದು ನೋಡಿಕೊಂಡರು.

ನಂತರ ರಾಮದಾಸನು ಜನಾರ್ದನಪಂತನ ಸಹಿತ ಪಿ. ಶಿವಶಂಕರರಾಯರೊಂದಿಗೆ ಕೆಲದಿನವಿದ್ದನು. ಈ ಮನೆಯಲ್ಲಿ ಜನಾರ್ದನಪಂತನು ಒಂದು ಹರಿಕಥೆ ಮಾಡಿದನು. ಅದಕ್ಕೆ ಅಲ್ಲಿಯ ಆಸಕ್ತಿವಂತ ಜನ ಬಹಳವಾಗಿ ಸೇರಿದ್ದರು. ಆ ನಗರದಲ್ಲಿ ನೆಲೆಸಿದ್ದ ಮಹಾರಾಷ್ಟ್ರ ಜನಗಳ ಭಜನಮಂದಿರದಲ್ಲಿ ಇನ್ನೊಂದು ಹರಿಕಥೆಗೆ ಏರ್ಪಾಡಾಯಿತು. ಇಲ್ಲಿ ಜನಾರ್ದನಪಂತನು ಶ್ರೀ ಸಮರ್ಥರಾಮದಾಸರ ಮತ್ತು ಶಿವಾಜಿಯ ಕಥೆಯನ್ನು ವಿಷಯವಾಗಿ ತೆಗೆದುಕೊಂಡನು. ರಾಮದಾಸನ ಸಮೀಪಸಂಪರ್ಕಕ್ಕೆ ಬಂದಮೇಲೆ ಬಹುಕಾಲ ನಿರುದ್ಧವಾಗಿದ್ದ ಪಂತನ ಉಜ್ವಲ ದೇಶಾಭಿಮಾನ ಉಪನ್ಯಾಸದಲ್ಲಿ ಉದ್ದೀಪಿತವಾಯಿತು. ಅವನು ಹಿಂದೂಸ್ಥಾನದ ಅವನತಿಯನ್ನು ಕುರಿತು ಉಗ್ರವಾಗಿ ಟೀಕಿಸಿ, ಅದಕ್ಕೆ ಕಾರಣರೆಂದು ತಾನು ಎಣಿಸಿದ್ದವರಮೇಲೆ ಕಠಿಣವಾದ ಖಂಡನೆಯನ್ನು ಮಾಡಿದನು. ರಾಮದಾಸನು ಇವನನ್ನು ಮೊದಲು ನೋಡಿದಾಗ ಈತನು ರಾಜಕೀಯ ರಂಗದಲ್ಲಿ ಪ್ರಮುಖ ಭಾಗವನ್ನು ವಹಿಸುತ್ತಿದ್ದನು. ಈಚೆಗೆ ಕೆಲವು ಕಾಲದಿಂದ ಆ ಗೊಡವೆಯನ್ನು ಬಿಟ್ಟು ವಿಶೇಷವಾಗಿ ಧರ್ಮಪ್ರಚಾರಕನಾಗಿದ್ದನು. ಕೀರ್ತನೆಯನ್ನು ಕೇಳಲು ಬಂದಿದ್ದವರು ಇವನ ಈ ಅಪ್ರಸಕ್ತಿಗೆ ಸಿದ್ಧರಾಗಿರಲಿಲ್ಲ. ಇದರಿಂದ ಅವರಿಗೆ ಬಹಳ ಕಳವಳವಾಗಿರಬೇಕು. ಸಂಗತಿಯನ್ನು ಅರಿತುಕೊಂಡು

ಜನಾರ್ದನ ಪಂತನು ಕೂಡಲೆ ಹರಿಕಥೆಯ ಮುಖ್ಯ ವಿಚಾರಕ್ಕೆ ಹಿಂತಿರುಗಿದನು. ರಾಮದಾಸನು ಕಲ್ಕತ್ತೆಯಲ್ಲಿ ಸುಮಾರು ಹತ್ತು ದಿವಸಗಳ ಕಾಲ ಇದ್ದನು. ಆಗ ಅವನಿಗೆ ಅಲ್ಲಿಯ ಎಲ್ಲರಿಂದಲೂ ಪ್ರೀತಿ ಆದರಗಳೇ ದೊರೆತುವು.

ಅಲ್ಲಿಂದ ಮುಂದಿನ ಪ್ರಯಾಣ ನೇರವಾಗಿ ಮದರಾಸಿಗೆ. ಎರಡು ದಿನದ ರೈಲ್ವೆ ಪ್ರಯಾಣ ಮಾಡಿ ರಾಮದಾಸನು ಆ ನಗರವನ್ನು ಮುಟ್ಟಿದನು. ಇದು ಅವನು ಈ ಪಟ್ಟಣಕ್ಕೆ ಬಂದ ಮೂರನೆಯ ಬಾರಿ. ಈ ಸಲ ಡಾಕ್ಟರ್ ಜಿ. ಎಸ್. ಕತ್ರೆಯವರಲ್ಲಿ ನಿಂತದ್ದು ಒಂದು ವಾರಕ್ಕೆ ಮೇಲ್ಪಟ್ಟು ಆಯಿತು. ಇಲ್ಲಿಯೂ ಜನಾರ್ದನ ಪಂತನು ಈ ಊರ ಸ್ನೇಹಿತರ ಅಭಿಲಾಷೆಯಂತೆ ಒಂದು ಹರಿಕಥೆ ಮಾಡಲು ಅವಕಾಶವಾಯಿತು.

ಮದರಾಸಿನಿಂದ ಇವರು ಕುಂಭಕೋಣಕ್ಕೆ ಹೋದರು. ಈ ಪುಸ್ತಕಕ್ಕೆ ಪ್ರೀತಿಯಿಂದ ಒಂದು ಪ್ರಸ್ತಾವನೆಯನ್ನು ಬರೆದಿರುವ ಸವೂರ್ ಶಂಕರ ರಾಯರು ರಾಮದಾಸನನ್ನು ತಮ್ಮಲ್ಲಿಗೆ ಕರೆದುಕೊಂಡು ಹೋಗಲು ಮದರಾಸಿಗೆ ಬಂದಿದ್ದರು. ಶಂಕರರಾಯರು ಮಹಾ ವಿದ್ವಾಂಸರು. ಇವರ ವಿಶಾಲವಾದ ಬಂಗಲೆ ಯಲ್ಲಿರುವ ಸತ್ಕಾರ ಕೊಟಡಿ ದೊಡ್ಡದಾಗಿರತಕ್ಕದ್ದು ಇವರ ಸರಸ್ವತೀ ಭಂಡಾರ ವಾಗಿದೆ. ಇದರಲ್ಲಿ ಈತ ತತ್ತ್ವಜ್ಞಾನ ಧರ್ಮ ಮತ್ತು ಸಾಹಿತ್ಯದ ಗ್ರಂಥಗಳ ಅತ್ಯುತ್ತಮ ಸಂಗ್ರಹವನ್ನು ಇಟ್ಟುಕೊಂಡಿದ್ದಾರೆ. ರಾಮದಾಸನು ಇಲ್ಲಿ ಒಂದು ವಾರ ಆನಂದವಾಗಿ ಕಾಲ ಕಳೆದನು. ಶಂಕರರಾಯರ ಪತ್ನಿ ಸರಳ ಸ್ವಭಾವದಾಕೆ, ಮಗುವಿನಂತಹವಳು, ಉದಾತ್ತ ಜೀವಿ. ಸಾಯಂಕಾಲ ಮನೆಯಲ್ಲಿ ನಡೆಯುವ ಭಜನೆಯಲ್ಲಿ ಇವಳು ಗಂಡನೊಡನೆ ಮನಸಾರೆ ಸೇರುತ್ತಿದ್ದಳು. ರಾಮದಾಸನು ಮನೆಯಿಂದ ಹೊರಗೆ ಹೋದುದೇ ಕಡಮೆ. ಸವೂರ್ ಶಂಕರರಾಯರು ಆಗ್ಗೆ ಮುಖ್ಯ ಅಧ್ಯಾಪಕರಾಗಿದ್ದ ಅಲ್ಲಿಯ ಕಾಲೇಜಿನ ಕೆಲವು ಅಧ್ಯಾಪಕರು ರಾಮ ದಾಸನನ್ನು ನೋಡಲೂ ಅವನೊಡನೆ ಸಂಭಾಷಣೆ ಮಾಡಲೂ ಬಂದರು. ಜನಾರ್ದನಪಂತನ ರಜದ ಕಾಲ ಈ ವೇಳೆಗೆ ಮುಗಿದುದರಿಂದ ಅವನು ರಾಮ ದಾಸನನ್ನು ಬಿಟ್ಟು ನರ್ಬೇಡಿನಲ್ಲಿ ಕೆಲಸಕ್ಕೆ ಸೇರಲು ಪ್ರಯಾಣ ಮಾಡಿದನು.

ರಾಮದಾಸನು ನಂತರ ಸಂದರ್ಶಿಸಿದ ಸ್ಥಳ ಎರ್ನಾಕುಲಂ. ಅವನು ಇಲ್ಲಿ ಪಿ. ಸಂಜೀವರಾಯರು ಮತ್ತು ಇತರ ಅನೇಕ ಸ್ನೇಹಿತರೊಂದಿಗೆ ಕೆಲವು ದಿನ ಗಳಿದ್ದು ಆ ಮೇಲೆ ಕಾಸರಗೋಡಿಗೆ ಪ್ರಯಾಣ ಮಾಡಿದನು. ಅಲ್ಲಿ ಬೆಟ್ಟಗಳ ಹಿಂಭಾಗದಲ್ಲಿ ಶಾಂತ ವಾತಾವರಣದಲ್ಲಿರುವ ಆನಂದಾಶ್ರಮದಲ್ಲಿ ನಿಂತನೆಂಬು ದನ್ನು ಹೇಳಬೇಕಾಗಿಲ್ಲ.

ಆಶ್ರಮಜೀವನದ ವಾಡಿಕೆಯ ದಿನಚರಿ ಮೊದಲಿನಂತೆ ಆರಂಭವಾಯಿತು ಕೃಷ್ಣಾಬಾಯಿ ಪ್ರತಿದಿನವೂ ಬಂದು, ಆಶ್ರಮದಲ್ಲಿ ತನ್ನ ಸ್ವಾರ್ಥರಹಿತ ಸೇವೆಯನ್ನು ಮಾಡುತ್ತಿದ್ದಳು. ರಾಮದಾಸನು ಆಶ್ರಮಕ್ಕೆ ಹಿಂತಿರುಗಿದ ಒಂದು ವಾರದಲ್ಲಿ,

ಯೂರೋಪ್‌ದೇಶದಿಂದ ಹಿಂತಿರುಗಿದ್ದ ಕೃಷ್ಣಾಬಾಯಿಯ ಭಾವನು ತನ್ನ ಸಂಸಾರ ವನ್ನೂ ಕೃಷ್ಣಾಬಾಯಿ ಮತ್ತು ಆಕೆಯ ಮಕ್ಕಳನ್ನೂ ಧಾರ್ವಾಡಕ್ಕೆ ಕರೆದು ಕೊಂಡು ಹೋಗಲು ಕಾಸರಗೋಡಿಗೆ ಬಂದನು. ರಾಮದಾಸನ ಸಂಸರ್ಗ ದಿಂದಲೂ ಆಶ್ರಮದಿಂದಲೂ ಇಷ್ಟು ಹಠಾತ್ತಾಗಿ ಕಡಿದುಕೊಂಡು ಹೋಗುವುದು ಕೃಷ್ಣಾಬಾಯಿಗೆ ವಿದ್ರಾವಕವಾಯಿತು. ಆದರೂ ರಾಮದಾಸನ ಕೋರಿಕೆಯ ಪ್ರಕಾರ ಆಕೆ ತನ್ನ ಭಾವ ಮತ್ತು ಇತರರೊಂದಿಗೆ ಹೊರಟು ಹೋದಳು.

ಇನ್ನು ಮುಂದೆ ನಡೆದ ಘಟನೆಗಳನ್ನು ತಿಳಿಸುವ ಮೊದಲು ಕೃಷ್ಣಾಬಾಯಿ ರಾಮದಾಸನ ಇದೇ ಹಿಂದೂಸ್ಥಾನದ ಸಂಚಾರ ಕಾಲದಲ್ಲಿ ನಡೆಸುತ್ತಿದ್ದ ಅತ್ಯಂತ ಸ್ವಾರ್ಥತ್ಯಾಗದ ಜೀವನವನ್ನು ಕುರಿತು ಎರಡು ಮಾತು ಹೇಳುವುದು ಆವಶ್ಯಕ. ಗುರುದೇವನು ಹಾಸಿಗೆ ಹಿಡಿದು ಮಲಗಿದ್ದನು. ರುಕುಮಾಬಾಯಿ ಶ್ವಾಸ ವ್ಯಾಧಿಯ ಕ್ರೂರಬಾಧೆಯಿಂದ ಹಾಗೆಯೇ ಹಾಸಿಗೆ ಹಿಡಿದಿದ್ದಳು. ಆ ದಿನಗಳಲ್ಲಿ ಕೃಷ್ಣಾಬಾಯಿಯ ಬದುಕು ಮುಖ್ಯವಾಗಿ ರೋಗಿಗಳನ್ನು ಉಪಚರಿಸುವುದರಲ್ಲಿ ಕಳೆಯುತ್ತಿದ್ದಿತು. ರೋಗಿಯ ಹಾಸಿಗೆಯ ಮಗ್ಗುಲಲ್ಲಿದ್ದು, ಶುಶ್ರೂಷೆ ಮಾಡುವ ಕೆಲಸದಲ್ಲಿ ಕೃಷ್ಣಾಬಾಯಿಯ ಸಮನೆನ್ನಿಸುವುದು ಬಹಳ ಅಪೂರ್ವವೆಂದು ಹೇಳ ಬಹುದು. ಇಂತಹ ಸೇವೆಯಲ್ಲಿ ಈಕೆ ತನ್ನ ಜೀವನವನ್ನೇ ಅರೆದು ಬಿಡುವಳು. ಅವಳು ಆ ಇಬ್ಬರು ರೋಗಿಗಳನ್ನೂ ಅವರನ್ನು ಹೆತ್ತಮಾತೆಯರು ನೋಡಿಕೊಳ್ಳ ಬಹುದಾದ್ದಕ್ಕಿಂತಲೂ ಸಾವಿರಪಾಲು ಹೆಚ್ಚಾದ ಪ್ರೀತಿಯಿಂದಲೂ ಜಾಗರೂಕತೆ ಯಿಂದಲೂ ನೋಡಿಕೊಂಡಳು. ಹಾಗೆ ನೋಡುವುದಾದರೆ ಈ ವಿಷಯದಲ್ಲಿ ಆಕೆಯ ಜೀವ ಜೀವವೇ ಕಾಲ, ದೇಶ, ವಸ್ತು, ವರ್ತಮಾನ ಯಾವುದನ್ನೂ ಗಣನೆಗೆ ತೆಗೆದುಕೊಳ್ಳದೆ ಸ್ವಾರ್ಥರಹಿತವಾದ ಸರ್ವ ಜನಸೇವಾ ರೂಪದ ಒಂದು ಹೋಮವೇ ಆಗಿದೆ.

ಮೇಲೆ ಹೇಳಿದ ಇಬ್ಬರು ರೋಗಿಗಳಿಗೂ ಈಕೆ ಮಾಡಿದ ಶುಶ್ರೂಷೆಯ ವಿಚಾರವಾಗಿ ಅವರ ಅತ್ಯಂತ ಕೃತಜ್ಞತೆಯ ಮತ್ತು ಪ್ರೇಮ ಪುರಸ್ಸರ ಧನ್ಯವಾದದ ಮಾತುಗಳನ್ನೂ ಕೃಷ್ಣಾಬಾಯಿಯ ದೈವೀ ಸ್ವಭಾವದ ಪ್ರಶಂಸೆಯನ್ನೂ ರಾಮ ದಾಸನು ರೋಗಿಗಳ ಬಾಯಿಯಿಂದಲೇ ಕೇಳಿದನು.

ಇಲ್ಲಿ ಮರೆಯದೆ ತಿಳಿಸಬೇಕಾದ ಇನ್ನೊಂದು ವಿಚಾರ ಶ್ರೇಷ್ಠಜೀವಿ ಸ್ವಾರ್ಥರಹಿತ ಭಕ್ತ ಗುಂಡನಿಗೆ ಸಂಬಂಧಪಟ್ಟುದಾಗಿದೆ. ರಾಮದಾಸನ ಕೋರಿಕೆ ಯಂತೆ ಇವನು ರಾಮದಾಸನ ಪ್ರವಾಸಕಾಲವೆಲ್ಲಾ ಆಶ್ರಮದಲ್ಲಿ ಬಹುಮಟ್ಟಿಗೆ ಒಂಟಿಯಾಗಿ ನಿಂತಿದ್ದನು. ಇಲ್ಲಿಂದ ಮುಂದಕ್ಕೆ ಈತನು ಸಂಪೂರ್ಣಕಾಲ ರಾಮ ದಾಸನ ಸೇವಕನಾದನು. ಪ್ರವಾಸದಿಂದ ಬಂದ ಮೇಲೆ ರಾಮದಾಸನು ಆಶ್ರಮ ವನ್ನು ಬಿಟ್ಟು ಊರೊಳಗೆ ಹೋಗುವುದೇ ಅಪೂರ್ವವಾಯಿತು. ಬರಬರುತ್ತ ಪ್ರೇಕ್ಷಕರ ಸಂಖ್ಯೆಯೂ ಕಡಮೆಯಾಗುತ್ತ ಬಂದಿತು. ರಾಮದಾಸನು ಈ ಆಶ್ರಮ

ದಲ್ಲಿದ್ದ ಕೊನೆಯ ಕೆಲವು ತಿಂಗಳಲ್ಲಿ ಪ್ರೀತಿಯ ಮತ್ತು ನಂಬಿಕೆಯ ಸ್ನೇಹಿತ ಗುಂಡ ಒಬ್ಬನನ್ನು ಬಿಟ್ಟರೆ ಅವನು ತೀರಾ ಒಬ್ಬಂಟಿಗನಾಗಿದ್ದನು.

ಹೀಗೆ ಎರಡು ತಿಂಗಳು ಕಳೆದ ನಂತರ ಇಲ್ಲಿ ವಿವರಿಸಬೇಕಾದ ಆವಶ್ಯಕತೆ ಇಲ್ಲದ ಕೆಲವು ವಿಲಕ್ಷಣ ಸನ್ನಿವೇಶಗಳೊದಗಿ ರಾಮದಾಸನು **ರಾಮನ** ಪ್ರೇರಣೆಯಂತೆ ಒಂದು ತಿಂಗಳ ಉಪವಾಸ ಮತ್ತು ಮೌನವ್ರತವನ್ನು ಆಚರಿಸಿದನು. ಅವನು ಸ್ವಲ್ಪ ಹಾಲನ್ನು ಆಹಾರವಾಗಿ ತೆಗೆದುಕೊಳ್ಳುತ್ತಿದ್ದನು ಸರಿ. ಸುಮಾರು ಈ ಕಾಲದಲ್ಲಿ ಅವನಿಗೆ, ಅವನು ಆಶ್ರಮವನ್ನು ತೊರೆದು ಕೂಡಲೆ ಹೊರಟು ಹೋಗದಿದ್ದರೆ ಪ್ರಾಣಹಾನಿ ಮಾಡುವುವೆಂದು ಬೆದರಿಸುವ ಒಂದು ರುಜುಮಾಡದಿದ್ದ ಕಾಗದವೂ ಬಂದಿತು. ಉಪವಾಸ ಆರಂಭವಾದ ಹದಿನೈದು ದಿನಗಳ ನಂತರ ಸೊಲ್ಲಾಪುರದಿಂದ ವಿದ್ಯಾಚಾರ್ಯನೆಂಬ ಸ್ನೇಹಿತನು ರಾಮದಾಸನನ್ನು ಕಾಣಲು ಬಂದನು. ರಾಮದಾಸನ ಸಂಗಡ ಧಾರಾಳವಾಗಿ ಸಂಭಾಷಣೆ ಮಾಡಲು ಅವಕಾಶವಿಲ್ಲದ್ದರಿಂದ ಆತನಿಗೆ ಸಹಜವಾಗಿ ಆಶಾಭಂಗವಾಯಿತು. ಅಲ್ಲದೆ ಅವನು ರಾಮದಾಸನು ಆಗ್ಗೆ ತೆಗೆದುಕೊಳ್ಳುತ್ತಿದ್ದ ಅಲ್ಪ ಪರಿಮಾಣದ ಆಹಾರವನ್ನು ನೋಡಿಯೂ ವ್ಯಥೆಪಟ್ಟನು. ಒಂದು ರಾತ್ರಿ ಸುಮಾರು ಎಂಟು ಗಂಟೆ ಒಂಭತ್ತು ಗಂಟೆಯ ವೇಳೆಯಲ್ಲಿ ರಾಮದಾಸ ವಿದ್ಯಾಚಾರ್ಯ ಗುಂಡ ಈ ಮೂವರೂ ಕೈಸಾಲೆಯಲ್ಲಿ ಮಧ್ಯೆ ಒಂದು ಲಾಂದ್ರವನ್ನಿಟ್ಟುಕೊಂಡು ಕುಳಿತಿದ್ದರು. ವಿದ್ಯಾಚಾರ್ಯನೂ ಗುಂಡನೂ ದೇವರನಾಮಗಳನ್ನು ಹಾಡುವುದರಲ್ಲಿ ತೀರಾ ಮಗ್ನರಾಗಿದ್ದರು. ಆಗ ಹಠಾತ್ತಾಗಿ ಕೃಷ್ಣಾಬಾಯಿ ಬಂದು ಎದುರಿಗೆ ನಿಂತಳು. ರಾಮದಾಸನು "ಕೊನೆಗೂ ನೀನು ಬಂದೇ ಬಿಟ್ಟೆ" ಎಂದು ಉದ್ಗರಿಸಿ "ಒಬ್ಬಳೇ ಬಂದೆಯಾ?" ಎಂದು ಕೇಳಿದನು. ಆಕೆ ಧಾರ್ವಾಡದಿಂದ ಬೊಂಬಾಯಿಗೆ ಹೋಗಿದ್ದವಳು ಉಟ್ಟಿರುವ ಒಂದು ಸೀರೆ ಹೊರತು ಮತ್ತಾವುದೂ ಇಲ್ಲದೆ ಬೊಂಬಾಯಿಯಿಂದ ದಾರಿಯ ಬಹಳ ಭಾಗವನ್ನು ಒಬ್ಬಂಟಿಗಳಾಗಿಯೇ ಪ್ರಯಾಣ ಮಾಡಿ ಬಂದಿದ್ದಳು.

ರಾಮದಾಸನು "ತಾಯಿ, ನೀನು ನಿನ್ನ ಮನೆಗೇ ಬಂದೆ, ಇನ್ನು ಮುಂದೆ ಆಶ್ರಮ ನಿನ್ನ ಸ್ಥಿರ ಆವಾಸವಾಗಿರಲಿ" ಎಂದು ನಿರ್ಣಯವಾಗಿ ಹೇಳಿದನು, ಅಲ್ಲಿಂದಾಚೆಗೆ ಹಗಲೂ ರಾತ್ರಿ ಆಕೆ ಆಶ್ರಮದಲ್ಲಿ ನಿಂತಳು. ವಿದ್ಯಾಚಾರ್ಯನೂ ಹೊರಟು ಹೋದನು. ಗುಂಡನೂ ಕೆಲವು ದಿವಸ ಇರಲು ತನ್ನ ಗ್ರಾಮವಾದ ಪುತ್ತೂರಿಗೆ ಹೋದನು.

ಕಷ್ಣಾಬಾಯಿ ರಾಮದಾಸನ ಬೋಧೆಯನ್ನನುಸರಿಸಿ ಧ್ಯಾನ ಮತ್ತು ಆಸನಗಳಲ್ಲಿ ಅಚಲವಾದ ಮತ್ತು ಏಕಪ್ರಕಾರವಾದ ಸಾಧನ ಕ್ರಮವನ್ನು ಆರಂಭಿಸಿದಳು. ಅವನ ಸಲಹೆಯ ಮೇಲೆ ಈಕೆ ಪ್ರತಿ ದಿನವೂ ಊರಿನ ನಾಲ್ಕೈದು ಭಕ್ತರ ಮನೆಗಳಿಗೆ ಹೋಗಿ ಮನೆಗಳ ಭಕ್ತಿವಂತ ಸ್ತ್ರೀಯರಿಗೆ ತನ್ನ ಸಹವಾಸದ ಮತ್ತು ಸಹಾ

ಯದ ಪ್ರಯೋಜನವನ್ನು ನೀಡುತ್ತಿದ್ದಳು. ಈ ಮಧ್ಯೆ ರಾಮದಾಸನ ಒಂದು ತಿಂಗಳ ಉಪವಾಸ ಮುಕ್ತಾಯವಾಯಿತು. ಆದರೆ ಅವನಿಗೆ ಇಷ್ಟರಿಂದ ತೃಪ್ತಿ ಯಾಗದೆ ಅವನು ಇನ್ನೂ ಮೂರು ದಿನ ವ್ರತವನ್ನು ಮುಂದುವರಿಸಿ ಬರಿಯ ನೀರಿನಿಂದ ಜೀವಿಸಿದನು. ನಂತರ ಅವನು ನೀರನ್ನೂ ಬಿಟ್ಟುಬಿಡಬೇಕೆಂಬ ಯೋಚನೆ ಮಾಡಿದನು. ಕಡೆಯ ಈ ನಿರ್ಜಲ ವ್ರತ ಒಂದು ದಿನ ಮಾತ್ರ ನಡೆಯಿತು. ರಮಾಬಾಯಿಯ ಪತಿ ಚಂದ್ರಶೇಖರರಾಯನ ಅತಿ ದೈನ್ಯದ ಬೇಡಿಕೆಯ ಕಾರಣ ದಿಂದ ಅದನ್ನು ನಿಲ್ಲಿಸಬೇಕಾಯಿತು. ಅಲ್ಲಿಂದಾಚೆಗೆ ಅವನು ಮೊದಲಿನಂತೆ ದಿನಕ್ಕೆ ಒಂದು ಹೊತ್ತು ಊಟ ಮಾಡಿದನು. ಈ ಕಾಲದಲ್ಲಿ ರಾತ್ರಿಯ ಹೊತ್ತು ಆಶ್ರಮ ದಲ್ಲಿ ರಾಮದಾಸ ಕೃಷ್ಣಾಬಾಯಿ ಮಾತ್ರವೇ ಇರುತ್ತಿದ್ದರು.

ಉಪವಾಸ ವ್ರತ ಮುಗಿದ ಹದಿನಾಲ್ಕು ದಿನಗಳ ನಂತರ, ಒಂದು ರಾತ್ರಿ ರಾಮದಾಸನು ಈ ಪುಸ್ತಕದ ಹಿಂದಣ ಅಧ್ಯಾಯಗಳ ಸರಿಯಾದ ಕೈಪ್ರತಿಗಳನ್ನು ಬರೆಯುವುದರಲ್ಲಿ ತೊಡಗಿದ್ದನು. ಕೃಷ್ಣಾಬಾಯಿ ತನ್ನ ಪದ್ಧತಿಯನ್ನನುಸರಿಸಿ ರಾತ್ರಿ ತಾನು ಮಲಗುತ್ತಿದ್ದ ಹೊರಗಣ ಕೈಸಾಲೆಯಲ್ಲಿ ಧ್ಯಾನಾಸಕ್ತಳಾಗಿ ಕುಳಿತಿದ್ದಳು. ಆ ಕಾಲದಲ್ಲಿ, ಗಟ್ಟಿಮುಟ್ಟಾದ ದೇಹದ ಒರಟು ಆಕಾರದ ಕೂಲಿಕಾರ ಜಾತಿಯವನೊಬ್ಬನು ಕೈಯಲ್ಲಿ ಒಂದು ಲಾಂದ್ರವನ್ನು ಹಿಡಿದುಕೊಂಡು ಅಲ್ಲಿಗೆ ಬಂದನು. ಆಗ ಸುಮಾರು ಹತ್ತು ಗಂಟೆ ಇರಬಹುದು. ರಾಮದಾಸನು ತಾನು ಮಾಡುತ್ತಿದ್ದ ಕೆಲಸವನ್ನು ನಿಲ್ಲಿಸಿ ಹೊರಕ್ಕೆ ಬಂದು ಆಗಂತುಕನನ್ನು ಏನು ಬೇಕೆಂದು ಪ್ರಶ್ನಿಸಿದನು. ಆತನು, "ಯಾರೋ ಬಹುಶಃ ದೂರ ದೇಶದಿಂದ ಬಂದಿರುವ ಕೆಲವರು ಸ್ನೇಹಿತರು ಬೆಟ್ಟದ ಮೇಲಿನ ಬಂಗಲೆಯಲ್ಲಿ ನಿಂತಿದ್ದಾರೆ. ನೀವು ಹೋಗಿ ಅವರನ್ನು ಕಾಣಬೇಕೆಂದು ನಿಮಗೆ ತಿಳಿಸಲು ನನ್ನನ್ನು ಕಳುಹಿಸಿದ್ದಾರೆ" ಎಂದು ಉತ್ತರ ಕೊಟ್ಟನು.

ಇದನ್ನು ಕೇಳಿ ರಾಮದಾಸನ ಹೃದಯ ಪ್ರೀತಿಯಿಂದ ಕೋಡಿ ಹರಿಯಿತು. ಅವನು ತನ್ನೊಳಗೆ ತಾನು, "ಈ ಮಿತ್ರರು ರಾಮದಾಸನ ಮೇಲಣ ಶುದ್ಧವಾದ ಪ್ರೇಮ ಮತ್ತು ವಾಂಛೆಯಿಂದ ಹೀಗೆ ಬಹಳ ದೂರದಿಂದ ಬರಲು ಎಷ್ಟು ಸುಖ ತ್ಯಾಗ ಮಾಡಿದ್ದಾರೆ" ಎಂದುಕೊಂಡು ಕೂಡಲೇ ಅವರಲ್ಲಿಗೆ ಹೋಗಲು ನಿರ್ಧರಿಸಿದನು. ಸುದ್ದಿಗಾರನು ರಾಮದಾಸನು ಹಿಂತಿರುಗಿ ಬರುವವರೆಗೂ ತಾನು ಆಶ್ರಮ ದಲ್ಲಿರುವೆನೆಂದು ಹೇಳಿದನು. ರಾಮದಾಸನು ಆಶ್ರಮದ ಲಾಂದ್ರವನ್ನು ತೆಗೆದು ಕೊಂಡು ತಾನು ಮಿತ್ರರೊಂದಿಗೆ ಬರುವವರೆಗೆ ಅಲ್ಲಿರು ಎಂದು ಕೃಷ್ಣಾಬಾಯಿಗೆ ಹೇಳಿ ಹೊರಟನು ಕೃಷ್ಣಾಬಾಯಿ ತಾನೂ ಸಂಗಡ ಬರುವುದು ಇಷ್ಟವೆಂದು ಉತ್ತರ ಕೊಟ್ಟಳು. ದೃಢಾಂಗನಾದ ಆ ಸುದ್ದಿಗಾರನೂ ಕೃಷ್ಣಾಬಾಯಿಯ ಸಲಹೆಗೆ ಒಪ್ಪಿ ಅವಳೂ ಜೊತೆಗೆ ಹೋಗಬಹುದೆಂದು ಉಸುರಿದನು. ಆದುದರಿಂದ ಇಬ್ಬರೂ ಜಾಗ್ರತೆಯಾಗಿ ಬೆಟ್ಟವನ್ನೇರಿ ನಡೆದು ಪ್ರಯಾಣಿಕರ ಬಂಗಲೆಯನ್ನು ಸೇರಿದರು.





ಆದರೆ ಅಲ್ಲಿ ಇವರಿಗಾಗಿ ಯಾರೂ ಕಾದಿರಲಿಲ್ಲ. ಇದನ್ನು ಕಂಡು ಇವರಿಗೆ ಆಶ್ಚರ್ಯವೂ, ವ್ಯಾಕುಲವೂ ಉಂಟಾದುವು. ಇದರಲ್ಲಿ ಏನೋ ಮೋಸವಿರಬಹುದೆಂದು ರಾಮದಾಸನಿಗೆ ಹೊಳೆಯಿತು. ಏಕೆಂದರೆ ವರ್ತಮಾನ ಕೊಟ್ಟವನು ಇವರಿಲ್ಲದ ವೇಳೆ ಆಶ್ರಮದಲ್ಲಿಯೇ ನಿಂತನು.

ಆಗ ಇಬ್ಬರೂ ಜಾಗ್ರತೆಯಾಗಿ ಆಶ್ರಮಕ್ಕೆ ಹಿಂತಿರುಗಿ ಬಂದರು. ಅಲ್ಲಿ ಸೇರಿದಾಗ ಅವರಿಗೆ ಸುದ್ದಿಗಾರ ಮನುಷ್ಯನು ತನ್ನ ಲಾಂದ್ರವನ್ನು ತೆಗೆದುಕೊಂಡು ಹೊರಟು ಹೋಗಿದ್ದುದು ಕಂಡಿತು. ಕೈಸಾಲೆಗೆ ಹತ್ತಿ ಹೋದಾಗ ಕೊಟಡಿಯ ಮುಂಭಾಗದಲ್ಲಿ ಎಸೆದಿರುವ ಒಂದಷ್ಟು ಮಲವು ಒಡೆದ ಮಡಕೆಯ ಚೂರುಗಳು ಕಾಣಿಸಿದುವು. ಇದು ನಿಶಾಚರ ಆಗಂತುಕನ ಕಾರ್ಯ. ಅವನು ಇದನ್ನು ಮಾಡುವುದಕ್ಕಾಗಿಯೇ ಬಂದಿದ್ದಿರಬೇಕು. ಸ್ವಲ್ಪವಾದರೂ ಜುಗುಪ್ಸೆ ಅಸಹ್ಯ ಇಲ್ಲದೆ ಕೃಷ್ಣಾಬಾಯಿ ಒಡನೆ ನೆಲವನ್ನು ಶುದ್ಧಿ ಮಾಡಲಾರಂಭಿಸಿದಳು. ಸಹಿಸಬಾರದ ದುರ್ವಾಸನೆ ಹೊಡೆಯುತ್ತಿದ್ದ ಆ ಮಲವನ್ನು ಗುಡ್ಡೆ ಮಾಡಿ, ತನ್ನ ಕೈಗಳಿಂದಲೇ ನೆಲವನ್ನು ಶುದ್ಧಿ ಮಾಡಿದಳು. ಅರ್ಧ ಗಂಟೆಯೊಳಗಾಗಿ ನೆಲವನ್ನೆಲ್ಲಾ ಗುಡಿಸಿ ಸಾರಿಸಿದ್ದಾಯಿತು. ಇದೆಲ್ಲದರ ಸ್ವಾರಸ್ಯವೇನೆಂದರೆ ಈ ಕೆಲಸದಲ್ಲಿ ನಿರತಳಾಗಿದ್ದಾಗ ಕೂಡ ಆಕೆ ಸಹನೆ ಹರ್ಷ ಮುಗುಳ್ನಗೆಯಿಂದ ಕೂಡಿದ್ದಳು. ರಾಮದಾಸನು ಒಳಗೆ ಹೋಗಿ ನೋಡಿದಾಗ ಅವನು ದಿನಾಲು ಉಪಯೋಗಿಸುತ್ತಿದ್ದ ಹಿತ್ತಾಳೆಯ ಪೀಕದಾನಿ ಒಂದು ಮಾಯವಾಗಿದ್ದುದು ಕಾಣಿಸಿತು. ಮಲದ ಕೆಲವು ತೊಟ್ಟುಗಳು ಈ ಪುಸ್ತಕದ ಕೈ ಬರಹದ ಪ್ರತಿಯ ಮೇಲೆ ಬಿದ್ದಿದ್ದುವು. ರಾತ್ರಿ ಇನ್ನಾವ ಘಟನೆಯೂ ಇಲ್ಲದೆ ಕಳೆಯಿತು.

ಅನಂತರ ಸುಮಾರು ಒಂದು ವಾರದ ಮೇಲೆ ಒಂದು ರಾತ್ರಿ ಸುಮಾರು ಅದೇ ಹೊತ್ತಿನಲ್ಲಿ ಇಬ್ಬರು ಮನುಷ್ಯರು ಆಶ್ರಮಕ್ಕೆ ಬಂದರು. ಅವರಲ್ಲೊಬ್ಬನು ಹಿಂದಿನ ಸಲ ಬಂದಿದ್ದವನು. ಅದು ಕತ್ತಲ ರಾತ್ರಿ. ಆಶ್ರಮವಿರುವುದು ದಟ್ಟವಾದ ಕಾಡಿನ ಮಧ್ಯೆ. ಅದರ ಸುತ್ತ ಎರಡು ಫರ್ಲಾಂಗುಗಳ ಒಳಗೆ ಒಂದೂ ವಾಸದ ಮನೆ ಇರಲಿಲ್ಲ. ಈ ಸಲ ಈ ಆಗಂತುಕರು ಇನ್ನೂ ಕಠಿನವಾದ ಉದ್ದೇಶಕ್ಕಾಗಿ ಬಂದಿದ್ದಾರೆಂದು ವ್ಯಕ್ತವಾಯಿತು. ಮೊದಲು ಕೆಲವು ನಿಮಿಷ ಅವರು ರಾಮದಾಸನಿಂದ ಆಶ್ರಮದಲ್ಲಿರುವ ಅನೇಕ ಪದಾರ್ಥಗಳನ್ನು ಕೇಳಿದರು. ಅವುಗಳಲ್ಲಿ ಒಂದು ಗಾಜಿನ ಮಣಿಗಳಲ್ಲಿ "ಆನಂದಾಶ್ರಮ" ಎಂದು ಸುಂದರವಾಗಿ ರಚಿಸಿ ಕಟ್ಟಿ ಹಾಕಿದ್ದ ಹೆಸರ ಹಲಗೆ. ರಾಮದಾಸನು ಸ್ವಲ್ಪವೂ ಅನುಮಾನಿಸದೆ ಅವರು ಕೇಳಿದ ಸಾಮಾನುಗಳನ್ನು ಅವರಿಗೆ ಕೊಟ್ಟು, "ಇನ್ನೇನಾದರೂ ಬೇಕೇ?" ಎಂದು ಪ್ರಶ್ನಿಸಿದನು. ಇಷ್ಟೆಲ್ಲಾ ನಡೆಯುವಾಗ ರಾಮದಾಸನು ಕೋಣೆಯ ಬಾಗಿಲ ಮುಂದೆ ಕೈಸಾಲೆಯಲ್ಲಿ ನಿಂತಿದ್ದನು. ಕೃಷ್ಣಾಬಾಯಿ ಪಕ್ಕದಲ್ಲಿ ನಿಂತಿದ್ದಳು. ಲಾಂದ್ರ ಬಾಗಿಲಿನ ಬಲ ಪಾರ್ಶ್ವದಲ್ಲಿ ರಾಮದಾಸನು ವಾಡಿಕೆಯಾಗಿ ಕುಳಿತು

ಕೊಳ್ಳುವ ಪೀಠದ ಮೇಲೆ ಉರಿಯುತ್ತಿದ್ದಿತು ಬಂದಿದ್ದವರಿಬ್ಬರು ತಮ್ಮ ಉದ್ದೇಶ ವನ್ನು ನೆರವೇರಿಸುವ ಕಾಲ ಒದಗಿತೆಂದು ಯೋಚಿಸಿದೊಡನೆ ಅವರಲ್ಲೊಬ್ಬನು ಲಾಂದ್ರವನ್ನು ತೆಗೆದು ಅದನ್ನು ಬೀಸಿ ಕೈಸಾಲೆಗೆ ಎಸೆದನು. ಇದರಿಂದ ಲಾಂದ್ರ ಒಡೆದು ದೀಪ ತಟ್ಟನೆ ನಂದಿಹೋಯಿತು. ಈಗ ಇವರು ಕಗ್ಗತ್ತಲಲ್ಲಿದ್ದರು. ಲಾಂದ್ರವನ್ನು ಬೀಸಿ ಎಸೆದವನು ಕೃಷ್ಣಾಬಾಯಿಯ ಕಡೆ ಓಡಿ ಅವಳಮೇಲೆ ಬಿದ್ದನು. ಅವಳ ಪಕ್ಕದಲ್ಲಿ ನೀರುತುಂಬಿದ ತಾಮ್ರದ ಪಾತ್ರೆ ಒಂದು ಇದ್ದಿತು. ರಾಮದಾಸನು ಈ ಸಮಯದಲ್ಲಿ ಬಾಗಿಲಿಂದ ಸ್ವಲ್ಪ ದೂರದಲ್ಲಿದ್ದನು. ಸಂದರ್ಭ ವನ್ನು ಗ್ರಹಿಸಿ ಕೃಷ್ಣಾಬಾಯಿಯ ಮೇಲೆ ಕೈಮಾಡುತ್ತಿದ್ದ ಮನುಷ್ಯನು ಆಕೆಗೆ ತೊಂದರೆ ಮಾಡುತ್ತಿರುವುದನ್ನು ತಪ್ಪಿಸಲು ರಾಮದಾಸನು ಅವನನ್ನಪ್ಪಿಕೊಂಡನು. ಆದರೆ ಇದನ್ನು ನೋಡುತ್ತಿದ್ದ ಆ ಮತ್ತೊಬ್ಬನು ರಾಮದಾಸನನ್ನು ಹಿಂದಿನಿಂದ ಬಲ ವಾಗಿ ಎಳೆದನು. ಇದರಿಂದ ಅವನಸಂಗಡಿಗನನ್ನು ರಾಮದಾಸನು ಬಿಡಬೇಕಾಯಿತು. ಅವನು ರಾಮದಾಸನನ್ನು ತನ್ನ ತೋಳಿನಲ್ಲಿ ಭದ್ರವಾಗಿ ಹಿಡಿದನು. ರಾಮದಾಸನ ದೇಹಾದ್ಯಂತ ರೋಮಾಂಚವಾಯಿತು. ಅವನು "ರಾಮ" ನಾಮವನ್ನು ಮೂರು ಬಾರಿ ಘಟ್ಟಿಯಾಗಿ ಕಿರಿಚಿದನು. ಅದೇ ಸಮಯದಲ್ಲಿಯೇ ಕೃಷ್ಣಾಬಾಯಿಯ ಬಾಯಿನಿಂದಲೂ "ರಾಮ" ಎನ್ನುವ ಶಬ್ದ ಎರಡುಬಾರಿ ಹೊರಟಿತು. ಇದನ್ನು ಕೇಳಿ ಕೃಷ್ಣಾಬಾಯಿಯ ಕತ್ತನ್ನು ಹಿಸುಕಿ ಹತ್ತಿರ ಹತ್ತಿರ ಸಾಯಿಸಿದ್ದ ಆ ಮನುಷ್ಯನು ತನ್ನ ಹಿಡಿತವನ್ನು ಬಿಟ್ಟು, ಹೆದರಿದ ಪ್ರಾಣಿಯಂತೆ ಓಡತೊಡಗಿದನು. ಜೊತೆಗಾರನು ಓಟ ಕಿತ್ತದ್ದನ್ನು ನೋಡಿ, ರಾಮದಾಸನನ್ನು ತಬ್ಬಿಕೊಂಡು ಹಿಡಿದಿದ್ದ ಇನ್ನೊಬ್ಬ ಮನುಷ್ಯನೂ ರಾಮದಾಸನನ್ನು ಬಿಟ್ಟು, ಕೈಸಾಲೆಯಿಂದ ಧುಮುಕಿ ಹಾಗೆಯೇ ಓಡಿದನು. ಕೃಷ್ಣಾಬಾಯಿಯನ್ನು ಬಿಡುವಾಗ ಅವಳ ಧರ್ಷಕನು ಅವಳನ್ನು ಕೆಳಕ್ಕೆ ನೂಕಿದನು. ಆಕೆಯ ಸೊಂಟ ಆ ತಾಮ್ರದ ಪಾತ್ರೆಯ ಕಠಿನವಾದ ಕಂಠಕ್ಕೆ ಬಲವಾಗಿ ತಗುಲಿತು. ತಕ್ಷಣ ಆಕೆ ಕೈಸಾಲೆಯ ಕೆಳಗಿನ ಅಂಗಳಕ್ಕೆ ಉರುಳಿ ಬಿದ್ದುಹೋದಳು. ಕತ್ತಲಲ್ಲಿ ಅವಳ ಹೆಸರನ್ನು ಘಟ್ಟಿಯಾಗಿ ಕೂಗಿ ಆಕೆ ಬಿದ್ದಿದ್ದ ಸ್ಥಳವನ್ನು ತಿಳಿದು ರಾಮದಾಸನು ಅವಳ ಬಳಿಗೆ ಓಡಿದನು. ಇಬ್ಬರೂ ನಿಂತುಕೊಂಡರು. ರಾಮದಾಸನು "**ರಾಮ**, ನೀನು ಮಾಡುತ್ತಿರುವುದೇನು?" ಎಂದು ಮೊರೆದನು. ಆಗ ಕೃಷ್ಣಾಬಾಯಿ "ಏನೂ ಆಗಿಲ್ಲ. **ರಾಮನನ್ನು** ಆಕ್ಷೇಪಿಸಬೇಡಿ. ಎಲ್ಲವೂ ಸರಿಯಾಗಿದೆ" ಎಂದಳು.

ಆಶ್ರಮದ ಬಲಗಡೆ ಇರುವ ಹೊಲಗಳ ಆಚೆ ಒಬ್ಬ ರೈತನ ಮನೆ ಇದ್ದಿತು. ಈತನು ತನ್ನ ಮುಂಗಡೆಯ ಅಂಗಳದಿಂದ ಆಶ್ರಮದಲ್ಲಿ ನಡೆಯುತ್ತಿದ್ದ ವಿಚಿತ್ರಘಟನೆ ಗಳನ್ನು ನೋಡುತ್ತಿದ್ದಿರಬೇಕು. ರಾಮದಾಸನ ಬಾಯಿಯಿಂದ "ರಾಮ! ರಾಮ!" ಎಂದು ಘಟ್ಟಿಯಾಗಿ ಹೊರಟ ಶಬ್ದ ಕೇಳಿ ಜೊತೆಗೆ ಆಶ್ರಮದಲ್ಲೆಲ್ಲಾ ಕತ್ತಲಾದು ದನ್ನು ನೋಡಿ, ಅವನು ಏನೋ ದುಷ್ಕೃತ್ಯ ನಡೆದಿದೆ ಎಂದು ಅನುಮಾನಪಟ್ಟು

ಓಡಿಬಂದನು. ಕತ್ತಲಲ್ಲಿ ಹೊಲಗಳನ್ನು ಹಾಯ್ದು ಆಶ್ರಮವನ್ನು ಸೇರಲು ಅವನಿಗೆ ಐದು ನಿಮಿಷಗಳ ಕಾಲ ಬೇಕಾಯಿತು. ಆದರೆ ಅಷ್ಟುಹೊತ್ತಿಗೆ ನಿಶಾಚರರಾದ ಆ ಕ್ರೂರಕರ್ಮಿಗಳು ಪಲಾಯನವಾಗಿದ್ದರು. ಬೆಂಕಿಕಡ್ಡಿಯನ್ನು ಗೀರಿ ತಾಳಿಗರಿಗಳ ಪಂಜನ್ನು ಹಚ್ಚಿದರು. ಅವನು ಕೇಳಿದಾಗ ರಾಮದಾಸನು ನಡೆದ ವಿಚಾರ ಗಳನ್ನೆಲ್ಲಾ ಅವನಿಗೆ ತಿಳಿಸಿದನು. ಅವನು "ಈ ರಾತ್ರಿ ನಾನು ಇಲ್ಲಿಯೇ ಮಲಗುತ್ತೇನೆ. ಆ ದುಷ್ಟರು ನಿಮಗೆ ಮರಳಿ ಹೇಗೆ ತೊಂದರೆಕೊಡುತ್ತಾರೋ ನೋಡುತ್ತೇನೆ" ಎಂದು ಹೇಳಿದನು.

ಆ ರಾತ್ರಿಗೇನೋ ಅನುಕೂಲವಾಯಿತು. ಮುಂದಣ ರಾತ್ರಿಗಳಿಗೆ ಹೇಗೆ? ರಾಮದಾಸನು ಕೃಷ್ಣಾಬಾಯಿಯಕಡೆ ತಿರುಗಿ ಆಕೆ ಇನ್ನುಮುಂದೆ ರಾತ್ರಿಹೊತ್ತು ಆಶ್ರಮದಲ್ಲಿ ಇರಕೂಡದೆಂದು ಬೇಡಿಕೊಂಡನು. ಅಲ್ಲಿ ತಾನು ಒಬ್ಬನೇ ಇರುವುದು ತನಗೆ ಸಮ್ಮತವೆಂದನು. ಆಕೆ ಒಪ್ಪಲಿಲ್ಲ. "ನನಗೇನಾದರೂ ಆಗಲಿ, ನಾನು ರಾತ್ರಿಯಹೊತ್ತು ಇನ್ನೆಲ್ಲಿಗೂ ಹೋಗುವುದಿಲ್ಲ" ಎಂದಳು. ಆಕೆಯ ದೃಢಸಂಕಲ್ಪ ವನ್ನೂ, ಒಪ್ಪಿಸುವ ಪ್ರಯತ್ನ ವ್ಯರ್ಥವೆಂಬುದನ್ನೂ ತಿಳಿದು ರಾಮದಾಸನು ಆಶ್ರಮವನ್ನು ಒಂದೇ ಸಲಕ್ಕೆ ತ್ಯಜಿಸಿ ಹೊರಟುಹೋಗಬೇಕೆಂದು ತಕ್ಷಣವೇ ನಿರ್ಧರಿಸಿದನು. ಒಡನೆಯೇ ಕೃಷ್ಣಾಬಾಯಿಯನ್ನು ಕರೆದುಕೊಂಡು ಊರಕಡೆ ಹೊರಟನು. ಆ ರೈತನೂ ಆಮೇಲೆ ಬಂದ ಇನ್ನೊಬ್ಬನೂ ಇವರ ಜೊತೆಗೆ ಊರ ಮಧ್ಯದಲ್ಲಿರುವ ಚಂದ್ರಶೇಖರರಾಯನ ಮನೆಯವರೆಗೂ ಬಂದರು. ರಾಮದಾಸನು ಊರಕಡೆ ಜಾಗ್ರತೆಯಾಗಿ ನಡೆಯುತ್ತಾ ಹೋಗುತ್ತಿರುವಾಗ ಕೃಷ್ಣಾಬಾಯಿ ಅವನ ಸಮಕ್ಕೆ ನಡೆಯುತ್ತಾ ದೀನಧ್ವನಿಯಲ್ಲಿ "ಪಪ್ಪ, ಮುಂದಣ ನಿಮ್ಮ ಆಲೋಚನೆ ಏನು?" ಎಂದು ಕೇಳಿಕೊಂಡಳು. ಅವನು ತನಗೆ ಗೊತ್ತಿಲ್ಲವೆಂದನು.

"ಕಾಸರಗೋಡನ್ನು ಸಾಧ್ಯವಾದಷ್ಟು ಜಾಗ್ರತೆಯಾಗಿ ಬಿಟ್ಟುಬಿಡಬೇಕೆಂದು **ರಾಮನ** ಆಜ್ಞೆ, **ರಾಮನು** ಕರೆದುಕೊಂಡು ಹೋಗುವ ಯಾವುದೇ ಸ್ಥಳಕ್ಕೆ ರಾಮದಾಸನು ಹೋಗುವನು".

ಇದಕ್ಕೆ ಆಕೆ "ದಯವಿಟ್ಟು ನನ್ನ ಕೈಬಿಡಬೇಡಿ. ನಿಮ್ಮನ್ನು ಬಿಟ್ಟರೆ ನನಗೆ ಸ್ಥಳವಿಲ್ಲ, ದಿಕ್ಕಿಲ್ಲ. ನೀವು ಹೋದಲ್ಲಿ ನಾನು ಒಂದಿಗೆ ಬರಲು ಅಪ್ಪಣೆ ಕೊಡಿ" ಎಂದು ಬೇಡಿಕೊಂಡಳು.

"ಬೇಡ, ಬೇಡ. ಆ ಯೋಚನೆ ಮಾಡಬೇಡ" ಎಂದು ರಾಮದಾಸನು ಹೇಳಿದನು.

ಆಕೆ ಭಾವದ ಉದ್ವೇಗದಿಂದ ರಾಮದಾಸನಿಗೆ ಅಡ್ಡವಾಗಿ ನಿಂತು ಪುನಃ ಬೇಡಿಕೊಂಡು, ಭಾಷೆ ಕೊಡಬೇಕೆಂದು ಒತ್ತಾಯ ಮಾಡಿದಳು. ರಾಮದಾಸನು ಸೋತು ಒಪ್ಪಿದನು. ಇಬ್ಬರೂ ಚಂದ್ರಶೇಖರರಾಯನ ಮನೆಯನ್ನು ಮುಟ್ಟಿದರು. ಆ ರಾತ್ರಿಯ ಸ್ಮರಣಾರ್ಹವಾದ ಸಂಗತಿಗಳು ಇಲ್ಲಿಗೆ ಕೊನೆಗಂಡವು.

ಆಶ್ರಮದಲ್ಲಿ ರಾಮದಾಸನೂ ಕೃಷ್ಣಾಬಾಯಿಯೂ ಹಾಯ್ದಿದ್ದ ಕ್ರೂರ ಸನ್ನಿವೇಶವನ್ನುತಿಳಿದು ಮನೆಯವರೆಲ್ಲರೂ ಸಹಜವಾಗಿ ತಲ್ಲಣಿಸಿದರು. ತಾಮ್ರದ ಪಾತ್ರೆಯುಮೇಲೆ ಬಿದ್ದುದು ಕೃಷ್ಣಾಬಾಯಿಯ ಬೆನ್ನುಮೂಳೆಯ ಕೆಳಭಾಗಕ್ಕೆ ಶಾಶ್ವತವಾದ ಹಾನಿಯನ್ನು ಮಾಡಿದ್ದಿತು. ಕಠೋರ ಯಾತನೆ ಇದ್ದರೂ ಕೃಷ್ಣಾ ಬಾಯಿ ತನಗೇನೂ ಆಗಿಲ್ಲದಂತೆ ಸಹನೆಯಿಂದ ಹರ್ಷಚಿತ್ತಳಾಗಿದ್ದಳು. ಮಾರನೆಯ ದಿನವೇ ಕಾಸರಗೋಡನ್ನು ಬಿಡಬೇಕೆಂದು ರಾಮದಾಸನ ನಿರ್ಧಾರ ವಾಗಿದ್ದಿತು. ರಾತ್ರಿ ಕಳೆಯಿತು. ಮಾರನೆಯ ಬೆಳಗಿನ ಮೊದಲ ರೈಲಿನಲ್ಲೇ ಅವನೂ ಕೃಷ್ಣಾಬಾಯಿಯೂ ಚಂದ್ರಶೇಖರರಾಯನೊಡನೆ ಹೊಸದುರ್ಗಕ್ಕೆ ಬಂದರು. ಹೊಸದುರ್ಗದಲ್ಲಿ ರಾಮದಾಸನನ್ನು ಕೆಲವು ದಿವಸಗಳು ತಮ್ಮ ಮನೆಯಲ್ಲಿಟ್ಟುಕೊಳ್ಳಬೇಕೆಂದು ತುಂಬ ಆಶೆಪಡುತ್ತಿದ್ದ ಕೆಲವು ಮಾತೆಯರಿದ್ದರು. ಬಹಳಕಾಲದಿಂದಲೂ ಬೆಳೆಯಿಸುತ್ತಿದ್ದ ಅವರ ಇಚ್ಛೆಯನ್ನು ಪೂರ್ಣಮಾಡಲು ರಾಮದಾಸನು ಕಾಂಜಂಗಾಡ್ ಸ್ಟೇಷನ್ನಿನಲ್ಲಿ ರೈಲಿನಿಂದಿಳಿದೊಡನೆ ನೇರವಾಗಿ ಅವರ ಮನೆಗೆ ತೆರಳಿದನು. ಬಂದವರನ್ನು ಈ ಮಾತೆಯರು ಬಹಳ ಸಂತೋಷ ದಿಂದ ಬರಮಾಡಿಕೊಂಡರು. ರಾಮದಾಸನ ಮುಂದಣ ಕಾರ್ಯಕ್ರಮ ನಿರ್ಧಾರಕ್ಕೆ ಬಂದಿರಲಿಲ್ಲ.

---

# ಅಧ್ಯಾಯ ೪೮

## ರಾಮನಗರ – ಆನಂದಾಶ್ರಮ

ಕೆಲವುದಿನಗಳಿದ್ದು ನಂತರ ರಾಮದಾಸನೂ ಕೃಷ್ಣಾಬಾಯಿಯೂ ಟಿ. ಭವಾನಿ ಶಂಕರರಾಯರ ಆಹ್ವಾನದಮೇಲೆ ಈಗ ರಾಮನಗರವೆಂದುಹೆಸರಿರುವ ಮಂಜಪತಿಗೆ ಅಲ್ಲಿ ಆತನು ಕಟ್ಟಿಸಿದ್ದ ಹೊಸಮನೆಯ ಪ್ರವೇಶೋತ್ಸವಕ್ಕಾಗಿ ಬಂದರು. ಭವಾನೀ ಶಂಕರರಾಯನೂ ಇತರ ಸ್ನೇಹಿತರೂ ರಾಮದಾಸನನ್ನು ಮಂಜಪತಿ ಬೆಟ್ಟದ ಬಳಿ ಒಂದು ಆಶ್ರಮವನ್ನು ಕಟ್ಟಿಸಿಕೊಳ್ಳಬೇಕೆಂದು ಒತ್ತಾಯಪಡಿಸಿದರು. ಈ ಜಾಗ ಏಕಾಂತವಾಗಿದ್ದುದಲ್ಲದೆ ಒಳನಾಡಿನ ಪ್ರಕೃತಿಸೌಂದರ್ಯ ವೈಭವದಿಂದ ಕೂಡಿದ್ದುದು ಕಂಡುಬಂದಿತು.

ಆನಂದಾಶ್ರಮವನ್ನು ಕಟ್ಟುವುದಕ್ಕೆ ಈ ಸ್ಥಳವನ್ನು ಆರಿಸಿದ್ದರಲ್ಲಿ ನಿಜವಾಗಿ ಒಂದು ಮಹತ್ತಾದ ಅರ್ಥವಿದೆ. ಸ್ಥಳದ ಪೂರ್ವಚರಿತ್ರೆ ಗೊತ್ತಿಲ್ಲದೆ ರಾಮದಾಸನು ಅದನು ಆರಿಸುವಂತೆ ಸ್ಫೂರ್ತಿಯಿಂದ ಪ್ರೇರಿತನಾದನು. ಮಂಜಪತಿ ಎಂದು ಕರೆಸಿಕೊಳ್ಳುವ ಆ ಸ್ಥಳವನ್ನು ಒಂದುಕಾಲದಲ್ಲ ದಟ್ಟವಾದ ಕಾಡು ಮುಚ್ಚಿದ್ದಿ ತೆಂದೂ ಮತ್ತು ಅದರಲ್ಲಿ ಸಾಧುಗಳು ಸಂನ್ಯಾಸಿಗಳು ತಪಸ್ಸನ್ನು ಮಾಡುತ್ತಿದ್ದ

ರೆಂದೂ ಅವನಿಗೆ ಅನಂತರ ತಿಳಿದುಬಂದಿತು. ಈ ಗುಡ್ಡದಮೇಲೆ ಹಿಂದೆ ಒಂದು ಕಾಲದಲ್ಲಿ ಒಂದು ದೇವಸ್ಥಾನ ಮತ್ತುಒಂದು ಕೊಳ ಇದ್ದುವು, ಈ ಬೆಟ್ಟ ಒಂದು ಪುಣ್ಯಕ್ಷೇತ್ರ ಎಂದು ಜನ ಹೇಳಿದರು. ಈಗಲೂ ಅವುಗಳ ಮಸಕು ಗುರುತುಗಳು ಕಾಣುವವು. ಹನುಮಂತನು ದ್ರೋಣಾಚಲಪರ್ವತವನ್ನು ಹೊತ್ತುಕೊಂಡು ಲಂಕೆಗೆ ಹಿಂದಿರುಗುತ್ತಿದ್ದಾಗ ಈಸ್ಥಳದಲ್ಲಿ ಆ ಪರ್ವತದ ಒಂದುಚೂರು ಬಿದ್ದಿತೆಂದೂ ಅದೇ ಈಗಿನ ಈ ಬೆಟ್ಟವೆಂದೂ ಹಿಂದಿನಕಥೆ ಇದೆ. ಈ ಸಂದರ್ಭದಲ್ಲಿ ತನ್ನ ಸೇವಕ ರಾಮ ದಾಸನನ್ನು ಈ ಸ್ಥಳಕ್ಕೆ ಕಳುಹಿಸುವುದರಲ್ಲಿ ಭಗವಂತನಿಗೆ ಪ್ರಬಲವಾದ ಕಾರಣ ಗಳಿದ್ದಿರಬೇಕೆಂದು ರಾಮದಾಸನು ಖಚಿತವಾಗಿ ಹೇಳಬಲ್ಲನು. ಹನುಮಂತ ಮತ್ತು ರಾಮದಾಸ ಇಬ್ಬರೂ **ರಾಮ** ಎಂಬ ಒಂದೇ ತಾರಕನಾಮದ ಆರಾಧಕರು ಮತ್ತು ಇಬ್ಬರೂ ಹಿಂದೂ ಸಂವತ್ಸರದ ಒಂದೇ ತಿಥಿಯಲ್ಲಿ ಹುಟ್ಟಿದವರು. ಇದು ಬರಿ ಕಾಕತಾಳನ್ಯಾಯವಾಗಿರಲಾರದು; ದೈವಿಕವಾಗಿ ನಿಯಾಮಕವಾದ ಒಂದು ಏರ್ಪಾಡಿನ ಭಾಗವಾಗಿರಬೇಕು. ಆಶ್ರಮದ ಭಜನಮಂದಿರಕ್ಕೆ ಶ್ರೀ ಹನುಮಂತನು ಭೇಟಿ ಕೊಡುವಂತೆ ಕೆಲವು ಭಕ್ತರಿಗೆ ಆಗಾಗ್ಗೆ ದೊರೆಯುವ ಸ್ವಪ್ನದರ್ಶನಗಳಿಗೂ ಇದು ಬಹುಶಃ ಕಾರಣ. ಅಂಥ ಒಂದು ದರ್ಶನ ಆಶ್ರಮದ ಪ್ರಾರಂಭದ ಕೆಲವು ವರ್ಷಗಳಲ್ಲಿ ಶ್ರೀಮತಿ ದೇವೀಬಾಯಿ ಉರುಫ್ ಅಪ್ಪಿಬಾಯಿಗೆ ಅನುಗೃಹೀತ ವಾಯಿತು. ಆಕೆ ಭಜನಮಂದಿರದಲ್ಲಿ ನಿದ್ರೆಮಾಡುತ್ತಿದ್ದಾಗ ತನಗೆ ದೊರೆತ ಆಶ್ಚರ್ಯಕರವಾದ ದರ್ಶನವನ್ನು ಒಂದುದಿನ ಹೇಳಿದಳು. ಒಂದು ಬೃಹದಾಕಾರದ ಕಪಿ ಭಜನಮಂದಿರವನ್ನು ಪ್ರವೇಶಿಸಿ ಅಲ್ಲಿರುವ ಪೀಠದವರೆಗೆ ನಡೆದುಹೋಗಿ ಅದರ ಮುಂದೆ ದಂಡಪ್ರಣಾಮಮಾಡಿ ನಂತರ ಹಿಂದಣ ಬಾಗಿಲಿಂದ ಹೊರಟು ಹೋದುದನ್ನು ಆಕೆ ನೋಡಿದಳು. ದೃಶ್ಯ ಆಕೆಯ ಮನಸ್ಸಿನಮೇಲೆ ಎಷ್ಟುಆಳವಾಗಿ ಒತ್ತಿತ್ತೆಂದರೆ ಆಕೆ ಅದನ್ನು ವಿವರಿಸುತ್ತಿದ್ದಾಗ ಅವಳಿಗೆ ಬಹಳ ಉಲ್ಲಾಸ ಅನುಭವ ವಾಯಿತು. ಏಕೆಂದರೆ ತನಗೆ ದರ್ಶನ ಕೊಟ್ಟದ್ದವನು ಸ್ವಯಂ ಹನುಮಂತನೆಂದು ಆಕೆಯ ತಿಳಿವಳಿಕೆ.

ಸ್ನೇಹಿತರ ಸಲಹೆಯನ್ನು ಅಂಗೀಕರಿಸಿ ರಾಮದಾಸನು ಈ ಬೆಟ್ಟಸಾಲುಗಳಲ್ಲಿ ಅತ್ಯುನ್ನತವಾದ ಒಂದು ಶಿಖರದ ಬಳಿ ಇರುವ ಒಂದು ಸಣ್ಣ ಗುಡ್ಡದಮೇಲೆ ಆಶ್ರಮವನ್ನು ಕಟ್ಟಲು ನಿರ್ಧರಿಸಿದನು. ಈ ಅಭಿಲಾಷೆಯನ್ನು ಕೊಟ್ಟ ಭಗವಂತನು ಕೂಡಲೆ ರಾಮದಾಸನನ್ನು ಕಾರ್ಯವನ್ನು ಪೂರ್ತಿಮಾಡುವ ಕೆಲಸದಲ್ಲಿ ಹೂಡಿದನು. ಪ್ರವಾಸಕಾಲದಲ್ಲಿ ಪರಿಚಿತರಾಗಿದ್ದ ಹಿಂದೂಸ್ಥಾನದ ಅಸಂಖ್ಯಾತ ಸ್ನೇಹಿತರಿಗೆಲ್ಲ ಈ ಹೊಸ ಆಶ್ರಮದ ನಿರ್ಮಾಣದ ವೆಚ್ಚಕ್ಕೆ ಧನಸಹಾಯ ಮಾಡಬೇಕೆಂದು ರಾಮದಾಸನು ಪತ್ರಗಳನ್ನು ಬರೆದನು. ಎಲ್ಲಕಡೆಯಿಂದ ಒದಗಿದ ಉತ್ತೇಜನವೂ ಸಹಾಯವೂ ತೀರ ಅದ್ಭುತವಾಗಿದ್ದುವು. ರಾಮನಗರಕ್ಕೆ ಬಂದ ಒಂದು ತಿಂಗಳೊಳ ಗಾಗಿ ಆಶ್ರಮ ಮಂದಿರದ ಕಟ್ಟಡದ ಕೆಲಸವು ಪ್ರಾರಂಭವಾಯಿತು. ಸಲಹೆಯನ್ನು

ಕೊಟ್ಟಿದ್ದ ಸ್ನೇಹಿತರೆಲ್ಲರೂ ಹೃತ್ಪೂರ್ವಕವಾಗಿ ಕಾರ್ಯದಲ್ಲಿ ನೆರವಾದರು. ಆಶ್ರಮದ ಕಟ್ಟಡದ ಕೆಲಸ ಮಳೆಗಾಲ ಪ್ರಾರಂಭವಾಗಲು ಮೂರುತಿಂಗಳು ಮಾತ್ರವಿದ್ದಾಗ ಮೊದಲಾಯಿತು. ಆದುದರಿಂದ ಕೆಲಸವನ್ನು ಜಾಗ್ರತೆ ಪೂರೈಸಬೇಕಾಗಿದ್ದಿತು. ಮೂರುತಿಂಗಳಲ್ಲಿ ಆಶ್ರಮದ ಮುಖ್ಯ ಕಟ್ಟಡವೂ ಅದರ ಹಿಂದಿನ ಒಂದು ಕಟ್ಟಡವೂ ಪೂರೈಸಿದುವು.

## ಪ್ರಕೃತಿ ದೃಶ್ಯ

ಆಶ್ರಮದ ಬಲಭಾಗದಲ್ಲಿ ಏರಿಳಿಯುವ ಪರ್ವತಶ್ರೇಣಿ ಇರಲಾಗಿ, ಮುಂಭಾಗದಲ್ಲಿ ತೋಪುಗಳಿಂದಲೂ ಹೊಲಗಳಿಂದಲೂ ಕೂಡಿರುವ ವಿಶಾಲವಾದ ಭೂಪ್ರದೇಶವಿದೆ. ಎಡಗಡೆ ನೋಟ ನಾಲ್ಕು ಮೈಲಿಗಳವರೆಗೆ ಪಸರಿಸಬಹುದು. ದಟ್ಟವಾದ ಸಸ್ಯಸಮೃದ್ಧಿ, ಬಯಲು, ಅಲ್ಲೊಂದು ಇಲ್ಲೊಂದು ಮನೆಗಳು ಇರುವ ವಿಸ್ತಾರವಾದ ಪ್ರಸ್ಥಭೂಮಿ ಇದೆ. ಇದರ ದೂರದ ಹಿನ್ನೆಲೆಯಲ್ಲಿ ನೀಲವರ್ಣ ಜಲರಾಶಿಯಿಂದ ಕೂಡಿದ ಅರಬ್ಬಿ ಸಮುದ್ರ ಕಾಣುತ್ತದೆ. ಆಶ್ರಮದ ಹಿಂಭಾಗದಲ್ಲಿ ಹಸುರು ಹೊದೆದು, ಎರಡು ಪಾರ್ಶ್ವಗಳಲ್ಲಿಯೂ ಸಮುದ್ರದಿಂದ ಬೀಸುವ ಬಲವಾದ ಗಾಳಿಗೆ ಗಂಭೀರವಾಗಿ ತಲೆದೂಗುವ, ತೆಂಗಿನ ತೋಪಿನಿಂದ ಕೂಡಿರುವ ಬೆಟ್ಟಗಳ ಸಾಲುಗಳು. ಆಶ್ರಮದ ಗುಡ್ಡದಮೇಲೆ ನಿಂತು ದೃಷ್ಟಿಯನ್ನು ಸುತ್ತಲೂ ಬೀರಿದರೆ ನಾನಾ ಬಣ್ಣದ ಉಡುಗೆಯಿಂದ ಅಲಂಕರಿಸಿಕೊಂಡಿರುವ ಪ್ರಕೃತಿದೇವಿಯ ಮನೋಹರ ಚಿತ್ರದಿಂದ ಕಣ್ಣಿಗೆ ಹಬ್ಬವಾಗುವುದು. ಸೂರ್ಯದೇವನು ನಭದ ನೆತ್ತಿಯಲ್ಲಿರುತ್ತ ಅವನ ಕಿರಣಗಳು ಸಮುದ್ರದ ನೀರಿನಮೇಲೆ ಬಿದ್ದು ಪ್ರತಿಬಿಂಬಿಸುವಾಗ ದೂರದಲ್ಲಿ ಅನಂತವಾದ ಬೆಳ್ಳಿಯ ತಗಡು ಅದೇನು ಹೊಳೆಯುತ್ತಿದೆಯೋ ಎಂದು ಭಾಸವಾಗುತ್ತದೆ. ಮುಂಗಾರ ಕೆಲವು ಮಳೆ ಬಿದ್ದನಂತರ ಹಸುರಾದ ಹುಲ್ಲು ಒಂದು ಹಚ್ಚಡದಂತೆ ಬೆಟ್ಟದಮೇಲೂ ಮೈದಾನದಮೇಲೂ ಹರಡಿದಾಗ ಆಶ್ರಮದ ಸುತ್ತು ನೋಟಕನಿಗೆ ಮೋಹಗೊಳಿಸುವ ಒಂದು ದೃಶ್ಯವನ್ನು ನೀಡುತ್ತದೆ. ಆಶ್ರಮದಲ್ಲಿಯೂ ಸುತ್ತು ಪ್ರದೇಶದಲ್ಲಿಯೂ ನೆಲೆಸಿರುವ ವಾತಾವರಣ ಸಂಪೂರ್ಣ ಶಾಂತಿ ಸಮಾಧಾನದಿಂದ ತೀವಿರುತ್ತದೆ.

## ಪ್ರವೇಶೋತ್ಸವ

ಈ ಹೊಸ ಆಶ್ರಮದ ಹೆಸರೂ ಆನಂದಾಶ್ರಮ. ಇದರ ಪ್ರವೇಶೋತ್ಸವ ೧೯೩೧ನೇ ಇಸ್ವಿ ಮೆ ತಿಂಗಳು ೧೪ನೇ ತಾರೀಖು ನಡೆಯಿತು. ಆಹ್ವಾನವನ್ನು ಮನ್ನಿಸಿ ಹಿಂದೂಸ್ಥಾನದ ನಾನಾಭಾಗಗಳಿಂದ ನೂರಾರು ಜನ ಬಂದು ಉತ್ಸವಕ್ಕೆ ನೆರೆದರು. ಭಜನೆ, ಕೀರ್ತನೆ, ಹಬ್ಬದ ಊಟ, ಬಡವರಿಗೆ ಅನ್ನ ಇತ್ಯಾದಿ ದಾನ ಹತ್ತು ದಿನಗಳಕಾಲ ನಡೆದವು. ಭಗವಂತನ ದಿವ್ಯನಾಮಗಳ ರೋಮಾಂಚಕ ಸಂಕೀರ್ತನದಿಂದ ರಾಮನಗರದ ಬೆಟ್ಟಗಳು ಪ್ರತಿಧ್ವನಿಸಿದುವು. ಮಹಾರಾಷ್ಟ್ರದಿಂದ ಒಂದು ಆರುಜನ ಭಕ್ತರು ಸಮಾರಂಭಕ್ಕೆ ಬಂದಿದ್ದರು. ಇವರಲ್ಲಿ

ಜನಾರ್ದನಪಂತ್, ರಘುನಾಥಮಹರಾಜ್, ಗೋವಿಂದ ರಾಮಕೃಷ್ಣ ಜೋಷಿ, ಕೃಷ್ಣಾಜಿ ಪಂಢರೀನಾಥ್ ಮತ್ತು ಮಾಧವರಾವ್ ಕುಲಕರ್ಣಿ ಇವರು ಇದ್ದರು. ಈ ಭಕ್ತರು ಭಜನೆ ಕೀರ್ತನೆಗಳಲ್ಲಿ ಪೂರ್ಣಶ್ರದ್ಧೆಯಿಂದ ಭಾಗವಹಿಸಿದರು.

ಪ್ರಾರಂಭೋತ್ಸವದ ಸಮಾರಂಭದಲ್ಲಿ ರಾಮದಾಸನು ಸೇರಿದ್ದ ಭಕ್ತರ ಮತ್ತು ಸ್ನೇಹಿತರ ಕೋರಿಕೆಯಂತೆ ಸಣ್ಣ ಒಂದು ಉಪನ್ಯಾಸವನ್ನು ಮಾಡಿದನು. ಸಂಗ್ರಹವಾಗಿ ಅದರ ಸರಣಿ ಹೀಗಿದ್ದಿತು:—

"ಈ ಪವಿತ್ರವಾದ ಆಶ್ರಮದ ಆರಂಭೋತ್ಸವ ಸಮಾರಂಭದಲ್ಲಿ ನಿಮ್ಮ ಮುಂದೆ ಕೆಲವು ಮಾತುಗಳನ್ನಾಡತಕ್ಕ ಮಹದಾನಂದ ರಾಮದಾಸನಿಗೆ ದೊರೆತಿದೆ. ಈ ಆಶ್ರಮ ತನ್ನಮುಂದೆ ಇರಿಸಿಕೊಂಡಿರುವ ಧ್ಯೇಯ, ವಿಶ್ವಪ್ರೇಮ ಮತ್ತು ವಿಶ್ವಸೇವೆ. ಇವುಗಳ ತಳಹದಿ ಸರ್ವಜೀವಿ ಸರ್ವಪ್ರಾಣಿಗಳಲ್ಲಿರುವ ದೈವದ ದರ್ಶನ. ಇಲ್ಲಿಗೆ ಪ್ರತಿಯೊಬ್ಬ ಗಂಡಸು, ಹೆಂಗಸು, ಮಗು, ಯಾವ ಜಾತಿ ಮತ ಕಟ್ಟಳೆಗಳಿಗೆ ಸೇರಿದ್ದರೂ ಧಾರಾಳವಾಗಿ ಬರಬಹುದು. ಇಲ್ಲಿ ಪರಸ್ಪರ ಪ್ರೀತಿ ಮತ್ತು ಪರಸ್ಪರ ಸೇವೆಯ ಭಾವನೆಯನ್ನು ಉದ್ದೀಪಿಸಲು ಸರ್ವಪ್ರಯತ್ನವನ್ನೂ ಮಾಡಲಾಗುತ್ತದೆ. ಇದರಿಂದ ಈ ಆಶ್ರಮದ ಆವರಣದಲ್ಲಿ ಸಿದ್ಧಿಸಿದ ತತ್ವ ಬಾಹ್ಯ ಪ್ರಪಂಚದಲ್ಲಿ ಜೀವನ ಸರಿಯಾಗಿ ನಡೆಯಲು ಆದರ್ಶವಾದೀತು. (ಎಲ್ಲಾ ವಿಚಾರಗಳಲ್ಲಿಯೂ ಭಗವಂತನೇ ನಮ್ಮ ಸಹಾಯಕ ಮತ್ತು ಮಾರ್ಗದರ್ಶಕ.) ಪ್ರೀತಿ ಮತ್ತು ಆನಂದಗಳ ಈ ಮಂದಿರ ನಡೆಸಲು ಕೈಗೊಂಡಿರುವ ಮಹತ್ಕಾರ್ಯದಮೇಲೆ **ಅವನು** ತನ್ನ ಅನುಗ್ರಹವನ್ನು ಸಮೃದ್ಧಿಯಾಗಿ ಸುರಿಸಲಿ!"

ಕಾಸರಗೋಡು ಆಶ್ರಮದಲ್ಲಾದ ಅಪಘಾತದಿಂದ ಬಹಳ ದುರ್ಬಲಳಾಗಿದ್ದರೂ ಕೃಷ್ಣಾಬಾಯಿ ಈ ಉತ್ಸವ ಕಾರ್ಯವನ್ನು ನಿರ್ವಹಿಸುವುದರಲ್ಲಿ ತನ್ನ ಅಪೂರ್ವ ಕೌಶಲ್ಯ, ಅಪ್ರತಿಹತವಾದ ಶಕ್ತಿ ಅಷ್ಟನ್ನೂ ಉಪಯೋಗಿಸಿದಳು. ಪ್ರತಿ ಒಂದು ಕಾರ್ಯವೂ ವಿಧಿಯರಿತು ಕ್ರಮವಾಗಿ ನಡೆಯಿತು. ಕೃಷ್ಣಾಬಾಯಿ ಸ್ವಭಾವತಃ ಕಾರ್ಯನಿರ್ವಾಹಕಳೆಂದೂ, ಕಷ್ಟವಾದ ಸನ್ನಿವೇಶಗಳನ್ನು ನಿರ್ವಹಿಸಿಕೊಳ್ಳುವುದರಲ್ಲಿ ತನ್ನ ಆಶ್ಚರ್ಯಕರವಾದ ಸಾಮರ್ಥ್ಯವನ್ನು ಎಲ್ಲಹೊತ್ತೂ ತೋರಿಸುತ್ತಿದ್ದಳೆಂದೂ ಒಪ್ಪಬೇಕು. ಏಕೆಂದರೆ ಕಟ್ಟಡದ ಪ್ರವೇಶೋತ್ಸವವಾದ ಸ್ವಲ್ಪ ಹೊತ್ತಿನಲ್ಲಿ ಗುಡುಗು ಮಿಂಚು ಬಿರುಗಾಳಿಯಿಂದ ಕೂಡಿದ ಝುಂಝಾವೃಷ್ಟಿ ಆಶ್ರಮದ ಕಟ್ಟಡಗಳಮೇಲೆ ಬಡಿಯಿತು. ಆದರೆ ವರ್ಚಸ್ವಿಯೂ ಸದಾ ಸೌಮ್ಯವೂ ಆದ ಕೃಷ್ಣಾಬಾಯಿ ಮೂರ್ತಿ ಪ್ರತಿ ಒಬ್ಬರ ಸಣ್ಣಪುಟ್ಟ ಅನುಕೂಲಗಳಿಗೂ ಗಮನ ಕೊಡುತ್ತ ದೇವಿಯಂತೆ ಜನಸಂದಣಿಯಲ್ಲಿ ಸುಳಿಯುತ್ತಿದ್ದಿತು. ಆಕೆಯಿಂದ ವಿಶೇಷ ಗಮನ ಮತ್ತು ಸೇವೆಯನ್ನು ಪಡೆಯದಿದ್ದ ಅಭ್ಯಾಗತರೇ ಇರಲಿಲ್ಲ. ಒಂದು ಮಾತಿನಲ್ಲಿ ಹೇಳಿದರೆ ಆಕೆಯ ಮಾತೃವತ್ಸಲದೃಷ್ಟಿ ಸರ್ವರಮೇಲೂ ಸಮವಾಗಿ ಪ್ರಸರಿಸಿದ್ದಿತು.

ಆಶ್ರಮದ ಪ್ರವೇಶೋತ್ಸವ ಸಮಯದಲ್ಲಿ ವಿಶ್ವದ ಉತ್ಕೃಷ್ಟ ಧಾರ್ಮಿಕ ಗುರುಗಳ ವಿಶೇಷ ಪ್ರತಿಭಾನ್ವಿತವಾದ ಸಂದೇಶಗಳನ್ನು ದಪ್ಪಕಾಗದಗಳಮೇಲೆ ಇಂಗ್ಲಿಷ್, ಸಂಸ್ಕೃತ ಮತ್ತು ಮರಾಟಿ ಭಾಷೆಗಳಲ್ಲಿ ಅಂದವಾಗಿ ದೊಡ್ಡದೊಡ್ಡ ಅಕ್ಷರಗಳಿಂದ ಬರೆಸಿದ್ದೆವು. ಇವುಗಳಿಗೆ ಕಟ್ಟನ್ನು ಹಾಕಿಸಿ ಇವುಗಳನ್ನು ಭಜನೆ ಮಂದಿರದ ಗೋಡೆಗಳಿಗೆ ತೂಗಹಾಕಲಾಯಿತು. ರಾಮಮಂತ್ರವನ್ನು ಗೋಡೆಗಳ ಮೇಲೆ ವಿವಿಧ ಭಾಷೆಗಳಲ್ಲಿ ಬರೆಸಲಾಯಿತು. ಸಂದೇಶಗಳು ಇವು:—

೧. ಅನನ್ಯಪರಾಯಣರಾಗಿ ಯಾರು ನನ್ನನ್ನು ಪರ್ಯುಪಾಸನೆ ಮಾಡುತ್ತಾರೋ ನಿತ್ಯಾಭಿಯುಕ್ತರಾದ ಅಂಥವರ ಯೋಗಕ್ಷೇಮವನ್ನು ನಾನು ನೋಡಿಕೊಳ್ಳುತ್ತೇನೆ. (ಗೀತ ಅಧ್ಯಾಯ ೯, ಶ್ಲೋಕ ೨೨)

೨. ದೇವರು ಪ್ರೇಮ; ಯಾವನು ಪ್ರೇಮದಲ್ಲಿ ವಾಸಿಸುತ್ತಾನೋ ಅವನು ದೇವರಲ್ಲಿ ವಾಸಿಸುತ್ತಾನೆ ಮತ್ತು ದೇವರು ಅವನಲ್ಲಿ ಇರುತ್ತಾನೆ.
(ಏಸು ಕ್ರೀಸ್ತ)

೩. ದಯೆ, ಕ್ಷಮೆ, ಶಾಂತಿ ಇರುವ ಹೃದಯ ಭಗವಂತನ ಆವಾಸ.
(ಸಂತ ತುಕಾರಾಮ್)

೪. ಯಾರು ತನ್ನ ದೇಹವನ್ನು ಭಗವಂತನ ಸೇವೆಯಲ್ಲಿ ಸವೆಸುತ್ತಾನೋ ಯಾರ ನಾಲಗೆಯಮೇಲೆ ರಾಮನಾಮ ಸದಾ ಇರುವುದೋ ಯಾರು ಸದಾ ಸತ್‌ಪಥದಲ್ಲಿಯೇ ನಡೆಯುತ್ತಾನೋ ಅಂಥ ದೈವಭಕ್ತ ಈ ಪ್ರಪಂಚದಲ್ಲಿ ಧನ್ಯ.
(ಸಮರ್ಥ ರಾಮದಾಸ್)

೫. ತನ್ನ ಪತ್ನಿ, ಪುತ್ರ, ಗೃಹ ಮತ್ತು ಜೀವನವನ್ನು ಭಗವಂತನಿಗೆ ಅರ್ಪಣೆ ಮಾಡುವುದು ಉತ್ಕೃಷ್ಟ ಭಕ್ತಿಪಥ. ಇದೇ ನಿಜವಾದ ಭಗವದಾರಾಧನ.
(ಏಕನಾಥ ಮಹರಾಜ್)

೬. ಸರ್ವಧರ್ಮಗಳನ್ನೂ ತ್ಯಜಿಸಿ ರಕ್ಷಣೆಗಾಗಿ ನನ್ನಲ್ಲಿಯೇ ಬಾ; ದುಃಖಿಸಬೇಡ. ನಾನು ನಿನ್ನನ್ನು ಸರ್ವ ಪಾಪಗಳಿಂದಲೂ ವಿಮೋಚನೆ ಮಾಡುತ್ತೇನೆ.
(ಗೀತೆ ಅಧ್ಯಾಯ ೧೮, ಶ್ಲೋಕ ೬೬)

ಕೆಲವು ವರ್ಷಗಳ ನಂತರ ಈ ವಾಕ್ಯಗಳಲ್ಲಿ ಅನೇಕವನ್ನು ತೆಗೆದು ಆಯಾ ಸಂದೇಶವನ್ನು ಸಾರಿದ ಗುರುಗಳ ಚಿತ್ರಗಳನ್ನು ಹಾಕಲಾಯಿತು. ಅವು ಈಗಲೂ ಆಶ್ರಮದ ಗೋಡೆಗಳನ್ನು ಅಲಂಕರಿಸಿವೆ. ಇವು ಶ್ರೀರಾಮಕೃಷ್ಣ, ಶ್ರೀಶಾರದಾಮಣಿದೇವಿ, ಸಾಯಿಬಾಬ, ಏಸುಕ್ರೀಸ್ತ, ಶ್ರೀ ಅರವಿಂದರು, ಶ್ರೀ ರಮಣ ಮಹರ್ಷಿ, ಬುದ್ಧ, ಜೋರಾಸ್ಟರ್, ಸ್ವಾಮಿ ವಿವೇಕಾನಂದ, ಗುರುನಾನಕ್ ಮತ್ತು ಗುರುದೇವ ಇವರವು.

ರಾಮದಾಸನು ಸರ್ವಮತಗಳ ಸಮನ್ವಯವನ್ನು ಮನಗಂಡಿದ್ದನು. ಮತ್ತು ಅವನ ಪ್ರೀತಿಗೌರವಗಳು ಎಲ್ಲ ಆಧ್ಯಾತ್ಮಿಕ ಗುರುಗಳ ವಿಚಾರದಲ್ಲಿ ಸಮವಾಗಿ

ಹರಿಯುತ್ತವೆ. ಅವನು ಏಕಕಾಲದಲ್ಲಿ ಮಹಾಮಹಿಮನ ಸೇವಕ ಮತ್ತು ಸಂತರ ಶಿಶು ಆಗಿದ್ದಾನೆ. ಈ ಸತ್ಯವನ್ನು ಮನಗಂಡು ಅನುಭವಕ್ಕೆ ತಂದುಕೊಳ್ಳುವುದು ಎಂಥ ಆನಂದ!

## ಮಾತೆ ರುಕುಮಾಬಾಯಿ

ರಾಮದಾಸನು ಕಾಸರಗೋಡನ್ನು ಬಿಟ್ಟ ಕೆಲವುದಿನಗಳ ನಂತರ ಇನ್ನೂ ತನ್ನ ಮಗಳ ಮನೆಯಲ್ಲಿರುತ್ತಿದ್ದ ಮಾತೆ ರುಕುಮಾಬಾಯಿ, ರಾಮನಗರಕ್ಕೆ ಬಂದು ಕೆಲವುಕಾಲವಿದ್ದು ನಂತರ ತನ್ನ ಅಕ್ಕನ ಮಗನ ಬಳಿ ಕೆಲವುದಿವಸವಿರಲು ಮದರಾಸಿಗೆ ಪ್ರಯಾಣಮಾಡಿದಳು. ಹೊಸ ಆಶ್ರಮದಲ್ಲಿ ರಾಮದಾಸನ ಸಂಗಡ ಸತತವಾಗಿ ಇರಬೇಕೆಂದು ಆಕೆಗೆ ಬಹಳ ಆಶೆ ಇದ್ದಿತು. ದೈವೇಚ್ಛೆ ವ್ಯತಿರಿಕ್ತ ವಾಗಿದ್ದಿತು. ಮದರಾಸಿಗೆ ಹೋದಮೇಲೆ ಆಕೆಯ ಉಬ್ಬಸರೋಗ ಬಹಳ ಉಲ್ಬಣ ವಾಗಿ ಆಕೆಯ ಸ್ಥಿತಿ ಉತ್ಕಟವಾಯಿತು. ಆಗ ಆಕೆಯ ಅಕ್ಕನ ಮಗ, "ಯಾರ ನ್ನಾದರೂ ನೋಡಬೇಕೆಂದಿದ್ದೀಯಾ?" ಎಂದು ಕೇಳಿದನು. ಆಕೆ "ನಾನು ಕೃಷ್ಣಾಬಾಯಿಯನ್ನು ನೋಡಬೇಕು" ಎಂದು ಒಡನೆ ಉತ್ತರ ಕೊಟ್ಟು "ನಾನು ಉಳಿಯುವುದೇಆದರೆ ಆಕೆಯ ವಾತ್ಸಲ್ಯಪೂರ್ಣವಾದ ಮತ್ತು ಎಚ್ಚರಿಕೆಯ ಶುಶ್ರೂಷೆಯಿಂದಲೇ ಸಾಧ್ಯ. ಏಕೆ ಎಂದರೆ ಹಿಂದೆ ನಾನು ಕಾಸರಗೋಡಿನಲ್ಲಿ ಕಾಯಿಲೆ ಮಲಗಿ ಸಾಯುವಹಾಗಿದ್ದಾಗ ಸಾವಿನ ಬಾಯಿಂದ ನನ್ನನ್ನು ಉಳಿಸಲು ಸಾಧ್ಯವಾದದ್ದು ಆಕೆಯೊಬ್ಬಳಿಂದಲೇ" ಎಂದು ಹೇಳಿದಳು. ಆದರೆ ಕೃಷ್ಣಾಬಾಯಿ ಮದರಾಸಿಗೆ ಹೋಗಲು ಸಾಧ್ಯವಾಗಲಿಲ್ಲ. ಕೆಲವು ದಿವಸಗಳೊಳ ಗಾಗಿ ರುಕುಮಾಬಾಯಿ ದೈವಾಧೀನಳಾದಳೆಂದು ವರ್ತಮಾನ ಬಂದಿತು. ಆಕೆಯ ಆತ್ಮಕ್ಕೆ ಚಿರಶಾಂತಿ ಇರಲಿ.

ಈ ಸಂದರ್ಭದಲ್ಲಿ ಈಕೆಯನ್ನು ಕುರಿತ ಒಂದು ಮಾತು ಅಯುಕ್ತವಾಗ ಲಾರದು. ಈಕೆ ರಾಮದಾಸನಿಗೆ ಅವನ ಪೂರ್ವಾಶ್ರಮದಲ್ಲಿ ನಿಜವಾಗಿ ಸದ್ಗುಣ ಸಂಪನ್ನೆಯಾದ ಪತಿವ್ರತೆಯಾದ ಸಹಧರ್ಮಿಣಿಯಾಗಿದ್ದಳು. ಭಗವಂತನು ರಾಮದಾಸನನ್ನು ಈಕೆಯ ಸಹವಾಸದಿಂದ ಪ್ರತ್ಯೇಕಿಸಿ ಅವನ ಜೀವನವನ್ನು ತನ್ನ ಸೇವೆಗಾಗಿಯೇ ಮೀಸಲಾಗಿಡುವಂತೆ ಮಾಡಿದ ವೇಳೆ ಈಕೆಗೆ ಬಹಳ ವ್ಯಥೆ ಯಾದದ್ದು ಸಹಜವೇ. ಆದರೆ ಕೊನೆಯಲ್ಲಿ ಕಾಸರಗೋಡು ಆಶ್ರಮದಲ್ಲಿ ರಾಮದಾಸನ ಬಳಿ ನಿಲ್ಲಲುಬಂದಾಗ ಆಕೆ ಭಗವಂತನು ರಾಮದಾಸನ ಜೀವನದಲ್ಲಿ ತಂದ ಮಾರ್ಪಾಡಿನಲ್ಲಿ ಅವನ ಆಶಯವೇನೆಂದು ತಿಳಿದಳು. ಸ್ವಭಾವವಾಗಿಯೇ ಧರ್ಮಶ್ರದ್ಧೆಯುಳ್ಳವಳಾಗಿದ್ದು ಆಮೇಲೆ ಭಕ್ತಿ ಬಹುವಾಗಿ ಪ್ರಬಲಿಸಿ ಈಕೆ ಭಗವ ತ್ಸಾಕ್ಷಾತ್ಕಾರ ಹೊಂದಬೇಕೆಂಬ ಉತ್ಕಟೇಚ್ಛೆಯಿಂದ ತಪಿಸಿದಳು. ಭಗವಂತನ ದಿವ್ಯನಾಮ ಸಂತತವಾಗಿ ಈಕೆಯ ನಾಲಗೆಯಮೇಲೆ ನಿಂತಿತು. ಕೊನೆಯ ಕ್ಷಣದ ವರೆಗೂ ಈಕೆ ಭಗವಂತನ ಸ್ಮರಣೆಯಲ್ಲಿದ್ದಳು. ಈ ಉನ್ನತವಾದ ಭಗವತ್ಜ್ಞಾನದ ಸ್ಥಿತಿಯಲ್ಲೇ ಆಕೆ ದೇಹವನ್ನು ಬಿಟ್ಟಳು.

## ಗುರುದೇವ

ಪ್ರವೇಶೋತ್ಸವವಾದ ಐದುತಿಂಗಳಮೇಲೆ, ರಾಮದಾಸನಿಗೆ ಕಾಸರಗೋಡಿನಲ್ಲಿ ತನ್ನ ಮಗನೊಡನೆ ಇದ್ದ ಗುರುದೇವನು ೧೯೩೧ನೇ ಇಸ್ವಿ ನವೆಂಬರ್ ೮ನೇ ತಾರೀಖು ಸಾಯಂಕಾಲ ೫-೩೦ ಗಂಟೆಗೆ ಪಾರ್ಥಿವಶರೀರವನ್ನು ತ್ಯಜಿಸಿದನೆಂದು ವರ್ತಮಾನ ತಿಳಿಯಿತು. ೧೩ನೇ ದಿನ ಎಂದರೆ ನವೆಂಬರ್ ೨೦ನೇ ತಾರೀಖಿನ ದಿವಸ ಆಶ್ರಮದಲ್ಲಿ ಗುರುದೇವನ ಪ್ರಥಮ ಪುಣ್ಯತಿಥಿಯನ್ನು ಆಚರಿಸಲಾಯಿತು. ಆಗ ಹಗಲು ರಾತ್ರಿ ಭಜನೆ ನಡೆಸಿದೆವು. ಮಾರನೆ ಬೆಳಿಗ್ಗೆ, ಆತನ ಪುಣ್ಯಸ್ಮರಣೆಗಾಗಿ ನಾಲ್ಕುನೂರುಜನ ಬಡವರಿಗೆ ಅನ್ನದಾನ ಮಾಡಿದೆವು. ಈ ಸಮಾರಂಭಕ್ಕೆ ಮಂಗಳೂರು ಮತ್ತು ಕಾಸರಗೋಡಿನಿಂದ ಅನೇಕ ಭಕ್ತರು ಬಂದಿದ್ದರು. ಐಹಿಕ ಜೀವನದ ಕೊನೆಯಭಾಗದಲ್ಲಿ ಕೆಲವು ತಿಂಗಳು ಗುರುದೇವನು ಪ್ರಪಂಚದ ಜ್ಞಾನವನ್ನುಳಿಸಿಕೊಂಡಿದ್ದುದಲ್ಲದೆ ಸದಾ ಹರ್ಷಚಿತ್ತನಾಗಿರುತ್ತಾ ವಿಷಯಗಳಲ್ಲಿ ತೀರ ಸಕ್ತಿರಹಿತವಾದ ಉಚ್ಚಮಟ್ಟಕ್ಕೇರಿದ್ದನು. ಗುರುದೇವನ ಉದಾತ್ತ ಹೃದಯದಿಂದ ಹೊರಟ ಕೃಪೆ, ಕನಿಕರ, ಪ್ರೀತಿಗಳ ತರಂಗವೇ ರಾಮದಾಸನ ಜೀವನವನ್ನು ಜೀವಾಧಾರವಾದ ಭಗವಂತನ ಕಡೆಗೆ ತಿರುಗುವಂತೆ ಮಾಡಿ, ಕೊನೆಗೆ ಅವನಿಗೆ ಸರ್ವಾಂತರ್ಯಾಮಿಯೂ, ಸರ್ವಾತೀತನೂ ಆದ ಭಗವಂತನಲ್ಲಿ ಸಂಪೂರ್ಣವಾದ ಐಕ್ಯತೆ ಹೊಂದುವುದರಿಂದ ಪ್ರಾಪ್ತವಾಗುವ ಅಮರತೆ ಆನಂದ ಮತ್ತು ಶಾಂತಿಯ ದರ್ಶನವನ್ನು ಅನುಗ್ರಹಿಸಿತು.

## ಗಾಂಧಿಜಿಯವರ ಉಪವಾಸದ ಸ್ಮರಣೆ

ಮಹಾತ್ಮಾ ಗಾಂಧಿಯವರ ಇಪ್ಪತ್ತೊಂದು ದಿನಗಳ ಉಪವಾಸ ೧೯೩೩ನೇ ಇಸ್ವಿ ಮೇ ತಿಂಗಳು ೭ನೇ ದಿನ ಮುಕ್ತಾಯವಾಯಿತು. ಈ ಘಟನೆಯ ಜ್ಞಾಪಕಾರ್ಥವಾಗಿ ಆಶ್ರಮದ ಮುಂದೆ ಒಂದು ಅಶ್ವತ್ಥದ ಸೊಸಿಯನ್ನು ನೆಡಲಾಯಿತು.

## "ದಿ ವಿಷನ್" ಪತ್ರಿಕೆ

೧೯೩೩ನೇ ಇಸ್ವಿ ಅಕ್ಟೋಬರಿನಲ್ಲಿ "ದಿ ವಿಷನ್" ಎಂಬ ಆಂಗ್ಲ ಮಾಸ ಪತ್ರಿಕೆಯ ಪ್ರಥಮ ಸಂಚಿಕೆ ಆಶ್ರಮದಿಂದ ಪ್ರಚುರವಾಯಿತು. ಇದರ ಆಶಯ ಇಂಡಿಯ ದೇಶದ ಒಳಗೂ ಮತ್ತು ಹೊರಗೂ ಇರುವ, ಆಧ್ಯಾತ್ಮಿಕ ಜೀವನವನ್ನು ಇಚ್ಛಿಸುವ ಜನರಿಗೆ, ಎಲ್ಲ ಮತಗಳ ಸಂತರ ಜೀವನ ಚರಿತ್ರೆಯನ್ನು ಮತ್ತು ಬೋಧೆಗಳನ್ನು ದೊರಕಿಸುವುದು, ಸಾಧ್ಯವಾದಾಗ ಆ ಸಂತರ ಭಾವಚಿತ್ರಗಳನ್ನು ಪ್ರಚುರಪಡಿಸುವುದು ಮತ್ತು ರಾಮದಾಸನ ಸ್ವಂತ ಆಧ್ಯಾತ್ಮಿಕ ಅನುಭವಗಳನ್ನು ಆ ಜನಗಳ ಮುಂದೆ ಇಡುವುದು ಆಗಿದೆ. ರಾಮದಾಸನು ಆ ಪತ್ರಿಕೆಯ ಮೊದಲ ಸಂಪಾದಕನಾದನು. ಮರಾಠಿ ಮತ್ತು ಮಲಯಾಳಿ ಮಾಸಪತ್ರಿಕೆಗಳು ಕೆಲವು ವರ್ಷ ನಡೆದು ನಿಂತುಹೋದುವು.

## ಫಕೀರ ಅಮೀರನಾದ

ಕೆಲವು ವರ್ಷಗಳ ನಂತರ ಮಿತ್ರರ ಸಲಹೆಯಂತೆ ರಾಮದಾಸನು, ಕೀಲು ನೋವು ಮತ್ತು ದೀರ್ಘವಾದ ಮತ್ತು ಮರಳಿ ಮರಳಿ ಕೈಗೊಂಡ ಸಂಚಾರಗಳಿಂದುಂಟಾದ ಶರೀರದ ದೌರ್ಬಲ್ಯಗಳ ಕಾರಣದಿಂದ, ಕುಳಿತುಕೊಳ್ಳಲು ಕುರ್ಚಿಯನ್ನೂ ಮಲಗಲು ಮಂಚವನ್ನೂ ಉಪಯೋಗಿಸಬೇಕಾಯಿತು. ಕೃಷ್ಣಾಬಾಯಿ ಅವನಿಗಾಗಿ ಒಂದು ಎತ್ತರವಾದ ಅಂದವಾಗಿ ತಯಾರಿಸಿದ ಮರದ ಪೀಠವನ್ನು ಮಾಡಿಸಿದಳು. ರಾಮದಾಸನು ಭಜನೆಯ ಸಮಯದಲ್ಲಿ ಇದರಮೇಲೆ ಕುಳಿತುಕೊಳ್ಳುವನು. ಅವನು ಕಾಲುಚೀಲಗಳು, ಒಂದು ಉಣ್ಣೆಯ ಬಟ್ಟೆಯ ಅಂಗಿ ಮತ್ತು ಕತ್ತಿನ ಸುತ್ತ ಉಣ್ಣೆಯ ಕೊರಳಪಟ್ಟಿ ಇವುಗಳನ್ನು ಧರಿಸಿಕೊಳ್ಳಬೇಕಾಯಿತು. ಇದರಿಂದ ಅವನು ದೊಡ್ಡ ಸಾಹೇಬನಂತೆ ಕಾಣಿಸುವನು. ಅವನು ಮೆತ್ತೆಯ ಕುರ್ಚಿಯಮೇಲೆ ಒರಗಿಕೊಂಡು ಕುಳಿತಾಗ ಫಕೀರನು ಅಮೀರನಂತೆ ತೋರಿದನು. ದೇವನ ಲೀಲೆ ಎಷ್ಟು ಆಶ್ಚರ್ಯಕರವಾಗಿದೆ! ರಾಮದಾಸನು ಅವನ ಮೇಳಕ್ಕೆ ತಕ್ಕಂತೆ ಕುಣಿಯುತ್ತ ಆನಂದವಾಗಿದ್ದಾನೆ.

" ವಿಷನ್ " ಪತ್ರಿಕೆಗೆ ಲೇಖನಗಳನ್ನು ಕೊಡುತ್ತಿದ್ದ ಮತ್ತು ರಾಮದಾಸನೊಂದಿಗೆ ಪತ್ರವ್ಯವಹಾರ ನಡೆಸುತ್ತಿದ್ದ ಒಬ್ಬ ಸ್ಕಾಚ್ ಸ್ನೇಹಿತನು, ವಿಷನ್ ಪತ್ರಿಕೆಯಲ್ಲಿ ಕೆಲವು ಬರಹಗಾರರು ರಾಮದಾಸನ ಹೆಸರಿನ ಹಿಂದೆ ("His Holiness") "ಶ್ರೀಪಾದಂಗಳು" ಎಂಬ ಬಿರುದನ್ನು ಉಪಯೋಗಿಸಿರುವುದಕ್ಕೆ ಆಕ್ಷೇಪಿಸಿ ಅವನಿಗೆ ಕಾಗದ ಬರೆದಿದ್ದನು. ಅವನು ರಾಮದಾಸನು ಈ ಬಿರುದನ್ನು ಒಪ್ಪಿಕೊಳ್ಳಬಾರದೆಂದು ತೀವ್ರವಾಗಿ ಒತ್ತಾಯಪಡಿಸಿದನು. ಇದಕ್ಕೆ ಉತ್ತರವಾಗಿ ರಾಮದಾಸನು, ತನಗೆ ಜನರು ಗೌರವವನ್ನು ತೋರುವರೆ, ಅಗೌರವವನ್ನು ತೋರುವರೆ ಎಂಬ ವಿಷಯದಲ್ಲಿ ತಾನು ಉದಾಸೀನ ಎಂದು ತಿಳಿಸಿದನು. ಗೌರವ ತೋರಿದ್ದನ್ನು ಗಣನೆಗೆ ತೆಗೆದುಕೊಂಡದ್ದಾದರೆ ಅಗೌರವ ತೋರಿದ್ದನ್ನೂ ಅವನು ಗಮನಿಸಬೇಕಾದೀತು. ಆದರೆ ಪರಾತ್ಪರದ ಅನುಗ್ರಹದಿಂದ ಅವನ ವಾಸ್ತವ ಸ್ಥಿತಿ ಏನಾಗಿದ್ದಿತೆಂದರೆ, ಅವನು ಈ ಎರಡರಿಂದಲೂ ಅತೀತನಾಗಿದ್ದನು. ಆದ್ದರಿಂದ ಅವನಿಗೆ ಕೊಡಬೇಕೆಂದು ಜನರು ಇಷ್ಟಪಡುವುದು ಸ್ತೋತ್ರವಾಗಲಿ, ನಿಂದೆಯಾಗಲಿ ಅದನ್ನು ರಾಮದಾಸನು ಸಂತೋಷದಿಂದ ತೆಗೆದುಕೊಳ್ಳಲು ಸಿದ್ಧನಾಗಿದ್ದಾನೆ.

## ಪೋಷಕರು, ದಾತೃಗಳು

ಲೋಕಗಳ ದಯಾಮಯ ಏಕಮಾತ್ರ ನಾಯಕನಾದ ಭಗವಂತನೇ ಈ ಆಶ್ರಮದ ಸ್ಥಾಪನೆಯನ್ನು ಸಾಧ್ಯಮಾಡಿದನೆಂಬುದನ್ನು ಮನಗಾಣಬೇಕು. ಹಿಂದೂಸ್ಥಾನದ ಬೇರೆಬೇರೆ ಸ್ಥಳಗಳ ಮತ್ತು ಹೊರದೇಶಗಳ ಅಸಂಖ್ಯಾತ ಸ್ವಾರ್ಥತ್ಯಾಗಿ ಶುದ್ಧಮನಸ್ಕ ಮಹನೀಯಜನರ ಉದಾರ ದಾನಗಳಿಂದ



ಆನಂದಾಶ್ರಮ ಮುಂಭಾಗ

ಆಶ್ರಮದ ಕಾರ್ಯಕ್ರಮಗಳು ದಿನೇ ದಿನೇ ವಿಸ್ತಾರವಾಗುತ್ತಿವೆ. ಆಶ್ರಮ ನಡೆಸುವ ಯಾವುದೇ ಕೆಲಸ ಯಾವುದೇ ಸೇವೆಯ ಯಶಸ್ಸು ಇವರನ್ನು ಕೂಡಿದ್ದು. ಈ ಸ್ನೇಹಿತರಲ್ಲಿ ಅನೇಕರ ಅಹಂಭಾವ ಎಷ್ಟರಮಟ್ಟಿಗೆ ಅಳಿದಿದೆ ಎಂದರೆ ಆಶ್ರಮದ ಧ್ಯೇಯವನ್ನು ಮುಂದುವರಿಸುವುದಕ್ಕೆ ಇವರು ಸಮೃದ್ಧಿಯಾಗಿ ಒದಗಿಸಿರುವ ಧನವನ್ನೂ ಇತರ ಸಹಾಯವನ್ನೂ ಕುರಿತು ತಮ್ಮ ಹೆಸರುಗಳನ್ನು ಪ್ರಕಟಿಸ ಕೂಡದೆಂದೇ ಅವರು ಆಜ್ಞೆಮಾಡಿದ್ದಾರೆ. ಆದ್ದರಿಂದ ರಾಮದಾಸನು ಅವರ ಹೆಸರುಗಳನ್ನು ತಿಳಿಸದೆ ಅವರ ಪ್ರೀತಿ ಪುರಸ್ಸರವಾದ ಸಹಕಾರವನ್ನು ಅನಂತವಾದ ಕೃತಜ್ಞತೆಯಿಂದ ಒಪ್ಪಿಕೊಳ್ಳುತ್ತಾನೆ.

## ಬಡವರಿಗೆ ಸಹಾಯ

ಕಾಲಕಾಲಕ್ಕೆ ಮತ್ತು ವಿಶೇಷವಾಗಿ ಉತ್ಸವ ಸಮಯಗಳಲ್ಲಿ ಬಡವರಿಗೆ ಊಟದ ಪದಾರ್ಥಗಳನ್ನು ನೀಡುವುದು ಆಶ್ರಮ ಸೇವೆಯ ಪ್ರಧಾನ ಅಂಗಗಳಲ್ಲಿ ಒಂದು. ಅಂತಹ ಸಮಯಗಳಲ್ಲಿ ಸಾವಿರಾರು ಜನರಿಗೆ ಸಹಾಯ ಮಾಡಲಾಗುತ್ತಿದೆ. ಆಶ್ರಮದಲ್ಲಿ ಜಾತಿ ಮತ ವರ್ಣ ದೇಶಗಳ ಭೇದವಿಲ್ಲದೆ ಸರ್ವರಿಗೂ ಸ್ವಾಗತ ಉಂಟು. ಆಶ್ರಮ ಸರ್ವರಿಗೂ ಮನಃಪೂರ್ವಕವಾದ ಉಲ್ಲಾಸಯುಕ್ತವಾದ ಸೇವೆಯನ್ನು ಸಮತಾಭಾವದಿಂದ ಸಲ್ಲಿಸುತ್ತಿದೆ.

## ಆಶ್ರಮದ ಕಟ್ಟಡಗಳು

ಆಶ್ರಮದ ಮುಖ್ಯ ಕಟ್ಟಡವೆಂದರೆ ಮುಂದುಗಡೆಯ ಭಜನೆ ಮಂದಿರ. ಇದರ ಸುತ್ತ ಕಮಾನಿನ ಗೋಡೆಗಳಿವೆ. ಅವುಗಳ ಮೇಲ್ಭಾಗದಲ್ಲಿ "ಕಾರ್ನಿಸ್" ಕೆಲಸ ಮಾಡಿದೆ. ಇದು ಸಭಾಂಗಣಕ್ಕೆ ಸುಂದರವಾದ ರೂಪವನ್ನು ಕೊಡುವು ದಲ್ಲದೆ ಸ್ಪಷ್ಟವಾಗಿ ಗಂಭೀರ ಮತ್ತು ಮನೋಹರವಾದ ಆಕಾರವನ್ನು ಕೊಟ್ಟಿದೆ. ಭಜನೆಮಂದಿರದ ಹಿಂಭಾಗದಲ್ಲಿ ರಾಮದಾಸನ ಉಪಯೋಗಕ್ಕಾಗಿ ಒಂದು ಸಣ್ಣ ಕೊಟಡಿ ಇದೆ. ಮುಖ್ಯಮಂದಿರಕ್ಕೆ ಸರಿಯಾಗಿ ಹಿಂದಿರುವ ಕಿರುಮನೆಯಲ್ಲಿ ನಾಲ್ಕು ಕೊಟಡಿ ಇವೆ. ಒಂದೊಂದು ಕಡೆ ಎರಡೆರಡು ಮಧ್ಯೆ ದಾರಿ. ಒಂದು ಪಾರ್ಶ್ವವನ್ನು ಅಡಿಗೆಮನೆಯನ್ನಾಗಿ ಉಪಯೋಗಿಸುತ್ತಿದೆ. ಇನ್ನೊಂದನ್ನು ಆಗಂತುಕ ಅತಿಥಿಗಳ ವಸತಿಗಾಗಿ ಉಪಯೋಗಿಸುತ್ತಿದೆ.

ಕೆಲವು ಕಾಲಾನಂತರ ಆಶ್ರಮದ ಆವರಣದಲ್ಲಿ ಇನ್ನೊಂದು ಸಣ್ಣ ಕಟ್ಟಡ ಎರಡು ಮಾಸಪತ್ರಿಕೆಗಳ ಸಂಪಾದಕೀಯ ಮತ್ತು ಆಡಳಿತದ ಕೆಲಸಕ್ಕಾಗಿ ಮತ್ತು ಪತ್ರವ್ಯವಹಾರಗಳ ಸಲುವಾಗಿ ನಿರ್ಮಿತವಾಯಿತು. ಈ ಕಟ್ಟಡದ ಖರ್ಚನ್ನು ಲಿಂಬ್ಡಿ ಸಂಸ್ಥಾನದ ಥಾಕೂರ್ ಸಾಹೇಬ್ ಸರ್ ದೌಲತ್‌ಸಿಂಗರ ಔದಾರ್ಯ ಒದಗಿಸಿತು. ಅವರಿಗೆ ರಾಮದಾಸನು ಇಲ್ಲಿ ತನ್ನ ಕೃತಜ್ಞತಾಭಾವವನ್ನು ವ್ಯಕ್ತ ಮಾಡುತ್ತಾನೆ.

ರಾಮದಾಸನು ಈ ಪುಸ್ತಕದಲ್ಲಿ ಅನೇಕ ಕಡೆ ಪ್ರಸ್ತಾಪಿಸಿರುವ ಶ್ರೀ ದೌಲತ್ ಸಿನ್ಹಜಿಯವರು ಗತಿಸಿದರೆಂಬ ವಿಷಯ ತಿಳಿದು ಅವನಿಗೆ ತುಂಬಾ ವ್ಯಸನವಾಯಿತು. ರಾಮದಾಸನು ಲಿಂಬ್ಡಿಗೆ ಹೋದಾಗಲೆಲ್ಲ ಥಾಕೂರ್ ಸಾಹೇಬರು ಅವನನ್ನು ತಮ್ಮ ಅರಮನೆಗೆ ಕರೆದುಕೊಂಡು ಹೋಗಿ ಸಂಪೂರ್ಣ ಪ್ರೀತಿ ಮತ್ತು ಆತಿಥ್ಯಗಳಿಂದ ಸತ್ಕರಿಸುವರು. ಅವರು ಶ್ರೀಕೃಷ್ಣನ ಭಕ್ತರು ಮತ್ತು ಅವರಿಗೆ ಸಂತರ ವಿಚಾರದಲ್ಲಿ ವಿಶೇಷ ಗೌರವವಿದ್ದಿತು. ಅವರು ತಮ್ಮ ಸ್ವಭಾವದಲ್ಲಿ ದಾನಶೀಲರೂ ಆಗಿದ್ದರು; ಅನೇಕ ಧರ್ಮಸಂಸ್ಥೆಗಳಿಗೆ ಹೇರಳ ಧನವನ್ನು ದಾನಮಾಡಿದ್ದರು. ಅವರಿಗೆ ಶ್ರೇಷ್ಠಳಾದ ಭಕ್ತಿಪೂರಿತ ಜೀವನದ ಸಂಗಾತಿ ಇದ್ದರು. ಆಕೆ ಇವರಿಗೆ ಮುನ್ನವೇ ತೀರಿಕೊಂಡರು.

೧೯೫೩ರಲ್ಲಿ ರಾಮದಾಸನ ಪ್ರವಾಸ ಕಾಲದಲ್ಲಿ ಕೃಷ್ಣಾಬಾಯಿ ಬಡ ಹರಿಜನ ಸಂಸಾರಿಗಳಿಗೆ ಎರಡು ಮತ್ತು ಆಶ್ರಮದ ಕೆಲಸಗಾರರಿಗಾಗಿ ಮೂರು ಮನೆಗಳನ್ನು ಕಟ್ಟಿಸಿದಳು. ಈ ಕಾರ್ಯದಲ್ಲಿ ತಾನೇ ಸ್ವತಃ ಮೇಲ್ವಿಚಾರಣೆ ತೆಗೆದುಕೊಂಡಳು. ಭಜನೆಮಂದಿರ ಮತ್ತು ಇತರ ಕಟ್ಟಡಗಳಿಗೆ ಬಣ್ಣ ಹಾಕಿಸಿದುದಲ್ಲದೆ ಆಶ್ರಮದ ಪವಳಿಯಲ್ಲಿ ಹೊಸ ರಸ್ತೆಗಳನ್ನು ಮತ್ತು ಇತರ ಪರಿಷ್ಕರಣಗಳನ್ನು ಕಲ್ಪಿಸಿದಳು.

ಹಳೆಯ ಗೋಶಾಲೆ ವೃದ್ಧಿಯಾಗುತ್ತಿದ್ದ ದನಗಳ ಸಂಖ್ಯೆಗೆ ಸಾಕಾಗುತ್ತಿರಲಿಲ್ಲವಾಗಿ ದೊಡ್ಡದು ಇನ್ನೊಂದನ್ನು ಕಟ್ಟಲಾಗಿದೆ. ದ್ರವ್ಯಾಭಾವದಿಂದ ಗರಿಯ ಛಾವಣಿ ಕಟ್ಟಡವನ್ನು ಮಾತ್ರ ಕಟ್ಟಲಾಯಿತು. ಆದರೆ ಈ ಕಟ್ಟಡ ಬಹು ವಿಶಾಲವಾಗಿದೆ. ಇದರ ಯೋಜನೆಯನ್ನು ಮಾಡಿದ್ದು ಕೂಡ ಕೃಷ್ಣಾಬಾಯಿ. ಕೆಲಸ ನಡೆದದ್ದೂ ಆಕೆಯ ಸ್ವಂತ ಮೇಲ್ವಿಚಾರಣೆಯಲ್ಲಿ.

ಆಶ್ರಮದ ತೀರ ಪ್ರಾರಂಭದಿಂದಲೇ ಸಾಧುಗಳು ದಿನವೂ ಬರಲು ಮೊದಲಿಟ್ಟರು. ಕಾಲಕ್ರಮದಲ್ಲಿ ಇವರ ಸಂಖ್ಯೆ ಎಷ್ಟರಮಟ್ಟಿಗೆ ಏರಿತೆಂದರೆ, ಇವರಿಗೆ ಸ್ಥಳವನ್ನು ದೊರೆಯಿಸುವುದು ಒಂದು ಸಮಸ್ಯೆಯಾಯಿತು. ಆದ್ದರಿಂದ ಇವರ ಉಪಯೋಗಕ್ಕಾಗಿ ಪ್ರತ್ಯೇಕ ಕಟ್ಟಡವನ್ನು ಕಟ್ಟಿದೆವು. ಇದಕ್ಕೆ ಸಾಧು ಧರ್ಮಶಾಲೆಯೆಂದು ಹೆಸರು. ರಾಮದಾಸನು ಪ್ರಾಪಂಚಿಕವನ್ನು ತ್ಯಜಿಸಿದ ನಂತರ ಅವನ ಪ್ರಥಮ ವರ್ಷದ ಪರಿವ್ರಾಜಕ ಜೀವನದಲ್ಲಿ ಅವನು ಹಿಂದಿನ ಪುಸ್ತಕಗಳಲ್ಲಿ ಉಕ್ತವಾಗಿರುವಂತೆ ಸಾಧು ಸಂನ್ಯಾಸಿಗಳ ಜೊತೆಯಲ್ಲಿ ಸಂಚರಿಸುತ್ತಿದ್ದನು. ಅವನನ್ನು ವಿಶೇಷ ಎಚ್ಚರಿಕೆ ಮತ್ತು ಪ್ರೀತಿಯಿಂದ ನೋಡಿಕೊಂಡವರು ನಿಜವಾಗಿ ಇವರು. ಇವರ ಸಂಗದಲ್ಲಿಯೇ ರಾಮದಾಸನು ಕಠಿಣ ಸಾಧನೆಗಳನ್ನು ಮಾಡಿದ್ದು. ತಮಗೆ ಇಷ್ಟವಿರಲಿ ಇಲ್ಲದಿರಲಿ, ಇವರು ಅವನನ್ನು ಕುರಿತ ಗಾಢವಾದ ಪ್ರೇಮದ ಕಾರಣದಿಂದ ಇವುಗಳಲ್ಲಿ ಭಾಗವಹಿಸಿದ್ದರು. ಈ ಅಲೆಯುವ ಭಿಕ್ಷುಕರು ಆಶ್ರಮಕ್ಕೆ ಬಂದಾಗ ಅವರಿಗೆ ಈ ಕಾರಣದಿಂದ ಊಟ ಮತ್ತು ವಸತಿ ನೀಡಲಾಗುತ್ತಿದೆ.

ರಾಮದಾಸನಿಗೆ ಅವರನ್ನು ಕಂಡೊಡನೆಯೇ ಅವರ ಸಂಗದಲ್ಲಿ ಕಳೆದ ಅಬಾಧಿತ ಸ್ವಾತಂತ್ರ್ಯ ಸಂತೋಷದ ಆ ಸ್ಮರಣೀಯ ದಿನಗಳ ನೆನಪು ಉಂಟಾಗುತ್ತದೆ.

ತನ್ನ ಕೊನೆಯ ದಿವಸಗಳನ್ನು ಆಶ್ರಮದಲ್ಲಿ ಕಳೆದ ಒಬ್ಬ ದೊಡ್ಡ ಭಕ್ತ ಹೆಬ್ಲೆ ಅಣ್ಣಪ್ಪಯ್ಯ ಎಂಬುವರ ಶ್ರೇಷ್ಠ ಜ್ಞಾಪಕವಾಗಿ ಅವರ ಮಕ್ಕಳು, ಮುಖ್ಯವಾಗಿ ಆಶ್ರಮದ ಮೇಲೆ ಗಾಢವಾದ ಅಭಿಮಾನವಿಟ್ಟುಕೊಂಡಿರುವ ಗಣೇಶ ಹೆಬ್ಲಿಕರ್, ತಂದೆ ಅಣ್ಣಪ್ಪಯ್ಯನ ಅಸ್ಥಿಮೇಲೆ ಒಂದು ಸಮಾಧಿಯನ್ನು ಕಟ್ಟಿದ್ದಾರೆ. ಇದು ಆಶ್ರಮದ ಪವಳಿಯಲ್ಲಿ ಸಾಧು ಧರ್ಮಶಾಲೆಗೆ ಅಭಿಮುಖವಾಗಿರುವುದನ್ನು ಕಾಣಬಹುದು. ಇದರ ಮೇಲೆ ಅವನ ಹೆಸರು ಮುತ್ತು ಜನನ ಮುತ್ತು ಮರಣದ ತಾರೀಖುಗಳನ್ನು ಕೆತ್ತಿರುವ ಒಂದು ಅಮೃತಶಿಲೆಯ ಹಲಗೆ ಇದೆ.

**ಸಮ್ಮೇಳನಗಳು**

ಪ್ರಿನ್ಸಿಪಾಲ್ ಎನ್. ಬಿ. ಬುಟಾನಿ ಆಶ್ರಮದಲ್ಲಿ ೧೯೩೮ನೇ ಇಸ್ವಿ ಕ್ರಿಸ್‌ಮಸ್ ರಜದಲ್ಲಿ ಒಂದು ಸಮ್ಮೇಳನವನ್ನು ಏರ್ಪಡಿಸಬೇಕೆಂದು ಸೂಚಿಸಿದನು. ಅವನು ಇಂಡಿಯದೇಶದ ವಿವಿಧ ಭಾಗಗಳಲ್ಲಿ ವಾಸಿಸುತ್ತಿದ್ದ ಆಶ್ರಮದ ಸ್ನೇಹಿತರಿಗೆ ಆಹ್ವಾನಗಳನ್ನು ಕಳುಹಿಸಿದನು. ಈ ಕೂಟಕ್ಕೆ ಏರ್ಪಾಡುಗಳು ದೊಡ್ಡ ಅಳತೆಗಳಲ್ಲಾದವು. ವಿಶೇಷತರದ ಚಪ್ಪರಗಳನ್ನು ನಿರ್ಮಿಸಿ ಅವುಗಳನ್ನು ಸುಂದರವಾಗಿ ಅಲಂಕರಿಸಲಾಯಿತು. ಉತ್ಸವದ ದಿನಗಳು ಹತ್ತಿರವಾದ ಹಾಗೆ ಭಕ್ತರು ಮುತ್ತು ಸ್ನೇಹಿತರು ಬಂದು ತುಂಬಲು ಆರಂಭಿಸಿದರು. ಉತ್ಸವದ ಮುಖ್ಯ ದಿನಗಳಲ್ಲಿ ವಿಶೇಷ ಸಂಖ್ಯೆಯ ಜನ ಇದ್ದರು. ಆಶ್ರಮ ಚಟುವಟಿಕೆಯಿಂದ ಝೇಂಕರಿಸುತ್ತಿದ್ದಿತು. ಆಶ್ರಮದಲ್ಲಿ ಅಲ್ಲಿಯುವರೆಗೂ ಅಂಥ ಸಮ್ಮೇಳನ ನಡೆದಿರಲಿಲ್ಲ. ಆ ದಿನಗಳಲ್ಲಿ ನೋಡಬೇಕಾಗಿದ್ದಿತು ಕೃಷ್ಣಾಬಾಯಿಯನ್ನು. ಹೇಗೆ ಆಕೆಯ ಪ್ರಭಾವಂತಮೂರ್ತಿ ಎಲ್ಲ ಕೆಲಸಗಾರರಿಗೆ ಅವರವರಿಗೆ ನಿಯಮಿಸಿದ್ದ ಕಾರ್ಯಗಳನ್ನು ಶಕ್ತಿ ಉತ್ಸಾಹಗಳಿಂದ ನಡೆಸಿಕೊಂಡು ಹೋಗುವಂತೆ ಸ್ಫೂರ್ತಿ ಕೊಡುತ್ತ ಜ್ಯೋತಿಯ ಮಿಂಚಿನಂತೆ ಚರಿಸುತ್ತಿದ್ದಿತು. ಯಾವುದರ ಕೊರತೆಯೂ ಇರಲಿಲ್ಲ. ಕಾರ್ಯಕ್ರಮದಲ್ಲಿ ಮುಖ್ಯವಾದ ವಿಚಾರ ಸಂತರ್ಪಣೆ. ಸಾವಿರಗಳ ಮೇಲೆ ಸಾವಿರ ಜನರಿಗೆ ಬೆಳಗಿನಿಂದ ರಾತ್ರಿ ಬಹಳ ಹೊತ್ತಿನವರೆಗೂ ಅನ್ನವನ್ನು ನೀಡಲಾಯಿತು. ಅದು ಎಂದೆಂದಿಗೂ ಮರೆಯಲಾಗದ ಅತ್ಯಂತ ಆನಂದಕರವಾದ ಅನುಭವ. ರಾಮದಾಸನು ಈ ಪೂರ್ಣ ಲೀಲೆಯನ್ನು ಅಲ್ಪಸ್ವಲ್ಪವಲ್ಲದ ಸಂತೋಷದಿಂದ ಈಕ್ಷಿಸುತ್ತಿದ್ದನು. ಮುತ್ತು ಬೇರೆ ಬೇರೆ ಜಾತಿ ಮತ ಮುತ್ತು ದೇಶಗಳಿಗೆ ಸೇರಿದ ಜನರು, ಆಧ್ಯಾತ್ಮಿಕ ಬಾಂಧವ್ಯದ ಕಾರಣದಿಂದ ಒಬ್ಬರೊಂದಿಗೆ ಒಬ್ಬರು ಸ್ನೇಹಿತರಂತೆ, ಸಹೋದರರಂತೆ, ಬೆರೆಯುತ್ತಿರುವುದನ್ನು ಕಂಡನು. ಸತ್ಯವಾಗಿ ಮನುಷ್ಯಜನ್ಮ ನಿಜವಾದ ಸುಖವನ್ನು ಹೊಂದುವುದು, ಮಾನವ ಕೋಟಿಯ ಎಲ್ಲ ವ್ಯಕ್ತಿಗಳನ್ನು ಏಕ ಮಾತ್ರವಾದ ವಿಶ್ವಸಂಸ್ಥೆ ಅಥವ ವಿಶ್ವಸಂಸಾರ

ದಲ್ಲಿ ಕೂಡಿಕೊಳ್ಳುವಂತೆ ಮಾಡುವ ಅಂತರ್ಯಾಮಿಸತ್ಯದ ದರ್ಶನ ದೊರೆತಾಗ ಮಾತ್ರವೇ. ಇಲ್ಲಿ ಅಹಂಭಾವದ ಸಂಪೂರ್ಣ ಅಭಾವದಲ್ಲಿ ಸತ್ಯದಚೇತನ ಪ್ರಕಟಕ್ಕೆ ಬರುತ್ತದೆ. ಇದರಲ್ಲಿ ಎಲ್ಲ ಭೇದಭಾವಗಳು ಅಳಿಯುತ್ತವೆ; ಮತ್ತು (ಪ್ರತಿಯೊಬ್ಬನು ಶಾಶ್ವತ ಆನಂದವನ್ನು ಅನುಭವಿಸುತ್ತಾನೆ.) ಆಗ್ಗೆ ರಾಮದಾಸನ ಆರೋಗ್ಯ ತೃಪ್ತಿಕರವಾಗಿಲ್ಲದಿದ್ದರೂ ಅವನಿಗೆ ಆಕಾಲದಲ್ಲೆಲ್ಲಾ ಮತ್ಯಾವುದೂ ಇಲ್ಲದೆ ಆನಂದಾನುಭವ ಮಾತ್ರ ಇದ್ದುದರಿಂದ, ಸ್ವಲ್ಪವೂ ಆಯಾಸ ಕಾಣದೆ ಎಲ್ಲ ಸಮಾರಂಭಗಳಲ್ಲೂ ಭಾಗವಹಿಸುವುದು ಸಾಧ್ಯವಾಯಿತು. ಅದು ನಿಜವಾಗಿ ಆಶ್ರಮದ ಜೀವನದಲ್ಲಿ ಸ್ಮೃತಿಯೋಗ್ಯವಾದ ಘಟನೆ.

೧೯೫೦ನೇ ಇಸವಿ ಡಿಸೆಂಬರ್ ಮೇಳವು ಅನೇಕ ವಿಚಾರಗಳಲ್ಲಿ ಗಮನಾರ್ಹ ವಾದುದು. ಮುಖ್ಯವಾಗಿ ಅದು ಹಾಗಿದ್ದುದು, ಆಗ್ಗೆ ಒಂದು ಸಮ್ಮೇಳನವಾಗುತ್ತದೆ ಎಂಬ ನಿರೀಕ್ಷಣೆಯೇ ಇಲ್ಲದೆ, ಅಧಿಕ ಸಂಖ್ಯೆಯ ಭಕ್ತರು ಅಲ್ಲಿಗೆ ಬಂದು ಒಂದಿಗೆ ಸೇರಿದ್ದರಿಂದ. ಬಂದ ಪ್ರತಿಯೊಬ್ಬರೂ ಇತರರ್ಯಾರಾದರೂ ಬರುತ್ತಾರೆಂದು ತಿಳಿಯದೆ ಬಂದು ಸೇರಿದರು.

## ವಿದ್ಯುದ್ದೀಪ

("ಭಗವಂತ ತನ್ನ ಭಕ್ತನ ಸತ್ಯಸಂಕಲ್ಪವನ್ನು (ಪರಿಶುದ್ಧ ಇಚ್ಛೆಯನ್ನು) ಪೂರ್ಣ ಮಾಡುವವನು. ಭಕ್ತ ಯೋಜನೆಯನ್ನು ಮಾಡುತ್ತಾನೆ, ಭಗವಂತ ಅದನ್ನು ನಡೆಸುತ್ತಾನೆ") ಎನ್ನುವುದು ಮಹಾರಾಷ್ಟ್ರದಲ್ಲಿ ಬಹು ಸಲ ಉದಾಹರಿಸುವ ಒಂದು ಸಂತವಾಕ್ಯ. ರಾತ್ರಿ ಹೊತ್ತು ತತ್ರಾಪಿ ಕತ್ತಲು ಕಾಲಗಳಲ್ಲಿ ಆಶ್ರಮದವರಿಗೂ ಮತ್ತು ಪ್ರೇಕ್ಷಕರಿಗೂ ಆಶ್ರಮದ ಜಾಗಗಳಲ್ಲಿ ಓಡಾಡುವುದು ಕಷ್ಟವಾಗಿ ಕಂಡು ಬಂದಿತು. ಇಷ್ಟೇ ಅಲ್ಲದೆ ಆಶ್ರಮದ ಪವಳಿಯಲ್ಲಿ ಎಲ್ಲ ತರದ ಹಾವುಗಳು ಹರಿದಾಡುತ್ತಿದ್ದವು. ಕಟ್ಟಡಗಳು ಮತ್ತು ಎಲ್ಲ ರಸ್ತೆ ಮತ್ತು ಹಾದಿಗಳು ಚನ್ನಾಗಿ ಪ್ರಕಾಶವಾಗಿರಲು ವಿದ್ಯುಚ್ಛಕ್ತಿ ತಯಾರಿಕೆಯ ಸಾಧನವಿದ್ದರೆ ಒಳ್ಳೆಯದೆಂದು ರಾಮದಾಸನಿಗೆ ತೋರಿತು. ಈ ಇಚ್ಛೆಯನ್ನು ಅವನು ಕೆಲವು ಸ್ನೇಹಿತರೆದುರಿನಲ್ಲಿ ತಿಳಿಸಿದನು. ಭಗವಂತ ಆಶ್ರಮದಲ್ಲಿ ಒಂದು ವಿದ್ಯುಚ್ಛಕ್ತಿಯ ಉತ್ಪನ್ನದ ಸಾಧನ ಸ್ಥಾಪಿತವಾಗುವಂತೆ ನೋಡಿಕೊಳ್ಳುವುದರಲ್ಲಿ ನಿಧಾನ ಮಾಡಲಿಲ್ಲ. ರಾತ್ರಿಯಲ್ಲಿ ಸುತ್ತಲೂ ಮೈಲಿಗಟ್ಲೆ ವಿಶೇಷ ಪ್ರಕಾಶದ ದುಂಡು ದೀಪದ ಬೆಳಕು ಕಾಣುತ್ತ ಈಗ ಆಶ್ರಮ ದೂರದಿಂದ ಗಂಧರ್ವ ಲೋಕದಂತೆ ಕಾಣುತ್ತದೆ. ಈ ಸಂದರ್ಭದಲ್ಲಿ "ಭಗವಂತ ಬೆಳಕು ಆಗಲಿ ಎಂದ, ಬೆಳಕು ಆಗಿಯೇ ಆಯಿತು" ಎಂಬ ಕ್ರೈಸ್ತ ವೇದದ ವಾಕ್ಯ ರಾಮದಾಸನ ನೆನಪಿಗೆ ಬರುತ್ತದೆ. ಹಾಗೆ ಇಲ್ಲಿ ಆಯಿತು.

ದುಂಡು ದೀಪವನ್ನು ಹಾಕಿರುವ ಎತ್ತರವಾದ ಕಂಬಕ್ಕೆ ಒಂದು ಕಾವಿಯ ನಿಶಾನೆಯನ್ನು ಸಹ ಕಟ್ಟಿದೆ. ಇದು ತ್ಯಾಗ ಪ್ರೀತಿ ಮತ್ತು ಸೇವೆಗಳನ್ನು ಸೂಚಿಸುವ ಆಶ್ರಮದ ಲಾಂಛನವಾಗಿದೆ.

## ಶ್ರೀ ಕೃಷ್ಣಾ ವಿದ್ಯಾಲಯ

ರಾಮನಗರ ಮತ್ತು ಸುತ್ತಣ ಹಳ್ಳಿಗಳಲ್ಲಿ ವಾಸಿಸುವ ಮಕ್ಕಳಿಗೆ ವಿದ್ಯವನ್ನು ಹೇಳಿಕೊಡಲು ರಾಮನಗರದಲ್ಲಿ ಒಂದು ಪ್ರಾಥಮಿಕ ಶಾಲೆಯನ್ನು ಆರಂಭಿಸಬೇಕೆಂಬ ರಾಮದಾಸನ ಇಚ್ಛೆಯನ್ನು ಭಗವಂತನು ಪೂರ್ಣ ಮಾಡಿದನು. ಈ ಕಟ್ಟಡದ ಅಸ್ತಿಭಾರವನ್ನು ಕೃಷ್ಣಾಬಾಯಿ ೧೯೪೦ನೆ ಇಸ್ವಿಯಲ್ಲಿ ತನ್ನ ಹುಟ್ಟಿದ ಹಬ್ಬದ ದಿನ ಹಾಕಿದಳು. ಆ ಸಮಾರಂಭದಲ್ಲಿ ಹೆಚ್ಚು ಸಂಖ್ಯೆಯ ಭಕ್ತರು ಸೇರಿ ರಾಮನಾಮ ಸಂಕೀರ್ತನವನ್ನು ನಡೆಸಿದರು. ಈ ಕಾರ್ಯ ನಡೆದ ಸಮಯದಲ್ಲಿ ಸರ್ವರೂ ಅಚಲಿತ ಶ್ರದ್ಧೆ ಮತ್ತು ಪೂರ್ಣ ನಂಬಿಕೆಯಿಂದ ಸೇರಿದ್ದು, ವಾತಾವರಣದಲ್ಲಿ ಆನಂದಮಯವಾದ ನಿರೀಕ್ಷಣೆಯ ಪುಳಕವಿದ್ದುದರಿಂದ ಭಗವಂತನು ಈ ಉದ್ಯಮವನ್ನು ಹರಸಿದನೆಂದು ನಮಗೆ ಸ್ಪಷ್ಟವಾಗಿ ಅನುಭವವಾಯಿತು.

ಬೆಂಗಳೂರಿನ ಇಂಜನಿಯರಿಂಗ್ ಕಾಲೇಜಿನ ನಿವೃತ್ತ ಪ್ರಿನ್ಸಿಪಾಲ್ ಬಿ. ಕೃಷ್ಣಸ್ವಾಮಿ ಐಯ್ಯಂಗಾರ್ ಮತ್ತು ಮೈಸೂರು ಸರ್ಕಾರದ ನಿವೃತ್ತ ಎಕ್ಸಿಕ್ಯುಟಿವ್ ಇಂಜನಿಯರ್ ವಿ. ವಿ. ಪಟಂಕರ್ ಇವರು ಕಟ್ಟಡದ ಅವಶ್ಯಕವಾದ ನಕ್ಷೆಗಳನ್ನು ತಯಾರಿಸಿದರು.

ವೀಣಾಪಾಣಿಯಾಗಿ ನಿಂತಿರುವ ಸುಂದರವಾಗಿ ಬಣ್ಣ ಹಾಕಿರುವ ಒಂದು ಸರಸ್ವತಿ ದೇವತೆಯ ಸಿಮೆಂಟಿನ ವಿಗ್ರಹ ವಿದ್ಯಾಲಯದ ಮುಂಭಾಗದ ಗೋಡೆಯ ಒಂದು ಗೂಡಿನಲ್ಲಿ ಪ್ರತಿಷ್ಠಿತವಾಗಿದೆ. ಸರಸ್ವತಿದೇವಿ ವಿದ್ಯೆಯ (ಜ್ಞಾನದ) ಅಭಿಮಾನದೈವ. ಆಕೆ ನಮ್ಮ ವಿದ್ಯಾ ಸಂಸ್ಥೆಯ ಮೇಲೆ ಆಧಿಪತ್ಯ ನಡೆಸುತ್ತಾಳೆ ಮತ್ತು ನಿಜವಾಗಿಯೂ ಆಕೆಯ ಅನುಗ್ರಹ ಅದರ ಮೇಲೆ ವಿಪುಲವಾಗಿ ಸುರಿಯುತ್ತಿದೆ. ಶಾಲೆಗೆ ಶ್ರೀ ಕೃಷ್ಣಾ ವಿದ್ಯಾಲಯವೆಂದು ಹೆಸರಿಟ್ಟಿದೆ. ಇದರ ಪ್ರವೇಶೋತ್ಸವ ೧೯೪೭ರಲ್ಲಿ ರಾಮದಾಸನ ಜನ್ಮೋತ್ಸವದ ದಿನ ನಡೆಯಿತು. ಇದು ಆಶ್ರಮದ ಸುತ್ತ ಮುತ್ತ ನಿರ್ದಿಷ್ಟ ಯೋಚನೆ ಇಲ್ಲದೆ ಅಲೆದಾಡಿ ಕಾಣಿಸುತ್ತಿದ್ದ ಬಡವರಾದ, ನಿರ್ಗತಿಕರಾದ, ರಕ್ಷಕರಿಲ್ಲದ ಮಕ್ಕಳಿಗೆ ಒಂದು ಹೊಸ ಜೀವನದ ಆರಂಭೋತ್ಸವ ಆಗಿದ್ದಿತು. ರಾಮದಾಸನ ಬಹು ಇಷ್ಟದ ಬಯಕೆ ಪೂರ್ಣವಾಯಿತು. ಭಗವಂತನ ಕೃಪೆ ನಿಜವಾಗಿಯೂ ಸಮೃದ್ಧವಾದದ್ದು.

ವಿದ್ಯಾರ್ಥಿಗಳಿಗೆ ಓದು ಬರಹ ಗಣಿತಗಳ ಪಾಠ ಹೇಳಿಕೊಡುವುದಲ್ಲದೆ ರಾಟೆ ನೂಲುವುದು, ಮಂಕರಿ ಹೆಣೆಯುವುದು, ಮಣ್ಣಿನ ವಿಗ್ರಹ ಮಾಡುವುದು, ನಾರಿನ ಕೆಲಸ ಮುಂತಾದ ಉಪಕಸಬುಗಳ ಅಭ್ಯಾಸವನ್ನು ಸೇರಿಸಿದೆವು. ಮಕ್ಕಳಿಗೆ ತೋಟದ ಕೆಲಸ ಮತ್ತು ತರಕಾರಿ ಬೆಳೆಯುವುದು ಇವುಗಳಲ್ಲೂ ಶಿಕ್ಷಣ ಕೊಡುತ್ತದೆ. ಅವರಿಗೆ ವಾಡಿಕೆಯ ಬಯಲು ಆಟಗಳಲ್ಲದೆ, ಕೋಲಾಟ ಮತ್ತು ಲಜೀಮ್ ಈ ಮನೆಯೊಳಗಿನ ಆಟಗಳೂ ಉಂಟು. ವಿದ್ಯಾಲಯಕ್ಕೆ ಹರಿಜನರು

ಮತ್ತು ಮುಸ್ಲಿಮರನ್ನು ಒಳಗೊಂಡು ಎಲ್ಲ ತರಗತಿ ಮತ್ತು ಎಲ್ಲ ಮತಗಳ ಮಕ್ಕಳನ್ನು ಸೇರಿಸಿಕೊಳ್ಳುತ್ತೇವೆ.

ಪ್ರತಿ ದಿನವೂ ಮಕ್ಕಳಿಗೆ ಭೋಜನ ಗೃಹದಲ್ಲಿ ಊಟಕ್ಕೆ ಮುಂಚೆ ಸ್ನಾನ ಮತ್ತು ಒಗೆದ ಬಟ್ಟೆಗಳ ಕಟ್ಟನ್ನು ಕೊಡಲಾಗುತ್ತಿದೆ. ಪ್ರಾರ್ಥನೆಯಾದ ನಂತರ ಅವರು ಊಟ ಮಾಡುತ್ತಾರೆ. ನಂತರ ತರಗತಿಗಳು ಪ್ರಾರಂಭವಾಗುವಾಗ ಎಲ್ಲ ವಿದ್ಯಾರ್ಥಿಗಳು ಶಾಲೆಯ ನಡುಮನೆಯಲ್ಲಿ ಸೇರಿ ಮತ್ತೆ ಸ್ತೋತ್ರವನ್ನು ಪಠಿಸುತ್ತಾರೆ. ಮಕ್ಕಳು ಶುಚಿಯಾಗಿಯೂ, ಸುಟಿಯಾಗಿಯೂ, ಸೂಕ್ಷ್ಮ ಬುದ್ಧಿ ಯವರಾಗಿಯೂ ಕಾಣುತ್ತಾರೆಂದೂ ಮತ್ತು ಶುಚಿತ್ವದಲ್ಲಾಗಲಿ, ಮುಖ ಮುದ್ರೆ ಯಲ್ಲಾಗಲೀ ಉತ್ತಮ ವರ್ಣದ ಮಕ್ಕಳನ್ನು ಹರಿಜನರ ಮಕ್ಕಳಿಂದ ಪ್ರತ್ಯೇಕಿಸ ಲಾಗುವುದಿಲ್ಲವೆಂದೂ ಪ್ರೇಕ್ಷಕರು ತಿಳಿಸಿದ್ದಾರೆ. ಭಗವಂತನ ಜ್ಯೋತಿ ಎಲ್ಲರಲ್ಲೂ, ಅವರು ಯಾವ ಪಂಕ್ತಿಗೆ ಸೇರಿರಲಿ, ಒಂದೇ ಸಮನಾಗಿ ನಿವಸಿಸುತ್ತದೆ. ಈ ಜ್ಯೋತಿ ಹೊರಗೆ ಪ್ರಕಾಶವಾಗಲು, ಇದಕ್ಕೆ ಸನ್ನಿವೇಶಗಳನ್ನು ದೊರಕಿಸಲೇಬೇಕು. ಜನ್ಮ ಮತ ಮತ್ತು ಇತರ ಕಾರಣಗಳಿಂದುಂಟಾದ ಮಾನವಕೃತ ಭೇದಗಳು ಪೂರ್ಣವಾಗಿ ಅಸ್ವಾಭಾವಿಕ ಮತ್ತು ಅರ್ಥವಿಹೀನ.

ವಿದ್ಯಾಲಯದ ಮಧ್ಯದ ಕೊಟಡಿಯನ್ನು ಶಾಲೆಯ ಕೆಲಸದ ಆದಿ ಮತ್ತು ಅಂತ್ಯಭಾಗಗಳಲ್ಲಿ ಶಾಲಾ ಮಕ್ಕಳು ಮತ್ತು ಅಧ್ಯಾಪಕರು ಸ್ತೋತ್ರಮಂದಿರವಾಗಿ ಉಪಯೋಗಿಸುತ್ತಾರೆ. ಈ ಕೊಟಡಿಯಲ್ಲಿ ಗೋಡೆಗಳ ಮೇಲೆ ಆಶ್ರಮದ ಭಕ್ತರು ಕೊಟ್ಟಿರುವ ಶ್ರೀ ರಾಮಕೃಷ್ಣ ಪರಮಹಂಸ ಸ್ವಾಮಿವಿವೇಕಾನಂದ ಶ್ರೀ ರಮಣ ಮಹರ್ಷಿ ಇವರ ಚಿತ್ರಗಳಿವೆ. ಶಾಲೆಯ ದೊಡ್ಡ ಕೊಟಡಿಗಳೊಂದರಲ್ಲಿ ಪ್ರತಿ ಗುರುವಾರವೂ ಆ ದಿನ ಶಾಲೆ ಮುಚ್ಚುವ ಮುನ್ನ ಮಕ್ಕಳು ಭಜನೆ ನಡೆಸುತ್ತಾರೆ. ಮಿತ್ರರು ಈ ಸಂಸ್ಥೆಗೆ ಬೆಂಚುಗಳು, ನಕ್ಷೆಗಳು, ಚಿತ್ರಗಳು, ಸ್ಲೇಟುಗಳು, ಗ್ರಂಥಾ ಲಯದ ಪುಸ್ತಕಗಳು, ಆಟಗಳ ಸಾಮಾನುಗಳು ಮತ್ತು ಶಾಲೆಯ ಉಪಯೋಗ ಕ್ಕಾಗಿ ಇತರ ಸಾಮಾನುಗಳನ್ನು ದಾನ ಮಾಡಿದ್ದಾರೆ. ಶಾಲೆ ಪ್ರತಿವರ್ಷ ಅದರ ಪ್ರವೇಶೋತ್ಸವದ ದಿನ ಮತ್ತು ಇತರ ಧಾರ್ಮಿಕ ಮತ್ತು ದೇಶೀಯ ಪ್ರಮುಖ ದಿನಗಳನ್ನು ಆಚರಿಸುತ್ತದೆ.

## ಶ್ರೀ ಕೃಷ್ಣಾ ಉದ್ಯೋಗ ಶಾಲೆ

ಆಶ್ರಮ ಕೈಗೊಂಡಿದ್ದ ವಿದ್ಯಾ ಪ್ರಸಾರದ ಕೆಲಸದ ಜೊತೆಗೆ ಮಕ್ಕಳಿಗೆ ಪ್ರಾಥಮಿಕ ಅಭ್ಯಾಸ ಪೂರೈಸಿದನಂತರ ಕೆಲವು ಕೈಗಾರಿಕೆಗಳಲ್ಲಿ ಶಿಕ್ಷಣ ಕೊಡಲು ಒಂದು ಕೈಗಾರಿಕೆ ಶಾಲೆಯನ್ನು ತೆರೆಯಬೇಕೆಂದು ಮನಸ್ಸಿಗೆ ತೋರಿತು. ಇದಕ್ಕಾಗಿ ನಾವು ಆಶ್ರಮಕ್ಕೆ ಎಸ್. ಆರ್. ಯು. ಸವೂರ್‌ರವರು ದಾನಮಾಡಿದ್ದ ಜಮೀನಿ ನಲ್ಲಿದ್ದ ಮನೆಯನ್ನು ಪ್ರಾರಂಭದಲ್ಲಿ ಉಪಯೋಗಿಸಿದೆವು. ಕೈಮಗ್ಗಗಳನ್ನು ಸ್ಥಾಪಿಸಲು ಆ ಮನೆಯ ಮುಂಭಾಗದಲ್ಲಿ ಒಂದು ಗರಿಯ ಗುಡಿಸಲನ್ನು ಕಟ್ಟಿದ್ದೆವು.

ಮನೆಯ ಕೈಸಾಲೆಯಲ್ಲಿ ಚರ್ಮ ಮತ್ತು ಕೊಂಬಿನ ಸಾಮಾನುಗಳ ತಯಾರಿಕೆಯ ತರಗತಿಗಳನ್ನು ನಡೆಸಿದೆವು. ಈ ತಾತ್ಕಾಲಿಕ ಏರ್ಪಾಡಿನ ಸ್ಥಳ ಸಾಲದಾಗಿದೆಯೆಂದು ನಮಗೆ ತೋರುತ್ತಿದ್ದಿತು ಹೊಸದಾದ ಒಂದು ಭದ್ರವಾದ ಕಟ್ಟಡವನ್ನು ಕಟ್ಟುವ ಯೋಚನೆ ಸಹಜವಾಗಿ ರೂಪುಗೊಂಡಿತು. ಹಣಕ್ಕಾಗಿ ಒಂದು ಕೋರಿಕೆಯನ್ನು ಮಾಡಲಾಯಿತು. ಷಷ್ಟ್ಯಬ್ದಪೂರ್ತಿ ನಿಧಿಯ ಶೇಖರಣೆಯಲ್ಲಿ ಪ್ರಮುಖ ಭಾಗವನ್ನು ತೆಗೆದುಕೊಂಡಿದ್ದ ಶಂಕರಮುಲ್ಲಾಪುರನು ತನ್ನ ಧಣಿ ಶ್ರೀ ಭೋಗಿಲಾಲ್ ಪಟೇಲನನ್ನು ಈ ಕಟ್ಟಡಕ್ಕೆತಗಲಿದ ೨೮೪೫೩-೬-೩ ರೂಪಾಯಿಗಳ ಪೂರ್ತ ಖರ್ಚನ್ನು ವಹಿಸು ಎಂದು ಕೋರಿದನು. ಆತನು ಇದನ್ನು ಆ ಮೇಲ್ಕಂಡ ನಿಧಿಗೆ ತನ್ನ ಹೆಂಡತಿ ಇಚ್ಛಾಬಾಯ್ ಭೋಗಿಲಾಲ್ ಎಚ್. ಪಟೇಲ್ ಈಕೆಯ ಹೆಸರಿನಲ್ಲಿ ಅವಳ ಕಾಣಿಕೆಯಾಗಿ ಸುಸಮ್ಮತಿಯಿಂದ ಒಪ್ಪಿಸಿದನು. ಆತನು ಈ ಕಟ್ಟಡವನ್ನು ಕೈಗಾರಿಕಾ ಉದ್ದೇಶ ವಿನಾ ಮತ್ಯಾವುದಕ್ಕೂ ಎಂದಿಗೂ ಉಪಯೋಗಿಸಕೂಡದೆಂದು ನಿಯಮಿಸಿದ್ದಾನೆ. ಕಟ್ಟಡದ ನಕ್ಷೆ ಆಗ್ಗೆ ಆಶ್ರಮಕ್ಕೆ-ದೈವವಶಾತ್-ಭೇಟಿಗಾಗಿ ಬಂದಿದ್ದ ಶ್ರೀ ಡಿ. ಜಿ. ಕರಂಜಗಾಂವ್‌ಕರ್ ಎಂಬ ಬೊಂಬಾಯಿಯ ಸುಪ್ರಸಿದ್ಧ ಶಿಲ್ಪಕಾರನಿಂದ ತಯಾರಾಯಿತು. ಇದು ಶಾಲಾ ಆವರಣದಲ್ಲಿ ಸುಂದರವಾದ ವಿಸ್ತಾರವಾದ ಮತ್ತು ಚೆನ್ನಾಗಿ ಗಾಳಿ ಬೆಳಕು ಆಡುವ ಕಟ್ಟಡ. ಇದಕ್ಕೆ ಶ್ರೀ ಕೃಷ್ಣಾ ಉದ್ಯೋಗಶಾಲ ಎಂದು ಹೆಸರಿಟ್ಟಿದೆ. ಇದರ ಪ್ರಾರಂಭೋತ್ಸವವನ್ನು ಕೃಷ್ಣಾಬಾಯಿ ೪೪ನೇ ವರ್ಷ ವರ್ಧಂತಿಯಾದ ೧೯೪೬ನೇ ಇಸ್ವಿ ಸೆಪ್ಟಂಬರ್ ೨೫ರ ದಿನ ನಡೆಸಲಾಯಿತು. ಉದ್ಯೋಗಶಾಲೆಯ ಸಾಧನಸಾಮಗ್ರಿ ಮತ್ತು ನಡೆವಳಿಯ ವೆಚ್ಚಗಳಿಗಾಗಿ ಮಿತ್ರರು ಸಹಾಯ ಮಾಡಿದರು. ತಾತ್ಕಾಲಿಕವಾಗಿ ಹಾಕಿದ್ದ ಗರಿಗುಡಿಸಿಲಿನಲ್ಲಿದ್ದು ಬೆಂಕಿಯಿಂದ ನಾಶವಾದ ಹಳೆಯ ನಾಲ್ಕು ಮಗ್ಗಗಳಿಗೆ ಪ್ರತಿಯಾಗಿ ಹತ್ತು ಹೊಸ ಮಗ್ಗಗಳನ್ನು ಅಹಮದಾಬಾದಿನ ರಾಮಪ್ರಸಾದ ಎಮ್. ದೇವೆ ದಾನ ಮಾಡಿದ ಹಣದಿಂದ ಕೊಂಡು ಹಾಕಿಸಲಾಯಿತು. ಈ ಕಟ್ಟಡದಲ್ಲಿ ತಯಾರಿಸಿದ ಸಾಮಾನುಗಳನ್ನು ಬಿಕರಿಗಾಗಿ ಇಟ್ಟಿರುವ ಒಂದು ಪ್ರದರ್ಶನದ ಕೊಟಡಿ ಇದೆ. ಕಾಲಕ್ರಮದಲ್ಲಿ ಚರ್ಮ ಮತ್ತು ಕೊಂಬಿನ ಕೆಲಸದ ವಿಭಾಗಗಳನ್ನು ತೆಗೆದುಹಾಕಬೇಕಾಯಿತು. ಅವಕ್ಕೆ ಪ್ರತಿಯಾಗಿ ಕೈರಾಟೆ, ಹೊಲಿಗೆ ಮತ್ತು ನೆಯ್ಗೆ ಇವುಗಳನ್ನು ಆರಂಭಿಸಿದೆ.

## ಷಷ್ಟ್ಯಬ್ದಪೂರ್ತಿ ನಿಧಿ

ಮೇಲೆ ಪ್ರಸ್ತಾಪಿತವಾದ ಷಷ್ಟ್ಯಬ್ದಪೂರ್ತಿ ನಿಧಿಯ ವಿಚಾರವಾಗಿ ಇಲ್ಲಿ ಕೆಲವು ಮಾತು ಹೇಳಬೇಕಾಗಿದೆ. ರಾಮದಾಸನಿಗೆ ಅರವತ್ತು ವರುಷ ಪೂರ್ತಿಯಾದಾಗ್ಗೆ ಒಂದು ಧನದ ಚೀಲವನ್ನು ಅರ್ಪಿಸಲು ಒಂದು ನಿಧಿಯನ್ನು ಶೇಖರಿಸಬೇಕೆಂಬ ಆಲೋಚನೆ, ಮೊದಲಿಗೆ ಬೊಂಬಾಯಿಯ ಯು. ಸಂಜೀವರಾಯರಿಂದ

ಜನಿಸಿತು. ಅದು ಅನಂತರ ೧೯೪೩ನೇ ಇಸ್ವಿ ಡಿಸೆಂಬರ್ ೨೬ ರಲ್ಲಿ ಎಸ್. ಆರ್. ಹತ್ತಿಯಂಗಡಿಯವರ ಅಧ್ಯಕ್ಷತೆಯುಲ್ಲಿ ನಡೆದ ಆನಂದಾಶ್ರಮದ ಬೊಂಬಾಯಿ ಶಾಖೆಯ ವಿಶೇಷ ಕೂಟದಲ್ಲಿ ಆರ್. ಎನ್. ಹಳದಿಪೂರನಿಂದ ಮಂಡಿಸಲ್ಪಟ್ಟು ಅನುಮೋದಿತವಾದ ಒಂದು ನಿರ್ಣಯದ ರೂಪವನ್ನು ತಳೆಯಿತು. ರಾಮದಾಸನ ಅನುಮತಿಗಾಗಿ ಈ ನಿರ್ಣಯವನ್ನು ಕಳುಹಿಸಿ ಕೊಟ್ಟಾಗ, ಅವನಿಗೆ ಭಗವಂತನು ತನ್ನ ಸೇವೆಯಲ್ಲಿ ಆಶ್ರಮ ಕಟ್ಟಿಕೊಂಡ-ಅದುವರಿಗಾಗಲೆ ಸುಮಾರು ೪೮೦೦೦ ರೂಪಾಯಿಗಳ ಸಮಕ್ಕೆ ಏರಿದ್ದ-ಸಾಲಗಳ ತೀರುವಳಿಗೆ ಏರ್ಪಡಿಸುತ್ತಿದ್ದಾನೆಂದು ಮಾತ್ರ ಹೊಳೆಯಿತು. ಆದ್ದರಿಂದ ಭಗವಂತನೇ ತನ್ನ ಸ್ವಂತ ಕಾರ್ಯದ ಮುಂದುವರಿಕೆಗೆ ಎಂದು ಸ್ವತಃ ಪ್ರಾರಂಭಿಸಿದುದು ಆಗಿ, ದೈವಪ್ರೇರಿತವೆಂದು ರಾಮದಾಸನಿಗೆ ಮನಗಂಡ ಈ ಸಲಹೆಗೆ ಅವನು ಒಡನೆಯೆ ಒಪ್ಪಿದನು. ಈ ನಿಧಿ ೧೯೪೬ನೆ ಇಸ್ವಿ ಆದಿಭಾಗದ ವೇಳೆಗೆ ಮೊದಲು ಗೊತ್ತುಮಾಡಿದ್ದ ಒಂದು ಲಕ್ಷದ ಗುರಿಯನ್ನು ಮಿಾರಿ ೧೦೪೭೭೫-೧೪-೧ ರೂಪಾಯಿಗಳ ಮೊತ್ತವನ್ನು ಮುಟ್ಟಿತು. ಆಗ ಧನ ಶೇಖರಿಸುವ ಕಾರ್ಯವನ್ನು ನಿಲ್ಲಿಸಲಾಯಿತು. ಈ ನಿಧಿಯಿಂದ ಮಾಡಿದ ವೆಚ್ಚಗಳ ವಿಷಯದ ವಿವರಣೆಯನ್ನು ೧೯೪೬ನೆ ಇಸ್ವಿ ಅಕ್ಟೋಬರ್ ತಿಂಗಳ "ದಿ ವಿಷನ್"ಪತ್ರಿಕೆಯಲ್ಲಿ ಪ್ರಚುರಪಡಿಸಲಾಯಿತು. ಈ ರೀತಿ ನಿವಾರಿಸಿದ ಹಣದ ಗಂಡಾಂತರ ಎಂಥದೆಂಬುದು, ಆಶ್ರಮದ ಸರ್ವದಾ ವಿಸ್ತ್ರುತವಾಗುತ್ತಿದ್ದ ಸೇವೆಯ ೧೬ ವರ್ಷ ಕಾಲದಲ್ಲಿ ಉಂಟಾದ ಸಾಲ ಮತ್ತು ಕೊರತೆಗಳನ್ನು ತೀರಿಸಲು ಸುಮಾರು ೫೫೫೦೦|೯ರೂಪಾಯಿಗಳನ್ನು ಕೊಡಬೇಕಾಯಿತೆಂಬುದರಿಂದ ಮನ ದಟ್ಟಾಗುವುದು. ಅಲ್ಲದೆ ಆಗಿಂದಾಗ್ಗೆ ಯಾನ ಹಣಗಳು ಬಂದರೂ, ಅವು ಆಗಾಗಲೆ, ಸೂಚಿತವಾಗಿದ್ದ ಶಾಖೆಗಳಿಗೆ ವೆಚ್ಚವಾಗುತ್ತಿದ್ದುವು. ಇದರಿಂದ ನಿಧಿಯ ಶೇಖರ ವನ್ನು ಮುಕ್ತಾಯ ಮಾಡುವಾಗ್ಗ ಈ ನಿಧಿಯಲ್ಲಿ ಏನೂ ಉಳಿದಿರಲಿಲ್ಲವೆಂಬುದೂ ಗಮನಾರ್ಹವಾಗಿ ಇದೆ.

## ಔಷಧಾಲಯ

ಆಶ್ರಮದ ಶೈಶವಾವಸ್ಥೆಯಲ್ಲಿ ನಮ್ಮಲ್ಲಿಗೆ ರೋಗನಿವಾರಣೆಗಾಗಿ ಬಂದ ಕಾಯಿಲೆ ಜನಗಳಿಗೆ ಹೋಮಿಯೋಪತಿ ಔಷಧವನ್ನು ಮಾತ್ರ ಕೊಡುತ್ತಿದ್ದೆವು. ಗಾಯಗಳನ್ನು ತೊಳದು ಕಟ್ಟುವುದಕ್ಕೂ ಮತ್ತು ಗಾಯಗೊಂಡವರಿಗೆ ಪ್ರಥಮ ಚಿಕಿತ್ಸೆ ನಡೆಸುವುದಕ್ಕೂ ಒಂದು ಭಾಗವನ್ನು ತೆರೆದಿದ್ದೆವು. ಈ ಎರಡು ಕಾರ್ಯ ಕ್ರಮಗಳು "ದಿ ವಿಷನ್" ಕಛೇರಿಯ ಕಟ್ಟಡದ ಒಂದು ಪಾರ್ಶ್ವದಲ್ಲಿ ನಡೆಯುತ್ತಿ ದ್ದುವು. ರೋಗಿಗಳ ಸಂಖ್ಯೆ ಹೆಚ್ಚಿದುದರಿಂದ ಔಷಧಾಲಯಕ್ಕೆ ಆಶ್ರಮದ ಪವಳಿಯ ಹೊರಗೆ ಒಂದು ಪ್ರತ್ಯೇಕ ಕಟ್ಟಡವನ್ನು ಇಟ್ಟುಕೊಳ್ಳುವ ಅವಶ್ಯಕತೆ ನಮಗೆ ತೋರಿತು. ಔಷಧಾಲಯದಲ್ಲಿ ಆಲೋಪತಿ ಔಷಧವನ್ನು ಕೊಡುವ ಒಂದು ಭಾಗವನ್ನು ತೆರೆಯಬೇಕೆಂದೂ ಸೂಚಿತವಾಯಿತು. ಮತ್ತು ನಿಧಿಗಾಗಿ

"ದಿ ವಿಷನ್" ಪತ್ರಿಕೆಯ ಮೂಲಕ ಒಂದು ಬೇಡಿಕೆಯನ್ನು ಮಾಡಲಾಯಿತು. ಔಷಧಾಲಯವನ್ನು ಕಟ್ಟುವುದಕ್ಕೆ ಶೇಖರವಾದ ಮೊತ್ತ ಸಾಲದಿದ್ದುದರಿಂದ, ಪ್ರಿನ್ಸಿಪಾಲ್ ಎನ್. ಬಿ. ಬುಟಾನಿ ತನ್ನ ಕಿರಿಯ ಮಗಳು ಪುಷ್ಪಾ ಜ್ಞಾಪಕಾರ್ಥವಾಗಿ ಕಟ್ಟಿಸಿದ "ಪುಷ್ಪಾಮಂದಿರ"ವನ್ನು ಆಸ್ಪತ್ರೆಗಾಗಿ ಉಪಯೋಗಿಸಬೇಕೆಂದು ನಿಷ್ಕರ್ಷೆ ಯಾಯಿತು. ಈ ಉಪಯೋಗಕ್ಕೆ ಅವಶ್ಯಕವಾದ ಸಮ್ಮತಿಗಾಗಿ ಬುಟಾನಿ ಮತ್ತು ಅವನ ಪತ್ನಿಯನ್ನು ಸಮೀಪಿಸಿದಾಗ ಅವರು ಅದನ್ನು ಅತ್ಯಂತ ಹೃತ್ಪೂರ್ವಕವಾಗಿ ಇತ್ತರು. "ದಿ ವಿಷನ್" ಕಛೇರಿಯ ಕೊಟಡಿಯಲ್ಲಿದ್ದ ಆಸ್ಪತ್ರೆಯ ಎಲ್ಲ ಸಲಕರಣೆ ಗಳನ್ನು ಇಲ್ಲಿಗೆ ಬದಲಾಯಿಸಿದೆವು ಮತ್ತು ಅಲ್ಲಿಂದಾಚೆಗೆ ಇಲ್ಲಿ ರೋಗನಿವಾರಣೆ ಯನ್ನು ವಿಸ್ತಾರವಾದ ಮಟ್ಟದಲ್ಲಿ ನಡೆಸುತ್ತಿದ್ದೇವೆ.

## ಅಭ್ಯಾಗತರು

ಪ್ರಸಿದ್ಧ ಸಾಧುಗಳ ಮತ್ತು ಭಗವದ್ಭಕ್ತರ ಆಗಮನದಿಂದ ಅನುಗ್ರಹವನ್ನು ಪಡೆಯುವ ಸುಯೋಗ ಆಶ್ರಮಕ್ಕೆ ದೊರೆತಿದೆ. ಅವರು ತಮ್ಮ ಸಾನ್ನಿಧ್ಯದಿಂದ ಆಶ್ರಮವಾಸಿಗಳಲ್ಲಿ ತಮ್ಮ ಅಲ್ಪ ಸೇವೆಯನ್ನು ನಡೆಸುವುದರಲ್ಲಿ ಉತ್ಸಾಹವನ್ನು ತುಂಬುತ್ತಾರೆ. ಈ ಮುಂದಿನದು ಅಂಥ ಸಂತ ಅಭ್ಯಾಗತರು ಕೆಲವರ ಸೂಕ್ಷ್ಮ ಪರಿಚಯ.

ಸ್ವಾಮಿ ನಿತ್ಯಾನಂದರೆಂಬ ಒಬ್ಬ ಶ್ರೇಷ್ಠಯೋಗಿ ಹೊಸದುರ್ಗದಲ್ಲಿ ವಾಸಿಸು ತ್ತಿದ್ದರು. ಅವರು ಹೊಸದುರ್ಗದ ಹಳೆಯ ತೊರೆದ ಕೋಟೆಯಲ್ಲಿ ಅನೇಕ ಅನುಕೂಲಗಳನ್ನು ಕಲ್ಪಿಸಿದರು. ಅವರು ಜನರನ್ನು ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲ ಭಾಗಗಳಿಂದ ಮತ್ತು ದೂರ ದೇಶಗಳಿಂದ ಕೂಡ ಆಕರ್ಷಿಸುತ್ತಿದ್ದರು. ಅವರ ದರ್ಶನ ಅಗಾಧ ಆಧ್ಯಾತ್ಮಿಕ ಫಲದಾಯಕವೆಂದು ಭಕ್ತರು ಪರಿಗಣಿಸುತ್ತಿದ್ದರು. ಇದು ಸರಿಯಾದ ನಂಬಿಕೆ. ರಾಮದಾಸನು ಪಂಚಪಾಂಡವ ಗುಹೆಗಳಲ್ಲಿದ್ದಾಗ ಒಂದು ಸಲ ಇವರನ್ನು ಸಂಧಿಸುವ ಯೋಗ ಅವನಿಗೆ ದೊರೆಯಿತು. ಇವರ ಮೈಮೇಲೆ ಕೌಪೀನ ವಿನಹ ಮತ್ಯಾವ ವಸ್ತ್ರವೂ ಇರಲಿಲ್ಲ. ಇವರು ಬಣ್ಣದಲ್ಲಿ ಕಪ್ಪು; ಆದರೆ ಇವರಿಗೆ ಎತ್ತರವಾದ ಪೂರ್ಣವಿಕಸಿತವಾದ ಸರಿಯಾದ ಆಯಕಟ್ಟಿನ ದೇಹ ವಿದ್ದಿತು. ಇವರ ಮುಖ ಅತ್ಯಂತ ಮನಮೋಹಕವಾದ ಮಂದಹಾಸದಿಂದ ಸದಾ ವ್ಯಾಪ್ತವಾಗಿರುತ್ತಿದ್ದುದು ಇವರ ವಿಶಿಷ್ಟ ಚಿಹ್ನೆಗಳಲ್ಲಿ ಒಂದು. ಇವರು ಯಾವಾಗಲೂ ದೈವಿಕ ಆನಂದದಲ್ಲಿ ಮಗ್ನರಾಗಿರುವುದು ಕಾಣಬರುತ್ತಿದ್ದುದರಿಂದ ಇವರ ಭಕ್ತರು ಇವರಿಗೆ ನಿತ್ಯಾನಂದ-ಶ್ವಾಶ್ವತವಾದ ಆನಂದ ಎಂಬ ಅರ್ಥದ ಹೆಸರನ್ನು ಕೊಟ್ಟರು. ಆಶ್ರಮವಾಸಿಯೊಬ್ಬನಾದ ಕೃಷ್ಣಪ್ಪನು, ಆಶ್ರಮದ ಎರಡನೆ ವರ್ಷದ ಕೊನೆಯ ಭಾಗದಲ್ಲಿ ಒಂದು ದಿನ ಇವರನ್ನು ನಮ್ಮಲ್ಲಿಗೆ ಕರೆತಂದನು. ನಾವು ಅವರಿಗೆ ಯೋಗ್ಯವಾದ ಮರ್ಯಾದೆ ಕೊಟ್ಟೆವು ಮತ್ತು ಅವರು ಒಂದು ಎಳೆತೆಂಗಿನಕಾಯಿಯ ತಂಪಾದ ನೀರನ್ನು ಕುಡಿಯುವಂತೆ

ಮಾಡಿದೆವು. ಅವರು ಒಂದು ಶಬ್ದ ಉಚ್ಚರಿಸಲಿಲ್ಲ. ನಮ್ಮೊಡನೆ ಸುಮಾರು ಹತ್ತು ನಿಮಿಷವಿದ್ದು ಹೊರಟು ಹೋದರು.

ಮಹಂತ್ ಶ್ರೀ ರಾಮಪ್ರತಾಪ್ ದಾಸಜಿ ಗುರು ಹನುಮಾನ್ ದಾಸಜಿ ಎಂಬ ಅಹಮದಾಬಾದಿನ ಒಬ್ಬ ಸಂತರು ಭಕ್ತವೃಂದದೊಡನೆ ಆಶ್ರಮಕ್ಕೆ ಬಂದರು. ಅವರು ಒಂದು ಕಾಲದಲ್ಲಿ ಮತಾಚಾರದ ನಿಯಮಗಳನ್ನು ಕಟ್ಟುನಿಟ್ಟಾಗಿ ಅನುಸರಿಸುತ್ತ ಬಹು ನಿಷ್ಠರಾದ ಸಾಧು ಆಗಿದ್ದರು. ಆಶ್ರಮಕ್ಕೆ ಬಂದ ನಂತರ ಅವರು ಕ್ರಮೇಣ ಅವುಗಳನ್ನು ಬಿಟ್ಟರು. ಆಶ್ರಮದ ಜನರೊಂದಿಗೆ ಧಾರಾಳವಾಗಿ ಬೆರತರು. ಅನೇಕ ವರ್ಷಗಳವರೆಗೆ ಅವರು ಪ್ರತಿ ವರ್ಷವೂ ದಕ್ಷಿಣ ಇಂಡಿಯಾಕ್ಕೆ ಯಾತ್ರೆ—ಇದು ಅವರು ಬಳಸುತ್ತಿದ್ದ ಶಬ್ದ—ಬರುತ್ತಿದ್ದರು. ಆ ಕಾಲದಲ್ಲಿ ಶ್ರೀ ರಮಣಾಶ್ರಮ ಮತ್ತು ಆನಂದಾಶ್ರಮಗಳಿಗೆ ಭೇಟಿ ಕೊಡುತ್ತಿದ್ದರು. ಬಡವರಿಗೆ ಅನ್ನದಾನ ಮತ್ತು ವಸ್ತ್ರದಾನ ಮಾಡುವುದರಲ್ಲಿ ಇವರಿಗೆ ಬಹಳ ಸಂತೋಷ ಕಾಣುತ್ತಿದ್ದಿತು. ಇವಕ್ಕಾಗಿ ಇವರು ಹೇರಳವಾಗಿ ವ್ಯಯ ಮಾಡುತ್ತಿದ್ದರು.

ಶ್ರೀ ರಮಣ ಮಹರ್ಷಿಗಳ ಪ್ರಮುಖ ಶಿಷ್ಯರಲ್ಲೊಬ್ಬರಾದ ಯೋಗಿರಾಮಯ್ಯ ಇಬ್ಬರು ಇತರ ಮಿತ್ರರೊಡನೆ ಬಂದರು. ರಾಮಯ್ಯನವರನ್ನು ನೋಡಲು ರಾಮದಾಸನಿಗೆ ತುಂಬ ಸಂತೋಷವಾಯಿತು. ತೀರ ಪಾರಲೌಕಿಕವಾದ ಒಂದು ಹೊಳಪು ಅವರ ಕಣ್ಣಿನಲ್ಲಿದೆ. ಅವರು ವಿರಕ್ತ ಭಾವದಿಂದ ತುಂಬಿದ್ದಾರೆಂದು ಎದುರಾಳಿಗೆ ತೋರುತ್ತದೆ. ಅವರು ಮೌನವಾಗಿ ಯಾವ ಜಾಗದಲ್ಲಿ ಕುಳಿತರೂ ಅವರಿಗೆ ಒಂದೇ ಒಂದು ಸತ್ವದ ಅರಿವಾಗಿತ್ತೆಂದು ರಾಮದಾಸನು ಸ್ಪಷ್ಟವಾಗಿ ಕಾಣಬಲ್ಲವನಾದನು. ಯಾರ ಮನಸ್ಸು **ಶಾಶ್ವತ**ನೊಂದಿಗೆ ಶೃತಿಯಾಗಿದೆಯೋ ಅವರದು ಇದೇ ಭಾವ. ಅವರ ಹೃದಯ ಬೇರೆಲ್ಲೋ ಇದೆಯೆಂಬುದನ್ನು ಅವರ ದೃಷ್ಟಿ ತೋರಿಸುತ್ತದೆ. ಮರಿ ಮಾಡುವುದಕ್ಕಾಗಿ ತನ್ನ ಮೊಟ್ಟೆಗಳ ಮೇಲೆ ಕುಳಿತುಕೊಳ್ಳುವ ಕೋಳಿಯ ಉದಾಹರಣೆಯ ನೆನಪು ರಾಮದಾಸನಿಗೆ ಆಗುತ್ತದೆ. ಈ ರೀತಿ ಪ್ರವೃತ್ತವಾಗಿರುವ ಕೋಳಿಯನ್ನು ಪರಿಶೀಲಿಸಿದರೆ ಅದರ ಅಂತರ್ ಪ್ರೇಕ್ಷಣ ಮೊಟ್ಟೆಗಳ ಮೇಲೆ ಇರುವುದರಿಂದ ಅದರ ಕಣ್ಣುಗಳಲ್ಲಿ ವಿಚಿತ್ರವಾದ ಶೂನ್ಯ ದೃಷ್ಟಿ ನಿಮಗೆ ಕಾಣಬರುತ್ತದೆ. ಅದರ ಕಣ್ಣುಗಳು ಆಗ ಎಲ್ಲ ವಿಧದ ಭಾವಗಳಿಂದರಹಿತವಾಗಿ ಬರಿದಾಗಿ ಕಾಣುತ್ತವೆ. ಅಂಥ ಕಣ್ಣುಗಳೇ ನೋಡುತ್ತಿದ್ದರೂ ನೋಡದವು ; ಏಕೆಂದರೆ ಅವು **ಅನಂತದತ್ತ** ನೋಡುತ್ತವೆ, ತಾರತಮ್ಯದ ಪ್ರಪಂಚದತ್ತ ಅಲ್ಲ. ಯೋಗಿ ರಾಮಯ್ಯನವರಿಗೆ ತೆಲುಗು ಮಾತ್ರ ಗೊತ್ತು. ಆದ್ದರಿಂದ ರಾಮದಾಸನು ಅವರೊಂದಿಗೆ ಸಂಜ್ಞೆಗಳ ಮೂಲಕ ಮಾತ್ರವೆ ಸಂಭಾಷಿಸಲು ಸಾಧ್ಯವಾಗಿದ್ದಿತು. ಅವರು ಮಾತನಾಡಲು ಪ್ರಯತ್ನಪಟ್ಟರು. ಆದರೆ ಅವರ ಭಾಷೆ ಅಲ್ಲಲ್ಲಿ ಚುಮುಕಿಸಿದ ಇಂಗ್ಲಿಷ್ ಶಬ್ದಗಳೊಡನೆ ತೆಲುಗು ಮತ್ತು ತಮಿಳಿನ ಕಲಬೆರಕೆಯಾಯ್ತು. ಇದರ ಮೇಲೆ ನಮಗೆ ಒಳ್ಳೆ ನಗು ಬರುತ್ತಿದ್ದಿತು. ಇದರಲ್ಲಿ ಅವರೂ ಸೇರುತ್ತಿದ್ದರು.

ಅವರು ರಾಮದಾಸನಿಗಾಗಿ ತಂದ ರುಚಿಕರವಾದ ಮಾವಿನ ಹಣ್ಣುಗಳನ್ನು ಅವನು ಮರೆಯಲಾರನು. ಅವು ಅವರಷ್ಟೇ ಮಧುರವಾಗಿದ್ದುವು.

ಸ್ವಾಮಿ ಸಿದ್ಧೇಶ್ವರಾನಂದರು ಒಂದು ದಿನ ಹಠಾತ್ತಾಗಿ ಕಾಣಿಸಿಕೊಂಡರು. ಅವರು ಬೆಂಗಳೂರಿನಲ್ಲಿ ರಾಮಕೃಷ್ಣಾಶ್ರಮದ ಅಧ್ಯಕ್ಷರಾಗಿದ್ದರು. ಅವರನ್ನು ನೋಡಲು ರಾಮದಾಸನಿಗೆ ನಿಜವಾಗಿ ಸಂತೋಷವಾಯಿತು. ಅವರು ಪ್ರಕಾಶ ಪ್ರೀತಿ ಮತ್ತು ಭಕ್ತಿಯಿಂದ ಪರಿಪೂರ್ಣವಾಗಿದ್ದರು. ಅವರು ನಮ್ಮೊಡನೆ ಕೆಲವು ಗಂಟೆಗಳನ್ನು ಮಾತ್ರ ಕಳೆದರು.

ಪೂರ್ವಾಶ್ರಮದಲ್ಲಿ ಶ್ರೀಧರಕಾಮತ್ ಆಗಿದ್ದ ಗೋವದ ಸ್ವಾಮಿ ಗುರುದೇವಾನಂದರು ಆಶ್ರಮಕ್ಕೆ ಭೇಟಿಕೊಟ್ಟರು. ಕೆಲವು ದಿನಗಳದ್ದ ನಂತರ ಅವರು ಸಂನ್ಯಾಸ ತೆಗೆದುಕೊಂಡರು ಮತ್ತು ಹೊಸ ಅಂಕಿತವನ್ನು ಧಾರಣೆಮಾಡಿದರು. ಅವರು ಕೆಲವು ದಿನ ಮಂಜಪತಿ ಬೆಟ್ಟದ ಮೇಲಿನ ಗುಹೆಯಲ್ಲಿ ಧ್ಯಾನದಲ್ಲಿ ತೊಡಗಿದ್ದರು. ಅಲ್ಲಿ ಒಂದು ಸರ್ಪ ಧಾರಾಳವಾಗಿ ಹರಿದಾಡುತ್ತಿತ್ತೆಂದು ಹೇಳುತ್ತಾರೆ. ಅವರು ತ್ಯಾಗಪ್ರವೃತ್ತಿಯಿಂದ ತುಂಬಿದ ಶ್ರದ್ಧಾವಂತ ಸಾಧಕ.

ಗೌಡೀಯ ಮಠಕ್ಕೆ ಸೇರಿದ್ದ, ಜರ್ಮನಿ ದೇಶದವರಾದ, ಸಾಧು ಸದಾನಂದರು ಕೃಷ್ಣಕಾಂತರೆಂಬ ತಮ್ಮ ಸಂನ್ಯಾಸಿ ಗುರುಸಹೋದರನೊಡನೆ ಬಂದರು. ಅವರು ಸಂನ್ಯಾಸಿ ವಸ್ತ್ರಗಳನ್ನು ಧರಿಸಿದ್ದರು ; ತಲೆಯ ಮೇಲೆ ಶಿಖೆ ಇದ್ದಿತು ; ಕೊರಳಲ್ಲಿ ಅವರು ವೈಷ್ಣವ ಭಕ್ತರೆಂದು ಸೂಚಿಸುವ ಮಾಲೆ ಇದ್ದಿತು. ಗುರುಸಹೋದರ ಅಸ್ಸಾಂ ದೇಶದವರು. ಸಾಧು ಸದಾನಂದರು ಜರ್ಮನಿ ವಿಶ್ವವಿದ್ಯಾಲಯವೊಂದರಲ್ಲಿ ಒಬ್ಬ ಅಧ್ಯಾಪಕರಾಗಿದ್ದರೆಂದೂ ಮತ್ತು ತುಂಬ ತಿಳಿವಳಿಕೆ ಮತ್ತು ಜ್ಞಾನ ಅರ್ಹತೆಗಳನ್ನು ಹೊಂದಿದ್ದವರೆಂದೂ ತಿಳಿಯಿತು. ಅವರು ತಮ್ಮ ಸ್ವಭಾವ ಮತ್ತು ನಡೆಗಳಲ್ಲಿ ಬಹಳ ಸರಳರಾಗಿರುವುದು ತೋರಿಬಂದಿತು. ನಿಜವಾಗಿ ಅವರನ್ನು ನಾವು ಕಂಡೊಡನೆ ಪ್ರೀತಿಸಿದೆವು. ಅವರ ಗುರುಸಹೋದರ ಚಟುವಟಿಕೆಯಾಗಿದ್ದರು ಮತ್ತು ಆಶ್ರಮದ ಸೇವೆಗಳಲ್ಲಿ ಭಾಗವಹಿಸಿದರು. ಸಾಧು ಸದಾನಂದರು ಆಶ್ರಮ ಮತ್ತು ಸುತ್ತಿನಿಂದ ಎಷ್ಟು ಮುಗ್ಧರಾದರೆಂದರೆ, ಅವರು ಪುನಃ ಬಂದು, ಆಶ್ರಮದ ಬಳಿ ಒಂದು ಸಣ್ಣ ಕುಟೀರದಲ್ಲಿ ವಾಸಮಾಡಲು ಅಪೇಕ್ಷೆಪಟ್ಟು, ಈ ಕುಟೀರವನ್ನು ತಾವೇ ಕಟ್ಟಿ ಕೊಳ್ಳುವುದಾಗಿ ಹೇಳಿದರು. ಅವರು ಬಂದ ಕಾಲದಲ್ಲಿ " ದಿ ವಿಷನ್ " ಪತ್ರಿಕೆಯ ಪ್ರಚಾರವನ್ನು ನಿಲ್ಲಿಸುವ ಯೋಚನೆ ಇದ್ದಿತು. ಇದು ತಿಳಿದಾಗ ಸಾಧು ಸದಾನಂದರು ಪತ್ರಿಕೆಯನ್ನು ನಡೆಸುತ್ತಿರಬೇಕೆಂದು ನಮ್ಮನ್ನು ಒಪ್ಪಿಸಿದರು.

ರಾಮದಾಸನ ಐವತ್ತೇಳನೆ ವರ್ಧಂತಿ ಉತ್ಸವ ಪೂರ್ತಿಯಾದ ಒಡನೆಯೇ ಶ್ರೀ ಅನಂತಸ್ವಾಮಿಮಠದ ಸ್ವಾಮಿ ಹರಿಹರಾನಂದರು ತಮ್ಮ ಭಕ್ತರ ಒಂದು ಗುಂಪಿನೊಂದಿಗೆ ಆಶ್ರಮಕ್ಕೆ ಬಂದರು. ಅವರು ಬರುವ ಕಾರಣದಿಂದ ವರ್ಧಂತಿ ಉತ್ಸವವನ್ನು ನಾಲ್ಕು ದಿವಸ ಹೆಚ್ಚಿಸಲಾಯಿತು. ಆ ನಾಲ್ಕು ದಿನಗಳಲ್ಲಿ, ಆಗ

ಕಟ್ಟಬೇಕೆಂದು ಏರ್ಪಾಡಾಗಿದ್ದ ಭೋಜನಶಾಲೆ ಮತ್ತು ಅಡಿಗೆಮನೆಯ ನೆಲಗಟ್ಟಿನ ಮೇಲೆ ಹಾಕಿದ್ದ ಚಪ್ಪರದಲ್ಲಿ ಅವರು ಮೂರು ಹರಿಕಥೆಗಳನ್ನು ನಡೆಸಿದರು. ಸ್ವಾಮಿ ಹರಿಹರಾನಂದರು ಪರಿಪೂರ್ಣಭಕ್ತಿಯ ಸಂತರು. ಅವರು ದೈವಾನುಗ್ರಹದಿಂದ ಗಾಯಕರಾಗಿರುವರು. ಅವರ ಕೀರ್ತನೆ ಬಹು ಜನರನ್ನು ಆಕರ್ಷಿಸುತ್ತದೆ. ಬಂದ ಜನರನ್ನು ಅವರು ತಮ್ಮ ಬಾಯಿಂದ ಹೊರಡುವ ಭಕ್ತಿ ಜ್ಞಾನ ವೈರಾಗ್ಯ ವಿಷಯಕವಾದ ಸ್ಫೂರ್ತಿಯುಕ್ತ ವಾಕ್ಯಗಳನ್ನು ಕೇಳುವುದರಲ್ಲಿ ಲೀನಮಾಡಿ ನಿಲ್ಲಿಸುತ್ತಾರೆ. ಆ ಮೂರು ಹರಿಕಥೆಗಳು ಸಖುಬಾಯಿ, ದಾಮಾಜಿಪಂತ್ ಮತ್ತು ಶಬರಿಗೆ ಸಂಬಂಧಪಟ್ಟವು. ಈ ಮೂರು ಸಂತರ ಜೀವನ ಚರಿತ್ರೆಯ ವಿವರಣೆ ಪೂರ್ತದಲ್ಲೆಲ್ಲ ಅವರು ಭಗನ್ನಾಮ ಆ ಸಂತರಿಗೆ ಹೇಗೆ ಬೆಳಕು ಮತ್ತು ಆಶ್ರಯ ವಾಗಿತ್ತೆಂಬುದನ್ನೂ ಮತ್ತು ಆ ಶಕ್ತಿಯೊಂದರಿಂದಲೇ ಭಗವದ್ದರ್ಶನವನ್ನು ಪಡೆಯಲು ಅವರಿಗೆ ಹೇಗೆ ಶಕ್ಯವಾಯಿತೆಂಬುದನ್ನೂ ಸ್ಪಷ್ಟವಾಗಿ ಹೊರಗೆಡವಿದರು. ಅವರು ದೈವಸಾಕ್ಷಾತ್ಕಾರಕ್ಕೆ ಬೇಕಾದ ಪ್ರಮುಖ ಗುಣಗಳು, ಅಕುಟಿಲತೆ, ಹೃದಯ ಪಾರಿಶುದ್ಧ್ಯ, ನಂಬಿಕೆಗಳೇ ಎಂದು ಇವುಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟರು. ಸ್ವಾಮಿ ಹರಿಹರಾನಂದರು ಮತಸಂಬಂಧ ಗ್ರಂಥಗಳನ್ನು ಚನ್ನಾಗಿ ತಿಳಿದಿದ್ದಾರೆ. ಮತ್ತು ಇಂಡಿಯದ ಎಲ್ಲ ಭಾಗಗಳ ಸಂತರ ಚರಿತ್ರೆಗಳನ್ನು ವ್ಯಾಸಂಗಮಾಡಿದಾರೆ. ಆದ್ದರಿಂದ ಅವರು ಕಬೀರ್, ಏಕನಾಥ್, ತುಕಾರಾಮ್, ಜ್ಞಾನದೇವ, ಸಮರ್ಥ ರಾಮದಾಸ, ತುಲಸಿದಾಸ, ಪುರಂದರದಾಸ ಮತ್ತು ಇತರರ ಬೋಧೆ ಮತ್ತು ಕೀರ್ತನೆಗಳಿಂದ ಧಾರಾಳವಾಗಿ ಉದಾಹರಿಸಲು ಶಕ್ತರಾದರು. ಅವರು ನಮ್ಮೊಡನೆ ನಿಂತ ಕಾಲವೆಲ್ಲ ನಮಗೆ ಅತ್ಯಂತ ಆನಂದಕರವಾದ ಸಮಯವಾಗಿದ್ದಿತು.

ಸ್ವಾಮಿ ಅದ್ವೈತಾನಂದರೂ, ರತಿಲಾಲ್ ಲಾಖಿಯ ಅವರೂ ಆಶ್ರಮಕ್ಕೆ ಬಂದರು. ರಾಮದಾಸನು ಸ್ವಾಮಿ ಅದ್ವೈತಾನಂದರನ್ನು ಈ ಮೊದಲು ಪಾಟ್ನಾದಲ್ಲಿ ವಿಷ್ಣುಭಾಯ್ ಥಾಕೊರೆ ಅವರ ಗೃಹದಲ್ಲಿ ನೋಡಿದ್ದನು. ಇವರನ್ನು ಬರಮಾಡಿ ಕೊಳ್ಳುವುದು ರಾಮದಾಸನಿಗೆ ತುಂಬಾ ಸಂತೋಷ ನೀಡಿತು. ಮೂರು ದಿನ ನಮ್ಮೊಂದಿಗೆ ಇದ್ದು ಅವರು ತೆರಳಿದರು.

ಕೆ. ಕೃಷ್ಣಭಗತ್ ತಲಚೇರಿಯ ಪ್ರಸಿದ್ಧ ಲೇವಾದೇವಿಕಾರ. ಆತ ತನ್ನ ಪತ್ನಿ ರಮಾದೇವಿಯೊಂದಿಗೆ ಆಶ್ರಮಕ್ಕೆ ಬಂದರು. ಆತ ಭಕ್ತಿಪೂರಿತ ಜೀವ; ಇಲ್ಲಿ ರಾಮದಾಸ ವ್ಯವಹರಿಸಬೇಕಾದುದು ಆ ಪತ್ನಿಯ ವಿಚಾರ. ಆಕೆ ಆಗ್ಗೆ ಆಧ್ಯಾತ್ಮಿಕ ಪಥದಲ್ಲಿ ಬಹು ಮುಂದರಿದ ಮಟ್ಟಕ್ಕೆ ಏರಿದ್ದರು. ಆಕೆಯ ಸ್ವಭಾವ ಮಗುವಿನ ಸ್ವಭಾವದಂತೆ ಆಗುತ್ತಿದ್ದಿತು. ಮತ್ತು (ಆಕೆಯ ಹೃದಯ ಸದಾ ಭಗವಂತನೊಂದಿಗೆ ಶೃತಿಗೂಡಿದ್ದಿತು.) ಇದು ಆಕೆಯ ನಡೆನುಡಿಗಳಲ್ಲಿ ಕಾಣುತ್ತಿದ್ದಿತು. ಅವು ಸರಳ ಸಹಜವಾಗಿದ್ದವು. ಅನಂತರ ಆಕೆ ನಮ್ಮ ಆಶ್ರಮಕ್ಕೆ ಅನೇಕ ವೇಳೆ ಭೇಟಿ ಕೊಟ್ಟಿದ್ದಾರೆ. ಈಚೀಚೆಗೆ ಆಕೆ ಒಬ್ಬ ತೇಜಸ್ವಿನಿಯಾಗಿ ಶೀಘ್ರವಾಗಿ ವಿಕಸ

ನಾಗುತ್ತಿರುವುದು ನಮಗೆ ಕಾಣಿಸಿತು. ಕೊನೆಯ ಸಲ ಬಂದಾಗ ಆಕೆ ಯಾವ ಮಟ್ಟದವರಾಗಿದ್ದರೆಂದರೆ, ತನ್ನ ಸಂಸರ್ಗಕ್ಕೆ ಬಂದ ಜನಗಳಲ್ಲಿ ಆಧ್ಯಾತ್ಮಿಕವನ್ನು ಎಚ್ಚರಿಸಬಲ್ಲವರಾಗಿದ್ದರು. ಆಕೆಗೆ ಬಹು ಜನ ಭಕ್ತರು ಆರಾಧಕರು ಇದ್ದರು. ಆಕೆ ಭಜನೆ ಕೀರ್ತನೆಗಳನ್ನು ಹಾಡುತ್ತಿದ್ದರು ಮತ್ತು ಸಮಾಧಿಗೆ ಇಳಿಯುತ್ತಿದ್ದರು. ಆಕೆಯ ಹೃದಯ ದೈವಿಕಭಾವದಿಂದ ತುಂಬಿದ್ದಾಗ ಆಕೆ ಆನಂದಪಾರವಶ್ಯದಲ್ಲಿ ನರ್ತನ ಮಾಡುತ್ತಿದ್ದರೆಂದೂ ರಾಮದಾಸನು ಕೇಳಿದನು. ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ಸಾಧಕನು ವೃದ್ಧಿಮಾಡಿಕೊಳ್ಳಬೇಕಾದದ್ದು ಪ್ರೀತಿ ಒಂದೇ ಎಂದು ಈಕೆ ಬೋಧಿಸುತ್ತಾರೆ. ನಮ್ಮ ಮನಸ್ಸನ್ನು ಭಗವದ್ಧ್ಯಾನದಲ್ಲಿ ಲೀನ ಮಾಡಿಡಬೇಕಾದರೆ ಸಾಮೂಹಿಕ ಭಜನೆಯೇ ದಾರಿ ಎಂದು ಅದರ ಮಹತ್ತನ್ನು ಒತ್ತಿ ಹೇಳುತ್ತಾರೆ.

ರಾಮದಾಸನು ಅಹಮದಾಬಾದಿನಲ್ಲಿ ಸಂಧಿಸಿದ್ದ ಗುಜರಾತಿನ ಶ್ರೀ ಪ್ರೇಮ ಭಿಕ್ಷು ಒಂದು ದಿನ ಅನಿರೀಕ್ಷಿತವಾಗಿ ಆಶ್ರಮಕ್ಕೆ ಬಂದರು. ಅವರು ಪ್ರೀತಿ ಮತ್ತು ಭಕ್ತಿಯಿಂದ ಪರಿಪೂರ್ಣರಾಗಿದ್ದಾರೆ. ರಾಮದಾಸನಿಗೆ ಅವರ ತುಂಬು ಕಪ್ಪುಗಡ್ಡವಿರುವ ಸುಂದರಮುಖ ಜ್ಞಾಪಕವಾಗುತ್ತದೆ. ರಾಮದಾಸನು ಅವರನ್ನು ಕಂಡಾಗಲೆಲ್ಲ ಅವನಿಗೆ ಪಂಜಾಬಿನ ನಮ್ಮ ಸಿಖ್ ಮಿತ್ರರ ನೆನಪು ಆಗುತ್ತದೆ. ರಾಮದಾಸನ ಮೇಲಿನ ಅವರ ಪ್ರೇಮ ನಿಜವಾಗಿಯೂ ದೊಡ್ಡದು. ಅವನೊಂದಿನ ಅವರ ಸಂಭಾಷಣೆಗಳು ಮಧುರವಾಗಿವೆ.

ಬೆಂಗಳೂರಿನ ರಾಮಕೃಷ್ಣ ಸಂಸ್ಥೆಗೆ ಸೇರಿದ ಸಂನ್ಯಾಸಿ, ಸ್ವಾಮಿ ಶ್ರೀ ವಾಸಾನಂದರು ಮಂಗಳೂರಿನ ಕೆಲವು ಭಕ್ತರೊಡನೆ ಆಶ್ರಮಕ್ಕೆ ಬಂದರು. ರಾಮದಾಸನು ಶ್ರೀ ವಾಸಾನಂದರೊಂದಿಗೆ ತುಂಬ ಆನಂದದಿಂದಿದ್ದನು. ಅವರಿಗೆ ಆಗ್ಗೆ ಸುಮಾರು ಎಪ್ಪತ್ತು ವರ್ಷ ವಯಸ್ಸಾಗಿದ್ದಿತು. ಅವರ ಮುಖ ಆಧ್ಯಾತ್ಮಿಕ ಪ್ರಭೆಯಿಂದ ಬೆಳಗುತ್ತಿದ್ದಿತು. ಅವರು ವಿದ್ಯಾವಂತರಾದ ಸ್ವಾಮಿಗಳು; ಸಂಸ್ಕೃತವನ್ನು ಚನ್ನಾಗಿ ಬಲ್ಲರು ಮತ್ತು ಬೆಂಗಳೂರಲ್ಲಿ ಒಂದು ವೇದಾಂತದ ಪ್ರೌಢ ಶಾಲೆಯನ್ನು ಸ್ಥಾಪಿಸಿದ್ದರು. ಯುವಕರ ಆಧ್ಯಾತ್ಮಿಕ ಉನ್ನತಿಗಾಗಿ ಬಹು ಶ್ರಮಿಸಿದರು. ಅವರು ಕೆಲವು ವರ್ಷಗಳ ಹಿಂದೆ ತೀರಿಕೊಂಡರು.

ಶ್ರೀ ಅರವಿಂದರ ಪ್ರಮುಖ ಶಿಷ್ಯರಲ್ಲೊಬ್ಬರಾದ ಶ್ರೀ ದಿಲೀಪ್ ಕುಮಾರ್ ರಾಯ್ ಅಂದವಾದ ಒಂದು ಉದಯ ಆಶ್ರಮಕ್ಕೆ ಬಂದರು. ಅವರನ್ನು ನಮ್ಮೊಡನೆ ಕೆಲವು ದಿನ ಇಟ್ಟುಕೊಳ್ಳುವುದರಲ್ಲಿ ನಮಗೆ ಬಹು ಸಂತೋಷವಾಯಿತು. ಅವರ ಶಿಶು ಸಮಾನವಾದ ನಡತೆ ಅವರನ್ನು ನಮ್ಮೆಲ್ಲರಿಗೂ ಪ್ರೀತಿಪಾತ್ರವಾಗಿ ಮಾಡಿತು. ಅವರ ಮುಖದ ಮೇಲೆ ಹೊಳಪು ಮತ್ತು ಸಂತೋಷ ಸದಾ ಇರುತ್ತವೆ. ಆತ ಒಬ್ಬ ವರ ಗಾಯಕ. ಅವರ ಸಂಗೀತ ಕಛೇರಿಗಳು ಶ್ರೋತೃಗಳ ಹೃದಯವನ್ನು ಸ್ಪಂದಿಸುವುದರಿಂದ ಇಂಡಿಯದಲ್ಲೆಲ್ಲಾ ಬಹು ಜನಪ್ರಿಯವಾಗಿವೆ. ಆತ ಆಶ್ರಮದ

ಮಂದಿರದಲ್ಲಿ ಸಾಯಂಕಾಲದ ಭಜನೆ ವೇಳೆ ವಿಶೇಷ ಭಕ್ತಿ ಉದ್ರೇಕದಿಂದ ಹಾಡಿದರು. ಅವರು ಹೆಸರುವಾಸಿಯಾದ ಕವಿ ಮತ್ತು ಪ್ರಬಂಧಕಾರರೂ ಹೌದು. ಅವರ ಉತ್ತೇಜಕ ಕವಿತೆಗಳನ್ನು ಆಗಾಗ್ಗೆ "ದಿ ವಿಷನ್" ಪತ್ರಿಕೆಗೆ ಕಳುಹಿಸುತ್ತಾರೆ.

ಶಿರಾಲಿಯ ಶ್ರೀ ಚಿತ್ರಾಪುರಮಠದ ಶ್ರೀಮತು ಆನಂದಾಶ್ರಮ ಸ್ವಾಮಿಜಿಯವರು ರಾಮದಾಸನು ಈ ಪುಸ್ತಕದ ಆದಿ ಭಾಗಗಳಲ್ಲಿ ವಿವರಿಸಿರುವಂತೆ ಆಧ್ಯಾತ್ಮಿಕ ಭಾವದಿಂದ ಬೆಳಗುವ ವ್ಯಕ್ತಿ. ಅವರನ್ನು ಸ್ವಾಗತಿಸಿದ ದಿನ ಆಶ್ರಮದವರೆಲ್ಲರಿಗೂ ನಿಜವಾಗಿಯೂ ಉತ್ಸವದ ದಿನ. ಅವರನ್ನು ಇಳಿಸಲು, ಕೃಷ್ಣಾಬಾಯಿ ನರಸಿಂಹ ಐಯ್ಯರ ಮನೆಯಲ್ಲಿ ವಿಶೇಷ ಏರ್ಪಾಡುಗಳನ್ನು ಮಾಡಿದಳು. ಸ್ವಾಮಿಜಿ ನಮ್ಮೊಡನೆ ಕಳೆದ ದಿನಗಳು ನಾವೆಲ್ಲರೂ ಅಪೂರ್ವವಾದ ಆನಂದಸಾಗರದಲ್ಲಿ ಲೀನವಾಗಿದ್ದುದರಿಂದ ಸ್ಮರಣೀಯವಾದವು. ಸಾಯಂಕಾಲಗಳಲ್ಲಿ ಶ್ರೀಪಾದಂಗಳವರು ಭಜನೆ ಕಾಲದಲ್ಲಿ ಆಶ್ರಮದ ಭಜನೆ ಮಂದಿರಕ್ಕೆ ದಯಮಾಡಿ ಮಂಡಿಸುತ್ತಿದ್ದರು. ಕೊನೆಯ ದಿನ ಭಜನೆ ಪೂರೈಸಿದ ನಂತರ ಅವರು ಧರ್ಮದ ಮೇಲೆ ಉದ್ದೀಪಕವಾದ ಪ್ರವಚನವನ್ನು ಇತ್ತರು. ಇದು ಧಾರಾವಾಹಿಯಾಗಿ ಮನಮುಟ್ಟುವಂತಿದ್ದುದಲ್ಲದೆ ಇದರಲ್ಲಿ ಮಿನುಗುವ ಶಬ್ದಚಾತುರ್ಯ ಹಾಸ್ಯಗಳು ಕಂಡುಬಂದುವು. ಅವರ ಪ್ರತಿಭಾನ್ವಿತವಾದ ಆಕಾರ ಮತ್ತೆ ಮತ್ತೆ ನಮ್ಮ ಒಳನೋಟದ ಮುಂದೆ ಬರುತ್ತದೆ.

ಅಹಮದಾಬಾದಿನ ಒಬ್ಬ ಸಂತರು ಶ್ರೀ ಪುನೀತ್ ಮಹರಾಜರು ಎಂಬತ್ತು ಜನ ಅನುಯಾಯಿಗಳೊಡನೆ ನಮಗೊಂದು ಭೇಟಿ ಕೊಟ್ಟರು. ಅವರು ನಮಗೆ ಅವರ ಭಜನೆಗಳನ್ನು ಮತ್ತು ಗುಜರಾತಿ ಭಾಷೆಯಲ್ಲಿಯ ಪ್ರವಚನಗಳನ್ನು ಕೇಳುವ ಸಂತೋಷವನ್ನು ನೀಡಿದರು. ಅವರಿಗೆ ತಮ್ಮ ವಿಲಕ್ಷಣವಾದ ಭಕ್ತಿಯಿಂದ ಸಭಿಕರನ್ನು ಮುಗ್ಧರನ್ನಾಗಿ ಮಾಡುವ ಶಕ್ತಿಯಿದೆ. ಅವರ ಸಂಸರ್ಗದಿಂದ ನೂರಾರು ಸಾಧಕರು ಅತಿಶಯ ಫಲವನ್ನು ಹೊಂದಿದ್ದಾರೆಂಬುದು ಸ್ಪಷ್ಟ. ಅವರಿಗೆ ಬೊಂಬಾಯಿ ಮತ್ತು ಅಹಮದಾಬಾದಿನಲ್ಲಿ ಅನೇಕ ಅನುಯಾಯಿಗಳಿದ್ದಾರೆ. ಅವರು ತಮ್ಮ ಸ್ವಭಾವದಲ್ಲಿ ಬಹು ಅದಾಂಭಿಕರು ಮತ್ತು ಸರಳರು. ಅವರು ರಾಮನಾಮದ ಉಪಾಸಕರು. ತಮ್ಮ ಶಿಷ್ಯರಿಂದ ನಾಮ ಸಂಕೀರ್ತನೆ ಮಾಡಿಸುತ್ತಾರೆ. ಇದು ಅಂಥ ಸಮಯಗಳಲ್ಲಿ ಆತನ ಮಗ್ನುಲಲ್ಲಿ ಕುಳಿತುಕೊಳ್ಳುವವರಿಗೆ ಒಂದು ಆನಂದಕರವಾದ ಔತಣ.

ಶ್ರೀ ಮಂಗೇಶ ರಾಮಚಂದ್ರತಾಕಿ ಮಹರಾಜ್ ಉರಫ್ ಶ್ರೀ ದಾದ ಎಂಬುವರು ಬೊಂಬಾಯ ಬಳಿ ಇರುವ ಜೋಗೇಶ್ವರಿಯ ಒಬ್ಬ ಪ್ರಸಿದ್ಧ ಸಂತ. ಈತ ಕೆಲವು ಶಿಷ್ಯರೊಡನೆ ಆಶ್ರಮಕ್ಕೆ ಬಂದರು. ಈತ ದೈವಿಕ ಪ್ರೇಮದ ಮೂರ್ತಿಯೇ. ಈತನ ಸ್ವಭಾವ ಪೂರ್ತಿಯಾಗಿ ಸಾತ್ವಿಕ. ಈತನ ಸಂಭಾಷಣೆ ಪರಿಪೂರ್ಣವಾಗಿ ಭಕ್ತಿಯಿಂದ ತುಂಬಿರುವ ಹೃದಯದ ಮೇಲ್ಹರಿವು. ಈತನಿಗೆ ಮಹಾರಾಷ್ಟ್ರ ಮತ್ತು ಇಂಡಿಯಾದ ಇತರ ಪ್ರಾಂತಗಳ ಸಂತರ ಕೀರ್ತನೆಗಳು ಚನ್ನಾಗಿ ಗೊತ್ತಿವೆ.

ಈತನ ತಂದೆಯು ದೊಡ್ಡ ಸಂತರಾಗಿದ್ದರು. ಈತ ಜೋಗೇಶ್ವರಿಯಲ್ಲಿ ಸದ್ಭಕ್ತಿ ಮಂದಿರದಲ್ಲಿ ವಾಸಿಸುತ್ತಾರೆ. ಇವರು ನಮ್ಮೊಂದಿಗೆ ಐದು ದಿನ ಇದ್ದರು. ನಮ್ಮೆಲ್ಲರಿಗೂ ತುಂಬ ಸಂತೋಷವನ್ನು ನೀಡಿದರು. ನಿಜವಾಗಿ ಆಶ್ರಮದ ಚರಿತ್ರೆಯಲ್ಲಿ ಅತ್ಯಂತ ಪ್ರಮುಖ ಘಟ್ಟಗಳು ಸಂತರ ಮತ್ತು ಮಹಾತ್ಮರ ಭೇಟಿಗಳು.

## ಭತ್ತದ ಬೇಸಾಯ

ಸುಮಾರು ನಾಲ್ಕು ವರ್ಷಗಳಿಂದ ಆಶ್ರಮ ಅದಕ್ಕೆ ಸೇರಿದ ಸುಮಾರು ಹದಿನೈದು ಎಕರೆಯಷ್ಟು ವಿಸ್ತೀರ್ಣದ ನೆಲದಲ್ಲಿ ಭತ್ತದ ವ್ಯವಸಾಯವನ್ನು ಕೈಗೊಂಡಿದೆ. ಈ ಕೆಲಸದಲ್ಲಿ ಕೃಷ್ಣಾಬಾಯಿಗೆ ಗಾಢವಾದ ಆಸಕ್ತಿ. ಆದ್ದರಿಂದ ಆ ಕೆಲಸ ಆಕೆಯ ಸ್ವಂತ ಮೇಲ್ವಿಚಾರಣೆಯಲ್ಲಿ ನಡೆಯುತ್ತದೆ. ಆಶ್ರಮ ಅದರ ಹತ್ತಿರದಲ್ಲಿ ವಾಸಿಸುವ ಸುಮಾರು ಐವತ್ತು ಜನ ಗಂಡು ಹೆಣ್ಣು ಕೂಲಿಗಳನ್ನು ನೇಮಿಸಿಕೊಂಡಿದೆ. ಭತ್ತದ ಬೇಸಾಯವನ್ನು ಒಳಗೊಂಡ ಎಲ್ಲ ಕಾರ್ಯಗಳು ಈ ಕೆಲಸಗಾರರಿಂದ ನಡೆಯುತ್ತವೆ. ಪೂರ್ತ ಕ್ರಮವು ಸಾಮೂಹಿಕ ಪದ್ಧತಿಯನ್ನನುಸರಿಸಿರುವುದರಿಂದ ಪ್ರತಿ ಕೂಲಿಕಾರನೂ, ಕೂಲಿ ಮತ್ತು ಫಸಲಿನಲ್ಲಿಭಾಗ ಈ ರೂಪಗಳಲ್ಲಿ ತನ್ನ ಗೇಮೆಯ ಪೂರ್ಣ ಫಲವನ್ನು ಅನುಭವಿಸುತ್ತಾನೆ. ಗೇಮೆಕಾರರ ಸಹಕಾರ ಮನೋಧರ್ಮ ಮತ್ತು ಹೃತ್ಪೂರ್ವಕ ಉತ್ಸಾಹಗಳ ಫಲವಾಗಿ ಪ್ರತಿ ವರ್ಷ ಸಮೃದ್ಧಿಯಾದ ಫಸಲು ದೊರೆಯುತ್ತದೆ. ಆಶ್ರಮಕ್ಕೆ ಕಾಯಿಪಲ್ಯಗಳಲ್ಲದೆ ಮಾವಿನ ಹಣ್ಣು ಸಪೋಟ ಹಲಸಿನ ಹಣ್ಣು ಮತ್ತು ತೆಂಗಿನ ಕಾಯಿಗಳನ್ನು ನೀಡುವ ಹಣ್ಣಿನ ತೋಟಗಳಿವೆ.

## ಸಮಾಪ್ತಿ

ಈ ಗ್ರಂಥದ ಮೊದಲ ಮುದ್ರಣ ೧೯೩೩ರಲ್ಲಿ ಪ್ರಕಟವಾಯಿತು. ಅಲ್ಲಿಂದೀಚೆಗೆ ಆಶ್ರಮದಲ್ಲಿ ಅನೇಕ ಮಾರ್ಪಾಡುಗಳಾಗಿವೆ. ಆಶ್ರಮದ ಕಾರ್ಯಕ್ರಮಗಳ ಮುಖ್ಯ ಕತೆಯನ್ನು ಈಗಿನವರೆಗೆ ತರಲು ಈ ಅಧ್ಯಾಯದಲ್ಲಿ ಒಂದು ಪ್ರಯತ್ನ ಮಾಡಿದ್ದಾಗ್ಯೂ ಎಲ್ಲ ಮಾರ್ಪಾಡುಗಳನ್ನು ವಿಶದವಾಗಿ ಬರೆದಿಡಲು ಸಾಧ್ಯವಾಗಿಲ್ಲ ಎಂಬುದನ್ನು ಇಲ್ಲಿ ಒಪ್ಪಿಕೊಳ್ಳಬೇಕು. ಆಶ್ರಮ ಜೀವನದ ಆದಿಯ ದಿನಚರಿ ಮಾರ್ಪಟ್ಟಿದೆ. ಹಳಬರಾದ ಅನೇಕ ಕೆಲಸಗಾರರು ಹೋಗಿ ಹೊಸಬರು ಬಂದಿದ್ದಾರೆ. ಬೆಳೆಯುತ್ತಿರುವ ಸಂಸ್ಥೆಯ ಜೀವನದಲ್ಲಿ ಇದು ಸ್ವಾಭಾವಿಕವೇ. ಆಶ್ರಮದ ಭೂಮಿಯಲ್ಲಿ ಹೊಸ ಮನೆಗಳು ಕಟ್ಟಡಗಳು ನಿರ್ಮಾಣವಾಗಿವೆ. ಇವಲ್ಲಿ ಕೆಲವನ್ನು ಸ್ನೇಹಿತರು ಭಕ್ತರು ಕಟ್ಟಿಸಿ, ಆಶ್ರಮಕ್ಕೆ ಸಂತತವಾಗಿ ಹರಿಯುವ ಅಭ್ಯಾಗತರ ನಿವಾಸ ಮತ್ತು ಇತರ ಉಪಯೋಗಗಳಿಗಾಗಿ ಅವುಗಳನ್ನು ಆಶ್ರಮದ ಸ್ವಾಧೀನಕ್ಕೆ ಮನಃಪೂರ್ವಕವಾಗಿ ಬಿಟ್ಟಿದ್ದಾರೆ. ಯಾರ ನಿಧನ ಹತ್ತಿರ ಹತ್ತಿರ ಅಪರಿಹಾರ್ಯವಾದದ್ದೋ ಅಂಥ ಭಕ್ತರನೇಕರು ದೇಹ ಬಿಟ್ಟು ಹೋಗಿರುವಾಗ, ಆಶ್ರಮಕ್ಕೆ ಹೊಸ ಮಿತ್ರರು ನೂರಾರು ಜನ ದೊರತೂ

